# ಶ್ರೀ ಲಕ್ಷ್ಮೀಶೋಭನ ಪದ



ಶ್ರೀ ಕೆ. ಹಯವದನ ಪುರಾಣಿಕರು M A ವಿದ್ವಾನ್

ಮಧ್ವಜಯಂತೀ ಪ್ರತಿಷ್ಠಾನ ಮಾಲೆ—೧

# ಶ್ರೀ ಲಕ್ಷ್ಮೀಶೋಭನಪದ

## ಒಂದು ಅಧ್ಯಯನ

ಶ್ರೀ ಕೆ. ಹಯವದನ ಪುರಾಣಿಕರು M. A. ವಿದ್ವಾನ್

ಪ್ರಾಂಶುಪಾಲರು

ಪೂರ್ಣಪ್ರಜ್ಞ ವಿದ್ಯಾಪೀಠ ಬೆಂಗಳೂರು

ಮಧ್ವಜಯಂತೀ ಪ್ರತಿಷ್ಠಾನ

ಪೂರ್ಣಪ್ರಜ್ಞ ವಿದ್ಯಾಪೀಠ ಬೆಂಗಳೂರು

1992




‘ಪ್ರಸನ್ನವದನಂ ಶ್ರೀಮದ್ವಾದಿರಾಜಮಹಂ ಭಜೇ’

# ಪರಮಪೂಜ್ಯ ಶ್ರೀ ಶ್ರೀ ವಿಶ್ವೋತ್ತಮತೀರ್ಥ ಶ್ರೀಪಾದರ ಅನುಗ್ರಹ

ಶ್ರೀಮನ್ಮಧ್ವಾಚಾರ್ಯರ ಸತ್ಸಿದ್ಧಾಂತ ಸಾರ ಸರ್ವಸ್ವ ಗರ್ಭಿತವಾದ ಯುಕ್ತಿಮಲ್ಲಿಕಾದಿ ಅನೇಕ ಪ್ರೌಢ ಗ್ರಂಥಗಳನ್ನು ಮಾತ್ರವಲ್ಲದೆ ಸಂಸ್ಕೃತಾನಭಿಜ್ಞರಿಗೂ ಉಪೋದ್ಘಾತಕವಾದ ಅರ್ಥಗರ್ಭಿತ ಉತ್ತಮ ಕನ್ನಡ ಕೃತಿಗಳನ್ನು ರಚಿಸಿ ಪಂಡಿತ ಪಾಮರರೆಲ್ಲರಿಗೂ ಪರಮಾನುಗ್ರಹ ಮಾಡಿದ್ದಾರೆ ಶ್ರೀ ವಾದಿರಾಜ ಗುರುಸಾರ್ವಭೌಮರು

ಶ್ರೀ ಲಕ್ಷ್ಮೀಶೋಭನ ಪದವೂ ಶ್ರೀ ವಾದಿರಾಜರು ಅನುಗ್ರಹಿಸಿದ ಮಂತ್ರತುಲ್ಯವಾದ ಒಂದು ಕೃತಿಯಾಗಿದ್ದು, ಉತ್ತಮ ಫಲದಾಯಕವಾಗಿರುವುದು ಅನುಭವಸಿದ್ಧವಾಗಿದೆ ಅದರ ವಿಶೇಷಾರ್ಥ ತಿಳಿದು ಹಾಡಿದರೆ ವಿಶೇಷ ಫಲ

ಈ ಲಕ್ಷ್ಮೀಶೋಭನ ಪದದ ವ್ಯಾಖ್ಯಾನಕಾರರಾದ ಶ್ರೀ ಹಯವದನ ಪುರಾಣಿಕರು ಯುಕ್ತಿಮಲ್ಲಿಕಾದಿ ಗ್ರಂಥಪ್ರವಚನಗಳಿಂದ ಜೀವಮಾನವಿಡೀ ವಾದಿರಾಜರ ಸೇವೆಮಾಡಿದ್ದ ದಿ l ಕಾಪು ಸುಬ್ರಾಯ ಪುರಾಣಿಕರ ಸುಪುತ್ರರು ಸ್ವತಃ ವಿದ್ವಾಂಸರು. ಬಹುಮುಖ ಪ್ರತಿಭಾ ಸಂಪನ್ನರು ಯುಕ್ತಿಮಲ್ಲಿಕಾದಿ ಉದ್ಗ್ರಂಥಗಳನ್ನು ಪ್ರವಚನ ಮಾಡುತ್ತ ನಿರಂತರ ವಾಙ್ಮಯ ಸೇವೆಯನ್ನು ಮಾಡುತ್ತಿದ್ದಾರೆ. ಶ್ರೀ ಪೂರ್ಣಪ್ರಜ್ಞ ವಿದ್ಯಾಪೀಠದ ಪ್ರಾಂಶುಪಾಲರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

ಇವರು ಲಕ್ಷ್ಮೀಶೋಭನ ಪದಕ್ಕೆ ಭಾಗವತಾದಿ ಪುರಾಣಗಳಿಂದಲೂ ಯುಕ್ತಿಮಲ್ಲಿಕಾದಿ ಗ್ರಂಥಗಳಿಂದಲೂ ಪ್ರಮಾಣವಚನಗಳ ಸಮಾಖ್ಯೆ ಕೊಟ್ಟು ಆಧಾರ ಸಹಿತವಾಗಿಯೂ, ವಿದ್ವತ್ ಪೂರ್ಣವಾಗಿಯೂ ಕೃತಿಯ ಸ್ವಾರಸ್ಯವನ್ನು ಮನಮುಟ್ಟುವಂತೆ ವಿವರಿಸಿದ್ದಾರೆ ಇದರಿಂದ ಶ್ರೀ ವಾದಿರಾಜರಿಗೆ ಅಸದೃಶವಾದ ಸೇವೆ ಮಾಡಿದಂತಾಗಿದೆ ಇವರು ಇನ್ನೂ ಇದೇ ರೀತಿಯಲ್ಲಿ ವಾದಿರಾಜರ ಬೇರೆ ಕೃತಿಗಳ ಅನುವಾದ ವ್ಯಾಖ್ಯಾನಗಳನ್ನೂ ಮಾಡಿ ವಾದಿರಾಜರ ವಿಶೇಷ ಪರಮಾನುಗ್ರಹಕ್ಕೆ ಪಾತ್ರರಾಗಲೆಂದು ಹರಿಗುರುಗಳನ್ನು ಪ್ರಾರ್ಥಿಸುತ್ತೇವೆ

ಈ ಗ್ರಂಥವು ಶ್ರೀ ಮಧ್ವಜಯತೀರ್ಥ ಪ್ರತಿಷ್ಠಾನದಿಂದ ಪ್ರಕಾಶಿತವಾಗುತ್ತಿರುವುದು ಸಂತೋಷದ ಸಂಗತಿ ಪ್ರತಿಷ್ಠಾನವು ಇನ್ನೂ ಹೆಚ್ಚಾಗಿ ಇಂತಹ ಗ್ರಂಥಗಳ ಪ್ರಕಾಶನ ಮಾಡಲೆಂದು ಹಾರೈಸುತ್ತೇವೆ

ಇತ್ಯನೇಕ ಶ್ರೀಮನ್ನಾರಾಯಣ ಸ್ಮರಣೆಗಳು,

**ಶ್ರೀ ವಿಶ್ವೋತ್ತಮತೀರ್ಥರು**

**ಶ್ರೀ ಸೋದಾ ವಾದಿರಾಜ ಮಠ, ಉಡುಪಿ.**

# ಪರಮಪೂಜ್ಯ
# ಶ್ರೀ ಶ್ರೀ ಸುಗುಣೇಂದ್ರತೀರ್ಥ ಶ್ರೀಪಾದರ
# ಅನುಗ್ರಹ

ಶ್ರೀ ವಾದಿರಾಜ ಸ್ವಾಮಿಗಳು ದ್ವೈತವೇದಾಂತದ ಮಹಾ ವಿಭೂತಿಗಳಲ್ಲೊಬ್ಬರು ದಾಸ ಹಾಗೂ ವ್ಯಾಸ ಸಾಹಿತ್ಯಗಳೆರಡರಲ್ಲಿ ಮೆರೆದ ಅಪ್ರತಿಮರು. ಅಸಂಖ್ಯ ಸ್ತೋತ್ರ, ಕಾವ್ಯ, ಟೀಕೆ, ವ್ಯಾಖ್ಯಾನಗಳಿಂದ 'ತತ್ವವಾದೇಽಸ್ಮಿನ್‌ಗರೀಯಸಿ ಭರೋ ಮಮ' ಎಂದು ಆಚಾರ್ಯ ಮಧ್ವರ ತತ್ವವಾದವನ್ನು ಸಾಮಾನ್ಯರ ಬಳಿಗೊಯ್ದ ವೈಷ್ಣವಾಗ್ರೇಸರರು. ಅನೇಕ ಸಂಸ್ಕೃತ ಕೃತಿಗಳಲ್ಲದೆ ಜನ ಸಾಮಾನ್ಯರ ತಿಳಿಭಾಷೆಯಲ್ಲಿಯೂ ಕೃತಿಗಳನ್ನು ರಚಿಸಿದ ಕರ್ನಾಟಕ ಸಂಗೀತದ ವಾಗ್ಗೇಯಕಾರರು ಅಸಂಖ್ಯ ನಾಸ್ತಿಕ ಪವಾದಗಳಿಂದ ನಾಸ್ತಿಕವರ್ಗವನ್ನು ಮಣಿಸಿದ ಧೀಮಂತರು ಸಶರೀರ ಬೃಂದಾವನ ಪ್ರವೇಶಿಸಿದ ಮಹಾನುಭಾವರು

ಪ್ರಕೃತ 'ಲಕ್ಷ್ಮೀಶೋಭನಪದ' ವಾದಿರಾಜರ ಕನ್ನಡ ಗೇಯ ಕೃತಿ ಜಗದ ಮಾತೆ ಸಿರಿಯೊಡತಿಯ ಸ್ತುತಿ ಹಾಗೆ ಸಿರಿದೇವಿಯ ಜೊತೆ ಸಿರಿಯರಸನ ಸರ್ವೋತ್ತಮತ್ವವನ್ನು ಅರುಹುವ ಕೃತಿಯೂ ಕೂಡಾ. ಆದಿ ದಂಪತಿಗಳಾದ, ಜಗದ ಕಂಗಳ ಮಂಗಳ ಮೂರ್ತಿಗಳಾದ ಲಕುಮಿ ನಾರಾಯಣರ ಹಾಡುಗಬ್ಬ. ರಮೆಯ ಕುಡಿನೋಟವ ಆಶ್ರಯಿಸಿರುವ ಈ ಜಗತ್ತು ಅಂತಹ ರಮೆಗೂ ಒಡೆಯನಾದ ಸಿರಿದೇವ ನಾರಾಯಣನ ಸ್ತುತಿಯಿಂದ ಆಚಾರ್ಯ ಮಧ್ವರ 'ಶ್ರೀ ಸ್ತುತಿ'ಯಂತೆ ಕನ್ನಡದಲ್ಲಿ ಕಂಗೊಳಿಸುತ್ತಿರುವ ವಾದಿರಾಜರ ಶೋಭನ ಪದವೇ 'ಲಕ್ಷ್ಮೀ ಶೋಭನಪದ'.

ಜಗದೊಡೆಯನ ನಿತ್ಯಾವಿಯೋಗಿನಿ ಮನದನ್ನೆ ಮಹಾಲಕುಮಿ ನವದಂಪತಿಗಳಿಗೆ ಮಂಗಳವನ್ನುಂಟುಮಾಡುವ ಪ್ರಾರ್ಥನೆ ಇಲ್ಲಿ ತುಂಬಿದೆ. 'ವಿಷ್ಣುನಾ ಸಹಿತಾ ಧ್ಯಾತಾ ಸಾಪಿ ತುಷ್ಟಿಂ ಪರಾಂ ವ್ರಜೇತ್' ಎಂಬಂತೆ ಸತಿಪತಿಗಳಾದ ಲಕುಮಿ ನಾರಾಯಣರು ಜೊತೆಯಾಗಿ ಧ್ಯಾನಿಸಲ್ಪಟ್ಟರೇ ಮಂಗಳದಾಯಕರು. ಅಂತೆಯೇ ಲಕುಮಿ ನಾರಾಯಣರ ಮಹಿಮೆಯನ್ನು ತಿಳಿಸುವ ಕನ್ನಡದ ಈ ಹಾಡುಗಬ್ಬದ ಅನುವಾದವನ್ನು ಮಾಡಿದ ಶ್ರೀ ಹಯವದನ ಪುರಾಣಿಕರು ಅಭಿನಂದನಾರ್ಹರು.

ತಮ್ಮ ವಿದ್ವತ್ಪೂರ್ಣ ವಿಮರ್ಶೆಯ ಜೊತೆಗೆ ಶ್ರುತಿಸ್ಮೃತಿ ಪುರಾಣಗಳ ಹಿನ್ನೆಲೆಯಲ್ಲಿ ಈ ಪದದ ವಿವರಣೆ ನೀಡಿದುದು ಮೆಚ್ಚುವಂತಹುದು

'ಹಯವದನ' ಅಂಕಿತದ ಹಯವದನಾರಾಧಕ ಶ್ರೀ ವಾದಿರಾಜರ ಲಕ್ಷ್ಮೀಶೋಭನ ಪದದ ವಿಮರ್ಶೆಯನ್ನು ಶ್ರೀ ಹಯವದನ ಪುರಾಣಿಕರು ನಡೆಸಿರುವುದು ಒಂದು ಯೋಗಾಯೋಗವೇ ಸರಿ ವಿದ್ವಾಂಸರೂ ವಿಮರ್ಶಕರೂ ಗೇಯಕಾರರೂ ಆದ ಶ್ರೀಯುತರನ್ನು ಹಯವದನಾಭಿನ್ನ ಶ್ರೀ ಪಾಂಡುರಂಗ ವಿಠ್ಠಲ ಬಾಲಕೃಷ್ಣ ಪೂರ್ಣ ಅನುಗ್ರಹಿಸಲೆಂದು ಪ್ರಾರ್ಥಿಸುವ,

**ಶ್ರೀ ಶ್ರೀ ಸುಗುಣೇಂದ್ರ ತೀರ್ಥ ಶ್ರೀಪಾದರು**
**ಪರ್ಯಾಯ ಶ್ರೀ ಪುತ್ತಿಗೆ ಶ್ರೀಕೃಷ್ಣ ಮಠ, ಉಡುಪಿ**

# ಪರಮಪೂಜ್ಯ
# ಶ್ರೀ ಶ್ರೀ ವಿದ್ಯಾಮಾನ್ಯತೀರ್ಥ ಶ್ರೀಪಾದರ
# ಅನುಗ್ರಹ

ಶ್ರೀ ಲಕ್ಷ್ಮೀಶೋಭನ ಹಾಡು ಮಂತ್ರತುಲ್ಯವಾದುದು. ವೇದಮಂತ್ರ ಪುರುಷಕೃತವಲ್ಲ. ಅದರಂತೆ ಈ ಹಾಡೂ ಶ್ರೀವಾದಿರಾಜರಿಂದ ಕೃತವಲ್ಲ ಸ್ವಪ್ನದಲ್ಲಿ ದೃಷ್ಟವಾದುದು. 'ಇಂತು ಸ್ವಪ್ನದಲ್ಲಿ ಕೊಂಡಾಡಿಸಿಕೊಂಡ ಲಕ್ಷ್ಮೀಕಾಂತ' ಎಂದು ಶ್ರೀ ವಾದಿರಾಜರೇ ಹೇಳಿದ್ದಾರೆ. ವೇದದ್ರಷ್ಟ್ರು ಋಷಿಗಳಿಗೆ ಹೇಗೆ ವೇದವು ಸುಪ್ತಪ್ರಬುದ್ಧ ನ್ಯಾಯದಂತೆ ಶ್ರೀ ವಾಸುದೇವನ ಪ್ರಸಾದದಿಂದ ಕಾಣಿಸಿಕೊಂಡಿತೋ ಹಾಗೆಯೇ ಈ ಹಾಡೂ ಶ್ರೀ ವಾದಿರಾಜರಿಗೆ ಸ್ಫುರಿತವಾಗಿದೆ ಅದರಿಂದ ಇದು ಹೆಂಗಸರಿಗೂ ಪಠನ ಮಾಡಲಿಕ್ಕೆ ಯೋಗ್ಯವಾದ ವೇದಮಂತ್ರ.

ಶಾಸ್ತ್ರೀಯ ಉತ್ತಮ ತತ್ವಗಳು ಅತಿ ರಹಸ್ಯವಾದವುಗಳೂ ಈ ಹಾಡಿನಲ್ಲಿ ಸ್ಫುಟವಾಗಿ ಕಾಣುತ್ತವೆ. ಇದನ್ನು ಹೆಂಗಸರು ಮಾತ್ರ ಪಠನ ಮಾಡಬೇಕೆಂದು ಯಾರೂ ತಿಳಿಯಬಾರದು. ಭಗವದ್ಭಕ್ತರು ಎಲ್ಲರೂ ನಿತ್ಯಪಠನ ಮಾಡಬೇಕು.

ಈ ಹಾಡಿನ ಅರ್ಥವಿಶೇಷಗಳನ್ನು ಶ್ರೀ ಹಯವದನ ಪುರಾಣಿಕರು ಬಹುಶಾಸ್ತ್ರವಿಮರ್ಶದಿಂದ ಪ್ರಾಮಾಣಿಕವಾಗಿ ಇಲ್ಲಿ ವಿವರಿಸಿದ್ದಾರೆ. ಅವರು ಸುಧಾದಿ ಗ್ರಂಥಗಳ ಪಾಠಪ್ರವಚನದಲ್ಲಿ ಸಮರ್ಥ ಅಪೂರ್ವವ್ಯಕ್ತಿಗಳಾಗಿದ್ದಂತೆ ದಾಸಸಾಹಿತ್ಯದಲ್ಲಿಯೂ ವಿಶೇಷ ವಿದ್ವತ್ತೆಯನ್ನು ಪಡೆದಿದ್ದಾರೆ ಎಂಬುದು ಈ ಲಕ್ಷ್ಮೀಶೋಭನ ಹಾಡುಗಳ ವಿಶೇಷಾರ್ಥ ವಿವರಣದ ಅವಲೋಕನದಿಂದ ಪ್ರತ್ಯಕ್ಷವಾಗಿದೆ.

ಇದನ್ನು ಭಗವದ್ಭಕ್ತರುಗಳು ಅವಶ್ಯವಾಗಿ ಓದಿ ಬಹಳ ಪ್ರಸನ್ನತೆಯನ್ನು ಹೊಂದಬೇಕು

ಇತ್ಯನೇಕ ಶ್ರೀಮನ್ನಾರಾಯಣ ಸ್ಮರಣೆಗಳು

**ಶ್ರೀಶ್ರೀವಿದ್ಯಾಮಾನ್ಯ ತೀರ್ಥ ಶ್ರೀಪಾದರು**

**ಶ್ರೀ ಪಲಿಮಾರು ಭಂಡಾರಕೇರಿ ಮಠ, ಉಡುಪಿ.**

# ಪರಮಪೂಜ್ಯ
# ಶ್ರೀ ಶ್ರೀ ವಿದ್ಯಾಭೂಷಣತೀರ್ಥ ಶ್ರೀಪಾದರ
# ಅನುಗ್ರಹ

ಶ್ರೀ ವಾದಿರಾಜ ಪೂಜ್ಯಚರಣರು ರಚಿಸಿದ ಶ್ರೀಲಕ್ಷ್ಮೀಶೋಭಾನಪದವನ್ನು ಮಾಂಗಲ್ಯಪ್ರದವೆಂದು ನಿತ್ಯದಲ್ಲೂ ಸುಮಂಗಲಿಯರು ಹಾಡಿಕೊಳ್ಳುವ ಪರಿಪಾಠವಿದೆ ಮಂಗಲದೇವತೆಯಾದ ಲಕ್ಷ್ಮಿ ಪ್ರತಿಯೊಬ್ಬ ಜೀವಿಯಲ್ಲೂ ದೋಷವನ್ನು ಗುರುತಿಸಿ ನಿರ್ದೋಷನೂ, ಅನಂತಗುಣಪೂರ್ಣನೂ ಆಗಿರುವ ನಾರಾಯಣನನ್ನು ವರಿಸುವ ಸುಂದರ ವರ್ಣನೆ ಈ ಕೃತಿಯಲ್ಲಿದೆ

ಹರಿಸರ್ವೋತ್ತಮತ್ವವನ್ನು ಪ್ರತಿಪಾದಿಸುವ ಈ ಪದವನ್ನು ಅರ್ಥಾನುಸಂಧಾನ ಪೂರ್ವಕವಾಗಿ ಹಾಡುವುದು ಲಕ್ಷ್ಮೀ ನಾರಾಯಣರ ವಿಶೇಷಾನುಗ್ರಹಕ್ಕೆ ಕಾರಣವಾಗಿದೆ

ಪೂರ್ಣಪ್ರಜ್ಞವಿದ್ಯಾಪೀಠದ ಪ್ರಾಂಶುಪಾಲರಾದ ಹಿರಿಯ ವಿದ್ವಾಂಸರಾದ ಶ್ರೀ ಹಯವದನ ಪುರಾಣಿಕರು ಈ ಪದಕ್ಕೆ ಬಹಳ ಉತ್ತಮವಾದ ವಿವರಣೆ ನೀಡಿದ್ದಾರೆ. ಇದು ಸಹೃದಯರೆಲ್ಲರಿಗೂ ಉಪಯೋಗಕ್ಕೆ ಒದಗಿ ಬರಲೆಂದು ಹೃತ್ಪೂರ್ವಕ ಹಾರೈಸುತ್ತೇವೆ.

ಇತಿ ನಾರಾಯಣ ಸ್ಮರಣೆಗಳು

**ಶ್ರೀ ಶ್ರೀ ವಿದ್ಯಾಭೂಷಣತೀರ್ಥ ಶ್ರೀಪಾದರು**

**ಶ್ರೀ ಸುಬ್ರಹ್ಮಣ್ಯಮಠ, ಸುಬ್ರಹ್ಮಣ್ಯ.**

# ಪರಮಪೂಜ್ಯ ಶ್ರೀ ಶ್ರೀ ವಿದ್ಯಾಪಯೋನಿಧಿ ತೀರ್ಥ ಶ್ರೀಪಾದರ ಅನುಗ್ರಹ

ಶ್ರೀ ವ್ಯಾಸರಾಜ ವಿದ್ಯಾಕರ್ನಾಟಿಕ ಸಂಸ್ಥಾನಾಧೀಶರಾದ ಶ್ರೀ ವಿದ್ಯಾಪಯೋನಿಧಿ ತೀರ್ಥ ಶ್ರೀಪಾದಂಗಳವರು ನಮಗೆ ಪರಮ ಪ್ರಿಯ ಶಿಷ್ಯರಾದ ವಿದ್ವಾನ್ ಜಯದೇವನ ಪುರಾಣಿಕರಿಗೆ ಬರೆಸಿ ಕಳಿಸಿದ ಸಂದೇಶಪೂರ್ವಕ ಶ್ರೀಮುಖ

ಆದಾಗಿ ನೀವು ತತ್ವವಾದದಲ್ಲಿ ನರಣೀಲೀಖನಮಾಲಿಯಲ್ಲಿ ಋಜುಗಣಕ್ಕೆ ಸೇರಿದವರಾಗಿ ಭಾವಿಸಮೀರರೆನಿಸಿರುವ ಶ್ರೀ ವಾದಿರಾಜರ ಲಕ್ಷ್ಮೀಶೋಭಾನಪದದ ಅನುವಾದ ರೂಪದ ಲೇಖನಗಳನ್ನು ನೀಡುತ್ತಿದ್ದು ಅವುಗಳನ್ನೆಲ್ಲ ಸಂಗ್ರಹಿಸಿ ಪುಸ್ತಕರೂಪದಲ್ಲಿ ಪ್ರಕಟಿಸಬೇಕೆಂಬ ನಿಮ್ಮ ಯೋಜನೆಯು ಸ್ತುತ್ಯವಾದದ್ದು ನಿಮ್ಮ ಕೋರಿಕೆಯಂತೆ ಇದಕ್ಕೆ ಸಂದೇಶ ನೀಡುವುದು ನಮಗೆ ಸಂತೋಷವುಂಟುಮಾಡುವುದು ಕರ್ತವ್ಯ ನಿರ್ವಹಣೆಯ ಸಂತೃಪ್ತಿಯನ್ನು ಸಹ ಉಂಟುಮಾಡುವುದು. ಇದರ ಪಠನವು ದ್ವಾದಶಸ್ತೋತ್ರದ,

ಯತತೋऽಪಿ ಹರೇಃ ಪದಸಂಸ್ಮರಣೇ
ಸಕಲಂ ಹ್ಯಘಮಾಶು ಲಯಂ ವ್ರಜತಿ ।
ಸ್ಮರತಸ್ತು ವಿಮುಕ್ತಿ ಪದಂ ಪರಮಂ
ಸ್ಫುಟಮೇಷ್ಯತಿ ತತ್ ಕಿಮಪಾಕ್ರಿಯತೇ ॥

ಎಂಬ ಸಾಲುಗಳನ್ನು ನೆನಪಿಗೆ ತರುವುದು

ವಾದಿರಾಜರ ಯಾವುದೇ ಕೃತಿಯು ಕಾವ್ಯ ಅಲಂಕಾರ ಸಾಹಿತ್ಯ ಶಾಸ್ತ್ರಗಳ ರಸಮಯ ಅಂಶಗಳನ್ನು ಭಟ್ಟಿ ಇಳಿಸಿ ವಿನೂತನ ರಸಪಾಕವೊಂದನ್ನು ತಯಾರಿಸಿದಂತಿರುತ್ತದೆ ವೇದವಾಕ್ಯಾರ್ಥಗಳ ಪುಂಜವು ಅದರಲ್ಲಿ ಅಡಗಿರುತ್ತದೆ ಲಕ್ಷ್ಮೀಶೋಭಾನಪದವೂ ಸಹಾ ಇದಕ್ಕೆ ಹೊರತಲ್ಲ

ನೀವು ನಿಮ್ಮ ಅನುವಾದದಲ್ಲಿ ಮೂಲದ ಸ್ವಾರಸ್ಯಕ್ಕೆ ಭಂಗ ಬರದಂತೆ ಉತ್ತಮಕಲ್ಪದಲ್ಲಿ ಅನುವಾದಿಸಿರುವಿರಿ.

ನೀವು ಹೊರತರಲಿರುವ ಈ ಪುಸ್ತಕಕ್ಕೆ ಸಕಲ ಯಶಸ್ಸನ್ನು ಹಾರೈಸಿ ಇನ್ನು ಮುಂದೆಯೂ ಇಂತಹ ಅನೇಕ ಪುಸ್ತಕಗಳು ನಿಮ್ಮಿಂದ ಬೆಳಕು ಕಾಣಲಿ ಎಂದು ಹರಸಿ ನಮ್ಮ ಉಪಾಸ್ಯಮೂರ್ತಿ ಶ್ರೀ ಗೋಪಾಲಕೃಷ್ಣನು ನಿಮಗೆ ದೀರ್ಘಾಯುರಾರೋಗ್ಯ ಗಳನ್ನು ಕರುಣಿಸಲಿ ಎಂದು ಅವನಲ್ಲಿ ಕೋರುತ್ತೇವೆ.

ಇತಿ ನಾರಾಯಣ ಸ್ಮರಣೆಗಳು

**ಶ್ರೀ ಶ್ರೀ ವಿದ್ಯಾಪಯೋನಿಧಿತೀರ್ಥ ಶ್ರೀಪಾದರು**

**ಶ್ರೀ ವ್ಯಾಸರಾಜಮಠ, ಸೋಸಲೆ.**

# ಪರಮಪೂಜ್ಯ
# ಶ್ರೀ ಶ್ರೀ ವಿಬುಧೇಶತೀರ್ಥ ಶ್ರೀಪಾದರ
# ಅನುಗ್ರಹ

ಮಾಧ್ವ ಗ್ರಂಥಗಳನ್ನು ಮೂಲದಲ್ಲಿ ಅಭ್ಯಾಸಮಾಡಲು ಅಸಮರ್ಥರಾದವರಿಗಾಗಿ ಅಪರೋಕ್ಷಜ್ಞಾನಿಗಳಾದ ಸೋದಾಮರದ ಶ್ರೀ ವಾದಿರಾಜರು ಸಮಾಜದ ವಿವಿಧ ಹಂತಗಳಲ್ಲಿರುವ ಜನರಿಗೆ ಸುಬೋಧವಾಗುವಂತೆ ಸರಳ ಕನ್ನಡ ಭಾಷೆಯಲ್ಲಿ ಪದಪದ್ಯಗಳನ್ನು ರಚಿಸಿದ್ದಾರೆ ಲಕ್ಷ್ಮೀಶೋಭಾನ ಹಾಡಿನ ಮೂಲಕ ತತ್ವವಾದದ ಅತಿ ಸೂಕ್ಷ್ಮಪ್ರಮೇಯಗಳನ್ನು ಕೂಡ ಬೋಧಿಸಿದ್ದಾರೆ. ಲಕ್ಷ್ಮಿ ತನ್ನ ವರಸನ್ನು ಆರಿಸುವ ಸಂದರ್ಭದಲ್ಲಿ ಎಲ್ಲ ದೇವತೆಗಳನ್ನು ವಿಮರ್ಶಿಸಿದ ಕ್ರಮ ಅತ್ಯಂತ ಹೃದಯಂಗಮ. ಈ ಮೂಲಕ ವಿಷ್ಣುಸರ್ವೋತ್ತಮತ್ವವನ್ನು ಈ ಕೃತಿ ಎತ್ತಿ ಹಿಡಿದಿದೆ

ಇದರ ವಿವರಣೆಯನ್ನು ನೀಡಿರುವ ಶ್ರೀ ಹಯವದನ ಪುರಾಣಿಕರಿಗೆ ಭಕ್ತಜನತೆ ಕೃತಜ್ಞತೆಯನ್ನರ್ಪಿಸುವುದು ಸ್ವಾಭಾವಿಕ.

ಇತಿ ನಾರಾಯಣಸ್ಮರಣೆಗಳು

**ಶ್ರೀ ಶ್ರೀ ವಿಬುಧೇಶತೀರ್ಥಶ್ರೀಪಾದರು**

**ಶ್ರೀ ಅದಮಾರುಮಠ, ಉಡುಪಿ**

# ಪರಮಪೂಜ್ಯ
# ಶ್ರೀ ಶ್ರೀ ವಿಜ್ಞಾನನಿಧಿತೀರ್ಥ ಶ್ರೀಪಾದರ
# ಅನುಗ್ರಹ

ವ್ಯಾಸಸಾಹಿತ್ಯ–ದಾಸಸಾಹಿತ್ಯಗಳಲ್ಲಿ ಮೇರುಕೃತಿಗಳ ಕರ್ತೃಗಳಾದ ಶ್ರೀ ಶ್ರೀ ವಾದಿರಾಜ ಗುರುಸಾರ್ವಭೌಮರ 'ಲಕ್ಷ್ಮೀಶೋಭಾನೆ' ಎಂಬ ಕೃತಿಯನ್ನು ಪ್ರತಿಯೊಂದು ಆಸ್ತಿಕರ ಮನೆಯಲ್ಲಿಯೂ ಹಾಡುವ ಪದ್ಧತಿಯಿದ್ದು, ಈಚೆಗೆ ಅದನ್ನು ಹಾಡುವ ಜನ ಕಡಿಮೆಯಾಗಿದ್ದಾರೆ ಹಾಡುವ ಜನರೂ ಈ ಮಂಗಳ ಪದದ ಅರ್ಥವನ್ನು ಸರಿಯಾಗಿ ತಿಳಿಯದೇ, ಸುಶ್ರಾವ್ಯವಾಗಿ ಹಾಡುವುದನ್ನು ಮಾತ್ರ ಕೆಲವರು ಉಳಿಸಿಕೊಂಡಿದ್ದಾರೆ

ಶ್ರೀ ಪೂರ್ಣಪ್ರಜ್ಞ ವಿದ್ಯಾಪೀಠದ ಪ್ರಾಂಶುಪಾಲರಾದ ಶ್ರೀ ಹಯವದನ ಪುರಾಣಿಕರು ಈ ಕೊರತೆಯನ್ನು ನೀಗಿಸಲು ಅನೇಕ ಗ್ರಂಥಗಳ ಹಾಗೂ ಪುರಾಣಗಳ ಶೋಧನೆಯಿಂದ ಶ್ರೀ ಶ್ರೀ ವಾದಿರಾಜರ ಅಭಿಪ್ರಾಯಕ್ಕನುಗುಣವಾಗಿ ವಿಸ್ತಾರವಾದ ಗ್ರಂಥವನ್ನು ರಚಿಸಿರುವುದು ಪ್ರಶಂಸಾರ್ಹವಾಗಿದೆ. ಇದು ಎಲ್ಲ ಸಜ್ಜನರ ಕೈಸೇರಿ ಅರ್ಥಜ್ಞಾನಪೂರ್ವಕವಾದ ಅಭ್ಯಾಸ ಪಠನೆಗಳಿಗೆ ಅನುವಾದರೆ ಬರಹಗಾರರ ಶ್ರಮವು ಸಾರ್ಥಕವಾಗುವುದು ಎಂದು ಹಾರೈಸುತ್ತ, ಈ ಗ್ರಂಥಕರ್ತರಿಂದ ಇಂತಹ ಅನೇಕ ಉತ್ಕೃಷ್ಟ ಕೃತಿಗಳು ಹೊರಬಂದು ಸಮಾಜಸೇವೆಯ ಮೂಲಕ ಶ್ರೀ ಹಯವದನನ ಅನುಗ್ರಹ ಲಭಿಸಲೆಂದು ಹಯಗ್ರೀವಾಭಿನ್ನನಾದ ನಮ್ಮ ಆರಾಧ್ಯಮೂರ್ತಿ ರಂಗವಿಟ್ಠಲಾತ್ಮಕ ಶ್ರೀ ಶ್ರೀ ಗೋಪೀನಾಥ ದೇವರನ್ನು ಪ್ರಾರ್ಥಿಸುತ್ತ ಮಾಡುವ ನಾರಾಯಣ ಸ್ಮರಣೆಗಳು.

ಇತಿ ನಾರಾಯಣ ಸ್ಮರಣೆಗಳು,

**ಶ್ರೀ ಶ್ರೀ ವಿಜ್ಞಾನನಿಧಿತೀರ್ಥ ಶ್ರೀಪಾದರು**

**ಶ್ರೀ ಶ್ರೀಪಾದರಾಜಮಠ, ಮುಳಬಾಗಿಲು**

# ಪರಮಪೂಜ್ಯ
# ಶ್ರೀ ಶ್ರೀ ವಿದ್ಯಾಧೀಶತೀರ್ಥ ಶ್ರೀಪಾದರ
# ಅನುಗ್ರಹ

ಶ್ರೀ ವಾದಿರಾಜ ಗುರುಸಾರ್ವಭೌಮರು ತಮ್ಮ ಮಾತಿನ ಮೋಡಿಯಿಂದ ಪಂಡಿತರನ್ನು ರಂಜಿಸುವುದರ ಜೊತೆಗೆ ಪಾಮರರ ದೀನ ದಲಿತರ ಹೃದಯವನ್ನು ಮುಟ್ಟಿ ತಟ್ಟಿ ಎಬ್ಬಿಸಿದ್ದಾರೆ. ಅವರ ಈ ಲಕ್ಷ್ಮೀಶೋಭನಪದ ಸಕಲ ಶ್ರುತಿ ಸ್ಮೃತಿ ಇತಿಹಾಸ ಪುರಾಣಗಳ ಗನಿಯಿಂದ ಅಗೆದು ತೆಗೆದು ನಮ್ಮ ಮುಂದಿಟ್ಟ ಅಪೂರ್ವ ಅಪ್ಪಟ ಸುವರ್ಣರಾಶಿ. ಮದುವೆ ಮಂಟಪದಲ್ಲಿ ಮುತ್ತೈದೆಯರು ವಧುವರರನ್ನು ಆಶೀರ್ವದಿಸುವ ಮಂಗಳ ಮಂತ್ರ ತುಲ್ಯ ಪದ ಮನೆ ಮನೆಯಲ್ಲಿ ಅನುದಿನ ಹೆಣ್ಮಕ್ಕಳ ವದನ ಕಮಲದಲ್ಲಿ ನಲಿಯುವ ಈ ಹಾಡು ಶ್ರೋತೃಗಳಿಗೆ ಕರ್ಣರಸಾಯನ

ಜೊತೆಗೆ ಅರ್ಥದ ಅರಿವೂ ಇದ್ದರೆ ಅದೆಷ್ಟು ಚೆನ್ನ !

ಈ ಕಳಕಳಿಯೇ ಶ್ರೀ ಹಯವದನಪುರಾಣಿಕರ ಈ ಕೃತಿಯ ಆವಿರ್ಭಾವಕ್ಕೆ ಕಾರಣವಾಯಿತು ಸದಾ ಅಧ್ಯಯನ ಅಧ್ಯಾಪನ ಚಿಂತನ ಮಂಥನ ಲೇಖನ ಪ್ರವಚನಗಳಲ್ಲಿಯೇ ತನ್ಮಯರಾದ ವಿಮರ್ಶಕ ಸಹೃದಯ ವಿದ್ವಾಂಸರಾದ ಶ್ರೀ ಪುರಾಣಿಕರಿಂದ ಕನ್ನಡಸಾಹಿತ್ಯಕ್ಕೆ ಅದ್ಭುತ ಕೊಡುಗೆಯಾದ ಈ ಹಾಡುಗಬ್ಬದ ಅದ್ಭುತ ವ್ಯಾಖ್ಯಾನದ ಪ್ರಾದುರ್ಭಾವವಾಗಿದೆ.

ಸಕಲ ಶಾಸ್ತ್ರಪ್ರಮೇಯಗಳು ಹೇಗೆ ಈ ಪದದಲ್ಲಿ ತುಂಬಿ ತುಳುಕಿವೆ ಎಂಬುದನ್ನು ಎಳೆಎಳೆಯಾಗಿ ತೆರೆದು ನಮ್ಮ ಮುಂದಿರಿಸಿದ ಈ ಕೃತಿಯ ಪೂರ್ಣಪ್ರಯೋಜನ ಸಕಲ ಸಜ್ಜನರಿಗೂ ಸಿಗಲಿ ಶ್ರೀ ಪುರಾಣಿಕರಿಂದ ಇಂಥ ಕೃತಿಗಳು ಇನ್ನೂ ಬಹಳಷ್ಟು ಹೊರಬರಲಿ ಎಂದು ಶ್ರೀ ವಾದಿರಾಜರನ್ನೂ ಶ್ರೀ ಮಧ್ವರಾಜರನ್ನೂ ಶ್ರೀ ರಾಮಕೃಷ್ಣರನ್ನೂ ಪ್ರಾರ್ಥಿಸುತ್ತೇವೆ

ಇತ್ಯನೇಕ ಶ್ರೀಮನ್ನಾರಾಯಣ ಸ್ಮರಣೆಗಳು
**ಶ್ರೀ ಶ್ರೀ ವಿದ್ಯಾಧೀಶತೀರ್ಥ ಶ್ರೀಪಾದರು**
**ಶ್ರೀ ಫಲಿಮಾರುಮಠ, ಉಡುಪಿ**

# ಪರಮಪೂಜ್ಯ
# ಶ್ರೀ ಶ್ರೀ ವಿದ್ಯೇಶತೀರ್ಥ ಶ್ರೀಪಾದರ
# ಅನುಗ್ರಹ

ಶ್ರೀ ಲಕ್ಷ್ಮೀಶೋಭನಪದವೆಂಬ ವಾದಿರಾಜರ ಕೃತಿಯು 'ಮಹಾಜ್ಞಾನದೀಪ' ವೆನಿಸಿದೆ. ಯುಕ್ತಿಯುಕ್ತವಾಗಿ ಪಾಮರರಿಗೂ ಜ್ಞಾನಸವಾಗುವಂತೆ ಹರಿಯ ಪಾರಮ್ಯವನ್ನು ಸಮರ್ಥಿಸುವ ಒಂದು ಅಪೂರ್ವ ಕೃತಿ. ಇದನ್ನು 'ಸ್ತ್ರೀವೇದಾಂತ'ವೆಂದು ಹೆಸರಿಸಿದರೂ ಅತಿಶಯೋಕ್ತಿ ಯಾಗಲಾರದು. ಇದಕ್ಕೆ ಪೂರ್ಣಪ್ರಜ್ಞವಿದ್ಯಾಪೀಠದ ಪ್ರಾಂಶುಪಾಲರಾದ ವಿದ್ವಾನ್ ಹಯವದನ ಪುರಾಣಿಕರು ವಿದ್ವತ್ಪೂರ್ಣವಾದ ಅಪೂರ್ವ 'ಪೌರಾಣಿಕಭಾಷ್ಯ'ವನ್ನು ಕನ್ನಡದಲ್ಲಿ ರಚಿಸಿ ಲಕ್ಷ್ಮೀಶೋಭಾನೆಯ ಸರಸ್ವತಿಗೆ ಕಂಠಾಭರಣ ತೊಡಿಸಿದ್ದಾರೆ. ಈ ಮೂಲಕ ಪಂಡಿತಪಾಮರರಿಗೂ ಮಹೋಪಕಾರವನ್ನು ಮಾಡಿದ್ದಾರೆ.

ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದ ಈ ಕೃತಿಯಿಂದ, ಅರ್ಥದ ಅರಿವಿಲ್ಲದೆ, 'ದಶರಾ ಮಶರಾ' ಲಕ್ಷ್ಮೀಶೋಭಾನೆಯನ್ನು ಹಾಡಿ ಅದರ ಶೋಭೆಯನ್ನು ಹಾಳುಗೆಡಹುವ ಮಂದಿ ಇನ್ನಾದರೂ ಎಚ್ಚೆತ್ತು ಹಾಡಲಿ ಪುರಾಣಿಕರು ಪ್ರತಿಯೊಂದು ಲಕ್ಷ್ಮೀಶೋಭಾನೆಯ ಪದವನ್ನೂ ಪುರಾಣ ಸ್ಮೃತಿ ವೇದ ಮುಂತಾದ ವಚನಗಳ ಉದಾಹರಣೆಯೊಂದಿಗೆ ಕೂಲಂಕಷವಾಗಿ ವಿಮರ್ಶಿಸಿ ಅದ್ಭುತ ವಿವರಣೆಯನ್ನು ನೀಡಿದ್ದಾರೆ ಈ ಭಾಷ್ಯ, ಅವರ ತಲಸ್ಪರ್ಶಿಯಾದ ಪಾಂಡಿತ್ಯಕ್ಕೆ ಹಿಡಿದ ಕೈಗನ್ನಡಿ.

ಇದನ್ನು ಜಿಜ್ಞಾಸುಗಳು ಅದರಲ್ಲೂ ಸ್ತ್ರೀಯರು ವಿಶೇಷವಾಗಿ ತೆಗೆದುಕೊಂಡು ಓದಿ ಜ್ಞಾನಿಗಳಾದರೆ ಪುರಾಣಿಕರ ಪರಿಶ್ರಮವು ಸಾರ್ಥಕವೆನಿಸಬಲ್ಲುದು. ಇದೇ ತೆರದಿ ಇನ್ನೂ ಹಲವಾರು ಕೃತಿಗಳನ್ನು ಹಯವದನ ಪುರಾಣಿಕರಿಂದ ಹಯವದನನು ಬರೆಸಿ ಅವರನ್ನು ಅನುಗ್ರಹಿಸಲಿ ಎಂದು ಶ್ರೀ ಹರಿವಾಯು ವಾದಿರಾಜರನ್ನು ಪ್ರಾರ್ಥಿಸುತ್ತೇವೆ.

ಇತ್ಯನೇಕ ಶ್ರೀಮನ್ನಾರಾಯಣ ಸ್ಮರಣೆಗಳು,
**ಶ್ರೀ ಶ್ರೀ ವಿದ್ಯೇಶ ತೀರ್ಥರು,**
**ಶ್ರೀ ಭಂಡಾರಕೇರಿ ಮಠ, ಉಡುಪಿ.**

# ಪರಮಪೂಜ್ಯ
# ಶ್ರೀ ಶ್ರೀ ವಿಶ್ವಪ್ರಿಯತೀರ್ಥ ಶ್ರೀಪಾದರ
# ಅನುಗ್ರಹ

ಶ್ರೀವಾದಿರಾಜರ ಪ್ರತಿಯೊಂದು ಗ್ರಂಥವೂ ಮೇಲ್ನೋಟಕ್ಕೆ ಸಾಮಾನ್ಯನಿಗೂ ಅರ್ಥವಾಗುವ ಶಬ್ದಗಳಿಂದ ಕೂಡಿದ್ದು, ಪಂಡಿತನೂ ತಲೆದೂಗುವಂತೆ ಮಾಡುವ ಅರ್ಥಗಳಿಂದ ಗರ್ಭಿತವಾದದ್ದು ಜನರಿಗೆ ಭಗವಂತನ ಉತ್ತಮತ್ವವನ್ನು ಉದಾಹರಣೆಯ ಮೂಲಕ ತಿಳಿಸಿಕೊಡುವುದು ಶ್ರೀವಾದಿರಾಜರದ್ದೇ ಒಂದು ವೈಶಿಷ್ಟ್ಯ ಇಂತಹ ಶ್ರೇಷ್ಠ ಗ್ರಂಥಗಳ ಸಾಲಿನಲ್ಲೇ ಸೇರತಕ್ಕದ್ದು ಈ ಲಕ್ಷ್ಮೀಶೋಭಾನೆ ಎಂಬ ಕನ್ನಡದ ಗ್ರಂಥವೂ ಕೂಡಾ

ಹಿಂದಿನ ಕಾಲದಲ್ಲಿ ವಿವಾಹ ಸಮಯದಲ್ಲಿ ಮಾತ್ರವಲ್ಲದೆ ಪ್ರತಿದಿನ ಸಾಯಂ ಪ್ರತಿಮನೆಗಳಲ್ಲಿ ಹಾಡುತ್ತಿದ್ದರು ಈಗಿನ ಜನಾಂಗ ಹಾಗೂ ಮುಂದಿನವರು ಇದನ್ನು ಹಾಡುವುದರ ಮೂಲಕ ಉಳಿಸಿಕೊಳ್ಳಬೇಕೆಂಬ ಹಂಬಲದಿಂದ ಶ್ರೀ ಹಯವದನ ಪುರಾಣಿಕರು ಈ ಪದವನ್ನು ಕನ್ನಡದಲ್ಲಿ ಅರ್ಥೈಸಿದ್ದಾರೆ ಪ್ರತಿಯೊಬ್ಬರೂ (ಕೇವಲ ಹೆಣ್ಮಕ್ಕಳಲ್ಲ) ಇದನ್ನು ಅಧ್ಯಯನ ಮಾಡುವುದರ ಮೂಲಕ ಇವರ ಶ್ರಮವನ್ನು ಸಾರ್ಥಕಗೊಳಿಸಲಿ ಶ್ರೀ ವಾದಿರಾಜರ ಅಂತರ್ಯಾಮಿಯಾದ ಶ್ರೀ ಲಕ್ಷ್ಮೀ ಹಯವದನನು ಈ ಹಯವದನನ್ನು ಅನುಗ್ರಹಿಸಲಿ ಎಂದು ಪ್ರಾರ್ಥಿಸುತ್ತೇವೆ

ಇತ್ಯನೇಕ ಸಪ್ರೇಮ ನಾರಾಯಣ ಸ್ಮರಣೆಗಳು,

**ಶ್ರೀ ಶ್ರೀ ವಿಶ್ವಪ್ರಿಯತೀರ್ಥರು.**

**ಶ್ರೀ ಅದಮಾರು ಮಠ, ಉಡುಪಿ.**

# ಪರಮಪೂಜ್ಯ
# ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದರ
# ಅನುಗ್ರಹ

ಮಹಾನುಭಾವರೂ ಜ್ಞಾನಿವರೇಣ್ಯರೂ ಆದ ಶ್ರೀ ವಾದಿರಾಜರು ಸಂತರಾಗಿ ಕವಿಗಳಾಗಿ ದಾರ್ಶನಿಕರಾಗಿ ಮಹಾತಪಸ್ವಿಗಳಾಗಿ ಕರುಣಾಮೂರ್ತಿಗಳಾಗಿ ಸಮಾಜಸುಧಾರಕರಾಗಿ ಬಹುಮುಖವಾದ ಅಸಾಧಾರಣವಾದ ಕಾರ್ಯಗಳನ್ನು ನಡೆಸಿದ್ದಾರೆ ತಮ್ಮ ತಪಃ ಶಕ್ತಿಯಿಂದ ಅದ್ಭುತ ಪವಾಡಗಳನ್ನು ತೋರಿದ್ದಾರೆ ಜ್ಞಾನಶಕ್ತಿಯಿಂದ ಅಮೋಘ ಶಾಸ್ತ್ರಗ್ರಂಥಗಳನ್ನು ರಚಿಸಿದ್ದಾರೆ ಕವಿತಾ ಶಕ್ತಿಯಿಂದ ಉತ್ತಮ ಕಾವ್ಯಗ್ರಂಥಗಳನ್ನೂ ಸ್ತೋತ್ರಗಳನ್ನೂ ಪದಪದ್ಯಗಳನ್ನೂ ರಚಿಸಿದ್ದಾರೆ.

ಶ್ರೀಲಕ್ಷ್ಮೀಶೋಭನ ಪದವೂ ಶ್ರೀವಾದಿರಾಜರು ರಚಿಸಿದ ಒಂದು ಅಮೋಘ ಕೃತಿ. ಮಂತ್ರತುಲ್ಯವಾಗಿದ್ದು ಎಲ್ಲ ಅಮಂಗಲಗಳನ್ನು ದೂರಮಾಡಬಲ್ಲ ಮಂಗಳಕೃತಿ. ಇದಕ್ಕೆ ಶ್ರೀಪೂರ್ಣಪ್ರಜ್ಞ ವಿದ್ಯಾಪೀಠದ ಪ್ರಾಂಶುಪಾಲರೂ ನಮ್ಮ ಪ್ರೀತಿಯ ಶಿಷ್ಯರೂ ಆದ ಶ್ರೀ ಕೆ ಹಯವದನ ಪುರಾಣಿಕರು ಉತ್ತಮ ವಿಮರ್ಶೆ ವೈದುಷ್ಯಗಳಿಂದ ತುಂಬಿದ ವಿವರಣೆ ನೀಡಿದ್ದಾರೆ. ಶ್ರೇಷ್ಠ ವಿದ್ವಾಂಸರೂ ಉತ್ತಮ ಸಂಶೋಧಕರೂ ಲೇಖಕರೂ ನಮ್ಮ ಅತ್ಯಂತ ಪ್ರೀತ್ಯಭಿಮಾನಪಾತ್ರರೂ ಆದ ಹಯವದನ ಪುರಾಣಿಕರಿಂದ ಇದೇ ರೀತಿಯ ಅನೇಕ ಕೃತಿಗಳು ಪ್ರಕಟವಾಗಿ ಜ್ಞಾನಸೇವೆ ನಡೆಯಲೆಂದು ಆಶಿಸುತ್ತೇವೆ

ಇತಿ ಸಪ್ರೇಮ ನಾರಾಯಣ ಸ್ಮರಣೆಗಳು,

**ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದರು**

**ಶ್ರೀ ಪೇಜಾವರ ಮಠ, ಉಡುಪಿ.**

# ಪರಮಪೂಜ್ಯ
# ಶ್ರೀ ಶ್ರೀ ಸತ್ಯಪ್ರಮೋದತೀರ್ಥ ಶ್ರೀಪಾದರ
# ಅನುಗ್ರಹ

ಶ್ರೀಮತ್ ಕವಿಕುಲತಿಲಕ ಶ್ರೀವಾದಿರಾಜ ಪೂಜ್ಯ ಚರಣರು ಅನೇಕ ಪ್ರೌಢಶಾಸ್ತ್ರ ಗ್ರಂಥಗಳನ್ನೂ ಸರಸ ಭಕ್ತಿಭರಿತ ಕಾವ್ಯಗಳನ್ನೂ ಕನ್ನಡ ಪದಪದ್ಯಗಳನ್ನೂ ರಚಿಸಿದ್ದಾರೆ ಅವುಗಳಲ್ಲಿ ಲಕ್ಷ್ಮೀ ಶೋಭನ ಪದವು ಪ್ರಮುಖಸ್ಥಾನ ಪಡೆದಿದೆ

ಇದು ಚಿಕ್ಕದಾದರೂ ಅನೇಕ ಶಾಸ್ತ್ರೀಯ ಪ್ರಮೇಯಗಳಿಂದ ಗರ್ಭಿತವಾದ ಅಮೂಲ್ಯಗ್ರಂಥ ಇದನ್ನು ಅನುವಾದಿಸುವ ಸಾಮರ್ಥ್ಯ ವ್ಯಾಸದಾಸ ಸಾಹಿತ್ಯಗಳಲ್ಲಿ ಚೆನ್ನಾಗಿ ನುರಿತವರಲ್ಲಿಯೇ ಇರಲು ಸಾಧ್ಯ ಇದರ ಅನುವಾದದಂತಹ ಕಠಿಣತರ ಕಾರ್ಯವನ್ನು ವಾದಿರಾಜರಿಗೆ ಸಮ್ಮತವಾಗುವ ರೀತಿಯಲ್ಲಿ ಪಂಡಿತ ಶ್ರೀ ಹಯವದನ ಪುರಾಣಿಕರು ನಿರ್ವಹಿಸಿದ್ದಾರೆ

ವಿಮರ್ಶಾತ್ಮಕವಾದ ವಿವರಣೆಯಿಂದ ಕೂಡಿದ ಈ ಪುಸ್ತಕವನ್ನು ನಾವು ನೋಡಿ ಸಂತೋಷಪಟ್ಟಿದ್ದೇವೆ

ಈ ಮಂಗಲಮಯ ಹಾಡನ್ನು ಅರ್ಥಾನುಸಂಧಾನ ಪೂರ್ವಕವಾಗಿ ಪ್ರತಿನಿತ್ಯ ಪಠಿಸಿ ಸಕಲ ಸಜ್ಜನರು ಶ್ರೀಹರಿವಾಯು ಗುರುಗಳ ಅನುಗ್ರಹಕ್ಕೆ ಪಾತ್ರರಾಗಲಿ ಎಂದು ಆಶಿಸುತ್ತೇವೆ

ಇತ್ಯನೇಕ ನಾರಾಯಣ ಸ್ಮರಣೆಗಳು

**ಶ್ರೀ ಶ್ರೀ ಸತ್ಯಪ್ರಮೋದತೀರ್ಥ ಶ್ರೀಪಾದರು**

**ಶ್ರೀ ಉತ್ತರಾದಿಮಠ, ಬೆಂಗಳೂರು.**

# ಕೃತಜ್ಞತೆ

ವೇದಾಂತದ ಉದ್ಗ್ರಂಥಗಳಂತೆ ಜ್ಞಾನದೀಪವಾಗಬಲ್ಲ ಶ್ರೀ ಲಕ್ಷ್ಮೀಶೋಭನ ಪದ ಶ್ರೀ ಲಕ್ಷ್ಮೀನಾರಾಯಣರ ಪರಮಮಂಗಲಕರ ಕಲ್ಯಾಣೋತ್ಸವವನ್ನು ಹಾಡುವ ಹಾಡುಗಬ್ಬ. ಮಂತ್ರತುಲ್ಯ ಸಕಲ ಅಮಂಗಲ ನಿವಾರಕ ಮಂಗಲದಾಯಕ. ಸ್ತ್ರೀಪುರುಷರೆಲ್ಲರಿಗೂ ಇದೊಂದು ಅಮೂಲ್ಯನಿಧಿ

ಇದರ ಅರ್ಥವಿಸ್ತಾರ ಭಾವ ಗಾಂಭೀರ್ಯ ರಸಾಲಂಕಾರ ವೈಚಿತ್ರ್ಯಗಳನ್ನು ಮನಮುಟ್ಟುವಂತೆ ತಿಳಿಸಬಲ್ಲ ಏಕೈಕ ಅಪೂರ್ವ ಕೃತಿ ಇದು

ಶ್ರೀಶ್ರೀವಾದಿರಾಜ ಗುರುಸಾರ್ವಭೌಮರು ಅನುಗ್ರಹಿಸಿದ ಮಂತ್ರತುಲ್ಯವಾದ ಈ ಶ್ರೀಲಕ್ಷ್ಮೀಶೋಭನಪದಕ್ಕೆ ಅಪೂರ್ವರೀತಿಯ ವಿದ್ವತ್ಪೂರ್ಣವಾದ ವಿಸ್ತಾರವಾದ ವಿವರಣೆ ಬರೆದುಕೊಟ್ಟ ಶ್ರೀ ಹಯವದನ ಪುರಾಣಿಕರಿಗೂ –

ಅತ್ಯಲ್ಪಕಾಲದಲ್ಲಿ ಸುಂದರವಾಗಿ ಅಚ್ಚುಕಟ್ಟಾಗಿ ಮುದ್ರಿಸಿಕೊಟ್ಟ ವ್ಯಾಸ್ ಎಂಟರ್‌ಪ್ರೈಸಸ್ ಮಾಲೀಕರಾದ ಶ್ರೀ ಪ್ರಸನ್ನ ವಿಟ್ಠಲದೇಸಾಯಿಯವರಿಗೂ –

ಮುಖಪುಟದ ರೇಖಾಚಿತ್ರವನ್ನು ಅಂದವಾಗಿ ಬರೆದುಕೊಟ್ಟ ಶ್ರೀ ಬಿ. ಎಸ್. ರಾಘವೇಂದ್ರರಾವ್ ಅವರಿಗೂ –

ನಮ್ಮ ಕೃತಜ್ಞತೆಗಳು.

ಅವರಿಗೆ ಮಂತ್ರಮೂರ್ತಿಗಳಾದ ಲಕ್ಷ್ಮೀನಾರಾಯಣರೂ ಶ್ರೀ ವಾದಿರಾಜರೂ ಸಕಲ ಸನ್ಮಂಗಳಗಳನ್ನು ನೀಡಲೆಂದು ಪ್ರಾರ್ಥಿಸುತ್ತೇವೆ

— ಪ್ರಕಾಶಕರು.

## ಪರಿವಿಡಿ

ಕಾಮಧೇನುರ್ಯಥಾ ಪೂರ್ವಂ
ಸರ್ವಾಭೀಷ್ಟಫಲಪ್ರದಾ ।
ತಥಾ ಕಲೌ ವಾದಿರಾಜ-
ಶ್ರೀಪಾದೋಽಭೀಷ್ಟದಃ ಸತಾಮ್ ॥

# ಶ್ರೀ ಲಕ್ಷ್ಮೀ ಶೋಭನ ಪದ

## ಪಲ್ಲವಿ

**ಶೋಭನವೆನ್ನಿರೆ ಸುರರೊಳು ಸುಭಗನಿಗೆ**
**ಶೋಭನವೆನ್ನಿ ಸುಗುಣನಿಗೆ ।**
**ಶೋಭನವೆನ್ನಿರೆ ತ್ರಿವಿಕ್ರಮರಾಯಗೆ**
**ಶೋಭನವೆನ್ನಿ ಸುರಪ್ರಿಯಗೆ ॥**

ನನ್ನೊಲಿಮೆಯ ಗೆಳತಿಯರೆ, ನೀವೆಲ್ಲ ಒಮ್ಮನದಿಂದ ಶ್ರೀಹರಿಗೆ ಶೋಭನವೆನ್ನಿ. ಅವನು ಸುರರೊಳು ಸುಭಗ ದೇವತೆಗಳಲ್ಲೆಲ್ಲ ಮಹಾ ಸೌಭಾಗ್ಯಶಾಲಿ ಭಾಗ್ಯಲಕ್ಷ್ಮಿ ತಾನಾಗಿ ವರಿಸಿದ ವರನ ಸೌಭಾಗ್ಯಕ್ಕೆಣೆಯುಂಟೆ ? ಆ ತ್ರಿವಿಕ್ರಮರಾಯ ಸುಗುಣ, ಸುರಪ್ರಿಯ

ಇದು ಕವಿಕುಲತಿಲಕ ಶ್ರೀ ವಾದಿರಾಜ ಯತಿವರರು ಪಲ್ಲವಿಯಲ್ಲಿ ಪರೋಕ್ಷವಾಗಿ ಸಕಲ ವಾಙ್ಮನಸಾಭಿಮಾನಿನಿಯಾದ ಶ್ರೀರಮೆಯ ಜೊತೆಗೆ ಕಥಾನಾಯಕನಾದ ಶ್ರೀ ರಮಣನಿಗೆ ಸಲ್ಲಿಸಿದ ಮಂಗಳಸ್ತುತಿ "ಸುಭಗನಿಗೆ, ಸೌಭಾಗ್ಯದೇವತೆಯಿಂದ ಕೂಡಿದ ಪರದೇವತೆಗೆ ಶೋಭನ !" ಸಣ್ಣವರಿಗೆ "ಶೋಭನ" ಎನ್ನುವುದು ಆಶೀರ್ವಾದ. ದೊಡ್ಡವರಿಗೆ ಅದುವೆ ಸ್ತುತಿ "ಹರಿಗೆ ಮಂಗಳವಾಗಲಿ" ಎಂದರೆ ಹರಿಯು ಮಂಗಳಮೂರ್ತಿ ಎಂಬ ಅರಿವು ಸದಾ ನನಗಿರಲಿ" ಎಂದರ್ಥ. ಈ ಪ್ರಾರ್ಥನೆಯೆ ಮಂಗಳ ಅದರ ಗರ್ಭದಲ್ಲಿ ಅಡಗಿದ, "ಹರಿಯು ಮಂಗಳಮೂರ್ತಿ" ಎಂಬ ಸ್ತುತಿಯೂ ಮಂಗಳ. ಹೀಗೆ, "ಶೋಭನ" ಪದವೂ ಮಂಗಳ, ಈ ಶೋಭನಪದಕ್ಕೆ.

ಇಲ್ಲಿ ಈ ಕವಿತೆಯ ಕಥಾವಸ್ತುವಿನ ಸೂಚನೆಯೂ ಇದೆ. ದೇವತೆಗಳನ್ನೆಲ್ಲ ಕಡೆಗಣಿಸಿ ರಮೆಯು ರಮಾರಮಣನನ್ನು ವರಿಸಿದ ಲೀಲೆ ಇಲ್ಲಿಯ ಕಥೆ. ಸುರರೊಳು "ಸುಭಗ" ಸುಂದರನಂತೆ, ಶ್ರೀಹರಿ ಮುಂದೆ ಹೇಳುವಂತೆ "ಕಂದರ್ಪಕೋಟಿಗಳ ಗೆಲುವ ಸೌಂದರ್ಯ" ಅವನದು ಅವನ ಕೊರಳ ಮೇಲೆ ಸ್ವಯಂವರ ಮಾಲಿಕೆಯನ್ನಿಟ್ಟು ನಮಿಸಿದಳಂತೆ ನಮ್ಮ ಜಗನ್ಮಾತೆ.

ಎಲ್ಲ ದೇವತೆಗಳನ್ನು ದೇವಿ ಏಕೆ ಕಡೆಗಣಿಸಿದಳು ? ಶ್ರೀಹರಿಯು ಸುಗುಣ ಮುಂದೆ ಹೇಳುವಂತೆ ಅವನೊಬ್ಬನೆ ನಿರನಿಷ್ಟ, ನಿರವದ್ಯ, ಭಾಗವತದ ಭಾಷೆಯಲ್ಲಿ ಅವ್ಯಭಿಚಾರಿ ಸದ್ಗುಣಾಶ್ರಯ. ಅದರಿಂದ ಶೋಭವವೆನ್ನಿ, ಸುಗುಣನಿಗೆ.

ಶ್ರೀಹರಿ ಗಾತ್ರದಲ್ಲಿ ಮಾತ್ರವಲ್ಲ, ಗುಣದಲ್ಲಿಯೂ ತ್ರಿವಿಕ್ರಮ! ತ್ರಿವಿಕ್ರಮರಾಯ, ಮೂರಡಿ ನೆಲ ಬೇಡಿ ಮೂಲೋಕವನಳೆದು ಎಲ್ಲವನ್ನೂ ನಂಬಿದ ಸುರರಿಗೆ ದಾನ ಮಾಡಿದ ಮಹಾರಾಯ! ಶ್ರೀರಮಣಿಯ ಪಾಲಿಗೆ ಚಿರನೂತನ ಶೃಂಗಾರದ ರಸರಾಜ! ಭಕ್ತರ ಪಾಲಿಗೆ ಆತ ಸುಂದರಕನಸಿನ ರಾಜ! ಆದರಿಂದ "ಶೋಭನವೆನ್ನಿರೆ ತ್ರಿವಿಕ್ರಮರಾಯಗೆ!"

ದೇವಿ ದೇವತೆಗಳನ್ನು ಧಿಕ್ಕರಿಸಿ ನಕ್ಕಾಗ ಅವರಿಗೆ ನಿರಾಸೆಯಾಯಿತೇ? ಕಸಿವಿಸಿಯಾಯಿತೆ? ಇಲ್ಲ ಆನಂದವಾಯಿತು. ಏಕೆಂದರೆ ಶ್ರೀಹರಿ ಸುರಪ್ರಿಯ. ಸುರರಿಗೆ ಪ್ರಿಯ ಪ್ರೀತಿಯ ತಂದೆತಾಯಿಗಳು ಒಂದೆಡೆ ಸೇರುವುದನ್ನು ಕಂಡು ಯಾವ ಮಕ್ಕಳು ಆನಂದಿಸಲಾರರು? ಹಾಗಾದರೆ ಸ್ವಯಂವರದಲ್ಲಿ ಅಭ್ಯರ್ಥಿಗಳಾಗಿ ಏಕೆ ಬಂದಿದ್ದರು? ಅಭ್ಯರ್ಥಿಗಳಾಗಿ ಬಂದಿದ್ದರೆ ತಾನೆ ಈ ಪ್ರಶ್ನೆ! ಶ್ರೀಹರಿ ಸುರಪ್ರಿಯ, ಸುರರು ಆವನಿಗೆ ಪ್ರಿಯರು. ತನ್ನ ಮದುವೆ ಮಾಡಿ ಆ ಮಂಗಳ ದೃಶ್ಯ ಕಂಡು ಸುರರು ಕಣ್ಣಿಗೆ ಹಬ್ಬಮಾಡಿಕೊಳ್ಳಲೆಂದು ಹರಿಯು ತಾನೆ ಆದಕ್ಕೆ ಸೂತ್ರಧಾರನಾಗಿ ನಿಂತ. ಸುರರು ಅದನ್ನು ನೋಡಿ ಹರ್ಷಿಸಲೆಂದೇ ಬಂದಿದ್ದರು. ಜಗನ್ಮಾತೆಯ ಕರುಣಾಕಟಾಕ್ಷವನ್ನು ಬಯಸಿ ಬಂದಿದ್ದರು. "ಶ್ರೀಹರಿ ನಮ್ಮೆಲ್ಲರಿಗಿಂತ ಎಷ್ಟೋ ಪಾಲು ಸದ್ಗುಣಿ, ಸೌಭಾಗ್ಯಶಾಲಿ ಎಂಬ ಸುಂದರ ಸತ್ಯಲೋಕಕ್ಕೆ ವಿದಿತವಾಗಲಿ" ಎಂಬ ಉದ್ದೇಶದಿಂದ ಸ್ವಯಂವರ ಮಂಟಪದಲ್ಲಿ ಸಾಲಾಗಿ ಕುಳಿತಿದ್ದರು. ಈ ಎಲ್ಲ ಉದ್ದೇಶಗಳೂ ನೆರವೇರಿದಾಗ ಅವರ ಆನಂದಕ್ಕೆ ಪಾರವೆ ಇರಲಿಲ್ಲ ಮುಂದೆ ಹೇಳುವಂತೆ "ಸಂಭ್ರಮದಿಂದಂಬರದಿ ದುಂದುಭಿ ಮೊಳಗಿ"ಸಿದರು ಅವರು 'ಒಲಿದು ಭಕುತರಿಗಾಗಿ ಮದುವೆಗ್ಗವಣಿಸಿಕೊಂಡ ಸುಲಭ ದೇವರ ದೇವ ವಿಜಯ ವಿಟ್ಠಲ'ನಲ್ಲವೆ? ಮಂದರವನ್ನು ಕಿತ್ತ. ಸಮುದ್ರದ ಮೇಲಿಟ್ಟ. ಕೂರ್ಮನಾಗಿ ಹೊತ್ತ. ಅಜಿತನಾಗಿ ಅಮೃತವನ್ನು ಕಡೆದು ತೆಗೆದು ತನ್ನ ಮದುವೆಯೂಟಕ್ಕೆ ತಾನೆ ಅದನ್ನು ಬಡಿಸಿದ. ಮೋಹಿನಿಯಾಗಿ ಬಂದು ಮಂದಹಾಸದಿಂದ ಅಸುರರಿಗೆ ಮೋಡಿ ಮಾಡಿದ. ಜನನಿಯಾಗಿ, ಪುತ್ರವಾತ್ಸಲ್ಯದ ಮೂರ್ತಿಯಾಗಿ ಬಂದು ತನ್ನ ಅಮೃತಹಸ್ತದಿಂದ ಸುರರಿಗೆ ಅಮೃತ ಉಣಿಸಿದ. ಇಂಥ ಹರಿಗೆ ಸಮನಾದ ಸುರಪ್ರಿಯರು ಯಾರಿದ್ದಾರೆ?

ಇಲ್ಲಿ ರಾಜರು ತಮ್ಮ ಪ್ರೀತಿಯ ಆರಾಧ್ಯ ದೈವ ಶ್ರೀ ತ್ರಿವಿಕ್ರಮ ಮೂರ್ತಿಯನ್ನು "ರಾಯ" ಎನ್ನುತ್ತ ಅಭಿಮಾನದಿಂದ ಸ್ಮರಿಸಿಕೊಂಡಿದ್ದಾರೆ ಇದರಲ್ಲಿ ಒಂದು ಔಚಿತ್ಯವಿದೆ. ಸ್ವಯಂವರ ಮಂಟಪದಲ್ಲಿ ಎಲ್ಲ ದೇವತೆಗಳ ನಡುವೆ ಸಾಮಾನ್ಯನಂತೆ ಕುಳಿತ ಹರಿಯೆ ದೇವಿಯ ವಿಚಾರ ಸರಣಿಯಂತೆ ವಿಮರ್ಶೆ ಮಾಡಿ ನೋಡಿದಾಗ ತ್ರಿವಿಕ್ರಮನಂತೆ ಬೆಳೆದುನಿಂತು ತನ್ನ ಕೊನೆಯಿಲ್ಲದ ಸದ್ಗುಣರಾಶಿಯ ವಿರಾಡ್ರೂಪದ ದರ್ಶನ ಮಾಡಿಸುತ್ತಾನೆ ವಿಚಾರವಂತರಿಗೆ. ಇದು

ಹಾಡಿನ ಪ್ರಾರಂಭದಲ್ಲಿ ಕೊನೆಯಲ್ಲಿ ಹಯವದನನ ಸ್ಮರಣೆ "ಹಯವದನ ತನ್ನ ಪ್ರಿಯಳಾದ ಲಕ್ಷ್ಮಿಮಿಗೆ ಜಯವಿತ್ತ ಕ್ಷೀರಾಂಬುಧಿಯಲ್ಲಿ" ಎಂಬ ಶಬ್ದಗಳಲ್ಲಿ ಸುಂದರವಾಗಿ ಅರ್ಥಗರ್ಭಿತವಾಗಿ ಮೂಡಿಬಂದಿದೆ ಮಹಾಲಕ್ಷ್ಮಿಯು ಅಭಿಮಾನದ ಸರ್ವಸ್ವವೆನಿಸಿದ ವೇದರಾಶಿಯನ್ನು ಮಧು ಕೈಟಭರು ಅಪಹರಿಸಿದಾಗ ಹರಿಯು ಹಯವದನನಾಗಿ ಬಂದು ದಾನವರನ್ನು ಸಂಹರಿಸಿ ವೇದವನ್ನು ಉದ್ಧರಿಸಿದ್ದ ವೇದಾಭಿಮಾನಿನಿಯಾದ ಲಕ್ಷ್ಮಿಮಿಗೆ ಜಯವಿತ್ತಿದ್ದ ಇದೀಗ ದೇವೇಂದ್ರನಿಗೆ ದೂರ್ವಾಸಶಾಪದಿಂದ ಲಕ್ಷ್ಮಿ ಅಂತರ್ಧಾನಳಾದಾಗ ಹರಿಯು ಲಕ್ಷ್ಮಿಮಿಯನ್ನು ಆವಿರ್ಭಾವಗೊಳಿಸಿದ ಅವಳ ಕೈಹಿಡಿದು ಜಯವನ್ನಿತ್ತ. ರಾಜರ ಎಲ್ಲ ಕೀರ್ತನೆಗಳೂ ಹಯವದನನಿಗೆ ಅಂಕಿತ, ಅವನಿಗೆ ಸಮರ್ಪಿತವಾದುದರಿಂದಲೂ ಕೊನೆಯಲ್ಲಿ ಹಯವದನಮೂರ್ತಿಯ ಸ್ಮರಣೆ ಉಚಿತ. ಹೀಗೆ ನಾನಾ ದೃಷ್ಟಿಗಳಿಂದ ಉಚಿತ ಸ್ಥಳಗಳಲ್ಲಿ ಉಚಿತ ರೀತಿಯಿಂದ ಅಜಿತನನ್ನು ಸ್ಮರಿಸಿದ್ದಾರೆ ವಾದಿರಾಜರು ಅವರೆ ರುಕ್ಮಿಣೀಶ ವಿಜಯದಲ್ಲಿ ಹೇಳುವಂತೆ "ಪ್ರಭೋಃಕ್ರಿಯೈಕಾಪ್ಯರು ಕಾರ್ಯಸಾಧಿಕಾ" ದೊಡ್ಡವರು ಮಾಡುವ ಕೆಲಸ ಒಂದು, ಸಿಗುವ ಸಿದ್ಧಿ ಹಲವು

ಶ್ರೀ ವಾದಿರಾಜರ ಉಪಾಸ್ಯಮೂರ್ತಿ ಹಯವದನನು, ಬ್ರಹ್ಮದೇವರ ಪ್ರಾರ್ಥನೆಯಂತೆ ಮಧುಕೈಟಭರನ್ನು ಸಂಹರಿಸಿ ವೇದಗಳನ್ನು ಉದ್ಧರಿಸಲು ಶ್ರೀಹರಿಯು ಧರಿಸಿದ ಒಂದು ರೂಪವೆಂದು ಮಹಾಭಾರತ ಹೇಳುತ್ತದೆ–

ಏವಂ ಸ್ತುತಃ ಸ ಭಗವಾನ್ ಪುರುಷಃ ಸರ್ವತೋಮುಖಃ ।
ಜಹೌ ನಿದ್ರಾಮಥ ತದಾ ವೇದಕಾರ್ಯಾರ್ಥಮುದ್ಯತಃ ।
ಐಶ್ವರ್ಯೇಣ ಪ್ರಯೋಗೇಣ ದ್ವಿತೀಯಾಂ ತನುಮಾಸ್ಥಿತಃ ।
ಕೃತ್ವಾ ಹಯಶಿರಃ ಶುಭ್ರಂ ವೇದಾನಾಮಾಲಯಂ ಪ್ರಭುಃ ।
ಯಾಂ ಯಾಮಿಚ್ಛೇತ್ತನುಂ ದೇವಃ ಕರ್ತುಂ ಕಾರ್ಯವಿಧೌ ಕ್ವಚಿತ್ ।
ತಾಂ ತಾಂ ಕುರ್ಯಾದ್ ವಿಕುರ್ವಾಣಃ ಸ್ವಯಮಾತ್ಮಾನಮಾತ್ಮನಾ ।

'ಬ್ರಹ್ಮನ ಪ್ರಾರ್ಥನೆಯನ್ನು ಕೇಳಿ ಭಗವಂತನು ನಿದ್ದೆಬಿಟ್ಟು ಎದ್ದನು ವೇದಗಳಿಗಾಶ್ರಯವಾದ ನಿರ್ಮಲವಾದ ಹಯಗ್ರೀವ ರೂಪವನ್ನು ಸ್ವಶಕ್ತಿಯಿಂದ ತನ್ನಿಚ್ಛೆಯಂತೆ ಧರಿಸಿದನು, ಅವನು ಯಾವ ಯಾವ ರೂಪವನ್ನು ಭಕ್ತರ ಕಾರ್ಯ ಸಿದ್ಧಿಗಾಗಿ ಧರಿಸಲು ಬಯಸುವನೋ ಆ ಎಲ್ಲ ರೂಪವನ್ನೂ ಆತ ಸ್ವಶಕ್ತಿಯಿಂದ ತಾನಾಗಿಯೇ ಧರಿಸುತ್ತಾನೆ'

ಹರಿವಂಶದಲ್ಲಿಯೂ ಹೀಗೆ ಹೇಳಿದೆ–

ಸಸ್ಮಾರ ವಿಪುಲಂ ದೇಹಂ ಹರಿರ್ಹಯಶಿರೋ ಮಹಾನ್ ।
ಕೃತ್ವಾ ವೇದಮಯಂ ರೂಪಂ ಸರ್ವದೇವಮಯಂ ವಪುಃ ॥

'ದೇವತೆಗಳ ಸ್ತುತಿಯನ್ನು ಕೇಳಿ ಶ್ರೀಹರಿ ತನ್ನ ಹಯಗ್ರೀವಾಕೃತಿಯ ಮಹಾಕಾಯವನ್ನು ನೆನೆದನು. ಎಲ್ಲ ವೇದಗಳಿಗೂ ಎಲ್ಲ ದೇವತೆಗಳಿಗೂ ಆಶ್ರಯವೆನಿಸಿದ ಆ ರೂಪವನ್ನು ಧರಿಸಿದನು.'

"ಶ್ರೀವಾದಿರಾಜರ ಕೃತಿಗಳು" (ಮೈಸೂರು ವಿಶ್ವವಿದ್ಯಾಲಯ ಕನ್ನಡ ಅಧ್ಯಯನ ಸಂಸ್ಥೆಯ ಪ್ರಕಟನೆ) ಎಂಬ ಹೊತ್ತಿಗೆಯಲ್ಲಿ "ಹಯಾಸ್ಯನಾಗಿ" ಎಂಬ ಪದಕ್ಕೆ ಕೊಟ್ಟಿರುವ ಟಿಪ್ಪಣಿ ಇದಕ್ಕೆ ವ್ಯತಿರಿಕ್ತವಾಗಿದೆ.–

"ಒಮ್ಮೆ ವಿಷ್ಣು ಲಕ್ಷ್ಮೀದೇವಿಯೊಡನೆ ಕ್ರೀಡಿಸುತ್ತ ಆಕೆಯನ್ನು ನೋಡಿ ನಕ್ಕ. ಕೋಪಗೊಂಡ ಆಕೆ ವಿಷ್ಣುವಿನ ತಲೆ ಉರುಳಿ ಬೀಳುವಂತೆ ಶಾಪಕೊಟ್ಟಳು. ಆ ಫಲವಾಗಿ ಒಮ್ಮೆ ವಿಷ್ಣು ತನ್ನ ಬಿಲ್ಲೇ ತಲೆದಿಂಬಾಗಿ ಇಟ್ಟುಕೊಂಡು ಮಲಗಿರಲು ದೇವತೆಗಳಿಂದ ಪ್ರೇರಿತವಾದ ಗೆದ್ದಲುಹುಳು ಆ ಬಿಲ್ಲಿನ ಬುಡವನ್ನು ಕತ್ತರಿಸಲಾಗಿ ಹೆದೆ ಸಡಿಲಗೊಂಡು ಬಿಲ್ಲಿನ ತುದಿ ಹಾರಿ ವಿಷ್ಣುವಿನ ಕೊರಳನ್ನು ಹಾರಿಸಿತು. ಬಳಿಕ ದೇವತೆಗಳೆಲ್ಲರೂ ಒಂದು ಕುದುರೆಯ ರುಂಡವನ್ನು ವಿಷ್ಣುವಿನ ಮುಂಡಕ್ಕೆ ಸೇರಿಸಿದರು. ವಿಷ್ಣು ಹಯಮುಖನಾದ !" (ಪು. ನಾ. ಚೂ ಪು. ೬೭೮.)

ಇದರ ಸಂದರ್ಭ ಹೀಗಿದೆ–

ಒಂದು ಪ್ರಕಾರವೆ ಸ್ವಾಮಿ ಮಂದಿಯ ರಕ್ಷಿಪುದು ।
ನಿಂದವರ ದೇಹದಲ್ಲಿ ಹಿಂದೆ ಮುಂದಭಯವನಿತ್ತು ।
ಅಪಾರ ಮಹಿಮ ನೀನು ಒಪ್ಪುವ ಹಯಾಸ್ಯನಾಗಿ ।
ಸರ್ವರೊಳಗೆ ನೀನಿದ್ದು ಅವರವರ ವಿಭಾಗದ
ಕರ್ಮ ಪರೀಕ್ಷಿಸಿ ಪ್ರೇರಿಸುವ ವರ ಶ್ರೀ ಹಯವದನ ॥

ಈ ಕೀರ್ತನೆಯಲ್ಲಿ ಬರುವ "ಹಯಾಸ್ಯ" ನಾಮಕ್ಕೆ ಇದು ಟಿಪ್ಪಣಿ !

ಪುರಾಣನಾಮ ಚೂಡಾಮಣಿಯಲ್ಲಿ ಮೇಲಿನ ಕಥೆ ಮಹಾಭಾರತ, ದೇವೀ ಭಾಗವತಗಳೆರಡರಲ್ಲೂ ಇದೆ ಎಂದು ಹೇಳಿದೆ–

"ಹಯಗ್ರೀವ (೧) ವಿಷ್ಣುವಿನ ನಾಮಾಂತರ.

ಒಮ್ಮೆ ಮಹಾವಿಷ್ಣು ಲಕ್ಷ್ಮಿಯೊಂದಿಗೆ ಕ್ರೀಡಿಸುತ್ತ ಆಕೆಯನ್ನು ನೋಡಿ ನಕ್ಕ. ತನ್ನ ಸೌಂದರ್ಯವನ್ನು ಹೀಯಾಳಿಸಿದನೆಂಬ ಭಾವನೆಯಿಂದ ಕುಪಿತೆಯಾದ ಲಕ್ಷ್ಮಿ ವಿಷ್ಣುವಿನ ತಲೆ ಉರುಳಿ ಬೀಳುವಂತೆ ಶಾಪವಿತ್ತಳು. ಕೆಲವು ಕಾಲದ ಬಳಿಕ ವಿಷ್ಣು

ಕ್ಷೀರಸಮುದ್ರದಲ್ಲಿ ಆದಿಶೇಷನ ಮೇಲೆ ಮಲಗಿ ತನ್ನ ಶಾರ್ಙ್ಗವೆಂಬ ಬಿಲ್ಲನ್ನೇ ತಲೆದಿಂಬಾಗಿಟ್ಟುಕೊಂಡು ನಿದ್ರಿಸುತ್ತಿದ್ದ. ಆಗ ಮಧುಕೈಟಭರೆಂಬ ರಾಕ್ಷಸರು ಲೋಕಕಂಟಕರಾಗಲು ದೇವತೆಗಳು ವಿಷ್ಣುವಿನಲ್ಲಿಗೆ ಬಂದು ಆತ ನಿದ್ರಿಸುತ್ತಿದ್ದುದನ್ನು ಕಂಡು ಗೆದ್ದಲನ್ನು ಸೃಷ್ಟಿ ಮಾಡಿ ಅದಕ್ಕೆ ಯಜ್ಞದಲ್ಲಿ ಹವಿರ್ಭಾಗವನ್ನು ಕೊಡುವಂತೆ ಅಭಯವಿತ್ತು ವಿಷ್ಣುವಿನ ಧನುಸ್ಸಿನ ಬುಡವನ್ನು ಕತ್ತರಿಸಲು ಹೇಳಿದರು. ಗೆದ್ದಲು ಹುಳು ಅಂತೆಯೆ ಬಿಲ್ಲಿನ ಬುಡವನ್ನು ತಿನ್ನಲಾಗಿ ಬಿಗಿದಿದ್ದ ಹೆದೆ ಸಡಿಲವಾಗಿ ಬಿಲ್ಲಿನ ತುದಿ ಹಾರಿ ವಿಷ್ಣುವಿನ ಕೊರಳನ್ನು ಹಾರಿಸಿತು. ಬಳಿಕ ದೇವತೆಗಳೆಲ್ಲರೂ ಬಂದು ಕುದುರೆಯ ರುಂಡವನ್ನು ವಿಷ್ಣುವಿನ ಮುಂಡಕ್ಕೆ ಸೇರಿಸಿದರು. ಇಂತು ವಿಷ್ಣು ಹಯಗ್ರೀವನಾದ (ದೇ. ಬಾ. ೧.೫. ಭಾರ. ಉ. ೧೩೦)''

ವಸ್ತುತಃ ಈ ಕಥೆ ದೇವೀಭಾಗವತ ಭಾರತಗಳೆರಡಕ್ಕೂ ವ್ಯತಿರಿಕ್ತವೆನ್ನಬಹುದು. ಕ್ಷೀರ ಸಮುದ್ರದಲ್ಲಿ ಆದಿಶೇಷನ ಮೇಲೆ ವಿಷ್ಣು ಮಲಗಿದುದಾಗಲಿ ಮಧು ಕೈಟಭರ ವೃತ್ತಾಂತವಾಗಲಿ ಈ ಕಥೆಗೆ ಸಂಬಂಧಪಟ್ಟಂತೆ ದೇವೀಭಾಗವತದಲ್ಲಿ ಉಕ್ತವಾಗಿಲ್ಲ. ಅಲ್ಲಿ ಹೇಳಿದ ಕಥೆ ಹೀಗಿದೆ–

''ಒಮ್ಮೆ ವಿಷ್ಣು ಹತ್ತು ಸಾವಿರ ವರ್ಷಗಳ ದೀರ್ಘಯುದ್ಧ ಮಾಡಿ ಶ್ರಮ ಪರಿಹಾರಕ್ಕಾಗಿ ಹೆದೆ ಏರಿಸಿದ್ದ ತನ್ನ ಬಿಲ್ಲನ್ನೇ ಗಡ್ಡದ ಕೆಳಗೆ ಆಧಾರವಾಗಿಟ್ಟುಕೊಂಡು ಪದ್ಮಾಸನದಲ್ಲಿ ಕುಳಿತು ಯೋಗನಿದ್ರೆ ಮಾಡುತ್ತಿದ್ದ. ದೇವತೆಗಳು ಒಂದು ಯಜ್ಞಕ್ಕಾಗಿ ವಿಷ್ಣುವನ್ನು ಎಬ್ಬಿಸಲು ಉಪಾಯವನ್ನು ಆಲೋಚಿಸಿದರು. ಕೊನೆಗೆ ಬ್ರಹ್ಮನು ಒಂದು ಗೆದ್ದಲು ಹುಳುವನ್ನು ಸೃಷ್ಟಿಮಾಡಿ ಬಿಲ್ಲಿನ ಬುಡವನ್ನು ಕಡಿಯಲು ಆದೇಶಿಸಿದನು. ಅದು ಕಡಿಯಿತು. ಬಿಲ್ಲಿನ ತುದಿ ಹಾರಿ ವಿಷ್ಣುವಿನ ತಲೆ ಕಡಿದು ಲವಣ ಸಮುದ್ರದಲ್ಲಿ ಬೀಳಿಸಿತು. ದೇವತೆಗಳು ಶೋಕತಪ್ತರಾದರು. ಬ್ರಹ್ಮನು ಬಳಿಯಲ್ಲಿ ಮೂರ್ತಿಮತ್ತಾಗಿ ನಿಂತಿದ್ದ ವೇದಗಳಿಗೆ ಆದಿಶಕ್ತಿಯನ್ನು ಸ್ತುತಿಸಲು ಆದೇಶ ನೀಡಿದನು. ಅವು ಸ್ತುತಿಸಿದಾಗ ದೇವಿ ಸಂತುಷ್ಟಳಾಗಿ ಅಶರೀರವಾಣಿಯಿಂದ ನುಡಿದಳು. ''ದೇವತೆಗಳೆ, ಹಿಂದೊಮ್ಮೆ ವಿಷ್ಣು ಲಕ್ಷ್ಮಿಯ ಮುಖ ನೋಡಿ ನಕ್ಕಾಗ ಆತ ಬೇರೊಬ್ಬಳನ್ನು ಪ್ರೀತಿಸಿ ತನ್ನನ್ನು ಅವಮಾನಿಸುತ್ತಿದ್ದಾನೆ ಎಂದು ಬಗೆದು, ವೈಧವ್ಯ ಬಂದರೂ ಚಿಂತಿಲ್ಲ, ಸವತಿಗೆ ಶಿಕ್ಷೆಯಾಗಲೇಬೇಕೆಂದು ವಿಷ್ಣುವಿನ ತಲೆ ಉರುಳುವಂತೆ ಶಪಿಸಿದಳು. ಅದೀಗ ನಿಜವಾಯಿತು. ಹಿಂದೆ ಹಯಗ್ರೀವಾಸುರನು ತಪಸ್ಸಿನಿಂದ ನನ್ನನ್ನೊಲಿಸಿಕೊಂಡು ಅಮರತ್ವವನ್ನು ಬೇಡಿದ. ಹುಟ್ಟಿದವನಿಗೆ ಸಾವು ತಪ್ಪುವಂತಹುದಲ್ಲ, ಬೇರೆ ವರ ಕೇಳು ಎಂದೆ. ಹಾಗಾದರೆ ಹಯಗ್ರೀವನಿಂದಲೇ ನನಗೆ ಮರಣ, ಬೇರೊಬ್ಬರಿಂದ ಬರಕೂಡದು! ಎಂದನಾತ. 'ತಥಾಸ್ತು' ಎಂದೆ ನಾನು. ಆದ್ದರಿಂದ ನೀವು ಒಂದು ಕುದುರೆಯ ತಲೆಯನ್ನು ವಿಷ್ಣುವಿನ ಮುಂಡಕ್ಕೆ

ಸೇರಿಸಿರಿ" ಬಳಿಕ ದೇವತೆಗಳು ತ್ವಷ್ಟೃವಿನ ಕೈಯಿಂದ ಕುದುರೆಯ ತಲೆಯನ್ನು ವಿಷ್ಣುವಿನ ದೇಹಕ್ಕೆ ಜೋಡಿಸಿದರು. ವಿಷ್ಣು ಹಯಗ್ರೀವನಾಗಿ ಹಯಗ್ರೀವಾಸುರನನ್ನು ಸಂಹರಿಸಿದನು"

ಇಲ್ಲಿ ವಿಷ್ಣು ಹಯಗ್ರೀವನಾದುದು ಒಂದು ಆಕಸ್ಮಿಕ ದುರಂತ. ಭಾರತ ಹರಿವಂಶಗಳಲ್ಲಿ ಇದು ಸ್ವೇಚ್ಛೆಯಿಂದ ತನ್ನ ಶಕ್ತಿಯಿಂದಲೇ ಆದುದು. ಇವೆರಡನ್ನೂ ಮಿಶ್ರಮಾಡಿ ಕೆಲವಂಶ ಸೇರಿಸಿ ಪುರಾಣನಾಮಚೂಡಾಮಣಿಯಲ್ಲಿ ಹೇಳಲಾಗಿದೆ.

ಪ್ರಕೃತ 'ಹಯಾಸ್ಯನಾಗಿ' ಎಂಬ ಪದದ ಟಿಪ್ಪಣಿ ಕೀರ್ತನೆಗೆ ಸರಿ ಹೊಂದುವುದಿಲ್ಲ. ಆ ಕೀರ್ತನೆಯ ಕೊನೆಯಲ್ಲಿ ಹೇಳುವಂತೆ ಸರ್ವರೊಳಗೆ ಇದ್ದು ಅವರವರ ಯೋಗ್ಯತೆ, ಪೂರ್ವಕರ್ಮಗಳನ್ನು ಪರೀಕ್ಷಿಸಿ ಅವುಗಳಿಗನುಕೂಲವಾಗಿ ಪ್ರೇರಣೆ ನೀಡುವ ಅಂತರಾತ್ಮನು ಹಯಾಸ್ಯ ದೇವತೆಗಳೂ, ಗೆದ್ದಲು ಹುಳುವೂ ಏನು ಮಾಡಿದರೆಂಬುದು ಅವನಿಗೆ ತಿಳಿಯದಿದ್ದೀತೆ ?

ಲಕ್ಷ್ಮೀಶೋಭನ ಪದದ ನಾಯಕ ಹಯವದನ ಅಲ್ಲಿ ಹೇಳುವಂತೆ ರಕ್ಕಸರಾಸ್ತ್ರಗಳಿಂದ ಗಾಯವಡೆಯದ ಅಕ್ಷಯ ಕಾಯದವನು ಆತ ಬಿಲ್ಲಿನ ತುದಿ ಹಾರಿದಾಗ ಅವನ ತಲೆ ಹಾರೀತೇ ?

"ಹಯವದನ ತನ್ನ ಪ್ರಿಯಳಾದ ಲಕ್ಷುಮಿಗೆ ಜಯವಿತ್ತ" ಎಂದು ಲಕ್ಷ್ಮೀಶೋಭನ ಹಾಡಿ ವಾದಿರಾಜರು ಶ್ರೀಮಧ್ವಾಚಾರ್ಯರ "ಶ್ರೀರ್ಯತ್ಕಟಾಕ್ಷ ಬಲವತ್ಯಜಿತಂ ನಮಾಮಿ" ಎಂಬ ಸ್ತುತಿಗೆ ಕನ್ನಡ ಭಾಷೆಯಲ್ಲಿ ದನಿಗೂಡಿಸಿದ್ದಾರೆ. ಇಂಥ ವಾದಿರಾಜರ ಬಾಯಿಂದ ಬಂದ "ಹಯಾಸ್ಯ" ನಾಮದ ಇತಿಹಾಸವು ವಿಷ್ಣುವಿನ ಮೇಲೆ ಲಕ್ಷ್ಮಿಯ ಘೋರ ಶಾಪವೊಂದು ಎರಗಿತ್ತೆಂದು ಹೇಳೀತೆ ?

"ತಾ ದುಃಖಿಯಾದರೆ ಇತರರತಿಯ ಕಳೆದು ಪೊರೆದವೀವುದಕ್ಕೆ" ಎಂಬ ಲಕ್ಷ್ಮೀಶೋಭನದ ನುಡಿಯಲ್ಲಿ "ತನ್ನ ದುಃಖವನ್ನು ತಾನು ಪರಿಹರಿಸಿಕೊಳ್ಳಲಾರದವನು ಪರರ ದುಃಖವನ್ನು ಪರಿಹರಿಸಬಲ್ಲನೆ ? ಕೆಸರಲ್ಲಿ ಬಿದ್ದವ ಪರರನ್ನು ಎತ್ತಬಲ್ಲನೆ ?" ಎಂದು ವಾದಿಸಿದ ವಾದಿರಾಜರು ಕೊನೆಯಲ್ಲಿ "ಶ್ರೀಪತಿಯಾದ ಹಯವದನ ತಾಪವ ಕಳೆದು ತನ್ನ ಶ್ರೀಚರಣ ಸಮೀಪದಲ್ಲಿಟ್ಟು ಸಲಹಲಿ" ಎಂದು ಪ್ರಾರ್ಥಿಸಿದ್ದಾರೆ. ಹಯಗ್ರೀವ ಮೂರ್ತಿ ಗೆದ್ದಲು ಹುಳುವಿನಿಂದ ತನಗೆ ಬಂದ ಅಪಾಯವನ್ನು ಅರಿಯದವನಾದರೆ ವಾದಿರಾಜರ ಈ ಪ್ರಾರ್ಥನೆ ಅರಣ್ಯ ರೋದನವೇ ?

ಹಯಗ್ರೀವ ಹಯಗ್ರೀವ ಹಯಗ್ರೀವೇತಿ ಯೋ ಧ್ವನಿಃ ।
ವಿಶೋಭತೇ ಚ ವೈಕುಂಠಕವಾಟೋದ್ಘಾಟನಕ್ಷಮಃ ॥

"ಹಯಗ್ರೀವ ಎಂಬ ಹೆಸರಿನ ಧ್ವನಿ ವೈಕುಂಠನಗರಮಹಾದ್ವಾರವನ್ನು ತೆರೆದು ಕೊಡಬಲ್ಲದು" ಎಂದು ವಾದಿರಾಜರು ಘೋಷಿಸಿದ್ದಾರೆ. ಅವರ ಅಭಿಪ್ರಾಯದಲ್ಲಿ ಹರಿಗೆ ಅಪಮಾನಕರವಾದ ಘಟನೆಯೊಂದನ್ನು ಹೇಳುವ ಹಯಗ್ರೀವ ನಾಮವು ಧ್ವನಿ ಕೇಳಿದೊಡನೆ ಮುಕ್ತಿ ನೀಡುವಷ್ಟು ಸಂತೋಷ ಉಂಟುಮಾಡೀತೆ ಅವನಿಗೆ ?

ವಸ್ತುತಃ ವಾದಿರಾಜರ ಅಭಿಪ್ರಾಯದಲ್ಲಿ ಹಯಗ್ರೀವ ರೂಪವು ಮಹಾಭಾರತ ಹರಿವಂಶಗಳಲ್ಲಿ ಹೇಳಿದಂತೆ ಸ್ವೇಚ್ಛೆಯಿಂದ ಸ್ವಶಕ್ತಿಯಿಂದ ಪ್ರಾದುರ್ಭವಿಸಿದುದು. ಯಾರೂ ಮಾಡಿದುದಲ್ಲ ಮತ್ಸ್ಯ ಕೂರ್ಮ ನೃಸಿಂಹಾದಿಗಳಂತೆ ಯೋಗ್ಯಕಾಲದಲ್ಲಿ ಪ್ರಕಟವಾದ ಅನಾದಿನಿತ್ಯ ಚಿನ್ಮಯಮೂರ್ತಿ.

ಮಧುಕೈಟಭರನ್ನು ಕೊಲ್ಲಲು ಹಯಗ್ರೀವಾವತಾರವಾಯಿತೆಂದು ಮಹಾಭಾರತ ಹೇಳುತ್ತಿದೆ ಮಧುವನ್ನು ಕೊಲ್ಲುವುದು ಉದ್ದೇಶವಾಗಿತ್ತೆಂದು ಹರಿವಂಶ ಹೇಳುತ್ತಿದೆ. ಹಯಗ್ರೀವಾಸುರನನ್ನು ಕೊಲ್ಲುವುದು ಉದ್ದೇಶವೆಂದು ದೇವೀ ಭಾಗವತ ಹೇಳುತ್ತಿದೆ ಈ ಅಂಶದಲ್ಲಿ ವಾದಿರಾಜರು ದೇವೀ ಭಾಗವತದ ಹೇಳಿಕೆಯನ್ನೂ ಸಮ್ಮತಿಸಿದ್ದಾರೆ. ಅವರ ಪ್ರಸಿದ್ಧವಾದ ದಶಾವತಾರ ಸ್ತುತಿಯಲ್ಲಿ ಹಯಗ್ರೀವನನ್ನು ಹೀಗೆ ಬೇಡಿದ್ದಾರೆ:–

ಚಂಡಾಶ್ವಕಂಠಮದಶುಂಡಾಲದುರ್ಹೃದಯ ಗಂಡಾಭಿಖಂಡಕರದೋ–
ಶ್ಚಂಡಾಮರೇಶ ಹಯತುಂಡಾಕೃತೇ ದೃಶಮಖಂಡಾಮಲಂ ಪ್ರದಿಶ ಮೇ ||

'ಹೇ ಹಯಗ್ರೀವ, ಸಿಂಹವು ಮದ್ದಾನೆಯ ತಲೆಯನ್ನು ಹೊಡೆದು ಸೀಳುವಂತೆ ಕ್ರೂರ ಹಯಗ್ರೀವಾಸುರನ ಎದೆಯೊನ್ನೊಡೆದು ಸೀಳಿದವನು ದೇವೋತ್ತಮನಾದ ನೀನು. ನಿನ್ನ ಸಂತತ ಜ್ಞಾನಧಾರೆಯನ್ನು ನನ್ನೆಡೆಗೆ ಹರಿಸು.'

ಸರ್ವಶಕ್ತನಾದ ಹಯವದನನಲ್ಲಿ ಇಂಥ ಉದಾತ್ತ ಪ್ರಾರ್ಥನೆ ಸಲ್ಲಿಸಿ ಕೃತಾರ್ಥರಾದ, ವಾದಿಗಳಲ್ಲಿ ರಾಜರೆನಿಸಿದ ವಾದಿರಾಜರು ಲಕ್ಷ್ಮೀಶೋಭನ ಪದವನ್ನು ಮಾತ್ರವಲ್ಲ ತನ್ನೆಲ್ಲ ಕೃತಿಗಳನ್ನೂ ಅವನಿಗೇ ಅರ್ಪಿಸಿದ್ದಾರೆ. ಈ ಕೃತಿಗಳ ಅಧ್ಯಯನದಲ್ಲಿ ದೇವೀಭಾಗವತದಂಥ ತಾಮಸ ಪುರಾಣಗಳ ಕಥೆಗಳು ಏನೂ ಸಹಾಯಕವಾಗಲಾರವು.

ಕೃಷ್ಣಯಜುರ್ವೇದದ ತೈತ್ತಿರೀಯ ಸಂಹಿತೆಯಲ್ಲಿ 'ಯಜ್ಞಸ್ಯ ಶಿರೋಽಚ್ಛಿದ್ಯತ' (೬.೪.೯.೧) ಎಂದಿದೆ "ಯಜ್ಞನ ಶಿರಶ್ಛೇದ ಉಂಟಾಯಿತು. ದೇವತೆಗಳು ಅಶ್ವಿನಿ ದೇವತೆಗಳನ್ನು ಕೇಳಿಕೊಂಡರು: 'ನೀವು ವೈದ್ಯರಾಗಿರಿ. ಯಜ್ಞನ ಶಿರಸ್ಸನ್ನು ಸೇರಿಸಿರಿ'. ಅಶ್ವಿನಿಗಳೆಂದರು: 'ನಮಗೆ ವರನೀಡಿರಿ ಯಜ್ಞದಲ್ಲಿ ನಮಗೂ ಸೋಮಪಾನದ ವ್ಯವಸ್ಥೆ ಮಾಡಿರಿ'. ದೇವತೆಗಳು ಒಪ್ಪಿದರು. ಅಶ್ವಿನಿಗಳು ಯಜ್ಞನ

ಶಿರಸ್ಸನ್ನು ಸೇರಿಸಿದರು. ಆದ್ದರಿಂದ ಅಶ್ವಿನಗ್ರಹಗ್ರಹಣ ಯಜ್ಞದಲ್ಲಿ ಒಂದು ಅಂಗವೆನಿಸಿತು" ಇಷ್ಟು ಮಾತ್ರ ಅಲ್ಲಿ ಹೇಳಿದೆ ಯಜ್ಞಶಿರಶ್ಛೇದ ಹೇಗೆ ಉಂಟಾಯಿತು ಎಂಬುದರ ಬಗ್ಗೆ ವಿವರಣೆ ಇಲ್ಲ. ಹಯಶಿರಸ್ಸಿನ ಜೋಡಣೆಯ ವಿವರಣೆ ಇಲ್ಲ. ಇಲ್ಲಿ ವೇದಭಾಷ್ಯಕಾರರು ಪುರಾಣ ಕಥೆಯನ್ನು ಇಲ್ಲಿ ಇಟ್ಟುಕೊಳ್ಳಬಹುದೆಂದಿದ್ದಾರೆ. ದೇವೀ ಭಾಗವತದ ಕಥೆಯನ್ನು ಇಟ್ಟುಕೊಳ್ಳಬಹುದೆ ? ಶತಪಥಬ್ರಾಹ್ಮಣದಲ್ಲಿ 'ವಿಷ್ಣೋಃ ಶಿರಃ ಪ್ರಚಿಚ್ಛಿದತುಃ' ಬಿಲ್ಲತುದಿಗಳು ವಿಷ್ಣುವಿನ ಶಿರಸ್ಸನ್ನು ತುಂಡರಿಸಿದವು ಎಂದಿದೆ ಈ ವಿಷ್ಣು ಯಾರು ? ಇಲ್ಲಿಯೂ ವಿಷ್ಣುವಿಗೆ ಹಯಶಿರಸ್ಸಿನ ಜೋಡಣೆ ಹೇಳಿಲ್ಲ.

ಶ್ರೀಮಧ್ವಾಚಾರ್ಯರು ಭಾಗವತ ತಾತ್ಪರ್ಯದಲ್ಲಿ ಹೇಳಿದಂತೆ ಯಜ್ಞ ಎಂಬ ಹೆಸರು ಇಂದ್ರನ ಒಬ್ಬ ಮಗನಿಗೆ ಇದೆ. ಅವನು ಯಜ್ಞಾಭಿಮಾನಿ. 'ಯಜ್ಞೋ ವೈ ವಿಷ್ಣುಃ' ಈ ಯಜ್ಞನಿಗೂ ವಿಷ್ಣುವೆಂಬ ಹೆಸರಿದೆ. ಅವನ ಶಿರಚ್ಛೇದವು ದಕ್ಷಯಜ್ಞಧ್ವಂಸದ ಪ್ರಸಂಗದಲ್ಲಿ ನಡೆದಿದೆ. ಇದು ಸಂಭವನೀಯವೂ ಹೌದು. ಏಕೆಂದರೆ ಶ್ರೀಹರಿಯ ಶರೀರ ಚಿದಾನಂದಮಯ, ಅಚ್ಛೇದ್ಯ, ಅಭೇದ್ಯವಾಗಿದ್ದರೂ ಉಳಿದ ದೇವತೆಗಳ ಶರೀರ ಹಾಗಿಲ್ಲ. ಅದು ಪ್ರಾಕೃತ. ಆದ್ದರಿಂದ ಈ ಯಜ್ಞನ ಶಿರಶ್ಛೇದವನ್ನು ಯಜುರ್ವೇದ ಹೇಳಿರಬಹುದು. ಶತಪಥ ಬ್ರಾಹ್ಮಣವೂ ಹೇಳಿರಬಹುದು.

ಶ್ರೀ ಪುರಂದರದಾಸರ ಸಾಹಿತ್ಯ-೨ 'ಆರ್ತಭಾವ' (ಪುರಂದರದಾಸರ ೪೦೦ ನೇ ವರ್ಷದ ಉತ್ಸವ ಮಂಡಳಿ, ಧಾರವಾಡ-ಪ್ರಕಾಶನದಲ್ಲಿ ಹಯವದನ ಎಂಬ ಶಬ್ದಕ್ಕೆ ಟಿಪ್ಪಣಿ ಕೊಡುತ್ತ ದೇವೀಭಾಗವತದ ಕಥೆಯನ್ನು ಉದ್ಧರಿಸಿ ಅದರ ಏಕೈಕ ಆಕರವೆನ್ನುವಂತೆ ಭಾರತ ಉದ್ಯೋಗ ಪರ್ವ-೧೩೦ ಎಂದಿದೆ. ಜೊತೆಗೆ 'ಇದೇ ರೀತಿಯ ಕಥೆ ತೈತ್ತಿರೀಯ ಸಂಹಿತೆಯಲ್ಲಿ (೬.೪.೯ ೧) ಬರುತ್ತದೆ ಎಂದೂ ಹೇಳಿದೆ. ಇದು ಸಮರ್ಥನೀಯವೆನಿಸಲಾರದು.

— ೧ —

**ಲಕ್ಷ್ಮೀನಾರಾಯಣರ ಚರಣಕ್ಕೆ ಶರಣೆಂಬೆ**
**ಪಕ್ಷಿವಾಹನ್ನಗೆರಗುವೆ ।**
**ಪಕ್ಷಿವಾಹನ್ನಗೆರಗುವೆ ಅನುದಿನ**
**ರಕ್ಷಿಸಲಿ ನಮ್ಮ ವಧುವರರ ॥**

ಲಕ್ಷ್ಮೀನಾರಾಯಣರ ಚರಣಗಳಿಗೆ ಶರಣೆನ್ನುತ್ತೇನೆ. ಪಕ್ಷಿವಾಹನನಿಗೆ ನಮಸ್ಕರಿಸುತ್ತೇನೆ. ನಮ್ಮ ವಧೂವರರನ್ನು ಅವರು ಅನುದಿನ ರಕ್ಷಿಸುತಿರಲಿ.

ಹಿಂದೆ ಪಲ್ಲವಿಯಲ್ಲಿ ಸ್ತುತಿರೂಪದ ಮಂಗಳಾಚರಣೆಯಾಗಿತ್ತು. ಈಗ ಈ ಮೊದಲನೆಯ ನುಡಿಯಲ್ಲಿ ಶರಣೆಂಬೆ, ಎರಗುವೆ ಎಂದು ಎರಡುಬಾರಿ ಶ್ರೀಹರಿಗೆ ನಮಸ್ಕಾರ, ವಧೂವರರ ರಕ್ಷಿಸಲಿ ಎಂದು ಪ್ರಾರ್ಥನೆ ಮತ್ತು ವಧೂವರರಿಗೆ ಶುಭಾಶೀರ್ವಾದ, ಹೀಗೆ ನಾನಾ ರೂಪದಿಂದ ಮಂಗಳಾಚರಣೆ ಇದೆ ಪಲ್ಲವಿಯಲ್ಲಿ ಇಡೀ ಪದದ ಕಥಾವಸ್ತುವಿನ ಸೂಚನೆ ಇದ್ದರೆ ಈ ನುಡಿಯಲ್ಲಿ ಫಲದ ಸೂಚನೆ ಇದೆ

ಲಕ್ಷ್ಮೀಂ ಲಕ್ಷಣಸಂಪನ್ನಾಂ ಲಕ್ಷ್ಮಣಾಗ್ರಜ ಕಾಂಕ್ಷಿಣೀಂ ।
ಲಕ್ಷಯಾಮಿ ಕ್ಷಣಂ ಲಕ್ಷವಿತ್ತದಾತ್ರೀಂ ಕಟಾಕ್ಷತಃ ॥ —ಲಕ್ಷ್ಮೀಸ್ತೋತ್ರ

ಎಂದು ವಾದಿರಾಜರೆ ಹೇಳುವಂತೆ ಲಕ್ಷ್ಮಿ ಎಲ್ಲ ಸೌಂದರ್ಯ ಲಕ್ಷಣಗಳಿಂದ ಒಪ್ಪುವ ಸ್ತ್ರೀರತ್ನ ನಾರಾಯಣನು ಅವನ ಹೆಸರೆ ಹೇಳುವಂತೆ (ನಾರ =ಸದ್ಗುಣಗಳಿಗೆ, ಅಯನ =ಆಶ್ರಯ) ಎಲ್ಲ ಸದ್ಗುಣಗಳಿಂದೊಪ್ಪುವ ಪುರುಷೋತ್ತಮ. ರಾಜರು ಹೇಳುತ್ತಾರೆ

ದೇವಿ ತ್ವಂ ಲಲನಾರತ್ನಂ ದೇವೋಽಸೌ ಪುರುಷೋತ್ತಮಃ

— ಶ್ರೀಶ್ರೀಶಗುಣ ದರ್ಪಣ.

ಇವರಿಬ್ಬರ ಜೋಡಿ ಆದರ್ಶ ಸುಖಮಯ ದಾಂಪತ್ಯದ ಪ್ರತೀಕ. ಇಂಥ ದಾಂಪತ್ಯಜೀವನವನ್ನೇ ಹಿರಿಯರು ವಧೂವರರಿಗೆ ಕೋರುತ್ತಾರೆ ಕನ್ಯಾದಾನ ಕಾಲದಲ್ಲಿ ವರನು ಲಕ್ಷ್ಮೀರೂಪಿಣಿಯಾದ ಕನ್ಯೆಯನ್ನು ವರಿಸುತ್ತೇನೆ ಎನ್ನಬೇಕಂತೆ. ಕನ್ಯಾಪಿತೃ ಲಕ್ಷ್ಮೀ ರೂಪಿಣಿಯಾದ ಈ ಕನ್ಯೆಯನ್ನು ನಾರಾಯಣರೂಪಿಯಾದ ನಿನಗೆ ಕೊಡುತ್ತೇನೆ ಎನ್ನಬೇಕಂತೆ.

ವೃಣೇಽಹಂ ಕನ್ಯಕಾಂ ಸಾಧ್ವೀಂ ಶ್ರೀರೂಪಾಮಿತ್ಯತಃ ಪರಂ ।
ವರೇಣೈವಂ ವೃತಾಂ ಕನ್ಯಾಂ ತತ್ಪಿತಾ ಪ್ರದದಾತಿ ತಾಂ ॥
ಶ್ರೀರೂಪ್ಯೈಷಾ ಮಯಾ ದತ್ತಾ ತುಭ್ಯಂ ಶ್ರೀಧರರೂಪಿಣೇ ।
ಇತ್ಯುಕ್ತ್ವೋದಕಪೂರ್ವಾಂ ತಾಂ ದತ್ವಾ ಸ್ವಸ್ತಿಪದಂ ವದೇತ್ ॥

ವಧೂವರರಲ್ಲಿ ಲಕ್ಷ್ಮೀನಾರಾಯಣರನ್ನು ಚಿಂತಿಸಿ ಕನ್ಯಾದಾನ ಮಾಡಿದರೆ ಮಹಾಫಲವಿದೆ ಎಂದು ವಾಯುಪುರಾಣ ಹೇಳಿದೆ–

ಕನ್ಯಾಂ ಕನಕಸಂಪನ್ನಾಂ ಕನಕಾಭರಣೈರ್ಯುತಾಂ ।
ದಾಸ್ಯಾಮಿ ವಿಷ್ಣವೇ ತುಭ್ಯಂ ಬ್ರಹ್ಮಲೋಕಜಿಗೀಷಯಾ ॥

ಗೋ ಭೂ ಹಿರಣ್ಯ ಶಯ್ಯಾದಿದಾನ ಕಾಲದಲ್ಲಿಯೂ ವರನಲ್ಲಿ ಹರಿಯನ್ನು ಚಿಂತಿಸುವುದು ಸಂಪ್ರದಾಯ–

ಸೌಭಾಗ್ಯಂ ದೇಹಿ ಮೇ ನಿತ್ಯಂ ಶಯ್ಯಾದಾನೇನ ಕೇಶವ ।
ಇಯಂ ದಾಸೀ ಮಯಾ ತುಭ್ಯಂ ಶ್ರೀವತ್ಸ ಪ್ರತಿಪಾದಿತಾ ॥

ಲಕ್ಷ್ಮೀನಾರಾಯಣರ ಆದರ್ಶ ದಾಂಪತ್ಯವನ್ನು ಸ್ಮರಿಸಿ ಅವರು ಅಂಥ ದಾಂಪತ್ಯ ಸುಖವನ್ನು ವಧೂವರರಿಗೆ ಕೊಡಲಿ ಎಂದು ಹಾರೈಸುವುದು ಇದರ ಉದ್ದೇಶ.

ಲಕ್ಷ್ಮೀಶೋಭನ ಪದವನ್ನು ಸುಮಂಗಲಿಯರಿಂದ ಹಾಡಿಸಿ ಅವರು ಮುಟ್ಟಿಕೊಟ್ಟ ಮಂಗಲಸೂತ್ರವನ್ನು ವರನು ವಧುವಿನ ಕೊರಳಿಗೆ ಕಟ್ಟುವ ಸಂಪ್ರದಾಯವೂ ಇದೆ.

ವೇದಘೋಷ, ಮಂಗಳ ವಾದ್ಯಗಳ ಸಡಗರದ ಮಧುರ ವಾತಾವರಣಕ್ಕೆ ಸುಮಂಗಲಿಯರ ಮಧುರಕಂಠದಿಂದ ಹೊರಡುವ ಲಕ್ಷ್ಮೀಶೋಭನ ಹಾಡು ಮತ್ತು ಲಕ್ಷ್ಮೀನಾರಾಯಣರ ದಿವ್ಯಮಂಗಲ ವಿವಾಹೋತ್ಸವದ ಮಧುರ ಸ್ಮೃತಿಗಳು ಸೇರಿದರೆ ಬಂಗಾರದ ಹೂವಿಗೆ ಪರಿಮಳ ಬಂದಂತಾಗುತ್ತದೆ ಆಗ ಪ್ರಸನ್ನ ಹೃದಯದಿಂದ ಹಿರಿಯರು ನೀಡುವ ಶುಭಾಶೀರ್ವಾದಗಳೂ ವಧೂವರರಿಗೆ ಫಲಿಸುತ್ತವೆ. ಲಕ್ಷ್ಮೀನಾರಾಯಣರಂತೆ ಅವರು ಅನ್ಯೋನ್ಯವಾಗಿ ಸುಖದ ದಾಂಪತ್ಯ ನಡೆಸುವಂತಾಗುತ್ತದೆ

ಲಕ್ಷ್ಮೀನಾರಾಯಣರ ಚರಣವಂದನೆಯು ಅರ್ಥಪೂರ್ಣವಾಗಿದೆ. ನಮ್ಮೆಲ್ಲರ ತಾಯಾದ ಭೂಮಾತೆಗೆ ಜನ್ಮನೀಡಿ ಅವಳಿಗಾಸರೆ ಎನಿಸಿದ ಶ್ರೀಹರಿಯ ಚರಣಗಳನ್ನು ವಂದಿಸಿದರೆ ಭೂಮಾತೆಯ ಆಶೀರ್ವಾದ ಲಭಿಸುತ್ತದೆ–

'ಭೂಃ ಪಾದೌ . .. ತ್ರಿಭುವನವಪುಷಂ ವಿಷ್ಣುಮೀಶಂ ನಮಾಮಿ'.

ಹಿಂದೆ ಅಹಲ್ಯೆಯ ದಾಂಪತ್ಯ ಜೀವನದಲ್ಲಿ ಬಂದ ದೊಡ್ಡ ಕುತ್ತನ್ನು ಸ್ಪರ್ಶ ಮಾತ್ರದಿಂದ ಪರಿಹರಿಸಿದವುಗಳೂ ಆ ಪಾದಗಳೇ. ಅವುಗಳ ಸ್ಮರಣೆಯಿಂದ ಪತಿವ್ರತಾಶಿರೋಮಣಿಯೋರ್ವಳ ಆಶೀರ್ವಾದ ಲಭಿಸೀತು. ನೂತನ ವಧೂವರರಿಗೆ ಅದು ಬೇಕು

ಲಕ್ಷ್ಮೀದೇವಿಯೂ 'ಸಂತ ರಾಮನ ಪದವ ಸಂತೋಷ ಮನದಿ' ನೆನೆದಳಂತೆ !

'ಪಕ್ಷಿವಾಹನ್ನಗೆರಗುವೆ' ಎಂಬುದು ವಿಷಹರ ಗರುಡವಾಹನ ಸ್ಮರಣೆ. ವಧೂವರರ ಮುಂದಿನ ದಾಂಪತ್ಯ ಜೀವನದಲ್ಲಿ ಬರಬಹುದಾದ ಎಲ್ಲ ವಿಘ್ನಗಳ ಪರಿಹಾರದ ಸಂಕೇತ. ಏಕೆಂದರೆ ಓರ್ವ ಸದ್ಗೃಹಸ್ಥನ ಮನೆಯಲ್ಲಿ ಹಾವಿನ

ಕಡಿತದಿಂದ ಮದುವೆ ನಿಂತು ಹೋಗುವ ಸಂದರ್ಭ ಬಂದಾಗ ರಾಜರು ಈ ಲಕ್ಷ್ಮೀಶೋಭನ ಪದದಿಂದ ವಿಘ್ನನಿವಾರಣೆ ಮಾಡಿದರೆಂದೂ ಈ ಪದಕ್ಕೆ ವಿಷದಂಥ ಭಯಂಕರ ವಿಘ್ನವನ್ನೂ ಪರಿಹರಿಸುವ ಶಕ್ತಿ ಇದೆ ಎಂಬುದನ್ನು ಪ್ರತ್ಯಕ್ಷ ತೋರಿಸಿದರೆಂದೂ ಐತಿಹ್ಯವಿದೆ.

ಜಹಗೀರುದಾರ ಅರಸಪ್ಪ ನಾಯಕನ ಮನೆಯಲ್ಲಿ ಮದುವೆ. ಮದುವೆ ಮಂಟಪದಲ್ಲಿಯೆ ವರನು ಮಿಡಿನಾಗರಹಾವು ಕಚ್ಚಿ ಮೂರ್ಛಿತನಾದ. ಮಂತ್ರ ಔಷಧಿಗಳೆಲ್ಲ ವ್ಯರ್ಥವಾದುವು. ದೈವಾತ್ ಆ ಊರಲ್ಲಿ ಸಂಚಾರ ಮಾಡುತ್ತಿದ್ದ ರಾಜರನ್ನು ನಾಯಕ ಮೊರೆಹೊಕ್ಕ. ಸಂಸಾರದ ಮಹಾವಿಷವನ್ನೇ ಪರಿಹರಿಸಬಲ್ಲ ಗರುಡವಾಹನನ ಸ್ಮರಣೆಗೆ ಹಾವಿನ ವಿಷ ಒಂದು ಯಾವ ಲೆಕ್ಕ ? ರಾಜರು ವರನನ್ನು ತರಿಸಿ ತೊಡೆಯ ಮೇಲಿರಿಸಿಕೊಂಡರು. ತೀರ್ಥವನ್ನು ಪ್ರೋಕ್ಷಿಸಿ ಲಕ್ಷ್ಮೀ ಶೋಭನ ಪದವನ್ನು ಹಾಡಿದರು. ಮುತ್ತೈದೆಯರಿಂದಲೂ ಹಾಡಿಸಿದರು. ಕ್ರಮೇಣ ವಿಷ ಇಳಿಯಿತು. ನಿದ್ದೆಯಿಂದ ಎಚ್ಚತ್ತವನಂತೆ ಅವನು ಎದ್ದು ಕುಳಿತ. ಸ್ವಪ್ನವೋ ಮಾಯೆಯೋ ! ಎಂದುಕೊಂಡರು ಜನ. ಇದೇ ರೀತಿ ರಾಜರು ಪೂರ್ವಾಶ್ರಮದ ತಂಗಿಯ ಗಂಡನಿಗೊದಗಿದ ಅಪಮೃತ್ಯುವನ್ನೂ ಈ ಪದದಿಂದಲೇ ಪರಿಹರಿಸಿದರಂತೆ.

"ಪ್ರಯಾಣೇ ಗರುಡಾರೂಢಂ" ಎಂಬಂತೆ ದಾಂಪತ್ಯ ಜೀವನ ನೌಕೆಯನ್ನೇರಿ ಪ್ರಯಾಣ ಹೊರಡುವ ವಿವಾಹದಂಥ ಸಂಧಿಕಾಲದಲ್ಲಿ ಮುಂದಿನ ಪ್ರಯಾಣ ಸುಖಕರವಾಗಲು ಗರುಡವಾಹನನನ್ನು ನೆನೆಯುವುದು ಉಚಿತವೂ ಹೌದು

ಲಕ್ಷ್ಮೀನಾರಾಯಣರ ಚರಣಕ್ಕೆ ಶರಣೆಂಬೆ, ಪಕ್ಷಿವಾಹನಗೆ ಎರಗುವೆ ಎಂದು ಎರಡು ಬಾರಿ ನಮಿಸುವುದು 'ನಮೋ ನಮಃ' ಎನ್ನುವ ರೂಢಿಗೆ ಅನುಗುಣವಾಗಿದೆ. ಆದರೆ ಈ ಎರಡು ನಮಸ್ಕಾರಗಳಲ್ಲಿ ಸ್ವಲ್ಪ ವೈಲಕ್ಷಣ್ಯವೂ ಇದೆ. ಶರಣೆನ್ನುವಾಗ– "ಶ್ರೀಹರಿ ನನ್ನನ್ನು ಬಿಡದೆ ರಕ್ಷಿಸುತ್ತಾನೆ ನಾನು ಅವನಿಗೇ ಸೇರಿದವನು" ಎಂಬ ದೃಢವಿಶ್ವಾಸ ವಿರುತ್ತದೆ ಎರಗುವಾಗ, ಶ್ರೀಪಾದರಾಜರು ಹೇಳುವಂತೆ,

ಮಾಡದಿರು ಅನುಮಾನವ ಕೊಂ-
ಡಾಡುವೆನು ತವೆ ಮಹಿಮೆಗಳನು ।
ಜೋಡಿಸುವೆ ಕರಗಳನು ಚರಣಕೆ ..

ಎನ್ನುವ ಭಾವವಿರುತ್ತದೆ. ರಾಜರೂ ಸ್ವಪ್ನ ಪದದಲ್ಲಿ ಹೇಳುತ್ತಾರೆ–

ಸ್ನಾನ ದಾನ ಧ್ಯಾನಗಳನನು-
ಮಾನವಿಲ್ಲದೆ ಮಾಳ್ಪುದದರಿಂ-
ದೇನು ಹಾನಿಯು ನಿನಗೆ ಬಾರದು ಎನ್ನ ಕರುಣದಲಿ ॥

ಶ್ರೀಹರಿ ನನ್ನನ್ನು ಬಿಡದೆ ರಕ್ಷಿಸುತ್ತಾನೆ ಎಂಬ ದೃಢ ವಿಶ್ವಾಸದಿಂದ ಅನುಮಾನವಿಲ್ಲದೆ ಎಷ್ಟು ವೇಗದಿಂದ ನಾವು ಅವನ ಚರಣಗಳಿಗೆರಗುವೆವೋ ಅದಕ್ಕಿಂತ ಮಿಗಿಲಾದ ವೇಗದಿಂದ ಗರುಡವಾಹನ ನಮ್ಮ ಬಳಿಗೆ ಹಾರಿಬರುತ್ತಾನೆ ಹದ್ದು ಆಗಸದಲ್ಲಿ ಮೇಲೆ ಬಲು ಎತ್ತರಕ್ಕೆ ಹಾರಾಡುತ್ತಿದ್ದರೂ ಅದರ ದೃಷ್ಟಿ ಕೆಳಗೆ ಬಿಲದಿಂದ ಹರಿದು ಬರುವ ಹಾವಿನ ಮೇಲಿರುತ್ತದೆ ಅದು ದೃಷ್ಟಿಗೆ ಬಿದ್ದೊಡನೆ ವೇಗವಾಗಿ ಅದರ ಮೇಲೆರಗುತ್ತದೆ ಹದ್ದನ್ನು ಏರಿದ ಹೆದ್ದೈವ ಶ್ರೀಹರಿ ಭಕ್ತನ ಹೃದಯದಲ್ಲಿ ತಲೆದೋರುವ ಪಾಪ ಅಜ್ಞಾನ ದುಃಖ ಮುಂತಾದ ದೋಷಗಳನ್ನು ಕಂಡೊಡನೆ ಅವುಗಳ ಮೇಲೊರಗಿ ಒರೆಸಿಬಿಡುತ್ತಾನೆ

ಲಕ್ಷ್ಮೀನಾರಾಯಣರಿಬ್ಬರನ್ನು ವಂದಿಸಿದ ಮೇಲೆ ಪಕ್ಷಿವಾಹನನಿಗೊಬ್ಬನಿಗೆ ನಮಸ್ಕಾರ ಮಾಡುತ್ತಿರುವುದರಿಂದ ಈ ನಮಸ್ಕಾರ ಶ್ರೀಮದಾಚಾರ್ಯರಿಗೆ ಸಲ್ಲುವ ಅಭಿಪ್ರಾಯವಿರಲೂ ಬಹುದು, ಏಕೆಂದರೆ-

ಲಕ್ಷ್ಮೀನಾರಾಯಣಂ ವಂದೇ ತದ್ಭಕ್ತಪ್ರವರೋ ಹಿ ಯಃ ।
ಶ್ರೀಮದಾನಂದತೀರ್ಥಾಖ್ಯೋ ಗುರುಸ್ತಂ ಚ ನಮಾಮ್ಯಹಂ ॥

ಎನ್ನುವುದು ಸಂಪ್ರದಾಯ.

ನೆನೆವೆ ನಾರಾಯಣನ ಪಾದವ
ನೆನೆವೆ ನಾರಾಯಣಿಯ ಚರಣವ
ನೆನೆವೆ ಪ್ರಾಣನ ಪದವ

ಎಂದು ಸ್ವಪ್ನಪದದಲ್ಲಿ ರಾಜರೂ ಈ ಸಂಪ್ರದಾಯವನ್ನು ತೋರಿದ್ದಾರೆ ಆದ್ದರಿಂದ ಪಕ್ಷಿವಾಹನನಾದ ಶ್ರೀಹರಿಗೆ ವಾಹನವಾದ 'ಪಕ್ಷಿ' ವಾಯುದೇವರು ಎಂದಿಟ್ಟುಕೊಳ್ಳಬಹುದು ಸಜ್ಜನ ಪಕ್ಷಪಾತಿಯಾಗಿದ್ದು, ಹರಿಯು ಸರ್ವೋತ್ತಮ ಎನ್ನುವ ಪಕ್ಷವಹಿಸಿ, ಅದನ್ನು ಯಶಸ್ವಿಯಾಗಿ ನಿರ್ವಹಿಸಿ, ಆ ಪಕ್ಷದ ಧುರೀಣರೆನಿಸಿ, ಕಲ್ಯಾವೇಶ ರಹಿತರಾಗಿದ್ದು ಎಂದಿಗೂ ಪಕ್ಷಾಂತರ ಹೊಂದದಿರುವ ಪಕ್ಷಿ ಇವರು

'ಸತ್‌ಪಕ್ಷಪಾತೀ ಪ್ರವರೋ ಯಥಾಗ್ನ್ಯಃ'

ಎಂದು ಪಂಡಿತಾಚಾರ್ಯರು ಬಣ್ಣಿಸಿದ್ದಾರೆ

ವಸ್ತುತಃ ವಾಯುದೇವರು ಪಕ್ಷಿ ಮಾತ್ರವಲ್ಲ, ಪಕ್ಷಿಶ್ರೇಷ್ಠರು. ಗರುಡನಿಗಿಂತ ಇನ್ನೂ ಚೆನ್ನಾಗಿ, ಹೆಗಲ ಮೇಲೆ ಮಾತ್ರವಲ್ಲ ಹೃದಯದಲ್ಲೂ ಹರಿಯನ್ನು ಹೊರುವವರು ಅವನಿಗೆ ವಾಯುವಾಹನ ಎಂಬ ಬಿರುದು ತಂದವರು. ಇದನ್ನೂ ಪಂಡಿತಾಚಾರ್ಯರು "ಪಕ್ಷಿಶ್ರೇಷ್ಠೋऽಪರಃ" ಎಂದು ಆಲಂಕಾರಿಕವಾಗಿ ಬಣ್ಣಿಸಿದ್ದಾರೆ ಅಥವಾ ಪಕ್ಷವೆಂದರೆ ಬಾಹು, ಉಪನಿಷತ್ತಿನ ಭಾಷೆಯಲ್ಲಿ–

ತಸ್ಯ ಪ್ರಾಣ ಏವ ಶಿರಃ ।
ವ್ಯಾನೋ ದಕ್ಷಿಣಃ ಪಕ್ಷಃ ।
ಅಪಾನ ಉತ್ತರಃ ಪಕ್ಷಃ ।

ಎಂಬಲ್ಲೆಲ್ಲ ಹಾಗೆ ಪ್ರಯೋಗವಿದೆ. ಆದ್ದರಿಂದ ಮಹಾ ಬಾಹುಶಾಲಿಯಾವ ವಾಯುದೇವರು ಪಕ್ಷಿ ಎನಿಸಬಹುದು ತ್ರಿವಿಕ್ರಮನ ಪಾದ ಸ್ಪರ್ಶದಿಂದ ಒಡೆದ ಬ್ರಹ್ಮಾಂಡ ಕಟಾಹದ ಬಿರುಕನ್ನು ಮೂರುಕೋಟಿ ರೂಪಗಳಲ್ಲಿ ಬಾಹುಬಲದಿಂದ ಸರಿಪಡಿಸಿದವರು ವಾಯುದೇವರು ಹನುಮಂತನಾಗಿ ಒಂದು ಕೈಯಿಂದ ಸಂಜೀವನ ಬೆಟ್ಟವನ್ನೆತ್ತಿ, ಭೀಮನಾಗಿ ಬಕಕಿರ್ಮೀರಾದಿಗಳನ್ನು ಪುಡಿಗಟ್ಟಿ, ಶ್ರೀ ಮಧ್ವಾಚಾರ್ಯರಾಗಿ ಒಂದು ಕೈಯಿಂದ ದೊಡ್ಡ ಬಂಡೆಯನ್ನೆತ್ತಿ ಬಾಹುಬಲವನ್ನು ಮೆರೆಸಿದವರು ವಾಯುದೇವರು. ಹೀಗೆ ರಾಜರ 'ಪಕ್ಷಿವಾಹನ' ಹಿಂದೆ ಹೇಳಿದಂತೆ ಗರುಡವಾಹನನೆನ್ನಿ ಅಥವಾ ವಾಯುವಾಹನನೆನ್ನಿ ಎರಡೂ ಸರಿಯೆ

— ೨ —

**ಪಾಲಸಾಗರವನ್ನು ಲೀಲೆಯಲಿ ಕಡೆಯಲು**
**ಬಾಲೆ ಮಹಲಕ್ಷುಮಿ ಉದಿಸಿದಳು ।**
**ಬಾಲೆ ಮಹಲಕ್ಷುಮಿ ಉದಿಸಿದಳಾ ದೇವಿ**
**ಪಾಲಿಸಲಿ ನಮ್ಮ ವಧುವರರ ॥**

ಕ್ಷೀರಸಮುದ್ರವನ್ನು ಕಡೆದಾಗ ಬಾಲೆ ಮಹಾಲಕ್ಷ್ಮಿ ಉದಿಸಿದಳು. ಆ ದೇವಿ ನಮ್ಮ ವಧೂವರರನ್ನು ಪಾಲಿಸಲಿ.

ರೈವತ ಮನ್ವಂತರದಲ್ಲಿ ಮತ್ಸ್ಯಾವತಾರದ ಬಳಿಕ ಮತ್ತು ವೈವಸ್ವತ ಮನ್ವಂತರದಲ್ಲಿ ನರಸಿಂಹಾವತಾರದ ಬಳಿಕ – ಹೀಗೆ ಎರಡು ಬಾರಿ ಚತುರ್ಮುಖ ಬ್ರಹ್ಮನ ಈಗಿನ ಹಗಲಿನಲ್ಲಿ ಸಮುದ್ರಮಥನ ನಡೆಯಿತು ಎರಡು ಬಾರಿ ಮಹಾಲಕ್ಷ್ಮಿ ಉದಿಸಿದಳು ಶ್ರೀ ಹರಿಯನ್ನು ವರಿಸಿದಳು 'ಬೊಮ್ಮನ ದಿನದಲ್ಲಿ ಒಮ್ಮೊಮ್ಮೆ ಈ ಮದುವೆ ಕ್ರಮದಿ ಮಾಡಿ ವಿನೋದಿಸುವ'ವರು ನಮ್ಮ ಲಕ್ಷ್ಮೀನಾರಾಯಣರು. ಲಕ್ಷ್ಮೀದೇವಿ ಬ್ರಹ್ಮನ ಪ್ರತಿಯೊಂದು ದಿನದಲ್ಲಿಯೂ

ಉದಿಸುತ್ತಾಳೆ. ಬಾಲೆಯಾಗಿ ಉದಿಸಿ ಬಾಲೆಯಾಗಿ ಇರುತ್ತಾಳೆ. ಹದಿನಾರರ ನವತರುಣಿಯಾಗಿಯೇ ಮೆರೆಯುತ್ತಾಳೆ.

ಉದಯುದ್ಯೌವನಾ ಮುಗ್ಧಾ ಲಜ್ಜಾವಿಜಿತಮನ್ಮಥಾ ।

'ನವತಾರುಣ್ಯ ಶೃಂಗಾರರಸಿಕತೆ ಅಧಿಕಲಜ್ಜೆ ಇರುವವಳೆ ಬಾಲೆ'. ಸೂರ್ಯನು ನಮ್ಮ ಪ್ರತಿಯೊಂದು ದಿನದಲ್ಲಿಯೂ ಉದಿಸುತ್ತಾನೆ. ದೇವಿ ಬ್ರಹ್ಮನ ಪ್ರತಿಯೊಂದು ದಿನದಲ್ಲಿಯೂ ಉದಿಸುತ್ತಾಳೆ. ಇದು ಕೇವಲ ಉದಯ. ಜನನವಲ್ಲ. ಜನನ ಮರಣವಿಲ್ಲದ ದೇವಿ ಜನನ ಮರಣವಿಲ್ಲದ ದೇವನಿಗೆ ಸರಿಯಾದ ಜೊತೆ. ಅವಳು ನಮ್ಮ ವಧೂವರರನ್ನು ಪಾಲಿಸಲಿ. ಆದರ್ಶ ಸುಖದಾಂಪತ್ಯ ನೀಡಿ ಹರಸಲಿ.

ಪಾಲ ಸಾಗರವನ್ನು ಲೀಲೆಯಲಿ ಕಡೆದವರು ಯಾರು ? ದೇವಾಸುರರೆ ?

ಶ್ರಾಂತಾಃ ಸ್ಮ ಸುಭೃಶಂ ಬ್ರಹ್ಮನ್ ನೋದ್ಭವತ್ಯಮೃತಂ ಚ ತತ್ ।
ವಿನಾ ನಾರಾಯಣಂ ದೇವಂ ಸರ್ವೇಽನ್ಯೇ ದೇವದಾನವಾಃ ॥

– ಮಹಾಭಾರತ.

'ನಾರಾಯಣನೊಬ್ಬನನ್ನು ಬಿಟ್ಟು ಉಳಿದ ನಾವೆಲ್ಲ ದೇವತೆಗಳೂ, ಅಸುರರೂ ಬಲು ಆಯಾಸಗೊಂಡಿದ್ದೇವೆ. ಅಮೃತವು ಮಾತ್ರ ಇನ್ನೂ ಉದ್ಭವಿಸುತ್ತಿಲ್ಲ' ಎಂದು ಬ್ರಹ್ಮನಲ್ಲಿ ದೇವತೆಗಳು ಮೊರೆ ಇಟ್ಟರು. ಆಗ ಬ್ರಹ್ಮನ ಪ್ರಾರ್ಥನೆಯಂತೆ ದೇವಾಸುರರೆಲ್ಲರಲ್ಲಿಯೂ ಹರಿ ಒಂದೊಂದು ರೂಪದಿಂದ ನಿಂತು ಅವರಲ್ಲಿ ಶಕ್ತಿ ತುಂಬಿದ ಮೊದಲಿಗೆ ಮಂದರ ಪರ್ವತವನ್ನು ಕಿತ್ತು ತರುವ ಕಾರ್ಯದಲ್ಲಿಯೇ ದೇವಾಸುರರು ಸೋತಿದ್ದರು. ಭೂಮಿ ಮತ್ತು ಮೇರು ಪರ್ವತಗಳ ನಡುವೆ ಕೀಲಿನಂತೆ ಸಿಕ್ಕಿಕೊಂಡಿರುವ ಆ ಬೆಟ್ಟವನ್ನು ಯಾರು ಕೀಳುವವರು ? ಬಂಗಾರದ ಬೆಟ್ಟ, ರಾವಣ ಕೈಲಾಸವೆತ್ತಿದಂತೆ ಯಾರಾದರೂ ಲೋಭದಿಂದ ಕಿತ್ತುಕೊಳ್ಳಬಹುದೆಂದು ಹಾಗಾಗದಂತೆ ಶಿವನೂ ವರವಿತ್ತಿದ್ದ. ಆದ್ದರಿಂದ ಅಜಿತರೂಪಿ ಶ್ರೀಹರಿಯೇ ಒಂದು ಕೈಯಿಂದ ಲೀಲಾಜಾಲವಾಗಿ ಅದನ್ನು ಕಿತ್ತು ಗರುಡನ ಮೇಲಿರಿಸಿಕೊಂಡು ಕ್ಷೀರಸಮುದ್ರದ ಕಡೆಗೆ ಹೊರಟನಂತೆ.

ಭಾಗವತದಲ್ಲಿ ಮಾತ್ರ ಹೀಗೆ ಹೇಳಿದೆ–

ತತಸ್ತೇ ಮಂದರಗಿರಿ ಮೋಜಸೋತ್ಪಾಟ್ಯ ದುರ್ಮದಾಃ

'ದೇವಾಸುರರು ತಮ್ಮ ಶಕ್ತಿ ಪರಾಕ್ರಮದಿಂದ ಬೆಟ್ಟವನ್ನು ಕಿತ್ತು......'

ಈ ಸಮಸ್ಯೆಯನ್ನು ವಾದಿರಾಜರು ಹೀಗೆ ಪರಿಹರಿಸಿದ್ದಾರೆ– ಭೂಮಿಯಿಂದ ಬೆಟ್ಟವನ್ನು ಕಿತ್ತರು ಎಂಬ ಅರ್ಥವಲ್ಲ. ಗರುಡನು ಅದನ್ನು ಹೊತ್ತು ತರುತ್ತಿದ್ದಾಗ

ದಾರಿಯಲ್ಲಿ ತಮ್ಮ ಶಕ್ತಿಪರೀಕ್ಷೆಗಾಗಿ ಗರುಡನ ಮೇಲಿಂದ ಎತ್ತಿಕೊಂಡರು ಸ್ವಲ್ಪ ದೂರ ಒಯ್ದರು. ಭಾರವನ್ನು ತಾಳಲಾರದೆ ಮೈಮೇಲೆ ಹಾಕಿಕೊಂಡು ಅದರ ಕೆಳಗೆ ನುಚ್ಚುನೂರಾದರು –

ನಿಪತನ್ ಸ ಗಿರಿಸ್ತತ್ರ ಬಹೂನಮರದಾನವಾನ್ ।
ಚೂರ್ಣಯಾಮಾಸ ಮಹತಾ ಭಾರೇಣ ಕನಕಾಚಲಃ ॥

'ಆ ಚಿನ್ನದ ಬೆಟ್ಟ ಕೆಳಗೆ ಬಿದ್ದು ಅನೇಕ ದೇವಾಸುರರನ್ನು ಪುಡಿ ಮಾಡಿತು'

ಎಂದು ಮುಂದೆ ಭಾಗವತವೆ ಹೇಳುತ್ತದೆ ಆಗ ಶ್ರೀಹರಿ ಅಲ್ಲಿಯೇ ಇದ್ದನಂತೆ ಶಕ್ತಿ ಪರೀಕ್ಷೆಯಾಗಲೆಂದು ಸುಮ್ಮನಿದ್ದ. ಬಳಿಕ ಕರುಣೆ ತುಂಬಿದ ನೋಟದಿಂದ ಅವರನ್ನೆಬ್ಬಿಸಿದ. ಒಂದು ಕೈಯಿಂದ ಲೀಲಾಜಾಲವಾಗಿ ಆ ಬೆಟ್ಟವನ್ನೆತ್ತಿ ಮೊದಲಿನಂತೆ ಗರುಡನ ಮೇಲಿರಿಸಿಕೊಂಡು ಕ್ಷೀರಸಮುದ್ರದ ಬಳಿ ಬಂದ. ಲೀಲೆಯಿಂದ ದೇವಾಸುರರ ಜೊತೆಗೆ ತಾನೂ ಸಮುದ್ರಮಥನ ಮಾಡಿದ.

ವಾಸುಕಿಯು ಹಗ್ಗ ಅವನು ಸೋತು ಆಯಾಸದಿಂದ ವಿಷಜ್ವಾಲೆ ಉಗುಳಿದ. ಒಣ ಪ್ರತಿಷ್ಠೆಯ ಸಲುವಾಗಿ ಹಾವಿನ ಬಾಲವನ್ನು ಬಿಟ್ಟು ಹೆಡೆಯನ್ನೇ ಹಿಡಿದಿದ್ದ ದೈತ್ಯರಿಗೆ ಮಥನದ ಆಯಾಸದ ಜೊತೆಗೆ ಈ ವಿಷದ ಬಾಧೆ. ಅಷ್ಟರಲ್ಲಿ ಮಂದರ ಪರ್ವತ ಮುಳುಗಿ ನಿಧಾನವಾಗಿ ತಳಕ್ಕೆ ಇಳಿಯತೊಡಗಿತು. ದೈವವು ಪುರುಷಪ್ರಯತ್ನವನ್ನು ವಿಫಲಗೊಳಿಸುತ್ತಿದೆ ಎಂದು ನೊಂದು ದೇವಾಸುರರು ಮುಖ ಬಾಡಿಸಿಕೊಂಡರು–

'ತೇ ಸುನಿರ್ವಿಣ್ಣ ಮನಸಃ ಪರಿಮ್ಲಾನಮುಖಶ್ರಿಯಃ ।
ಆಸನ್ ಸ್ವಪೌರುಷೇ ನಷ್ಟೇ ದೈವೇನಾತಿಬಲೀಯಸಾ ॥'

ಆಗ ಶ್ರೀಹರಿ ಕೂರ್ಮರೂಪದಿಂದ ಲೀಲೆಯಿಂದ ಬೆಟ್ಟವನ್ನೆತ್ತಿದ. ಕಡೆಯುವ ರಭಸಕ್ಕೆ ಬೆಟ್ಟವು ಮೇಲೆ ಹಾರತೊಡಗಿತು, ಚೆನ್ನಾಗಿ ಕಳಿತ ಮಾವಿನಹಣ್ಣನ್ನು ಹಿಚುಕಿದರೆ ಓಟೆ ಮೇಲೆ ಹಾರುವಂತೆ. ಆಗ ಒಂದು ರೂಪದಿಂದ ಬೆಟ್ಟದ ಮೇಲೆ ನಿಂತು ಒತ್ತಿ ಹಿಡಿದ, ಶ್ರೀಹರಿ. ಕಡೆವ ರಭಸದಲ್ಲಿ ಬೆಟ್ಟ ಪುಡಿಪುಡಿಯಾಗದಂತೆ ಅದರೊಳಗೂ ನಿಂತುಕೊಂಡ. ಬಳಲಿ ಬೆಂಡಾದ ದೇವದಾನವರಲ್ಲಿಯೂ ವಾಸುಕಿಯಲ್ಲಿಯೂ ಪ್ರವೇಶಿಸಿ ಅವರಲ್ಲಿ ಶಕ್ತಿ, ಉತ್ಸಾಹಗಳನ್ನು ತುಂಬಿದ. ಶ್ರೀಹರಿಗೆ ಇವೆಲ್ಲ ಲೀಲೆ.

ಮಥನದ ಕಾರ್ಯ ಬಿರುಸಿನಿಂದ ನಡೆಯುತ್ತಿದ್ದಂತೆ ಹಾಲಾಹಲ ಉದ್ಭವಿಸಿತು. ಮೂಲೋಕವನ್ನು ದಹಿಸತೊಡಗಿತು. ಶಿವನ ಪ್ರೀತಿಯ ಪ್ರಭುವಾದ ಹರಿಯು ಶಿವನಿಗೆ ಕೀರ್ತಿ ಬರಬೇಕೆಂದು ಸುಮ್ಮನಿದ್ದ ಅವನ ಆಜ್ಞೆಯಂತೆ ವಾಯು ಚಿನ್ನದ ಬಟ್ಟಲಲ್ಲಿ ಹಾಲಾಹಲವನ್ನು ಹಿಡಿದು ಸ್ವಲ್ಪಮಾತ್ರ ಕೈಯಿಂದ ತೆಗೆದು ಹಿಂಡಿ ಆದರ ತೀವ್ರತೆಯನ್ನು ಕಡಿಮೆ ಮಾಡಿ ಶಿವನಿಗಿತ್ತ ಶಿವನು ಕುಡಿದ. ಗಂಟಲಿಗೆ ಇಳಿಯುತ್ತಿದ್ದಂತೆ ಅದರ ಬಾಧೆಯನ್ನು ತಡೆದುಕೊಳ್ಳಲಾರದೆ ರೋದನ ಮಾಡಿ ರುದ್ರನೆನಿಸಿದ. ಮೂರ್ಛಿತನಾಗಿ ಬಿದ್ದು ಹರಿಯ ಅಮೃತ ಕರಸ್ಪರ್ಶದಿಂದ ಎಚ್ಚೆತ್ತ. ತೀವ್ರಶಿರೋವೇದನೆಯಿಂದ ಬಳಲಿ ಚಂದ್ರಶೇಖರನೆನಿಸಿದ. ಅಭಿಷೇಕಪ್ರಿಯ ನೆನಿಸಿದ ಗಂಟಲಲ್ಲಿ ವಿಷದ ಚಿಹ್ನೆ ಧರಿಸಿ 'ನೀಲಕಂಠ'ನೆನಿಸಿದ. ರಾಮನಾಮಾಮೃತ ಪಾನದಿಂದ ಸ್ವಸ್ಥನಾದ. ಬಳಿಕ ವಾಯುವೆ ಪೂರ್ತಿ ವಿಷಪಾನ ಮಾಡಿದ ಇದನ್ನು ಶ್ರುತಿ ಸ್ಮೃತಿಗಳು ಹೇಳಿವೆ–

'ವಾಯುರಸ್ಮಾ ಉಪಾಮಂಥತ್ ಪಿನಷ್ಟಿ ಸ್ಮಾ ಕುನನ್ನಮಾ ।
ಕೇಶೀ ವಿಷಸ್ಯ ಪಾತ್ರೇಣ ಯುದ್ರುದ್ರೇಣಾಪಿಬತ್ ಸಹ ॥'

–ಋಗ್ವೇದ.

ರುದ್ರೋಽಪಿ ವಾಯುಕರಮರ್ದಿತಕಾಲಕೂಟಬಿಂದುಂ . ।

–ಗರುಡಪುರಾಣ.

'ರುದ್ರಸ್ಯ ಯಶಸೋಽರ್ಥಾಯ ಸ್ವಯಂ ವಿಷ್ಣುರ್ವಿಷಂ ಪ್ರಭುಃ ।
ನ ಸಂಜಹ್ರೇ ಸಮರ್ಥೋಽಪಿ ವಾಯುಂ ಚೋಚೇ ಪ್ರಶಾಂತಯೇ ॥'

– ವಾಯುಪುರಾಣ.

ಹಾಗಾದರೆ ಪಾಲಸಾಗರವನ್ನು ಲೀಲೆಯಲ್ಲಿ ಕಡೆದವರಾರು ? ನಾರಾಯಣನೊಬ್ಬನೆ ಲೀಲೆಯಿಂದ ಸಮುದ್ರವನ್ನು ಕಡೆದು ಮಹಾಲಕ್ಷ್ಮಿಯನ್ನು ಪ್ರಾದುರ್ಭಾವಗೊಳಿಸಿದವನು ನಾರಾಯಣ. ಅವಳನ್ನು ಮದುವೆಯಾಗಿ ತನ್ನೆದೆಯಲ್ಲಿರಿಸಿಕೊಂಡು ಅವಳ ಪ್ರಸನ್ನ ಕರುಣಾಕಟಾಕ್ಷದ ಲಾಭವನ್ನು ಮೂಲೋಕಕ್ಕೆ ಒದಗಿಸಿಕೊಟ್ಟವನು ನಾರಾಯಣ.

'ಶ್ರೀಃ ಸ್ವಾಃ ಪ್ರಜಾಃ ಸಕರುಣೇನ ನಿರೀಕ್ಷಣೇನ
ಯತ್ರ ಸ್ಥಿತೈಧಯತ ಸಾಧಿಪತೀಂಸ್ತ್ರಿಲೋಕಾನ್ ॥'

– ಭಾಗವತ.

**ಬೊಮ್ಮನ ಪ್ರಳಯದಲಿ ತನ್ನರಸಿಯೊಡಗೂಡಿ**
**ಸುಮ್ಮನೆಯಾಗಿ ಮಲಗಿಪ್ಪ ।**
**ನಮ್ಮ ನಾರಾಯಣಗು ಈ ರಮ್ಮೆಗಡಿಗಡಿಗು**
**ಜನ್ಮವೆಂಬುದು ಅವತಾರ ॥**

ಚತುರ್ಮುಖ ಬ್ರಹ್ಮನ ಲಯಕಾಲದಲ್ಲಿ ನಮ್ಮ ನಾರಾಯಣನು ತನ್ನರಸಿ ರಮೆಯೊಡನೆ ಆಲದೆಲೆಯ ಮೇಲೆ ಸುಮ್ಮನೆ ಮಲಗುತ್ತಾನೆ ಈ ರಮಾ ನಾರಾಯಣರಿಗೆ ಅಡಿಗಡಿಗೆ ಜನ್ಮವೆಂಬುದು ಅವತಾರ. ಎಲ್ಲರಂತೆ ಪ್ರಾಕೃತ ಶರೀರದ ಬಂಧನದಲ್ಲಿ ಅವರು ಸಿಲುಕುವವರಲ್ಲ

ಹಿಂದಿನ ನುಡಿಯಲ್ಲಿ 'ಪಾಲಸಾಗರವನ್ನು ಲೀಲೆಯಲಿ ಕಡೆಯಲು ಬಾಲೆ ಮಹಾಲಕ್ಷುಮಿ ಉದಿಸಿದ್ದಳು'. ಆದ್ದರಿಂದ ಅವಳಿಗೂ ಜನ್ಮವಿದೆಯೆಂಬ ಸಂದೇಹ ನಮ್ಮಲ್ಲಿ ಉದಿಸಬಹುದು ಇದಕ್ಕೆ ಪರಿಹಾರ – ಬ್ರಹ್ಮಪ್ರಳಯದಲ್ಲಿಯೂ ಲಯ ಹೊಂದದೆ ವಿಹರಿಸುವವರು ಲಕ್ಷ್ಮೀನಾರಾಯಣರು ಇಂಥವರಿಗೆ ಮರಣವೆಲ್ಲಿ ? ಪುನರ್ಜನ್ಮವೆಲ್ಲಿ ?

ಮನುಷ್ಯ ಮಾನದ ಒಂದು ವರ್ಷ, ದೇವಮಾನದಲ್ಲಿ ಒಂದು ದಿನ ಮನುಷ್ಯ ಮಾನದ ನಾನ್ನೂರ ಮೂವತ್ತೆರಡು ಕೋಟಿ ವರ್ಷಗಳು ಬ್ರಹ್ಮನಿಗೆ ಒಂದು ಹಗಲು ಅವನ ನೂರು ವರ್ಷ ಆಯುಷ್ಸಿನ ಕೊನೆಯಲ್ಲಿ ಅವನಿಗೆ ಲಯ. ಆಗ ಸ್ಥೂಲ ಶರೀರಧಾರಿಗಳಾರೂ ಇರುವುದಿಲ್ಲ. ಬ್ರಹ್ಮನ ಪ್ರತಿದಿನದಲ್ಲಿ ನಡೆಯುವ ಹದಿನಾಲ್ಕು ಮನ್ವಂತರಗಳ ಪ್ರಳಯದಲ್ಲಾಗಲಿ, ದಿನದ ಕೊನೆಯಲ್ಲಿ ಸಂಭವಿಸುವ ಕಲ್ಪ ಪ್ರಳಯದಲ್ಲಾಗಲಿ ಕೆಲವು ಜೀವರು ಶರೀರಧಾರಿಗಳಾಗಿರಬಹುದು. ಬ್ರಹ್ಮ ಪ್ರಳಯದಲ್ಲಿ ಹಾಗಿಲ್ಲ. ಎಲ್ಲೆಡೆ ಶ್ರೀ ಭೂ ದುರ್ಗಾರೂಪಗಳಿಂದ ಲಕ್ಷ್ಮೀದೇವಿಯೇ ವ್ಯಾಪಿಸಿರುತ್ತಾಳೆ ಶ್ರೀ ರೂಪವೇ ಪ್ರಳಯ ಜಲ. ಭೂರೂಪವು ಅದರಲ್ಲಿ ತೇಲುವ ಆಲದೆಲೆ. ದುರ್ಗಾ ರೂಪವು ಎಲ್ಲೆಡೆ ಹಬ್ಬಿದ ದಟ್ಟವಾದ ಕತ್ತಲು. ಐವತ್ತುಕೋಟಿ ಯೋಜನ ವಿಸ್ತಾರದ ಆ ಆಲದೆಲೆಯ ಮೇಲೆ ಏಳು ಕೋಟಿ ಯೋಜನ ಗಾತ್ರದ ಅದ್ಭುತ ಶಿಶುರೂಪ ತಾಳಿ ನಾರಾಯಣನು ಮಲಗಿರುತ್ತಾನೆ ಅವನ ಮೈಯೆಲ್ಲ ನಾನಾ ಬಗೆಯ ಆಭರಣಗಳ ರೂಪದಿಂದ ಲಕ್ಷ್ಮಿ ಆವರಿಸಿರುತ್ತಾಳೆ–

ಪ್ರಳಯ ಕಾಲದಲ್ಲಿ ಆಲದೆಲೆಯ ಮೇಲೆ ಮಲಗಿದಾಗ ।
ಹಲವು ಆಭರಣಗಳ ಛಲವು ಆಗಿ ಜಾಣತನದಿ ॥



ಬೊಮ್ಮನ

ಮರುಳು ಮಾಡಿಕೊಂಡೆಯಲ್ಲೇ ಮಾಯಾದೇವಿ ।
ಇರುಳು ಹಗಲು ಏಕವಾಗಿ ಹರಿಯು ನಿನ್ನ ಬಿಡದಿಪ್ಪಂತೆ ॥

–ಪುರಂದರದಾಸರು.

ಶೂನ್ಯನಾಮಕನಾಗಿ ಹರಿ ವಟದೆಲೆಯಲ್ಲಿ ।
ಸಣ್ಣವನೋಪಾದಿ ಬೊಮ್ಮಾಂಡನಾಯಕ ।
ಕನ್ನೆ ರತುನವಾದ ಶ್ರೀಯು ಆಲಿಂಗನದಿ ।
ತನ್ನಿಚ್ಛೆಯಲಿ ತಾನೆ ಪವಡಿಸಿದ್ದು ।

–ವಿಜಯದಾಸರು

ಸುಮ್ಮನೆಯಾಗಿ ಮಲಗಿರುತ್ತಾನೆ ಶ್ರೀಹರಿ. ಜಗತ್ತಿನ ಸೃಷ್ಟಿಸ್ಥಿತ್ಯಾದಿ ಕಾರ್ಯಗಳನ್ನು ಸ್ವಲ್ಪಕಾಲ ನಿಲ್ಲಿಸಿ ಸುಮ್ಮನಾಗಿರುತ್ತಾನೆ ಶೂನ್ಯನಾಮಕನಾಗಿ. ತನ್ನ ನಿದ್ದೆಗಾಗಿ ಅಲ್ಲ ಜೀವರಿಗೆ ಗಾಢನಿದ್ರೆ ಬರಿಸಲೆಂದು. ಕಣ್ಣು ಮುಚ್ಚಿ ಮಲಗಿರುತ್ತಾನೆ, ನಿದ್ದೆ ಮಾಡುತ್ತಿಲ್ಲ. ಇದುವೆ ಯೋಗನಿದ್ರೆ.

'ಸುಮ್ಮಾನದಿಂದ ಮಲಗಿರ್ದ' ಎಂದೂ ಪಾಠಾಂತರವಿದೆ. ಸುಮ್ಮಾನದಿಂದ ಅಂದರೆ ಸಂತೋಷದಿಂದ, ತೃಪ್ತಿಯಿಂದ ಹರಿ ಮಲಗಿರುತ್ತಾನೆ ಏಕೆ ?

ಪ್ರಪಂಚದ ಸೃಷ್ಟಿಸ್ಥಿತ್ಯಾದಿ ಕಾರ್ಯಗಳನ್ನು ತನ್ನಿಚ್ಛೆಯಂತೆ ತಾನೆ ಅನಾಯಾಸವಾಗಿ, ಯಶಸ್ವಿಯಾಗಿ ಮಾಡುತ್ತಿದ್ದೇನೆ ಎಂಬ ತೃಪ್ತಿ ಅವನಿಗಿದೆ.

'ಹೊಟ್ಟೆ ಎಂಬ ಹೊನ್ನ ತೊಟ್ಟಿಲೊಳಗಿಟ್ಟು
ವಿಟ್ಠಲ ಜೀವರ ನಿದ್ರೆಗೊಳಿಸುವನು'

ಎಂದು ವಾದಿರಾಜರೇ ಹೇಳುವಂತೆ ಅನೇಕ ಕಲ್ಪಗಳ ಕಾಲ ಜನನಮರಣಗಳ ಚಕ್ರದಲ್ಲಿ ತಿರುಗಿ ಬಳಲಿದ ಜೀವರಿಗೆ ಸುಖನಿದ್ರೆ ಬರಿಸುತ್ತಿದ್ದೇನೆ ಎಂಬ ಸಂತೋಷವಿದೆ.

ಲಕ್ಷ್ಮೀದೇವಿಯ ಅಸಂಖ್ಯ ರೂಪಗಳೆಲ್ಲ ಒಂದರಲ್ಲೊಂದರಂತೆ ಐಕ್ಯಹೊಂದಿ ತನಗೆ ಅತಿ ಸಮೀಪದಲ್ಲಿವೆ. ತನ್ನೊಲವಿನ ಪಟ್ಟದ ರಾಣಿ ತನ್ನಲ್ಲಿ ಹೀಗೆ ಲಯ ಹೊಂದಿದ್ದಾಳೆ, ಆಲಿಂಗಿಸಿಕೊಂಡಿದ್ದಾಳೆ ಎಂಬ ಆನಂದವಿದೆ.

ಸುತ್ತಲೊಪ್ಪುವ ಸನಕಾದಿಗಳು ।
ಮೊತ್ತದಿಂದ ದೇವತೆಗಳು ।
ಮತ್ತೆ ಊರ್ವಶಿ ರಂಭೆ ಮೇನಕೆ ।
ಭಕ್ತನಾರದರ ಗೀತ ॥

ಸುತ್ತ ಸುರದುಂದುಭಿ ವಾಲಗ ।
ಕತ್ತರಿಸಿ ಕಡಿವ ಅಸುರರ ಕಾಳಗ ।
ಭಕ್ತರಿಷ್ಟಾರ್ಥಗಳನೆಲ್ಲ ।
ಮತ್ತೆ ಕೊಡುವ ಊಳಿಗ ॥

—ವಾದಿರಾಜರು

ಹೀಗೆ ಏಕಾಂತದಲ್ಲಿ ರಮಾ ಬಾಹುಲತಾ ಬಂಧನದಲ್ಲಿರಲು ಅವಕಾಶವಿಲ್ಲದ ಹರಿಗೆ ಈಗ ಪ್ರಳಯಕಾಲದಲ್ಲಿ ಅದು ಸಿಕ್ಕಿದೆ ಎಂಬ ಸಂತೋಷವಿದೆ. ಅದಕ್ಕಾಗಿಯೇ ಶ್ರೀಹರಿ ಪ್ರಲಯ ಮಾಡುತ್ತಾನಂತೆ !

ಭೈಷ್ಮ್ಯಾಃ ಕ್ವಣತ್ ಕಟಕ ಕಂಕಣ ರಂಜಿತೋ ಮೇ
ಹಸ್ತಃ ಸಮಸ್ತಫಲದಸ್ತನುತಾದಭೀಷ್ಟಮ್ ।
ಯೇನಾನಿಶಂ ರಹಸಿ ಬಂಧಮಪೇಕ್ಷಮಾಣಃ
ಶ್ರೀಶೋಽಖಿಲಂ ಹರತಿ ಪೂರ್ಣಮನೋರಥೋಽಪಿ ॥

'ದನಿಗೈವ ವಂಕಿ ಬಳೆಗಳಿಂದೊಪ್ಪುವ ರುಕ್ಮಿಣಿಯ ತೋಳುಗಳು ಬಯಸಿದುದನೆಲ್ಲ ನೀಡಬಲ್ಲವು. ಏಕಾಂತದಲ್ಲಿ ಅವುಗಳ ಅಪ್ಪುಗೆಯಲ್ಲಿರಬೇಕೆಂದು ಪೂರ್ಣಕಾಮನಾದ ಶ್ರೀಹರಿಯೂ ಬಯಸಿ ಪ್ರಪಂಚವನ್ನು ಲಯಗೊಳಿಸುತ್ತಾನೆ. ಅಂಥ ತೋಳುಗಳು ನನ್ನ ಅಭೀಷ್ಟಗಳನ್ನು ಪೂರೈಸಲಿ'.

—ರುಕ್ಮಿಣೀಶ ವಿಜಯ.

ಅನಾದಿ ಕಾಲದಿಂದ ಬ್ರಹ್ಮರುದ್ರಾದಿ ದೇವತೆಗಳು ತನ್ನ ಪಾದಕಮಲಗಳಿಗೆ ಅರ್ಪಿಸಿದ ಭಕ್ತಿಯ ಆರಾಧನೆಯ ಮಧುರ ರಸವನ್ನು ಜುರಜುರನೆ ಚೀಪಿ ಸವಿಯುವ ಕಾಲವಿದೆಂದೂ ಸಂತೋಷ.

ಕರಾರವಿಂದೇನ ಪದಾರವಿಂದಂ
ಮುಖಾರವಿಂದೇ ವಿನಿವೇಶಯಂತಂ ।

ವಟಸ್ಯ ಪತ್ರಸ್ಯ ಪುಟೇ ಶಯಾನಂ
ಬಾಲಂ ಮುಕುಂದಂ ಮನಸಾ ಸ್ಮರಾಮಿ ||

–ಶ್ರೀ ಕೃಷ್ಣಕರ್ಣಾಮೃತ

'ಕರಕಮಲದಿಂದ ಪಾದಕಮಲವನ್ನು ಹಿಡಿದೆಳೆದು ಮುಖಕಮಲದಲ್ಲಿಟ್ಟುಕೊಳ್ಳುತ್ತ, ಆಲದೆಲೆಯ ಮೇಲೆ ಮಲಗಿದ್ದಾನೆ ಬಾಲ ಮುಕುಂದ ಅವನನ್ನು ಮನಸ್ಸಿನಿಂದ ಸ್ಮರಿಸುತ್ತೇನೆ.'

ಲಕ್ಷ್ಮೀನಾರಾಯಣರ ಶರೀರಗಳಿಗೆ ಪ್ರಳಯದಲ್ಲಿಯೂ ನಾಶವಿಲ್ಲದಿರುವುದರಿಂದ ಮರಣವಿಲ್ಲದ ಅವರಿಗೆ ಪುನರ್ಜನ್ಮದ ಪ್ರಶ್ನೆಯೇ ಇಲ್ಲ.

ಅತೋಽಭೂದ್ದೇಹಲೀದೀಪಃ ಪ್ರಲಯೇ ಸತ್ವಮೀಶಿತುಃ ।
ಕಲ್ಪಾಂತೇ ಯಲ್ಲಯಂ ರುಂಧೇ ಕಲ್ಪಾದೌ ಜನ್ಮ ಚ ಪ್ರಭೋಃ ||

'ಪ್ರಳಯಕಾಲದಲ್ಲಿ ಹರಿ ಜೀವಂತನಾಗಿದ್ದಾನೆ ಎಂಬುದು ಆ ಕಲ್ಪದ ಕೊನೆಯಲ್ಲಿ ಹರಿಗೆ ಮರಣವಿಲ್ಲ ಎಂಬುದನ್ನೂ ಮುಂದಿನ ಕಲ್ಪದ ಆದಿಯಲ್ಲಿ ಜನ್ಮವಿಲ್ಲ ಎಂಬುದನ್ನೂ ಸಾಧಿಸುತ್ತದೆ, ಹೊಸ್ತಿಲ ಮೇಲಿಟ್ಟ ದೀಪ ಎರಡು ಕೋಣೆಗೂ ಬೆಳಕು ಚೆಲ್ಲುವಂತೆ'

– ಯುಕ್ತಿಮಲ್ಲಿಕೆ.

ಪುನರ್ಜನ್ಮವೆಂದರೆ ನೂತನ ಪ್ರಾಕೃತ ಶರೀರವೊಂದನ್ನು ಪಡೆಯುವುದು. ಪ್ರಳಯ ಜಲಧಿಯಲ್ಲಿ ವಿಹರಿಸುವ ರಮಾನಾರಾಯಣರಿಗೆ ಇದು ಬೇಕೇ ? ರಮಾ ಎಂದರೆ ವಿಹಾರಮಾಡುವವಳು. ನಾರಾಯಣ ಎಂದರೆ ನೀರಲ್ಲಿರುವವನು. ಅದ್ಭುತ ಜಲಕ್ರೀಡೆ ಆಡುವ ಈ ದಂಪತಿಗಳಿಗೆ ಪ್ರಾಕೃತ ಶರೀರ ಆಗಲೂ ಇಲ್ಲ. ಅದರ ಆವಶ್ಯಕತೆಯೂ ಇಲ್ಲ ಸೃಷ್ಟಿ ಕಾಲದಲ್ಲಿ ಜೀವರು ಪ್ರಾಕೃತ ಶರೀರದಿಂದ ಮಾಡಬಹುದಾದ ಎಲ್ಲ ಬಗೆಯ ವಿಹಾರಗಳನ್ನು ಇವರು ಚೆನ್ನಾಗಿ ತಮ್ಮ ಚಿನ್ಮಯ ಶರೀರದಿಂದಲೇ ಲಯಕಾಲದಲ್ಲಿಯೂ ಮಾಡುವರು ತಮಗೆ ಅನಾವಶ್ಯಕವಾದ, ಅನಪೇಕ್ಷಿತವೂ ಆದ ಪ್ರಾಕೃತ ಶರೀರವನ್ನು ಅವರು ಸ್ವೇಚ್ಛೆಯಿಂದ ಧರಿಸಬೇಕಾಗಿಲ್ಲ.

ಕರ್ಮವಶದಿಂದ ಸ್ಥೂಲಶರೀರವನ್ನು ಅವರು ಪಡೆಯಲು ಸಾಧ್ಯತೆಯೂ ಇಲ್ಲ. ಅವರು ನಿತ್ಯ ಮುಕ್ತರು. ಕರ್ಮಬಂಧನ ಅವರಿಗಿಲ್ಲ. ಇರುತ್ತಿದ್ದರೆ 'ಸುಮ್ಮನೆಯಾಗಿ' ಅವರು ಮಲಗುತ್ತಿರಲಿಲ್ಲ ಕರ್ಮಾನುಸಾರ ಸುಖ ದುಃಖಗಳನ್ನು ಉಣ್ಣುತ್ತ ಅಸಹಾಯಕರಾಗಿ ನಾನಾ ಕಾರ್ಯಚಟುವಟಿಕೆಗಳಲ್ಲಿ ವ್ಯಗ್ರರಾಗಿ ಶ್ರಮಿಸುತ್ತಿದ್ದರು. 'ಸುಮ್ಮಾನದಿಂದ' ದುಃಖಲೇಶವಿಲ್ಲದ ಮಹಾ

ಆನಂದದಿಂದ ಮಲಗುವುದಂತೂ ದೂರ ಉಳಿಯಿತು ದುಃಖಲೇಶವಿಲ್ಲದ ಆನಂದವು ಕರ್ಮದಿಂದ ಲಭ್ಯವಲ್ಲ 'ನಾಸ್ತ್ಯಕೃತಃ ಕೃತೇನ' ಆದ್ದರಿಂದ 'ಸುಮ್ಮನೆಯಾಗಿ'ಯೋ 'ಸುವಸ್ತಾನದಿಂದ'ಲೋ ಮಲಗುವ ರಮಾನಾರಾಯಣರಿಗೆ ಕರ್ಮಬಂಧನವಿಲ್ಲವೆನ್ನುವದು ಸ್ಪಷ್ಟ. ಹಾಗಿಲ್ಲದಿದ್ದರೆ ಬ್ರಾಹ್ಮಣ ಜಾತಿಗೇ ಅಭಿಮಾನಿಯಾದ ಬ್ರಹ್ಮನನ್ನು ಲಯಗೊಳಿಸುವ ಹರಿಗೆ ಎಂಥ ಬ್ರಹ್ಮಹತ್ಯಾಪಾತಕ ತಗುಲೀತು !

ರಮಾನಾರಾಯಣರು ತಮ್ಮ ಅತೀಂದ್ರಿಯ ಚಿನ್ಮಯ ಶರೀರಗಳನ್ನು ಆಗಾಗ ನಮ್ಮ ಇಂದ್ರಿಯಗಳಿಗೆ ಗೋಚರಪಡಿಸುತ್ತಾರೆ. ಇದುವೆ ಅವರಿಗೆ ಜನ್ಮ, ಇದುವೆ ಅವತಾರ ಬ್ರಹ್ಮನ ಪ್ರತಿದಿನದಲ್ಲಿಯೂ ಅಡಿಗಡಿಗೆ ಅನೇಕ ಬಾರಿ ದೇವತೆಗಳ ಪ್ರಾರ್ಥನೆಯಂತೆ ಸ್ವೇಚ್ಛೆಯಿಂದಲೇ ಇಂಥ ಜನ್ಮಗಳನ್ನು ಇವರು ತಳೆಯುತ್ತಾರೆ

ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ।
ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಂ ॥
ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ ॥

ಎಂದು ಮುಂತಾಗಿ ಶ್ರೀಕೃಷ್ಣ ಹೇಳಿದುದೂ ಇದನ್ನೇ

ಬಹೂನಿ ಮೇ ವ್ಯತೀತಾನಿ ಜನ್ಮಾನಿ ತವ ಚಾರ್ಜುನ ।
ತಾನ್ಯಹಂ ವೇದ ಸರ್ವಾಣಿ ನ ತ್ವಂ ವೇತ್ಥ ಪರಂತಪ ॥

'ಅರ್ಜುನ, ನನಗೂ ನಿನಗೂ ಅನೇಕ ಜನ್ಮಗಳಾಗಿ ಹೋಗಿವೆ ಅದರೆ ನಾನು ಅವೆಲ್ಲವನ್ನು ತಿಳಿದಿದ್ದೇನೆ ನೀನು ತಿಳಿದಿಲ್ಲ,'

ಹರಿಯ ಜನ್ಮ ವಿಲಕ್ಷಣ ತನ್ನಿಚ್ಛೆಯಂತೆ ಬುದ್ಧಿಪೂರ್ವಕವಾಗಿ ಆತನು ಜನ್ಮ ತಳೆಯುತ್ತಾನೆ ಇತರರು ತಾವೇನು ಮಾಡುತ್ತಿದ್ದೇವೆ ಎಂಬುವರ ಅರಿವಿಲ್ಲದೆ ಪ್ರಾಚೀನ ಕರ್ಮಾನುಸಾರ ಬೇರೆ ಬೇರೆ ಪ್ರಾಕೃತ ಶರೀರಗಳಲ್ಲಿ ಜನ್ಮ ತಳೆಯುತ್ತಾರೆ

ರಮಾದೇವಿ ಹರಿಯ ಇಚ್ಛೆಯಂತೆ ಅವನ ಎಲ್ಲ ಅವತಾರಗಳಲ್ಲಿಯೂ ಅವನಂತೆ ಆವಿರ್ಭವಿಸಿ ಅವನ ಲೀಲೆಗಳಿಗೆ ಅನುಗುಣವಾಗಿಯೇ ವರ್ತಿಸುತ್ತಾಳೆ.

'ಲೀಲಯಾ ಧೃತತನೋರನುರೂಪರೂಪಾ ।'
'ವಿಷ್ಣೋರ್ದೇಹಾನುರೂಪಾಂ ವೈ ಕರೋತ್ಯೇಷಾಽಽತ್ಮನಸ್ತನುಂ ।'

ಹರಿಯು ಚಾಕ್ಷುಷ ಮನ್ವಂತರದಲ್ಲಿ ವೈರಾಜನಿಂದ ಸಂಭೂತಿಯಲ್ಲಿ ಅಜಿತನಾಗಿ ಅವತರಿಸಿ ರೈವತ, ವೈವಸ್ವತ ಮನ್ವಂತರಗಳೆರಡರಲ್ಲಿ ಎರಡು ಬಾರಿ

ದೇವಾಸುರರಿಂದ ಸಮುದ್ರಮಥನ ಮಾಡಿಸಿದ್ದಾನೆ. ಆಗ ಎರಡು ಬಾರಿಯೂ ಬಾಲೆ ಮಹಾಲಕ್ಷ್ಮಿ ಉದಿಸಿದ್ದಾಳೆ, ಹರಿಯನ್ನು ವರಿಸಿದ್ದಾಳೆ. ಆದ್ದರಿಂದ ಅಡಿಗಡಿಗೂ ಲಕ್ಷ್ಮೀನಾರಾಯಣರು ತಳೆಯುವ ಜನ್ಮ ಅವತಾರವೇ ಆಗಿರುತ್ತದೆ.

— ೪ —

**ಕಂಬುಕಂಠದ ಸುತ್ತ ಕಟ್ಟಿದ ಮಂಗಳಸೂತ್ರ**
**ಅಂಬುಜವೆರಡು ಕರಯುಗದಿ ।**
**ಅಂಬುಜವೆರಡು ಕರಯುಗದಿ ಧರಿಸಿ ಪೀ–**
**ತಾಂಬರವುಟ್ಟು ಮೆರೆದಳು ॥**

ಶಂಖದಂತೆ ಸುಂದರವಾದ ಕಂಠದ ಸುತ್ತಲೂ ಕಟ್ಟಿದ ಮಂಗಳಸೂತ್ರವನ್ನು, ಎರಡು ಕೈಗಳಲ್ಲಿ ಎರಡು ಕಮಲಗಳನ್ನು ಧರಿಸಿ ಪಿತಾಂಬರ ಉಟ್ಟು ಮೆರೆದಳು ಬಾಲೆ ಮಹಾಲಕ್ಷ್ಮಿ.

ಇದೀಗ ಮದುವೆಯಾಗಲಿರುವ ಕನ್ಯೆ ಸರ್ವಾಲಂಕಾರ ಭೂಷಿತಳಾಗಿ ಮೆರೆಯುವುದು ಸರಿಯೇ. ಆದರೆ ಮಂಗಳಸೂತ್ರವನ್ನೂ ಧರಿಸುವುದೆ ? ಮೊಟ್ಟಮೊದಲಿಗೆ ಅದರದೇ ವರ್ಣನೆ !

ವಸ್ತುತಃ ದೇವಿ ಮಹಾಲಕ್ಷ್ಮಿ ಮಂಗಳದೇವತೆ ನಿತ್ಯ ಸುಮಂಗಲಿ. ಶ್ರೀಹರಿಯ ಎದೆಯಲ್ಲಿ ಸದಾ ವಾಸಮಾಡುವವಳು. ಆದ್ದರಿಂದ ಆತ ಶ್ರೀನಿವಾಸ. ಶ್ರೀವತ್ಸ ಆತನು ಪ್ರೀತಿಯಿಂದ ಧರಿಸಿದ ಕುರುಹು ಅವತಾರಕಾಲದಲ್ಲಿಯೂ ಅದು ಇರುತ್ತದೆ–

ತಮದ್ಭುತಂ ಬಾಲಕಮಂಬುಜೇಕ್ಷಣಂ
ಚತುರ್ಭುಜಂ ಶಂಖಗದಾದ್ಯುದಾಯುಧಂ ।
ಶ್ರೀವತ್ಸಲಕ್ಷ್ಮಂ ಗಲಶೋಭಿ ಕೌಸ್ತುಭಂ
ಪೀತಾಂಬರಂ ಸಾಂದ್ರಪಯೋದಸೌಭಗಂ ॥

– ಭಾಗವತ

ಶ್ರೀಕೃಷ್ಣನು ಅವತರಿಸಿದಾಗ ತನ್ನ ಆಯುಧ, ಆಭರಣ, ಪಿತಾಂಬರ, ಶ್ರೀವತ್ಸ ಚಿಹ್ನೆಗಳಿಂದ ಸಮೇತವಾಗಿಯೆ ಅವತರಿಸಿದನಂತೆ. ಅವನಿಗೆ ಅನುರೂಪಳಾದ ಮಡದಿ ದೇವಿಯೂ ಹಾಗೇ ಧರಿಸಿದರೆ ಏನು ಆಶ್ಚರ್ಯ ? ಲಕ್ಷ್ಮಿ ಲಕ್ಷಣಸಂಪನ್ನೆಯಾಗಿಯೇ ಇರಬೇಕು. ಮಾಂಗಲ್ಯದ ಲಕ್ಷಣವಾದ ಮಂಗಳಸೂತ್ರವನ್ನು ಬಿಡಲು ಸಾಧ್ಯವೇ ?

ಲಕ್ಷ್ಮೀನಾರಾಯಣರು ಅವತರಿಸುವಾಗ ಆಭರಣ, ಮುಂತಾದವುಗಳೊಂದಿಗೆ ಏಕೆ ಅವತರಿಸುತ್ತಾರೆ ? ಇದಕ್ಕೆ ಉತ್ತರ ಲಕ್ಷ್ಮೀಶೋಭನ ಪದದಲ್ಲಿಯೇ ಮುಂದೆ ಹೇಳಲಿದೆ–

ಉಟ್ಟ ಪೀತಾಂಬರ ತೊಟ್ಟ ಭೂಷಣಂಗಳು........
ಶ್ರೀವಿಟ್ಠಲ ಪುಟ್ಟಿದನೆನಬಹುದೆ ॥

ಹುಟ್ಟುವ ಶಿಶುವಿನ ಶರೀರ ತಂದೆತಾಯಿಗಳ ಶುಕ್ರ ಶೋಣಿತದಿಂದಾಗುತ್ತದೆ. ವಸ್ತ್ರಾಭರಣಗಳು ಆಯುಧಗಳು ಹಾಗೇ ಆಗುತ್ತವೆಯೇ ? ಆದ್ದರಿಂದ ಲಕ್ಷ್ಮೀನಾರಾಯಣರ ಅವತಾರ ರೂಪಗಳೂ ಅಪ್ರಾಕೃತ, ಶುದ್ಧಚಿನ್ಮಯ.

ಮಹಾಲಕ್ಷ್ಮಿಯ ಶರೀರ, ಆಕೆಯ ಆಭರಣಗಳು ಕ್ಷೀರಸಮುದ್ರದಲ್ಲಿ ದೇವಾಸುರರು ಹಾಕಿದ ಗಿಡಮೂಲಿಕೆಗಳು ಹಾಲಿನೊಂದಿಗೆ ಮಥನಗೊಂಡಾಗ ಉಂಟಾದ ಘೃತದಿಂದ ಹುಟ್ಟಿದವುಗಳು, ಕಾಮಧೇನು ಕಲ್ಪವೃಕ್ಷ ಮುಂತಾದವುಗಳಂತೆ ಎನ್ನುವುದಾದರೆ ಮಂಗಲಸೂತ್ರವೂ ಹಾಗೇ ಹುಟ್ಟಿದುದೆ ? ಹಾಗಿದ್ದರೆ ಅದು ವಿವಾಹ ಪ್ರೇಮ ಬಂಧನದ ಸಂಕೇತವಾಗಲಾರದು. ಅರ್ಥಶೂನ್ಯವಾದೀತು

ಪಾಲಸಾಗರದಿಂದ ದೇವಿ ಉದಿಸಿದೊಡನೆ ಆಕೆಗೆ ವೇದಮಂತ್ರದಿಂದ ವಿಧ್ಯುಕ್ತವಾಗಿ ಮಂಗಳಾಭಿಷೇಕ ಮಾಡಿಸಿ ದೇವತೆಗಳು ವಸ್ತ್ರಾಭರಣಗಳನ್ನಿತ್ತರೆಂದು ಭಾಗವತ ಹೇಳುತ್ತದೆ. ಮಂಗಳ ಸೂತ್ರವನ್ನೂ ದೇವತೆಗಳೇ ಕಟ್ಟಿರಬಹುದೆ ? ಛೇ, ಅದು ವಿವಾಹದಲ್ಲಿ ವರನು ಮಾಡುವ ಕರ್ತವ್ಯ

ಮದುವೆಗೆ ಮುಂಚೆ ಹೆಣ್ಣಿನ ಕಡೆಯುವರೂ ಒಂದು ಮಂಗಳಸೂತ್ರವನ್ನು ಆಕೆಗೆ ಕೊಡುವುದುಂಟು. ಆದರೆ ಇದು ನಿಶ್ಚಿತಾರ್ಥದ ವೇಳೆಯಲ್ಲಿ ಶಚೀ ಪೂಜೆ ಮಾಡಿ ಪ್ರಸಾದ ರೂಪದಿಂದ ವಸ್ತ್ರಾಭರಣಗಳನ್ನು ಕನ್ಯೆಗೆ ತಂದೆಯು ನೀಡುವ ಸಂಪ್ರದಾಯದಿಂದ ಬಂದಿದೆ. ಸ್ವಯಂವರ ವಿವಾಹ ಪದ್ಧತಿಯಲ್ಲಿ ಕನ್ಯೆ ವರನನ್ನು ಆರಿಸಿದ ಮೇಲೆ ನಿಶ್ಚಿತಾರ್ಥದಿಂದ ತೊಡಗಿ ಎಲ್ಲ ವಿಧಿವಿಧಾನಗಳನ್ನೂ ಒಂದೊಂದಾಗಿ ಮಾಡಬೇಕಾಗುತ್ತದೆ ಶ್ರೀ ಕೃಷ್ಣನು ರುಕ್ಮಿಣಿಯನ್ನು ಅಪಹರಿಸಿ ದ್ವಾರಕೆಗೆ ಒಯ್ದು ಅಲ್ಲಿ ವಿವಾಹ ವಿಧಿಯನ್ನು ಸಾಂಗವಾಗಿ ನಡೆಸಿದನೆಂದು ರುಕ್ಮಿಣೀಶ ವಿಜಯದಲ್ಲಿ ಹೇಳಿದೆ. ಸ್ವಯಂವರ ಮಾಲಿಕೆಯನ್ನು ಗಿಟ್ಟಿಸಿಕೊಂಡ ರಾಜಕುಮಾರನು ಅಲ್ಲಿಗೆ ಬಂದ ರಾಜಕುಮಾರರಿಂದ ಬರಬಹುದಾದ ಎಲ್ಲ ಎಡರುತೊಡರುಗಳನ್ನು ನಿವಾರಿಸಿದ ಮೇಲೆಯೇ ವಾಗ್ದಾನ ಮುಂತಾದ ಎಲ್ಲ

ವಿಧಿಗಳನ್ನೂ ಕನ್ಯಾಪಿತೃ ಪ್ರಾರಂಭಿಸುವುದು ಸಹಜ ಸ್ವಯಂವರಕ್ಕೆ ಮೊದಲೆ ಮಂಗಳಸೂತ್ರ ಎಲ್ಲಿಂದ ? ಆದ್ದರಿಂದ ಅದು ಲಕ್ಷ್ಮಿಯ ಲಕ್ಷಣವೆಂದು ಹೇಳಬೇಕು

ಮುಂದೆ ಹೇಳುವ 'ನಾಲ್ಕುದಿನದ ಉತ್ಸವ'ದಲ್ಲಿ ಅಗ್ನಿಸಾಕ್ಷಿಯಾಗಿ ಶ್ರೀಹರಿಯು ಕೊರಳಿಗೆ ಮಂಗಳಸೂತ್ರವನ್ನು ಕಟ್ಟುತ್ತಾನೆ, ಶ್ರೀನಿವಾಸನು ಪದ್ಮಾವತಿಯ ಕೊರಳಿಗೆ ಕಟ್ಟುವಂತೆ. ಆಗ ಆತ 'ಮಾಂಗಲ್ಯಂ ತಂತುನಾನೇನ ಮಮ ಜೀವನಹೇತುನಾ' ಎಂದೆನ್ನುವುದಿಲ್ಲ 'ಜಗಜ್ಜೀವನಹೇತುನಾ' ಎಂದೆನ್ನುತ್ತಾನೆ. ಜಗತ್ತಿಗೆ ಜೀವನಹೇತುವಾಗಿದೆ ಲಕ್ಷ್ಮೀನಾರಾಯಣರ ಕಲ್ಯಾಣೋತ್ಸವ ಮತ್ತು ಆ ಉತ್ಸವದ ಸಂಕೇತವಾದ ಮಂಗಳಸೂತ್ರ ಅದಕ್ಕೆ ಅಪಾಯ ಬಂದರೆ ಜಗತ್ತಿಗೆ ಅಪಾಯ ಆದ್ದರಿಂದ ವಾದಿರಾಜರು ರುಕ್ಮಿಣೀಶ ವಿಜಯದಲ್ಲಿ-

ನ ಪ್ರಾಗ್ ವ್ಯಯುಂಕ್ತ, ನ ವಿಯೋಕ್ಷ್ಯತಿ, ನೋ ವಿಯುಂಕ್ತೇ ।'

ಮೂರು ಕಾಲದಲ್ಲಿಯು ದೇವಿಯ ಕೊರಳಿಂದ ಮಂಗಲಸೂತ್ರ ವಿಯೋಗ ಹೋಂದುವುದಿಲ್ಲ ಎಂದಿದ್ದಾರೆ ಲಕ್ಷ್ಮೀಶೋಭನ ಪದದಲ್ಲಿಯೂ ಮುಂದೆ ದೇವಿಯೇ ಹೇಳುತ್ತಾಳೆ– ನಿತ್ಯಮುತ್ತೈದೆ ಎಂದು ಬಲ್ಲವರೆನ್ನ ಭಜಿಸುವರು

ಲಕ್ಷ್ಮೀನಾರಾಯಣರ ಚಿರನೂತನ ದಾಂಪತ್ಯದ ಸಂಕೇತವಾದ ಈ ಮಂಗಳ ಸೂತ್ರಕ್ಕೆ ವಿಯೋಗ ಎಂದೂ ಸಾಧ್ಯವಿಲ್ಲ ಸಾಧ್ಯವಿದೆ ಎಂದು ಭ್ರಮಿಸಿದರೆ ಅನರ್ಥ, ರುಕ್ಮಿಣಿಯನ್ನು ಬಯಸಿದ ಶಿಶುಪಾಲನೇನಾದ ? ಸುರಾಣಕರೆಂಬ ಅಸುರರ ಒಂದು ದೊಡ್ಡ ಗುಂಪು ರಾಮರಾಜ್ಯದ ಪ್ರಜೆಗಳಾಗಿ ಹುಟ್ಟಿ ಸೀತೆ ರಾವಣನ ಜೊತೆ ಇದ್ದಳೆಂದು ಅಪಪ್ರಚಾರ ನಡೆಸಿದರು ಬೀದಿಬೀದಿಯಲ್ಲಿ ಪ್ರಚಾರ ನಡೆದಿತ್ತು ಆಗ ರಾಮ ಸೀತೆಯನ್ನು ಬಿಟ್ಟಂತೆ ತೋರಿಕೊಂಡ. ಯಾರೋ ಒಬ್ಬ ಅಗಸನ ಮಾತು ಕೇಳಿ ಶ್ರೀರಾಮ ಸೀತೆಗೆ ಅನ್ಯಾಯ ಮಾಡಿದನೆಂದು ವಾಲ್ಮೀಕಿ ಹೇಳಿಲ್ಲ ಸೀತೆ ಶ್ರೀ ಭೂ ಎಂದು ಎರಡು ರೂಪಗಳಿಂದ ರಾಮನ ಬಳಿಯೆ ಇದ್ದಳು

ರಾಮಸ್ಯ ದಕ್ಷಿಣೇ ಪಾರ್ಶ್ವೇ ಸಪದ್ಮಾ ಶ್ರೀರುಪಾಶ್ರಿತಾ ।
ಸವ್ಯೇऽಪಿ ಚ ಮಹೀ ದೇವೀ ॥

–ವಾಲ್ಮೀಕಿ ರಾಮಾಯಣ

ಆದ್ದರಿಂದ ಸೀತಾರಾಮರಿಗೆ ವಿಯೋಗವಾಗಲಿಲ್ಲ. ಆಯಿತು ಎಂದು ತೃಪ್ತಿಪಟ್ಟವರು ಕೆಟ್ಟರು

ಹಾಗಾದರೆ ಈ ಸ್ವಯಂವರ, ವಿವಾಹಗಳಿಗೆ ಏನು ಅರ್ಥ ? ಲಕ್ಷ್ಮೀನಾರಾಯಣರಿಗೆ ಕೇವಲ ಲೀಲೆ, ನಟನೆ. ಭಕ್ತರಿಗೆ, ಅವರ ಕಣ್ಮನಗಳಿಗೆ ಹಬ್ಬ, ವಿಷ್ಣು ಸರ್ವೋತ್ತಮತ್ವದ ವಿಷಯದಲ್ಲಿ ಒಳ್ಳೆಯ ಪ್ರತ್ಯಕ್ಷ ನಿದರ್ಶನವೊಂದನ್ನು ಕಾಣುವ ಸುಯೋಗ.

ಶ್ರೀಹರಿ ದೇವಿಯ ಕೊರಳಿಗೆ ಮಂಗಳಸೂತ್ರವನ್ನು ಕಟ್ಟಿದ್ದ, ಧೃಢವಾಗಿ ಎಂದೂ ವಿಯೋಗವಾಗದಂತೆ ಕಟ್ಟಿದ್ದ. ದೇವಿ ಅದನ್ನು ಧರಿಸಿದಳು. ಅಂಬುಜ ಎರಡು ಧರಿಸಿದಂತಲ್ಲ. ಹಾಗಿದ್ದಿದ್ದರೆ 'ಕಂಬು ಕಂಠದ ಸುತ್ತ ಮಂಗಳಸೂತ್ರ ಧರಿಸಿ' ಎಂದು ಮಾತ್ರ ಹೇಳಬಹುದಿತ್ತು. ಧರಿಸಬೇಕಾದರೆ ಕಟ್ಟಿರಬೇಕು ತಾನೆ ? ಅದನ್ನು ಬೇರೆ ಹೇಳಬೇಕೆ ? ಹೇಳಿದೆ. ಅದರಿಂದ ಒಂದು ಸೂಚನೆ - ನಿತ್ಯಮುಕ್ತಳಾದ ದೇವಿಯು ಕೊರಳಲ್ಲಿಯೂ ಮಂಗಳಸೂತ್ರಕ್ಕೆ ಮಾತ್ರ ನಿತ್ಯಬಂಧನ ! ಚಿಂತೆ ಇಲ್ಲ. ಮುಗ್ಧಾಂಗನೆಯೋರ್ವಳ ಮೋಹಕವಾದ ಕಂಠದ ಆಲಿಂಗನ ಸಿಗುವಂತಿದ್ದರೆ ಇನ್ನು ಮೋಕ್ಷ ಬೇರೆ ಏಕೆ ?

'ಮುಗ್ಧಾಂಗನಾಮೋಹನಕಂಠಯೋಗೇ
ಮೋಕ್ಷೋಪ್ಯ ನಾಕಾಂಕ್ಷಿತ ಏವ ನೂನಂ' —ರುಕ್ಮಿಣೀಶ ವಿಜಯ

ಏಕಾಂತ ಭಕ್ತರಿಗೆ ಭಗವಂತನ ಜೊತೆಗಿರುವುದೊಂದೆ ಬಯಕೆ. ಎಲ್ಲ ದುಃಖವನ್ನೂ ನೀಗಿಸಿಕೊಂಡು ಪರಮಾನಂದ ಅನುಭವಿಸುವ ಮೋಕ್ಷ ಪದವಿಯೂ ಅವನಿಲ್ಲದಿದ್ದರೆ ಬೇಡ. ಹಾಗೇ ಮಂಗಲಸೂತ್ರವೂ ತನಗೆ ದೇವಿಯ ಕಂಠದಲ್ಲಿ ಸದಾ ಇರುವಂಥ ಭಾಗ್ಯವಿದ್ದರೆ ಸಾಕು ಬಂಧನವಿದ್ದರೇನಾಯಿತು ? ಎಂದೆನ್ನುತ್ತಿದೆಯೊ ಏನೋ !

ದೇವಿ ಅಂಬುಜವೆರಡು ಕರಯುಗದಿ ಧರಿಸಿದ್ದಾಳೆ. ಅದರಿಂದಲೆ ಈಕೆ ಶ್ರೀದೇವಿ ಎಂದು ಗುರುತಿಸಿ ದೇವತೆಗಳು ಪರಮಾನಂದಭರಿತರಾದರು–

ತತಸ್ತಾಂ ಪದ್ಮಹಸ್ತತ್ವಾತ್ ಶ್ರೀಂ ವಿದಿತ್ವೈವ ವಾಸವಃ ।
ಆನಂದಂ ಪರಮಂ ಪ್ರಾಪ ಬ್ರಹ್ಮಾದ್ಯಾ ಯೇ ಚ ತದ್ವಿದಃ ॥

— ಸ್ಕಂದಪುರಾಣ

ಭೂದೇವಿ ತಾಂಬೂಲ ನೀಲಕಮಲಗಳನ್ನೂ, ದುರ್ಗಾದೇವಿ ಚಕ್ರಶಂಖ ಗಳನ್ನೂ ಧರಿಸುವುದರಿಂದ ಪದ್ಮದ್ವಯ ಶ್ರೀದೇವಿಯ ಲಕ್ಷಣವೆಂದು ಶ್ರೀಮಂತ್ರೋ ಪಾಸಕರಿಗೆ ಗೊತ್ತು. ಏಕೆಂದರೆ–

'ಪದ್ಮಪ್ರಿಯೇ ಪದ್ಮಿನಿ ಪದ್ಮಹಸ್ತೇ ಪದ್ಮಾಲಯೇ ಪದ್ಮದಲಾಯತಾಕ್ಷಿ ।'

ಎಂದು ಶ್ರೀಸೂಕ್ತ ಕೊಂಡಾಡಿದೆ. 'ಪದ್ಮದ್ವಯಾಭಯವರೋದ್ಯತ ಪದ್ಮಹಸ್ತಾಂ' ಎರಡು ಕೈಗಳಲ್ಲಿ ಎರಡು ಕಮಲಗಳನ್ನೂ ಇನ್ನೆರಡು ಕೈಗಳಲ್ಲಿ

ಅಭಯ ವರಮುದ್ರೆಗಳನ್ನೂ ಧರಿಸಿದ ದೇವಿಯ ಮೂರ್ತಿ ಶ್ರೀ ಮಂತ್ರಗಳಲ್ಲಿ ಧ್ಯೇಯವೆಂದು ತಂತ್ರಸಾರದಲ್ಲಿ ಉಕ್ತವಾಗಿದೆ.

ಈ ನುಡಿಯಲ್ಲಿ ದೇವಿಯ ಎರಡು ಕೈಗಳ ಎರಡು ಕಮಲಗಳ ಬಗ್ಗೆ ಮಾತ್ರ ಹೇಳಿದೆ. ಇನ್ನೆರಡು ಕೈಗಳ ವರ ಅಭಯ ಮುದ್ರೆಗಳ ಬಗ್ಗೆ ಮುಂದಿನ ನುಡಿಯಲ್ಲಿ 'ಒಂದು ಕರದಿಂದ ಅಭಯವನೀವಳೆ' ಎಂದು ಮುಂತಾಗಿ ಹೇಳಲಿದೆ. ಅದಕ್ಕಿಂತ ಮೊದಲು ಇಲ್ಲಿ 'ಪೀತಾಂಬರ ಉಟ್ಟು' ಎಂದು ಹೇಳಿದೆ. ಮಂಗಳಸೂತ್ರ, ಅಂಬುಜವೆರಡು, ಪೀತಾಂಬರ - ಈ ಕ್ರಮದಲ್ಲಿ ಒಂದು ವೈಶಿಷ್ಟ್ಯವಿದೆ. ದೇವಿ ಶ್ರೀಹರಿಯ ಪ್ರೇಯಸಿ ಎನ್ನುತ್ತಿದೆ ಮಂಗಳಸೂತ್ರ. ಬ್ರಹ್ಮಾದಿಗಳ ಜನನಿ ಎನ್ನುತ್ತಿವೆ ಅಂಬುಜ ಪೀತಾಂಬರಗಳು

'ಹಾರಂ ಸರಸ್ವತೀ ಪದ್ಮಮಜೋ ನಾಗಾಶ್ಚ ಕುಂಡಲೇ ।'

ಎಂದು ಭಾಗವತದಲ್ಲಿ ಹೇಳುವಂತೆ 'ಅಜ' ಅಂದರೆ ಬ್ರಹ್ಮ ಭಾವಿಬ್ರಹ್ಮರಾದ ವಾಯುಗಳಿಬ್ಬರು ಎರಡು ಕಮಲಗಳನ್ನು ಆ ತಾಯಿಗೆ ಅರ್ಪಿಸಿರಬಹುದು. ಪೀತಾಂಬರಕ್ಕೆ ಗರುಡನು ಅಭಿಮಾನಿ. ಹೀಗೆ ಬ್ರಹ್ಮ ವಾಯು, ಗರುಡ - ಈ ಕ್ರಮದಿಂದ ಎಲ್ಲ ದೇವತೆಗಳೂ ತಮ್ಮೊಲವಿನ ತಾಯಿಗೆ ಮಾತೃಭಕ್ತಿಯ ಸಂಕೇತವಾಗಿ ಕಮಲ ಪೀತಾಂಬರ ಆಭರಣಗಳು ಮುಂತಾದುವನ್ನು ಕೊಟ್ಟಿದ್ದಾರೆ. ಅವನ್ನು ಸ್ವೀಕರಿಸಿ ಜಗದೊಡೆಯನ ಮನದನ್ನೆಯಾಗಿ, ಜಗದ ಮಮತೆಯ ತಾಯಾಗಿ ಮೆರೆದಳು ಮಹಾಲಕ್ಷ್ಮಿ.

— ೫ —

**ಒಂದು ಕರದಿಂದ ಅಭಯವನೀವಳೆ ಮ**
**ತ್ತೊಂದು ಕೈಯಿಂದ ವರಗಳ ।**
**ಕುಂದಿಲ್ಲದಾನಂದ ಸಂದೋಹ ಉಣಿಸುವ**
**ಇಂದಿರೆ ನಮ್ಮ ಸಲಹಲಿ ॥**

"ಮಹಾಲಕ್ಷ್ಮಿ ಒಂದು ಕೈಯಿಂದ ಭಕ್ತರಿಗೆ ಅಭಯ ನೀಡುತ್ತಾಳೆ. ಮತ್ತೊಂದು ಕೈಯಿಂದ ವರಗಳನ್ನು ಕೊಡುತ್ತಾಳೆ. ನಿರ್ದುಷ್ಟವಾದ ಆನಂದದ ಧಾರೆಯನ್ನೇ ಹರಿಸಿ ಉಣಿಸುವ ದೇವಿ ಇಂದಿರೆ ನಮ್ಮನ್ನು ರಕ್ಷಿಸಲಿ."

ಇಲ್ಲಿ ವಾದಿರಾಜರಿಗೆ ಅವರ ಕಣ್ಣ ಮುಂದೆ ಲಕ್ಷ್ಮಿ ವರಲಕ್ಷ್ಮಿಯಾಗಿ ನಿಂತಿದ್ದಾಳೆ ಅವರು ಮೊದಲಿಗೆ ದೇವಿಯ ಅಭಯ ಹಸ್ತದ ಕಡೆಗೆ ನಮ್ಮ ದೃಷ್ಟಿ ಹರಿಸುತ್ತಾರೆ. ಬಳಿಕ ವರದ ಹಸ್ತದ ಕಡೆಗೆ. ಸಂಪತ್ತಿನ ಸುಪ್ಪತ್ತಿಗೆ ಮೇಲಿದ್ದರೇನು ? ಆಪತ್ತಿನ ಭಯವಿದ್ದರೆ ಸುಖವಿಲ್ಲ. 'ಪದ್ಮದ್ವಯಾಭಯವರೋದ್ಯತ ಪದ್ಮಹಸ್ತಾಂ' ಎಂಬಲ್ಲಿ

ಲಕ್ಷ್ಮೀಮಂತ್ರ ಧ್ಯೇಯ ಮೂರ್ತಿಯ ಕೈಯಲ್ಲಿ ಮೊದಲಿಗೆ ಅಭಯ ಮುದ್ರೆ. ಬಳಿಕ ವರದ ಮುದ್ರೆ. ಏಕೆಂದರೆ ಆಪತ್ತನ್ನು ತೊಲಗಿಸಿ ಸಂಪತ್ತನ್ನಿತ್ತು ಸುಖ ಉಣಿಸುತ್ತಾಳೆ ದೇವಿ.

ಪದ್ಮ ಪುರಾಣದಲ್ಲಿ ಪಾರ್ವತಿ ಶಿವನ ಮುಂದೆ ಹೇಳಿದ್ದಾಳೆ–

ತಾವ್ಯತೇ ನೈವ ಧರ್ಮೋಽರ್ಥಃ ಕಾಮಮೋಕ್ಷೌ ವಿದೂರತಃ ।
ಕ್ಷುಧಿತಾನಾಂದುರ್ಭಗಾನಾಂ ಕುತೋ ಯೋಗಸಮಾಧಯಃ ॥

'ದೇವಿಯ ಅನುಗ್ರಹವಿಲ್ಲದೆ ಇದ್ದರೆ ಧರ್ಮ ಅರ್ಥಗಳೇ ದೊರೆಯಲಾರವು ಕಾಮ ಮೋಕ್ಷಗಳಂತೂ ಬಲು ದೂರ. ಹೊಟ್ಟೆಗಿಲ್ಲದ ದರಿದ್ರರು ಏನು ಯೋಗಾಭ್ಯಾಸ ಮಾಡಿಯಾರು ? ಏನು ಸಮಾಧಿಯನ್ನು ಗಳಿಸಿಯಾರು ?'

ಇಲ್ಲಿ ಕುಂದಿಲ್ಲದ ಆನಂದವೆಂದರೆ ಕಾಮವೆಂಬ ಪುರುಷಾರ್ಥವೆಂದರೂ ಸರಿಯೇ. ಮೋಕ್ಷರೂಪ ಪುರುಷಾರ್ಥವೆಂದರೂ ಸರಿಯೇ. ಕಾಮ ಧರ್ಮಕ್ಕೆ ಅವಿರುದ್ಧವಾಗಿದ್ದರೆ ಅದರಲ್ಲಿ ಕುಂದಿಲ್ಲ. ಮೋಕ್ಷ ದುಃಖದ ಲೇಶವಿಲ್ಲದಿರುವುದರಿಂದ ಅದರಲ್ಲಿ ಕುಂದಿಲ್ಲ ಕುಂದಿಲ್ಲದ ಕಾಮ ಮೋಕ್ಷ ಸುಖಗಳೆರಡನ್ನೂ ಉಣಿಸುವವಳು ಜಗನ್ಮಾತೆಯಾದ ಮಹಾಲಕ್ಷ್ಮಿ.

ಪ್ರಕೃತ ದೇವಿಯ ಅವತಾರವೇ, ದೇವೇಂದ್ರನಿಗೆ ದೂರ್ವಾಸರಿಂದ ಶಾಪಬಂದ ಪ್ರಯುಕ್ತ ಆಕೆ ಅಂತರ್ಧಾನಳಾದಾಗ, ಲೋಕವೆಲ್ಲ ಕ್ಷಾಮ ಡಾಮರಗಳಿಗೀಡಾಗಿ ತತ್ತರಿಸಿದಾಗ ಅಭಯ ನೀಡಿ ಮಂಗಳ ಉಂಟುಮಾಡುವದಕ್ಕಾಗಿ. ಲಕ್ಷ್ಮಿಯ ಪ್ರಾದುರ್ಭಾವಕ್ಕಾಗಿಯೇ ಸಮುದ್ರ ಮಥನ. ಪದ್ಮ ಪುರಾಣದಲ್ಲಿ ಹಾಗೆಯೇ ವರ್ಣನೆ ಇದೆ. ಅಮೃತ ಸಿಗುವವರೆಗೂ ಕಡೆದುದರ ಉದ್ದೇಶ ಲಕ್ಷ್ಮೀಸ್ವಯಂವರ ವಿವಾಹದ ರಸದೌತಣಕ್ಕಾಗಿ ಎಂಬುದು ಲಕ್ಷ್ಮೀಶೋಭನ ಪದದಲ್ಲಿಯೇ ಮುಂದೆ ಸ್ಪಷ್ಟವಿದೆ ಲಕ್ಷ್ಮೀನಾರಾಯಣರ ವಿವಾಹ ಮಹೋತ್ಸವ ದೇವತೆಗಳಿಗೆ ಕಣ್ಣಿಗೆ ಹಬ್ಬ. ಉಣ್ಣಲು ಅಮೃತದ ಊಟ. ದೇವಿಯ ಅನುಗ್ರಹ. ಅದರಿಂದ ಅವರ ಶಕ್ತಿ ಹೆಚ್ಚಿತು. ಆಸುರೀ ಶಕ್ತಿ ಕುಗ್ಗಿತು. ಲೋಕಕ್ಕೆ ಕ್ಷೇಮ ಉಂಟಾಯಿತು. ಎಲ್ಲೆಡೆ ಸಂಪತ್ತಿನ ಅಭಿವೃದ್ಧಿಯಾಯಿತು.

ಈ ಸಂಪತ್ತು ಕಾಮವೆಂಬ ಪುರುಷಾರ್ಥ. ಇದರಲ್ಲಿ ತೃಪ್ತಿ ಕಾಣದ ಅಧ್ಯಾತ್ಮ ಸಾಧಕರೂ ದೇವಿಯನ್ನು ಮೊರೆ ಹೋಗಬೇಕು. ಏಕೆಂದರೆ ಆಕೆ ಶ್ರೀ ಭೂ ದುರ್ಗಾ ರೂಪಗಳಿಂದ ಸತ್ವ ರಜಸ್ತಮೋಗುಣಗಳನ್ನಾಳುವವಳು. ತಮೋಗುಣ ದಾರಿದ್ರ್ಯ ದುಃಖ ಭಯ ರೋಗ ಮುಂತಾದ ಎಲ್ಲ ಅನರ್ಥಗಳಿಗೂ ಮೂಲ ಕಾರಣ. ಜ್ಞಾನ ವಿಜ್ಞಾನ ಐಶ್ವರ್ಯ ಸುಖ ಸಂಪತ್ತುಗಳಿಗೆಲ್ಲ ಸತ್ವಗುಣ ಕಾರಣ. ದೇವಿ

ತಮೋಗುಣದ ಪ್ರಭಾವವನ್ನು ತಡೆಹಿಡಿದು ಸತ್ವಗುಣವನ್ನು ಮೆರೆಸಬಲ್ಲಳು. ಹಾಗೆ ಮಾಡಿದರೆ ಅದುವೆ ಅಭಯವರಗಳಾಗುವುದು. ಅದುವೇ ನಮಗೆ ರಕ್ಷೆ. 'ದೇವತೆಗಳು ನಮ್ಮನ್ನು ರಕ್ಷಿಸುವುದು ಕುರುಬನು ಕುರಿಗಳನ್ನು ಮೇಯಿಸಿದಂತಲ್ಲ. ಯಾರನ್ನು ರಕ್ಷಿಸಬೇಕೋ ಅವರಿಗೆ ಸದ್ಬುದ್ಧಿ ಕೊಡುತ್ತಾರೆ-'

ನ ದೇವಾ ಯಷ್ಟಿಮಾದಾಯ ರಕ್ಷಂತಿ ಪಶುಪಾಲವತ್ ।
ಯಂ ತು ರಕ್ಷಿತುಮಿಚ್ಛಂತಿ ಬುದ್ಧ್ಯಾ ಸಂಯೋಜಯಂತಿ ತಂ ॥

ಮಾರ್ಕಂಡೇಯ ಪುರಾಣದಲ್ಲಿ ದೇವತೆಗಳು ದೇವಿಯನ್ನು ಸ್ತುತಿಸುವುದು ಹೀಗೆ–

ದುರ್ಗೇ ಸ್ಮೃತಾ ಹರಸಿ ಭೀತಿಮಶೇಷಜಂತೋಃ
ಸ್ವಸ್ಥೈಃ ಸ್ಮೃತಾ ಮತಿಮತೀವ ಶುಭಾಂ ದದಾಸಿ ।
ದಾರಿದ್ರ್ಯ ದುಃಖ ಭಯ ಹಾರಿಣಿ ಕಾ ತ್ವದನ್ಯಾ
ಸರ್ವೋಪಕಾರಕರಣಾಯ ಸದಾರ್ದ್ರಚಿತ್ತಾ ॥

'ದೇವಿ ದುರ್ಗೆ, ಸ್ಮರಣ ಮಾತ್ರದಿಂದ ನೀನೆಲ್ಲರ ಭಯ ಪರಿಹರಿಸುವಿ. ನಿರ್ಭೀತಿಯ ಸ್ವಸ್ಥಚಿತ್ತದಿಂದ ಸ್ಮರಿಸಿದಾಗ ಅತ್ಯಂತ ಮಂಗಳಕರವಾದ ಬುದ್ಧಿಯನ್ನು ಕೊಡುವಿ. ಹೀಗೆ ಸರ್ವರಿಗೂ ಸರ್ವವಿಧದ ಉಪಕಾರ ಮಾಡಲು ನಿನ್ನಂತೆ ಕರುಣಾರ್ದ್ರ ಚಿತ್ತರಾಗಿರುವವರು ಇನ್ನಾರು ?'

ಶ್ರೀ ಮಧ್ವಾಚಾರ್ಯರು ಹಾಡಿದ ಶ್ರೀಸ್ತುತಿ -

'ಷಡ್ವರ್ಗನಿಗ್ರಹನಿರಸ್ತಸಮಸ್ತ ದೋಷಾ
ಧ್ಯಾಯಂತಿ ವಿಷ್ಣುಮೃಷಯೋ ಯದಪಾಂಗಲೇಶಂ ।
ಆಶ್ರಿತ್ಯ ಯಾನಪಿ ಸಮೇತ್ಯ ನ ಯಾತಿ ದುಃಖಂ
ಶ್ರೀರ್ಯತ್ಕಟಾಕ್ಷಬಲವತ್ಯಜಿತಂ ನಮಾಮಿ ॥

'ಋಷಿಗಳು ಅರಿಷಡ್ವರ್ಗಗಳನ್ನು ಗೆದ್ದು ಹರಿಧ್ಯಾನದ ಸುಖ ಅನುಭವಿಸುವುದೂ ತಮ್ಮ ಬಳಿ ಬಂದವರ ದುಃಖ ಪರಿಹಾರ ಮಾಡುವುದೂ ಶ್ರೀದೇವಿಯ ಒಂದು ಕುಡಿನೋಟದ ಆಸರೆಯ ಬಲದಿಂದ. ಆ ದೇವಿ ಹಾಗೆ ಮೆರೆಯುವುದು ಹರಿಯ ಕಟಾಕ್ಷದ ಬಲದಿಂದ. ಅಂಥ ಹರಿಯನ್ನು ನಮಿಸುವೆನು-' ಇದು ದೇವಿಯ ಅಭಯ ಹಸ್ತ, ವರದಹಸ್ತ ಹೀಗಿದೆ–

ಧರ್ಮಾರ್ಥಕಾಮಸುಮತಿಪ್ರಚಯಾದ್ಯಶೇಷ
ಸನ್ಮಂಗಲಂ ವಿದಧತೇ ಯದಪಾಂಗಲೇಶಂ ॥
ಆಶ್ರಿತ್ಯ ತತ್ಪ್ರಣತಸತ್ಪ್ರಣತಾ ಅಪೀಡ್ಯಾ
ಶ್ರೀರ್ಯತ್ಕಟಾಕ್ಷಬಲವತ್ಯಜಿತಂ ನಮಾಮಿ ॥

'ದೇವಿಯು ಭಕ್ತರ ಭಕ್ತರೂ ಕೂಡ ತಮ್ಮ ಭಕ್ತರಿಗೆ ~~ಧರ್ಮ~~ ಅರ್ಥ ಕಾಮಗಳನ್ನೂ ಜ್ಞಾನ ಸಂಪತ್ತನ್ನೂ ಕೊಡುತ್ತಾರೆ. ಅದು ದೇವಿಯು ಒಂದು ಕುಡಿನೋಟದ ಆಸರೆಯ ಬಲದಿಂದ ದೇವಿ ಹಾಗೆ ಮೆರೆಯುವುದು ಹರಿಯ ಕಟಾಕ್ಷದ ಬಲದಿಂದ. ಅಂಥ ಹರಿಯನ್ನು ನಮಿಸುವೆನು.'

ಕಾಮ, ಕ್ರೋಧ ಮುಂತಾದ ಅರಿಷಡ್ವರ್ಗವೆ ನಮಗೆ ಅಂತಃಶತ್ರುಗಳು. ಬಾಹ್ಯ ಶತ್ರುಗಳಿಗಿಂತ ಹೆಚ್ಚು ಅಪಾಯಕಾರಿ ಅದನ್ನು ನಿಗ್ರಹಿಸಿ ಅಧ್ಯಾತ್ಮ ಜ್ಞಾನದ ಸಂಪತ್ತನ್ನು ನಮಗೆ ಕೊಡುವುದರಿಂದ ದೇವಿ ಅಭಯವರದಾತ್ರಿ ಎನಿಸಿದ್ದಾಳೆ. ಈ ಜ್ಞಾನದ ಅಮೃತಪಾನ ಸಾಧಕನಿಗೆ ದೇವತೆಗಳ ಅಮೃತಕ್ಕಿಂತ ಹೆಚ್ಚು ರುಚಿ. ದೇವತೆಗಳ ಅಮೃತಪಾನ ಅವರ ಜ್ಞಾನಾಮೃತಪಾನದ ಸಂಕೇತ. ಮುಂದೆ ಸಿಗಲಿರುವ ಮೋಕ್ಷಸುಖರಸದೌತಣದ ಮುನ್ಸೂಚನೆ

ದೇವತೆಗಳು ಮುಂದೆ ವಿರಜಾನದಿಯಲ್ಲಿ ಮಿಂದು ಪ್ರಕೃತಿ ಬಂಧನವನ್ನು ತೊಡೆದುಕೊಂಡು ಮುಕ್ತಿ ಮಂಟಪಕ್ಕೆ ಹೋಗಲಿದ್ದಾರೆ ಈ ವಿರಜಾನದಿ ಮಹಾಲಕ್ಷ್ಮಿಯ ಒಂದು ರೂಪ ಇಲ್ಲಿ ಪ್ರಕೃತಿ ಬಂಧನವನ್ನು ಕಳೆದು ನಿಜವಾದ ಅಭಯ ನೀಡುತ್ತಾಳೆ ದೇವಿ. ಮುಂದೆ ಮುಕ್ತಿ ಮಂದಿರವೂ ಸುಂದರ ಉದ್ಯಾನ, ಸರೋವರ, ಅಮೃತ, ಫಲ, ಪುಷ್ಪಗಳಂಥ ಶುದ್ಧ ಸತ್ವಮಯ ಭೋಗವಸ್ತುಗಳಿಂದ ಕೂಡಿದ್ದು ದೇವಿಯ ಲೀಲಾ ವಿಭೂತಿ ರೂಪವೇ ಆಗಿದೆ. ಅಲ್ಲಿ ಮುಕ್ತರಿಗೆ ಪ್ರೀತಿಯಿಂದ ಸುಖ ಉಣಿಸುತ್ತಾರೆ, ವರದಾಯಕರಾದ ನಮ್ಮ ಲಕ್ಷ್ಮೀನಾರಾಯಣರು. ಇಷ್ಟೇ ಕುಂದಿಲ್ಲದ ಶಾಶ್ವತ ಸುಖ

ಹೀಗೆ ಇಹಪರಗಳೆರಡರಲ್ಲೂ ನಮ್ಮನ್ನು ದೇವಿ ರಕ್ಷಿಸುತ್ತಾಳೆ ರಕ್ಷಿಸೆಂದು ಬೇಡದಿದ್ದರೂ ರಕ್ಷಿಸುತ್ತಿರುವವಳು ಅವಳೇ. 'ರಕ್ಷಿಸಲಿ' ಎಂದು ಬೇಡುವದು ಆಕೆ ರಕ್ಷಕಳಾಗಿ ಇರುವಳೆಂಬ ಕೃತಜ್ಞತಾ ಬುದ್ಧಿ ನಮ್ಮಲ್ಲಿ ಸದಾ ಇರಲೆಂಬ ಅಭಿಪ್ರಾಯದಿಂದ.

ಆದರೆ ಮಹಾಲಕ್ಷ್ಮಿ ವರಲಕ್ಷ್ಮಿ ಎನಿಸುವುದು ಆಕೆ ಶ್ರೀಹರಿಯ ಎದೆಯನ್ನೇರಿ ಕುಳಿತಾಗ. 'ಶ್ರೀಹರಿಯೆಂಬ ನೀಲಮೇಘದಲ್ಲಿ ಮಿಂಚಿನಂತೆ ದೇವಿ ಕಂಗೋಳಿಸಿದಾಗಲೆ ಸಂಪತ್ತಿನ ಸುರಿಮಳೆ' ಎಂದು ರುಕ್ಮಿಣೀಶ ವಿಜಯದಲ್ಲಿ ರಾಜರೇ ಹೇಳುತ್ತಾರೆ. ದೇವಿಯನ್ನು ಪ್ರತ್ಯೇಕವಾಗಿ ಉಪಾಸನೆ ಮಾಡಿದರೆ ಆಕೆ ಬೇಗನೆ ಪ್ರಸನ್ನಳಾಗುವುದಿಲ್ಲವೆಂದು ಭಗವದ್ಗೀತೆ ಹೇಳುತ್ತದೆ. ಶ್ರೀ ಹರಿಯ

ಎದೆಯಲ್ಲಿ ದೇವಿ ಕುಳಿತು ನಗುಮೊಗದ ಒಂದು ಕುಡಿನೋಟ ಹರಿಸಿದೊಡನೆ ಲೋಕದ ದುಃಖ ದೂರ ಸರಿಯಿತು. ಆನಂದದ ಹೊಳೆ ಹರಿಯಿತೆಂದು ಭಾಗವತವೂ ಹೇಳುತ್ತಿದೆ ಆದ್ದರಿಂದ ಸ್ವಯಂವರಕ್ಕೆ ಮೊದಲೇ ದೇವಿಯನ್ನು ವರಲಕ್ಷ್ಮಿಯನ್ನಾಗಿ ರಾಜರು ಏಕೆ ಚಿತ್ರಿಸಿದರು ?

ಇದಕ್ಕೆ ಉತ್ತರ - ಸ್ವಯಂವರ ಒಂದು ನಟನೆ ಮಾತ್ರ. ದೇವತೆಗಳ ಮನರಂಜನೆಗಾಗಿ ಹರಿಸರ್ವೋತ್ತಮತ್ವ ಸಿದ್ಧಿಗಾಗಿ ಈ ನಟನೆ. ನಟನೆಗಾಗಿಯಾದರೂ ದೇವಿ ವರಗಳನ್ನು ನೀಡುವ ಸ್ವಭಾವವನ್ನು ಬಿಡುವಂತಿಲ್ಲ. ಅವು ಆಕೆಯ ಲಕ್ಷಣಗಳು. ಲಕ್ಷಣವನ್ನು ಬಿಟ್ಟರೆ ಲಕ್ಷ್ಮಿ ಹೇಗಾದಳು ?

ಎರಡನೇ ಪ್ರಶ್ನೆ - ಕುಡಿನೋಟದಿಂದಲೇ ಲೋಕಕ್ಕೆ ಅಭಯ ವರಗಳನ್ನು ನೀಡಬಲ್ಲ ದೇವಿ ಎರಡು ಕೈಗಳಿಂದ ಆ ಕಾರ್ಯ ಮಾಡಬೇಕಾಗುತ್ತದೆಯೋ ? ಇದಕ್ಕೆ ಉತ್ತರ - ಧ್ಯಾನಕ್ಕಾಗಿ ಲಕ್ಷ್ಮೀರೂಪವನ್ನು ಅಂತಶ್ಚಕ್ಷುವಿನ ಮುಂದೆ ನಿಲ್ಲಿಸಿಕೊಳ್ಳುವಾಗ ಆಕೆ ಅಭಯ ವರಗಳನ್ನು ನೀಡುವಳೆಂಬುದರ ಸಂಕೇತವಾಗಿ ಅಭಯ ವರ ಮುದ್ರೆಗಳನ್ನು ಕೈಗಳಲ್ಲಿ ಧರಿಸಿದಂತೆ ಚಿತ್ರಿಸಿಕೊಳ್ಳಬೇಕೆಂದು ರಾಜರ ಅಭಿಪ್ರಾಯವಿರಬಹುದು. ಕೈಗಳಿಂದಲೇ ದೇವಿ ಅಭಯವರಗಳನ್ನು ನೀಡುವಳೆಂದು ಗ್ರಹಿಸಬೇಕಾಗಿಲ್ಲ.

— ೬ —

**ಪೊಳೆವ ಕಾಂಚಿಯ ದಾಮ ಉಲಿವ ಕಿಂಕಿಣಿಗಳು**
**ನಲಿವ ಕಾಲಂದುಗೆ ಘಲುಕೆನಲು ।**
**ನಳನಳಿಸುವ ಮುದ್ದುಮೊಗದ ಚೆಲುವೆ ಲಕ್ಷ್ಮಿ**
**ಸಲಹಲಿ ನಮ್ಮ ವಧುವರರ ॥**

'ಲಕ್ಷ್ಮೀದೇವಿಯ ಸೊಂಟದಲ್ಲಿ ಹೊಳೆಯುವ ಡಾಬು ಇದೆ. ಧ್ವನಿ ಗೈಯುತ್ತಿರುವ ಕಿರುಗಂಟೆಗಳು ಇವೆ. ಕಾಲನೂಪುರಗಳು 'ಘಲಕ್' ಅನ್ನುತ್ತಲೆ ನಲಿಯುತ್ತಿವೆ. ಕೋಮಲ ಕಾಂತಿಯಿಂದ ಹೊಳೆಯುವ ಮುದ್ದುಮುಖದ ಆ ಚೆಲುವೆ ಲಕ್ಷ್ಮೀದೇವಿ ನಮ್ಮ ವಧೂವರರನ್ನು ಸಲಹಲಿ '

ದೇವಿ ಮೊದಲೆ ನಳನಳಿಸುವ ಮುದ್ದು ಮೊಗದವಳು. ಮೊಗ ಒಂದೇ ಏಕೆ ? ಎಲ್ಲ ಅಂಗಗಳೂ ಹಾಗೆಯೆ ಅವುಗಳಿಗೆ ಹೊಳೆಯುವ ಡಾಬು, ಕಿರುಗಂಟೆ, ಅಂದುಗೆಗಳೂ ಕೂಡಿಕೊಂಡರೆ, ಸ್ವಾಭಾವಿಕ ಸೌಂದರ್ಯಕ್ಕೆ ಆಭರಣಗಳ ಸೊಗಸು ಬೆರೆತರೆ, ಹೇಗಿರಬಹುದು ? ಲಕ್ಷ್ಮಿ ಸಾಕ್ಷಾತ್ 'ಲಕ್ಷ್ಮಿ'ಯಂತೆ ಆಗುತ್ತಾಳೆ !

ಡಾಬು ಹೊಳೆಯುಬಹುದು, ಕಿರುಗಂಟೆ ಉಲಿಯುಬಹುದು. ಕಾಲನೂಪುರ 'ಘಲಕ್' ಎನ್ನಬಹುದು. ಆದರೆ ಅದು ನಲಿಯುಬಹುದೆ? ಕವಿಯು ಕಣ್ಣಿಗೆ ಜಡವಸ್ತುಗಳೂ ಚೇತನದಂತೆ ವರ್ತಿಸುವದರಿಂದ, ನಮ್ಮಂತೆ ನೋವು ನಲಿವುಗಳನ್ನು ತೋರುವುದರಿಂದ ಇದೇನೂ ಸಮಸ್ಯೆಯಲ್ಲ. ನಾವು ನಲಿದರೆ ಲೋಕ ನಲಿವಂತೆ, ಅತ್ತರೆ ಅಳುವಂತೆ ಕಾಣುವುದಿಲ್ಲವೆ ? ಲಕ್ಷ್ಮಿಯು ಮೈಮೇಲಿರುವ ಆಭರಣಗಳು ಸಾಕ್ಷಾತ್ ವಿಶ್ವಕರ್ಮನಿಂದ ನಿರ್ಮಿತವಾದವುಗಳು, ದಿವ್ಯಕಾಂತಿಯಿಂದ ಹೊಳೆಯುವವುಗಳು ಆದ್ದರಿಂದ ಸಹಜ ಸೌಂದರ್ಯದಿಂದೊಪ್ಪುವ, ಸೌಂದರ್ಯದ ಅಧಿದೇವತೆಯಾದ ದೇವಿಯು ಪಾದಗಳೆ ತಮಗೆ ಯೋಗ್ಯವಾದ ಸ್ಥಾನ, ಅದು ದೊರಕಿದೆ ಎಂಬ ಹಿಗ್ಗಿನಿಂದ ನೂಪುರ ನಲಿಯುತ್ತಿರಬಹುದು ಇದೊಂದು ಕವಿಯು ಉತ್ಪ್ರೇಕ್ಷೆ ಎನ್ನುವುದೇನೋ ನಿಜ. ಆದರೆ ಅರ್ಥಪೂರ್ಣವಾಗಿದೆ. ಬೋಧಕವಾಗಿದೆ. 'ದೇವಿಯು ಪಾದವನ್ನಾಶ್ರಯಿಸಿದ ಜಡವಾದ ನೂಪುರವೂ ನಲಿಯುವುದಾದರೆ ಚೇತನರು ಆ ಪಾದವನ್ನಾಶ್ರಯಿಸಿ ನಲಿಯುವುದರಲ್ಲಿ ಏನು ಸಂದೇಹ ?' ಎಂಬುದು ಇಲ್ಲಿ ಧ್ವನಿತವಾಗಬಹುದು ಏಕೆಂದರೆ ವಾದಿರಾಜರೆ ರುಕ್ಮಿಣೀಶ ವಿಜಯುದಲ್ಲಿ ಹೀಗೆ ಹೇಳಿದ್ದಾರೆ–

ರಕ್ತಾತ್ಮೀಯ ತಲತ್ವಿಷಾ ಪ್ರವಿಲಸತ್ ಸ್ವೀಯೋರ್ಧ್ವಭಾಗಶ್ರಿಯಾ
ಸ್ವಚ್ಛೇಂದುಚ್ಛವಿ ವೃತ್ತ ಸನ್ನಖರುಚಾ ಸ್ವಾಸಕ್ತಭೂಷಾವಲೇಃ ।
ಯುಚ್ಛಂತ್ಯದ್ಭುತರತ್ನಬಂಧನಮಹಃ ಶ್ರೀ ರುಕ್ಮಿಣೀಕೃಷ್ಣಯೋಃ
ದಂಪತ್ಯೋಃ ಪದಪಂಕಜಾನಿ ಭಜತಾಂ ಸಂಪತ್ಕರಾಣಿ ಧ್ರುವಂ ॥

'ಅಂಗಾಲಿನಿಂದ ಪದ್ಮರಾಗಮಣಿಯು ಕಾಂತಿ, ಮುಂಗಾಲಿನಿಂದ ಇಂದ್ರ ನೀಲಮಣಿಯು ಕಾಂತಿ, ಉಗುರುಗಳಿಂದ ಚಂದ್ರನಂತೆ ಹೊಳೆವ ಮುತ್ತಿನ ಕಾಂತಿಗಳು ಬೆರೆತು ಕಡಗ ನೂಪುರಗಳು ನಾನಾ ರತ್ನಗಳಿಂದ ಖಚಿತವಾದಂತೆ ಹೊಳೆಯುವುವು. ತಮ್ಮಲ್ಲಿ ಆಸರೆ ಹೊಂದಿದ ಜಡವಾದ ಆಭರಣಗಳಿಗೆ ಸಂಪತ್ತನ್ನು ನೀಡುವ ರುಕ್ಮಿಣೀ ಕೃಷ್ಣರ ಪಾದಕಮಲಗಳು ತಮ್ಮನ್ನು ಭಜಿಸುವ ಚೇತನರಾದ ನಮ್ಮಂಥವರಿಗೆ ಸಂಪತ್ತನ್ನು ನೀಡದಿರುವುವೆ ?'

ಕಾಲಂದುಗೆ ' ಘಲಕ್' ಅನ್ನುವುದೂ, ಕಿಂಕಿಣಿಗಳು ಉಲಿಯುವುದೂ ಅರ್ಥಪೂರ್ಣವೆ ದೇವಿಯುನ್ನು ಆರಾಧಿಸುವವನು ಆಕೆ ಗೆಜ್ಜೆಕಾಲ್ಗಳ ಧ್ವನಿಯು ತೋರುತ, ಹೆಜ್ಜೆಯು ಮೇಲೆ ಹೆಜ್ಜೆಯುನಿಕ್ಕುತ, ಮಜ್ಜಿಗೆಯೊಳಗಿನ ಬೆಣ್ಣೆಯುಂತೆ ಅಥವಾ ನೀರಲ್ಲಿರುವ ಹಂಸಪಕ್ಷಿಯು ಮೆಲು ನಡಿಗೆಯಿಂದ ತನ್ನೆಡೆಗೆ ಬರುತ್ತಿರುವಂತೆ ಭಾವಿಸಿ ಆರಾಧಿಸುವುದು ಸ್ವಾಭಾವಿಕ. ಆದರೆ ಅವಳೊಬ್ಬಳನ್ನೇ ಹಾಗೆ ಆರಾಧಿಸ ಕೂಡದು. ನಾರಾಯುಣನ ಜೊತೆಯುಲ್ಲಿಯೇ ಆರಾಧಿಸಬೇಕು. ಆಕೆ

ಅವನನ್ನು ಬಿಟ್ಟು ದೂರವಿರುವವಳೂ ಅಲ್ಲ. ವಾದಿರಾಜರು ಗುಂಡಕ್ರಿಯೆಯಲ್ಲಿ ಹೀಗೆ ಹೇಳಿದ್ದಾರೆ-

ಆರು ಶಾಸ್ತ್ರ ಬಲ್ಲವರೆಲ್ಲ ಕೇಳಿರೊ ॥
ನಾರಾಯಣನ ನಾರಿಯರಾದ ಧಾರುಣಿ
ಸಿರಿದೇವಿಯರಿವನ ದೂರಿದಾಗಲೇ ನಿನಗೆ
ದೂರವಾಗಲು ಕಾಲನೂರಲು ನೆಲ ಕಾಣೆ
ಬಾರದು ಬಾಯಿಗೆ ಕೂಳು ಇದೆಲ್ಲವು
ಆರೇನೆಂಬರು ಕೇಳೂರೊಳಗಿನ ಪತಿವ್ರತೆ
ಯರಿರವ ಕಂಡು ಸಾರಹೃದಯರೆಲ್ಲ
ಹಯವದನನ ಪಾದಸರೋಜವ ಸಾರಿರೋ ॥

'ಭೂದೇವಿ ಶ್ರೀದೇವಿಯರು ನಾರಾಯಣನ ನಾರಿಯರು. ನಾರಾಯಣನನ್ನು ದೂರಿದರೆ ಇವರೂ ದೂರಾಗುವರು. ಭೂದೇವಿ ದೂರಳಾದರೆ ಕಾಲೂರಲು ನೆಲವಿಲ್ಲದಂತಾದೀತು. ಶ್ರೀ ದೇವಿ ದೂರಳಾದರೆ ಬಾಯಿಗೆ ಕೂಳಿಲ್ಲದಂತಾದೀತು. ಇದರ ಸತ್ಯಾಂಶದ ಬಗ್ಗೆ ಅವರಿವರನ್ನು ಕೇಳುತ್ತ ಹೋಗಬೇಡ. ಯಾರು ಏನೆನ್ನಬಲ್ಲರು? ಇಲ್ಲಿ ಕೇಳು. ನೀನು ನಿನ್ನ ಊರೊಳಗಿನ ಪತಿವ್ರತೆಯರ ಸ್ವಭಾವವನ್ನೇ ನೋಡು. ತಮ್ಮ ಗಂಡಂದಿರಲ್ಲಿ ದ್ವೇಷ ಮಾಡುವವರನ್ನು ಅವರು ಹರಸುವರೆ? ಇಲ್ಲ, ಶಪಿಸುವವರೆ? ಆದ್ದರಿಂದ ವಿವೇಕಿಗಳು ಸಂಪತ್ತನ್ನು ಬಯಸುವುದಾದರೆ ಹಯವದನನ ಪಾದವನ್ನೆ ಸೇರಬೇಕು.'

ಮಧ್ವಾಚಾರ್ಯರು ಗೀತಾತಾತ್ಪರ್ಯದಲ್ಲಿ ಹೀಗೆ ಹೇಳಿದ್ದಾರೆ-

ಅವಿಷ್ಣುಜ್ಞೈರತದ್ಭಕ್ತೈಸ್ತದುಪಾಸಾವಿವರ್ಜಿತೈಃ
ಶಪೇದುಪಾಸಿತಾಪ್ಯೇಷಾ ಶ್ರೀಃ ॥

'ವಿಷ್ಣುವನ್ನು ತಿಳಿಯದೆ, ಅವನಲ್ಲಿ ಭಕ್ತಿ ಮಾಡದೆ, ಅವನನ್ನಾರಾಧಿಸದೆ, ಲಕ್ಷ್ಮಿಯನ್ನಾರಾಧಿಸಿದರೂ ಆಕೆ ಶಪಿಸುತ್ತಾಳೆ.'

ಆದ್ದರಿಂದ ದೇವಿಯ ಕಾಲಂದುಗೆ ಘಲಕ್ಕೆಂದರೆ ಅದು ಅವಳು ಮಾಡುತ್ತಿರುವ ವಿಷ್ಣುಪಾದ ಸೇವೆಯ ಒಂದು ಬಗೆ ಒಂದು ತಿಳಿಯಬೇಕು. ತ್ರಿವಿಕ್ರಮ ಪಂಡಿತಾಚಾರ್ಯರು ತಮ್ಮ ವಿಷ್ಣುಸ್ತುತಿಯಲ್ಲಿ ಹೀಗೆ ಪ್ರಾರ್ಥಿಸಿದ್ದಾರೆ-

ನಿತ್ಯೋಪಾಸ್ತ್ಯಾದರಾಭ್ಯಾಗತ ಗಿರಿಶ ಮುಖೋದಾರ ದೈತ್ಯಾರಿವಾರ
ಪ್ರಾರಬ್ಧೋರು ಪ್ರಣಾಮಾವಸರ ವಿತರಣೇ ಪ್ರೀತಿ ಹೇತೋಶ್ಚಬಾಲ ॥

ಯಾವತ್ ತಾವತ್ ಸ್ವಧರ್ಮಾಚರಣರತರಮಾರಮ್ಯಪಾದಾಗ್ರ ಲೀಲಾ
ಸಿಂಜನ್ ಮಂಜೀರ ಮಂಜು ಧ್ವನಿ ಪರಿಚರಿತಃ ಮಾಂ ವಿಷ್ಣುಪಾದಃ ॥

'ಭಕ್ತ್ಯಾದರಗಳಿಂದ ಸೇವೆಗಾಗಿ ಬಂದ ರುದ್ರಾದಿ ದೇವತೆಗಳಿಗೆ ಅವಕಾಶ ಕೊಡಲು ಚಲಿಸುವ ವಿಷ್ಣುಪಾದಗಳನ್ನು ಪತಿಸೇವಾಪರಾಯಣೆಯಾದ ರಮೆ ತನ್ನ ಕಾಲಂದುಗೆಯ ಮಂಜುಳ ಧ್ವನಿಯಿಂದ ಉಪಚರಿಸುತ್ತಾಳೆ. ಅಂಥ ವಿಷ್ಣುಪಾದವು ನನ್ನನ್ನು ರಕ್ಷಿಸಲಿ '

'ಸಜ್ಜನ ಸಾಧುಪೂಜೆಯ ವೇಳೆಗೆ ಗೆಜ್ಜೆಕಾಲ ದಸಿ ತೋರುತ ಬಾಮ್ಮ' ಎನ್ನುವುದೂ ಇದೇ ಭಾವದಿಂದ.

ಈ ದೃಷ್ಟಿಯಿಂದ ನೋಡಿದಾಗ ಕಿಂಕಿಣಿ ಕಾಲಂದುಗೆಗಳ ಧ್ವನಿ ಉಪಾಸಕನೆಡೆಗೆ ದೇವಿಯ ಆಗಮನದ ಚಿಹ್ನೆಯಾಗಿರುವುದಕ್ಕಿಂತ ಶ್ರೀ ಹರಿಯ ಹಿಂದೆ ಆಕೆ ಮೆಲ್ಲಡಿ ಇಡುತ್ತಿರುವುದರ ಚಿಹ್ನೆಯಾಗಿರುವುದು ಉತ್ತಮ

ವಿಷ್ಣುನಾ ಸಹಿತಾ ಧ್ಯಾತಾ ಸಾಪಿ ತುಷ್ಟಿಂ ಪರಾ ವ್ರಜೇತ್ ।

'ವಿಷ್ಣುವಿನ ಜೊತೆಗೆ ಆಕೆಯನ್ನು ಆರಾಧಿಸಿದರೇ ಆಕೆಗೆ ಬಲು ಸಂತೋಷ' ಎಂದು ಗೀತಾತಾತ್ಪರ್ಯ ಹೇಳುತ್ತಿದೆ

ಶ್ರೀಹರಿ ಎಂಬ ನೀಲಮೇಘದಲ್ಲಿ ಲಕ್ಷ್ಮಿ ಮಿಂಚಿದಾಗಲೆ ತಾನೆ ಸಂಪತ್ತಿನ ಸುರಿಮಳೆ ?

ಕಿಂಕಿಣಿಗಳು ಉಲಿಯುತ್ತವೆ ಎಂದಾಗ ಧ್ವನಿ ಮಾಡುತ್ತವೆ, ಮಾತನಾಡುತ್ತವೆ ಎಂದು ಎರಡು ಅರ್ಥಗಳೂ ಆದರಿಂದ ಹೊರಡುತ್ತವೆ. ಎರಡೂ ಸರಿಯೆ. ಧ್ವನಿ ಭಾವಪೂರ್ಣವಾದಾಗ ಮಾತನಾಡಿದಂತೆಯೇ ಆಗುತ್ತದೆ. ಆದರ ಭಾವವೇನೆಂಬುದು ಸ್ಪಷ್ಟ. ದೇವಿಯ ಮೈಯಲ್ಲಿ ಇರುವ ಮಹಾಭಾಗ್ಯ ನಮ್ಮದಾಗಿದೆ ಎಂಬ ಆನಂದದಿಂದ ಅವು ನಲಿಯುತ್ತಿವೆ.

ಅಥವಾ 'ಅವಸ್ವರಾತಿ ಗರ್ಗರಃ ಇಂದ್ರಾಯ' ಎಂದು ಋಗ್ವೇದ ಹೇಳುವಂತೆ ನೂಪುರ ಕಿಂಕಿಣಿ ಮುಂತಾದ ಆಭರಣಗಳು ತಮ್ಮ ಮಧುರ ಧ್ವನಿಯಿಂದ ಶ್ರೀ ಹರಿಯ ಮಹಿಮೆಯನ್ನೇ ಹಾಡುತ್ತವೆ. 'ತನ್ನ ಮಹಿಮೆ ಗರಿಮೆಗಳಿಂದ ಪ್ರಪಂಚವನ್ನೇ ಮೀರಿ ನಿಂತವನು ಶ್ರೀ ಹರಿ' ಎಂಬುದು ಆ ಧ್ವನಿಯ ಅರ್ಥ.

ಧ್ವನಿಗೂ ಅರ್ಥವಿರುವುದುಂಟೆ ? ಎಂಬ ಪ್ರಶ್ನೆ ಇಲ್ಲಿ ಏಳಬಹುದು ಆದರೆ ಒಂದು ಮಾತು ಗಮನಿಸಬೇಕು. ನಮ್ಮ ಅಕ್ಷರಮಾಲೆಗೆ ಸೇರಿದ ವರ್ಣಗಳಿಗೆ ಮಾತ್ರ ಅರ್ಥವಿರುತ್ತದೆ ಎಂಬ ನಿಯಮವಿಲ್ಲ. ಓಂಕಾರದಲ್ಲಿ ಅಕ್ಷರಮಾಲೆಗೆ ಸೇರಿದ ಅ, ಉ, ಮ್ ಎಂಬ ಮೂರು ವರ್ಣಗಳ ಜೊತೆಗೆ ನಾದ, ಬಿಂದು, ಸ್ವರ,

ಶಾಂತ, ಅತಿಶಾಂತಗಳೆಂಬ ಇನ್ನೂ ಐದು ವರ್ಣಗಳಿರುವುದು ಆ ವರ್ಣಗಳಿಗೆ ಬೇರೆ ಬೇರೆ ಅರ್ಥಗಳಿರುವುದು ಮಂತ್ರಶಾಸ್ತ್ರದಲ್ಲಿ ಉಕ್ತವಾಗಿದೆ. ಇಲ್ಲಿ ಹೇಳಿದ ನಾದವೂ ಅನೇಕ ವಿಧ. ಅಂತರ್ನಾದವೆಂಬುದು ಅವುಗಳಲ್ಲಿ ಒಂದು. ಗೆಜ್ಜೆಯ ಧ್ವನಿ ಈ ಅಂತರ್ನಾದವನ್ನು ಅಭಿವ್ಯಕ್ತಗೊಳಿಸುತ್ತದೆ. ಆದರಿಂದ ಹರಿಯ ಗುಣಗಾನವಾಗುತ್ತದೆ. ನಾವು ಮಾತನಾಡುತ್ತೇವೆ ಎನ್ನುವಾಗ ಅರ್ಥವತ್ತಾದ ಅಕ್ಷರಮಾಲೆಗೆ ಸೇರಿದ ವರ್ಣಗಳನ್ನು ನಮ್ಮ ಕಂಠಧ್ವನಿಯಿಂದ ವ್ಯಕ್ತಗೊಳಿಸುತ್ತೇವೆ ಎಂದು ಅರ್ಥವಾಗುವಂತೆ 'ನೂಪುರ ಕಿಂಕಿಣಿಗಳು ಉಲಿಯುತ್ತವೆ' ಎನ್ನುವಾಗಲೂ ಅರ್ಥವತ್ತಾದ ಅಂತರ್ನಾದ ವರ್ಣಗಳನ್ನು ಅವು ತಮ್ಮ ಧ್ವನಿಯಿಂದ ವ್ಯಕ್ತಗೊಳಿಸುತ್ತವೆ ಎಂದು ಅರ್ಥವಾಗಬಹುದು. ಇದರಲ್ಲಿ ತಪ್ಪಿಲ್ಲ. ಒಂದು ವ್ಯತ್ಯಾಸ – ನಾವು ಚೇತನರು ನಮ್ಮ ಮಾತಿಗೆ ತಾತ್ಪರ್ಯ ವಿವಕ್ಷೆಗಳಿರುತ್ತವೆ. ಅಚೇತನವಾದ ನೂಪುರ ಕಿಂಕಿಣಿಗಳಿಗೆ ಅವು ಇರಲಾರವು. ಆದರೆ ಕವಿಯ ಕಣ್ಣಿಗೆ ಕಾಣಿಸಿಕೊಳ್ಳಬಹುದು. ರವಿ ಕಾಣದುದನ್ನು ಕವಿ ಕಾಣುವನಲ್ಲವೆ ?

ಅಥವಾ ಲಕ್ಷ್ಮೀದೇವಿಯ ಆಭರಣಗಳು ಎರಡು ಬಗೆ ದೇವತೆಗಳು ಅರ್ಪಿಸಿದ, ವಿಶ್ವಕರ್ಮ ನಿರ್ಮಿತ ಆಭರಣಗಳು ಒಂದು ಬಗೆಯಾದರೆ, ಲಕ್ಷ್ಮೀರೂಪವಾದ ಆಭರಣಗಳು ಇನ್ನೊಂದು ಬಗೆ ಶ್ರೀ ಹರಿಯ ಮೈಮೇಲೆ ಲಕ್ಷ್ಮೀರೂಪ ಆಭರಣಗಳಿವೆಯಂತೆ. ಹಾಗೆಯೇ ಲಕ್ಷ್ಮಿಯ ಮೈಮೇಲೆ ಆಕೆಯ ಸ್ವರೂಪಭೂತವಾದ ಆಭರಣಗಳೂ ಇವೆ. ಅವು ಚೇತನಗಳಾಗಿದ್ದು ತಾತ್ಪರ್ಯವಿವಕ್ಷೆಗಳಿಂದಲೆ ಹರಿಯ ಗುಣಗಾನ ಮಾಡುತ್ತ ಧ್ವನಿಗೈಯಬಹುದಲ್ಲವೆ ?

– ೭ –

**ರನ್ನದ ಮೊಲೆಗಟ್ಟು ಚಿನ್ನದಾಭರಣಗಳ**
**ಚೆನ್ನೆ ಮಹಲಕ್ಷುಮಿ ಧರಿಸಿದಳೆ ।**
**ಚೆನ್ನೆ ಮಹಲಕ್ಷುಮಿ ಧರಿಸಿದಳಾ ದೇವಿ**
**ತನ್ನ ಮನ್ನೆಯ ವಧುವರರ ಸಲಹಲಿ ॥**

ರತ್ನ ಮುತ್ತು ಹೆಣೆದು, ಸೊಗಸಾದ ಚಿತ್ರಗಳನ್ನು ನೆಯ್ದು, ಬೆಲೆಬಾಳುವ ಬಟ್ಟೆಯ ರವಿಕೆಯನ್ನೂ ಚಿನ್ನದ ಆಭರಣಗಳನ್ನೂ ಚೆಲುವೆಯಾದ ಮಹಾಲಕ್ಷ್ಮಿಯು ಧರಿಸಿದಳು. ಆ ದೇವಿ ತನ್ನ ಮನೆಯ ವಧೂವರರನ್ನು ಸಲಹಲಿ.

ದೇವಿ ಮೊದಲೆ ಚೆನ್ನೆ, ಚೆಲುವೆ, ರನ್ನದ ಮೊಲೆಗಟ್ಟು ಚಿನ್ನದ ಆಭರಣಗಳು ಬೇರೆ. ಅವನ್ನು ವಿಶ್ವಕರ್ಮ ಕೊಟ್ಟನೆಂದು ಸ್ಕಂದಪುರಾಣ ಹೇಳಿದೆ. ಈಗ ಆಕೆ

ನಿಜವಾಗಿಯೂ 'ದೇವಿ' ಎನ್ನುವುದು ಸರಿಯೆ. ದೇವಿ ಎಂದರೆ ಕಾಂತಿ ಸೌಂದರ್ಯಗಳಿಂದ ಹೊಳೆಯುವವಳು ಎಂದೇ ಅರ್ಥ

ಚಿನ್ನದ ಆಭರಣಗಳನ್ನು ಧರಿಸಿದರೆ ದೇಹ ಪವಿತ್ರವಾಗುತ್ತದೆ.

ಕಾಂತಿ ದುರಿತಕ್ಷಯ ಶ್ರೀಕಾರಿತ್ವಂ ಸುವರ್ಣಧಾರಣಸ್ಯ ಗುಣಾಃ ।

'ಕಾಂತಿ ಹೆಚ್ಚುತ್ತದೆ, ಪಾಪ ಪರಿಹಾರವಾಗುತ್ತದೆ. ಸಂಪತ್ತು ಲಭಿಸುತ್ತದೆ – ಇವು ಮೂರು ಚಿನ್ನದ ಆಭರಣಗಳನ್ನು ಧರಿಸುವುದರ ಫಲ' ಶರೀರದಲ್ಲಿ ಅಶುಚಿಯಾದ ಭಾಗಗಳಲ್ಲಿ ಚಿನ್ನವನ್ನು ಧರಿಸಬಾರದಂತೆ ಏಕೆಂದರೆ ಅದರಲ್ಲಿ ದೇವತೆಗಳಿರುತ್ತಾರೆ - 'ತಸ್ಮಾತ್ ತತ್ ಪಾದಾದೌ ನ ಧಾರ್ಯಂ, ದೇವತಾತ್ಮಕತ್ವಾತ್' ಕಾಲುಂಗುರ ಕಾಲ್ಗೆಜ್ಜೆಗಳನ್ನು ಬೆಳ್ಳಿಯಿಂದ, ಹಾರ ಕುಂಡಲಗಳನ್ನು ಚಿನ್ನದಿಂದ ಮಾಡುವುದು ಪದ್ಧತಿ. ಚಿನ್ನದ ಆಭರಣ ಧರಿಸಿ ಧಾರ್ಮಿಕ ಕ್ರಿಯೆ ಮಾಡಿದರೆ ವಿಶೇಷ ಫಲ ಆಯುರ್ವೇದ ಅಧ್ಯಯನಕ್ಕೆ ಆಚಾರ್ಯನ ಬಳಿಗೆ ಶಿಷ್ಯನು ಹೋಗುವಾಗ ದರ್ಭೆ ಸಮಿತ್ತುಗಳಂತೆ ಸುವರ್ಣ ರತ್ನ ಮೊದಲಾದ ಮಂಗಳದ್ರವ್ಯಗಳನ್ನು ಕೈಯಲ್ಲಿ ಧರಿಸಿರಬೇಕೆಂದು ಚರಕ ಸಂಹಿತೆ ವಿಧಿಸಿದೆ ಚಿನ್ನಕ್ಕೆ ಇಂಥ ಪಾವಿತ್ರ್ಯ ಮಂಗಳಕರತ್ವ ಹೇಗೆ ಬಂತು ?

ಅಗ್ನಿರ್ವೈ ಸಕಲಾ ದೇವಾಃ ಸುವರ್ಣಂ ಚ ತದಾತ್ಮಕಂ ।
ತಸ್ಮಾತ್ ಸರ್ವಪವಿತ್ರೇಭ್ಯಃ ಪವಿತ್ರಂ ಪರಮಂ ಸ್ಮೃತಂ ॥

ಸಕಲ ದೇವತೆಗಳಿಗೂ ಆಧಾರರು ಅಗ್ನಿನಾಮಕರಾದ ಲಕ್ಷ್ಮೀನಾರಾಯಣರು ಅವರು ಸುವರ್ಣದಲ್ಲಿ ವಿಶೇಷವಾಗಿ ಸನ್ನಿಹಿತರಾಗಿದ್ದಾರೆ.

ಸರ್ವರತ್ನಾನಿ ನಿರ್ಮಥ್ಯ ತೇಜೋರಾಶಿ ಸಮುತ್ಥಿತಂ ।
ಸುವರ್ಣಮೇಭ್ಯೋ ವಿಪ್ರೇಂದ್ರ ರತ್ನಂ ಪರಮನುತ್ತಮಂ ॥

ರತ್ನಗಳನ್ನೆಲ್ಲ ಒಂದೆಡೆ ಸೇರಿಸಿ ಕಡೆದಾಗ ಮೇಲೆ ಬಂದ ಸಾರವಾದ ವಸ್ತು ಹೊಳೆಯುವ ಚಿನ್ನವಂತೆ. ಕ್ಷೀರಸಮುದ್ರವನ್ನು ಕಡೆದಾಗ ಬೆಣ್ಣೆಯಂತೆ ತೇಲಿ ಬಂದವಳು ಮಹಾಲಕ್ಷ್ಮಿ ರತ್ನಗಳನ್ನು ಕಂಡೆದಾಗ ಹಾಗೇ ಬಂದ ಚಿನ್ನದಲ್ಲಿ ಆಕೆ ಇರುವುದು ಯುಕ್ತವೆ. ಆದ್ದರಿಂದ ಚಿನ್ನ ಎಲ್ಲ ಪವಿತ್ರ ವಸ್ತುಗಳಿಗಿಂತಲೂ ಮಿಗಿಲಾದ ಪರಮ ಪವಿತ್ರವಸ್ತು ಥಳಕಿನ ನಕಲಿ ಮಾಲುಗಳಿಂದ ಶರೀರದ ಅಂದ ಹೆಚ್ಚಬಹುದು ಆದರೆ ಶುದ್ಧಿ ಮತ್ತು ಸಂಪತ್ಸಮೃದ್ಧಿ ಲಭಿಸದು. ಶ್ರೀ ಸೂಕ್ತದಲ್ಲಿ ಜಾತವೇದಾಗ್ನಿಯನ್ನು, ಅಂದರೆ ಸರ್ವಜ್ಞನಾದ ಶ್ರೀ ನಾರಾಯಣನನ್ನು ಪ್ರಾರ್ಥಿಸುವುದು ಹೀಗೆ–

ಹಿರಣ್ಯವರ್ಣಾಂ ಹರಿಣೀಂ ಸುವರ್ಣರಜತಸ್ರಜಾಂ ।
ಚಂದ್ರಾಂ ಹಿರಣ್ಮಯೀಂ ಲಕ್ಷ್ಮೀಂ ಜಾತವೇದೋ ಮ ಆವಹ ॥

'ಹೇ ಜಾತವೇದ, ಚಿನ್ನದ ಬೆಳ್ಳಿಗಳ ಹಾರಗಳನ್ನು ತೊಟ್ಟ, ಚಿನ್ನದಂತೆ ಹೊಳೆಯುವ, ಸುವರ್ಣಮಯಳಾದ ಲಕ್ಷ್ಮಿಯನ್ನು ನನ್ನೆಡೆಗೆ ಬರಮಾಡು'. ಹೀಗೆ ಸಕಲ ದೇವತೆಗಳ ಮತ್ತು ಅವರಿಗಾಧಾರರಾದ ಲಕ್ಷ್ಮೀನಾರಾಯಣರ ವಿಶೇಷ ಸನ್ನಿಧಾನ ಪಾತ್ರವಾದ ಪವಿತ್ರವಾದ ಚಿನ್ನದ ಆಭರಣಗಳನ್ನು ಅವರ ಪ್ರಸಾದವೆಂದು ಹಿರಿಯರು ಮೈಯಲ್ಲಿ ಧರಿಸಿ ಆ ದೇವಿಯ ಕೃಪೆಯನ್ನು ಬೇಡಬೇಕು. ವಧೂವರರನ್ನು ಚಿನ್ನದ ಆಭರಣಗಳಿಂದ ಅಲಂಕರಿಸಿ ಅವರನ್ನು ದೇವಿ ಸಲಹಲಿ ಎನ್ನಬೇಕು

'ದೇವಿ ತನ್ನ ಮನ್ನೆಯ ವಧೂವರರ ಸಲಹಲಿ' ಎಂದು ಪದ್ಯದಲ್ಲಿದೆ. ಇಲ್ಲಿ ಮನ್ನೆಯ ಎಂದರೇನು ? ಮಾನ್ಯ ಎಂಬ ಸಂಸ್ಕೃತ ಶಬ್ದದ ತದ್ಭವ ರೂಪ ಎನ್ನಬಹುದೇ ? ಹಾಗಾದರೆ ವಧೂವರರು ಯಾರಿಗೆ ಮಾನ್ಯರು ? ದೇವಿಗೆ ? ತನ್ನ ಎಂಬ ಶಬ್ದ ಬೇರೆ ಇದೆ ಅದಿಲ್ಲದ ಪಾಠವೂ ಒಂದಿದೆ ನಿಜ ಆಗ ಪರಸ್ಪರ ಮಾನ್ಯರು, ಆದರದಿಂದ ಪರಸ್ಪರ ವರಿಸಲು ತಕ್ಕವರು ಎಂದು ವ್ಯಾಖ್ಯಾನ ಮಾಡಬೇಕಾಗುತ್ತದೆ ಕೆಲವರು ಹಾಗೆ ಮಾಡಿದ್ದೂ ಇದೆ. ಅದಕ್ಕಿಂತ, ಮನೆಯ ಎನ್ನುವುದು ಹಾಡಿನಲ್ಲಿ 'ಮನ್ನೆಯ' ಎಂದಾಗುವುದು ಸ್ವಾಭಾವಿಕ. ದೇವಿ ತನ್ನ ಮನೆಯ ವಧೂವರರನ್ನು ಸಲಹಲಿ ತನ್ನವರಾದ, ನಮ್ಮ ಮನೆಯ ವಧೂವರರನ್ನು ಸಲಹಲಿ ವಧೂವರರು ತಾವಾಗಿಯೇ ದೇವಿಯನ್ನು ಭಜಿಸಿ ಅವಳಿಗೆ ತನ್ನವರೆನಿಸಿದರೆ ಸರಿಯೆ. ಇಲ್ಲದಿದ್ದರೂ ಭಕ್ತರಾದ ನಮ್ಮ ಮನೆಯ ವಧೂವರರು ಆಕೆಗೆ ತನ್ನವರೆನಿಸುತ್ತಾರೆ ತನ್ನವರನ್ನು ತಾನು ರಕ್ಷಿಸದಿರುವುದುಂಟೆ ?

ಅಥವಾ ತನ್ನ ಮನೆಯವರೆ ವಧೂವರರು, ದೇವಿಗೆ 'ಬ್ರಹ್ಮಾಂಡಂ ವರಮಂದಿರಂ ಸುರಗುಣಾಃ ಯಸ್ಯ ಪ್ರಭೋಃ ಸೇವಕಾಃ' ಎಂಬಂತೆ ಬ್ರಹ್ಮಾಂಡವೆ ದೇವಿಗೆ ಮನೆ ಬ್ರಹ್ಮಾಂಡದಲ್ಲಿರುವವರೆಲ್ಲ ಆಕೆಯ ಮಕ್ಕಳು. ಆಕೆ ಜಗನ್ಮಾತೆ ಲಕ್ಷ್ಮಿ ಎನಿಸಿದುದೂ ಈ ಕಾರಣದಿಂದಲೇ

ಲಕ್ಷ್ಯತೇ ದೃಶ್ಯತೇ ವಿಶ್ವಂ ಸ್ನಿಗ್ಧದೃಷ್ಟ್ಯಾ ಯಯಾನಿಶಂ ।
ದೇವೇಷು ಯಾ ಚ ಮಹತೀ ಮಹಾಲಕ್ಷ್ಮೀಶ್ಚ ಸಾ ಸ್ಮೃತಾ ॥

ಎಂದು ಬ್ರಹ್ಮವೈವರ್ತದಲ್ಲಿ ಹೇಳಿದಂತೆ ಬ್ರಹ್ಮಾಂಡದ ಎಲ್ಲ ಸಜ್ಜನರನ್ನು ಪ್ರೀತಿಯ ಕಡೆಗಣ್ಣಿಂದ ಲಕ್ಷಿಸುವುದರಿಂದ ನೋಡುವುದರಿಂದ ದೇವಿ ಲಕ್ಷ್ಮಿ

ಎನಿಸಿದ್ದಾಳೆ ಆದ್ದರಿಂದ ಮಾತೃವಾತ್ಸಲ್ಯದ ಮೂರ್ತಿಯಾಗಿರುವ ದೇವಿ ತನ್ನ ಮನೆಯ ವಧೂವರರನ್ನು ರಕ್ಷಿಸಲಿ.

ಅಥವಾ ದೇವಿಗೆ ತನ್ನ ಮನೆ ಎಂದರೆ ತಾನು ವಾಸಮಾಡಲು ಯೋಗ್ಯವಾದ ಭಕ್ತರ ಮನೆ ಪರಸ್ಪರ ಪ್ರೀತಿಯಿಂದ ಇದ್ದು ಧರ್ಮಕಾರ್ಯಗಳನ್ನು ನಿರ್ವಹಿಸುವ ದಂಪತಿಗಳಿರುವ ಮನೆ. ಅಲ್ಲಿ ನಿತ್ಯ ಮಂಗಲವಿರುತ್ತದೆ.

ಸಂತುಷ್ಟೋ ಭಾರ್ಯಯಾ ಭರ್ತಾ ಭರ್ತ್ರಾ ಭಾರ್ಯಾ ತಥೈವ ಚ ।
ಯಸ್ಮಿನ್ನೇವ ಕುಲೇ ನಿತ್ಯಂ ಕಲ್ಯಾಣಂ ತತ್ರ ವೈ ಧ್ರುವಂ ॥

ಪ್ರಜನಾರ್ಥಂ ಮಹಾಭಾಗಾಃ ಪೂಜಾರ್ಹಾ ಗೃಹದೀಪ್ತಯಃ ।
ಸ್ತ್ರಿಯಃ ಶ್ರಿಯಶ್ಚ ಗೇಹೇಷು ನ ವಿಶೇಷೋಽಸ್ತಿ ಕಶ್ಚನ ॥

ಮನೆ ಬೆಳಗಿಸುವ ಸ್ತ್ರೀಯರು ಮನೆಯಲ್ಲಿ ಸುಖದಿಂದಿರಬೇಕು. ಸ್ತ್ರೀ ಎಂದರೇನು ? ಶ್ರೀ ಎಂದರೇನು ? ಎರಡರಲ್ಲಿ ಯಾವ ವ್ಯತ್ಯಾಸವೂ ಇಲ್ಲವೆಂದು ಮನು ಹೇಳಿದ್ದಾನೆ. ಇಂಥ ಮನೆಯ ವಧೂವರರನ್ನು ಮಹಾಲಕ್ಷ್ಮಿ ಸಲಹುತ್ತಾಳೆ.

ಅಥವಾ ಕಲ್ಯಾಣ ಮಂಟಪಗಳೆಲ್ಲ ಲಕ್ಷ್ಮಿಯ ಮನೆ. ವಿವಾಹಗಳೆಲ್ಲ ಲಕ್ಷ್ಮೀ ನಾರಾಯಣರ ವಿವಾಹ ಅವರ ಪ್ರತಿಮೆಗಳಂತೆ ಪ್ರತಿಬಿಂಬಗಳಂತೆ, ಎಲ್ಲ ವಧೂವರರು ಮುಖ ಹೇಗೆ ಚಲಿಸುತ್ತದೋ ಹಾಗೆ ಕನ್ನಡಿಯಲ್ಲಿ ಅದರ ಪ್ರತಿಬಿಂಬ ಚಲಿಸುತ್ತದೆ. ಲಕ್ಷ್ಮೀ ನಾರಾಯಣರು ನಿತ್ಯಾವಿಯೋಗಿಗಳು. ನಿತ್ಯ ದಂಪತಿಗಳಾಗಿದ್ದರೂ ಅವರಿಗೆ ನಿತ್ಯ ವಿವಾಹವಾಗುತ್ತದೆ. ಅದರಿಂದ ನಮ್ಮ ವಧೂವರರಿಗೆ ದಾಂಪತ್ಯದ ಬಂಧನ ದೊರಕುತ್ತದೆ. ಲಕ್ಷ್ಮಿಯೆ ಹೇಳುತ್ತಾಳೆ–

'ವಸಾಮಿ ನಿತ್ಯೋತ್ಸವಮಂದಿರೇಷು'

'ನಿತ್ಯೋತ್ಸವದ ಮನೆಗಳಲ್ಲಿ ನಾನು ವಾಸಮಾಡುವೆ.'

ಈ ದೃಷ್ಟಿಯಿಂದಲೇ 'ಶ್ರೀಧರರೂಪಿಣೇ ವರಾಯ ಶ್ರೀರೂಪಾಂ ಕನ್ಯಾಂ' ಎಂದು ಮುಂತಾಗಿ ಹೇಳುವುದು ಪದ್ಧತಿ ವಧೂವರರಲ್ಲೂ, ಅವರ ತಂದೆತಾಯಿಗಳಲ್ಲೂ, ಅವರನ್ನು ಹರಸಲು ಬಂದ ಬಂಧು ಮಿತ್ರರಲ್ಲೂ ಈ ಪ್ರಜ್ಞೆ ಇರಬೇಕಷ್ಟೆ. ಆಗ ದೇವಿ ತನ್ನ ಮನೆಯ ವಧೂವರರನ್ನು ಸಲಹುತ್ತಾಳೆ.

**ಕುಂಭಕುಚದ ಮೇಲೆ ಇಂಬಿಟ್ಟ ಹಾರಗಳು**
**ತುಂಬಿಗುರುಳ ಮುಖಕಮಲ ।**
**ತುಂಬಿಗುರುಳ ಮುಖಕಮಲದ ಮಹಲಕ್ಷ್ಮಿ ಜಗ**
**ದಂಬೆ ವಧುವರರ ಸಲಹಲಿ ॥**

ಕಲಶಗಳಂಥ ಸ್ತನಗಳ ಮೇಲೆ ಒಪ್ಪಾಗಿ ಇಟ್ಟ ಹಾರಗಳುಳ್ಳ ಮತ್ತು ತುಂಬಿಯಂತೆ ಕಪ್ಪಾದ ಮುಂಗುರುಳುಗಳಿಂದ ಶೋಭಿಸುವ ಕಮಲದಂಥ ಮುಖವುಳ್ಳ ಜಗನ್ಮಾತೆಯಾದ ಮಹಾಲಕ್ಷ್ಮಿ ವಧೂವರರನ್ನು ಸಲಹಲಿ.

'ಹಾರಂ ಸರಸ್ವತೀ ಪದ್ಮಮಜೋ ನಾಗಾಶ್ಚ ಕುಂಡಲೇ' ಎಂದು ಭಾಗವತದಲ್ಲಿ ಹೇಳಿದಂತೆ ಸರಸ್ವತಿ ಮಹಾಲಕ್ಷ್ಮಿಗೆ ಹಾರಗಳನ್ನು ಅರ್ಪಿಸಿದ್ದಾಳೆ. ಅವನ್ನು ದೇವಿಯು ಸ್ತನಗಳ ಮೇಲೆ ಒಪ್ಪಾಗಿ ಇರಿಸಿದ್ದಾಳೆ. ವಸ್ತುತಃ ಕೊರಳಿಗೆ ಹಾರವು ಭೂಷಣ ಇಲ್ಲಿ ಸ್ತನಭೂಷಣವೆಂಬಂತೆ ವರ್ಣಿಸಲಾಗಿದೆ. ಕಾಳಿದಾಸನ ಒಂದು ಪದ್ಯ ಇಲ್ಲಿ ನೆನಪಿಗೆ ಬರುತ್ತದೆ

ಕಂಠಸ್ಯ ತಸ್ಯಾಸ್ತನ ಬಂಧುರಸ್ಯ ಮುಕ್ತಾಕಲಾಪಸ್ಯ ಚ ನಿಸ್ತಲಸ್ಯ ।
ಅನ್ಯೋನ್ಯಶೋಭಾಜನನಾದ್ಬಭೂವ ಸಾಧಾರಣೋ
ಭೂಷಣಭೂಷ್ಯಭಾವಃ ॥

'ಸ್ತನಗಳ ಸಾಮೀಪ್ಯದಿಂದ ಪಾರ್ವತಿಯು ಕೊರಳಿನ ಅಂದ ಹೆಚ್ಚಿತ್ತು. ಅದಕ್ಕೆ ಮುತ್ತಿನ ಹಾರ. ಹಾರದಿಂದ ಕೊರಳಿಗೆ ಶೋಭೆ. ಕೊರಳಿನಿಂದ ಹಾರಕ್ಕೂ ಶೋಭೆ. ಹಾರವೆ ಭೂಷಣ. ಕೊರಳೆ ಭೂಷ್ಯ ಎನ್ನುವಂತಿಲ್ಲ. ಎರಡೂ ಭೂಷಣ, ಎರಡೂ ಭೂಷ್ಯ' ಎಂದು ಕಾಳಿದಾಸನು ವರ್ಣಿಸಿದ್ದಾನೆ. ಪ್ರಕೃತದಲ್ಲಿ ನೇರವಾಗಿ ಸ್ತನಹಾರಗಳ ಸಂಬಂಧವನ್ನು ವರ್ಣಿಸಲಾಗಿವೆ

'ಕುಂಭಕುಚದ ಮೇಲೆ' ಎಂಬಲ್ಲಿ ಮೇಲೆ ಎಂಬ ಶಬ್ದದ ಧ್ವನಿ ರುಕ್ಮಿಣೀಶ ವಿಜಯದ ಈ ಪದ್ಯದಲ್ಲಿ ಸ್ಪಷ್ಟವಾಗಿದೆ.

ಸದ್ವಂಶಜಾತಃ ಸುಗುಣಃ ಸುವೃತ್ತರತ್ನೋಽಪಿ ಹಾರಃ ಕಮಲಾಕುಚಾಂತೇ ।
ನೈವಾವಕಾಶಂ ಲಭತೇ ಕುಲೇನ ಕಿಂ ವಾ ಗುಣೌಘೈಃ ಕಠಿನೋಪಕಂಠೇ ॥

'ಉತ್ತಮ ಜಾತಿಯ ಮುತ್ತುಗಳನ್ನು ತಂದು ಉತ್ತಮವಾದ ದಾರದಲ್ಲಿ ಪೋಣಿಸಿ ನಿರ್ಮಿಸಿದ ಹಾರ. ಆದಕ್ಕೆ ಲಕ್ಷ್ಮೀದೇವಿಯು ಸ್ತನಗಳು ತಮ್ಮ ನಡುವೆ

ಒಂದಿಷ್ಟು ಸ್ಥಳಾವಕಾಶ ನೀಡುತ್ತಿಲ್ಲ. ಕಠಿನರಾದವರ ಬಳಿ ಉತ್ತಮ ಜಾತಿಗಾಗಲಿ ಗುಣಕ್ಕಾಗಲಿ ಏನು ಬೆಲೆ ಇದೆ ?'

ಹಾರಗಳು ಸ್ತನಗಳ ಮೇಲೆಯೆ ಒಪ್ಪಾಗಿ ಇರುತ್ತವೆ. ನಡುವೆ ಸೇರಿಹೋಗುವುದಿಲ್ಲ ಅಷ್ಟು ಪುಷ್ಟವಾಗಿ ಮಂಗಳಕರ ಪೂರ್ಣಕಲಶಗಳಂತಿವೆ, ಜಗದಂಬೆ ಮಹಾಲಕ್ಷ್ಮಿಯ ಸ್ತನಗಳು. ಪೂರ್ಣಕಲಶ ಮಂಗಳಕರವಾಗಿರುವುದೂ ದೇವಿಯ ಸ್ತನಸಾದೃಶ್ಯ ಹೊಂದಿರುವುದರಿಂದಲೇ ಇರಬಹುದು.'

ದೇವಿಗೆ 'ಜಗದಂಬೆ' ಎಂದು ವಿಶೇಷಣ ಕೊಟ್ಟಿರುವುದು ಕೇವಲ ಪ್ರಾಸಕ್ಕಾಗಿ ಅಲ್ಲ. ಜಗನ್ಮಾತೆಯ ಆ ಸ್ತನಗಳು ಮಕ್ಕಳಾದ ನಮ್ಮೆಲ್ಲರನ್ನೂ ಪೋಷಿಸಿ ಸಲಹಬಲ್ಲವು ಎನ್ನುವ ಭಾವ ಇಲ್ಲಿದೆ. ರುಕ್ಮಿಣೀಶ ವಿಜಯದಲ್ಲಿ ರಾಜರು ಹೇಳುತ್ತಾರೆ 'ಪುಷ್ಣಾತು ವಿಶ್ವಜನನೀ ಕುಚಮಂಡಲಂ ನಃ' 'ಜಗಜ್ಜನನಿಯ ಸ್ತನಗಳು ನಮ್ಮನ್ನು ಪೋಷಿಸಲಿ'. ಋಗ್ವೇದದಲ್ಲಿ ಇದೇ ರೀತಿಯ ಒಂದು ಮಂತ್ರ ಇದೆ:

'ಯಸ್ತೇ ಸ್ತನಃ ಶಶಯೋ ಯೋ ಮಯೋಭೂಃ
ಯೇನ ವಿಶ್ವಾ ಪುಷ್ಯಸಿ ವಾರ್ಯಾಣಿ'

'ದೇವಿ, ನಿನ್ನ ಸ್ತನವು ಲೋಕಕ್ಕೆ ಸುಖದಾಯಕ. ಸರ್ವೋತ್ತಮನಾದ ಶ್ರೀ ಹರಿಯ ಸನ್ನಿಧಾನ ಪಾತ್ರ ಮಕ್ಕಳೆಂದು ನೀನು ಪ್ರೀತಿಯಿಂದ ಕಾಣುವ ಬ್ರಹ್ಮಾದಿ ಜೀವರಿಗೆ ಎಲ್ಲರಿಗೂ ಪೋಷಕ.'

'ತುಂಬಿಗುರುಳ ಮುಖಕಮಲ' ದೇವಿಯ ಕೇಶಪಾಶ ತುಂಬಿಯಂತೆ ಕಪ್ಪಾಗಿದೆ ಮುಖವೂ ಕಮಲದಂತೆ ಇದೆ. ಕಮಲದ ಮೇಲೆ ದುಂಬಿಗಳು ಹಾರಾಡುವಂತೆ ಮುಖದಮೇಲೆ ಮುಂಗುರುಳು ಹಾರಾಡುತ್ತಿದೆ. ಕಮಲ ದುಂಬಿಗಳ ಸಂಬಂಧ ಎಷ್ಟು ಹಿತವೋ ಸ್ವಾಭಾವಿಕವೋ ಮನೋಹರವೋ ಅಷ್ಟೇ ಹಿತ ಸ್ವಾಭಾವಿಕ ಮನೋಹರ ಮುಖ ಮುಂಗುರುಳುಗಳ ಸಂಬಂಧ. ದುಂಬಿಗಳಿಂದ ಕಮಲಕ್ಕೆ ಶೋಭೆ. ಕಮಲದಿಂದ ದುಂಬಿಗಳಿಗೂ ಶೋಭೆ ದುಂಬಿಯೇ ಭೂಷಣ, ಕಮಲವು ಭೂಷ್ಯ ಎನ್ನುವಂತಿಲ್ಲ. ಎರಡೂ ಭೂಷಣ, ಎರಡೂ ಭೂಷ್ಯ ಎಂದು ಕಾಳಿದಾಸನ ಭಾಷೆಯಲ್ಲಿ ಹೇಳಬಹುದಾದರೆ ಮುಂಗುರುಳಿನಿಂದ ಮುಖಕ್ಕೆ ಶೋಭೆ. ಮುಖದಿಂದ ಮುಂಗುರುಳಿಗೂ ಶೋಭೆ. 'ಮುಂಗುರುಳೆ ಭೂಷಣ, ಮುಖವು ಭೂಷ್ಯ' ಎನ್ನುವಂತಿಲ್ಲ. ಎರಡೂ ಭೂಷಣ, ಎರಡೂ ಭೂಷ್ಯ 'ತುಂಬಿಗುರುಳ ಮುಖಕಮಲ' ಎಂದು ಷಷ್ಠೀ ವಿಭಕ್ತಿಯ ಪ್ರಯೋಗ ಮತ್ತು ದುಂಬಿ ಕಮಲಗಳ ಉಪಮೆಗಳು ಈ ಅಂಶವನ್ನು ದೃಢೀಕರಿಸುತ್ತವೆ.

'ತುಂಬುಗುರುಳ ಮುಖಕಮಲ' ಎಂಬ ಪಾಠವಿದ್ದರೆ ಸೊಂಪಾಗಿ ಬೆಳೆದ ಕೇಶರಾಶಿಯಿಂದ ಶೋಭಿಸುವ ಮುಖಕಮಲ' ಎಂದಿಷ್ಟು ಹೇಳಿದಂತಾಗುತ್ತದೆ.

– ೯ –

**ಮುತ್ತಿನ ಓಲೆಯನಿಟ್ಟಳೆ ಮಹಲಕ್ಷ್ಮಿ**
**ಕಸ್ತೂರಿ ತಿಲಕ ಧರಿಸಿದಳೆ ।**
**ಕಸ್ತೂರಿ ತಿಲಕ ಧರಿಸಿದಳಾ ದೇವಿ ಸ–**
**ರ್ವತ್ರ ವಧುವರರ ಸಲಹಲಿ ॥**

ಮಹಾಲಕ್ಷ್ಮಿ ಮುತ್ತಿನ ಓಲೆ ಧರಿಸಿದ್ದಾಳೆ ಕಸ್ತೂರಿಯ ತಿಲಕವನ್ನು ಧರಿಸಿದ್ದಾಳೆ. ಆ ದೇವಿ ವಧೂವರರನ್ನು ಎಲ್ಲ ದೇಶ ಕಾಲ ಪರಿಸ್ಥಿತಿಗಳಲ್ಲಿಯೂ ರಕ್ಷಿಸಲಿ.

ಸುಮಂಗಲಿಯರಿಗೆ ಕೊರಳಲ್ಲಿ ಮಂಗಲಸೂತ್ರದಂತೆ ಕಿವಿಗಳಲ್ಲಿ ಓಲೆಯೂ ಅತ್ಯಂತ ಆವಶ್ಯಕವಾದ ಒಂದು ಮಂಗಳ ಆಭರಣ. ಮುತ್ತಿನ ಓಲೆಗೆ ಇನ್ನೂ ಹೆಚ್ಚು ಪ್ರಾಶಸ್ತ್ಯ. ಶೇಷಾದಿನಾಗರು ಮುತ್ತಿನ ಓಲೆ ಕೊಟ್ಟರೆಂದು ಸ್ಕಂದಪುರಾಣ ಹೇಳಿದೆ.

ಜ್ಯೋತಿಷ್ಯ ಶಾಸ್ತ್ರದ ಪ್ರಕಾರ ಮುತ್ತಿಗೆ ಚಂದ್ರನು ದೇವತೆ ಎಲ್ಲ ವ್ಯಾಧಿಗಳನ್ನೂ ಪಾಪಗಳನ್ನೂ ಪರಿಹರಿಸಿ ಆಯುಸ್ಸನ್ನೂ ಸಂಪತ್ತನ್ನೂ ಹೆಚ್ಚಿಸುವ ವಸ್ತು ಮುತ್ತು ಉತ್ತಮವಾದ ಒಂದೇ ಮುತ್ತನ್ನು ಒಬ್ಬನು ಧರಿಸಿದರೂ ಚಂಚಲೆ ಎನಿಸಿರುವ ಲಕ್ಷ್ಮಿ ಚಂಚಲತೆಯನ್ನು ಬದಿಗಿಟ್ಟು ಸ್ಥಿರವಾಗಿ ಅವನಲ್ಲಿ ನೆಲೆಸುವಳೆಂದು ಗರುಡಪುರಾಣ ಹೇಳುತ್ತದೆ.

ಏವಂ ಸರ್ವಗುಣೋಪೇತಂ ಮೌಕ್ತಿಕಂ ಯೇನ ಧಾರ್ಯತೇ ।
ತಸ್ಯಾಯುರ್ವರ್ಧತೇ ಲಕ್ಷ್ಮೀಃ ಸರ್ವಪಾಪಂ ಪ್ರಣಶ್ಯತಿ ॥
ಗುಣವದ್‌ಗುರು ಯದ್ದೇಹೇ ಮೌಕ್ತಿಕೈಕಂ ಹಿ ತಿಷ್ಠತಿ ।
ಚಂಚಲಾಪಿ ಸ್ಥಿರಾ ಭೂತ್ವಾ ಕಮಲಾ ತತ್ರ ತಿಷ್ಠತಿ ॥

ಇದರಿಂದ ಮುತ್ತಿನ ಓಲೆಯಲ್ಲಿ ಮಹಾಲಕ್ಷ್ಮಿಯ ಸನ್ನಿಧಾನ ಅಧಿಕವೆನ್ನುವುದು ಸುಸ್ಪಷ್ಟ. ಅದನ್ನು ಮುತ್ತೈದೆಯರು ಅವಶ್ಯ ಧರಿಸಬೇಕು.

ಹಣೆಯಲ್ಲಿ ಕಸ್ತೂರಿಯ ತಿಲಕವೂ ಮುತ್ತೈದೆಯರ ಇನ್ನೊಂದು ಅಲಂಕಾರ. ವಾತ ಶೀತ ಕಫ ಮುಂತಾದ ರೋಗಕ್ಕೆ ದಿವ್ಯೌಷಧವೆನಿಸಿರುವ ಒಂದು ಪರಿಮಳ ದ್ರವ್ಯ ಕಸ್ತೂರಿ ಕಾಮರೂಪ (ಪಶ್ಚಿಮ ಅಸ್ಸಾಮ) ನೇಪಾಳ, ಕಾಶ್ಮೀರ ಪ್ರದೇಶಗಳಲ್ಲಿ

ಒಂದು ಜಾತಿಯ ಮೃಗದ ನಾಭಿಯಲ್ಲಿ ಬೆಳೆಯುತ್ತದೆ ಎನ್ನುತ್ತಾರೆ. ಕಾಮರೂಪದ ಕಮಲವರ್ಣದ ಕಸ್ತೂರಿ ಉತ್ತಮ ನೇಪಾಳದ ಪಿಂಗಲವರ್ಣದ ಕಸ್ತೂರಿ ಮಧ್ಯಮ ಕಾಶ್ಮೀರದ ಕೃಷ್ಣವರ್ಣದ ಕಸ್ತೂರಿ ಸಾಮಾನ್ಯ ಗುಣವುಳ್ಳದ್ದು ಎಂದು ಪ್ರಸಿದ್ಧಿ. ಕಸ್ತೂರಿ, ಗೋರೋಚನ, ಶ್ರೀಗಂಧ, ಕುಂಕುಮ, ಕರ್ಪೂರ ಮುಂತಾದವುಗಳ ತಿಲಕ ಧರಿಸಿದ್ದಾಳೆ ಮಹಾಲಕ್ಷ್ಮಿ ಎಂಬ ಅಭಿಪ್ರಾಯದಿಂದ ಕಸ್ತೂರಿ ತಿಲಕವನ್ನು ನಿರ್ದೇಶಿಸಲಾಗಿದೆ. ವೇದಾಂತದೇಶಿಕರ ಯಾದವಾಭ್ಯುದಯ ಕಾವ್ಯದಲ್ಲಿ ಒಂದು ಮಾತು ಇದೆ:

ಕಸ್ತೂರಿಕಾ ಕುಂಕುಮ ಚಿತ್ರಿತಾತ್ಮಾ
ಕರ್ಪೂರ ವಿನ್ಯಾಸ ಇವಾನ್ವಭಾವಿ ॥

ಕಸ್ತೂರಿ ಕುಂಕುಮಗಳಿಂದ ಚಿತ್ರಿತವಾದ ಕರ್ಪೂರ ತಿಲಕದ ವರ್ಣನೆ ಇದು ಪ್ರಕೃತದಲ್ಲಿಯೂ ಅದೇ ರೀತಿಯ ಕಸ್ತೂರಿ ತಿಲಕವೆಂಬ ಅಭಿಪ್ರಾಯವಿಟ್ಟುಕೊಂಡರೆ ತಪ್ಪಿಲ್ಲ.

ಅಂಜನಂ ಕುಂಕುಮಂ ಚಾದಾದ್ ದುರ್ಗಾ ಸೌಭಾಗ್ಯಲಕ್ಷಣಂ ।

'ಕಾಡಿಗೆ ಕುಂಕುಮಗಳು ಸೌಭಾಗ್ಯಲಕ್ಷಣಗಳು ಅವನ್ನು ಪಾರ್ವತಿ ಕೊಟ್ಟಳೆಂದು' ಸ್ಕಂದಪುರಾಣ ಹೇಳಿದೆ.

ಹೀಗೆ ಮುತ್ತಿನ ಓಲೆ ಕಸ್ತೂರಿ ತಿಲಕಗಳಿಂದ ಒಪ್ಪುವ ಮಹಾಲಕ್ಷ್ಮಿ ಪ್ರಸನ್ನಳಾಗಿ ಓಲೆ ಕುಂಕುಮ ಸೌಭಾಗ್ಯವಿತ್ತು ವಧೂವರರನ್ನು ರಕ್ಷಿಸಲಿ.

— ೧೦ —

**ಅಂಬುಜ ನಯನಗಳ ಬಿಂಬಾಧರದ ಶಶಿ**
**ಬಿಂಬದಂತೆಸೆವ ಮೂಗುತಿಮಣಿಯ ಶಶಿ ।**
**ಬಿಂಬಂದಂತೆಸೆವ ಮೂಗುತಿಮಣಿಯ ಮಹಲಕ್ಷ್ಮಿ**
**ಉಂಬುದಕೀಯಲಿ ವಧುವರರ್ಗೆ ॥**

ತಾವರೆಯಂಥ ಕಣ್ಣುಗಳ, ತೊಂಡೆ ಹಣ್ಣಿನಂಥ ತುಟಿಗಳ, ಚಂದ್ರಬಿಂಬದಂತೆ ಶೋಭಿಸುವ ಮೂಗುತಿಮಣಿಯ ಮಹಾಲಕ್ಷ್ಮಿ ವಧೂವರರಿಗೆ ಉಣಲು ಸಾಕಾಗುವಷ್ಟು, ಬೇಕಾಗುವಷ್ಟು ಸಂಪತ್ತನ್ನು ನೀಡಲಿ.

ಆದರ್ಶ ನಾರಿಯರಿಗೆ ಆವಶ್ಯಕವಾದ ಇನ್ನೊಂದು ಆಭರಣ ಮೂಗುತಿ ಸ್ಕಂದಪುರಾಣದ ಪ್ರಕಾರ ಚಂದ್ರನೆ ಕೊಟ್ಟ, ಚಂದ್ರನಂತೆ ಹೊಳೆಯುವ ಮುತ್ತಿನ ಮೂಗುತಿ ಧರಿಸಿ, ತೊಂಡೆ ಹಣ್ಣಿನಂತೆ ಕೆಂಪಾದ ಮೃದುವಾದ ತುಟಿಗಳಿಂದ

ಮಂದಹಾಸ ಬೀರಿ, ತಾವರೆಯಂಥ ಕಣ್ಣಿನ ಓರೆ ನೋಟ ಒಂದನ್ನು ಮಹಾಲಕ್ಷ್ಮಿ ಬೀರಿದರೆ ಸಾಕು. ವಧೂವರರಿಗೆ ಸಂಪತ್ತು ಲಭಿಸೀತು. ಅವಳ ಕಡೆಗಣ್ಣಿ ನೋಟವನ್ನೇ ಸಮಸ್ತ ಪ್ರಪಂಚ ಅವಲಂಬಿಸಿ ನಿಂತಿದೆ.

ತಾವೃತೇ ನೈವ ಧರ್ಮೋಽರ್ಥಃ ಕಾಮಮೋಕ್ಷೌ ವಿದೂರತಃ ।

ಮಹಾಲಕ್ಷ್ಮಿಯ ಅನುಗ್ರಹವಿಲ್ಲದೆ ಯಾರೂ ಯಾವ ಪುರುಷಾರ್ಥವನ್ನೂ ಸಾಧಿಸಿಕೊಳ್ಳಲಾರರು ವಧೂವರರು ಈಗತಾನೆ ಗೃಹಸ್ಥಜೀವನದಲ್ಲಿ ಕಾಲಿರಿಸಿ ಪುರುಷಾರ್ಥಸಾಧನೆಗೆ ಹೊರಟು ನಿಂತಿದ್ದಾರೆ. ಹೊಟ್ಟೆಗೆ ಸಾಕಾಗುವಷ್ಟು ಉಣಲೂ ಸಿಗದಿದ್ದರೆ ಅವರೇನು ಪುರುಷಾರ್ಥ ಸಾಧಿಸಿಕೊಂಡಾರು ? ಮೊದಲು ಹೊಟ್ಟೆಗೆ ಅನ್ನ ನೀಡಲಿ ಐಹಿಕ ಆಮುಷ್ಮಿಕ ಭೋಗಭಾಗ್ಯಗಳನ್ನು ಉಣಿಸಲಿ ಮುಂದೆ ಮೋಕ್ಷದಲ್ಲಿ ಶಾಶ್ವತ ಸ್ವರೂಪಾನಂದವನ್ನೂ ಉಣಲು ಕೊಡಲಿ. ವಿಷ್ಣುಲೋಕದಲ್ಲಿ ಮುಕ್ತರಿಗೆ ಯಥೇಚ್ಛ ವಿಹಾರಕ್ಕಾಗಿ ಉದ್ಯಾನ, ತರು, ಲತೆ, ಬೆಳದಿಂಗಳು, ಸರೋವರ ಮುಂತಾದ ಸುಂದರ ಪರಿಸರಗಳನ್ನೂ ನೀಡಲಿ. ನಿರ್ಮಲ ಗಂಧ ಕುಸುಮ ಅಮೃತ ರಸ ಮುಂತಾದುವನ್ನೂ ಯಥೇಚ್ಛವಾಗಿ ಅವರು ಬಯಸಿದಾಗಲೆಲ್ಲ ಒದಗಿಸಲಿ.

ಮಹಾಲಕ್ಷ್ಮಿ ಕೇವಲ ಐಹಿಕ ಸುಖವನ್ನು ಮಾತ್ರ ಕೊಡುವವಳಲ್ಲ ಸ್ವರ್ಗಸುಖವನ್ನೂ ಕೊನೆಯಲ್ಲಿ ಮೋಕ್ಷ ಸುಖವನ್ನೂ ಕೊಡಬಲ್ಲಳು ಇಹದಲ್ಲಿಯೂ ಪರದಲ್ಲಿಯೂ ಹಸಿವು ನೀರಡಿಕೆಗಳಂಥ ಅಲಕ್ಷ್ಮೀ ಪ್ರಭಾವಗಳನ್ನು ದೂರಮಾಡಿ ಭಕ್ತನನ್ನು ಕಾಪಾಡುವಳು.

'ಕ್ಷುತ್‌ಪಿಪಾಸಾಮಲಾಂ ಜ್ಯೇಷ್ಠಾಂ ಅಲಕ್ಷ್ಮೀಂ ನಾಶಯಾಮ್ಯಹಂ'

'ಲಕ್ಷ್ಮೀಪುತ್ರ'ನೊಬ್ಬನು ಕಂಡುಕೊಂಡ ವೇದವಾಣಿ ಇದು ! ಇಂಥ ಮಹಿಮೆ ಮಹಾಲಕ್ಷ್ಮಿಗೆ ಇದ್ದರೆ ಏನೂ ಅಚ್ಚರಿಯಿಲ್ಲ. ಮಹಾವಿಷ್ಣುವಿನ ಪಟ್ಟದರಸಿ ತಾನೇ ! ಮಹಾವಿಷ್ಣು ಆಕೆಯನ್ನು ಅರೆಗಳಿಗೆ ಬಿಟ್ಟಿರಲಾರನಂತೆ ಅವನ ಮಾತಂತಿರಲಿ. ಮೂಗುತಿಯು ಮಹಾಲಕ್ಷ್ಮಿಯ ಮೂಗಿನ ತುದಿಯಲ್ಲಿ ನೇತಾಡುತ್ತಿರುತ್ತದೆ. ಆಕೆಯ ಚೆಂದುಟಿಯ ಸಾನ್ನಿಧ್ಯವೆಂದೂ ಬಿಟ್ಟಿರಲಾರದು ತಾವರೆಗಣ್ಣಿನ ಓರೆ ನೋಟದ ಏಟನ್ನು ಸದಾ ಅನುಭವಿಸುವೆನೆನ್ನುತ್ತದೆ ವಸ್ತುತಃ ಆಕೆ ನಿತ್ಯಮುತ್ತೈದೆ, ಮೂಗುತಿ ಧರಿಸಲೇಬೇಕು ತಾನೆ ! ಹೀಗೆ ಮೂಗುತಿಯನ್ನೇ ಮರುಳು ಮಾಡುವ ಮಹಾಲಕ್ಷ್ಮಿ ನಾರಾಯಣನನ್ನು ಮರುಳು ಮಾಡದಿರುತ್ತಾಳೆಯೇ ?

ಈ ವಾದ ಸ್ವಲ್ಪ ವಿಚಿತ್ರ ಎನಿಸಬಹುದು. ಆದರೆ ರುಕ್ಮಿಣೀಶ ವಿಜಯದಲ್ಲಿ–

ಮುಕ್ತಾತ್ಮಕೋಽಪಿ ಮೃದುಲೋಷ್ಠಪುಟಾನುಷಕ್ತೋ
ನಿತ್ಯಂ ಯದುಲ್ಲಸದಪಾಂಗ ಶರೇಣ ಭಿನ್ನಃ ।
ನಾಸಾವಿಭೂಷಣಮಣಿಃ ಪರಿಲಂಬತೇಽಸ್ಯಾಃ
ದೇವ್ಯಾಃ ಕಿಮಚ್ಯುತ ವಶೀಕರಣೇ ಪ್ರಯಾಸಃ ? ॥

'ರುಕ್ಮಿಣೀ ದೇವಿಯ ಮೂಗುತಿ ಮುತ್ತಿನಿಂದ ಮಾಡಿದುದು, ಮುಕ್ತಾತ್ಮಕ. ಹೀಗಿದ್ದರೂ ಅದು ಆಕೆಯ ಮೃದುವಾದ ತುಟಿಗಳ ಸಾನ್ನಿಧ್ಯ ಬಿಟ್ಟಿರಲಾರದು. ಓರೆನೋಟದ ಬಾಣದ ಏಟಿಗೂ ತುತ್ತಾಗಿದೆ. ಇಂಥ ದೇವಿಗೆ ಶ್ರೀ ಕೃಷ್ಣನನ್ನು ವಶೀಕರಿಸಿಕೊಳ್ಳುವುದರಲ್ಲಿ ಏನು ಪ್ರಯಾಸವಿದ್ದೀತು ? ' ಎಂದು ವರ್ಣನೆ ಇದೆ.

'ಶಶಿ ಬಿಂಬದಂತೆ ಎಸೆವ' ಮೂಗುತಿ ಮುತ್ತಿನದೆ ಇರಬೇಕು. ಸಂಸ್ಕೃತ ಭಾಷೆಯಲ್ಲಿ ಹೇಳುವುದಾದರೆ ಅದು 'ಮುಕ್ತಾತ್ಮ'. ಮುಕ್ತಿ ವಿರಕ್ತಿಯ ಫಲ. ರುಕ್ಮಿಣೀಶ ವಿಜಯದ ಭಾಷೆಯಲ್ಲಿಯೇ ಹೇಳುವುದಾದರೆ 'ಮೋಕ್ಷಾಪತ್ಯವತೀಂ ವಿರಕ್ತಿ ರಮಣೀಂ ' ವಿರಕ್ತಿ ಎಂಬ ರಮಣಿಗೆ ಮುಕ್ತಿಯೆ ಕೂಸು. ಕೂಸು ಹುಟ್ಟುವ ಮೊದಲಂತೂ ವಿರಕ್ತಿ ರಮಣಿ ತನ್ನ ಪತಿಯ ಬಳಿಗೆ ಬೇರೆ ಕಾಮಿನಿಯರನ್ನು ಬರಗೊಡುವುದಿಲ್ಲ. ಕೂಸು ಹುಟ್ಟಿದ ಮೇಲೂ ಈ ವಿರಕ್ತಿ ರಮಣಿ ದೂರ ಹೋಗುವವಳಲ್ಲ 'ಉತ್ಕ್ರಾಂತಾವಪಿ ಯೋಗಿನೀಂ ' ಮರಣದಲ್ಲಾಗಲಿ ಮೋಕ್ಷದಲ್ಲೇ ಆಗಲಿ ಜೊತೆಗೇ ಇರುತ್ತಾಳೆ. ಮೋಕ್ಷಾನಂದವೆ ಲಭಿಸಿದ ಮೇಲೆ ಲೌಕಿಕ ಕಾಮಿನೀಕಾಂಚನಗಳಿಗೆ ಯಾರು ಮರುಳಾಗುತ್ತಾರೆ ? ಆದ್ದರಿಂದ ಮುಕ್ತಾತ್ಮರು ಕಾಮಿನಿಯ ಕಡೆಗಣ್ಣ ಡಾಳಕ್ಕೆ ಕಂಗೆಡಲಾರರು. ಆಕೆಯ ಚೆಂದುಟಿಯನ್ನೂ ಬಯಸಲಾರರು ಆದರೆ ಪ್ರಕೃತದಲ್ಲಿ 'ಮುಕ್ತಾತ್ಮ' ಎನಿಸಿದ ಮೂಗುತಿಯನ್ನೇ ಲಕ್ಷ್ಮಿ ತನ್ನ ಕಣ್ಣುಗಳ ಮತ್ತು ತುಟಿಗಳ ನಡುವೆ ಮೂಗಿನ ತುದಿಯನ್ನು ಹಿಡಿದು ನೇತಾಡುವಂತೆ ಮಾಡಿದ್ದಾಳೆ ಎಂದಮೇಲೆ ನಿತ್ಯಮುಕ್ತನಾದ ಶ್ರೀ ಹರಿಯನ್ನೂ ಆಕೆ ಒಲಿಸಿಕೊಂಡಿದ್ದಾಳೆ ಎನ್ನುವುದರಲ್ಲಿ ಸಂಶಯವೇನಿದೆ ?

— ೧೧ —

**ಮುತ್ತಿನಕ್ಷತೆಯಿಟ್ಟು ನವರತ್ನದ ಮುಕುಟವ**
**ನೆತ್ತಿಯ ಮೇಲೆ ಧರಿಸಿದಳೆ ।**
**ನೆತ್ತಿಯ ಮೇಲೆ ಧರಿಸಿದಳಾ ದೇವಿ ತನ್ನ**
**ಭಕ್ತಿಯ ಜನರ ಸಲಹಲಿ ॥**

ದೇವಿ ಮಹಾಲಕ್ಷ್ಮಿ ಮುತ್ತಿನ ಅಕ್ಷತೆ ಧರಿಸಿ ನವರತ್ನ ಖಚಿತವಾದ ಕೀರಿಟವನ್ನು ತಲೆಯಲ್ಲಿ ಧರಿಸಿದ್ದಾಳೆ. ಆಕೆ ತನ್ನಲ್ಲಿ ಭಕ್ತಿ ಉಳ್ಳವರನ್ನೆಲ್ಲ ಸಲಹಲಿ.

ನವರತ್ನದ ಮುಕುಟ ಧರಿಸಿದ ದೇವಿ ತನ್ನ ಭಕ್ತಿಯು ಜನರನ್ನು ಸಲಹುತ್ತಾಳೆ. ಕೇವಲ ಮುಕುಟದಲ್ಲಿ ಆಸೆ ಇರಿಸಿಕೊಂಡು ಹೊಡೆದಾಡಿ ಸಾಯುವವರನ್ನಲ್ಲ. ದೇವಿ ಒಲಿದರೆ ಮುಕುಟ ತಾನಾಗಿ ದೊರಕುತ್ತದೆ. ಹಾಗೆಂದೊಡನೆ ಮುಕುಟಕ್ಕಾಗಿ ದೇವಿಯು ಆರಾಧನೆ ಮಾಡಬೇಕೆಂದಲ್ಲ. ಮಾಡಿದರೆ ತಪ್ಪಿಲ್ಲ. ವಿಶೇಷ ಫಲವೂ ಇಲ್ಲ. ನಿಷ್ಕಾಮನೆಯಿಂದ ಅಂದರೆ ಕೇವಲ ದೇವಿಗೆ ಪ್ರೀತಿಯಾಗಲೆಂಬ ಉದ್ದೇಶದಿಂದ ಆರಾಧನೆ ಮಾಡಿದರೆ ದೇವಿಯು ಪ್ರೀತಿಯೆಂಬ ಅನುಪಮವಾದ ಫಲ ದೊರಕುತ್ತದೆ. ಆದರಿಂದ ಆಕೆ ನಮ್ಮನ್ನು ಸಲಹುತ್ತಾಳೆ. ಇಹಪರಗಳೆರಡರಲ್ಲಿಯೂ ನಮ್ಮ ತಲೆಗೆ ಮುಕುಟವಿಟ್ಟು ನಮ್ಮನ್ನು ಮೆರೆಸುತ್ತಾಳೆ.

ದೇವಿ ಮುತ್ತಿನ ಅಕ್ಷತೆ ಕಾಳುಗಳನ್ನು ತಲೆಯಲ್ಲಿ ಧರಿಸಿ, ವಜ್ರ, ಮಾಣಿಕ್ಯ, ಮರಕತ, ಪುಷ್ಯರಾಗ, ನೀಲ, ಗೋಮೇಧಿಕ, ವೈಢೂರ್ಯ, ಮುತ್ತು, ಹವಳಗಳೆಂಬ ನವರತ್ನಗಳಿಂದ ಖಚಿತವಾದ ಕೀರಿಟವನ್ನಿಟ್ಟುಕೊಳ್ಳುತ್ತಾಳೆ. ಆಕೆಯು ಪ್ರಸಾದವೆಂಬ ಭಾವನೆಯಿಂದ ನೂತನ ವಧೂವರರು ಅಕ್ಷತೆ ಕಾಳುಗಳನ್ನು ತಲೆಯಲ್ಲಿ ಧರಿಸಿ ಬಾಸಿಂಗ ತೊಟ್ಟುಕೊಳ್ಳುತ್ತಾರೆ. ಈ ಅನುಸಂಧಾನವೆ ಇಲ್ಲಿ "ಭಕ್ತಿ" ಈ ಭಕ್ತಿ ಉಳ್ಳವರು ವಧೂವರರಿರಲಿ, ಅವರ ಸಂಬಂಧಿಕರೆ ಇರಲಿ ಅವರೆಲ್ಲರನ್ನು "ತನ್ನ ಭಕ್ತಿಯು ಜನರನ್ನು" ದೇವಿ ಸಲಹುತ್ತಾಳೆ.

– ೧೨ –

**ಕುಂದಮಂದಾರ ಜಾಜಿ ಕುಸುಮಗಳ ವೃಂದವ**
**ಚೆಂದದ ತುರುಬಿಲಿ ತುರುಬಿದಳೆ ।**
**ಕುಂದಣ ವರ್ಣದ ಕೋಮಲೆ ಮಹಲಕ್ಷ್ಮಿ ಕೃಪೆ**
**ಯಿಂದ ವಧುವರರ ಸಲಹಲಿ ॥**

ಮಲ್ಲಿಗೆ, ಮಂದಾರ, ಜಾಜಿ ಮುಂತಾದ ಹೂಗಳನ್ನು ದೇವಿ ತನ್ನ ಸುಂದರವಾದ ಮುಡಿಯಲ್ಲಿ ಧರಿಸಿದ್ದಾಳೆ ಚೊಕ್ಕ ಬಂಗಾರದಂಥ ಮೈ ಬಣ್ಣದವಳು ಕೋಮಲಾಂಗಿ ಆ ಮಹಾಲಕ್ಷ್ಮಿ ಕೃಪೆಯಿಂದ ವಧೂವರರನ್ನು ಸಲಹಲಿ.

ಎಲ್ಲ ಬಗೆಯ ಉತ್ತಮ ಹೂ ಮುಡಿದುಕೊಂಡು ಮೊದಲೆ ಅಪರಂಜಿಯಂತೆ ಹೊಳೆಯುವ ಕೋಮಲ ಶರೀರದವಳು, ಇನ್ನಷ್ಟು ಮನೋಹರಳಾಗಿ ಹರಿಯನ್ನು ಆನಂದಗೊಳಿಸುತ್ತಾಳೆ "ವಿಸರ್ಪತೀ ಹೇಮಲತೇವ ಸಾ ಬಭೌ", "ನಡೆದಾಡುವ ಚಿನ್ನದ ಬಳ್ಳಿಯಂತೆ ದೇವಿ ಶೋಭಿಸಿದಳು" ಎಂದು ಭಾಗವತದಲ್ಲಿ ವರ್ಣನೆ ಇದೆ ಚಿನ್ನದ ಬಳ್ಳಿಯಂತೆ ಬಳುಕುವವಳು ಹೂ ಮುಡಿದು

ಸಿಂಗರಿಸಿಕೊಂಡರೆ ಎಷ್ಟು ಸೊಗಸು! ಹೂವಮಾಲೆ ಧರಿಸಿವರೆ ಎಷ್ಟು ಶೋಭೆ! ವಸಂತನು ದೇವಿಗೆ ಹೂವಮಾಲೆ ಇತ್ತನೆಂದು ಸ್ಕಂದಪುರಾಣ ಹೇಳಿದೆ.

ಹೂಮುಡಿದ ದೇವಿಯು ಕೃಪೆ ವಧೂವರರ ಮೇಲಿದ್ದರೆ ಅವರೂ ಹೂವಿನಂತೆ ನಗುತ್ತಿರುತ್ತಾರೆ

— ೧೩ —

**ಎಂದೆಂದೂ ಬಾಡದ ಅರವಿಂದ ಮಾಲೆಯ**
**ಇಂದಿರೆ ಪೊಳೆವ ಕೊರಳಲಿ ।**
**ಇಂದಿರೆ ಪೊಳೆವ ಕೊರಳಲಿ ಧರಿಸಿದಳೆ ಅವ**
**ಳಿಂದು ವಧುವರರ ಸಲಹಲಿ ॥**

ಎಂದೆಂದೂ ಬಾಡದಂಥ ಕಮಲದ ಹೂಗಳ ಮಾಲೆಯನ್ನು ದೇವಿ ಇಂದಿರೆ ತನ್ನ ಮನೋಹರವಾದ ಕಂಠದಲ್ಲಿ ಧರಿಸಿದ್ದಾಳೆ. ಅವಳು ಇಂದೆ ಒಲಿದು ವಧೂವರರನ್ನು ಸಲಹಲಿ

ದೇವಿ ತೊಟ್ಟಿರುವ ಕಮಲದ ಮಾಲೆ ಎಂದಿಗೂ ಬಾಡುವಂತಹುದಲ್ಲ. ಅಂಥ ಮಾಲೆಗೆ ಸರಿಯಾದ ಸ್ಥಳ ಅಂದವಾದ ದೇವಿಯು ಕೊರಳು.

"ಅವಮ್ಲಾನಪಂಕಜಾಂ ಮಾಲಾಂ ಶಿರಸ್ಯುರಸಿ ಚಾಪರಾಂ ।
ಅದದಜ್ಜಲಧಿಸ್ತಸ್ಯೈ"

"ತಲೆಗೊಂದು, ಎದೆಗೊಂದು ಹೀಗೆ ಎರಡು ಬಾಡದ ಕಮಲದ ಮಾಲೆಗಳನ್ನು ಸಮುದ್ರರಾಜನು ದೇವಿಗೆ ಕೊಟ್ಟನು" ಎಂದು ಮಾರ್ಕಂಡೇಯ ಪುರಾಣದಲ್ಲಿ ಹೇಳಿದೆ. ಭಾಗವತದಲ್ಲಿ "ವರುಣಃ ಸ್ರಜಂ ವೈಜಯಂತೀಂ" ಸಮುದ್ರರಾಜನು ವೈಜಂತೀಮಾಲೆ ಇತ್ತನು ಎಂದಿದೆ ವೈಜಯಂತಿ ಎಂದರೆ–

"ಅನೇಕರತ್ನಸಂಯುಕ್ತಾ ತುಲಸೀದಲಮಿಶ್ರಿತಾ"
"ಪುಷ್ಪೈಶ್ಚತುರ್ಗುಣೈರ್ಮಾಲಾ"
"ಪಂಚ ವರ್ಣಮಯೀ ಮಾಲಾ"

ಎಂದು ನಾನಾ ವಿಧ ವರ್ಣನೆ ಇದೆ ಎಂದೆಂದಿಗೂ ಬಾಡದಂಥ ದಿವ್ಯವಾದ ಕಮಲದ ಹಾರಗಳನ್ನು ಪೋಣಿಸಿ ಇಂಥ ವೈಜಯಂತೀ ಮಾಲೆಯನ್ನಾಗಿ ಮಾಡಿ ಸಮುದ್ರರಾಜ ದೇವಿಯ ಕೊರಳಿಗೆ ಅರ್ಪಿಸಿದ್ದಾನೆ ಅದನ್ನು ಧರಿಸಿದ ದೇವಿಯೂ ಸ್ವಯಂ ವೈಜಯಂತಿ ಮಾಲೆಯಾಗಿ ಶ್ರೀ ಹರಿಯ ವಕ್ಷಃಸ್ಥಳವನ್ನು ಅಲಂಕರಿಸಿದ್ದಾಳೆ

ಮಾಲೆಯುನ್ನು ಧರಿಸಿದ ದೇವಿ ಒಲಿದರೆ ವಧುವರಿಗೆ ಸದಾ ಮೃಷ್ಟಾನ್ನ ಲಾಭವಾದಿತು. ಶ್ವೇತ ರಾಜನು ಶ್ರೀರಾಮನಿಗೆ ಮಾಲೆಯನ್ನರ್ಪಿಸಿ ತನ್ನ ಭಯಂಕರ ಹಸಿವನ್ನು ಹಿಂಗಿಸಿಕೊಂಡನಂತೆ. ಅವನ ಹಸಿವು ಎಷ್ಟು ಭಯಂಕರವೆಂದರೆ ಪ್ರತಿದಿನ ಆತ ಸ್ವರ್ಗದಿಂದ ಭೂಮಿಗಿಳಿದು ಬಂದು ಒಂದು ಸರೋವರದಲ್ಲಿ ತೇಲುವ ತನ್ನದೇ ಆದ ಹೆಣವನ್ನು ತಿಂದು ನೀರು ಕುಡಿದು ಹೋಗುತ್ತಿದ್ದ. ತಾನು ಮಾಡಿದ ಸತ್ಕರ್ಮಗಳ ಬಲದಿಂದ ಆತ ಸ್ವರ್ಗದಲ್ಲಿ ಮೆರೆಯುತ್ತಿದ್ದರೂ ಅನ್ನದಾನ ಒಂದನ್ನು ಮಾಡದಿರುವ ತಪ್ಪಿನಿಂದಾಗಿ ಸದಾ ಹಸಿವಿನಿಂದ ಕಂಗೆಡುತ್ತಿದ್ದ. ಕೊನೆಗೆ ಒಂದು ದಿನ ಅಗಸ್ತ್ಯ ಋಷಿಗಳ ಮೂಲಕ ಶ್ರೀರಾಮನಿಗೆ ಒಂದು ಮಾಲೆಯನ್ನರ್ಪಿಸಿ ಆ ಪುಣ್ಯದ ಪ್ರಭಾವದಿಂದ ಹಸಿವಿನ ಬಾಧೆಯನ್ನು ಪರಿಹರಿಸಿಕೊಂಡ.

ಎಂದೂ ಬಾಡದ ಕಮಲದ ಮಾಲೆ ಧರಿಸಿದ ದೇವಿಯ ಅನುಗ್ರಹವಾದರೆ ವಧೂವರರು ಎಂದೂ ಹಸಿವಿನಿಂದ ಬಾಡುವುದಿಲ್ಲ, ಸೊರಗುವುದಿಲ್ಲ. ಆದ್ದರಿಂದ ಅವಳು ಇಂದೆ, ವಿಲಂಬಮಾಡದೆ ವಧೂವರರನ್ನು ಸಲಹಬೇಕು. ಅನ್ನ ಇಂದೆ ಬೇಕಾಗಿದೆ. ಅದು ದೊರೆತರೆ ಮುಂದೆ ಏನನ್ನೂ ಸಾಧಿಸಬಹುದು.

— ೧೪ —

**ದೇವಾಂಗ ಪಟ್ಟೆಯ ಮೇಲು ಹೊದ್ದಿಕೆಯ**
**ಭಾವೆ ಮಹಲಕ್ಷ್ಮಿ ಧರಿಸಿದಳೆ ।**
**ಭಾವೆ ಮಹಲಕ್ಷ್ಮಿ ಧರಿಸಿದಳಾ ದೇವಿ ತನ್ನ**
**ಸೇವಕ ಜನರ ಸಲಹಲಿ ॥**

ದೇವಾಂಗ ಪಟ್ಟೆಯ ಉತ್ತರೀಯವನ್ನು ಸುಂದರಿಯಾದ ಮಹಾಲಕ್ಷ್ಮಿ ಹೊದ್ದಿದ್ದಾಳೆ ಅವಳು ತನ್ನನ್ನು ಸೇವಿಸುವ ಜನರನ್ನು ಸಲಹಲಿ.

ದೇವಿ ಧರಿಸಿದ ಹೊದ್ದಿಕೆ ಅಂದರೆ ಉತ್ತರೀಯ ದೇವಾಂಗ ಪಟ್ಟೆಯದು. ದೇವಾಂಗ ಸಮಾಜದ ಜನರಿಗೆ ಪಟ್ಟೆನೇಯುವುದು ಕುಲಕಸುಬು. ಆ ಕಸುಬಿನಲ್ಲಿ ಅವರು ಚೆನ್ನಾಗಿ ನುರಿತವರು. ಜೇಡರ, ದೇವ೦ ಮುಂತಾದ ಬಟ್ಟೆ ನೇಯುವವರ ಕುಲಗಳಲ್ಲಿ ಈ ದೇವಾಂಗ ಕುಲವೂ ಒಂದು. ಅವರು ನೇಯುವ ಪಟ್ಟೆ ಅಮೂಲ್ಯವಾದುದು ಎಂಬ ಅಭಿಪ್ರಾಯದಿಂದ ಉತ್ತಮ ಪಟ್ಟೆ ಎಂಬರ್ಥದಲ್ಲಿ ದೇವಾಂಗ ಪಟ್ಟೆ ಎಂದಿದೆ. ಅವರು ನೇಯ್ದ ಪಟ್ಟೆ ಎಂಬ ಅರ್ಥದಲ್ಲಿ ಅಲ್ಲ. ಸಮುದ್ರರಾಜನೆ ಎರಡು ಹಳದಿ ರೇಶಿಮೆ ಸೀರೆಗಳನ್ನು ದೇವಿಗೆ ಅರ್ಪಿಸಿದ್ದಾನೆ. 'ಸಮುದ್ರಃ ಪೀತಕೌಶೇಯವಾಸಸೀ ಸಮುಪಾಹರತ್' ಎಂದು ಭಾಗವತದಲ್ಲಿ

ಹೇಳಿದೆ. ಹಿಂದೆ ಅಂಬುಜವೆರಡು ಕರಯುಗದಿ ಧರಿಸಿ ಪೀತಾಂಬರ ಉಟ್ಟು ಮೆರೆದಳು ಎಂದು ಹೇಳಿದೆ ಈಗ ಪಟ್ಟೆಯ ಮೇಲು ಹೊದ್ದಿಕೆಯ ಪ್ರಸ್ತಾಪವಿದೆ

"ಗಂಭಿರಾವರ್ತನಾಭಿಃ ಸ್ತನಭರನಮಿತಾ ಶುಭ್ರವಸ್ತ್ರೋತ್ತರೀಯಾ'

ಎಂಬಂತೆ ಪೀತಾಂಬರ ಉಟ್ಟಿದ್ದ ದೇವಿ ಶುಭ್ರವಾದ ರೇಶಿಮೆಯ ಉತ್ತರಿಯವನ್ನೂ ಧರಿಸಿದ್ದಳು.

ಸ್ತ್ರೀಯು ರಜಸ್ವಲೆಯಾದಾಗ ಏಕವಸ್ತ್ರ ಧರಿಸುತ್ತಾಳೆ. ದುಃಶ್ಯಾಸನನು ದ್ರೌಪದಿಯನ್ನೆಳೆಯಲು ಬಂದಾಗ ಆಕೆ ರಜಸ್ವಲೆಯಾಗಿದ್ದು ಏಕವಸ್ತ್ರ ಧರಿಸಿದ್ದಳಂತೆ.

'ಮಲಿನೇನ ತು ವಸ್ತ್ರೇಣ ಪರಿಕ್ಲಿಷ್ಟೇನ ಭಾಮಿನೀಂ ।
ಸಂವೃತಾಂ ಮೃಗಶಾವಾಕ್ಷೀಂ ದದರ್ಶ ಹನುಮಾನ್ ಕಪಿಃ ॥

'ಕೊಳೆಯಾದ ಜೀರ್ಣವಾದ ಒಂದು ವಸ್ತ್ರ ಉಟ್ಟಿದ್ದ ಸೀತೆಯನ್ನು ಹನುಮಂತನು ಕಂಡನು' ಎಂದು ರಾಮಾಯಣದಲ್ಲಿ ಹೇಳಿದಂತೆ ಪತಿವಿಯೋಗವಾದಾಗಲೂ ಸ್ತ್ರೀಯರು ಏಕವಸ್ತ್ರ ಧರಿಸುತ್ತಾರೆ ಬೇರೆ ಸಮಯದಲ್ಲಿ ಎರಡು ವಸ್ತ್ರಗಳಿರಲೇಬೇಕು. ಇಂದಿಗೂ ಕೇರಳದ ಸ್ತ್ರೀಯರು ಎರಡು ವಸ್ತ್ರಗಳನ್ನು ಧರಿಸುತ್ತಾರೆ. ಗೃಹಸ್ಥರು ಎರಡು ಜನಿವಾರಗಳನ್ನು ಧರಿಸಿದ ಮೇಲೆ ಮೂರನೆಯದಾಗಿ ಇನ್ನೊಂದನ್ನು ಧರಿಸುವುದು ಉತ್ತರೀಯವಿಲ್ಲದಿದ್ದಾಗ ಆ ದೋಷ ಪರಿಹಾರಕ್ಕಾಗಿ. ಶರೀರಶುದ್ಧಿ ಉಳಿಯುವುದಕ್ಕಾಗಿ. ಈ ವಿಧಿ ನಿಷೇಧಗಳು ಮಹಾಲಕ್ಷ್ಮಿಗೆ ಇಲ್ಲ, ನಿಜ. ಆಕೆ ನಿತ್ಯಮುಕ್ತೆ ಆದರೂ ಪತಿಯ ಸಂತೋಷಕ್ಕಾಗಿ ಅವನ್ನು ಅನುಸರಿಸುತ್ತಾಳೆ. ಜೊತೆಗೆ ನಮಗೆ ಮಾರ್ಗದರ್ಶನವನ್ನೂ ಮಾಡುತ್ತಾಳೆ. ಆ ಮೂಲಕವೂ ಸೇವಕರಾದ ನಮ್ಮನ್ನು ಸಲಹುತ್ತಾಳೆ.

– ೧೫ –

**ಈ ಲಕ್ಷ್ಮೀದೇವಿಯ ಕಾಲುಂಗುರ ಘಲುಕೆನಲು**
**ಲೋಲಾಕ್ಷಿ ಮೆಲ್ಲನೆ ನಡೆತಂದಳು ।**
**ಸಾಲಾಗಿ ಕುಳ್ಳಿರ್ದ ಸುರರ ಸಭೆಯ ಕಂಡು**
**ಆಲೋಚಿಸಿದಳು ಮನದಲ್ಲಿ ॥**

ಈ ಲಕ್ಷ್ಮೀದೇವಿ ಚಂಚಲ ನಯನೆ. ಅತ್ತಿತ್ತ ನೋಡುತ್ತ ಮೆಲ್ಲನೆ ನಡೆದು ಬರುತ್ತಿದ್ದಾಳೆ ಸ್ವಯಂವರ ಸಭೆಯಲ್ಲಿ ಕಾಲುಂಗುರ ಘಲ್ ಘಲ್ ಎನ್ನುತ್ತಿದೆ. ಸಾಲಾಗಿ ಕುಳಿತಿದ್ದ ಸುರರ ಸಭೆಯನ್ನು ಕಂಡು ಮನಸ್ಸಿನಲ್ಲಿಯೆ ಮುಂದೆ ಹೇಳುವಂತೆ ಆಲೋಚಿಸುತ್ತಾಳೆ

ಸ್ವಯಂವರಕ್ಕೆ ಸಿದ್ಧಳಾಗಿ ನಿಂತ ಕನ್ಯೆ ಲಕ್ಷ್ಮೀದೇವಿ ಲಕ್ಷ್ಮಿ ಎಂದರೆ ಎಲ್ಲ ಸೌಂದರ್ಯ ಲಕ್ಷಣಗಳಿಂದೊಪ್ಪುವವಳು. ಸ್ವಾಭಾವಿಕ ಶರೀರ ಸೌಂದರ್ಯದಿಂದ ಹೊಳೆಯುವವಳು, ಜೊತೆಗೆ ಘಲಕ್ಕೆನ್ನುವ ಕಾಲುಂಗುರದಂಥ ಸರ್ವಾಭರಣಗಳಿಂದ ಭೂಷಿತಳಾದವಳು ಇವಿಷ್ಟೆ ಸಾಕು ಇದರ ಮೇಲೆ ದೇವಿ ಲೋಲಾಕ್ಷಿಯಾಗಿ ಮೆಲ್ಲನೆ ನಡೆದು ಬರುತ್ತಿದ್ದಾಳೆ ನವಯೌವನದ ಲಕ್ಷಣಗಳು ಈ ಚಂಚಲವಾದ ನೋಟ ಹಾಗೂ ಮೆಲ್ ನಡಿಗೆ. ಇವನ್ನೆಲ್ಲ ನೋಡಿದರೆ ಭಾಗವತ ಹೇಳುವಂತೆ–

ತಸ್ಯಾಂ ಚಕ್ರುಃ ಸ್ಪೃಹಾಂ ಸರ್ವೇ ಸಸುರಾಸುರಮಾನವಾಃ ।
ರೂಪೌದಾರ್ಯವಯೋವರ್ಣ ಮಹಿಮಾಕ್ಷಿಪ್ತಚೇತಸಃ ॥

"ಸುರ ಅಸುರ ಮಾನವರೆಂಬ ಭೇದವಿಲ್ಲದೆ ಎಲ್ಲರೂ ದೇವಿಯ ಮೋಹಕ ರೂಪ, ನವಯೌವನ, ಹೊಳೆಯುವ ಶರೀರಕಾಂತಿಗಳಿಗೆ ಮನ ಸೋತು ಅವಳನ್ನು ಬಯಸಿದರು"

ಹೀಗೆ ಎಲ್ಲರ ಕಣ್ಮನ ಸೆಳೆಯುತ್ತ ಕಾಲುಂಗುರ ಗೆಜ್ಜೆಗಳ ದನಿಗೈಯುತ್ತ ಚಂಚಲ ನೇತ್ರಗಳಿಂದ ಅತ್ತಿತ್ತ ನೋಡುತ್ತ ಚಿನ್ನದ ಬಳ್ಳಿಯಂತೆ ಬಳುಕಿ ಮೆಲ್ಲನೆ ನಡೆದಳು, ಮಹಾಲಕ್ಷ್ಮಿ

ಭಾಗವತವೂ ಹೀಗೇ ಹೇಳುತ್ತದೆ–

ತತಸ್ತತೋ ನೂಪುರ ವಲ್ಗು ಶಿಂಜಿತೈಃ
ವಿಸರ್ಪತೀ ಹೇಮಲತೇವ ಸಾ ಬಭೌ ॥

ವಾದಿರಾಜರು ಒಂದು ಕೀರ್ತನೆಯಲ್ಲಿ ದೇವಿಯ ಈ ಸುಂದರ ರೂಪವನ್ನು ಬಣ್ಣಿಸಿ ಆಕೆ ನಮ್ಮ ಮನೆಯಲ್ಲಿ ನೆಲೆಸಲಿ, ಶ್ರೀಹರಿಯನ್ನು ತೋರಲಿ, ಭವ ಭಯವನ್ನು ಪರಿಹರಿಸಲಿ ಎಂದು ಬೇಡಿದ್ದಾರೆ–

ಇಂದಿರೆ, ಮಂದಿರದೊಳು ನಿಂದಿರೆ ॥ಪ ॥

ಇಂದಿರೆ ಹೊಂದಿದೆ ನಿನ್ನ–ಮುದ ।
ದಿಂದ ಪಾಲಿಸು ನಿತ್ಯ ಎನ್ನ–ಆಹ ।
ಗಂಧ ತುಳಸಿ ಅರವಿಂದ ಮಲ್ಲಿಗೆ ಪುಷ್ಪ ।
ದಿಂದ ಪೂಜಿಸುವೆನು ಕುಂದುಗಳೆಣಿಸದೆ ॥ ಅ. ಪ ॥

ಘಲುಘಲು ಗೆಜ್ಜೆಯ ನಾದದಿಂದ ।
ಘಳಘಳಿಸುವ ದಿವ್ಯ ಪಾದದೊಳು ।

ಪಿಲ್ಯಕಾಲುಂಗುರನಾದ – ಅಂಘ್ರಿ ।
ಚಲಿಸುವ ದಿವ್ಯ ಸುಸ್ವಾದ–ಅಹ ।
ಕಾಲಲಂದುಗೆ ಗೆಜ್ಜೆ ಜಳಪಿಸುತ ಸ– ।
ಮ್ಮಾಲಯುದೊಳು ನಿಲ್ಲೆ ಪಾಲವಾರಿಧಿ ಕನ್ನೆ ॥ ೧ ॥

ಹರಡಿ ಕಂಕಣವಂಕಿ ಡೋರ್ಯು ।
ಕೊರಳೊಳಗೆ ನಾನಾ ವಿಧದ್ವಾರ ಬಾಯು– ।
ಲಿರುವೊ ಕರ್ಪೂರ ವೀಳ್ಯ– ಸಾರೆ ।
ಸುರಭಿ ಚಂಪಕ ಪುಷ್ಪಹಾರ– ಆಹ ।
ಎರಳೆ ಗಂಗಳ ಸಿರಿ ಆರಳೆಲೆ ಕುಂಕುಮ ।
ಹೆರಳ ಗೊಂಡೆಗಳಿಂದ ಹರಿಯು ಮೋದಿಸುವೆ ॥ ೨ ॥

ಜಯು ಜಯು ವಿಜಯು ಸಂಪೂರ್ಣೆ, ಭಕ್ತ ।
ಭಯು ನಿವಾರಣೆ ಎಣೆಗಾಣೆ, ಎನ್ನ ।
ಕಾಯುಉವರನ್ಯರ ಕಾಣೆ– ಶೇಷ ।
ಶಯುನನ್ನ ತೋರೆ, ಸುಶ್ರೇಣೆ– ಆಹ ।
ಕೈಯು ಪಿಡಿದು ಭವಭಯುವ ಪರಿಹರಿಸೆ, ಸಿರಿ ।
ಹಯುವದನನ್ನ ದಯುವ ಪಾಲಿಸೆ, ಲಕ್ಷ್ಮಿ ॥ ೩ ॥

"ಸಾಲಾಗಿ ಕುಳ್ಳಿರ್ದ ಸುರರ ಸಭೆಯು ಕಂಡು" ಎಂದೊಡನೆ ದೇವತೆಗಳು ಮಾತ್ರ ಸ್ವಯುಂವರ ಸಭೆಯುಲ್ಲಿ ಮಂಡಿಸಿದ್ದರೆಂದು ಭಾವಿಸಕೂಡದು. ದೇವದಾನವ ಮಾನವ ಕಿನ್ನರ ಕಿಂಪುರುಷ ಮುಂತಾದವರೆಲ್ಲರೂ ಅಲ್ಲಿ ನೆರೆದಿದ್ದರೆಂದು ಬಾಗವತದಲ್ಲಿ ಅನೇಕ ಕಡೆ ಹೇಳಿದೆ. ಉದಾ–

ತಸ್ಯಾಂ ಚಕ್ರುಃ ಸ್ಪೃಹಾಂ ಸರ್ವೇ ಸಸುರಾಸುರ ಮಾನವಾಃ ।
ವಿಲೋಕಯುಂತೀ ನಿರವದ್ಯಮಾತ್ಮನಃ ಪದಂ ಧ್ರುವಂ ಚಾವ್ಯಭಿಚಾರಿಸದ್ಗುಣಂ ।
ಗಂಧರ್ವ ಯಕ್ಷಾಸುರ ಸಿದ್ಧ ಚಾರಣ ತ್ರೈವಿಷ್ಟಪೇಯಾದಿಷು ನಾನ್ವವಿಂದತ ।
ವೀರ್ಯಂ ನ ಪುಂಸೋಽಸ್ತ್ಯಜವೇಗ ನಿಷ್ಕೃತಂ ।

ಆದ್ದರಿಂದ ಭಾಗವತವಿರೋಧ ಪರಿಹಾರವಾಗಬೇಕಾದರೆ "ಸಾಲಾಗಿ ಕುಳ್ಳಿರ್ದಸುರರ" ಎಂಬಲ್ಲಿ ಸುರರ ಎಂಬ ಪದದಿಂದ ಅಸುರರ ಮಾನವರ ಗಂಧರ್ವರ. ಎಂದೂ ಉಪಲಕ್ಷಣೆಯಿಂದ ಇಟ್ಟುಕೊಳ್ಳಬೇಕು.

ಈ ಲಕ್ಷ್ಮೀದೇವಿಯ

ಅಥವಾ "ಕುಳ್ಳಿರ್ದ ಅಸುರರ = ಕುಳ್ಳಿರ್ದಸುರರ' ಎಂದು ಸಂಧಿ ಮಾಡಿಕೊಂಡು ಸುರರಲ್ಲದವರೆಲ್ಲರನ್ನೂ ಅಂದರೆ ದಾನವ, ಮಾನವ, ಗಂಧರ್ವ, ಕಿನ್ನರ ಮುಂತಾದವರನ್ನು "ಅ–ಸುರ' ಎಂಬ ಒಂದು ಮಾತಿನಿಂದ ಇಟ್ಟುಕೊಳ್ಳೋಣ ಮೇಲಿನಂತೆ ಸಂಧಿಯನ್ನು ಮಾಡದೆ ಕುಳ್ಳಿರ್ದ ಸುರರ ಎಂದು ದೇವತೆಗಳನ್ನೂ ಇಟ್ಟುಕೊಳ್ಳೋಣ. ಇದು ಶ್ಲೇಷಾಲಂಕಾರ.

ಸರ್ವದೋಮಾಧವಃ ಪಾಯಾತ್ ಸ ಯೋಗಂಗಾಮದೀಧರತ್ ॥
ಎಂಬಲ್ಲಿ "ಸರ್ವದಃ ಮಾಧವಃ ಪಾಯಾತ್ ಸಃ ಯಃ ಅಗಂ ಗಾಂ ಅದೀಧರತ್" ಎಂದೂ "ಸರ್ವದಾ ಉಮಾಧವಃ ಪಾಯಾತ್ ಸಃ ಯಃ ಗಂಗಾಂ ಅದೀಧರತ್" ಎಂದೂ ಸಂಧಿ ಬಿಡಿಸಿ ಮಾಧವ ಉಮಾಧವರಿಬ್ಬರನ್ನೂ ಅಂದರೆ ಹರಿ ಹರರಿಬ್ಬರನ್ನೂ ಒಂದೇ ಮಾತಿನಿಂದ ಪ್ರಾರ್ಥಿಸಲಾಗಿದೆ. ಹಾಗೇ ಪ್ರಕೃತದಲ್ಲಿ ಸುರ ಅಸುರರೆಲ್ಲರನ್ನೂ ಒಂದೇ ಮಾತಿನಿಂದ ಹೇಳಿದೆ. ನಾವು ಮೊದಲಿಗೆ ಸುರರನ್ನು ಮಾತ್ರ ಗ್ರಹಿಸುತ್ತೇವೆ. ಭಾಗವತದ ಹೇಳಿಕೆಗಳು ಸ್ಮರಣೆಗೆ ಬಂದರೆ ಶ್ಲೇಷೆಯಿಂದ ಅಸುರರನ್ನೂ ಗ್ರಹಿಸುತ್ತೇವೆ. ಇದು ಒಂದು ಬಗೆಯ ಗೂಢಶ್ಲೇಷೆ.

ಈ ಗೂಢಶ್ಲೇಷೆಯನ್ನಾಗಲೀ, ಉಪಲಕ್ಷಣೆಯನ್ನಾಗಲೀ ವಾದಿರಾಜರು ಏಕೆ ಬಳಸಿದರು ಎಂದರೆ ಇಲ್ಲಿ ಒಂದು ಸ್ವಾರಸ್ಯವಡಗಿದೆ. ಸುರರು ಅವರಲ್ಲಿರುವ ಸದ್ಗುಣ ಸಂಪತ್ತಿನ ದೃಷ್ಟಿಯಿಂದ ಸ್ವಯಂವರದಲ್ಲಿ ಕನ್ಯಾರ್ಥಿಗಳಾಗಿ ಕುಳಿತುಕೊಳ್ಳಲು ಅರ್ಹರು. ಅಸುರರು ಹಾಗಲ್ಲ. ಅವರಲ್ಲಿ ದೋಷಗಳೇ ತುಂಬಿರುತ್ತವೆ. ಕನ್ಯೆಯು ವರನಲ್ಲಿ ದೋಷಗಳನ್ನು ಅರಸುತ್ತ ಬರುತ್ತಿದ್ದಾಳೆ. ಅಸುರರಲ್ಲಿ ಇದು ವ್ಯರ್ಥಪ್ರಯಾಸ ಅಕ್ಕಿಯ ರಾಶಿಯಲ್ಲಿ ಕಲ್ಲು ಹೆಕ್ಕಬಹುದು. ಆದರೆ ಕಲ್ಲಿನ ರಾಶಿಯಲ್ಲಿ? ಆದ್ದರಿಂದ ಅಸುರರು ಈ ವರ ಪರೀಕ್ಷೆಯ ಸಂದರ್ಭದಲ್ಲಿ ಕನ್ಯೆಯ ಮುಂದೆ ಸಂದರ್ಶನಕ್ಕೆ ಅನರ್ಹರು. ಉದ್ಯೋಗಕ್ಕೆ ಅರ್ಜಿ ಹಾಕಿದವರೆಲ್ಲರಿಗೂ ಸಂದರ್ಶನಕ್ಕೆ ಆಹ್ವಾನ ದೊರೆಯುತ್ತದೆ ಎಂಬ ನಿಯಮವಿಲ್ಲ. ಪ್ರಕೃತದಲ್ಲಿ ಸಂದರ್ಶನ ಯೋಗ್ಯತೆ ಇರುವುದು ಕೇವಲ ಸುರರಿಗೆ ಮಾತ್ರ. ರುಕ್ಮಿಣಿ ಕೃಷ್ಣನನ್ನು ವರಿಸುವಾಗ "ನರಾನ್ ತೃಣೀಕೃತ್ಯ ಜಗಾಮ ಭೈಷ್ಮೀ" 'ಮಾನವರನ್ನು ಹುಲ್ಲುಕಡ್ಡಿಗಳಂತೆ ಕಂಡು ಕೃಷ್ಣನ ಬಳಿಗೆ ನಡೆದಳು' ಎಂದು ರುಕ್ಮಿಣೀಶ ವಿಜಯ ಹೇಳಿದೆ. ಹಾಗೆಯೇ ಇಲ್ಲಿ ಲಕ್ಷ್ಮೀದೇವಿ ಅಸುರರನ್ನು ಕಂಡಳು. ಅವರ ಗುಣದೋಷಗಳ ಬಗ್ಗೆ ಆಲೋಚಿಸಲೇ ಇಲ್ಲ. ದೇವತೆಗಳನ್ನು ಅವರ ಗುಣಗಳಿಗೆ

ಮಾನ್ಯತೆ ಇತ್ತು ಆದರದಿಂದ ಕಂಡಳು ಅವರ ಗುಣದೋಷಗಳ ಬಗ್ಗೆ ಆಲೋಚಿಸಿದಳು ಈ ವ್ಯತ್ಯಾಸವು 'ಕುಳ್ಳಿರ್ದಸುರರ' ಎಂಬ ಮಾತಿನಲ್ಲಿ ಅಡಗಿದೆ.

ಅಥವಾ ಶ್ರೀ ಹರಿಯು ಮೋಹಿನೀ ರೂಪದಲ್ಲಿ ಬಂದು ಅಸುರರನ್ನು ಕಣ್ಣು ಮುಚ್ಚಿ ಕುಳಿತುಕೊಳ್ಳಬೇಕೆಂದನು. ನೀವು ಹೀಗೆ ಬಿಟ್ಟ ಕಣ್ಣುಗಳಿಂದ ಕುಡಿಯುವಂತೆ ನೋಡುತ್ತಿದ್ದರೆ ನನಗೆ ನಾಚಿಕೆಯಾಗುವುದಿಲ್ಲವೇ ? ಎಂದು ದೇವತೆಗಳಿಗೆ ಮಾತ್ರ ಹಾಗೆ ಹೇಳಲಿಲ್ಲ. ಏಕೆಂದರೆ ಅವರು ಎಳೆಯ ಕಂದಮ್ಮಗಳಂತೆ ತಾಯಿಯೆಂಬ ದೃಷ್ಟಿಯಿಂದ ನೋಡುತ್ತಿದ್ದರು ಅಸುರರದು ಪಾಪಪೂರಿತ ದೃಷ್ಟಿ. 'ಅತಿ ಪಾಪಿನಾಂ ದರ್ಶನೇ ಲಜ್ಜಾಯಾ ಅಪಿ ಗುಣತ್ವಾತ್' ಎಂದು ರಾಜರು ಮೋಹಿನಿಗಾದ ನಾಚಿಕೆಯನ್ನು ಗುಣವೆಂದು ಸಮರ್ಥಿಸಿದ್ದಾರೆ ಮೋಹಿನಿಯು ನಾಚಿಕೆಯಿಂದ ಅಸುರರನ್ನು ಕಣ್ಣು ಮುಚ್ಚಲು ಹೇಳಿದರೂ, ಸ್ವಯಂವರ ಕನ್ಯೆಯಾಗಿ ನಿಂತ ಲಕ್ಷ್ಮೀದೇವಿ ಹಾಗೆ ಹೇಳಲಾರಳು ಅಸುರರನ್ನು ಕಂಡಳು, ಪರಮಪಾಪಿಗಳಂತೆ. ಸುರರನ್ನು ಮಾತ್ರ ಪ್ರೀತಿಯ ಮಕ್ಕಳಂತೆ ಕಂಡಳು ಏಕೆಂದರೆ ಅವರು ಕನ್ಯಾರ್ಥಿಗಳಾಗಿ ಬರಲಿಲ್ಲ ಅವರು ಎಷ್ಟೇ ಸದ್ಗುಣಭರಿತರಾಗಿದ್ದರೂ ಜಗನ್ಮಾತೆಯ ಮುಂದೆ ಅವರು ಏನೂ ಅಲ್ಲ, ಮಕ್ಕಳು. ಇದು ಅವರಿಗೆ ಗೊತ್ತು ದೇವಿಯು ಸ್ವಯಂವರಕ್ಕೆ ನಿಜವಾಗಿಯೂ ಸಿದ್ಧಳಾಗಿರುವಳೆಂಬ ಭ್ರಮೆಯೂ ಅವರಿಗಿರಲಿಲ್ಲ

ಅನಾದ್ಯನಂತಕಾಲೇಽಪಿ ವಿಷ್ಣುಮೇವಾಶ್ರಿತಾ ರಮಾ ।
ಅನ್ಯೇಷಾಂ ಜ್ಞಾಪನಾರ್ಥಾಯ ದೋಷಾನುಕ್ತ್ವೇತರಾನ್ ಜಹೌ ॥

"ಶ್ರೀಹರಿಯನ್ನೇ ಅನಾದಿ ಅನಂತ ಕಾಲಗಳಲ್ಲಿಯೂ ಆಶ್ರಯಿಸಿದವಳು ರಮೆ. ದೇವತೆಗಳನ್ನು ಶ್ರೀಹರಿಗೆ ಹೋಲಿಸಿದಾಗ ಅವರೆಷ್ಟು ಅಲ್ಪರು ಎಂಬುದನ್ನು ಲೋಕಕ್ಕೆ ತೋರಿಸಲೆಂದೇ ಆಕೆ ಅವರಲ್ಲಿ ದೋಷಗಳನ್ನೆಣಿಸಿದಳು."

ದೇವತೆಗಳು ಜ್ಞಾನಿಗಳು, ತಿಳಿದು ತಿಳಿದು ದೇವಿ ತನ್ನ ಪತಿಯನ್ನು ತೊರೆದು ಇನ್ನೊಬ್ಬರನ್ನು ಸೇರಲು ಸ್ವಯಂವರದ ಸಭೆಯಲ್ಲಿ ಕುಳಿತು ಪ್ರೋತ್ಸಾಹಿಸುವರೇ ?

ತಸ್ಯಾಂ ಚಕ್ರುಃ ಸ್ಪೃಹಾಂ ಸರ್ವೇ ಸಸುರಾಸುರ ಮಾನವಾಃ ।

ಎಂಬ ಭಾಗವತ ವಾಕ್ಯದಲ್ಲಿ ಸುರರೂ ಅಸುರ ಮಾನವರಂತೆ ದೇವಿಯನ್ನು ಬಯಸಿದ್ದರು ಎಂದು ಹೇಳಿದಂತಿದೆ. ಆದರೆ 'ಸರ್ವೇಸಸುರಾಸುರ ಮಾನವಾಃ' ಎಂಬಲ್ಲಿ 'ಸರ್ವೇ+ಅಸಸುರಾಸುರಮಾನವಾಃ' ಎಂದು ಸಂಧಿ ಮಾಡಿಕೊಂಡು ಅಸಸುರರಾದ ಅಸುರಮಾನವರು ಅಂದರೆ ಸುರರನ್ನು ಬಿಟ್ಟು ಕೇವಲ ಅಸುರಮಾನವರು ದೇವಿಯನ್ನು ಬಯಸಿದರು" ಎಂದು ಅರ್ಥೈಸಲು ವ್ಯಾಕರಣದ

ಪೂರ್ಣ ಸಮ್ಮತಿ ಇದೆ ಅಥವಾ ಹಾಗೆ ಸಂಧಿ ಮಾಡದೆ 'ಸ–ಸುರ' ಎಂದೆ ಇಟ್ಟುಕೊಂಡರೂ "ಸಭೆಯಲ್ಲಿ ಅಸುರ ಮಾನವರು ಸುರರೊಂದಿಗೆ ಕುಳಿತಿದ್ದರು, ಎಂದರ್ಥ. ದೇವಿಯನ್ನು ಬಯಸುವವರಲ್ಲಿ ಸುರರೂ ಸೇರಿದ್ದರೆಂದಲ್ಲ

"ನೈವ ದೇವಪದಂ ಪ್ರಾಪ್ತಾ ಬ್ರಹ್ಮದರ್ಶನವರ್ಜಿತಾಃ" ಎಂಬಂತೆ ಬ್ರಹ್ಮಜ್ಞಾನಿಗಳಾದ, ದೇವತೆಗಳು, ಲಕ್ಷ್ಮೀದೇವಿಯ ಸಂಕಲ್ಪಕ್ಕೆ ಅನುಗುಣವಾಗಿ ಸ್ವಯಂವರದ ಈ ನಾಟಕದಲ್ಲಿ ಪಾತ್ರಧಾರಿಗಳಾಗಿದ್ದರು. ಸಮುದ್ರರಾಜ ವರುಣನೂ ತನ್ನ ಮಗಳಾದ ದೇವಿಗೆ ಸ್ವಯಂವರ ಏರ್ಪಡಿಸಿದ್ದುದು ಈ ಉದ್ದೇಶದಿಂದಲೇ. ಪ್ರತ್ಯಕ್ಷ ಮಂಗಳಸೂತ್ರ ಧರಿಸಿಯೇ ಉದಿಸಿದ ದೇವಿಗೆ ಸ್ವಯಂವರ ಮಾಡುವಷ್ಟು ಮೂರ್ಖನೆ ಆತ ? ಕ್ಷತ್ರಿಯ ಜಾತಿಗೆ ಸೇರಿದ ದೇವತೆ ತಾನಾದುದರಿಂದ ಜಾತಿ ನಿಯಮಕ್ಕನುಗುಣವಾಗಿ ಮಗಳ ಸ್ವಯಂವರ ಏರ್ಪಡಿಸಿದ್ದ ಮಾತ್ರವಲ್ಲ, ಮಗಳು ಶ್ರೀಹರಿಯನ್ನೇ ವರಿಸುವಳೆಂದು ಆತನಿಗೆ ಗೊತ್ತಿತ್ತು. ತನ್ನ ಜಾತಿಪದ್ಧತಿ ನಡೆಸಿದಂತಾಯಿತು ಹರಿಸರ್ವೋತ್ತಮತ್ವ ಬೆಳಕಿಗೆ ಬಂದಂತಾಯಿತು. ಎಲ್ಲಕ್ಕಿಂತ ಹೆಚ್ಚಾಗಿ ತನ್ನ ಮನೆಯಲ್ಲಿ ಜಗತ್ತಿನ ತಾಯಿ ತಂದೆಯರಾದ ಲಕ್ಷ್ಮೀನಾರಾಯಣರ ಪರಮ ಮಂಗಳ ವಿವಾಹೋತ್ಸವ ನಡೆಸಿ ತಾನು ಧನ್ಯನಾಗಬೇಕು ಎಂಬ ಆಸೆ ವರುಣನಿಗಿತ್ತು ದೇವಿ ಅದನ್ನು ಪೂರೈಸಿದಳು ಆಗ ದೇವಿ ದೇವತೆಗಳನ್ನು ಪ್ರೀತಿಯ ಮಕ್ಕಳಂತೆ ಕಂಡಳು. ಅವರ ಗುಣದೋಷಗಳನ್ನು ಲೋಕಕ್ಕೆ ತಿಳಿಯಪಡಿಸಿದಳು. ಅಸುರರನ್ನು ಮಾತ್ರ ಪಾಪಿಗಳೆಂಬ ದೃಷ್ಟಿಯಿಂದ ಮಾತ್ರ ಕಂಡಳು ಗುಣದೋಷ ವಿಚಾರ ಮಾಡಲಿಲ್ಲ. ಈ ವ್ಯತ್ಯಾಸವನ್ನು ತಿಳಿಸುವುದಕ್ಕಾಗಿ ಅಸುರರ ಸಭೆಯ ಬಗ್ಗೆ ಸ್ಪಷ್ಟವಾಗಿ ಹೇಳಲಿಲ್ಲ

"ಆಲೋಚಿಸಿದಳು ಮನದಲ್ಲಿ". "ಈ ಸ್ವಯಂವರ ಸಭೆಯಲ್ಲಿ ಮಂಡಿಸಿದ ಸುರ, ಅಸುರ, ಮಾನವ, ಗಂಧರ್ವ, ಕಿನ್ನರಾದಿಗಳಲ್ಲಿ ಯಾರು ತನಗೆ ಪತಿ ಯಾಗಬಹುದೆಂದು ತನ್ನ ಮನಸ್ಸಿನಲ್ಲಿ ವಿಚಾರ ಮಾಡಿದಳು"– ಎಂದಾಗ ದೇವಿಗೆ ತನ್ನ ಪತಿ ಯಾರೆಂಬ ಬಗ್ಗೆ ಅಜ್ಞಾನ, ಸಂಶಯಗಳಿವೆಯೆ, ವಿಚಾರ ಮಾಡಿ ನಿರ್ಣಯಕ್ಕೆ ಬರಬೇಕಾದರೆ ಮೊದಲಿಗೆ ಅವು ಇರಲೇಬೇಕಲ್ಲವೆ ಎಂಬ ಪ್ರಶ್ನೆ ಬರುತ್ತದೆ ಏಕೆಂದರೆ "ಈಶ್ವರಾದನ್ಯತ್ರ ಅನಾಲೋಚನೇಽಪಿ ಸರ್ವವಿಷಯಂ ಲಕ್ಷ್ಮೀಜ್ಞಾನಂ" "ವಿಚಾರದ ಸಹಾಯವಿಲ್ಲದೆಯೇ ಶ್ರೀಹರಿಯನ್ನು ಬಿಟ್ಟು ಇನ್ನಿತರ ಎಲ್ಲ ವಿಷಯಗಳನ್ನೂ ಗ್ರಹಿಸುವಂಥಹುದು ಲಕ್ಷ್ಮಿಯ ಜ್ಞಾನ" ಜೀವರಿಗೆ ಅದರಲ್ಲಿಯೂ ಸಂಸಾರಾವಸ್ಥೆಯಲ್ಲಿರುವವರಿಗೆ ಅವರ ಅಂತಃಕರಣದಲ್ಲಿ ಜ್ಞಾನ ಉದಿಸಬೇಕಾದರೆ ಕೆಲವೊಮ್ಮೆ ವಿಚಾರ ಬೇಕಾಗುತ್ತದೆ ಮುಕ್ತರಿಗೆ ಬೇಕಾಗಿಲ್ಲ. ನಿತ್ಯ ಮುಕ್ತಳಾದ ದೇವಿಗೆ ಶ್ರೀಹರಿಯಂತೆಯೆ ತನ್ನ ಸ್ವರೂಪದಲ್ಲೆ ಇರುವ ಜ್ಞಾನದ ಪ್ರಕಾಶ ಸದಾ ಬೆಳಗುತ್ತ ಎಲ್ಲ ವಿಷಯಗಳನ್ನೂ ಗ್ರಹಿಸುತ್ತದೆ. ಅದಕ್ಕಾಗಿ ವಿಚಾರದ

ಆವಶ್ಯಕತೆ ಎಂಬುದಿಲ್ಲ. ಆದ್ದರಿಂದ "ಆಲೋಚಿಸಿದಳು ಮನದಲ್ಲಿ" ಅಂದರೆ "ತನ್ನ ಸ್ವರೂಪಭೂತವಾದ ಜ್ಞಾನದಲ್ಲಿ ಶ್ರೀಹರಿಯ ಮತ್ತು ದೇವತೆಗಳ ಗುಣದೋಷಗಳನ್ನು ಗ್ರಹಿಸಿದಳು ಎಂದಿಷ್ಟೇ ಅರ್ಥ "ಸ ತಪೋऽತಪ್ಯತ" "ಶ್ರೀಹರಿಯು ಸೃಷ್ಟಿಯ ಆದಿಯಲ್ಲಿ ತಾನೇನು ಸೃಷ್ಟಿ ಮಾಡಬೇಕೆಂಬುದನ್ನು ಆಲೋಚಿಸಿದನು" ಎಂದು ಹೇಳಿದ ಉಪನಿಷತ್ತು "ಯಸ್ಯ ಜ್ಞಾನಮಯಂ ತಪಃ', 'ಹರಿಯ ಆಲೋಚನೆ ಎಂಬುದು ಜ್ಞಾನ ಸ್ವರೂಪವಾದುದು' ಎಂದೂ ಹೇಳಿದೆ ದೇವಿಯ ವಿಷಯದಲ್ಲಿಯೂ ಈ ಮಾತು ಸರಿ ಎನಿಸುತ್ತದೆ.

ಅಥವಾ "ಆಲೋಚಿಸಿದಳು" ಎಂದರೆ "ವಿಚಾರ ಮಾಡಿದಂತೆ ನಟಿಸುತ್ತ ಸ್ವಲ್ಪ ಕಾಲ ವಿಲಂಬ ಮಾಡಿದಳು, ನೇರವಾಗಿ ಶ್ರೀಹರಿಯ ಬಳಿಗೆ ಹೋಗಲಿಲ್ಲ ಎಂದೂ ಅರ್ಥೈಸಬಹುದು.

— ೧೬ —

**ತನ್ನ ಮಕ್ಕಳ ಕುಂದ ತಾನೆ ಪೇಳುವುದಕ್ಕೆ**
**ಮನ್ನದಿ ನಾಚಿ ಮಹಲಕ್ಷ್ಮಿ।**
**ತನ್ನಾಮದಿಂದಲಿ ಕರೆಯದೆ ಒಬ್ಬೊಬ್ಬರ**
**ಉನ್ನಂತ ದೋಷಗಳನೆಣಿಸಿದಳು ॥**

ತನ್ನ ಮಕ್ಕಳ ದೋಷಗಳನ್ನು ತಾನೇ ಹೇಳುವುದಕ್ಕೆ ಮನಸ್ಸಿನೊಳಗೆ ನಾಚಿ ಮಹಾಲಕ್ಷ್ಮಿ ದೇವತೆಗಳನ್ನು ಅವರವರ ಹೆಸರಿನಿಂದ ಕರೆಯದೆಯೆ ಪ್ರತಿಯೊಬ್ಬರ ಉನ್ನತವಾದ ದೋಷಗಳನ್ನು ಎಣಿಸಿದಳು

ಸ್ವಯಂವರ ಕನ್ನೆಯಾಗಿ ಬಂದ ಮಹಾಲಕ್ಷ್ಮಿ ತನಗೆ ಯಾರು ಪತಿಯಾಗಬಹುದೆಂದು ಯೋಚಿಸುವ ನಟನೆ ಮಾಡುತ್ತಿದ್ದಾಳೆ ದೇವತೆಗಳೆಲ್ಲರಲ್ಲಿಯೂ ದೋಷಗಳು ಆಕೆಗೆ ಕಂಡು ಬರುತ್ತಿವೆ. ಶ್ರೀಹರಿಯಲ್ಲಿ ಮಾತ್ರ ಯಾವ ದೋಷವು ಕಂಡುಬರುವುದಿಲ್ಲ

ದೇವತೆಗಳಲ್ಲಿರುವ ದೋಷಗಳನ್ನು ಆಕೆ ಎಣಿಸಿದ ರೀತಿ ನೋಡಿದರೆ ಮನಸ್ಸಿನಲ್ಲಿ ನಾಚಿದಂತೆ ಕಾಣುತ್ತದೆ. ಏಕೆಂದರೆ ಪ್ರತಿಯೊಬ್ಬರ ದೋಷಗಳನ್ನು ಎಣಿಸುತ್ತಿದ್ದರೂ ಹೆಸರು ಹಿಡಿದು ಯಾರನ್ನೂ ಯೋಚಿಸುತ್ತಿಲ್ಲ. 'ಕಾಮ ನಿರ್ಜಿತನೊಬ್ಬ, ಕಾಮಿನಿಗೆ ಸೋತನೊಬ್ಬ . ಕೆಲವರು ತಲೆಯೂರಿ ತಪಗೈದು ಪುಣ್ಯವ ಗಳಿಸಿದರೇನು ಫಲವಿಲ್ಲ ...' ಇತ್ಯಾದಿ ರೀತಿಯಿಂದ 'ಒಬ್ಬ' 'ಕೆಲವರು' ಎಂದು ಮುಂತಾಗಿ ನಿರ್ದೇಶಿಸುತ್ತಿದ್ದಾಳೆಯೆ ಹೊರತು ಬ್ರಹ್ಮ ರುದ್ರ ಎಂದು ಮುಂತಾಗಿ ಹೆಸರು ಹಿಡಿದು ನಿರ್ದೇಶಿಸುವುದಿಲ್ಲ. ಇದಕ್ಕೆ ಕಾರಣ, ದೇವತೆಗಳು

ಆಕೆಯ ಮಕ್ಕಳು ಸ್ಕಂದಪುರಾಣದಲ್ಲಿ ಸಮುದ್ರರಾಜನಿಗೆ ಬ್ರಹ್ಮ ಹೇಳುತ್ತಾನೆ– 'ನಿನ್ನ ಮಗಳು ನನಗೂ ಶಿವನಿಗೂ ಎಲ್ಲ ದೇವತೆಗಳಿಗೂ ಎಲ್ಲ ಲೋಕಕ್ಕೂ ತಾಯಿ.' ಮಕ್ಕಳ ದೋಷವನ್ನು ಹೇಳಲು ತಾಯಿಗೆ ಸಂಕೋಚವಾಗುವುದು ಸ್ವಾಭಾವಿಕ. ಆದ್ದರಿಂದ ನಾಚಿ, ದೇವತೆಗಳನ್ನು ಒಬ್ಬ, ಇನ್ನೊಬ್ಬ, ಕೆಲವರು ಎಂದು ಮುಂತಾಗಿ ಮನಸ್ಸಿಗೆ ತಂದುಕೊಂಡು ಅವರ ದೋಷಗಳನ್ನು ಮನಸ್ಸಿನಲ್ಲಿಯೇ ಚಿಂತಿಸಿದಳು.

ಸ್ವಯಂವರದಲ್ಲಿ ಅಭ್ಯರ್ಥಿಗಳಾಗಿ ಬಂದವರ ಪರಿಚಯ, ಗುಣದೋಷಗಳ ಬಗ್ಗೆ ಸಖಿಯರು ಕನ್ಯೆಗೆ ಹೇಳುವುದು ಪದ್ಧತಿ. ಆದರೆ ರುಕ್ಮಿಣೀಸ್ವಯಂವರವು ದ್ವಾರಕೆಯಲ್ಲಿ ನಡೆದಾಗ ಆಕೆಗೆ ತನ್ನ ಬುದ್ಧಿಯೇ ಸಖಿಯಂತೆ ವರ್ತಿಸಿತೆಂದು ರುಕ್ಮಿಣೀಶ ವಿಜಯದಲ್ಲಿ ಹೇಳಿದೆ–

'ವಿವೇಕಸಖ್ಯೇತಿ ವಿಬೋಧಿತಾ ಸಾ ಬಭೂವ ತೂಷ್ಣೀಂ ಕಮಲಾತ್ತಮಾಲಾ'

ರುಕ್ಮಿಣಿಯೊಬ್ಬಳನ್ನೇ ಕುಂಡಿನಪುರದಿಂದ ಎತ್ತಿ ತಂದಿದ್ದ ಶ್ರೀಕೃಷ್ಣ. ದ್ವಾರಕೆಯಲ್ಲಿ ವಿಧಿವತ್ತಾಗಿ ವಿವಾಹ ನಡೆಯಿತು. ಆಗ ಬ್ರಹ್ಮ ರುದ್ರಾದಿಗಳೂ ಆ ವಿವಾಹಕ್ಕೆ ಬಂದಿದ್ದರಂತೆ. ಎಲ್ಲರಿಗಿಂತ ಶ್ರೀಕೃಷ್ಣನೇ ಉತ್ತಮನೆಂದು ಬುದ್ಧಿವಿವೇಕದಿಂದ ರುಕ್ಮಿಣಿ ಆಲೋಚಿಸಿ ಅವನ ಕೊರಳಿಗೆ ಮಾಲೆ ಹಾಕಿದ್ದಳು. ಪ್ರಕೃತವಲ್ಲಿಯೂ ಮಹಾಲಕ್ಷ್ಮಿಗೆ ಬುದ್ಧಿಯೇ ಸಖಿ. ತನ್ನ ಮನಸ್ಸಿನಲ್ಲಿ ತಾನೇ ಆಲೋಚಿಸಿ ಹರಿಯನ್ನು ವರಿಸಿದಳು

ದೇವತೆಗಳು ಕನ್ಯಾರ್ಥಿಗಳಂತೆ ಸಭೆಯಲ್ಲಿ ಕುಳಿತಿದ್ದಾರೆ. ಆದರೆ ಅವರೆಲ್ಲ ದೇವಿಗೆ ಮಕ್ಕಳು. ಮಕ್ಕಳೆ ಆದರೂ ಈ ನಾಟಕದಲ್ಲಿ ಅವರ ದೋಷಗಳನ್ನು ಹೇಳಿ ಅವರಾರೂ ತನಗೆ ಪತಿಗಳಾಗಲು ಯೋಗ್ಯರಲ್ಲವೆಂದು ಲೋಕಕ್ಕೆ ತಿಳಿಸಬೇಕಾಗಿದೆ. ಬಲು ಇಕ್ಕಟ್ಟಿನ ಪರಿಸ್ಥಿತಿ. ಮಕ್ಕಳ ದೋಷವನ್ನು ತಾಯಿಯಾದವಳು ಹೇಳಬೇಕಾಗಿದೆ. ಹೆತ್ತ ತಾಯಿಗೆ ಹೆಗ್ಗಣವೂ ಮುದ್ದಾಗಿರುವಾಗ ದೇವತೆಗಳಂಥ ಪುತ್ರರತ್ನಗಳಲ್ಲಿ ದೋಷ ಹೇಳಬೇಕೆಂದರೆ ಯಾವ ತಾಯಿ ನಿಃಸಂಕೋಚವಾಗಿ ಪ್ರವರ್ತಿಸಿಯಾಳು ?

ಸರ್ವಯೋನಿಷು ಕೌಂತೇಯ ಮೂರ್ತಯಃ ಸಂಭವಂತಿ ಯಾಃ ।
ತಾಸಾಂ ಬ್ರಹ್ಮ ಮಹದ್ಯೋನಿರಹಂ ಬೀಜಪ್ರದಃ ಪಿತಾ ॥

'ಅರ್ಜುನ, ಆದಿ ಸೃಷ್ಟಿಯಲ್ಲಿ ಮಾತ್ರವಲ್ಲ, ದೇವ, ಮನುಷ್ಯ, ಪಶು, ಪಕ್ಷ್ಯಾದಿ ಎಲ್ಲ ಯೋನಿಗಳಲ್ಲಿ ಪ್ರಾಣಿಗಳು ಹುಟ್ಟುವಾಗಲೂ ಅವುಗಳಿಗೆ ಲಕ್ಷ್ಮೀದೇವಿ ಕ್ಷೇತ್ರ ರೂಪಳು, ತಾಯಿ. ನಾನು ಬೀಜಪ್ರದನು ತಂದೆ. ಇದು ಶ್ರೀಕೃಷ್ಣನು ಹೇಳಿದ

ಮಾತು. ಲೋಕದಲ್ಲಿ ತಂದೆ ತಾಯಿಗಳೆನಿಸಿದವರಲ್ಲಿದ್ದು ಸಂತತಿಯನ್ನು ಉಂಟು ಮಾಡುವವರು ವಸ್ತುತಃ ಲೋಕದ ತಂದೆ ತಾಯಿಗಳಾದ ಶ್ರೀಹರಿ ಮತ್ತು ಲಕ್ಷ್ಮೀದೇವಿಯರು. ಗರ್ಭಾಧಾನ ಕಾಲದಲ್ಲಿ ದಂಪತಿಗಳಿಗೆ ಈ ಅನುಸಂಧಾನವನ್ನು ಶಾಸ್ತ್ರವು ವಿಧಿಸಿದೆ. ಇಂಥ ಜಗನ್ಮಾತೆ ಮಹಾಲಕ್ಷ್ಮಿ.

ಇಂದಿರಾ ಲೋಕಮಾತಾ ಮಾ ರಮಾ ಮಂಗಳದೇವತಾ ।
ಭಾರ್ಗವೀ ಲೋಕಜನನೀ ಕ್ಷೀರಸಾಗರಕನ್ಯಕಾ ॥

ಎಂದು ಅಮರಕೋಶವೂ ಮಹಾಲಕ್ಷ್ಮಿಯನ್ನು 'ಲೋಕಮಾತೆ' 'ಲೋಕಜನನೀ' ಎನ್ನುತ್ತಿದೆ

ಲೋಕಕ್ಕೇ ಜನನಿ, ದೇವಿ. ಆದರೆ ಮಕ್ಕಳೆಂಬ ಅಕ್ಕರೆ ಇರುವುದು ದೇವತೆಗಳಲ್ಲಿ ಮಾತ್ರ. ಏಕೆಂದರೆ ಸದ್ಗುಣಗಳ ಸಾಕಾರ ಮೂರ್ತಿಗಳು ಅವರು. ಅಂಥವರಲ್ಲಿ ದೋಷಗಳನ್ನು ಎಣಿಸುವುದೆಂದರೆ ದೇವಿಗೆ ಸಂಕೋಚವಾಗುವುದು ಸ್ವಾಭಾವಿಕ. ಆದ್ದರಿಂದಲೂ ನಾಚುತ್ತಿದ್ದಾಳೆ.

ಈ ದೇವತೆಗಳಲ್ಲಿರುವ ದೊಡ್ಡಗುಣ ವಿಷ್ಣುಭಕ್ತಿ ಎಲ್ಲ ಗುಣಗಳೂ ಈ ಮಹಾಗುಣದ ಹಿಂದೆ ಅವು ಇರುವುದೂ ಈ ಒಂದು ಗುಣಕ್ಕಾಗಿ. ಆದ್ದರಿಂದ ಮಹಾವಿಷ್ಣುಭಕ್ತರಾದ ದೇವತೆಗಳಲ್ಲಿ ದೋಷಗಳನ್ನೆಣಿಸಲು ಸಂಕೋಚ 'ಬಾಂಧವಾ ವಿಷ್ಣುಭಕ್ತಾಶ್ಚ' ಎಂಬಂತೆ ವಿಷ್ಣುಭಕ್ತಿಯೊಂದೆ ಬಂಧುತ್ವಕ್ಕೆ ಕಾರಣವಾಗಬಹುದು. ಇದರ ಮೇಲೆ ವಸ್ತುತಃ ಮಕ್ಕಳು ಎಂದ ಮೇಲೆ ಎಂಥ ಬಂಧುಸ್ನೇಹ, ವಾತ್ಸಲ್ಯವಿರಬಹುದು, ದೇವಿಗೆ ಈ ದೇವರುಗಳಲ್ಲಿ? ಇದನ್ನೇ ವಾದಿರಾಜರು–

ಬ್ರಹ್ಮಾದೀನಾಂ ಸರ್ವೇಷಾಂ ಸ್ವಸಂತಾನತ್ವಾತ್ ವಿಷ್ಣುಭಕ್ತತ್ವಾಚ್ಚ
ತೇಷು ವಾತ್ಸಲ್ಯವತೀ ತತ್ತದ್ದೋಷೋದ್ಘಾಟನ ಸಮಯೇ
ವಿಶಿಷ್ಯ ನ ತನ್ನಾಮ ಜಗ್ರಾಹ ।

ಎಂದು ಉಪನ್ಯಾಸ ರತ್ನಮಾಲೆಯಲ್ಲಿಯೂ ಹೇಳಿದ್ದಾರೆ.

ಅಲ್ಪಮಾನವನು ತನ್ನ ದೋಷವನ್ನು ಹೇಳಲು ನಾಚುತ್ತಾನೆ. ಪರರಲ್ಲಿ ದೋಷ ಇರಲಿ ಇಲ್ಲದಿರಲಿ, ಉಂಟೆಂದು ನಿಃಸಂಕೋಚವಾಗಿ ಹೇಳುತ್ತಾನೆ ಮಹಾತ್ಮರು ತಮ್ಮಲ್ಲಿ ಗುಣಗಳಿದ್ದರೂ ಹೇಳಲು ಸಂಕೋಚಪಡುತ್ತಾರೆ ಪರರಲ್ಲಿ ದೋಷವಿದ್ದರೂ ಹೇಳಲು ಇಷ್ಟಪಡುವುದಿಲ್ಲ ಪರರಲ್ಲಿ ಅತ್ಯಲ್ಪ ಗುಣಗಳನ್ನು ಕಂಡೂ ಆನಂದಿಸುವುದು ಅವರ ಸ್ವಭಾವ.

ಪರಗುಣ ಪರಮಾಣೂನ್ ಪರ್ವತೀಕೃತ್ಯ ನಿತ್ಯಂ
ನಿಜಹೃದಿ ವಿಕಸಂತಃ ಸಂತಿ ಸಂತಃ ಕಿಯಂತಃ?

–ಎಂದು ಭರ್ತೃಹರಿ ಹೇಳಿದ್ದಾನೆ.

ದೋಷಗಳನ್ನು ಹೇಳುವುದೆಂದರೂ, ಬಯ್ಯುವುದೆಂದರೂ ಒಂದೇ ಅರ್ಥ ಪ್ರೀತಿಯ ಬಂಧುಗಳನ್ನು ಬೈಯುವಾಗ ಅದರ ರೀತಿ ಬಲು ಸೌಮ್ಯವಾಗಿರುತ್ತದೆ. ಹೆಸರು ಹಿಡಿದು ಬಯ್ಯುವುದು ಸ್ವಲ್ಪ ಹೆಚ್ಚಾಗುತ್ತದೆ. ಆದ್ದರಿಂದಲೂ ಹೆಸರು ಹೇಳಿಲ್ಲ

ವಸ್ತುತಃ ಇಲ್ಲಿ ದೋಷಗಳನ್ನೆಣಿಸುವುದು ಬಯ್ಯುವ ದೃಷ್ಟಿಯಿಂದಲ್ಲ. 'ದೇವತೆಗಳೆ ಜ್ಞಾನ ಆನಂದ ಬಲ ಮುಂತಾದ ಸದ್ಗುಣ ಮೂರ್ತಿಗಳು. ಅವರಿಗಿಂತಲೂ ಶ್ರೀಹರಿ ದೊಡ್ಡವನು' ಎಂದು ದೇವತಾ ತಾರತಮ್ಯವನ್ನು, ಅವಶ್ಯ ಬೇಕಾದ ಗೋಪ್ಯವಾದ ಇಂಥ ಅಧ್ಯಾತ್ಮ ತತ್ವ ರಹಸ್ಯ ಒಂದನ್ನು ರಹಸ್ಯವಾಗಿಯೇ ತಿಳಿಸಬೇಕು. ಅಧ್ಯಾತ್ಮ ಜ್ಞಾನವನ್ನೇ ಒಲ್ಲದ ಬೇರೆ ಜನರೆದುರಿಗೆ ಅದನ್ನು ಹೇಳಕೂಡದು ಅವರಿಗೆ ತಿಳಿಯುವ ಶಕ್ತಿಯೂ ಇಲ್ಲ ರುಚಿಸುವುದೂ ಇಲ್ಲ.

'ಓಂ ಅನಾವಿಷ್ಕುರ್ವನ್ ಅನ್ವಯಾತ್ ಓಂ'

ಎಂಬ ಬ್ರಹ್ಮಸೂತ್ರ ಹೀಗೆಯೇ ಹೇಳುತ್ತದೆ. ಸರ್ವ ಸಾಮಾನ್ಯವಾದ ಧರ್ಮವನ್ನು ಮಾತ್ರ ಬಹಿರಂಗವಾಗಿ ಹೇಳಿದರೂ ತಪ್ಪಿಲ್ಲ ಆದ್ದರಿಂದ ತಾರತಮ್ಯ, ವಿಷ್ಣು ಸರ್ವೋತ್ತಮತ್ವ ರೂಪವಾದ ಅಮೂಲ್ಯ ವೇದಾಂತ ರಹಸ್ಯವನ್ನು ಅದೇ ಸ್ವಯಂವರ ಸಭೆಯಲ್ಲಿ ಕುಳಿತ ದೈತ್ಯರ ಮುಂದೆ ಪ್ರಕಟಿಸಲು ದೇವಿಗೆ ಸಂಕೋಚ. ಅದರಿಂದ ನಾಚಿದ್ದಾಳೆ.

ದೇವಿಗೆ ಮಕ್ಕಳಿದ್ದಾರೆ. ಒಂದಲ್ಲ ಎರಡಲ್ಲ, ಅನಂತ ಜೀವರಾಶಿಗಳು ಅವಳ ಮಕ್ಕಳು ಮಕ್ಕಳಾದ ಮೇಲೂ ಓರ್ವ ಹೆಂಗಸು ಮದುವೆಯಾಗುತ್ತಿದ್ದಾಳೆ ಎಂದರೆ ಲೋಕ ದೃಷ್ಟಿಯಿಂದ ನಾಚಿಕೆಗೇಡು. ದೇವಿ ನಿತ್ಯತರುಣಿ. ಮಂಗಳದೇವತೆಯಾದ್ದರಿಂದ ನಿತ್ಯ ವಿವಾಹ ಮಂಗಳ ಅವಳಿಗಿದೆ. ಅವರ ದಾಂಪತ್ಯ ಚಿರನೂತನ ಎಂದೆಲ್ಲ ವಾಸ್ತವ ವಿಚಾರವಾಯಿತು. ತೋರಿಕೆಗಾದರೂ ನಾಚಿಕೆ ನಟಿಸಬೇಡವೆ ?

ಕನ್ಯಾವರೌ ಚಕ್ರತುರರ್ಘಕಾಮೌ ಅನ್ಯೇದ್ಯುರರ್ಚಾಂ ಪಿತೃದೇವತಾನಾಂ ।
ಮನ್ಯೇಽಹಮನ್ಯೋನ್ಯಮಭೂತ್ತದಗ್ರೇ ಜೀರ್ಣೋತ್ಸವೌ
ಸಂಪ್ರತಿ ಜಾತಲಜ್ಜೌ ॥

ಎಂದು ರುಕ್ಮಿಣೀಶ ವಿಜಯುದಲ್ಲಿ ಹೇಳಿದೆ. ರುಕ್ಮಿಣೀ ಕೃಷ್ಣರಿಗೆ ವಿವಾಹ ಕಾಲದಲ್ಲಿ ಆದರ ವಿಧಿವಿಧಾನಗಳನ್ನು ನಡೆಸಿಕೊಳ್ಳುವಾಗ ಇವು ಎಲ್ಲವೂ ಹಿಂದೆ ನಡೆದಿರುವುದೇ ಎಂದು ಲಜ್ಜೆಯಾಯಿತಂತೆ. ಹಾಗೆಯೇ ಮಹಾಲಕ್ಷ್ಮಿಗೆ, ತಾನು ನಿತ್ಯ ಮುತ್ತೈದೆ ಎಂದು ಪ್ರಸಿದ್ಧಳಾದವಳು. ಈಗ ಮದುವೆಗೆ ನಿಂತಿದ್ದೇನೆ. ಅದರಲ್ಲೂ ಇಷ್ಟು ಮಂದಿ ಮಕ್ಕಳೆದುರಿಗೆ, ಅವರ ದೋಷಗಳನ್ನು ಹೇಳುತ್ತ ಸ್ವಯಂವರದ ನೆಪದಲ್ಲಿ ಮದುವೆಯಾಗುತ್ತಿದ್ದೇನೆ ಎಂಬ ಸಂಕೋಚದಿಂದ ನಾಚಿದ್ದಾಳೆ.

ಅಥವಾ 'ತನ್ನ ಮಕ್ಕಳ ಕುಂದ ತಾನೇ ಪೇಳುವುದಕ್ಕೆ ಮನದಿ ನಾಚಿದಳೆಂದು ಹೇಳುವುದರ ಬದಲಿಗೆ 'ತನ್ನ ಮಕ್ಕಳ ಕುಂದ ತಾನೆ ಪೇಳುವುದಕ್ಕೆ ' ಮನದಿ ನಾಚಿ ಮಹಾಲಕ್ಷ್ಮಿ ತನ್ನಾಮದಿಂದಲಿ ಕರೆಯದೆ ಒಬ್ಬೊಬ್ಬರ, ಉನ್ನತ ದೋಷಗಳೆಣಿಸಿದಳು, ಅಂದರೆ ತನ್ನ ಮಕ್ಕಳ ಕುಂದ ತಾನೇ ಹೇಳಬೇಕು. ಅದಕ್ಕಾಗಿ ಉನ್ನತ ದೋಷಗಳನ್ನೆಣಿಸಿದಳು. ಆ ಸಮಯದಲ್ಲಿ ಒಬ್ಬೊಬ್ಬರನ್ನು ತನ್ನಾಮದಿಂದಲಿ ಕರೆಯುಲಿಲ್ಲ. ಏಕೆಂದರೆ ಮಹಾಲಕ್ಷ್ಮಿ ಮನದಿ ನಾಚಿದಳು. ದೇವತೆಗಳ ಹೆಸರು ಹೇಳಲು ನಾಚಿದಳು, ಅವರ ದೋಷಗಳನ್ನು ಎಣಿಸಲು ಅಲ್ಲ. ದೇವತೆಗಳ ಹೆಸರು ವಸ್ತುತಃ ತನ್ನ ಪತಿಯಾದ ನಾರಾಯಣನ ಹೆಸರು ಅವರಿಗೆ ನಾರಾಯಣನ ಹೆಸರನ್ನೇ ವ್ಯವಹಾರಕ್ಕಾಗಿ ಇಡಲಾಗಿದೆಯಷ್ಟೇ. ಆದ್ದರಿಂದ ಹೆಸರು ಹೇಳಲು ನಾಚಿದಳು. ದೋಷಗಳನ್ನು ಮಾತ್ರ ತಾನೆ ಹೇಳಬೇಕಾಗಿದೆ. ತಾಯಿಗೆ ಮಕ್ಕಳ ಗುಣದೋಷಗಳು ತಿಳಿಯುವಷ್ಟು ಇನ್ನೊಬ್ಬರಿಗೆ ತಿಳಿಯುವ ಸಂಭವವಿರುವುದಿಲ್ಲ. ಆದರಲ್ಲಿಯೂ ದೋಷಗಳ ಮಟ್ಟಿಗೆ ತಾಯಿ ಹೇಳಿದ ಮಾತಿನಲ್ಲಿ ವಿಶ್ವಾಸವಿಡಬಹುದು. ಗುಣಗಳ ಮಟ್ಟಿಗೆ ಮಾತ್ರ ಹೆತ್ತ ತಾಯಿಗೆ ಹೆಗ್ಗಣವೂ ಮುದ್ದಾಗುವ ಸಂಭವವಿರುವುದರಿಂದ ನಂಬುವುದು ಕಷ್ಟ. ಆದ್ದರಿಂದ ತನ್ನ ಮಕ್ಕಳ ಕುಂದ ತಾನೆ ಪೇಳಬೇಕು. ಆದರೆ ಅವರ ಹೆಸರು ಗಂಡನ ಹೆಸರೇ ಆಗಿರುವುದರಿಂದ ಅದನ್ನು ಹೇಳಬಾರದು.

'ನಾಮಾನಿ ಸರ್ವಾಣಿ ಯಮಾವಿಶಂತಿ
ತಂ ವೈ ವಿಷ್ಣುಂ ಪರಮಮುದಾಹರಂತಿ ।'

ಎಂದು ಶ್ರುತಿ ಹೇಳಿದೆ. ಶ್ರುತಿಗಳಿಗೆ ಅಭಿಮಾನಿನಿ ಅವಳೆ ಆದುದರಿಂದ ಅವಳೇ ಹೇಳಿದ ಮಾತು ಇದು. ಗಂಡನ ಹೆಸರು ಹೇಳುವಾಗ ನಾಚುವುದು ಹೆಣ್ಣಿಗೆ ಸ್ವಭಾವ ಭೂತವಾದುದು. ಭೂಷಣವೂ ಹೌದು.

ಅಂಭೃಣಿ ಸೂಕ್ತದಲ್ಲಿ ದೇವಿ 'ಮಮ ಯೋನಿರಪ್ಸು ಅಂತಃ ಸಮುದ್ರೇ' ನನ್ನೆಲ್ಲ ಪ್ರವೃತ್ತಿಗೂ ಕಾರಣನಾದವನು ಸಮುದ್ರಶಾಯಿ ಶ್ರೀಹರಿ ಎಂದು

ಹೇಳುವಾಗ 'ಅಪ್ಸ್ವಂತಃ' ಎನ್ನುವುದರ ಬದಲು ಲಜ್ಜೆಯಿಂದ 'ಅಪ್ಸು ಅಂತಃ' ಎಂದು ಕಂಪ ಹೊಂದಿದ್ದಾಳೆ

ದೇವಿಯು ನಾಚಿಕೆಗೆ ಕಾರಣ ಯಾವುದೇ ಇರಲಿ, ಅದರಿಂದ ದೇವತೆಗಳ ಹೆಸರನ್ನು ಹೇಳದೆ ಅವರ ದೋಷಗಳನ್ನು ಮಾತ್ರ ಹೇಳಿದ್ದಾಳೆ ದೇವಿ.

ನೂನಂ ತಪೋ ಯತ್ರ ನ ಮನ್ಯುನಿರ್ಜಯೋ
ಜ್ಞಾನಂ ಕ್ವಚಿತ್ ತಚ್ಚ ನ ಸಂಗವರ್ಜಿತಂ ।
ಕಶ್ಚಿನ್ ಮಹಾನ್ ತಸ್ಯ ನ ಕಾಮನಿರ್ಜಯಃ
ಸ ಈಶ್ವರಃ ಕಿಂ ಪರತೋವ್ಯಪಾಶ್ರಯಃ ॥ ೧ ॥

ಧರ್ಮಃ ಕ್ವಚಿತ್ ತತ್ರ ನ ಭೂತಸೌಹೃದಂ
ತ್ಯಾಗಃ ಕ್ವಚಿತ್ ತಚ್ಚ ನ ಮುಕ್ತಿಕಾರಣಂ ।
ವೀರ್ಯಂ ನ ಪುಂಸೋಽಸ್ತ್ಯಜವೇಗನಿಷ್ಕೃತಂ
ನ ಹಿ ದ್ವಿತೀಯೋ ಗುಣಸಂಗವರ್ಜಿತಃ ॥ ೨ ॥

ಕ್ವಚಿಚ್ಚಿರಾಯುರ್ನಹಿ ಶೀಲಮಂಗಲಂ
ಕ್ವಚಿತ್ತದಪ್ಯಸ್ತಿ ನ ವೇದ್ಯಮಾಯುಷಃ ।
ಯತ್ರೋಭಯಂ ಕುತ್ರ ಚ ಸೋಽಪ್ಯಮಂಗಲಃ
ಸುಮಂಗಲಃ ಕಶ್ಚನ ಕಾಂಕ್ಷತೇ ಹಿ ಮಾಂ ॥ ೩ ॥

ಭಾಗವತದ ಮೇಲಿನ ಮೂರು ಶ್ಲೋಕಗಳಲ್ಲಿ ಮೂವತ್ತಮೂರು ಕೋಟಿ ದೇವತೆಗಳ ಕುಂದುಗಳನ್ನೆಣಿಸಿದ್ದಾಳೆ ದೇವಿ ಯಾರ ಹೆಸರನ್ನೂ ಹೇಳಿಲ್ಲ. ಸಂಕ್ಷೇಪಕ್ಕಾಗಿ ಎನ್ನುವ ಮಾತು ಬೇರೆ ಕವಿಚಕ್ರವರ್ತಿ ವೇದವ್ಯಾಸರು ದೇವಿಯು ಈ ಕೋಮಲವಾದ ಲಜ್ಜಾ ಮನೋಭಾವವನ್ನು 'ಕಶ್ಚಿತ್' 'ಕಶ್ಚನ' 'ಕ್ವಚಿತ್' ಎಂಬ ಶಬ್ದ ಪ್ರಯೋಗದಲ್ಲಿ ಹುದುಗಿಸಿರುವುದು ಸಹೃದಯ ಚಕ್ರವರ್ತಿಗಳಾದ ವಾದಿರಾಜರಿಗೆ ಕಂಡು ಬಂದಿತು. ಆಶ್ಚರ್ಯವೆಂದರೆ ಯಾವ ವ್ಯಾಖ್ಯಾನಕಾರರೂ ಈ ವಿಷಯವನ್ನು ಎತ್ತಿ ಚರ್ಚಿಸಿಲ್ಲ. ವಾದಿರಾಜರು ತಮ್ಮ ಉಪನ್ಯಾಸರತ್ನಮಾಲೆಯಲ್ಲಿಯೂ ಲಕ್ಷ್ಮೀ ಶೋಭನ ಪದದಲ್ಲಿಯೂ ಸ್ಪಷ್ಟಪಡಿಸಿದ್ದಾರೆ ಲಕ್ಷ್ಮೀಶೋಭನದ ಮುಂದಿನ ನುಡಿಗಳಲ್ಲೆಲ್ಲ ಭಾಗವತದ ಮೇಲಿನ ಮೂರು ಶ್ಲೋಕಗಳ ಸುಂದರ ವ್ಯಾಖ್ಯಾನವಿದೆ ಸುಂದರ ಮಾತ್ರವಲ್ಲ, ಅಪೂರ್ವ. ಯಾವ ವ್ಯಾಖ್ಯಾನಕಾರರೂ ಹೇಳದಿರುವಂಥಹುದು.

**ಕೆಲವರು ತಲೆಯೂರಿ ತಪಗೈದು ಪುಣ್ಯವ**
**ಗಳಿಸಿದ್ದರೇನೂ ಫಲವಿಲ್ಲ ।**
**ಜ್ವಲಿಸುವ ಕೋಪದಿ ಶಾಪವ ಕೊಡುವರು**
**ಲಲನೆಯನಿವರು ಒಲಿಸುವರೆ ॥**

ಲಕ್ಷ್ಮೀಸ್ವಯಂವರದ ಸಭೆ. ವಧುವು ವರ ಪರೀಕ್ಷೆಗೆ ಆರಂಭಸಿದ್ದಾಳೆ ದೇವತೆಗಳ ಮತ್ತು ಋಷಿಗಳ ದೋಷಗಳನ್ನು ಒಂದೊಂದಾಗಿ ಹೇಳತೊಡಗಿದ್ದಾಳೆ ಭಾಗವತದಲ್ಲಿ ಬರುವ,

'ನೂನಂ ತಪೋ ಯಸ್ಯ ನ ಮನ್ಯು ನಿರ್ಜಯಃ'

'ತಪಸ್ಸು ಮಾಡಿದವರೆ ಕೋಪವನ್ನು ಗೆದ್ದಿಲ್ಲ' ಎಂಬ ಮಾತಿಗೆ ಮೇಲಿನ ನುಡಿಯು ಭಾಷ್ಯವಾಗಿದೆ

ಮದುವೆಯಾಗಲಿರುವ ಹೆಣ್ಣು "ಒಲ್ಲೆ ನಾ ವೈದಿಕ ಗಂಡನ" ಎನ್ನುವುದೇ ಸ್ವಾಭಾವಿಕ ಆದ್ದರಿಂದ ಸ್ವಯಂವರ ಸಭೆಯಲ್ಲಿ ಋಷಿಮುನಿಗಳನ್ನು ಪರೀಕ್ಷಿಸುವುದು ಅನಾವಶ್ಯಕವೆನಿಸಬಹುದು ಆದರೆ ವಸ್ತುಸ್ಥಿತಿ ಬೇರೆ.

ಸರಸ್ವತೀ ತೀರದಲ್ಲಿ ಹತ್ತು ಸಾವಿರ ವರ್ಷಗಳ ಕಾಲ ಘೋರ ತಪಸ್ಸು ಮಾಡಿದ ಮಹಾಮುನಿ ಕರ್ದಮ. ಅವನ ಜಟೆ, ಗಡ್ಡ ಬೆಳ್ಳಗಾಗಿತ್ತು ನಡು ಬಾಗಿತ್ತು. ಮುಪ್ಪು ಬಲವಾಗಿ ಅಂಟಿಕೊಂಡು ಅಂಗಾಂಗಗಳಲ್ಲಿ ವ್ಯಾಪಿಸಿತ್ತು. ಜೀವನದ ಸಂಧ್ಯಾಕಾಲವೆನ್ನಬಹುದು. ಆದರೂ ಮದುವೆಯ ಹಂಬಲ. ಒಂದು ದಿನ ಭಗವಂತನ ಅನುಗ್ರಹವಾಯಿತು. ಸ್ವಾಯಂಭುವ ಮನುವು ಆಶ್ರಮಕ್ಕೆ ಬಂದ, ಬರುವಾಗ ಬಂಗಾರದ ರಥದಲ್ಲಿ ಬಂಗಾರದಂಥ ಮಗಳು ದೇವಹೂತಿಯನ್ನು ಜೊತೆಗೆ ಕರೆತಂದಿದ್ದ ಒಮ್ಮೆ ಅರಮನೆಯ ಮಾಳಿಗೆಯಲ್ಲಿ ಚೆಂಡಾಟವಾಡುತ್ತಿದ್ದ ಈಕೆಯನ್ನು ಕಂಡು ಮೇಲೆ ಗಗನದಲ್ಲಿ ಸಂಚರಿಸುತ್ತಿದ್ದ ವಿಶ್ವಾವಸು ಗಂಧರ್ವ ಮೋಹಮೂರ್ಛಿತನಾಗಿ ಬಿದ್ದನಂತೆ ಅಂಥ ರೂಪಸಿಯನ್ನು ಮನುವು ಮುನಿಗೆ ಧಾರೆಯೆರೆದುಕೊಟ್ಟ ಕೃತಾರ್ಥನಾದೆನೆಂದುಕೊಂಡು ಹೊರಟು ಹೋದ ಇತ್ತ ಈಕೆ ಪತಿಸೇವೆ ಮಾಡಿ, ಮಾಡಿ, ಸೊರಗಿ ಕಡ್ಡಿಯಾದಳು. ಆದರೆ ಒಂದು ದಿನ ....

ಎಲೆಮನೆಯ ಸ್ಥಳದಲ್ಲಿ ಅರಮನೆ ಮೈದೋರಿತು. ರಮ್ಯವಾದ ಉಪವನ ನಿರ್ಮಲ ಸರೋವರ ಅರಳಿದ ತಾವರೆಯಲ್ಲಿ ದುಂಬಿಯ ಝೇಂಕಾರ. ಚಿಗುರಿದ ಮಾಮರದಲ್ಲಿ ಕೋಗಿಲೆಯ ಇಂಚರ.. ಮುನಿಯ ಹರಕು ಕೃಷ್ಣಾಜಿನ ಎಲ್ಲೋ ಮಾಯವಾಗಿತ್ತು. ಸಿರಿ ಒಲಿದಿತ್ತು ಸೌಭಾಗ್ಯ ಹರಡಿತ್ತು ಸಂತಸ ಉಕ್ಕಿತ್ತು.

ದೇವಹೂತಿ ಪತಿಯಾಜ್ಞೆಯಂತೆ ಒಂದು ಸರೋವರದಲ್ಲಿ ಮುಳುಗಿ ಎದ್ದಳು. ಎದ್ದಾಗ ಜೊತೆಗೆ ಅನೇಕ ಲಾವಣ್ಯವತಿಯರೂ ಸರೋವರದಿಂದ ಎದ್ದು ಬಂದಿದ್ದರು. ಅವರೆಲ್ಲ ಒಡತಿಯೆಂದು ಆಕೆಯನ್ನು ಸುತ್ತುವರಿದರು. ಮಂಗಳಸ್ನಾನ, ಷಡ್ರಸಾನ್ನ ಭೋಜನ, ದಿವ್ಯ ವಸ್ತ್ರಾಲಂಕಾರ ಭೂಷಣ ಎಲ್ಲವನ್ನೂ ಮಾಡಿಸಿದರು. ನಿಲುಗನ್ನಡಿಯಲ್ಲಿ ತನ್ನ ಅಂದವನ್ನೇ ಬೆರಗಾಗಿ ನೋಡುತ್ತಿದ್ದಾಳೆ ದೇವಹೂತಿ. ಬಳಿಯಲ್ಲಿ ಹದಿನಾರರ ಹರೆಯದ ನವಯುವಕನಾಗಿ ಕರ್ದಮ ಮುನಿ ನಿಂತಿದ್ದ! ಗಂಧರ್ವರನ್ನೂ ನಾಚಿಸುವ ಮೈ ಕಾಂತಿ ಅವನದು!

ಪ್ರಣಯಿಗಳ ಜೋಡಿ ವಿಮಾನವೇರಿತು. ಗಗನದಲ್ಲಿ ಸಂಚರಿಸಿತು. ನಂದನ ವನದಲ್ಲಿ ವಿಹರಿಸಿತು. ಚಂದ್ರನ ಬೆಳದಿಂಗಳಲ್ಲಿ ಆಟವಾಡಿತು ಅಮೃತಪಾನಗೈದಿತು.

ಈ ಪ್ರಣಯಾರಾಧನೆಯಲ್ಲಿ ಅವರಿಗೆ ಒಂದೊಂದೇ ರೂಪ ಸಾಲದಾಯಿತು. ಒಂಭತ್ತು ಒಂಭತ್ತು ರೂಪ ಧರಿಸಿದರು. ಅದರ ಫಲವಾಗಿ ಒಂಭತ್ತು ಹೆಣ್ಣು ಕೂಸುಗಳ ಜನನ ಶ್ರೀಹರಿಯ ಕಪಿಲಾವತಾರ ಸಂತೃಪ್ತಿಗೊಂಡ ಮುನಿ ಮಗನನ್ನು ವಂದಿಸಿ ಸನ್ಯಾಸಿಯಾಗಿ ಹೊರಟು ಹೋದ. ತಾಯಿ ಮಗನ ತತ್ವೋಪದೇಶ ಕೇಳಿ ತಪಸ್ಸಿನಿಂದ ಉತ್ತಮ ಲೋಕ ಪಡೆದಳು. ಅವಳ ಭೌತಿಕ ಶರೀರ ಕಪಿಲಾ ನದಿಯಾಗಿ ಹರಿಯಿತು ಲೋಕವನ್ನು ಪಾವನಗೊಳಿಸಿತು.

ಇದೆಲ್ಲವೂ ಅಷ್ಟೈಶ್ವರ್ಯ (ಅಣಿಮಾ, ಮಹಿಮಾ ಲಘಿಮಾ, ಪ್ರಾಪ್ತಿ, ಪ್ರಾಕಾಶ್ಯ, ಈಶಿತ್ವ, ವಶಿತ್ವ, ಪ್ರಾಕಾಮ್ಯ,)ಗಳ ಬಲ. ಅಷ್ಟಾದಶ ಸಿದ್ಧಿ (ಅನೂರ್ಮಿಮತ್ವ, ದೂರಶ್ರವಣ, ದೂರದರ್ಶನ, ಮನೋಜವ, ಕಾಮರೂಪ, ಪರಕಾಯ ಪ್ರವೇಶ, ಸ್ವಚ್ಛಂದ ಮೃತ್ಯು, ದೇವತೆಗಳ ಜೊತೆಗೆ ವಿಹಾರ, ಸಂಕಲ್ಪಸಿದ್ಧಿ, ಆಜ್ಞಾಽಪ್ರತಿಹತಿ, ತ್ರಿಕಾಲಜ್ಞಾನ, ಅದ್ವಂದ್ವ, ಪರಚಿತ್ತಾದ್ಯಭಿಜ್ಞತ್ವ, ಅಗ್ನಿಸ್ತಂಭ, ಅರ್ಕಸ್ತಂಭ, ಜಲಸ್ತಂಭ, ವಿಷಸ್ತಂಭ, ಶಸ್ತ್ರಾಸ್ತ್ರಶಾಪಾದಿ ಪ್ರತಿಸ್ತಂಭ, ಅಪರಾಜಯ)ಗಳ ಪ್ರಭಾವ, ದೇವತೆಗಳಲ್ಲಿ ಅನಾಯಾಸವಾಗಿ ಹುಟ್ಟಿನಿಂದಲೇ ಬಂದವುಗಳಿವು. ಅಸುರರಿಗೆ ವರಬಲ ಮಾನವರಿಗೆ ತಲೆಯೂರಿ ತಪಗೈದ ಪುಣ್ಯದ ಪ್ರಭಾವ ಇವುಗಳನ್ನು ಪಡೆದಾತ ಬಯಸಿದರೆ ಬುವಿಯು ಸ್ವರ್ಗವಾದೀತು. ಗುಡಿಸಲು ಅರಮನೆಯಾದೀತು. ಅಂಧವರನ್ನು ಕನ್ನೆಯಾದವಳು ವರಿಸಲು ಬಯಸಿದರೆ ಆಶ್ಚರ್ಯವೇನಿಲ್ಲ. ಆದ್ದರಿಂದಲೇ ಋಷಿಮುನಿಗಳನ್ನು ದೇವಿ ಪರೀಕ್ಷಿಸುತ್ತಾಳೆ.

ಹೀಗೆ ತೀರ್ಮಾನಿಸುತ್ತಾಳೆ– ಇವರೆಲ್ಲ ತಲೆಯೂರಿ ತಪಗೈದು ಅಷ್ಟೈಶ್ವರ್ಯ ಸಿದ್ಧಿಗಳನ್ನು ಸಂಪಾದಿಸುತ್ತಾರೆ ನಿಜ. ಆದರೆ ಹೆಣ್ಣಿನ ದೃಷ್ಟಿಯಲ್ಲಿ ಅದರಿಂದೇನೂ ಫಲವಿಲ್ಲ, ಏಕೆಂದರೆ ಜ್ವಲಿಸುವ ಕೋಪದಲ್ಲಿ ಶಾಪ ಕೊಡುತ್ತಾರೆ.

ವಸಿಷ್ಠ ವಿಶ್ವಾಮಿತ್ರರು ಇದಕ್ಕೆ ಸಾಕ್ಷಿ ಎಂದಿದ್ದಾರೆ, ವಾದಿರಾಜರು ಉಪನ್ಯಾಸ ರತ್ನಮಾಲೆಯಲ್ಲಿ

ವಸಿಷ್ಠಮುನಿ ಮಹಾ ಬಾಹುಶಾಲಿಯಾದ ವಿಶ್ವರಥ ರಾಜನ ಬಾಯಿಂದ–

'ಧಿಗ್ ಬಲಂ ಕ್ಷತ್ರಿಯಬಲಂ! ಬ್ರಹ್ಮತೇಜೋಬಲಂ ಬಲಂ!

ಎಂದು ಹೇಳಿಸಿದವರೂ, ಉಗ್ರ ಕ್ಷಾತ್ರತೇಜಸ್ವಿನ ವಿಶ್ವರಥನೂ ಧೀರ್ಘಘೋರ ತಪಸ್ಸಿನಿಂದ ಬ್ರಹ್ಮರ್ಷಿಯಾಗಿ ವಿಶ್ವಾಮಿತ್ರನೆಂದೆನಿಸಲು ಮೂಲ ಕಾರಣರಾದವರು, 'ಬ್ರಾಹ್ಮಣಾನಾಂ ಕ್ಷಮಾ ಬಲಂ' ಎನ್ನುತ್ತ ಆ ಮಾತಿಗೆ ತಾನೆ ಜ್ವಲಂತ ನಿದರ್ಶನವಾದವರು ವಿಶ್ವಾಮಿತ್ರರು ಅವರ ಆಶ್ರಮವನ್ನು ಸುಟ್ಟರು. ಸಾವಿರ ಶಿಷ್ಯರನ್ನು ಕೊಲ್ಲಿಸಿದರು ನೂರು ಗಂಡು ಮಕ್ಕಳನ್ನು ರಾಕ್ಷಸನಿಗೆ ಆಹಾರವಾಗಿತ್ತರು. ಅವರನ್ನೂ ಕೊಲ್ಲಲು ಯತ್ನಿಸಿದರು. ಆದರೆ ಅವರಿಗೆ ಪ್ರತಿಯಾಗಿ ವಸಿಷ್ಠರೇನೂ ಮಾಡಲಿಲ್ಲ. ತಾನೇ ಆತ್ಮಹತ್ಯೆಗೆ ಯತ್ನಿಸಿ ಸೋತರು ಮೇರುಶಿಖರದ ಮೇಲಿಂದ ಜಿಗಿದರು. ಸಮುದ್ರಕ್ಕೆ ಧುಮುಕಿದರು. ಬೆಂಕಿಗೆ ಹಾರಿದರು. ನದಿಯಲ್ಲಿ ಮುಳುಗಿದರು. ಯಾವುದೂ ಫಲಕಾರಿಯಾಗಲಿಲ್ಲ. ತಿರುಗಿ ಆಶ್ರಮದ ಕಡೆಗೆ ಹೆಜ್ಜೆಹಾಕಿದರು. ದುಃಖದಿಂದ ಕಣ್ಣು ಮಂಜಾಗಿತ್ತು. ಹಿಂದಿನಿಂದ ಸೊಸೆ ಅದೃಶ್ಯಂತಿ, ತುಂಬು ಗರ್ಭಿಣಿ ನಡೆದು ಬಂದುದು ತಿಳಿಯಲಿಲ್ಲ. ಆದರೆ ಗರ್ಭದಿಂದ ವೇದಘೋಷ ಕೇಳಿಸಿತು ಅದು ತನ್ನ ವಂಶದ ಕುಡಿಯಾದ ಪರಾಶರನೆಂದು ತಿಳಿದಾಗ ಮುನಿಯ ಮನಸ್ಸಿಗೆ ತಂಪಾಯಿತು. ಆದರೆ ತುಂಬಿದ ಬಸುರಿಯನ್ನು ಆಗಲೇ ವಿಶ್ವಾಮಿತ್ರನ ಕಡೆಯ ರಾಕ್ಷಸ ತಿನ್ನಲು ಹೊಂಚುಹಾಕಿದ್ದ ಅವನನ್ನು ಕಂಡು ಚೀರಿದಳು ಆಕೆ. ಆಗ ವಸಿಷ್ಠರು ರಾಕ್ಷಸನನ್ನು ಶಾಪದಿಂದ ಸುಟ್ಟು ಬೂದಿ ಮಾಡಲಿಲ್ಲ. ಕಮಂಡಲುವಿನ ಜಲದ ಅಮೃತಸೇಚನೆಯಿಂದ ಅವನ ಶಾಪ ವಿಮೋಚನೆ ಮಾಡಿದರು. ಅವನೇ ಕಲ್ಮಾಷ ಪಾದರಾಜ ಇಂಥ ಮಹಾತ್ಮ ವಸಿಷ್ಠರೇ ಒಮ್ಮೆ ಆ ಕಲ್ಮಾಷಪಾದ ರಾಜನಿಗೆ, 'ನೀನು ನರಭಕ್ಷಕನಾಗೆಂ'ದು ಶಪಿಸಿದ್ದರು. ಆ ರಾಜನು ತಿಳಿಯದೆ ನರಮಾಂಸವಡುಗೆಯನ್ನು ಅವರಿಗೆ ಊಟ ಬಡಿಸಿದನಂತೆ! ಒಂದಿಷ್ಟೂ ವಿಚಾರ ಮಾಡದೆ ಜ್ವಲಿಸುವ ಕೋಪದಿ ಶಾಪ ಕೊಟ್ಟರು, ವಸಿಷ್ಠರು.

ವಿಶ್ವಾಮಿತ್ರರಂತೂ ಪ್ರಚಂಡಕೋಪಿ. ಹತ್ತು ಸಾವಿರ ವರ್ಷ ತಪಸ್ಸು ಮಾಡಿ ಬ್ರಹ್ಮರ್ಷಿಯಾದವರು ಬ್ರಾಹ್ಮಣ ಜಾತಿಗೆ ಮೂಲವಾದ ವೇದಮಾತೆ ಗಾಯತ್ರಿಯನ್ನು ಕಂಡುಕೊಂಡು ಲೋಕಕ್ಕೆ ಅನುಗ್ರಹಿಸಿದವರು. ಇಂಥವರ ಬಾಯಿಂದ ಮಹಾತ್ಮರಾದ ವಸಿಷ್ಠರಿಗೆ ಅವರ ಕುಲಕ್ಕೆ ವೇದಮಂತ್ರ ರೂಪದ ಶಾಪ!

ಪರಶುಂ ಚಿದ್ವಿತಪತಿ ಶಿಂಬಲಂ ಚಿದ್ವಿವೃಶ್ಚತಿ ।

ಉಖಾ ಚಿದಿಂದ್ರ ಯೇಷಂತಿ ಪ್ರಯಸ್ತಾ ಫೇನಮಸ್ಯತಿ ॥

–ಋಗ್ವೇದ ೩.೫೩.೨೨

'ಕೊಡಲಿಯೇಟಿಗೆ ಮರವು ಕಡಿದುರುಳುವಂತೆ ಶತ್ರುವು ಸಾಯಲಿ. ಅವನ ದೇಹ ಛಿನ್ನಭಿನ್ನವಾಗಲಿ. ಬಾಯಲ್ಲಿ ಜೊಲ್ಲು ಸುರಿಸುತ್ತ ಅವನು ಪ್ರಾಣ ಬಿಡಲಿ.'

ಇಲ್ಲಿ ೨೧ ರಿಂದ ೨೪ರವರೆಗಿನ ನಾಲ್ಕು ಮಂತ್ರಗಳೂ ವಿಶ್ವಾಮಿತ್ರರ ಶಾಪ. ಅಭಿಶಾಪ ಮಂತ್ರಗಳೆಂದೂ, ವಸಿಷ್ಠ ವಿದ್ವೇಷಿಣೀ ಮಂತ್ರಗಳೆಂದೂ ಕರೆಯುವುದುಂಟು. ವಸಿಷ್ಠರ ಗೋತ್ರದವರು ಅವನ್ನು ಪಠಿಸುವುದಿಲ್ಲ. ಶ್ರವಣ ಮಾಡುವುದೂ ಇಲ್ಲ. ಇವುಗಳಿಗೆ ನಿರುಕ್ತ ವ್ಯಾಖ್ಯಾಕಾರರಾದ ದುರ್ಗಾಚಾರ್ಯರ ವ್ಯಾಖ್ಯಾನವಿಲ್ಲ. ತಾವು ವಸಿಷ್ಠ ಗೋತ್ರದವರಾದುದರಿಂದ ಇವುಗಳಿಗೆ ವ್ಯಾಖ್ಯಾನ ಮಾಡುವುದಿಲ್ಲ ಎಂದಿದ್ದಾರೆ ವಿಶ್ವಾಮಿತ್ರರು ವಿಶ್ವಕ್ಕೇ ಮಿತ್ರರು. ಆದರೆ ಮಹಾತ್ಮ ವಸಿಷ್ಠರಿಗೆ ಮಹಾಶತ್ರು! ಆದರೆ ಕೊನೆಗೂ ವಸಿಷ್ಠರೇ ಗೆದ್ದರು. ವಿಶ್ವಾಮಿತ್ರರು ಮಣಿದರು

ಬ್ರಹ್ಮರ್ಷಿಸ್ತ್ವಂ ನ ಸಂದೇಹಃ ಸರ್ವಂ ಸಂಪತ್ಸ್ಯತೇ ತವ ।

'ನೀನು ಬ್ರಹ್ಮರ್ಷಿಯಾದೆ. ಸಂದೇಹವಿಲ್ಲ. ನಿನಗೆ ಎಲ್ಲವೂ ಸಿದ್ಧಿಸುತ್ತವೆ'

ಎಂದು ಹೃತ್ಪೂರ್ವಕವಾಗಿ ವಿಶ್ವಾಮಿತ್ರರನ್ನು ವಸಿಷ್ಠರು ಹರಸಿದರು ಅವರ ಹಿಮಾಲಯದಂತಹ ಉನ್ನತ ವ್ಯಕ್ತಿತ್ವಕ್ಕೆ, ಅಪಾರ ಕ್ಷಮಾಗುಣಕ್ಕೆ, ವಿಶ್ವಾಮಿತ್ರರ ಕ್ರೋಧ ತಲೆ ಬಾಗಿತು. ಮಹಾತ್ಮ! ಎಂದು ಉದ್ಗರಿಸಿದರು ವಿಶ್ವಾಮಿತ್ರರು.

ಹೀಗೆ ಶೀಘ್ರಕೋಪಿಗಳಾದ ಮುನಿಗಳನ್ನು ಮುಗುದೆಯರು ವರಿಸಲು ಅಂಜುವರು. ಲಲನೆಯನಿವರು ಒಲಿಸುವರೆ?

ಋಷಿಗಳಿಗೆ ಮಾತ್ರವಲ್ಲ, ದೇವತೆಗಳಿಗೂ ಈ ದೋಷವಿದೆ. 'ಚತ್ವಾರಿಂಶದ್ಭಿಃ ಪದಂ ತ್ವೈವಂ ಚ ಜನ್ಮಭಿಃ' ಎಂಬಂತೆ ನಲ್ವತ್ತು ಬ್ರಹ್ಮಕಲ್ಪಗಳಲ್ಲಿ ಸಾಧನ ಮಾಡಿ 'ದಶಕಲ್ಪಂ ತಪಶ್ಚೀರ್ಣಂ ರುದ್ರೇಣ ಲವಣಾರ್ಣವೇ' ಎಂಬಂತೆ ಉಪ್ಪುನೀರಿನ ಸಮುದ್ರದಲ್ಲಿ ಹತ್ತು ದಿನ ಕಲ್ಪಗಳ ಕಾಲ ಘೋರ ತಪಸ್ಸುಮಾಡಿ ರುದ್ರಪದವಿ ಪಡೆದವರು ಮಹಾರುದ್ರ ದೇವರು ಇಂದಿಗೂ ಆ ಪದವಿಯನ್ನು ಉಳಿಸಿ ಕೊಳ್ಳುವುದಕ್ಕಾಗಿ ಒಂದು ರೂಪದಿಂದ ತಪಸ್ಸು ಮಾಡುತ್ತಲೇ ಇದ್ದಾರೆ ಬಾಣಾಸುರ ಯುದ್ಧಪ್ರಸಂಗದಲ್ಲಿ ಇದು ಸ್ಪಷ್ಟವಿದೆ ಶ್ರೀಕೃಷ್ಣನ ಜೃಂಭಣಾಸ್ತ್ರದಿಂದ ನಿಶ್ಚೇಷ್ಟರಾದ ರುದ್ರದೇವರನ್ನು ಬ್ರಹ್ಮದೇವರು ಕೃಷ್ಣನ ಉದರದೊಳಗೆ ಒಯ್ದರು. ಅಲ್ಲಿ ಬಿಲ್ವವನದಲ್ಲಿ ತಪಸ್ಸು ಮಾಡುತ್ತಿದ್ದ ರುದ್ರದೇವರ ಇನ್ನೊಂದು ರೂಪವು

ಸ್ತಂಭಿತವಾಗಿದ್ದು ತಪಸ್ಸು ನಿಂತು ಹೋದುದನ್ನು ತೋರಿದರು. ಇಂಥ ರುದ್ರದೇವರೇ ದ್ರೌಪದಿಗೆ ಅವಳ ಹಿಂದಿನ ಜನ್ಮದಲ್ಲಿ ನಿನಗೆ ಅನೇಕ ಮಂದಿ ಪತಿಗಳಾಗಲೆಂದು ವರ ನೀಡಿದಾಗ ನನ್ನಾಧಿಪತ್ಯದಲ್ಲಿ ಒಬ್ಬಳು ಹೆಣ್ಣುಮಗಳಿಗೆ ಅನೇಕ ಪತಿಗಳಾಗಲೆಂದು ಶಪಿಸಿದವನಾರೆಂದು ಗದರಿದ ಇಂದ್ರ ತಿಳಿಯದೆ ತಪ್ಪು ಮಾಡಿದ ಆದರೆ ರುದ್ರದೇವರು ಅವನನ್ನು ಮನುಷ್ಯನಾಗಿ ಹುಟ್ಟು, ಅವಳಿಗೇ ಪತಿಯಾಗು ಎಂದು ಶಪಿಸಿದರು, ಅದರಂತೆ ಇಂದ್ರನು ಅರ್ಜುನನಾಗಿ ಅವತರಿಸಿದ.

ಬ್ರಹ್ಮದೇವರು ರುದ್ರನಂತೆ ಕೋಪಿಷ್ಠರಲ್ಲ,
ಯಸ್ಯ ಪ್ರಸಾದಜೋ ಬ್ರಹ್ಮಾ ರುದ್ರಶ್ಚ ಕ್ರೋಧಸಂಭವಃ ।

ರುದ್ರದೇವರು ಹರಿಯ ಕೋಪದಿಂದಲೇ ಹುಟ್ಟಿದವರು. ಬ್ರಹ್ಮದೇವರು ಹರಿಯ ಪ್ರಸನ್ನಭಾವದಿಂದ ಹುಟ್ಟಿದವರು. ಆದರೂ ಒಮ್ಮೆ ಸಮುದ್ರತೀರದಲ್ಲಿ ಅವರು ವಿಹಾರ ಮಾಡುತ್ತಿದ್ದಾಗ ಸಮುದ್ರದ ಅಲೆಗಳ ತುಂತುರು ಹನಿಗಳು ಮೈಗೆ ತಗುಲಿದುವೆಂದು ಸಿಟ್ಟಾಗಿ ಸಮುದ್ರರಾಜನಿಗೆ ಮನುಷ್ಯನಾಗೆಂದು ಶಾಪಕೊಟ್ಟರು ಅದರಂತೆ ಆತ ಶಂತನು ಮಹಾರಾಜನಾಗಿ ಅವತರಿಸಿದ.

ದೇವತೆಗಳಿಗೆ ಮಾನವಜನ್ಮ ಘೋರಶಾಪ. ಅದುವೆ ನರಕ ಅವರಿಗೆ ಬೇರೆ ನರಕವಿಲ್ಲವೆಂದು ವಾದಿರಾಜರು ಮಹಾಭಾರತ ತಾತ್ಪರ್ಯನಿರ್ಣಯ ಟೀಕೆಯಲ್ಲಿ ಹೇಳಿದ್ದಾರೆ

ಹೀಗೆ ಕೋಪಕ್ಕೆ ದೇವತೆಗಳೆಲ್ಲ ವಶರಾಗುತ್ತಾರೆ ಶ್ರೀಹರಿಯೊಬ್ಬನನ್ನು ಬಿಟ್ಟು. ಹಿಮಾಲಯದಲ್ಲಿ ಕುಳಿತು ತಪಸ್ಸು ಮಾಡುತ್ತಿದ್ದ ರುದ್ರದೇವರು ಮನ್ಮಥನನ್ನು ಕೋಪಾಗ್ನಿಯಿಂದ ಸುಟ್ಟರು. ಆ ಹಿಮಾಲಯದಲ್ಲಿಯೇ ಕುಳಿತು ತಪಸ್ಸು ಮಾಡುತ್ತಿದ್ದ ನಾರಾಯಣನು ಮನ್ಮಥನ ಕಾಟಕ್ಕೆ ಮಿಸುಕದೆ ಒಂದು ಮುಗುಳುನಗು ಬೀರಿದ. ಆ ನಗುವಿಗೆ ಮನ್ಮಥನೂ ಅವನನ್ನು ಕಳಿಸಿದ್ದ ದೇವತೆಗಳೂ ಎಲ್ಲರೂ ಗಡಗಡ ನಡುಗಿದರಂತೆ! ಶ್ರೀಹರಿ ತಲೆಯೂರಿ ತಪಗೈಯುವವನೂ ಅಲ್ಲ, ಕೋಪಾವೇಶದಲ್ಲಿ ಶಪಿಸುವವನೂ ಅಲ್ಲ, ಶಿಶುಪಾಲನ ನೂರು ತಪ್ಪುಗಳನ್ನೂ ಸಹಿಸಿದವನಾತ. ಭೃಗುಮುನಿ ಎದೆಗೊದ್ದರೂ ಕ್ಷಮಿಸಿದ. ಆದರಿಂದ ತಾನು ಪ್ರಕೃತಿಯ ಗುಣಕ್ಕೆ ಅಂದರೆ ಕಾಮಕ್ರೋಧಾದಿಗಳಿಗೆ ವಶನಲ್ಲವೆಂಬುದನ್ನು ಲೋಕಕ್ಕೆ ತೋರಿದ ಉಳಿದ ದೇವತೆಗಳಾಗಲಿ, ಋಷಿಗಳಾಗಲಿ ಪ್ರಕೃತಿಯ ಗುಣಕ್ಕೆ ಅಧೀನರು. ಬ್ರಹ್ಮದೇವರೂ ಹರಿಪ್ರೀತಿಗಾಗಿ ಹಾಗೇ ತೋರಿಕೊಳ್ಳುತ್ತಾರೆ. ಅಂದಮೇಲೆ ಶ್ರೀಹರಿಯೆ ತನಗೆ ಯೋಗ್ಯನಾದ ವರನೆಂದು ದೇವಿ ಭಾವಿಸಿದಳು. ಉಳಿದವರನ್ನು ತಿರಸ್ಕರಿಸಿದಳು. "ಲಲನೆ"ಯನ್ನು, ಲಲನಾಮಣಿಯಾದ ಲಕ್ಷ್ಮೀದೇವಿಯನ್ನು ಇವರು ಒಲಿಸಬಲ್ಲರೇ?

ಈ ಶಾಪದ ಉಪದ್ವ್ಯಾಪ ತಾಪಸರಿಗೆ ಒಂದು ಭೂಷಣವೆ. ಅಷ್ಟಾದಶ ಸಿದ್ಧಿಗಳಲ್ಲಿ ಒಂದಾದ ಆಜ್ಞಾ–ಅಪ್ರತಿಹತಿಯೆ ಈ ಶಾಪಶಕ್ತಿ. ವಿಷ್ಣುವೂ ಅವನ ಭಕ್ತರೂ ಇದಕ್ಕೆ ಬೆಂಬಲ ನೀಡುತ್ತಾರೆ. ಏಕೆಂದರೆ,

ವಿಷ್ಣುನಾ ವಿಷ್ಣುಭಕ್ತೈಶ್ಚ ಬ್ರಹ್ಮಶಾಪೋऽನುವರ್ತ್ಯತೇ ।
ಬ್ರಾಹ್ಮಣಾನಾಮಪೀಡಾಯೈ ಬಲಿಭಿಃ ಕ್ಷತ್ರಿಯಾದಿಭಿಃ ॥

ಶ್ರೀಹರಿಯೂ ಅವನ ಭಕ್ತರಾದ ಬಲಿಷ್ಠಕ್ಷತ್ರಿಯರೂ ಬ್ರಾಹ್ಮಣ ಶಾಪವನ್ನು ಮನ್ನಿಸುತ್ತಾರೆ. ಬ್ರಾಹ್ಮಣರಿಗೆ ಪೀಡೆಯಾಗದಿರಲಿ ಎಂದು

'ಶಾಪಾನುಗ್ರಹ ಶಕ್ತೋऽನ್ಯೋ ರಾಘವೇಂದ್ರಾನ್ನ ವಿದ್ಯತೇ'

ಎಂದು ರಾಘವೇಂದ್ರರನ್ನು ಹೊಗಳುತ್ತಾರೆ. ಆದರೆ ಜ್ವಲಿಸುವ ಕೋಪದಿ ಶಾಪ ಕೊಡುವುದು ಭೂಷಣವಲ್ಲ. ಕೋಪದಿಂದ ಕುರುಡಾಗಿ ಶಾಪಕೊಡುವ ಪ್ರವೃತ್ತಿ ದೋಷವೆ. ಈ ದೋಷವಿರುವಲ್ಲಿ ಬೆಟ್ಟದಂಥ ತಪಸ್ಸಿನ ಪುಣ್ಯರಾಶಿ ಇದ್ದರೂ ಏನು ಫಲ ? ಹೆಡೆನಾಗನ ತಲೆಯಲ್ಲಿ ಮಾಣಿಕ್ಯವಿದ್ದಂತೆ. ಆದ್ದರಿಂದ ಲಲನೆಯನಿವರು ಒಲಿಸುವರೆ ?

ಋಷಿಗಳು ತಲೆಯೂರಿ ತಪಗೈದು ಪುಣ್ಯ ಗಳಿಸುತ್ತಾರೆ. ಕೋಪವಿದೆ ಎಂದ ಮಾತ್ರಕ್ಕೆ ಕನ್ಯೆ ಅವರನ್ನು ತಿರಸ್ಕರಿಸಬೇಕೆ ! ಈ ಕೋಪವಿದ್ದ ಮಾತ್ರಕ್ಕೆ ಅಷ್ಟೈಶ್ವರ್ಯ ಸಿದ್ಧಿಶಾಲಿಗಳಾದ ಮಹಾಮುನಿಗಳು ಲಲನೆಯನ್ನು ಒಲಿಸಲಾರರೇ ? ಒಲಿಸಿದುದಕ್ಕೆ ಅನೇಕ ನಿದರ್ಶನಗಳಿವೆ. ಅಪರೋಕ್ಷ ಜ್ಞಾನಿಗಳು ಕೋಪಿಸಿದಾಗ ಅಂಬರೀಷ ರಾಜನಲ್ಲಿ ಕೋಪಿಸಿದ ದೂರ್ವಾಸರಂತೆ ತೊಂದರೆಗೀಡಾಗಿ ಪ್ರಾರಬ್ಧಕರ್ಮ ತೀರಿಸುತ್ತಾರೆ. ಯೋಗ್ಯತೆ ಮೀರಿ ಮಾಡಿದ ಪುಣ್ಯ ಕಳೆದುಕೊಳ್ಳುತ್ತಾರೆ. ಅಷ್ಟೈಶ್ವರ್ಯಭೋಗದಿಂದ ಪ್ರಾರಬ್ಧಪುಣ್ಯವನ್ನು ಸವೆಸಿಕೊಳ್ಳುತ್ತಾರೆ. ಇದರಿಂದ ಮೋಕ್ಷ ಬೇಗನೆ ಕರಗತವಾಗುತ್ತದೆ. ಪುರಾಣಗಳಲ್ಲಿ ಮುನಿಗಳ ತಪಃಸಿದ್ಧಿ, ಕೋಪ ತಾಪಗಳನ್ನು ವರ್ಣಿಸುವುದು ಶ್ರೀಹರಿಯ ಸಂಕಲ್ಪ ಅವ್ಯಾಹತ ಎನ್ನುವುದಕ್ಕಾಗಿ. ಮಹಾತ್ಮರಾದವರೆ ಹೀಗಾದರೆ ನಾವೆಷ್ಟರವರೆಂದು ಬೋಧಿಸುವುದಕ್ಕಾಗಿ ಆದುದರಿಂದ ಭಾಗವತದಲ್ಲಿ ಬ್ರಹ್ಮದೇವರ ವಚನ ಹೀಗಿದೆ–

ಕ್ಷುತ್ ತೃಟ್ ತ್ರಿಕಾಲಗುಣ ಮಾರುತ ಜೈಹ್ವಶೈಶ್ನ್ಯಾನ್
ಅಸ್ಮಾನಪಾರ ಜಲಧೀನತಿತೀರ್ಯ ಕೇಚಿತ್ ।
ಕ್ರೋಧಸ್ಯ ಯಾಂತಿ ವಿಫಲಸ್ಯ ವಶಂ ಪದೇ ಗೋ–
ರ್ಮಜ್ಜಂತಿ ದುಶ್ಚರ ತಪಶ್ಚ ವೃಥೋತ್ಸೃಜಂತಿ ॥

"ಭಿದ್ಯತೇ ಹೃದಯಗ್ರಂಥಿ" ಎಂಬಂತೆ ರಾಗದ್ವೇಷಗಳೆಲ್ಲ ತಪಸ್ಸಿನಿಂದ ಅಳಿಯಬೇಕು ಅಷ್ಟೈಶ್ವರ್ಯ ಸಂಪಾದಿಸುವ ಆಸೆಗೂ ಕೋಪಾವೇಶಕ್ಕೂ ಅವಕಾಶವಿರಕೂಡದು. ಆದರೆ,

ಯಂ ಯಂ ಲೋಕಂ ಮನಸಾ ಸಂವಿಭಾತಿ
ವಿಶುದ್ಧ ಸತ್ವಃ ಕಾಮಯ ತೇ ಯಾಂಶ್ಚ ಕಾಮಾನ್ ।
ತಂ ತಂ ಲೋಕಂ ಜಯತೇ ತಾಂಶ್ಚ ಕಾಮಾನ್
ತಸ್ಮಾದಾತ್ಮಜ್ಞಂ ಹ್ಯರ್ಚಯೇದ್ಭೂತಿಕಾಮಃ ॥

ಎಂಬಂತೆ ಪ್ರಾರಬ್ಧ ಕರ್ಮ ಬಲದಿಂದ ಎಲ್ಲವೂ ನಡೆಯಬಹುದು. ಸಮುದ್ರದಲ್ಲಿ ಅಲೆಗಳಂತೆ ಕೋಪತಾಪಗಳು ಅಂತಃಕರಣದಲ್ಲಿ ಸಹಜ. ಸುಷುಪ್ತಿಯಲ್ಲಿ ಹೊರತು ಬೇರೆ ಸಮಯದಲ್ಲಿ ಮನಸ್ಸು ಎಂದೂ ನಿಶ್ಚೇಷ್ಟವಾಗದು ಯೋಗಿ ಮನಸ್ಸನ್ನು ನಿಶ್ಚೇಷ್ಟಗೊಳಿಸುವುದಿಲ್ಲ ಸಾಯಿಸುವುದಿಲ್ಲ ಸಹಜವಾಗಿ ಏಳುವ ಚಿತ್ತವೃತ್ತಿಗಳನ್ನೇ ಯೋಗ್ಯ ವಿಷಯಗಳೆಡೆಗೆ ಹರಿಸುತ್ತಾನೆ ಇದುವೆ ಯೋಗ, ತಪಃ ಸಿದ್ಧಿ. ವಾದಿರಾಜರು ರುಕ್ಮಿಣೀಶ ವಿಜಯದಲ್ಲಿ–

ಕಾಮಸ್ತೇಽಂಘ್ರಿಯುಗಾರ್ಚನೇಽಟಿಮಲಧಿಯಾಂ ಲೋಭಃ, ಸುಪುಣ್ಯಾರ್ಜನೇ
ಮಾತ್ಸರ್ಯಂ, ಚರಿತಾನುಕೀರ್ತನಸುಧಾಪಾನಾನ್ಮದಃ, ಶತ್ರುಷು ।
ಕ್ರೋಧೋ, ಭಕ್ತಜನೇಷು ರಾಗ ಉದಿಯಾಚ್ಛೀವಿಟ್ಠಲಾನ್ಯತ್ರ ನೋ
ಯಚ್ಛತ್ರುರ್ನಹಿ ಶತ್ರುರುಚ್ಚನಿಲಯಸ್ಯಾನ್ಯಸ್ಯ ಶತ್ರುರ್ಭವೇತ್ ॥

ಎಂದು ಬೇಡಿದ್ದಾರೆ. ತಪಸ್ವಿಗಳೆಲ್ಲ ಈ ಕಲೆಯಲ್ಲಿ ನಿಪುಣರು. ಆದರೂ ಕೆಲವೊಮ್ಮೆ ಗುರಿತಪ್ಪುತ್ತಾರೆ. "ಕ್ರೋಧಸ್ಯ ಯಾಂತಿ ವಿಫಲಸ್ಯ ವಶಂ"! ಪ್ರಾರಬ್ಧಸೂಚಕವಾದ ಈ ಕೋಪವೆಂಬ ದೋಷ ದೊಡ್ಡ ದೋಷವಲ್ಲ.

ವಸ್ತುತ ಇದೆಲ್ಲ ಮೋಕ್ಷ ಮಾರ್ಗದ ವಿಚಾರವಾಯಿತು, ಮದುವೆಯಾಗುವ ಕನ್ಯೆಗೆ ಅದು ಬೇಕಾಗಿಲ್ಲ, ತ್ರಿವರ್ಗ ಸಾಧನೆಯಾಗಬೇಕು.

'ಧರ್ಮೇ ಚಾರ್ಥೇ ಚ ಕಾಮೇ ಚ ನಾತಿಚರಿತವ್ಯಾ' ಧರ್ಮ ಎಂದರೆ ತಪಸ್ಸಿನ ಪುಣ್ಯ ವಿಪುಲವಾಗಿದ್ದರೆ ವರನು ಪರೀಕ್ಷೆಯಲ್ಲಿ ತೇರ್ಗಡೆಯಾಗಲೇಬೇಕು.

ಹೀಗಿದರೂ ಲೋಕದೃಷ್ಟಿಯಿಂದ ನೋಡಿದಾಗ ವರನಲ್ಲಿ ಎಷ್ಟೇ ಸಂಪತ್ತು ಇರಲಿ ಸದ್ಗುಣವಿರಲಿ, ಜೊತೆಗೆ ನಿಷ್ಕಾರಣ ಕೋಪ, ಆದರ ಬೆನ್ನ ಹಿಂದೆ ಶಾಪ, ತಾಪ ಎಂದರೆ ಅದೆಲ್ಲ ದೊಡ್ಡ ಉಪದ್ವ್ಯಾಪ. ಆದ್ದರಿಂದ ಲಲನೆಯನಿವರು ಒಲಿಸುವರೆ ಎನ್ನುತ್ತಿದ್ದಾಳೆ ಮಹಾಲಕ್ಷ್ಮಿ

**ಎಲ್ಲ ಶಾಸ್ತ್ರವನೋದಿ ದುರ್ಲಭ ಜ್ಞಾನವ**
**ಕಲ್ಲಿಸಿ ಕೊಡುವ ಗುರುಗಳು ।**
**ಬಲ್ಲಿದ ಧನಕ್ಕೆ ಮರುಳಾಗಿ ಇಬ್ಬರು**
**ಸಲ್ಲದ ಪುರೋಹಿತಕ್ಕೊಳಗಾದರು ॥**

ಎಲ್ಲ ಶಾಸ್ತ್ರವನ್ನೂ ಓದಿ ದುರ್ಲಭವಾದ ಜ್ಞಾನವನ್ನು ಕಲಿಸಿ ಕೊಡುವ ಇಬ್ಬರು ಗುರುಗಳು– ಬೃಹಸ್ಪತ್ಯಾಚಾರ್ಯರು ಮತ್ತು ಶುಕ್ರಾಚಾರ್ಯರು. ಚೆನ್ನಾಗಿ ಬಲ್ಲಿದ ಅಂದರೆ ಬೆಳೆದು ಸಮೃದ್ಧವಾದ ಐಶ್ವರ್ಯಕ್ಕೆ ಮಾರುಹೋಗಿ ಸಲ್ಲದ ಪೌರೋಹಿತ್ಯವೃತ್ತಿಯನ್ನು ಮಾಡುವ ದುರವಸ್ಥೆಗೊಳಗಾದರು ದೇವ ದಾನವರಿಗೆ ಪುರೋಹಿತರಾದರು.

ಕಲಿಸಿ ಎನ್ನುವುದು ಹಾಡಿನಲ್ಲಿ ಕಲ್ಲಿಸಿ ಎಂದಾಗಿವೆ.

ಭಾಗವತದಲ್ಲಿ 'ಜ್ಞಾನಂ ಕ್ವಚಿತ್ ತಚ್ಚ ನ ಸಂಗವರ್ಜಿತಂ'' 'ಜ್ಞಾನ ಕೆಲವರಲ್ಲಿದೆ ಆದರೆ ಅದು ಧನಾಸಕ್ತಿಯಿಂದ ಮುಕ್ತವಾಗಿಲ್ಲ' ಎಂದು ಲಕ್ಷ್ಮಿದೇವಿ ಹೇಳುತ್ತಾಳೆ. ಸಲ್ಲದ ಪೌರೋಹಿತ್ಯದ ಬಗ್ಗೆ ಭಾಗವತದಲ್ಲಿಯೇ ವಿಶ್ವರೂಪಾಚಾರ್ಯರು ಹೇಳುವ ಮಾತು–

'ವಿಗರ್ಹಿತಂ ಧರ್ಮಶೀಲೈಃ ಬ್ರಹ್ಮವರ್ಚ ಉಪವ್ಯಯಂ'

'ಬ್ರಹ್ಮವರ್ಚಸ್ಸನ್ನು ಹಾಳುಮಾಡುವ ಪೌರೋಹಿತ್ಯವನ್ನು ಧರ್ಮ ನಿಷ್ಠರಾದವರು ತೆಗಳುತ್ತಾರೆ ' ಮೇಲಿನ ನುಡಿಯಲ್ಲಿ ಇದರ ವಿವರಣೆಯಿದೆ.

ವಕ್ತಾ ಬೃಹಸ್ಪತಿಸಮೋ ನ ಹ್ಯನ್ಯೋ ವಿದ್ಯತೇ ಕ್ವಚಿತ್ ।

ಬ್ರಹ್ಮಸ್ಪತಿಯಂತೆ ಪ್ರವಚನ ನೀಡುವ ವ್ಯಕ್ತಿ ಇನ್ನಾರೂ ಇಲ್ಲ! –ಶರಮಂಚದಲ್ಲಿ ಮಲಗಿದ ಭೀಷ್ಮರು ಧರ್ಮರಾಜನಿಗೆ ಹೇಳುವ ಮಾತು ಪೃಥುಚಕ್ರವರ್ತಿಗಾಗಿ ಗೋರೂಪದಿಂದ ನಿಂತ ಭೂಮಿಯಿಂದ ಸಪ್ತರ್ಷಿಗಳು ವೇದವೆಂಬ ಪಾತ್ರೆಯಲ್ಲಿ ಜ್ಞಾನದ ಹಾಲನ್ನು ಕರೆದುಕೊಂಡರಂತೆ. ಆಗ ಚಂದ್ರನು ಕರು. ಹಾಲು ಕರೆದು ಕೊಟ್ಟವನು ಬೃಹಸ್ಪತಿ. ಇಂಥ ಬೃಹಸ್ಪತಿಯೇ ಶುಕ್ರಾಚಾರ್ಯರಲ್ಲಿದ್ದ ಮೃತಸಂಜೀವಿನಿಯ ರಹಸ್ಯವಿದ್ಯೆಯನ್ನು ಸಂಪಾದಿಸಲು ತನ್ನ ಮಗನಾದ ಕಚನನ್ನು ಕಳಿಸಿದನಂತೆ. ಹೀಗೆ ಒಬ್ಬರನ್ನೊಬ್ಬರು ಮೀರಿಸುವ ವಿದ್ವಾಂಸರು ಈ ಇಬ್ಬರು ಗುರುಗಳು ಗುರುಶುಕ್ರರು. ಪಂಚರಾತ್ರ ಪ್ರವಚನ ಮಾಡಬಲ್ಲವರು ಮುಂದೆ ಯಾರು ಈ ಲೋಕದಲ್ಲಿ ಎಂದು ಋಷಿಗಳು ನಾರಾಯಣನಲ್ಲಿ ಕೇಳಿದಾಗ,

'ಉಶನಾ ಬೃಹಸ್ಪತಿಶ್ಚೈವ ಯದೋತ್ಪನ್ನೌ ಭವಿಷ್ಯತಃ ।
ತದಾ ಪ್ರವಕ್ಷ್ಯತಃ ಶಾಸ್ತ್ರಂ ।'

'ಶುಕ್ರ ಬೃಹಸ್ಪತಿಗಳು ಹುಟ್ಟಿ ಬರುತ್ತಾರೆ. ಅವರು ಪ್ರವಚನ ಮಾಡುತ್ತಾರೆ'. ಎಂದನು ನಾರಾಯಣ

ಇಂಥ ಗುರುಗಳು ಕೂಡ ಧನದ ಮೋಹದಿಂದ ಪುರೋಹಿತರೆನಿಸಿದರು. ಅಪಾರ ಧನರಾಶಿಯನ್ನು ಸಂಪಾದಿಸಿದರು ಪರಸ್ಪರ ಸ್ಪರ್ಧೆಗಿಳಿದರು-

ಬ್ರಾಹ್ಮಣೌ ತಾವುಭೌ ನಿತ್ಯಂ ಅನ್ಯೋನ್ಯ ಸ್ಪರ್ಧಿನೌ ಭೃಶಂ ।

ಮೇರುಪರ್ವತದ ತುದಿಯ ದಿವ್ಯರತ್ನ ಶಿಖರಗಳೆಲ್ಲ ಶುಕ್ರಾಚಾರ್ಯರ ಆಸ್ತಿ. ಅವರ ಸಂಪತ್ತಿನ ಕಾಲಂಶ ಕುಬೇರನಲ್ಲಿದೆ. ಅದರ ಹದಿನಾರನೆ ಒಂದಂಶ ಮಾತ್ರ ಮನುಷ್ಯರ ಪಾಲಿಗೆ ದೊರಕಿದೆ ಎಂದು ಮಹಾಭಾರತ ಹೇಳುತ್ತದೆ ಬೃಹಸ್ಪತ್ಯಾಚಾರ್ಯರ ಆಸ್ತಿಯ ವಿವರ ಅಷ್ಟಾಗಿ ಸಿಗುತ್ತಿಲ್ಲ. ಶುಕ್ರಾಚಾರ್ಯರಿಗಿಂತ ಕಡಿಮೆ ಏನಿಲ್ಲವೆಂದು ಧಾರಾಳವಾಗಿ ಹೇಳಬಹುದು ಹೀಗಿದ್ದರೂ ಅವರು ಮರುತ್ತರಾಜನ ಅಪಾರ ಐಶ್ವರ್ಯದಿಂದ ಆಕರ್ಷಿತರಾಗಿ ಅವನು ಒಂದು ಯಜ್ಞದಲ್ಲಿ ತನ್ನ ಒಡಹುಟ್ಟಿದ ತಮ್ಮನಾದ ಸಂವರ್ತನು ವಹಿಸಿಕೊಂಡಿರುವ ಪೌರೋಹಿತ್ಯವನ್ನು ತಾನು ಕಸಿದುಕೊಳ್ಳಲು ಮಹಾಪ್ರಯತ್ನ ಮಾಡಿದರು. ಶಿವನ ವರದಿಂದ ಮರುತ್ತರಾಜನಿಗೆ ದೇವೇಂದ್ರನನ್ನು ನಾಚಿಸುವಂಥ ಐಶ್ವರ್ಯ ಲಭಿಸಿತ್ತು. ಆಗ ದೇವೇಂದ್ರನು ಮತ್ಸರದಿಂದ ಬೃಹಸ್ಪತ್ಯಾಚಾರ್ಯರು ಆ ರಾಜನ ಪೌರೋಹಿತ್ಯ ಮಾಡಬಾರದೆಂದು ಒತ್ತಾಯಿಸಿ ಹಾಗೆ ಮಾತು ತೆಗೆದುಕೊಂಡಿದ್ದ. ಆದರೂ [illegible] ಆಸೆ ಪ್ರಬಲವಾಯಿತು ಬೃಹಸ್ಪತ್ಯಾಚಾರ್ಯರು ತಾನೆ ಆ ಪೌರೋಹಿತ್ಯ ಮಾಡಬಯಸಿದರು. ಅದಕ್ಕೆ ದೇವೇಂದ್ರನನ್ನು ಒಪ್ಪಿಸಿದರು. ಆದರೆ ರಾಜನು ಸಂವರ್ತನ ಪೌರೋಹಿತ್ಯವನ್ನು ಬಿಡಲು ಸಿದ್ಧನಿರಲಿಲ್ಲ. ದೇವೇಂದ್ರನು ವಜ್ರಾಯುಧ ಪ್ರಯೋಗ ಮಾಡುವೆನೆಂದು ಬೆದರಿಸಿದನು. ರಾಜನು ಅದಕ್ಕೂ ಮಣಿಯಲಿಲ್ಲ ಸಂವರ್ತಮುನಿಯ ತಪಃಪ್ರಭಾವದ ರಕ್ಷೆ ಆತನಿಗೆ ಇದ್ದಿತು. ಮುನಿ ವಜ್ರಾಯುಧವನ್ನು ಸ್ತಂಭಸಿದ ಆದ್ದರಿಂದ ಕೊನೆಗೂ ಮರುತ್ತರಾಜ ಬೃಹಸ್ಪತ್ಯಾಚಾರ್ಯರಿಗೆ ಪೌರೋಹಿತ್ಯದ ಅವಕಾಶ ನೀಡಲಿಲ್ಲ

ಶುಕ್ರಾಚಾರ್ಯರಿಗೆ ಧನದ ಮೋಹ ಎಷ್ಟಿತ್ತೆಂದರೆ ಒಮ್ಮೆ ಅವರು ಯೋಗಬಲದಿಂದ ಕುಬೇರನ ಸಂಪತ್ತೆಲ್ಲವನ್ನೂ ಅಪಹರಿಸಿದರು. ಕುಬೇರನು ಶಿವನಲ್ಲಿ ದೂರಿತ್ತ. ಶಿವನು ಆಚಾರ್ಯರನ್ನು ಶೂಲದಲ್ಲಿ ಎತ್ತಿ ಬಾಯಿಯೊಳಗೆ ಹಾಕಿಕೊಂಡ. ಅವರ ದೈನ್ಯದ ಪ್ರಾರ್ಥನೆಗೆ ಮನಕರಗಿ ಲಿಂಗದ್ವಾರದಿಂದ ಅವರನ್ನು

ಹೊರಕ್ಕೆ ಬಿಟ್ಟ ಹೀಗೆ ಧನಮೋಹದಿಂದ ಕುರುಡರಾಗಿ ಹಾಸ್ಯಾಸ್ಪದರಾಗುವ ಪುರೋಹಿತರು ನನಗೆ ಬೇಡೆನ್ನುತ್ತಾಳೆ, ಸ್ವಂಯಂವರ ಕನ್ಯೆ ಮಹಾಲಕ್ಷ್ಮಿ.

ಪೌರೋಹಿತ್ಯವೆಂಬುದು ಹಣದ ಸಂಪಾದನೆಗಾಗಿ ಇರುವ ಒಂದು ಸಾಮಾನ್ಯವೃತ್ತಿಯಾಗಿದೆ ಇಂದು. ಅರ್ಥಜ್ಞಾನವಿಲ್ಲದೆ ತಪ್ಪು ತಪ್ಪಾಗಿ ಕೆಲವು ಮಂತ್ರಗಳನ್ನು ಹೇಳಿದರೆ ಸಾಕು, ಪೌರೋಹಿತ್ಯವಾಗುತ್ತದೆ ಎನ್ನುವ ಪರಿಸ್ಥಿತಿ ಬಂದಿದೆ. ಇದಕ್ಕೆ ಸಮಾಜವೇ ಹೊಣೆ. ಇಂಥ ಪೌರೋಹಿತ್ಯವು ಅನರ್ಥಕಾರಿ–

ಪೌರೋಹಿತ್ಯಂ ಚಾರ್ಚಕತ್ವಂ ಮಾರಾಪತ್ಯಂ ತಥೈವ ಚ ।
ಯಃ ಕರೋತಿ ಸ ದೇವೋऽಪಿ ಶ್ವಾನಯೋನಿಂ ಸಮಶ್ನುತೇ ॥

'ಪೌರೋಹಿತ್ಯ, ಅರ್ಚಕತ್ವ, ಮಠಾಧಿಪತ್ಯಗಳನ್ನು ಮಾಡುವವನು ಸ್ವತಃ ದೇವತೆಯಾಗಿದ್ದರೂ ನಾಯಿಜನ್ಮ ಆತನಿಗೆ ಕಾದಿರುತ್ತದೆ ' ಎನ್ನುತ್ತದೆ ಶಾಸ್ತ್ರ. ಶ್ರೀ ರಾಮನ ರಾಜ್ಯಭಾರದಲ್ಲಿ ಒಂದು ನಾಯಿ ಶ್ರೀರಾಮನಲ್ಲಿ ದೂರಿತ್ತಿತ್ತು. ಸರ್ವಾರ್ಥಸಿದ್ಧಿ ಎಂಬ ಒಬ್ಬ ಸನ್ಯಾಸಿ ದಂಡಕಾಷ್ಠದಿಂದ ನಿಷ್ಕಾರಣವಾಗಿ ಆ ನಾಯಿಯನ್ನು ಹೊಡೆದನಂತೆ. ಇದಕ್ಕೇನು ಶಿಕ್ಷೆ? ಆ ಸನ್ಯಾಸಿಯನ್ನು ಕಾಲಂಜರ ಪರ್ವತದ ಪ್ರಸಿದ್ಧ ದೇವಾಲಯ ಒಂದರಲ್ಲಿ ಪ್ರಧಾನ ಅರ್ಚಕನೆಂದು ನೇಮಿಸಬೇಕು. ಈ ಶಿಕ್ಷೆಯನ್ನು ನಾಯಿಯೇ ಸೂಚಿಸಿತ್ತು, ಏಕೆಂದರೆ ಅದು ಪೂರ್ವಜನ್ಮದಲ್ಲಿ ಅದೇ ದೇವಾಲಯದ ಪ್ರಧಾನ ಅರ್ಚಕನಾಗಿದ್ದಿತು!

ಪಾಶ್ಚಾತ್ಯ ಪಂಡಿತರು ಈ ಪುರೋಹಿತರನ್ನೆಲ್ಲ ಸಮಾಜಶೋಷಕ ವರ್ಗದಲ್ಲಿ ಸೇರಿಸಿದ್ದಾರೆ. ಯಾವ ಯಜ್ಞಯಾಗಗಳೇ ಆಗಲಿ ಪೂಜೆ ಹರಕೆಗಳಾಗಲಿ ದಕ್ಷಿಣೆ ಇಲ್ಲದೆ ಪೂರ್ತಿಯಾಗುವುದಿಲ್ಲವೆನ್ನುತ್ತಾರೆ, ಪುರೋಹಿತರು. ಯಜ್ಞದೇವನಿಗೆ ದಕ್ಷಿಣಾದೇವಿ ಅರ್ಧಾಂಗಿನಿಯಂತೆ! 'ದಕ್ಷಿಣಾಭಿಃ ಸಾಕಂ' ದಕ್ಷಿಣಾಸಮೇತನಾದ ಯಜ್ಞ ಜಗತ್ತಿನಲ್ಲಿ ಅತ್ಯುತ್ತಮ ತತ್ವ ತಾನೆ! ಈ ದಕ್ಷಿಣಾದೇವಿಯ ಉಪಾಸನೆ ಮಾಡುವ ವೈದಿಕರನ್ನು ಯಾವ ಕನ್ಯೆ ಬಯಸಿಯಾಳು? ವಸ್ತುತಃ ಮಹಾಲಕ್ಷ್ಮಿಯೇ ಈ ದಕ್ಷಿಣಾಭಿಮಾನಿನಿ ಎಂಬ ಮಾತು ಬೇರೆ ಲೋಕದೃಷ್ಟಿಯಿಂದ 'ಒಲ್ಲೆ ನಾ ವೈದಿಕ ಗಂಡನ' ಎನ್ನುತ್ತಾಳೆ ದೇವಿ. ಸಲ್ಲದ ಪೌರೋಹಿತ್ಯ ಮಾಡುವ ಈ 'ಬೃಹಸ್ಪತಿ'ಗಳನ್ನು ಆಕೆ ಒಲ್ಲಳು

ಇದು ಸಲ್ಲದ ಪೌರೋಹಿತ್ಯದ ಬಗ್ಗೆ ಹೇಳಿದ ಮಾತು, ಸಲ್ಲುವ ಪೌರೋಹಿತ್ಯವೇ ಬೇರೆ ಇದೆ ಕವಿಕಲ್ಪಲತಾಕಾರನ ಮಾತಿನಲ್ಲಿ ಹೇಳುವುದಾದರೆ ನಿಜವಾದ ಪುರೋಹಿತನಲ್ಲಿ ಎಂಟು ಗುಣಗಳಿರಬೇಕು–

ಪುರೋಹಿತೋ ಹಿತೋ ವೇದಸ್ಮೃತಿಜ್ಞಃ ಸತ್ಯವಾಕ್ ಶುಚಿಃ ।
ಬ್ರಾಹ್ಮಣೋ ವಿಮಲಾಚಾರಃ ಪ್ರತಿಕರ್ತಾऽऽಪದಾಂ ಋಜುಃ ॥

'ಲೋಕ ಹಿತೈಷಿ, ಶ್ರುತಿ ಸ್ಮೃತಿಗಳ ಸಾರವನ್ನು ಬಲ್ಲವ, ಸತ್ಯಹೇಳುವವ, ಶರೀರ ಮನಸ್ಸುಗಳಲ್ಲಿ ಶುಚಿಯಾಗಿರುವವ, ವೇದರಕ್ಷಕ, ಶುದ್ಧ ಆಚಾರವುಳ್ಳವ, ದೇಶಕ್ಕೆ ಒದಗಬಹುದಾದ ಯಾವುದೆ ಆಪತ್ತಿಗೆ ಮಂತ್ರಬಲದಿಂದಲೋ, ಸಮಯೋಚಿತವಾಗಿ ರಾಜನಿಗೆ ನೀಡುವ ರಾಜನೀತಿ ಸಲಹೆಗಳಿಂದಲೊ ಪರಿಹಾರ ನೀಡುವವ, ಮನಸ್ಸು ಮಾತು ಕ್ರಿಯೆಗಳಲ್ಲಿ ಕಪಟವಿಲ್ಲದಿರುವವ- ಹೀಗೆ ಎಂಟು ಗುಣವಿರುವವನೇ ಪುರೋಹಿತ ಆದ್ದರಿಂದ ಅಗ್ನಿಪುರಾಣವು—

ತ್ರಯ್ಯಾಂ ಚ ದಂಡನೀತ್ಯಾಂ ಚ ಕುಶಲಃ ಸ್ಯಾತ್ ಪುರೋಹಿತಃ ।

ವೇದವಿದ್ಯೆಯಲ್ಲಿ ಹೇಗೋ ಹಾಗೆ ರಾಜಕಾರಣದಲ್ಲಿ ಕುಶಲನಾಗಿರಬೇಕು ಪುರೋಹಿತ ಎನ್ನುತ್ತದೆ. ಬೃಹಸ್ಪತಿ ಶುಕ್ರರಿಬ್ಬರೂ ಇಂಥ ಪುರೋಹಿತರು. ಬೃಹಸ್ಪತಿಯ ಅವತಾರರಾದ ದ್ರೋಣಾಚಾರ್ಯರ ಬಗ್ಗೆ ಮಹಾಭಾರತದಲ್ಲಿ ಹೇಳಿದೆ—

ಜಿಹ್ವಾಗ್ರೇ ಚತುರೋ ವೇದಾಃ ಕರಾಗ್ರೇ ಸಶರಂ ಧನುಃ ।
ಉಭಯೋ ದ್ರೋಣಸಾಮರ್ಥ್ಯಂ ಶಾಪಾದಪಿ ಶರಾದಪಿ ॥

'ನಾಲಿಗೆ ತುದಿಯಲ್ಲಿ ನಾಲ್ಕು ವೇದಗಳು, ಕೈಯ ತುದಿಯಲ್ಲಿ ಬಿಲ್ಲು ಬಾಣಗಳು. ಶಾಪದಿಂದಾಗಲೀ, ಶರದಿಂದಾಗಲೀ ಹೇಗೆ ಬೇಕಾದರೂ ಶತ್ರುಗಳನ್ನು ಇದಿರಿಸಬಲ್ಲರು, ಎರಡರಲ್ಲಿಯೂ ಸಮಾನವಾದ ಸಾಮರ್ಥ್ಯ ದ್ರೋಣರದು.'

ರಾಜಕಾರಣದಲ್ಲಿ ಬಿದ್ದವರು ಶುದ್ಧಚಾರಿತ್ರ್ಯ ಉಳಿಸಿಕೊಳ್ಳಬಲ್ಲರೇ ? ಜನರಿಗೆ ಕ್ಷೇಮ ಕೋರುವ ನೆಪದಲ್ಲಿ ಅವರ ಸರ್ವಸ್ವವನ್ನು ಅಪಹರಿಸಿ, ಅವರನ್ನು ಅಜ್ಞಾನದಲ್ಲಿಯೇ ಇರಿಸಿ ತಾವು ಮಾತ್ರ ಎಲ್ಲರನ್ನೂ ತಮ್ಮ ಗುಲಾಮರನ್ನಾಗಿ ಮಾಡಿ ಪ್ರತಿಷ್ಠಿತ ವ್ಯಕ್ತಿಗಳಾಗಿ ಮೆರೆಯುತ್ತಾರೆ, ಇವರು. ಅತ್ಯಂತ ಕಪಟಿಗಳು. ಒಳಗೆ ಕ್ಷುದ್ರ ರಾಜಕಾರಣ ಹೊರಗೆ ಧರ್ಮದ ಮುಖವಾಡ — ಈ ಸಮಸ್ಯೆಗೆ ಸಮಾಜವೇ ಪರಿಹಾರ ನೀಡಬೇಕು. ದಾರಿ ತಪ್ಪಿದ ಪುರೋಹಿತರನ್ನು ತಿದ್ದಬೇಕು. 'ಪುರೋ–ಹಿತ' ಅಂದರೆ ಮುಂದಾಳು, ವಾಹನಕ್ಕೆ ಚಾಲಕನಿರುವಂತೆ, ಸಮಾಜಕ್ಕೆ ಪುರೋಹಿತ ಚಾಲಕನು ಕುಡಿದು ವಾಹನವನ್ನು ಅಪಘಾತಕ್ಕೀಡು ಮಾಡದಂತೆ ಜನರು ನೋಡಿಕೊಳ್ಳಬೇಕೇ ವಿನಹ ಚಾಲಕ ವರ್ಗವನ್ನೇ ವಜಾ ಮಾಡುವುದು ಬುದ್ಧಿವಂತಿಕೆಯಲ್ಲ.

ಬರೀ ರಾಜಕಾರಣಿಗಳ ಕೈಗೇ ದೇಶದ ಭವಿಷ್ಯವನ್ನೊಪ್ಪಿಸಿ ಬಿಟ್ಟರೆ ಪ್ರಗತಿಯಾಗಲಾರದು. ತೈತ್ತಿರೀಯ ಸಂಹಿತೆ ಹೇಳುತ್ತದೆ –

ದೇವಾ ವೈ ರಾಜನ್ಯಾದ್ ಜಾಯಮಾನಾದಭಿಭಯುಃ । ತಮಂತರೇವ ಸಂತಂ ದಾಮ್ನಾ ಅಪೌಂಭನ್ । ಸ ವಾ ಏಷೋಽಪೊೀಬ್ಧೋ ಜಾಯತೇ ಯದ್ರಾಜನ್ಯಃ । ಯದ್ವಾ ಏಷೋಽನಪೋಬ್ಧೋ ಜಾಯೇತ ವೃತ್ರಾನ್ ಘ್ನನ್ ಚರೇತ್ ।

"ಸೃಷ್ಟಿಯ ಪೂರ್ವದಲ್ಲಿ ಮುಂದೆ ಹುಟ್ಟಬಹುದಾದ ಕ್ಷತ್ರಿಯನ ಬಗ್ಗೆ ದೇವತೆಗಳಿಗೆ ಭಯ ಉಂಟಾಯಿತು. ಆದ್ದರಿಂದ ಗರ್ಭದಲ್ಲಿರುವಾಗಲೇ ಅವನನ್ನು ಹಗ್ಗದಿಂದ ಕಟ್ಟಿಹಾಕಿದರು. ಬದ್ಧನಾಗಿಯೇ ಅವನು ಹುಟ್ಟುತ್ತಾನೆ. ಇಲ್ಲದಿದ್ದರೆ ಹುಟ್ಟಿದೊಡನೆ ವೈರಿಗಳ ಮೇಲೆ ದಾಳಿಯಿಡುತ್ತ ಸಂಚರಿಸುತ್ತಿದ್ದನು." ಅತ್ಯುಗ್ರವಾದ ಕ್ಷಾತ್ರತೇಜಸ್ಸು ಏನು ಮಾಡೀತೆಂದು ಹೇಳುವುದು ಕಷ್ಟ. ಅದಕ್ಕೆ ಮಿತಿ ಬೇಕು. ಅದಕ್ಕಾಗಿ ದೇವತೆಗಳು ಕ್ಷಾತ್ರ ತೇಜಸ್ಸಿನ ಜೊತೆಗೆ ಅದಕ್ಕೆ ಪ್ರತಿಬಂಧಕವಾದ ಒಂದು ಶಕ್ತಿಯನ್ನೂ ಕ್ಷತ್ರಿಯನಲ್ಲಿ ಇಟ್ಟಿದ್ದಾರೆ. ಲೋಕ ಹಿತೈಷಿಯಾದ ಸಜ್ಜನನಾದ ಕ್ಷತ್ರಿಯನನ್ನು ಗುರುತಿಸಿ, ಅವನಲ್ಲಿರುವ ಈ ಪ್ರತಿಬಂಧಕ ಶಕ್ತಿಯನ್ನು ದೂರಮಾಡಿ, ಆಗ ತಾನೇ ತಾನಾಗಿ ಜ್ವಲಿಸುವ ಅವನ ಕ್ಷಾತ್ರ ತೇಜಸ್ಸಿನಿಂದ ಲೋಕ ಹಿತವನ್ನು ಉಂಟುಮಾಡುವ ಕಾರ್ಯಭಾರ ಪುರೋಹಿತನದು

ಇಂದ್ರೋ ವೈ ರಾಜ್ಯನ್ಯಃ । ಬ್ರಹ್ಮ ಬೃಹಸ್ಪತಿಃ ।
ಬ್ರಹ್ಮಣೈವೈನಂ ದಾಮ್ನೋಽಪೋಂಭನಾನ್ಮುಂಚತಿ ।

ಕ್ಷತ್ರಿಯನಲ್ಲಿ ಇಂದ್ರನ ಅಂಶವಿದೆ. ಬ್ರಹ್ಮನಲ್ಲಿ ಬೃಹಸ್ಪತಿಯ ಅಂಶವಿದೆ. ಬೃಹಸ್ಪತಿಯು ಇಂದ್ರನ ದಿಗ್ವಿಜಯಗಳಿಗೆ ಕಾರಣನಾಗುವಂತೆ ಬ್ರಾಹ್ಮಣನು ಕ್ಷತ್ರಿಯನ ಪ್ರತಿಬಂಧಕ ಶಕ್ತಿಯನ್ನು ನಿವಾರಿಸಿ ಅವನಿಗೆ ವಿಜಯವನ್ನು ತಂದು ಕೊಡಬೇಕು. ಕ್ಷತ್ರಿಯನಿಗೆ ಇರುವ ಅಧಿಕಾರ ಐಶ್ವರ್ಯಭೋಗ ಬ್ರಾಹ್ಮಣರಿಗೆ ಬೇಡ. ಅವನ ಅವಿವೇಕ ಅಜ್ಞಾನಗಳನ್ನು ಕಾಲ ಕಾಲಕ್ಕೆ ನಿಯಂತ್ರಿಸಿ, ಅವುಗಳಿಗೆ ಅಡ್ಡಿಯಾಗಿ ನಿಂತು ಅವನ ಕೋಪವನ್ನು ಇದಿರಿಸಿ, ತಾವು ಕಷ್ಟಪಟ್ಟರೂ ಲೋಕಕ್ಕೆ ಹಿತವಾಗಲಿ ಎನ್ನುತ್ತಾರೆ ವಸಿಷ್ಠರಂತಹ ಉತ್ತಮ ಪುರೋಹಿತರು ಕಲ್ಮಾಷಪಾದ ರಾಜನನ್ನು ಹಾಗೇ ಇದಿರಿಸಿ ಸರ್ವನಾಶ ತಂದುಕೊಂಡರೂ ಕೊನೆಗೂ ಅವನನ್ನು ಶಾಪಮುಕ್ತನನ್ನಾಗಿ ಮಾಡಿ ತಾನು ಮಹಾತ್ಮರೆನಿಸಿದರು ವಸಿಷ್ಠಮುನಿ.

ದುಷ್ಟ ಕ್ಷತ್ರಿಯರನ್ನೂ, ರಾಜಕಾರಣಿಗಳನ್ನೂ ಹಾಗೇ ಬಿಟ್ಟರೆ ಅಪಾಯವಿದೆ ಅವರು ಪ್ರಜೆಗಳ ವೈಚಾರಿಕ ಪ್ರಜ್ಞೆಯನ್ನೇ ಚಿವುಟಿ, ಜ್ಞಾನಾರ್ಜನೆಯ ಅವಕಾಶವನ್ನೆ

ಇಲ್ಲವಾಗಿಸಿ, ತಾವು ಹೇಳುವುದೇ ಜ್ಞಾನ ಎನ್ನತೊಡಗುತ್ತಾರೆ. ಇದರ ಪರಿಣಾಮ ಸರ್ವನಾಶ. ಆದ್ದರಿಂದ ಪೌರೋಹಿತ್ಯ ಬೇಕು, ಪುರೋಹಿತರು ಬೇಕು. ಪೌರೋಹಿತ್ಯ ಬಲು ಕಷ್ಟದ ಕೆಲಸ, ಅದನ್ನು ಮಾಡುವಾಗ ತುಂಬ ಎಚ್ಚರಬೇಕು. ಸ್ವಲ್ಪ ಪ್ರಮಾದವಾದರೂ ಆಸೆ ಆಮಿಷಗಳಿಗೆ ಬಲಿಯಾಗಿ ಪುರೋಹಿತನು ಪತಿತನಾಗುತ್ತಾನೆ ಮುಂದಿನ ಜನ್ಮದಲ್ಲಿ ನಾಯಿಯಾಗಿ ಹುಟ್ಟುತ್ತಾನೆ.

ರಾಜಾ ರಾಷ್ಟ್ರಕೃತಂ ಪಾಪಂ ರಾಜಪಾಪಂ ಪುರೋಹಿತಃ ।

ಎಂಬಂತೆ ಇಡೀ ರಾಷ್ಟ್ರವು ಮಾಡುವ ಪಾಪ ರಾಜನ ಮೂಲಕ ಪುರೋಹಿತನನ್ನೇ ಬಂದು ಸೇರುತ್ತದೆ. ಪುರೋಹಿತನು ಅದನ್ನು ಸುಡುವಷ್ಟು ತೇಜಸ್ವಿಯಾಗಿರದಿದ್ದರೆ ಅವನಿಗೆ ಅನರ್ಥ. ವಿಶ್ವರೂಪಾಚಾರ್ಯರು ಪೌರೋಹಿತ್ಯದ ಬಗ್ಗೆ ಹೇಳಿದ ಮಾತಿನ ಅಭಿಪ್ರಾಯವಿದು

ಒಮ್ಮೆ ದೇವೇಂದ್ರನು ಬೃಹಸ್ಪತಿಯನ್ನು ಅವಮಾನಿಸಿದಾಗ ಅವರು ದೂರ ಹೋದರು. ಅವರ ಸ್ಥಾನಕ್ಕೆ ಬರಲು ವಿಶ್ವರೂಪಾಚಾರ್ಯರನ್ನು ಬೇಡಿಕೊಂಡ ದೇವೇಂದ್ರ. ಆಗ ಅವರು ಹೇಳಿದರು 'ಪೌರೋಹಿತ್ಯ ಬಲು ಅಪಾಯದ ವೃತ್ತಿ. ಆದರೂ ನಿಮ್ಮ ಹಿತಕ್ಕಾಗಿ ಮಾಡುತ್ತೇನೆ' ಹೀಗೆ ಹೇಳಿದ ವಿಶ್ವರೂಪಾಚಾರ್ಯರೇ ಮುಂದೆ ಪೌರೋಹಿತ್ಯದಲ್ಲಿ ಒಂದು ತಪ್ಪು ಮಾಡಿ ದೇವೇಂದ್ರನಿಂದ ಶಿರಚ್ಛೇದ ಮಾಡಿಕೊಂಡುದುದು ಒಂದು ವಿಪರ್ಯಾಸ ಈ ಕಥೆ ಭಾಗವತದಲ್ಲಿ ಇದೆ.

ಆದ್ದರಿಂದ ಪುರೋಹಿತನು ಬಲು ಜಾಗರೂಕನಾಗಿದ್ದು, ತನ್ನ ವೈಯುಕ್ತಿಕ ಜೀವನವನ್ನು ಹಾಳುಮಾಡಿಕೊಳ್ಳದೆ ಲೋಕಕ್ಷೇಮವನ್ನೂ ಸಾಧಿಸುತ್ತಿರಬೇಕು. ಆಗ ಅವನು ಮಹಾತ ನೆನಿಸುತ್ತಾನೆ ಅವನಿಗೆ ತಪಸ್ಸಿನಿಂದ ತನ್ನ ವೈಯುಕ್ತಿಕ ಜೀವನವನ್ನು ಸುಂದರಗೊಳಿಸಿದರೆ ಮಾತ್ರ ಸಾಕೆಂಬ ಸಂಕುಚಿತ ಭಾವನೆ ಇರುವುದಿಲ್ಲ. ತನ್ನ ತಪಸ್ಸಿನ ಪುಣ್ಯವನ್ನು ಲೋಕಕ್ಕೆ ಧಾರೆ ಎರೆದು ಜ್ಞಾನಾಮೃತ ಹರಿಸಿ, ಪ್ರಜೆಗಳ ಜೀವನವನ್ನು ಅಮೃತಫಲಭರಿತವನ್ನಾಗಿಸುವ ಆಸೆ ಇರುತ್ತದೆ. ಬೃಹಸ್ಪತಿ ಶುಕ್ರರೂ ಅಂಥ ಪುರೋಹಿತರೇ ಅವರಿಗೆ ಪ್ರಜೆಗಳು ಎಷ್ಟು ದಕ್ಷಿಣೆ ಕೊಟ್ಟರೂ ಅಲ್ಪವೇ ಮಹಾಭಾರತದಲ್ಲಿ ವಾಯುದೇವರು ಪುರೂರವನಿಗೆ ಉಪದೇಶ ಮಾಡುತ್ತ

'ವಿಪ್ರಸ್ಯ ಸರ್ವಮೇವೈತತ್ ಯತ್ ಕಿಂಚಿತ್ ಜಗತೀಗತಂ ।'

ಈ ಜಗತ್ತನಲ್ಲಿ ಏನೆಲ್ಲ ಸಂಪತ್ತು ಇದೆಯೋ ಅದು ಬ್ರಾಹ್ಮಣನಿಗೆ ಸೇರಿದುದು, ಎಂದಿದ್ದಾರೆ ಈ ದೃಷ್ಟಿಯಿಂದ ನೋಡಿದರೆ ಮೇರುಪರ್ವತದ ರತ್ನ ಶಿಖರಗಳೆಲ್ಲ ಶುಕ್ರಾಚಾರ್ಯರಿಗೆ ಸೇರಿದುದು ತಪ್ಪಲ್ಲ ಅವರು ದೈತ್ಯರ ಪೌರೋಹಿತ್ಯ ಮಾಡಿ ದೈವೀ ಆಸುರೀ ಶಕ್ತಿಗಳ ಸಂಘರ್ಷವನ್ನು ನಿರಂತರ

ಮುಂದುವರಿಸುತ್ತ ಪ್ರಪಂಚ ನಡೆಯುವಂತೆ ಮಾಡುತ್ತಿದ್ದಾರೆ. ಮಾತ್ರವಲ್ಲ ಶುಕ್ರಗ್ರಹವಾಗಿ ಲೋಕಕ್ಕೆ ಮಳೆ ಬೆಳೆ ನೀಡಿ ಸಂಪತ್ತನ್ನು ಪೋಷಿಸುತ್ತಿದ್ದಾರೆ. ಆದ್ದರಿಂದ ಅವರೇ ಹೇಳುವಂತೆ ಪ್ರಪಂಚದ ಎಲ್ಲ ಸಂಪತ್ತೂ ಅವರಿಗೇ ಸೇರಿದುದು. ಅವರ ಅನುಗ್ರವಾದರೆ ನಮಗೇ ಶುಕ್ರದಶೆ.

'ಯಚ್ಚ ಕಿಂಚಿತ್ ಸರ್ವಗತಂ ಭೂಮೌ ವಾ ಯದಿ ವಾ ದಿವಿ ।
ತಸ್ಯಾಹಮೀಶ್ವರೋ ನಿತ್ಯಂ ॥
ಅಹಂ ಜಲಂ ವಿಮುಂಚಾಮಿ ಪ್ರಜಾನಾಂ ಹಿತಕಾಮ್ಯಯಾ ।"
'ಪುಷ್ಣಾಮ್ಯೋಷಧಯಃ ಸರ್ವಾಃ ॥ –

ಎಂದಿದ್ದಾರೆ ಶುಕ್ರಾಚಾರ್ಯರು.

ಬೃಹಸ್ಪತಿಗೆ 'ಜೀವ' ಎಂಬ ಹೆಸರಿದೆ. ಅದು ಅನ್ವರ್ಥಕ. ಗುರುಬಲವಿಲ್ಲದಿದ್ದರೆ ಯಾವ ಜೀವಿಗೂ ಕ್ಷೇಮವಿಲ್ಲ. ದೇಹದಲ್ಲಿ ಜೀವವಿರುವಂತೆ ಜೀವಗಳಲ್ಲಿ 'ಜೀವ' ಅಂದರೆ ಬೃಹಸ್ಪತಿಯು ಬಲವಿರಬೇಕು–

'ಪ್ರಾಣಿನಾಂ ಜೀವರೂಪತ್ವಾದ್ ಗುರುರ್ಜೀವ ಇತಿ ಸ್ಮೃತಃ
ತಸ್ಮಾದ್ ಜೀವಬಲಂ ನೋ ಚೇತ್ ದೇಹೋ ನಿರ್ಜೀವ ಉಚ್ಯತೇ ।'

ಗುರುಬಲವಿಲ್ಲದವನು ಜೀವಚ್ಛವದಂತೆ. ಜಾತಕದಲ್ಲಿರಬಹುದಾದ ಎಲ್ಲ ದೋಷಗಳನ್ನೂ ಕೇಂದ್ರದಲ್ಲಿರುವ ಗುರು ಪರಿಹರಿಸುತ್ತಾನಂತೆ–

ಲಕ್ಷಂ ದೋಷಾನ್ ಹಂತಿ ದೇವೇಂದ್ರ ಪೂಜ್ಯಃ ಕೇಂದ್ರಂ ಪ್ರಾಪ್ತಃ ।

ಇಂಥ ಮಹಾತ್ಮರಾದ ಬೃಹಸ್ಪತಿ ಶುಕ್ರರೂ ಪ್ರಾರಬ್ಧ ಕರ್ಮದಿಂದ ಮತ್ತು ಶ್ರೀಹರಿಯ ಸಂಕಲ್ಪದಿಂದ ಸಲ್ಲದ ಪೌರೋಹಿತ್ಯಕ್ಕೆ ಒಳಗಾಗುತ್ತಾರೆ. ಅವರನ್ನೇಕೆ ತಾನು ವರಿಸಬೇಕು ? ಶ್ರೀಹರಿಯನ್ನೇ ವರಿಸುತ್ತೇನೆ, ಎನ್ನುತ್ತಾಳೆ ಮಹಾಲಕ್ಷ್ಮಿ.

– ೧೯ –

**ಕಾಮನಿರ್ಜಿತನೊಬ್ಬ ಕಾಮಿನಿಗೆ ಸೋತೊಬ್ಬ**
**ಭಾಮಿನಿಯ ಹಿಂದೆ ಹಾರಿದವ ।**
**ಕಾಮಾಂಧನಾಗಿ ಮುನಿಯ ಕಾಮಿನಿಗೈದಿದನೊಬ್ಬ**
**ಕಾಮದಿ ಗುರುತಲ್ಪಗಾಮಿಯೊಬ್ಬ ॥**

"ಒಬ್ಬನು ಕಾಮನಿರ್ಜಿತನಾಗಿ ಕಾಮಿನಿಗೆ ಸೋತ. ಒಬ್ಬನು ಕಾಮನಿರ್ಜಿತನಾಗಿ ಭಾಮಿನಿಯ ಹಿಂದೆ ಹರಿದವ. ಒಬ್ಬ ಕಾಮಾಂಧನಾಗಿ ಮುನಿಯ ಕಾಮಿನಿಗೈದಿದ. ಒಬ್ಬ ಕಾಮದಿಂದ ಗುರುಪತ್ನಿಯ ಸಂಗ ಮಾಡಿದ.

ಇಂಥ ದೇವತೆಗಳನ್ನು ಯಾರನ್ನೂ ನಾನು ವರಿಸಲಾರೆ. ಶ್ರೀಹರಿಯನ್ನೇ ವರಿಸುವೆನು' ಎನ್ನುತ್ತಾಳೆ, ಸ್ವಯಂವರಕ್ಕೆ ನಿಂತ ಮಹಾಲಕ್ಷ್ಮಿ.

ಭಾಗವತದಲ್ಲಿ 'ಕಶ್ಚಿನ್ಮಹಾನ್ ತಸ್ಯ ನ ಕಾಮನಿರ್ಜಯಃ' 'ಒಬ್ಬನು ಮಹಾಪುರುಷನೆ, ಆದರೆ ಅವನಿಗೆ ಕಾಮನಿಗ್ರಹವೆಂಬುದಿಲ್ಲ' ಎಂದಿದೆ. ವ್ಯಾಖ್ಯಾನಕಾರರೆಲ್ಲರೂ ಸಾಮಾನ್ಯವಾಗಿ 'ಮಹಾನ್ ಎನಿಸಿದ ಬ್ರಹ್ಮದೇವನು ತನ್ನ ಮಗಳನ್ನೇ ಬಯಸಿದ್ದರಿಂದ ಅವನಿಗೆ ಕಾಮನಿಗ್ರಹವಿಲ್ಲ' ಎಂದು ಅರ್ಥೈಸಿದ್ದಾರೆ. ಆದರೆ ಕೇವಲ ಬ್ರಹ್ಮದೇವನೊಬ್ಬನನ್ನೇ ಕಾಮನಿಗ್ರಹವಿಲ್ಲದವನೆನ್ನಲಾಗದು. ಅವನಿಗಿಂತ ಕೆಳಮಟ್ಟದ ದೇವತೆಗಳೆಲ್ಲ ಹೆಚ್ಚಿನ ಅಪರಾಧ ಮಾಡುತ್ತಾರೆ. ಅವರ ಬಗ್ಗೆಯೂ ಭಾಗವತವು ಆಕ್ಷೇಪಿಸುತ್ತದೆ ಎಂಬ ಅಭಿಪ್ರಾಯದಿಂದ ವಾದಿರಾಜರು ಹೇಳುತ್ತಾರೆ– 'ಬ್ರಹ್ಮನು ಕಾಮನಿರ್ಜಿತನಾಗಿ ಮಗಳನ್ನು ಬಯಸಿದ. ರುದ್ರನು ಕಾಮನಿರ್ಜಿತನಾಗಿ ಮೋಹಿನಿಯ ಬೆನ್ನ ಹಿಂದೆ ಧಾವಿಸಿದ ಇಂದ್ರನು ಅಹಲ್ಯೆಯ ಶೀಲಭಂಗವನ್ನೇ ಮಾಡಿದ. ಚಂದ್ರನು ಗುರುಪತ್ನಿಯೆಂದೂ ನೋಡದೆ ತಾರೆಯ ಸಂಗಮಾಡಿ ಬುಧನನ್ನು ಹುಟ್ಟಿಸಿದ. ಒಬ್ಬರಿಗಿಂತ ಒಬ್ಬರು ಮಹಾ ಅಪರಾಧಿಗಳು. ನೀತಿಭ್ರಷ್ಟರು ಶ್ರೀಹರಿಯೊಬ್ಬನೇ ಪಾವನಚರಿತ, ಪರಾತ್ಪರ ತತ್ವ'

ಇಲ್ಲಿ ಎಂದು ಪ್ರಶ್ನೆ - ಶ್ರೀ ಹರಿಯ ನಿರ್ದೋಷತ್ವವನ್ನೂ ಸರ್ವೋತ್ತಮತ್ವವನ್ನೂ ಸಮರ್ಥಿಸುವ ಭರದಲ್ಲಿ ಋಜುಗಣಸ್ಥರಾದ ಸರ್ವದೋಷ ರಹಿತರಾದ ಬ್ರಹ್ಮದೇವರಿಗೆ ಮಗಳನ್ನೇ ಬಯಸುವ ದುರ್ಬುದ್ಧಿಯನ್ನು ಆರೋಪಿಸಬಹುದೇ ? ಹಾಗೆಂದು ಈ ಕಥೆ ಪುರಾಣಕ್ಕೆ ಸಂಬಂಧಿಸಿದ್ದು, ಅಲ್ಲಿ ಅದು ಪ್ರಕ್ಷಿಪ್ತವಾಗಿರಬಹುದೆಂದೂ ಹೇಳುವಂತಿಲ್ಲ. ವೇದದಲ್ಲಿಯೂ ಅನೇಕ ಕಡೆ ಈ ಕಥೆ ಬರುತ್ತದೆ. ಅಲ್ಲಿ ಬ್ರಹ್ಮನ ಮಗಳ ಹೆಸರು ಉಷೆ ಎಂದು ಮೈತ್ರಾಯಣೀಯ ಸಂಹಿತೆಯಲ್ಲಿಯೂ ತಾಂಡ್ಯ ಬ್ರಾಹ್ಮಣ್ಯದಲ್ಲಿಯೂ ಹೇಳಿದೆ. ಐತರೇಯ ಬ್ರಾಹ್ಮಣ, ಶತಪಥ ಬ್ರಾಹ್ಮಣಗಳಲ್ಲಿ ದ್ಯುದೇವತೆ ಎಂಬ ಹೆಸರಿದೆ. ತಾಂಡ್ಯ ಬ್ರಾಹ್ಮಣದಲ್ಲಿಯೇ ಇನ್ನೊಂದೆಡೆ ವಾಗ್ದೇವತೆ ಎನ್ನಲಾಗಿದೆ. ಋಗ್ವೇದ ಅಥರ್ವ ಸಂಹಿತೆಗಳಲ್ಲಿ ಮಗಳು ಎಂದಿಷ್ಟೇ ಹೇಳಿದೆ, ಹೆಸರು ಹೇಳಿಲ್ಲ ಭಾಗವತದಲ್ಲಿ ಆಕೆ ವಾಗ್ದೇವತೆಯೇ. ಅವಳನ್ನು ಬ್ರಹ್ಮನು ಬಯಸಿ ನೋಡಿದಾಗ ಮರೀಚಿ ಅತ್ರಿ ಮುಂತಾದ ಮುನಿಗಳು ಆಕ್ಷೇಪಿಸಿದರಂತೆ – 'ಇದು ಅಧರ್ಮ. ಅನೀತಿ. ನೀನೇನೋ ತಪಸ್ವಿ. ದಕ್ಕಿಸಿಕೊಳ್ಳಬಲ್ಲೆ ಎಂದುಕೊಂಡಿರಬಹುದು ಅರಿಯದ ಲೋಕ ಇದನ್ನು ಕಂಡು ಮೋಸ ಹೋಗಬಾರದು'. ಬ್ರಹ್ಮನು ನಾಚಿ ಆ ತನ್ವಿಯನ್ನು ಅಂದರೆ ಕೃಶಾಂಗಿಯನ್ನು ಬಿಟ್ಟುಬಿಟ್ಟನಂತೆ. ಮುಂದೆ ದಿಗ್ದೇವತೆಗಳು ಆಕೆಯನ್ನು ಸ್ವೀಕರಿಸುತ್ತಾರೆ ಎಂದು ಹೇಳಿ ಭಾಗವತವು ಈ ಕಥೆಯನ್ನು ಮುಗಿಸುತ್ತದೆ. ಅಂತೂ ಬ್ರಹ್ಮನು ಮಗಳ ಸಂಗ ಮಾಡಲಿಲ್ಲ. ಹೀಗಿದ್ದರೂ ಅವಳನ್ನು ಬಯಸಿದುದು ಒಂದು ಸಮಸ್ಯೆಯೇ

ಸರಿ ಇದನ್ನು ಒಪ್ಪಿದರೆ ಅನರ್ಥವಿದೆ ಎನ್ನುವುದಕ್ಕೆ ಮುದ್ಗಲ ಮುನಿಯೇ ಸಾಕ್ಷಿ. ಅವನೊಮ್ಮೆ ಪುರಾಣ ಕೇಳುತ್ತಿದ್ದಾಗ ಈ ಪ್ರಕರಣವನ್ನು ಕೇಳಿ ನಕ್ಕ. ಬ್ರಹ್ಮನು ಶಪಿಸಿದ, 'ಉತ್ತಮಸ್ತ್ರೀಯರ ಸಂಗ ನಿನಗಾಗಲಿ', ಎಂದು ತನಗಿಂತ ಉತ್ತಮರಾಗಿದ್ದು ಗುರುಸ್ಥಾನದಲ್ಲಿರುವ ಸ್ತ್ರೀಯರ ಸಂಗಮಾಡಿದರೆ ನಿತ್ಯ ನರಕವೆಂದು ಶಾಸ್ತ್ರವು ಸಾರುತ್ತದೆ. ಮುನಿಯು ಹೆದರಿ, ತೀವ್ರ ತಪಸ್ಸಿನಿಂದ ಬ್ರಹ್ಮನನ್ನು ಒಲಿಸಿಕೊಂಡು ಅನರ್ಥದಿಂದ ಪಾರಾದನಂತೆ ಆದ್ದರಿಂದ ಬ್ರಹ್ಮನ ಈ ನಡತೆಯನ್ನು ಸರಿ ಎಂದು ಸಮರ್ಥಿಸಲೇ ಬೇಕಾಗಿದೆ, ಹೇಗೆ ?

ಪೂರ್ವಮೀಮಾಂಸಾ ಶಾಸ್ತ್ರದಲ್ಲಿ ತಮ್ಮದೇ ಆದ ಭಾಟ್ಟ ಸಂಪ್ರದಾಯವನ್ನು ಹಾಕಿಕೊಟ್ಟ ಕುಮಾರಿಲ ಭಟ್ಟರು ಅಂದಿನ ಜೈನ, ಬೌದ್ಧರ ವಿನಾಶಕಾರಿ ಆಕ್ರಮಣದಿಂದ ವೈದಿಕ ಸಾಹಿತ್ಯವನ್ನು ರಕ್ಷಿಸಲು ಕಂಕಣ ತೊಟ್ಟವರು. ಅವರು ಹೇಳುವಂತೆ ಉಷೆಯ ಪ್ರಕರಣವೊಂದು ವಾಸ್ತವ ಘಟನೆಯೇ ಅಲ್ಲ - ಸೂರ್ಯನು ಉಷಾರಮಣಿಯ ಬೆನ್ನುಹತ್ತಿ ಬಂದು ಅವಳಲ್ಲಿ ತನ್ನ ಅರುಣ ಕಿರಣಗಳನ್ನು ತುಂಬುತ್ತಾನೆ ಸೂರ್ಯನ ಗತಿಯಿಂದಲೇ ಉಷಃ ಕಾಲಕ್ಕೆ ಅಸ್ತಿತ್ವ ಉಂಟಾಗುವುದರಿಂದ ಅವಳು ಅವನ ಮಗಳು. ಹೀಗೆ ಇದೊಂದು ಕೇವಲ ರೂಪಕ. ಇದರಂತೆ ವಾಗ್ದೇವಿಯ ಪ್ರಕರಣವೂ ಒಂದು ರೂಪಕವೆನ್ನುವುದುಂಟು. ' ಪ್ರಜಾಪತಿ ರ್ವೈ ಮನಃ । ವಾಕ್ ಸರಸ್ವತೀ ' ಎಂದು ಶತಪಥ ಬ್ರಾಹ್ಮಣ ಹೇಳುತ್ತದೆ. ಬ್ರಹ್ಮನೆಂದರೆ ಮನಸ್ಸು. ವಾಗ್ದೇವಿ ಎಂದರೆ ಮಾತು. ಮಾತು ಮನಸ್ಸಿನಿಂದ ಹೊರಡುತ್ತದೆ. ಮನಸ್ಸಿನಿಂದಲೇ ಅದರಲ್ಲಿ ಶಕ್ತಿ ತುಂಬಿಕೊಳ್ಳುತ್ತದೆ. ಇದನ್ನೇ ಅಲಂಕಾರಿಕವಾಗಿ ಇಲ್ಲಿ ವರ್ಣಿಸಲಾಗಿದೆ.'

ಮೇಲಿನ ವಿವರಣೆಯಂತೆ ಪ್ರಜಾಪತಿಯ ಪ್ರಕರಣ ವಾಸ್ತವವಲ್ಲವೆಂದೊಪ್ಪಿದರೂ ಸ್ವಭಾವ ಸುಂದರವಾದ ಸೂರ್ಯೋದಯವನ್ನಾಗಲಿ, ಶಕ್ತಿ ಪೂರ್ಣವಾಗಿ ಮಾತು ಮನಸ್ಸಿನಿಂದ ಮೂಡಿ ಬರುವುದನ್ನಾಗಲೀ, ವರ್ಣಿಸುವಾಗ ವೇದಪುರಾಣಗಳು ಅಶ್ಲೀಲಾರ್ಥ ಪ್ರತೀತವಾಗುವಂತೆ ಏಕೆ ವರ್ಣಿಸಬೇಕು ? ಜೈನ ಬೌದ್ಧರಂಥ ವಾದಿಗಳು ನಿರುತ್ತರರಾಗಬಹುದು, ವೇದಪುರಾಣ ಸಾಹಿತ್ಯವನ್ನು ಭಕ್ತಿಯಿಂದ ಕಾಣುವ ನಮ್ಮ ಒಳಮನಸ್ಸು ತೃಪ್ತಿ ಹೊಂದಲಾರದು. ಭಾಗವತದಲ್ಲಿ ಹೇಳಿದಂತೆ ಮರೀಚಿ ಮುಂತಾದ ಋಷಿಗಳು ಆಕ್ಷೇಪಿಸಿದುದು, ಬ್ರಹ್ಮನಿಗೆ ನಾಚಿಕೆ ಉಂಟಾದುದು, ಬಳಿಕ ಆಕೆಯನ್ನು ಪರಿತ್ಯಜಿಸಿದುದು - ಇದೆಲ್ಲ ಏನು ಎಂಬ ಪ್ರಶ್ನೆ ಉಳಿಯುವದು.

ವಸ್ತುತಃ ದೇವತೆಗಳು ಅಪರೋಕ್ಷ ಜ್ಞಾನಿಗಳು. ಅವರಿಗೆ ಕಾಮದ ಉಪದ್ರವವಿಲ್ಲ ' ಅಪರೋಕ್ಷೀಕೃತ ಶ್ರೀಶ'ರು ' ಸಮುಪೇಕ್ಷಿತ ಭಾವಜ'ರಾಗುವುದು ಸ್ವಾಭಾವಿಕ. ಸಾಮಾನ್ಯ ಮಾನವರಿಗೆ ಮಾತ್ರ ಕಾಮವನ್ನು ಮೆಟ್ಟಿ ನಿಲ್ಲಬಲ್ಲ

ಸಾಮರ್ಥ್ಯವಿರುವುದಿಲ್ಲ. ಏಕೆಂದರೆ ಕಾಲನೇಮಿ ಎಂಬ ಮಹಾ ದೈತ್ಯನು ಈ ದುಷ್ಟಕಾಮಕ್ಕೆ ಅಭಿಮಾನಿ. ಮಹಾಭಾರತದಲ್ಲಿ ಏಳು ಶ್ಲೋಕಗಳ ಕಾಮಗೀತೆಯೊಂದಿದೆ. ಅದರಲ್ಲಿ,

ಯೋ ಮಾಂ ಪ್ರಯತತೇ ಹಂತುಂ ಧೃತ್ವಾ ಸತ್ಯಪರಾಕ್ರಮಃ ।
ಭಾವೋ ಭವಾಮಿ ತಸ್ಯಾಹಂ ಸ ಚ ಮಾಂ ನಾವಬುಧ್ಯತೇ ॥
ಅವಧ್ಯಃ ಸರ್ವಭೂತಾನಾಂ ಅಹಮೇಕಃ ಸನಾತನಃ ॥

'ಯಾರು ನನ್ನನ್ನು ನಾಶಪಡಿಸಲು ಯತ್ನಿಸುವನೋ ಅವನೊಳಗೆ ನಾನು ಸದಾ ಬೆಳೆಯುತ್ತಿರುತ್ತೇನೆ ಅವನಿಗಿದು ತಿಳಿಯುವುದಿಲ್ಲ. ಯಾರೂ ನನ್ನನ್ನು ನಾಶಪಡಿಸಲಾರರು ನಾನು ಶಾಶ್ವತ, ಅಸಹಾಯ ಶೂರ' ಎಂದು ಕಾಮವು ಆತ್ಮ ಪ್ರಸಂಶೆ ಮಾಡಿಕೊಂಡಿದೆ. ಇದರಲ್ಲಿ ಏನೂ ಹುರುಳಿಲ್ಲವೆನ್ನಲಾಗದು. ಆಧುನಿಕ ವಿಜ್ಞಾನ ಪ್ರಕಾರ ಪ್ರತಿಯೊಬ್ಬನಿಗೂ ಕಾಮ ಪ್ರವೃತ್ತಿ ಸ್ವಾಭಾವಿಕ. ಬಲಾತ್ಕಾರದಿಂದ ಅದುಮಿಕೊಂಡಷ್ಟೂ ಪ್ರತಿಕ್ರಿಯೆಯ ನಿಯಮಾನುಸಾರವಾಗಿ ಇನ್ನೂ ಹೆಚ್ಚು ಸಿಡಿದೇಳುವ ಸಂಭವವಿದೆ. ಅಥವಾ ಮನಸ್ಸಿಗೆ ಆಘಾತ ಉಂಟಾಗಿ ಉನ್ಮಾದಗಳುಂಟಾಗಲೂಬಹುದು. ಅದಕ್ಕಾಗಿಯೇ ಬ್ರಹ್ಮಚರ್ಯ, ಗೃಹಸ್ಥ ವಾನಪ್ರಸ್ಥ ಆಶ್ರಮಗಳನ್ನು ಕ್ರಮದಿಂದ ಪಾಲಿಸಿ ಕೊನೆಗೇ ಸನ್ಯಾಸ ಸ್ವೀಕರಿಸಬೇಕೆಂಬ ವಾದ ಒಂದಿದೆ ಆದರೆ ಗೀತೆಯಲ್ಲಿ ವರ್ಣಿಸಿದಂತೆ ' ಮಹಾಶನೋ ಮಹಾಪಾಪ್ಮಾ' ಎನಿಸಿರುವ ಕಾಮಕ್ಕೆ ಉಪಭೋಗದಿಂದ ತೃಪ್ತಿ ಎಂಬುದಿಲ್ಲ. ಆದ್ದರಿಂದ ಬಲು ಜಾಗರೂಕತೆಯಿಂದ ಇಂದ್ರಿಯ ಸಂಯಮವನ್ನು ಅಭ್ಯಸಿಸಿ ಪರಮಾತ್ಮನ ಅನುಗ್ರಹವನ್ನೂ ಸಂಪಾದಿಸಿ ಕಾಮವನ್ನು ಗೆಲ್ಲಬೇಕು. ಅಪರೋಕ್ಷ ಜ್ಞಾನವನ್ನು ಗಳಿಸಬೇಕು. ಅದರಿಂದ ಅಜ್ಞಾನ ಹರಿದಾಗ ಕಾಮದ ಆಟ ಒಂದೂ ನಡೆಯಲಾರದು. "ಕಾಮದ ವಿಷವೃಕ್ಷಕ್ಕೆ ಅಜ್ಞಾನವೇ ಮೂಲಾಧಾರ. ವಿಷಯಲಾಲಸೆ ಎಂಬ ವಿಷಲತೆ ಈ ಮರವನ್ನು ಸುತ್ತಿಕೊಂಡು ದಟ್ಟವಾಗಿ ಹಬ್ಬುತ್ತದೆ. ಮರವು ಬೆಳೆದು ಬೆಳೆಸಿದವನನ್ನೇ ನಾಶಮಾಡುತ್ತದೆ, ವಿಷಗ್ರಂಥಿಯನ್ನು ಬೆಳೆಸಿಕೊಂಡ ರೋಗಿಯನ್ನು ಅದುವೇ ಕೊಲ್ಲುವಂತೆ" ಎಂದು ಮೋಕ್ಷ ಧರ್ಮದಲ್ಲಿ ಶುಕಮುನಿಗಳಿಗೆ ವೇದವ್ಯಾಸರ ಉಪದೇಶವಿದೆ. ಆದ್ದರಿಂದ ಅಪರೋಕ್ಷಿಗಳಿಗೆ ಜ್ಞಾನದಿಂದ ಅಜ್ಞಾನ ಹರಿದು ಕಾಮವೃಕ್ಷಕ್ಕೆ ಮೂಲಾಧಾರ ಇಲ್ಲದಂತಾಗುವುದರಿಂದ ಅದು ಬಿದ್ದು ಹೋಗುವುದು. ಪ್ರಾರಬ್ಧ ಕರ್ಮದಿಂದ ಕೆಲವೊಮ್ಮೆ ತಮಗಿಂತ ಕೆಳಗಿನ ತರಗತಿಯವರ ಸ್ತ್ರೀಯರನ್ನು ಅವರು ಬಯಸಬಹುದು. ದೋಷವಿಲ್ಲ. ಬ್ರಹ್ಮ ದೇವರ ವಿಷಯದಲ್ಲಿ ಇದಕ್ಕೂ ಅವಕಾಶವಿಲ್ಲ.

'ನ ಮೇ ಹೃಷೀಕಾಣಿ ಪತಂತ್ಯಸತ್ಪಥೇ
ಯನ್ಮೇ ಹೃದೌತ್ಕಂರ್ಯತಾ ಧೃತೋ ಹರಿಃ ।'

'ನನ್ನ ಮನಸ್ಸಿನಲ್ಲಿ ಸದಾ ಹರಿಧ್ಯಾನವೇ ಇರುವುದರಿಂದ ನನ್ನ ಇಂದ್ರಿಯಗಳು ದುರ್ಮಾರ್ಗಕ್ಕೆ ಬೀಳುವುದಿಲ್ಲ' ಎಂದು ಬ್ರಹ್ಮದೇವರು ಹೇಳುತ್ತಾರೆ. ಅವರು ಋಜುಯೋಗಿಗಳು ಅವರು ನಡೆಸುವ ಯೋಗ ಋಜುವಾಗಿರುತ್ತದೆ ವಕ್ರವಲ್ಲ

'ಯೋಗಸ್ಯ ವಕ್ರತಾ ನಾಮ ಕಾಮೇನ ಹರಿ ಪೂಜನಂ'

ಹರಿಯಲ್ಲಿಯೂ ಅವರು ತಮ್ಮ ಸುಖವನ್ನು ಬೇಡುವವರಲ್ಲ.

'ತಾರ್ಣೇ ಪೌಕಸಿ ಪಾರ್ಣೇ ವಾ ತಾಪಸೋ ಭೂಪ ಸೋऽವಸತ್'

'ರಾಜನೇ ತಪಸ್ವಿಯು ಹುಲ್ಲಿನ ಮನೆಯಲ್ಲಿಯೋ ಎಲೆಮನೆಯಲ್ಲಿಯೂ ವಾಸ ಮಾಡುತ್ತಾನೆ. ನಿನ್ನಲ್ಲಿ ಏನೂ ಬೇಡಲು ಬರುವುದಿಲ್ಲ' ಎಂದು ವಾದಿರಾಜರು ಯುಕ್ತಿಮಲ್ಲಿಕೆಯಲ್ಲಿ ಹೇಳುವಂತೆ, ಸದಾ ಶ್ರೀಹರಿಯ ಅನುಪಮ ಸುಂದರ ರೂಪವನ್ನು ಧ್ಯಾನದಿಂದ ಕಾಣುವವರಿಗೆ ವಿಷಯಸುಖದಲ್ಲಿ ಯಾವ ಆಕರ್ಷಣೆಯೂ ಇರುವುದಿಲ್ಲ ಹನುಮಂತನಿಗೆ ರಾಮರಾಜ್ಯದಲ್ಲಿ ಏನು ಬೇಕಾದರೂ ಭೋಗಿಸಬಹುದಿತ್ತು ರಾಮನಿಗೆ ಅವನಿಗಿಂತ ಹೆಚ್ಚು ಪ್ರೀತಿಪಾತ್ರರಾಗಿರುವ ಇನ್ನಾರೂ ಇದ್ದಿಲ್ಲ ರಾಮರಾಜ್ಯವೆಂದ ಮೇಲೆ ಯಾವ ಸಂಪತ್ತಿಗೂ ಕೊರತೆ ಎಂಬುದಿದ್ದಿಲ್ಲ. ಆದರೂ ರಾಮನ ಪಾದಸೇವೆ ಒಂದನ್ನುಳಿದು ಬೇರಾವುದನ್ನು ಅವನು ಬಯಸಲಿಲ್ಲ. ಪುರಂದರದಾಸರು ಹಾಡಿದ್ದಾರೆ–

ಉದಧಿ ಲಂಘಿಸಿ ಸೀತೆಯ ಕಂಡು ಬಂದಾಗ
ಮದುವೆಯ ಮಾಡೆನ್ನಬಾರದಿತ್ತೇ ?
ಪದದಿ ಪಾಷಾಣ ಪೆಣ್ಣ ಮಾಡಿದಗೆ
ಇದು ಏನು ಆಶ್ಚರ್ಯ, ನೀ ಬಯಸಲೊಲ್ಲೆ ॥

ಹನುಮಂತನು ರಾವಣನ ಅಂತಃಪುರದಲ್ಲಿ ನಡುರಾತ್ರಿ ಪ್ರವೇಶಿಸಿದಾಗ ಅಲ್ಲಿ ಕುಡಿದು ಮತ್ತರಾಗಿ ಅಸ್ತವ್ಯಸ್ತ ವೇಷಭೂಷಣರಾಗಿ ಮಲಗಿರುವ ಮೂಲೋಕದ ಸುಂದರಿಯರೆಲ್ಲ ಒಂದೆಡೆ ಕಂಡು ಬಂದರೂ ಅವನು ಯಾವ ಮನೋವಿಕಾರಕ್ಕೂ ಒಳಗಾಗಲಿಲ್ಲ. ರಾಮಕಾರ್ಯ ಒಂದೇ ಅವನ ಮನಸ್ಸಿನಲ್ಲಿತ್ತು. ವಿಕಾರಗಳಿಗೆ ಅಲ್ಲಿ ಅವಕಾಶವೇ ಇರಲಿಲ್ಲ.

ಸ್ಮರನಂಬು ಗೆಲಿದಾತ ಶರಣ ಜನರಿಗೆ ದಾತ ।
ಸಿರಿ ಪುರಂದರ ವಿಟ್ಠಲನಚ್ಚಿನ್ನ ಭಕ್ತ ॥
ಈತ ಮುಖ್ಯಪ್ರಾಣನಾಥ ॥

ಇಂಥ ಋಜುಯೋಗಿಗಳನ್ನು ಎಂದೂ 'ಕಾಮನಿರ್ಜಿತ'ರೆನ್ನಲಾಗದು, 'ಕಾಮವರ್ಜಿತ'ರೆನ್ನಬೇಕು. ಹಾಗೇ ಒಂದು ಪಾರವೂ ಇದೆ-

'ಕಾಮವರ್ಜಿತನೊಬ್ಬ ಕಾಮಿನಿಗೆ ಸೋತ !'

ವಿಚಿತ್ರವಾಗಿ ಕಾಣಬಹುದು ಆದರೆ ಕಾಮವರ್ಜಿತನೆ ಆಗಿದ್ದರೂ ಕಾಮಿನಿಗೆ ಸೋತಂತೆ ನಟಿಸಿದನೆಂದರ್ಥ ಈ ಪಾರದಲ್ಲಿ ಭಾಗವತದ 'ಕಶ್ಚಿನ್ಮಹಾನ್ ತಸ್ಯ ನ ಕಾಮ ನಿರ್ಜಯಃ' ಎಂಬ ಹೇಳಿಕೆಯ ಛಾಯೆ ಸ್ಪಷ್ಟವಾಗಿದೆ ಬ್ರಹ್ಮದೇವನು ಶಾಂತಿ-ಅನಿರುದ್ಧ ದಂಪತಿಗಳಲ್ಲಿ ಮಹಾನ್ ಎಂಬ ಹೆಸರಿನಿಂದ ಹುಟ್ಟಿದವನು. ಮಹತ್ತತ್ವಕ್ಕೆ ಅಭಿಮಾನಿ ಜೀವೋತ್ತಮ. ಈ ಎಲ್ಲ ಕಾರಣಗಳಿಂದ ಆತ 'ಮಹಾನ್' ಎನಿಸಿದವನು ಜೀವಕೋಟಿಯಲ್ಲಿ ಕಾಮವರ್ಜಿತನಾದವನೂ ಅವನೊಬ್ಬನೇ. ಆದುದರಿಂದಲೂ ಆತ ' ಮಹಾನ್' ಎನಿಸಿಕೊಳ್ಳಲು ಯೋಗ್ಯನು ಇಂಥವನೂ ಒಮ್ಮೆ ಕಾಮಿನಿಗೆ ಸೋತ ! ಕಾಮನಿಗ್ರಹ ಮಾಡಿಕೊಳ್ಳುವ ಶಕ್ತಿ ಇಲ್ಲವೆಂದಲ್ಲ, ಇಚ್ಛೆ ಇರಲಿಲ್ಲ. 'ಸ್ತುತಯೋಽನುಮತಿರ್ವಾ' ಎಂಬ ಬ್ರಹ್ಮಸೂತ್ರದಲ್ಲಿ ' ಜ್ಞಾನಿಗಳು ಏನು ಮಾಡಿದರೂ ಸರಿಯೇ' ಎಂದು ವೇದವು ಹೊಗಳುವುದನ್ನು ಪ್ರಸ್ತಾಪಿಸಿದೆ. ಕರ್ಣನು ಉಪನಯನವಿಲ್ಲದೆ ವೇದಾಧ್ಯಯನ ಮಾಡಿದ, ದೇವಾಂಶ. ಹಾಗೆಂದು ಮಾನವನೂ ಮಾಡಹೋದರೆ ಅನರ್ಥ. ಬ್ರಹ್ಮಜ್ಞಾನ ದೊರೆತ ಮೇಲೂ ಆತ ಸ್ವೇಚ್ಛಾಚಾರಿಯಾಗಿರಕೂಡದು, ಮೋಕ್ಷದಲ್ಲಿ ಆನಂದ ಹ್ರಾಸವಾದೀತು. ದೇವತೆಗಳಿಗೆ ಈ ಭಯವಿಲ್ಲ. ಅವರಿಗೆ ಹರಿಯ ಅನುಮತಿ ಇದೆ- 'ಸದಾಚಾರ ಮಾಡಬಹುದು, ಬಿಡಲೂಬಹುದು, ದುರಾಚಾರವನ್ನೂ ಮಾಡಬಹುದು.' ಆದರೂ ಸ್ವಭಾವತಃ ಸಜ್ಜನರಾದುದರಿಂದ ಹೆಚ್ಚಾಗಿ ಸದಾಚಾರವನ್ನೇ ಮಾಡುತ್ತಾರೆ. ಕೆಲವೊಮ್ಮೆ ದುರಾಚಾರಕ್ಕೆ ಸ್ವೇಚ್ಛೆಯಿಂದ ಇಳಿಯುತ್ತಾರೆ. ಬ್ರಹ್ಮನು ಹೀಗೆ ಮಾಡುವವನಲ್ಲ. ಮೋಹಕ್ಕಾಗಿ ಮಾಡಬೇಕೆಂದು ಹರಿಯಾಜ್ಞೆ ಇರುವುದರಿಂದ ಮಾಡುತ್ತಾನೆ. ಇದನ್ನು ತಿಳಿಯದೆ ಅಸುರರೊಂದಿಗೆ ಸೇರಿ ಸಜ್ಜನರೂ ಮೋಹಗೊಂಡು ಬ್ರಹ್ಮನನ್ನು ಆಕ್ಷೇಪಿಸತೊಡಗಿದರೆ ಮುದ್ಗಲ ಮುನಿಯಂತೆ ಬಳಿಕ ಪಶ್ಚಾತ್ತಾಪಪಡಬೇಕಾಗುವುದು

ಮರೀಚಿ ಮುಂತಾದವರು ಆಕ್ಷೇಪಿಸಲಿಲ್ಲವೇ ? ಇಲ್ಲ. ಸ್ತೋತ್ರ ಮಾಡಿದರು. 'ನಟನೆ ಚೆನ್ನಾಗಿಯೇ ಮಾಡಿರುವಿ. ಸಜ್ಜನರೂ ಭ್ರಾಂತಿಗೊಳಗಾಗುವಂತಿದೆ. ದಯೆಯಿಟ್ಟು ಸಾಕುಮಾಡು. ಜಗದ್ಗುರು ನೀನು ನಿನ್ನಾಚರಣೆ ನೋಡಿ ಸಜ್ಜನರು

ಕಲಿಯಬೇಕು' ಎಂದರು ಅವರು. ಇದರಲ್ಲಿ ಆಕ್ಷೇಪದ ಧ್ವನಿ ಇಲ್ಲ. ಕಳವಳವಿದೆ. ಪ್ರಾರ್ಥನೆಯ ಮನೋಭಾವವಿದೆ.

ಮುನಿಗಳ ಪ್ರಾರ್ಥನೆಯ ಮೇರೆಗೆ ಬ್ರಹ್ಮನು ವಾಗ್ದೇವಿಯನ್ನು ಬಿಡುವುದುಂಟೆ ? ಆಕೆ ಆತನ ಪಟ್ಟದ ರಾಣಿ. ಕೃತಿ ಪ್ರದ್ಯುಮ್ನ ದಂಪತಿಗಳಿಗೆ ಸರಸ್ವತಿ ಭಾರತಿಯರು ಇಬ್ಬರು ಹೆಣ್ಣು ಮಕ್ಕಳು. ಸರಸ್ವತಿಯನ್ನು ವಾಸುದೇವ ಪುತ್ರನಾದ ಬ್ರಹ್ಮನಿಗೂ, ಭಾರತಿಯನ್ನು ಸಂಕರ್ಷಣ ಪುತ್ರನಾದ ವಾಯುವಿಗೂ ಮದುವೆ ಮಾಡಿ ಕೊಟ್ಟಿದ್ದರು. ಆದ್ದರಿಂದ ಬ್ರಹ್ಮನ ಮಗಳು ಸರಸ್ವತಿ ಎನ್ನುವುದಾದರೂ ಹೇಗೆ ? ಬ್ರಹ್ಮನ ಶರೀರದಲ್ಲಿಯೇ ಎಡಭಾಗದಲ್ಲಿ ಆಕೆ ಇದ್ದಳು. ಆಗ ನಿಜವಾಗಿಯೂ ಆಕೆ ಅರ್ಧಾಂಗಿನಿಯೇ ಆಗಿದ್ದಳು. ಅರ್ಧನಾರೀ ನರರೂಪನಾಗಿದ್ದ ಬ್ರಹ್ಮ ತನ್ನ ಒಂದೊಂದು ಅಂಗದಿಂದ ಸೃಷ್ಟಿ ಮಾಡುತ್ತಿದ್ದ. ಕೊನೆಗೆ ದಂಪತಿಗಳು ಬೇರೆ ಬೇರೆ ಶರೀರ ಧರಿಸಿ ಸೃಷ್ಟಿಕಾರ್ಯ ಮುಂದುವರಿಸಿದರು.

ಈ ಪ್ರಶ್ನೆಗೆ ಉತ್ತರವನ್ನು ಶ್ರೀಮದಾಚಾರ್ಯರು ಭಾಗವತ ತಾತ್ಪರ್ಯದಲ್ಲಿ ಕೊಟ್ಟಿದ್ದಾರೆ. ಇಲ್ಲಿ ಬ್ರಹ್ಮನು ಪರಿತ್ಯಾಗ ಮಾಡಿದ ವಾಗ್ದೇವಿ ಶ್ರುತಿಸ್ಮೃತಿ ಮುಂತಾದ ಸಚ್ಛಾಸ್ತ್ರಗಳ ಅಭಿಮಾನಿನಿಯಾದ ತನ್ನ ಪಟ್ಟದ ರಾಣಿಯಾದ ವಾಗ್ದೇವಿಯಲ್ಲ. ನ್ಯಾಯವೈಶೇಷಿಕಾದಿ ಮಾನವ ನಿರ್ಮಿತ ದುಷ್ಟಶಾಸ್ತ್ರಗಳ ಅಭಿಮಾನಿನಿಯಾದ ಓರ್ವ ಕ್ಷುದ್ರದೇವತೆ. ಅವಳನ್ನು ಮುಂದೆ ದಿಗ್‌ದೇವತೆಗಳು ಸ್ವೀಕರಿಸಿದರಂತೆ.

'ಕಾಮವರ್ಜಿತನೊಬ್ಬ' ಎಂಬ ಪಾಠದಲ್ಲಿ ಅದನ್ನು ಒಂದು ಅರ್ಥದಲ್ಲಿ ರುದ್ರನಿಗೂ ಅನ್ವಯಿಸಬಹುದು. ಕಾಮನನ್ನು ಸುಟ್ಟು ಬೂದಿ ಮಾಡಿದ ರುದ್ರನನ್ನು ಕಾಮವರ್ಜಿತನೆನ್ನುವುದು ನ್ಯಾಯವೇ. ಅವನು ಪಾರ್ವತಿಯ ಕೈ ಹಿಡಿದುದು ಕಾಮದಿಂದಲ್ಲ. ಪ್ರೇಮದಿಂದ ಎನ್ನುವುದಕ್ಕೆ ಪಾರ್ವತೀ ಪರಿಣಯವು ಕಾಮದಹನವಾದ ಬಳಿಕ ನಡೆದುದೇ ಸಾಕ್ಷಿ. ಅವಳ ಮೇಲಿನ ಪ್ರೇಮದಿಂದ ಅರ್ಧನಾರೀಶ್ವರನಾಗಿಯೇ ಕುಳಿತು ತಪಸ್ಸು ಮಾಡುತ್ತಿದ್ದಾನೆ, ಶಿವ. ಇಂಥವನನ್ನು ಕಾಮನಿರ್ಜಿತನೆನ್ನಬಹುದೇ ? 'ಮಾರನ ಗೆದ್ದ ಮನೋಹರ ಮೂರ್ತಿ' ಆತನೆಂದು ವಾದಿರಾಜರು ಹೇಳುತ್ತಾರೆ. ಮೂರನೇ ಕಣ್ಣಿಂದ ಮಾತ್ರವಲ್ಲ ತನ್ನ ಮನೋಹರ ಮೂರ್ತಿಯಿಂದಲೂ ಮಾರನನ್ನು ಗೆದ್ದವನು ಕಾಮವರ್ಜಿತನೇ ಸರಿ. ಆದರೂ ಭಾಮಿನಿಯ ಹಿಂದೆ ಹಾರಿದ. ಧಾವಿಸಿದ. ವಿಷ್ಣುಮಾಯೆ ! 'ಕೋ ನು ಮೋಽತಿತರೇನ್ಮಾಯಾಂ' ಎಂಬಂತೆ ಸ್ತ್ರೀಸೌಂದರ್ಯಕ್ಕೆಲ್ಲ ಅಧಿನಾಯಕಿಯಾದ ಮೋಹಿನಿಯನ್ನು ಕಂಡು ಮೋಹಪರವಶನಾಗಿ ಬಳಿಯಲ್ಲಿ ಪಾರ್ವತಿ ಇರುವುದನ್ನೂ ಗಮನಿಸದೇ ಲಜ್ಜೆಬಿಟ್ಟು ಆ ಮೋಹಿನಿಯ ಬೆನ್ನ ಹಿಂದೇ ಧಾವಿಸಿದ್ದ ಶಿವ. ಕೊನೆಗೆ ತನ್ನ ದೌರ್ಬಲ್ಯಕ್ಕೆ ತಾನೇ ಲಜ್ಜಿತನಾದ. ಆಗ ವಿಷ್ಣು ಸಮಾಧಾನ ಪಡಿಸಿದನೆಂದು ಭಾಗವತ ಹೇಳುತ್ತದೆ.

ಇಂದ್ರನನ್ನೂ ಕಾಮವರ್ಜಿತನೆನ್ನಬೇಕು 'ಕಾಮಾಂಧನಾಗಿ ಮುನಿಯ ಕಾಮಿನಿ ಗೈದಿದ'ನೆಂದು ಹೇಳಿದರೆ ಅದು ಸತ್ಯಕ್ಕೆ ದೂರವಾದೀತು. ವಾಲ್ಮೀಕಿ ರಾಮಾಯಣವನ್ನು ನೋಡಿದರೆ ಇಂದ್ರನು ಅಹಲ್ಯೆಯನ್ನು ಬಲಾತ್ಕರಿಸುವುದು ಕಾಮದಿಂದಲ್ಲ ಎನ್ನುವುದು ಸ್ಪಷ್ಟ. ಗೌತಮಮುನಿ ಶಕ್ತಿ ಮೀರಿ ತಪಸ್ಸು ಮಾಡಿ ಸಂಪಾದಿಸಿದ ಹೆಚ್ಚಿನ ಪುಣ್ಯವನ್ನು ಕಳೆದು ಅವರಿಗೆ ಉಪಕಾರ ಮಾಡಲೆಂದು ಅವರ ಪತ್ನಿಯನ್ನು ಬಲಾತ್ಕರಿಸಿದ್ದ ಇಂದ್ರ. ಮುನಿಯು ಕುಪಿತನಾಗಬೇಕು, ಉತ್ತಮರಿಗೆ ಶಾಪಕೊಟ್ಟು ತನ್ನ ತಪಸ್ಸಿನ ಪುಣ್ಯವನ್ನು ನಾಶಪಡಿಸಿಕೊಳ್ಳಬೇಕು ಎಂದು ಉದ್ದೇಶವಿತ್ತು, ಇಂದ್ರನಿಗ. ಅಹಲ್ಯೆಗೂ ಇದರಿಂದ ಯಾವ ದೋಷವೂ ಇಲ್ಲ. ಬಲಾತ್ಕಾರದಿಂದಾದ ಶೀಲಭಂಗಕ್ಕೆ ಅವಳು ಹೊಣೆಯಲ್ಲ. ಮೊದಲು ಪ್ರತಿಭಟಿಸಿದರೂ ಕೊನೆಗೆ ಇಂದ್ರನ ಬಲಾತ್ಕಾರವನ್ನು ಸ್ವಾಗತಿಸಿದಳೆಂದು ವಾಲ್ಮೀಕಿ ರಾಮಾಯಣದಲ್ಲಿರುವುದೇನೋ ನಿಜ. ಆದರೆ ಅದು ನಿಜವಲ್ಲ. ಅಸುರ ಮೋಹನಾರ್ಥ. ಆದ್ದರಿಂದ ಪಂಚಪತಿವ್ರತೆಯರಲ್ಲಿ ಆಕೆಗೆ ಅಗ್ರಸ್ಥಾನವಿದೆ. ಹೀಗೆ ದಂಪತಿಗಳಿಗಿಬ್ಬರಿಗೂ ಉಪಕಾರ ಮಾಡಿ ತಾನು ಮಾತ್ರ ಶಾಪವನ್ನು ಸ್ವೀಕರಿಸಿದ್ದ ಇಂದ್ರ. ಇದರಿಂದ ದೇವತೆಗಳಿಗೆ ದುಃಖವಾಯಿತು. ಇಂದ್ರನೂ ಪರಿತಪಿಸಿದನಂತೆ, ಶಾಪದಿಂದಲ್ಲ. ಅದು ಅವನಿಗೆ ಏನೂ ಮಾಡಲಾರದು. 'ತಸ್ಯ ಲೋಮ ಚ ನ ಮೀಯತೇ' ' ಅವನ ಒಂದು ರೋಮಕ್ಕೂ ಅಪಾಯವಾಗಿಲ್ಲ.' ಎಂದು ಶ್ರುತಿ ಹೇಳುತ್ತದೆ. ಹಾಗಾದರೆ ಏಕೆ ಪರಿತಾಪ ? ಮುನಿದಂಪತಿಗಳ ಮನ ನೋಯುವಂಥ ಪ್ರಸಂಗವೊದಗಿತು ಎಂದು. ಅಹಲ್ಯೆಗೆ ಶಾಪವೊದಗಿತೆಂದೂ ಪರಿತಪಿಸಬೇಕಾಗಿಲ್ಲ. ಅವಳ ಜನ್ಮಾಂತರೀಯ ಪಾಪ ಈ ಶಾಪದ ಫಲವಾಗಿ ತೊಲಗಿತು. ವಿಯೋಗಗೊಂಡ ಈ ದಂಪತಿಗಳು ತಿರುಗಿ ಸೇರುವವರೆಗೂ ಇಂದ್ರನು ಮನಸ್ಸಿನಲ್ಲಿ ಒಂದು ವಿಧದ ವೇದನೆ ಅನುಭವಿಸುತ್ತಿದ್ದ. ಶ್ರೀರಾಮನ ದಯೆಯಿಂದ ಅದೂ ಕೈಗೂಡಿತು. ಹೀಗಾಗಿ ಅಹಲ್ಯೆಯ ಪ್ರಕರಣ ಇಂದ್ರನ ಮಹತ್ವವನ್ನು ಹೆಚ್ಚಿಸಿತೇ ಹೊರತು ಕುಂದು ತರಲಿಲ್ಲ. ' ಅಹಲ್ಯಾಯೈ ಜಾರ' ಎಂದು ವೇದವೇ ಅವನನ್ನು ಕೊಂಡಾಡುತ್ತದೆ.

ಹಾಗಾದರೆ ' ಕಾಮಾಂಧನಾಗಿ ಮುನಿಯ ಕಾಮಿನಿಗೈದಿದ'ನೆಂಬ ಮಾತಿಗೆ ಏನರ್ಥ ? ಇಂದ್ರನು ವಸ್ತುತಃ ಕಾಮಾಂಧನಲ್ಲ, ಕಾಮವರ್ಜಿತನೇ, ಆದರೂ ತತ್ಕಾಲದಲ್ಲಿ ' ಕಾಮಾಂಧನಾಗಿ' ಮುನಿಯ ಕಾಮಿನಿಗೈದಿದ. ನಾಟಕದಲ್ಲಿ ವೇಷ ತೊಟ್ಟು ಒಬ್ಬ ರಾವಣನಾಗಬಹುದು ನಿಜ ಜೀವನದಲ್ಲಿ ಅವನೇ ಶ್ರೀರಾಮನಂತೆ ಶುದ್ಧ ಚಾರಿತ್ರ್ಯ ಉಳ್ಳವನಾಗಿರಬಹುದು, ವಿರೋಧವಿಲ್ಲ. ಹಾಗೇ ಇಂದ್ರನೂ ಕಾಮಾಂಧನಾದ. ಚಾತುರ್ಯದಿಂದ ಆ ಪಾತ್ರವನ್ನು ನಿರ್ವಹಿಸಿದ. ಕಾಮದ ಆವೇಗವನ್ನು ತೋರಿ ಬಲು ಆತುರತೆಯಿಂದ ವರ್ತಿಸಿದ ವಾದಿರಾಜರ ಪದ

ಪ್ರಯೋಗದ ಔಚಿತ್ಯಕ್ಕೆ ಒಂದು ಉದಾಹರಣೆ ಇಲ್ಲಿದೆ - ' ಕಾಮಾಂಧನಾಗಿ ಮುನಿಯು ಕಾಮಿನಿಗೈದಿದನೊಬ್ಬ' ಎಂದು ಹಾಡುವಾಗ ಶಬ್ದಗಳು ಸ್ವಲ್ಪ ಜಾಸ್ತಿಯಾಗಿದ್ದು ತ್ವರಿತಗತಿಯಿಂದ ಹಾಡಬೇಕಾಗುತ್ತದೆ. ಇಂದ್ರನ ಆತುರ ಪ್ರವೃತ್ತಿ ಇದರಿಂದ ಧ್ವನಿತವಾಗುತ್ತದೆ. ಏಕೆಂದರೆ ಈ ಸಾಲಿನ ಹಿಂದೆಮುಂದೆ ಈ ರೀತಿ ಪದಪ್ರಯೋಗವಿಲ್ಲ.

ಚಂದ್ರನೂ ಕಾಮವರ್ಜಿತನೇ, ಏಕೆಂದರೆ ಅವನೂ ಒಬ್ಬ ದೇವತೆ. ಶ್ರೀಹರಿಯ ಅಪರೋಕ್ಷ ಉಳ್ಳವ. ಸೌಂದರ್ಯದ ಸಾರ ಸರ್ವಸ್ವವಾದ ಶ್ರೀ ಹರಿಯ ರೂಪವನ್ನು ಕಂಡವನಿಗೆ ಲೋಕದಲ್ಲಿ ಇನ್ನಾವುದೂ ಆಕರ್ಷಕವೆನಿಸಲಾರದು. ಅಮೃತದ ಸವಿ ಕಂಡವನಿಗೆ ಉಪ್ಪು ನೀರು ರುಚಿಸುವುದೇ ? ಅಪರೋಕ್ಷಿಯ ಮನದಲ್ಲಿರಬಹುದಾದ ಕಾಮದ ಬೀಜವು ಅಪರೋಕ್ಷಾನುಭವದ ಬೆಂಕಿಯಲ್ಲಿ ಹುರಿದಂತಾಗುತ್ತದೆ. ತಿರುಗಿ ಅಂಕುರಿಸುವ ಸಂಭವವಿಲ್ಲ. ಹರಿಯ ಇಚ್ಛೆಯಿಂದ ಅದೂ ಕೆಲವೊಮ್ಮೆ ಅಂಕುರಿಸಬಹುದು. ಕಾಮನನ್ನು ಸುಟ್ಟ ಶಿವನ ಮನದಲ್ಲೇ ಕಾಮದ ಹೆಮ್ಮರ ಬೆಳೆಯಿತು ಮೋಹಿನಿಯ ಕಡೆಗಣ್ಣನೋಟ ಒಂದರಿಂದ. ವಿಷ್ಣುಮಾಯೆಗೆ ಏನೂ ಅಸಾಧ್ಯವಿಲ್ಲ. ಪ್ರಶಾಂತವಾದ ನಿರ್ಮಲವಾದ ಮನೋಭಿಮಾನಿ ಚಂದ್ರನ ಮನಸ್ಸಿನಲ್ಲಿಯೂ ಕಾಮ ಕ್ರೋಧಾದಿಗಳ ಸುಂಟರಗಾಳಿಯನ್ನೇ ಎಬ್ಬಿಸಿದ ಶ್ರೀಹರಿ. ಏಕೆಂದರೆ ಹುಟ್ಟಿನಿಂದಲೇ ಚಂದ್ರನು ಬ್ರಹ್ಮನಿಂದ ಪ್ರಪಂಚದ ಬೀಜ, ಓಷಧಿ, ಬ್ರಾಹ್ಮಣ, ಜಲಗಳಿಗೆಲ್ಲಾ ಒಡೆತನ ಪಡೆದಿದ್ದ. ದೊಡ್ಡ ರಾಜಸೂಯ ಯಾಗವೊಂದನ್ನು ಮಾಡಿದ್ದ ಅಭೂತ ಪೂರ್ವವಾದ ಯಾಗ ಅದು. ಆದರಲ್ಲಿ ಅತ್ರಿಮುನಿಯೇ ಹೋತೃ. ಭೃಗುಮುನಿ ಅಧ್ವರ್ಯು ಚತುರ್ಮುಖ ಬ್ರಹ್ಮನೇ ಉದ್ಗಾತೃ. ವಸಿಷ್ಠಮುನಿ ಬ್ರಹ್ಮ ಸನಕಾದಿ ಬ್ರಹ್ಮರ್ಷಿಗಳ ನಡುವೆ ಪರಮ ಪುರುಷನಾರಾಯಣನೇ ಸದಸ್ಯನಾಗಿ ವಿರಾಜಿಸುತ್ತಿದ್ದ. ಯಾಗದ ಕೊನೆಯಲ್ಲಿ ಚಂದ್ರನು ಮೂಲೋಕವನ್ನೇ ಬ್ರಹ್ಮರ್ಷಿಗಳಿಗೆ ದಾನವಿತ್ತಿದ್ದ ಇಂಥ ಪುಣ್ಯಶಾಲಿ ಚಂದ್ರನಿಗೆ ಕಲ್ಪದ ಕೊನೆವರೆಗೆ ಒಂದು ಕ್ಷಣ ಬಿಡದೇ ಸರ್ವದೇವತೆಗಳ ವಾಸಸ್ಥಾನವಾದ ಮೇರು ಪರ್ವತಕ್ಕೆ ಪ್ರದಕ್ಷಿಣೆ ಮಾಡುವ ಭಾಗ್ಯ. ಇದರಿಂದ ಮಿತಿಮೀರಿದ ಪುಣ್ಯ ಸಂಗ್ರಹ ಅದನ್ನೆಲ್ಲಾ ಭೋಗಿಸಿ ತೀರಿಸುವುದೆಂದರೆ ಮೋಕ್ಷ ಸಿಗುವುದೆಂದು ? 'ಏಧಮಾನ ದ್ವಿಟ್' ಎಂಬ ಬಿರುದುಳ್ಳ ಶ್ರೀಹರಿ ಈ ರೀತಿ ಮಿತಿಮೀರಿದ ಪುಣ್ಯವನ್ನು ಹಾಗೇ ಬಿಡುವುದಿಲ್ಲ. ಹೇಗಾದರೂ ನಾಶಪಡಿಸಿ ಅನುಗ್ರಹಿಸುತ್ತಾನೆ. ಅದರಿಂದ ಎಲ್ಲ ದೇವತೆಗಳಿಗೂ ಋಷಿಗಳಿಗೂ ಮಾನ್ಯನಾಗಿ ರಾಜಾಧಿರಾಜನಾಗಿ ದಶದಿಕ್ಕುಗಳನ್ನು ಬೆಳಗುತ್ತ ಮೆರೆಯುತ್ತಿದ್ದ ಚಂದ್ರನಿಗೆ ಅಹಂಕಾರ ನೆತ್ತಿಗೇರಿತ್ತು. ಗುರುವೂ ಬ್ರಾಹ್ಮಣನು ಆದ

ಬೃಹಸ್ಪತಿಯು ಪತ್ನಿ ತಾರೆಯನ್ನು ಶಿಷ್ಯನೂ, ಕ್ಷತ್ರಿಯನೂ ಆದ ಚಂದ್ರನು ಅಪಹರಿಸಿದ.

ಚಂದ್ರ ಸೂರ್ಯರಿಬ್ಬರೂ ಶಕ್ತಿ ಸಾಮರ್ಥ್ಯ ಯೋಗ್ಯತೆಗಳಲ್ಲಿ ಪರಸ್ಪರ ಸಮಾನರು ಇಬ್ಬರೂ ಮೇರು ಪ್ರದಕ್ಷಿಣೆ ಮಾಡುವವರು. ಆದ್ದರಿಂದ ಸುಗ್ರೀವಾವತಾರದಲ್ಲಿ ಗುರು ಅಂದರೆ ಅಣ್ಣನಾದ ವಾಲಿಯು ಪತ್ನಿ ತಾರೆಯನ್ನು ಇಟ್ಟುಕೊಳ್ಳುವ ದುರ್ಬುದ್ಧಿ ಸೂರ್ಯನಿಗೆ ಉಂಟಾಯಿತು

ಹೀಗೆ ದೇವತೆಗಳು ಅನಾಚಾರ ಮಾಡುತ್ತಾರೆ. ಆದರೆ ನಮ್ಮ ಅನಾಚಾರಕ್ಕಿಂತ ಅದು ತುಂಬಾ ವಿಲಕ್ಷಣ ನಮ್ಮದು ಅನರ್ಥಕಾರಿ. ಅವರದು ಯಾವುದಾರೊಂದು ಬಗೆಯಿಂದ ಅವರಿಗೋ ಲೋಕಕ್ಕೋ ಉಪಕಾರಿ. ಆದ್ದರಿಂದ ಅವರೆಲ್ಲ ಹರಿಗೆ ಪ್ರೀತಿ ಪಾತ್ರರು. ಕನಕದಾಸರು ತಮ್ಮ ಹರಿಭಕ್ತಿಸಾರದಲ್ಲಿ ಈ ಅನಾಚಾರಿಗಳಾದ ಬ್ರಹ್ಮ ರುದ್ರ ಇಂದ್ರ ಚಂದ್ರರನ್ನು ಹೀಗೆ ಹೊಗಳಿದ್ದಾರೆ–

ಹೆತ್ತ ಮಗಳನು ಮದುವೆಯಾದವ-
ನುತ್ತಮನು, ಗುರುಪತ್ನಿಗಳಿಪಿದ
ಚಿತ್ತಜನು ಮಾವನ ಕೃತಘ್ನನು ನಿನಗೆ ಮೈದುನನು ।
ಹೊತ್ತು ತಪ್ಪಿಸಿ ಕಾಮದಲಿ ಮುನಿ
ಪೋತ್ತಮನ ಮಡದಿಯನು ನೆರೆದವ-
ಗಿತ್ತೆ ಕೈವಲ್ಯವನು, ರಕ್ಷಿಸು ನಮ್ಮನನವರತ ॥

ಹೀಗೆ ಬ್ರಹ್ಮ ರುದ್ರ ಇಂದ್ರ ಚಂದ್ರ ಮುಂತಾದ ದೇವತೆಗಳೆಲ್ಲರೂ ಶ್ರೀ ಹರಿಯು ಇಚ್ಛಾನುಸಾರ ನಡೆದುಕೊಳ್ಳುವವರು. ಆದುದರಿಂದ ಹರಿಯನ್ನೇ ವರಿಸುವೆನೆನ್ನುತ್ತಾಳೆ ಮಹಾಲಕ್ಷ್ಮಿ.

— ೨೦ —

**ನಶ್ವರೈಶ್ವರ್ಯವ ಬಯಸುವನೊಬ್ಬ ಪರ**
**ರಾಶ್ರಯಿಸಿ ಬಾಳುವ ಈಶ್ವರನೊಬ್ಬ ।**
**ಹಾಸ್ಯವ ಮಾಡಿ ಹಲ್ಲುದುರಿಸಿಕೊಂಡವನೊಬ್ಬ ಅ–**
**ದೃಶ್ಯಾಂಘ್ರಿಯೊಬ್ಬ ಒಕ್ಕಣ್ಣನೊಬ್ಬ ॥**

ಒಬ್ಬ ನಶ್ವರವಾದ ಐಶ್ವರ್ಯ ಬಯಸುವವನು. ಇನ್ನೊಬ್ಬ ಪರರನ್ನು ಆಶ್ರಯಿಸಿಯೇ ಬಾಳುತ್ತ 'ಈಶ್ವರ'ನೆನಿಸಿಕೊಳ್ಳುವವನು. ಮತ್ತೊಬ್ಬ ಹಾಸ್ಯವನ್ನು ಮಾಡಿ ಹಲ್ಲು ಉದುರಿಸಿಕೊಂಡವನು. ಒಬ್ಬನಿಗೆ ಕಾಲೇ ಇಲ್ಲ. ಇನ್ನೊಬ್ಬನಿಗೆ

ಒಂದೇ ಕಣ್ಣು. ಈ ದೇವತೆಗಳನ್ನು, ಅಂದರೆ ಕ್ರಮವಾಗಿ, ಇಂದ್ರ, ಶಿವ, ಪೂಷ, ಶೇಷ ಮತ್ತು ಜಯಂತ ಎಂಬ ಐವರನ್ನು ನಾನು ವರಿಸಲಾರೆ ಎನ್ನುತ್ತಿದ್ದಾಳೆ, ಸ್ವಯಂವರ ಮಾಲಿಕೆಯನ್ನು ಹಿಡಿದು ದೇವಸಭೆಯನ್ನು ಪರೀಕ್ಷಿಸುತ್ತಿರುವ ಕನ್ಯೆ ಮಹಾಲಕ್ಷ್ಮಿ.

ಭಾಗವತದಲ್ಲಿ 'ಸ ಈಶ್ವರಃ ಕಿಂ ಪರತೋವ್ಯಪಾಶ್ರಯಃ ?' 'ಪರಾಧೀನನಾಗಿರುವವನು 'ಈಶ್ವರ'ನೆನಿಸಲು ಯೋಗ್ಯನೆ ?' ಎಂದು ಮಹಾಲಕ್ಷ್ಮಿ ಒಂದು ಮಾತನ್ನಾಡಿದ್ದಾಳೆ. ಮೇಲೆ ಹೇಳಿದ ಐದು ಮಂದಿ ದೇವತೆಗಳೂ ಪರಾಧೀನರು. ನಶ್ವರವಾದ ಐಶ್ವರ್ಯವನ್ನು ಬಯಸುವ ಇಂದ್ರನು ಐಶ್ವರ್ಯದ ಉಳಿವಿಗಾಗಿ ಪರರನ್ನು ಆಶ್ರಯಿಸುವಂತವನು. 'ಈಶ್ವರ'ನೆನಿಸಿದ ಶಿವನಂತೂ, ಪರರನ್ನು, ಅಂದರೆ ತನಗಿಂತ ಉತ್ತಮರಾದ ಶ್ರೀಹರಿ, ಲಕ್ಷ್ಮಿ ಬ್ರಹ್ಮ ವಾಯುಗಳನ್ನು ಆಶ್ರಯಿಸಿಯೇ ಬಾಳುವವನು. ಶಿವನಿಗೆ ಹಾಸ್ಯಮಾಡಿ ದಕ್ಷಯಜ್ಞ ಮಂಟಪದಲ್ಲಿ ವೀರಭದ್ರನ ಏಟಿನಿಂದ ಹಲ್ಲು ಉದುರಿಸಿಕೊಂಡು ಹಿಟ್ಟನ್ನು ತಿನ್ನಲು ಪರರ ಹಲ್ಲುಗಳನ್ನು ಆಶ್ರಯಿಸುವ ಪೂಷ ಎಂಬ ಆದಿತ್ಯನು ಪರಾಧೀನ ಎಂದು ಬೇರೆ ಹೇಳಬೇಕಾಗಿಲ್ಲ. ಕಾಲಿಲ್ಲದ ಶೇಷನೂ ಪರಾಧೀನ. ತನ್ನ ಕಾಲಮೇಲೆ ತಾನು ನಿಲ್ಲಲಾರದವ ಸ್ವತಂತ್ರನೆನ್ನಲು ಸಾಧ್ಯವೆ ? ಕಾಗೆಯಾಗಿ ಹುಟ್ಟಿ ತನ್ನ ಕಣ್ಣುಗಳಲ್ಲಿ ಕುರಂಗಾಸುರನಿಗೆ ಸ್ಥಾನಕೊಟ್ಟು, ಅವನ ಪ್ರೇರಣೆಯಿಂದ ವನವಾಸದಲ್ಲಿದ್ದ ಸೀತಾಮಾತೆಗೆ ಅಪರಾಧ ಮಾಡಿ, ಶ್ರೀರಾಮನಿಂದ ಒಂದು ಕಣ್ಣನ್ನು ಕಳೆದುಕೊಂಡ ಜಯಂತನೆಂಬ ಇಂದ್ರಪುತ್ರ ಅಯ್ಯೋ ಪಾಪ ! ಎನಿಸಿಕೊಂಡವ.

ಆಪದಾಮಪಹರ್ತಾರಂ ದಾತಾರಂ ಸರ್ವಸಂಪದಾಂ ।
ಲೋಕಾಭಿರಾಮಂ ಶ್ರೀರಾಮಂ ಭೂಯೋಭೂಯೋ ನಮಾಮ್ಯಹಂ ॥

ಎಲ್ಲ ಆಪತ್ತು ಕಳೆದು ಎಲ್ಲ ಸಂಪತ್ತು ನೀಡುವ ಲೋಕಕ್ಕೇ ಆನಂದಕರನಾದ ಶ್ರೀರಾಮನನ್ನು ಪುನಃ ಪುನಃ ನಮಸ್ಕರಿಸುತ್ತೇನೆ ಎಂದು ನಾವೆಲ್ಲಾ ಸದಾ ಹೇಳುತ್ತೇವೆ. ಏನನ್ನೂ ಕೊಡಬಲ್ಲ ಪ್ರಭು ಶ್ರೀ ರಾಮಚಂದ್ರನಿಂದ ಒಂದು ಕಣ್ಣನ್ನೇ ಕಳೆದುಕೊಂಡು ದುಃಖ ಅಪಮಾನಗಳಿಂದ ಬೇಯುವ ಜಯಂತನಂಥ ಗಂಡೂ ತನಗೆ ಬೇಡವೆಂದು ಕನ್ಯೆ ಹೇಳುವುದು ಸಹಜ.

ಇಂದ್ರನು ನಶ್ವರೈಶ್ವರ್ಯ ಬಯಸುವವನು ಎನ್ನಲು ಕಾರಣವೇನು ?

ಇಂದ್ರನು, 'ಇದಿ ಪರಮೈಶ್ವರ್ಯೇ' ಎಂದು ಅವನ ಹೆಸರೇ ಸೂಚಿಸುವಂತೆ ಪರಮೈಶ್ವರ್ಯಶಾಲಿ ಐಶ್ವರ್ಯ ನಾಶವಾದರೆ ಇಂದ್ರನು ಇಂದ್ರನೇ ಅಲ್ಲ ಎಂದಾಗುವುದಿಲ್ಲವೇ ? ಈ ಪ್ರಶ್ನೆಗೆ ಹೌದೆಂದೇ ಉತ್ತರ. ಇಂದ್ರ ಎಂಬುದು ಒಂದು ಪದವಿಯಿಂದ ಬಂದ ಹೆಸರು. ಬ್ರಹ್ಮನ ಒಂದು ಹಗಲಿನಲ್ಲಿ ಹದಿನಾಲ್ಕು ಜನ

ಕ್ರಮವಾಗಿ ಇಂದ್ರಪದವಿಯನ್ನಾಳುತ್ತಾರೆ. ಒಂದೊಂದು ಮನ್ವಂತರಕ್ಕೆ ಒಬ್ಬೊಬ್ಬ ಇಂದ್ರ. ಮನ್ವಂತರವೆಂದರೆ ೩೦,೬೭,೨೦,೦೦೦ ವರ್ಷಗಳು. ಹದಿನಾಲ್ಕು ಮನ್ವಂತರ ಗಳಲ್ಲಿ ಇಂದ್ರಪದವಿಗೆ ಬರುವವರು ಹದಿನಾಲ್ಕು ಮಂದಿ. – ಯಜ್ಞ(ಶ್ರೀ ಹರಿಯ ಒಂದು ಅವತಾರ), ರೋಚನ (ವಾಯುದೇವರ ಒಂದು ರೂಪ), ಸತ್ಯಜಿತ್(ಯಮನ ಒಂದು ರೂಪ), ತ್ರಿಶಿಖ(ಅಶ್ವಿನಿ ದೇವತೆ), ವಿಭು (ಅಶ್ವಿನೀ ದೇವತೆ), ಮಂದ್ರದ್ಯುಮ್ನ, ಪುರಂದರ, ಬಲಿಚಕ್ರವರ್ತಿ, ಅದ್ಭುತ, ಶಂಭು, ವಿಧೃತ, ಸುಧೃತ, ದಿವಸ್ಪತಿ, ಮತ್ತು ಶುಚಿ. ಆರನೆ ಮತ್ತು ಏಳನೆ ಮನ್ವಂತರಗಳಲ್ಲಿ ಪುರಂದರನೆ ಇಂದ್ರಪದವಿಯನ್ನಾಳುತ್ತಾನೆ. ಏಳನೆಯದಾದ ಈ ವೈವಸ್ವತ ಮನ್ವಂತರದ ಕೊನೆಯಲ್ಲಿ ಪ್ರಳಯವಿದೆ. ಅದರ ಬಳಿಕ ಒಂದು ಕ್ಷಣವೂ ಆತ ಸಿಂಹಾಸನಕ್ಕೆ ಅಂಟಿಕೊಂಡಿರಲು ಶಕ್ಯವಿಲ್ಲ. ರುದ್ರ ಪದವಿಯೂ ಹೀಗೆಯೇ, ಶಾಶ್ವತವಲ್ಲ. ಒಂದು ಕಲ್ಪಕಾಲ ಅವನಿಗೆ ಅಧಿಕಾರ. ಬಳಿಕ ಇನ್ನೊಬ್ಬ ಆ ಪದವಿಗೆ ಬರುತ್ತಾನೆ ಕಲ್ಪ ಎಂದರೆ ಬ್ರಹ್ಮನ ನೂರು ವರ್ಷ.

ಇಂದ್ರ, ರುದ್ರರಿಬ್ಬರೂ ಹೀಗೆ ನಶ್ವರ ಐಶ್ವರ್ಯವುಳ್ಳವರು, ಪರಾಧೀನರು. ಇಂದ್ರನ ಬಗ್ಗೆ ಮಾತ್ರ 'ನಶ್ವರ ಐಶ್ವರ್ಯ' ಬಯಸುವನೆನ್ನಲು ಕಾರಣವೇನು ? ಇಂದ್ರನ ಐಶ್ವರ್ಯವು ಅವನ ಅಧಿಕಾರಾವಧಿಯಲ್ಲಿಯೇ ಹಿರಣ್ಯಕಶಿಪು, ರಾವಣ, ಬಲಿ ಮುಂತಾದವರ ಆಕ್ರಮಣಕ್ಕೆ ತುತ್ತಾದುದುಂಟು. ರುದ್ರಪದವಿಗೆ ಅಂಥ ಅಪಾಯ ಬರಲಿಲ್ಲ. ವಸ್ತುತಃ ಅವನ ಜೀವನಕ್ಕೆ ಎಷ್ಟೋ ಸಲ ಅಪಾಯ ಬಂದಿತ್ತು. ಶ್ರೀ ಹರಿಯ ಅನುಗ್ರಹದಿಂದ ತೊಂದರೆಯಾಗಿಲ್ಲ. ಆದ್ದರಿಂದ 'ಪರರಾಶ್ರಯಿಸಿ ಬಾಳುವ' ಎನ್ನಲಾಗಿದೆ.

ಇಂದ್ರನು ನಶ್ವರವಾದ ಐಶ್ವರ್ಯವನ್ನು ಬಯಸುತ್ತಾನೆ ಎಂಬ ಮಾತಿನಿಂದ ಭಾಗವತದಲ್ಲಿ ಮಹಾಲಕ್ಷ್ಮಿ ಹೇಳುವ ಇನ್ನೊಂದು ಮಾತು – 'ಸುಮಂಗಲಃ ಕಶ್ಚನ ಕಾಂಕ್ಷತೇ ಹಿ ಮಾಂ' 'ಮಂಗಳಾತ್ಮಕನಾದ ಒಬ್ಬನಲ್ಲಿ ಒಂದು ದೋಷವಿದೆ. ಅದೇನೆಂದರೆ ಅವನು ನನ್ನನ್ನು ಬಯಸುತ್ತಾನೆ.' – ಎಂಬುದು ಸ್ಪಷ್ಟವಾಯಿತು. ಉಪನ್ಯಾಸ ರತ್ನಮಾಲೆಯಲ್ಲಿ ವಾದಿರಾಜರು ಈ ಮಾತಿಗೆ ವಿವರಣೆ ಹೀಗೆ ನೀಡಿದ್ದಾರೆ – ನೂರು ಯಾಗಗಳನ್ನು ಮಾಡಿ ಎಲ್ಲ ಪಾಪಪರಿಹಾರ ಮಾಡಿಕೊಂಡು ವೃತಹತ್ಯೆಯಂಥ ಮಂಗಳಕಾರ್ಯಗಳನ್ನು ಮಾಡಿ ಮಹಾಪುರುಷನೆನಿಸಿದ ಇಂದ್ರನು ಮಂಗಳಾತ್ಮಕನು. ಅವನೂ ತನ್ನ ಐಶ್ವರ್ಯದ ಅಭಿವೃದ್ಧಿಗಾಗಿ, ತನ್ನ ಹೆಂಡತಿಯಾಗಬೇಕೆಂದಲ್ಲ. ನನ್ನನ್ನು ಬಯಸುತ್ತಾನೆ.' ಇಲ್ಲಿ ದೇವಿ ಇಂದ್ರನ ಎರಡು ದೋಷಗಳನ್ನು ಎತ್ತಿ ಹೇಳುತ್ತಾಳೆ. ಆತನ ಐಶ್ವರ್ಯ ನಶ್ವರ ಎಂಬುದೊಂದು. ಐಶ್ವರ್ಯಕ್ಕಾಗಿ ತನ್ನನ್ನು ಬಯಸುತ್ತಾನೆ ಎನ್ನುವುದು ಇನ್ನೊಂದು.

'ಸತ್ಯಮೇನಮನು ವಿಶ್ವೇ ಮದಂತಿ ರಾತಿಂ ದೇವಸ್ಯ ಗೃಣತೋ ಮಘೋನಃ'

ಎಂಬ ಶ್ರುತಿಯಲ್ಲಿ ಇಂದ್ರನು ಶ್ರೀಹರಿಯನ್ನೂ ದೇವಿಯನ್ನೂ ಸ್ತೋತ್ರ ಮಾಡಿ ವಿಶ್ವವೇ ಕೊಂಡಾಡುವಂಥ ಐಶ್ವರ್ಯ ಪಡೆದಿದ್ದಾನೆ ಎನ್ನಲಾಗಿದೆ. ನಾರಾಯಣವರ್ಮ ಜಪದ ಬಲದಿಂದ ವೃತ್ರನನ್ನು ಕೊಂದ. ಗೌತಮರ ಶಾಪದಿಂದಾಗಿ ಅವನ ಪದವಿ ಸದಾ ಅಸ್ಥಿರ. ಆಗಾಗ ಪದಭ್ರಷ್ಟನಾಗುತ್ತಾನೆ, ಮಹಾಲಕ್ಷ್ಮಿಯ ಅನುಗ್ರಹ ಬಯಸುತ್ತಾನೆ.

ದೂರ್ವಾಸರ ಶಾಪದಿಂದ ಲಕ್ಷ್ಮಿ ಅಂತರ್ಧಾನಳಾದಾಗ ಇಂದ್ರನು ಪರರಾಕ್ರಮಣವನ್ನು ಇದಿರಿಸಲಾಗದೆ ಲಕ್ಷ್ಮಿಯ ಪ್ರಾದುರ್ಭಾವಕ್ಕಾಗಿ ಸಮುದ್ರಮಥನದಂತಹ ಅಸಾಧ್ಯ ಕಾರ್ಯಕ್ಕೆ ಕೈಹಾಕಿದ. ಶ್ರೀ ಹರಿಯ ಅನುಗ್ರಹದಿಂದ ಅದು ಕೈಗೂಡಿತು. ಆಗ ಪ್ರಾದುರ್ಭಾವಗೊಂಡ ಮಹಾಲಕ್ಷ್ಮಿಯನ್ನು ಇಂದ್ರನು ತನ್ನ ಹೆಂಡತಿಯಾಗಲು ಬಯಸುವುದು ಅಸಂಭವ. ಆದರೂ ಕನ್ಯಾರ್ಥಿಗಳ ಸಭೆಯಲ್ಲಿದ್ದು ಲೋಕದೃಷ್ಟಿಯಿಂದ ಕನ್ಯಾರ್ಥಿಯೆ ಅವನಲ್ಲಿ ದೋಷ ಹೇಳಲೇಬೇಕಾಗಿದೆ.

ಐಶ್ವರ್ಯಕ್ಕಾಗಿ ದೇವಿಯ ಅನುಗ್ರಹವನ್ನು ಬಯಸಿದ್ದಾನೆ. ತಪ್ಪೇ ? ಕನ್ಯೆಯ ದೃಷ್ಟಿಯಲ್ಲಿ ತಪ್ಪು. ಐಶ್ವರ್ಯದ ಮೇಲೆ ಕಣ್ಣಿಟ್ಟು ಮದುವೆಯಾಗಲು ಮುಂದೆ ಬರುವ ಗಂಡಿಗೆ ತನಗಿಂತಲೂ ಐಶ್ವರ್ಯದ ಮೇಲೆಯೇ ಹೆಚ್ಚು ಮೋಹವೆಂದು ಕನ್ಯೆ ಗ್ರಹಿಸುವುದು ಸಹಜವಾಗಿದೆ.

ಶ್ರೀ ಹರಿಯು ಅಪರೋಕ್ಷಜ್ಞಾನದ ಮತ್ತು ಸುಖಪ್ರಾರಬ್ಧದ ಬಲದಿಂದ ಎಲ್ಲ ಐಶ್ವರ್ಯವನ್ನೂ ಪಡೆಯಲು ಶಕ್ಯವಿರುವಾಗ ಲಕ್ಷ್ಮೀಸ್ತವದಂಥ ಕಾಮ್ಯಕರ್ಮ ವನ್ನೇಕೆ ಮಾಡಬೇಕು ? ಇದು ದೋಷವಲ್ಲವೇ ? ಐಶ್ವರ್ಯದ ಮೋಹವೂ ಇಂದ್ರನಲ್ಲಿ ಮಿತಿಮೀರಿದೆ ತ್ರಿಲೋಕಾಧಿಪತಿಯಾಗಿದ್ದು ಸ್ವರ್ಗಲೋಕದ ಪರಮೈಶ್ವರ್ಯದಲ್ಲಿ ಓಲಾಡುವವನು ಭೂಲೋಕದ ಯಾವುದೋ ಒಂದು ಮೂಲೆಯಲ್ಲಿ ಬಡ ಮನುಜರು ಯಜ್ಞ ಮಾಡುತ್ತಿದ್ದರೆ ತನಗೆ ಬರಬೇಕಾದ ಆಹುತಿ ಬರುತ್ತಿದೆಯೇ ಎಂದು ನೋಡುತ್ತಾನೆ. ಬರದಿದ್ದಾಗ ಗಂಭೀರವಾಗಿಯೇ ಅದನ್ನು ಪರಿಗಣಿಸುತ್ತಾನೆ ! ಗೊಲ್ಲರು ಇಂದ್ರಪೂಜೆಗೆ ಬದಲಾಗಿ ಗೋವರ್ಧನ ಪೂಜೆ ಮಾಡಿದರೆಂದು ಇಡೀ ಹಳ್ಳಿ ಮುಳುಗುವಂತೆ ನಿರಂತರ ಧಾರಾಕಾರ ಮಳೆಯನ್ನು ಏಳು ದಿನಗಳ ಕಾಲ ಸುರಿಸಿದ. ಶ್ರೀಕೃಷ್ಣನು ರಕ್ಷಣೆಗೆ ನಿಂತುದರಿಂದ ಗೊಲ್ಲರಿಗೆ ಏನೂ ಅಪಾಯವಾಗಲಿಲ್ಲ. ಇಂದ್ರನ ಗರ್ವಭಂಗವೇ ಆಯಿತು.

ವೇದದಲ್ಲಿ ಇಂದ್ರ ಅಗಸ್ತ್ಯರ ಸಂವಾದವಿದೆ. ಮರುತ್ತುಗಳಿಗೆ ಯಜ್ಞ ಮಾಡಬೇಕೆಂದು ಅಗಸ್ತ್ಯ ಸಂಕಲ್ಪಿಸಿದುದನ್ನು ತಿಳಿದು ಇಂದ್ರನು ಅಗಸ್ತ್ಯನೊಂದಿಗೆ ವಾದಕ್ಕೆ ನಿಂತ. ಕೊನೆಗೂ ತನಗೇ ಯಜ್ಞ ಮಾಡಲು ಒಪ್ಪಿಸಿದ.

'ತ್ವಮೀಶಿಷೇ ವಸೂಪತೇ ವಸೂನಾಂ'

'ನೀನೇ ಎಲ್ಲ ಸಂಪತ್ತಿಗೂ ದೊರೆ' ಎಂದು ಅಗಸ್ತ್ಯರ ಬಾಯಿಂದ ಹೇಳಿಸಿದ

ಹೊಟ್ಟೆ ಬಾಕನಂತೆ ಎಲ್ಲ ಯಜ್ಞಗಳಲ್ಲಿ ಆಹುತಿಗಳನ್ನು ಸ್ವಾಹಾ ಮಾಡಿ ಸೋಮರಸವನ್ನೂ ಕುಡಿದು ಮತ್ತನಾಗಿ ವಜ್ರಾಯುಧವನ್ನು ಹಿಡಿದು ಶತ್ರುಗಳ ಮೇಲೇರಿ ಹೋಗುವ, ಅವರ ಪಟ್ಟಣಗಳನ್ನು ನಾಶಪಡಿಸಿ 'ಪುರಂ-ದರ' ಎನಿಸುವ, ಕಾಮಧೇನು, ಕಲ್ಪವೃಕ್ಷ, ಚಿಂತಾಮಣಿ ಮುಂತಾದ ಅನರ್ಘ್ಯರತ್ನಗಳನ್ನೂ, ಅಪ್ಸರೆಯರ ತಂಡವನ್ನೂ, ಏಕೆ, ಅಹಲ್ಯೆಯಂಥ ಮುನಿಪತ್ನಿಯನ್ನೂ ಬಿಡದೆ, ಎಲ್ಲ ಜನರನ್ನೂ ಎಲ್ಲ ವಸ್ತುಗಳನ್ನೂ ಭೋಗಿಸಿ ತೃಪ್ತಿಕಾಣದ ಇಂದ್ರನಲ್ಲಿ ಮಹತ್ವಪೂರ್ಣವಾದುದೆನ್ನುವುದು ಏನಿದೆ? ಮತ್ಸರ ಒಂದಿದೆ. ಋಷಿಗಳೂ, ರಾಜರೂ ಹೆಚ್ಚು ತಪಸ್ಸು ಮಾಡಕೂಡದು ಮಾಡಿದರೆ ತನ್ನ ಪದವಿಗೆ ಅಪಾಯವಾದೀತೆಂಬ ಭಯ. ಅಪ್ಸರೆಯರನ್ನು ಕಳಿಸಿ ತಪೋಭಂಗ ಮಾಡುತ್ತಾನೆ ಸಗರನ ಅಶ್ವಮೇಧದಲ್ಲಿ ಯಾಗದ ಕುದುರೆಯನ್ನೆ ಕದ್ದಿದ್ದಾನೆ! ಆಜನ್ಮ ವೈರಿಗಳಾದ ದೈತ್ಯರ ಚಕ್ರವರ್ತಿ ಪ್ರಹ್ಲಾದ ಅವನ ಬಳಿಗೆ ಮಾರುವೇಷದಿಂದ ಹೋಗಿ ಶಿಷ್ಯವೃತ್ತಿಯಿಂದ ಅವನನ್ನೊಲಿಸಿಕೊಂಡು ಅವನ ಶೀಲವನ್ನೇ ಬೇಡಿ ವರ ಪಡೆದು ತನ್ನ ಪದವಿಯನ್ನು ತಿರುಗಿ ಪಡೆದುಕೊಂಡಿದ್ದಾನೆ ಶ್ರೀಕೃಷ್ಣನು ನರಕಾಸುರನನ್ನು ಕೊಂದು ಅವನು ಅಪಹರಿಸಿದ್ದ ದೇವಮಾತೆ ಅದಿತಿಯ ಕುಂಡಲಗಳನ್ನು ಆಕೆಗೆ ಅರ್ಪಿಸಲು ಸ್ವರ್ಗಕ್ಕೆ ಹೋದಾಗ ಇಂದ್ರನು ತನ್ನ ಉದ್ಯಾನವನದಲ್ಲಿದ್ದ ಒಂದು ಪಾರಿಜಾತದ ಹೂವಿನ ಗಿಡವನ್ನು ಕೃಷ್ಣನಿಗೆ ಕೊಡಲು ನಿರಾಕರಿಸಿದ ಎಲ್ಲ ದೇವತೆಗಳೊಡನೆ ತಾನೂ ಶ್ರೀಕೃಷ್ಣನ ಮುಂದೆ ನಿಂತು ಹೋರಾಡಿ ಸೋತ ಇದೆಲ್ಲವೂ ನಶ್ವರ ಐಶ್ವರ್ಯವನ್ನು ಬಯಸಿದುದರ ಫಲ ' ಹಣವೆ ನಿನ್ನಯ ಗುಣ ಏನ ಬಣ್ಣಿಸಲಿ ?' ಎನ್ನುವುದು ಇಂದ್ರನ ವಿಷಯದಲ್ಲಿ ಎಷ್ಟು ನಿಜ! ಇದು ದೋಷವಲ್ಲವೇ ?

ವಸ್ತುತಃ ದೋಷವಲ್ಲ. ಪಾರಿಜಾತಾಪಹಣ ಪ್ರಸಂಗದಲ್ಲಿ ಇಂದ್ರನು ಸ್ವತಃ ಶ್ರೀಕೃಷ್ಣನಲ್ಲಿ ಹೀಗೆ ಹೇಳುತ್ತಾನೆ, ' ಆಕಳ ಕರು ಹಾಲು ಸಾಲದಿದ್ದಾಗ ತಾಯಿಯ ಕೆಚ್ಚಲಿಗೆ ಗುದ್ದುತ್ತದೆ. ಹಾಗೆಯೇ ನಾವೆಲ್ಲ ನಿನಗೆ ಶಿಶುಗಳು. ನಿನ್ನೊಡನೆ ಹೋರಾಡುತ್ತೇವೆ.' ದೇವತೆಗಳು ಐಶ್ವರ್ಯವನ್ನು ಬಯಸುವುದು ಕರ್ತವ್ಯದೃಷ್ಟಿಯಿಂದ ಪಾಂಡವರು ವನವಾಸದಲ್ಲಿ ಸೂರ್ಯನನ್ನು ಪ್ರಾರ್ಥಿಸಿ

ಅಕ್ಷಯ ಪಾತ್ರೆಯನ್ನು ಪಡೆದುದು, ಲಕ್ಷೋಪಲಕ್ಷ ಯೋಗೀಶ್ವರರಿಗೆ ಸುವರ್ಣ ಪಾತ್ರೆಗಳಲ್ಲಿ ಷಡ್ರಸಾನ್ನ ಉಣಿಸುವುದಕ್ಕಾಗಿ. ಅಪರೋಕ್ಷ ಜ್ಞಾನದಿಂದಲೂ ಸುಖ ಪ್ರಾರಬ್ಧದಿಂದಲೂ ಬೇಕಾದಷ್ಟು ಐಶ್ವರ್ಯ ಪಡೆದಿದ್ದರೂ ತೃಪ್ತಿ ಇಲ್ಲದಂತಾಗಲು ಇದುವೇ ಕಾರಣ. ಐಶ್ವರ್ಯ ಹೆಚ್ಚಿದಂತೆಲ್ಲ ಹೆಚ್ಚು ವಿಷ್ಣು ವೈಷ್ಣವ ಸೇವೆ ಮಾಡುವುದು ಅವರ ಸ್ವಭಾವ. ಹೆಚ್ಚು ಕಾಲ ತಮ್ಮ ಪದವಿಗೆ ಅಂಟಿಸಿಕೊಂಡಿರಬಯಸುವುದೂ ಶ್ರುತಿಸ್ಮೃತಿ ಸಮ್ಮತ.

ತ್ವರಯೈವ ಮನುಷ್ಯಾಣಾಂ ಚಿದ್ವಿರತ್ವರಯೈವ ತು ।
ದೇವಾನಾಂ ತತ್ಪ್ರಸಾದೇನ ಮುಕ್ತ್ಯಾ ಏವ ಸತಾಂ ನೃಣಾಂ ॥

ಮಾನವರಿಗೆ ಅಪರೋಕ್ಷ ಜ್ಞಾನ ಲಭಿಸಿದ ಮೇಲೆ ಮುಕ್ತಿಗೆ ವಿಲಂಬವಿಲ್ಲ. ದೇವತೆಗಳಿಗೆ ಮಾತ್ರ ವಿಲಂಬ. ದೇವತೆಗಳಲ್ಲಿ ಯಾರು ಹೆಚ್ಚೋ ಅವರಿಗೆ ಇನ್ನೂ ಹೆಚ್ಚು ವಿಲಂಬ. ಅದನ್ನು ಅವರು ಬಯಸುತ್ತಾರೆ. ಹೆಚ್ಚು ಕಾಲ ಮಾನವರಿಗೆ ಜ್ಞಾನನೀಡುವ ಕಾರ್ಯ ಮಾಡಿ ಶ್ರೀ ಹರಿಯ ಸೇವೆ ಮಾಡುವ ಅವಕಾಶ ಪಡೆಯಬೇಕೆನ್ನುತ್ತಾರೆ. ಆದ್ದರಿಂದಲೇ ಶ್ರುತಿ ಹೇಳಿದೆ,

ನ ದೇವಃ ಸ್ವೀಯಂ ಪದಮಿಚ್ಛನ್ ದುಷ್ಯತಿ । ತದೇವ ಹ್ಯಸ್ಯ ಸ್ವಂ ।

'ದೇವತೆಗಳು ತಮ್ಮಪದವಿಯನ್ನು ಬಯಸಿದರೆ ತಪ್ಪಿಲ್ಲ. ಅದು ಅವರ ಕರ್ತವ್ಯ'. ಹಾಗೆ ಮಾಡದೆ ತಮ್ಮ ಪದವಿಯಲ್ಲಿ ವೈರಾಗ್ಯ ತಾಳಿದರೇ ಕರ್ತವ್ಯಲೋಪ ಉಂಟಾಗುತ್ತದೆ. ಅರ್ಜುನನು 'ಕಿಂ ನೋ ರಾಜ್ಯೇನ ಗೋವಿಂದ' ಎನ್ನುತ್ತ ವನವಾಸಕ್ಕೆ ಹೋಗುವೆನೆಂದಾಗ ಕೃಷ್ಣ ತಡೆದ. ನಿನ್ನ ಕರ್ತವ್ಯ ಬಿಡಬೇಡ ಎಂದ.

ಹತೋ ವಾ ಪ್ರಾಪ್ಸ್ಯಸಿ ಸ್ವರ್ಗಂ ಜಿತ್ವಾ ವಾ ಭೋಕ್ಷ್ಯಸೇ ಮಹೀಂ ।

'ಸತ್ತರೂ ನಿನ್ನ ಸ್ವರ್ಗಲೋಕಾಧಿಪತ್ಯ ನಿನಗಿದ್ದೇ ಇದೆ. ಗೆದ್ದರಂತೂ ಭೂಮಿಯಲ್ಲಿ ಸಕಲ ಸೌಭಾಗ್ಯ ಕಾದಿದೆ' ಎಂದು ಬೋಧಿಸಿದ. ಕ್ಷತ್ರಿಯನಾದ ಅರ್ಜುನನಿಗೆ ಹೇಗೋ ಹಾಗೆ ಕ್ಷತ್ರಿಯನಾದ ಇಂದ್ರನಿಗೂ ಶತ್ರು ಸಂಹಾರ ಮಾಡುತ್ತ ಸಾಮ್ರಾಜ್ಯ ರಕ್ಷಣೆ ಮಾಡುವುದು ಕರ್ತವ್ಯ.

ಭೂಲೋಕದಲ್ಲಿ ನಡೆಯುವ ಯಜ್ಞದಲ್ಲೆಲ್ಲ ತನಗೆ ಆಹುತಿ ಸಿಗಬೇಕೆಂದು ಬಯಸುವುದು ಮಕ್ಕಳಿಂದ ನಮಸ್ಕಾರ ಮಾಡಿಸಿಕೊಂಡು ಅವರನ್ನು ಹರಸುವ ವಾತ್ಸಲ್ಯದಿಂದ ಎಂದು ತಿಳಿಯಬೇಕು. ತಪಸ್ಸು ಯಜ್ಞಗಳಿಗೆ ವಿಘ್ನ ಉಂಟುಮಾಡುವುದು ಪರೀಕ್ಷೆಗಾಗಿ. ವಿದ್ಯಾರ್ಥಿಯನ್ನು ಉಪಾಧ್ಯಾಯರು

ಪರೀಕ್ಷಿಸುವಂತೆ ಈ ಪರೀಕ್ಷೆಯಲ್ಲಿ ವಿದ್ಯಾರ್ಥಿ ಗೆಲ್ಲಬೇಕು. ತಾನು ಸೋಲಬೇಕು. ಆಗ ಗುರುವಿಗೆ ಆನಂದ. ಶಿಷ್ಯ ಸೋತು ತಾನು ಗೆದ್ದರೇ ದುಃಖ.

ಪ್ರಹ್ಲಾದನಲ್ಲಿ ಶಿಷ್ಯ ವೃತ್ತಿ ಮಾಡಿದುದೂ ಅವನಿಗೆ ಒಳ್ಳೆಯ ಕೀರ್ತಿ ಕೊಡಿಸುವುದಕ್ಕಾಗಿ.

ಪಾಣೀಂದ್ರಿಯಾಭಿಮಾನಿ ದೇವೇಂದ್ರ. ಆ ಇಂದ್ರಿಯದ ಕಾರ್ಯ ಆದಾನ, ಅಂದರೆ ಸಂಪತ್ತನ್ನು ಗಳಿಸುವುದು. ಆದ್ದರಿಂದ ದೇವೇಂದ್ರನು ಸಂಪತ್ತನ್ನು ಗಳಿಸುವುದರಲ್ಲಿ ಅಗ್ರೇಸರನೆನಿಸಿರುವುದು, ಅದರಲ್ಲಿ ನಮಗೆ ಮೇಲ್ಪಂಕ್ತಿ ಎನಿಸುವುದು ಆವಶ್ಯಕವೂ ಹೌದು

ಹೀಗೆ ಯಾವ ದೃಷ್ಟಿಯಿಂದ ನೋಡಿದರೂ ಇಂದ್ರನು ನಶ್ವರ ಐಶ್ವರ್ಯ ಬಯಸುವುದು ದೋಷವಲ್ಲ. ಆದರೆ ಮದುವೆಯಾಗುವ ಹೆಣ್ಣಿನ ವಿಷಯದಲ್ಲಿ ಅದು ಆತಂಕಕ್ಕೆ ಕಾರಣವಾದೀತು. ರುಕ್ಮಿಣೀಶ ವಿಜಯದಲ್ಲಿ ಇಂದ್ರನ ದೋಷವನ್ನು ರುಕ್ಮಿಣಿಯು ಹೇಳುತ್ತಿದ್ದಾಳೆ – 'ಮಘವಾ ವ್ಯಾಪಾರಭಾರಾಕುಲಃ' ಇಂದ್ರನು ಸಂಪತ್ತಿನ ಶೇಖರಣೆ ರಕ್ಷಣೆಗಳ ಮಹಾಕಾರ್ಯಭಾರದಲ್ಲಿ ಮಗ್ನನಾಗಿ ನಿರ್ವಿಣ್ಣನಾಗಿರುವುದರಿಂದ ಕೈ ಹಿಡಿದ ಹೆಣ್ಣನ್ನು ರಮಿಸಲು ಅವನಿಗೆ ಕಾಲಾವಕಾಶವೂ ಇಲ್ಲ. ಸರಿಯಾದ ಮನಃಸ್ಥಿತಿಯೂ ಇರುವುದಿಲ್ಲ' ಎಂದು.

ರುದ್ರನು ಪರರನ್ನಾಶ್ರಯಿಸಿ ಬಾಳುವವನು. ಈಶ್ವರ ಎಂಬ ಹೆಸರೊಂದಿದ್ದರೆ ಸಾಕೆ ? ಅದಕ್ಕೆ ತಕ್ಕ ಸಾಮರ್ಥ್ಯ ಬೇಕು. ಅದಿಲ್ಲದೆ ಬರಿಯ ಹೆಸರು ಹಾಸ್ಯಾಸ್ಪದವಾಗುತ್ತದೆ.

ವಸ್ತುತಃ ರುದ್ರನು ಪರಮ ವೈಷ್ಣವಾಗ್ರೇಸರನಾಗಿದ್ದು ವಿಷ್ಣುವಿನ ನಾಮವಾದ ಈಶ್ವರ ಎಂಬ ಹೆಸರನ್ನು ತಾನಿಟ್ಟುಕೊಂಡಿದ್ದಾನೆ. ವೈಷ್ಣವ ದೀಕ್ಷೆಯ ಅಂಗವಾಗಿ ಮಾಡಿಕೊಳ್ಳಬೇಕಾದ ಪಂಚಸಂಸ್ಕಾರಗಳಲ್ಲಿ ನಾಮವೂ ಒಂದು. ವಿಷ್ಣುವಿನ ಯಾವುದಾದರೊಂದು ಹೆಸರನ್ನಿಟ್ಟುಕೊಳ್ಳಬೇಕು. ಅಂಥ ಶಿವನಿಗೆ 'ಪರ' ರನ್ನು ಅಂದರೆ ವಿಷ್ಣು ಲಕ್ಷ್ಮಿ ಬ್ರಹ್ಮ ವಾಯುಗಳೆಂಬ ತನಗಿಂತ ಉತ್ತಮರಾದ ವ್ಯಕ್ತಿಗಳನ್ನು ಆಶ್ರಯಿಸುವುದೇ ಭೂಷಣ. ಶ್ರೀ ಹರಿಯ ನರಸಿಂಹಮೂರ್ತಿಯನ್ನು ಸದಾ ತನ್ನ ಹೃದಯದಲ್ಲಿ ಆರಾಧಿಸುವವನು ಶಿವನೆಂದು ವೇದವು ಹೇಳುತ್ತದೆ–

'ಸ್ತುಹಿ ಶ್ರುತಂ ಗರ್ತಸದಂ ಯುವಾನಂ ।
ಮೃಗಂ ನ ಭೀಮಮುಪಹತ್ನುಮುಗ್ರಂ' ॥

ಆ ನರಸಿಂಹನ ದಯೆಯಿಂದಲೇ ರುದ್ರಪದವಿ ಲಭಿಸಿತೆಂದು ಶ್ರುತಿಯಿದೆ–

'ಅಸ್ಯ ದೇವಸ್ಯ ಮೀಳ್ಹುಷೋ ವಯಾ
ವಿಷ್ಣೋರೇಷಸ್ಯ ಪ್ರಭೃಥೇ ಹವಿರ್ಭಿಃ ।
ವಿದೇ ಹಿ ರುದ್ರೋ ರುದ್ರಿಯಂ ಮಹಿತ್ವಂ ॥'

ಹೀಗೆ ಪಡೆದ ರುದ್ರಪದವಿಯು ಸಂರಕ್ಷಣೆಗಾಗಿ ಇಂದಿಗೂ ಅವನು ಮೂಲರೂಪದಿಂದ ತಪಸ್ಸು ಮಾಡುತ್ತಿದ್ದಾನೆ ಕೈಲಾಸವಾಸಿ ರೂಪದಿಂದ ಪದವಿಯನ್ನಾಳುತ್ತಿದ್ದಾನೆ ಬಾಣಯುದ್ಧ ಪ್ರಸಂಗದಲ್ಲಿ ಶ್ರೀ ಕೃಷ್ಣನಿದಿರು ನಿಂತು ಶಿವನು ಸ್ತಬ್ಧನಾದಾಗ ಬ್ರಹ್ಮನು ಅವನನ್ನು ಕೃಷ್ಣನುದರದೊಳಗೊಯ್ದು ಅಲ್ಲಿ ಅವನ ಮೂಲರೂಪವು ತಪಸ್ಸು ನಿಲ್ಲಿಸಿ ಸ್ತಬ್ಧವಾಗಿ ನಿಂತುದನ್ನು ತೋರಿಸಿದನಂತೆ. ಆಗ ಶಿವನಿಗೆ ಭಯವಾಯಿತಂತೆ ಶಿವನು ಹಾಲಾಹಲವನ್ನು ಕುಡಿದುದೂ ಪದ್ಮಪುರಾಣ ಪ್ರಕಾರ ಅಚ್ಯುತಾನಂತಗೋವಿಂದ ಎಂಬ ನಾಮೋಚ್ಚಾರಣದ ಬಲದಿಂದ ಹೀಗಿದ್ದರೂ ವಿಷವು ತನ್ನ ಪ್ರಭಾವ ತೋರಿತು. ಶಿವ ನೀಲಕಂಠನಾದ ದಾಹ ತಾಳಲಾರದೆ ಅತ್ತು ರುದ್ರನೆನಿಸಿದ. ಗಂಗೆಯನ್ನೂ, ಚಂದ್ರಕಲೆಯನ್ನೂ ತಲೆಯಲ್ಲಿ ತಂಪಿಗಾಗಿ ಧರಿಸಿದ ರಾಮನಾಮಾಮೃತ ಪಾನ ಮಾಡಿ ಮೃತ್ಯುಂಜಯನೆನಿಸಿದ ವಾದಿರಾಜರು ಹೇಳಿದ್ದಾರೆ–

ನಾಮತ್ರಯ ಪ್ರಭಾವದಿಂದಲಿ ಬೇಗ
ಸೋಮಧರನು ವಿಷವನೆ ಧರಿಸಿ ।
ರಾಮನಾಮವೆಂಬ ಅಮೃತಪಾನದಿಂ
ಕಾಮಾರಿ ತಾ ಮೃತ್ಯುಂಜಯನಾದ ॥

ತ್ರಿಪುರದಹನ ಕಾರ್ಯದಲ್ಲಿಯೂ ರುದ್ರನು ಅಡಿಗಡಿಗೂ ಹರಿಯನ್ನಾಶ್ರಯಿಸಿದ್ದ. ಹರಿ ಬುದ್ಧರೂಪದಿಂದ ಬಂದು ಅಸುರ ಪತ್ನಿಯರ ಪಾತಿವ್ರತ್ಯವನ್ನು ಕೆಡಿಸಿದ್ದರಿಂದ ಅಸುರ ಸಂಹಾರ ಶಕ್ಯವೆನಿಸಿತು. ತ್ರಿಪುರ ಪಟ್ಟಣಗಳಲ್ಲಿದ್ದ ಅಮೃತರಸದ ಬಾವಿಯಿಂದಾಗಿ ಮೃತರಾದ ಅಸುರರೆಲ್ಲ ತಿರುಗಿ ಬದುಕಿ ಬರುತ್ತಿದ್ದುದನ್ನು ಕಂಡು ಹರಿ ವೃಷಭ ರೂಪತಾಳಿ ಆ ಬಾವಿಯ ರಸವನ್ನೆಲ್ಲ ಕುಡಿದು ಬರಿದು ಮಾಡಿದ. ಶಿವನ ರಥವು ಭಾರದಿಂದ ಭೂಮಿಗಿಳಿದಾಗಲೂ ಈ ವೃಷಭವೇ ತನ್ನ ಕೋಡುಗಳಿಂದ ರಥವನ್ನೆತ್ತಿತ್ತು. ವಾಸುದೇವ ಸಹಸ್ರನಾಮದಲ್ಲಿ ವೃಷಭಾವತಾರದ ಬಗ್ಗೆ ಹೇಳಿದೆ–

'ಶಂಭುತ್ರಿಪುರದಾಹೈಕಸ್ಥೈರ್ಯವಿಶ್ವರಥೋದ್ಭವಃ ।
ಭಕ್ತಶಂಭುಕೃತೇ ದೈತ್ಯಾಮೃತವಾಪೀಸಮಸ್ತಪಃ ॥'

ಈ ಎಲ್ಲ ಕಾರಣಗಳಿಂದ ತ್ರಿಪುರ ದಹನದ ಯಶಸ್ಸು ಶಿವನಿಗೆ ದೊರಕುವಂತಾಯಿತು. ವಾದಿರಾಜರು ಹೇಳಿದ್ದಾರೆ–

'ಬುದ್ಧನಾಗಿ ಪುರದ ಸತಿಯರಿಗೆ ಕು
ಬುದ್ಧಿಯನು ಪೇಳ್ದ ಕಾರಣ ಮುದ್ದುಗೋವಾಗಿ ಪುರದ ಕೂಪದೊ
ಳಿದ್ದ ಸುಧೆಯನೀಂಟಿದವನಾಗಿಯೂ ।
ಬಿದ್ದ ರಥವನೆತ್ತಿದನ ಪ್ರಸಿದ್ಧದಿಂದ ರುದ್ರ ಗೆದ್ದ ಗಡ ।'

ಇಷ್ಟು ಮಾತ್ರವಲ್ಲ. ತ್ರಿಪುರರು ತಮ್ಮ ಪಟ್ಟಣಗಳು ಆಕಾಶದಲ್ಲಿ ನೇರವಾಗಿ ಒಂದೇ ರೇಖೆಯಲ್ಲಿದ್ದಾಗಲೆ ಒಂದು ಬಾಣದಿಂದ ಮೂರೂ ಪಟ್ಟಣಗಳನ್ನು ಹೊಡೆದೇ ನಾಶಪಡಿಸಬೇಕೆಂದು ವರಪಡೆದಿದ್ದರಿಂದ ಶಿವನು ಹಾಗೆ ಬಾಣಬಿಟ್ಟಾಗ ಆ ಬಾಣದಲ್ಲಿ ಹರಿ ಸನ್ನಿಹಿತನಾಗಿ ಕಾರ್ಯಸಾಧಿಸಿದ ವರವನ್ನು ನಿಜಗೊಳಿಸಿದ ಭಾಗವತ ಇದನ್ನೇ ಹೇಳಿದೆ–

'ಭಗವತ್ತೇಜಸಾ ಗುಪ್ತೋ ದದಾಹ ತ್ರಿಪುರಂ ನೃಪ ।'

ದಕ್ಷಯಜ್ಞಧ್ವಂಸ ಕಾಲದಲ್ಲಿಯೂ ದಕ್ಷನ ಶಿರಚ್ಛೇದ ಯಾವ ಪ್ರಯತ್ನದಿಂದಲೂ ಸಾಧ್ಯವಾಗದಿದ್ದಾಗ ಶ್ರೀ ಹರಿಗೆ ಯಜ್ಞದ ಆಹುತಿಯನ್ನಾಗಿ ಯಜಮಾನನಾದ ದಕ್ಷನ ಶಿರಸ್ಸನ್ನೇ ಹೋಮಿಸುವನೆಂದು ಸಂಕಲ್ಪಿಸಿ ರುದ್ರನು ಆ ಶಿರಸ್ಸನ್ನು ಕಡಿಯಲು ಸಮರ್ಥನಾದನೆಂದು ಭಾಗವತದಲ್ಲಿ ಹೇಳಿದೆ

ಭಸ್ಮಾಸುರನಿಂದ ಶಿವನನ್ನು ಹರಿಯು ರಕ್ಷಿಸಿದುದು ಪ್ರಸಿದ್ಧ. ಬ್ರಹ್ಮಚಾರಿ ರೂಪದಿಂದ ಹರಿ ಆಗ ಬಂದಿದ್ದನೆಂದು ಭಾಗವತ ಹೇಳಿದೆ ಮೋಹಿನೀ ರೂಪದಿಂದ ಬಂದಿದ್ದನೆಂದು ಶ್ವೇತಾಚಲ ಮಹಾತ್ಮ್ಯೆಯಲ್ಲಿದೆ(ಅ ೪–೫) ಬೇರೆಬೇರೆ ಕಲ್ಪಗಳಲ್ಲಿ ನಡೆದ ಕಥೆಯಾದುದರಿಂದ ವಿರೋಧವಿಲ್ಲ.

ಅಂಧಕಾಸುರ ಸಂಹಾರ ಕಾರ್ಯದಲ್ಲಿ ಶಿವನಿಗೆ ಹರಿಯ ಅನುಗ್ರಹ ಅಪಾರ. ಅಂಧಕನ ಒಂದು ತೊಟ್ಟು ರಕ್ತ ನೆಲಕ್ಕೆ ಬಿದ್ದರೆ ಕೋಟಿ ಅಂಧಕರು ಹುಟ್ಟುತ್ತಿದ್ದರು. ನೃಸಿಂಹನು ಸಂಕಲ್ಪಮಾತ್ರದಿಂದಲೇ ಸಹಸ್ರಯೋಗಿನಿಯರ ತಂಡ ಒಂದನ್ನು ಸೃಷ್ಟಿಸಿ ಕಳಿಸಿದ. ಅವರು ಆ ರಕ್ತವನ್ನು ಪಾನಮಾಡಿ ಅಸುರ ಸಂಹಾರ ನಡೆಯಲು ನೆರವಾದರು. ಆದರೆ ರಕ್ತದ ರುಚಿಕಂಡ ಆ ಯೋಗಿನಿಯರು ಶಿವನನ್ನೇ ತಿನ್ನಲು ಬಂದರು. ಆತ ಭಯದಿಂದ ಕುರಿಯ ರೂಪ ತಾಳಿ ಕುರಿಮಂದೆಯ ನಡುವೆ

ಅಡಗಿದ ಒಡನೆ ಚಿಂತಾಮಣಿ ನರಸಿಂಹನು ಪಾತಾಳದಿಂದ ಮೇಲೆ ಬಂದು ಕುರಿಯ ರೂಪದ ಶಿವನ ಬೆನ್ನ ಮೇಲೆ ಕುಳಿತು ಯೋಗಿನಿಯರನ್ನು ನಾಶಪಡಿಸಿದ ಶಿವನನ್ನು ರಕ್ಷಿಸಿದ ಈ ಕಥೆ ವಾಸುದೇವ ಸಹಸ್ರನಾಮದಲ್ಲಿ ಸ್ಪಷ್ಟವಾಗಿದೆ – 'ಯೋಗಿನೀತ್ರಸ್ತ ಗಿರಿಶತ್ರಾತಾ', 'ಮೇಷರೂಪಿ ಶಂಕರವಾಹನಃ' 'ಮೇಷರೂಪ ಶಿವತ್ರಾತಾ'.

ಶಿವನು ಪರರನ್ನಾಶ್ರಯಿಸಿದನೆಂದರೆ ತನಗಿಂತ ಉತ್ತಮರಾದವರನ್ನೆಲ್ಲಾ ಆಶ್ರಯಿಸಿದನೆಂದರ್ಥ. ಶಿವನು ಬ್ರಹ್ಮನ ಐದನೆಯ ತಲೆ ಕಡಿದ ವೃತ್ತಾಂತ ಪ್ರಸಿದ್ಧ ಅದು ಲಕ್ಷ್ಮೀದೇವಿಯ ಆಜ್ಞೆಯಿಂದ ನಡೆಯಿತೆಂದು ವಿಷ್ಣುರಹಸ್ಯ ಹೇಳಿದೆ. ದೇವಿಯ ಆಜ್ಞೆಯಂತೆ ಶಿವನು ಹಾಗೆ ಮಾಡಿದರೂ ಆ ಶಿರಸ್ಸು ಪ್ರಳಯಕಾಲದ ಅಗ್ನಿಯಂತೆ ಜ್ವಲಿಸುತ್ತಾ ಅವನನ್ನು ಬೆನ್ನಟ್ಟಿ ಬಂದಿತು. ಭಯವಿಹ್ವಲನಾಗಿ ಶಿವನು ದೇವಿಗೆ ಶರಣಾದ ದೇವಿ ಆ ಶಿರಸ್ಸನ್ನು ಹಿಡಿದು ಶಿವನ ಕೈಯಲ್ಲಿಟ್ಟು ಹರಿಪಾದೋದಕವನ್ನು ಪ್ರೋಕ್ಷಿಸಿ ಜ್ವಾಲೆಯನ್ನು ಶಾಂತಗೊಳಿಸಿದಳು ಮುಂದೆ ಶ್ರೀರಾಮನು ರಾಮೇಶ್ವರದಲ್ಲಿ ಶಿವನನ್ನು ನಿಲ್ಲಿಸಿ ಸೇತು ದರ್ಶನದಿಂದ ಅವನ ಬ್ರಹ್ಮಹತ್ಯಾ ಪಾತಕವನ್ನು ಹೋಗಲಾಡಿಸಿದನಂತೆ ವಾದಿರಾಜರು ಹೇಳಿದ್ದಾರೆ–

ಸೇತುವೆಯ ಕಂಡ ನರರಿಗೆ ಬ್ರಹ್ಮಹತ್ಯಾದಿ
ಪಾತಕವು ಬಿಡುವುದೆಂಬ ಶ್ರುತಿಯ ಮನ್ನಿಸಲು ।
ಖ್ಯಾತ ಬೊಮ್ಮನ ತಲೆಯ ಕಡಿಯೆ ಕರದಲಿ ಕೊಟ್ಟ ತಾ ।
ಪ ತಪ್ಪಿಸಲು ಸುಕೃತ ಸೇತು ಮುಖದಿಂದ ।
ಸೀತೆಯರಸನು ಶಿವನ ನಿಲ್ಲಿಸಿ ಪ್ರತಿಷ್ಠಿಸಿದ ಜಗ ।
ನ್ನಾಥ ಹಯವದನ ಭಕ್ತರ ಬಂಧು ಕಾಣಿರೋ ॥

ಶಿವನು ವಸ್ತುತಃ ಶಿವನೆನಿಸಿದ್ದು ಬ್ರಹ್ಮನ ಅನುಗ್ರಹದಿಂದ. ಇಲ್ಲದಿದ್ದರೆ ಆತ ಸ್ಮಶಾನವಾಸಿ ಭೂತಪ್ರೇತಗಳ ಅಧಿಪತಿಯಾಗಿದ್ದು 'ಅಶಿವ'ನಾಗುತ್ತಿದ್ದ. ಋಗ್ವೇದ ಹೇಳುತ್ತದೆ–

'ತವ ಶ್ರಿಯೇ ಮರುತೋ ಮರ್ಜಯಂತ
ರುದ್ರ ಯತ್ತೇ ಜನಿಮ ಚಾರು ಚಿತ್ರಂ ।
ಗದಂ ಯದ್ವಿಷ್ಣೋರುಪಮಂ ನಿಧಾಯಿ
ತೇನ ಪಾಸಿ ಗುಹ್ಯಂ ನಾಮ ಗೋನಾಂ ॥'

ಹೇ ರುದ್ರದೇವ, ನಿನಗೆ ಸ್ಮಶಾನವಾಸಾದಿ ಪ್ರಯುಕ್ತವಾದ ಪಾಪ ಪರಿಹಾರವಾಗಲಿ ಪಾವಿತ್ರ್ಯವೆಂಬ ಸಂಪತ್ತು ನಿನ್ನದಾಗಲಿ ಎಂದು

ಪುತ್ರವಾತ್ಸಲ್ಯದಿಂದ ನಿನ್ನ ಜನಕರಾದ ಬ್ರಹ್ಮದೇವರು ಲಕ್ಷ್ಮೀದೇವಿಯಿಂದ ಸೇವಿತವಾಗುವ ಸುಂದರ ಅದ್ಭುತ ತ್ರಿವಿಕ್ರಮ ಪಾದವನ್ನು ಭಕ್ತಿಯಿಂದ ತೊಳೆದರು. ನೀನು ಆ ಜಲವನ್ನು ತಲೆಯಲ್ಲಿಯೂ, ಆ ಪಾದವನ್ನು ಎದೆಯಲ್ಲಿಯೂ ಆದರದಿಂದ ಧರಿಸಿರುವಿ ನಾಮಗಳಲ್ಲೆಲ್ಲ ಗೋಪ್ಯವೆನಿಸಿರುವ ರಾಮನಾಮವನ್ನು ಸದಾ ನಾಲಿಗೆಯಲ್ಲಿ ಕಾಪಾಡಿಕೊಂಡಿರುವಿ '

ವಾಯುದೇವರೂ ಹಾಲಾಹಲ ವಿಷವನ್ನು ತಾನೇ ಪೂರ್ತಿ ಕುಡಿದರು ಸ್ವಲ್ಪವೆ ಚರಟವನ್ನು ಮಾತ್ರ ರುದ್ರನಿಗೆ ಕೊಟ್ಟರು. ಅದನ್ನು ತಿಂದ ಮಾತ್ರಕ್ಕೇ ಅವನಿಗೆ ಮೂರ್ಛೆಯುಂಟಾಯಿತು. ಪೂರ್ತಿ ವಿಷವನ್ನು ಕುಡಿದಿದ್ದರೆ ಏನಾಗುತ್ತಿತ್ತೋ ! ಹೀಗೆ ಶ್ರೀಹರಿ ಲಕ್ಷ್ಮಿ ಬ್ರಹ್ಮ ವಾಯುಗಳನ್ನು ಆಶ್ರಯಿಸುವ ಅವರ ಭಕ್ತನಾದ ಶಿವ ಲೋಕಕ್ಕೆ ಈಶ್ವರನೆನಿಸಿದುದು ಸರಿಯೆ ದೇವಿಯ ದೃಷ್ಟಿಯಲ್ಲಿ ಆತ 'ಈಶ್ವರ'ನಲ್ಲ.

ಪೂಷನು ದಕ್ಷಯಜ್ಞದಲ್ಲಿ ಹಲ್ಲುದುರಿಸಿಕೊಂಡು

'ಪೂಷಾ ತು ಯಜಮಾನಸ್ಯ ದದ್ಭಿರ್ಜಕ್ಷತು ಪಿಷ್ಟಭುಕ್ ।'

ಎಂದು ಭಾಗವತದಲ್ಲಿ ಹೇಳಿದಂತೆ ಕೇವಲ ಹಿಟ್ಟನ್ನು ಮಾತ್ರ ತಿನ್ನುತ್ತಾನೆ ಅದನ್ನೂ ಯಜಮಾನನ ಹಲ್ಲುಗಳಿಂದ ಅಗಿಯುತ್ತಾನೆ. ಎಂಥ ಪರಾಧೀನತೆ !

ಆದಿಶೇಷನು ಅದೃಶ್ಯಾಂಘ್ರಿ, ಕಾಲಿಲ್ಲದವ ಪರಾಧೀನ ಆದರೆ 'ಕಾಲಲ್ಲದವ' ಎಂದು ಹೇಳಿಲ್ಲ ಕಾಲು ಅದೃಶ್ಯ ಎಂದಿದೆ ಪುರಂದರದಾಸರು,

'ಕಾಲಿಲ್ಲದಿಹ ಮಂಚ, ಗಾಳಿ ನುಂಗುವ ಮಂಚ
ಶೃಂಗಾರವಾಗಿದೆ ಶ್ರೀಹರಿಯ ಮಂಚ ।

ಎಂದು ಹಾಡಿದ್ದರೂ ತಂತ್ರಸಾರದಲ್ಲಿ ಶೇಷಮಂತ್ರದ ಧ್ಯೇಯಮೂರ್ತಿ ಬಿಳಿಯ ಬಣ್ಣ, ಸಾವಿರ ತಲೆ, ಏಕಕುಂಡಲ, ವನಮಾಲೆ, ನೀಲಾಂಬರ ಹಲ ಮುಸಲಾಯುಧಗಳು ಇವನ್ನು ಧರಿಸಿ ಸಪತ್ನೀಕನಾಗಿ ಶ್ರೀಹರಿಯ ಹಿಂಭಾಗದಲ್ಲಿ ಕೈ ಜೋಡಿಸಿ ನಿಂತಂತೆ ವರ್ಣಿತವಾಗಿದೆ ಆದ್ದರಿಂದ ಶೇಷನಿಗೆ ಹಾವಿನ ರೂಪ ಮೂಲವಲ್ಲ- ಕಶ್ಯಪರಿಗೆ ಕದ್ರೂದೇವಿಯಲ್ಲಿ ಜನಿಸಿದ ರೂಪವೆ ಹಾವಿನ ರೂಪ ಅದಕ್ಕೆ ಕಾಲಿಲ್ಲ. ಮೂಲರೂಪದ ಸುಂದರ ಕರಚರಣಾದ್ಯವಯವಗಳನ್ನು ಆಮೆಯಂತೆ ತನ್ನೊಳಗೆ ಹುದುಗಿಸಿಕೊಂಡು 'ಅದೃಶ್ಯ'ಗೊಳಿಸಿದ್ದಾನೆ ಹಾವಿನ ರೂಪದಲ್ಲಿ. ಆದ್ದರಿಂದ ಶೇಷನಿಗೆ 'ಗೂಢಪಾತ್' ಎಂದು ಹೆಸರು. 'ಅಪಾತ್' ಎಂದಲ್ಲ. ರುಕ್ಮಿಣೀಶ ವಿಜಯದಲ್ಲಿ ಸ್ವಯಂವರಕ್ಕೆ ಹೊರಟ ರುಕ್ಮಿಣಿಗೆ ಸಖಿ

ಹೇಳುವ ಮಾತೂ 'ಸೋಽಯಂ ರಮೋ ಗೂಢಪಾತ್' ಎಂದೇ ಇದೆ. ದ್ವಾದಶ ಸ್ತೋತ್ರದಲ್ಲಿ

'ಯತ್ಪಾದಪಂಕಜಮಹಾಸನತಾಮವಾಪ
ಶರ್ವಾದಿವಂದ್ಯಚರಣಃ. ನಾಗಪತಿಃ'

ಎಂದಿದೆ. ಶರ್ವಾದಿವಂದ್ಯ 'ಚರಣ'ನು ಕಾಲಿಲ್ಲದವನೆನ್ನಬಹುದೆ ? ಆದರೂ ಗೂಢಪಾತ್ ಎಂದರೆ ಹಾವಿನ ರೂಪದ ಗಂಡನನ್ನು ಕನ್ಯೆ ನೋಡಿ ಭಯಪಡುವುದು ಸಹಜವಾದುದರಿಂದ ಶೇಷನಲ್ಲಿ 'ಅದೃಶ್ಯಾಂಘ್ರಿತ್ವ'ವು ದೋಷವೆ

ಜಯಂತನಂತೆ ಒಕ್ಕಣ್ಣನೆನಿಸಿದವನಿನ್ನೊಬ್ಬ, ಶುಕ್ರಾಚಾರ್ಯ. ವಾಮನಮೂರ್ತಿಯು ಬಲಿಯಲ್ಲಿ ನೆಲವನ್ನು ಬೇಡಿದಾಗ ಶುಕ್ರಾಚಾರ್ಯರು ಕೊಡಬೇಡ ಎಂದರು ಈ ವಟು ಮಾಯಾವಿ. ನಿನಗೆ ಇವನಿಂದ ಅಪಾಯವಿದೆ ಎಂದರು. ಬಲಿ ಕೇಳಲಿಲ್ಲ. ದಾನಕ್ಕೆ ಬಿಡುವ ಜಲಧಾರೆ ಗಿಂಡಿಯಿಂದ ಹೊರಕ್ಕೆ ಬಾರದಂತೆ ಅದರ ದ್ವಾರದಲ್ಲಿ ಒಂದು ಹುಳವಾಗಿ ನಿಂತರು, ಶುಕ್ರಾಚಾರ್ಯರು. ವಾಮನಮೂರ್ತಿ ಒಂದು ದರ್ಭೆಯಿಂದ ತಿವಿದು ಆಚಾರ್ಯರ ಒಂದು ಕಣ್ಣನ್ನು ಕಳೆದನು ಗುರು ಶಿಷ್ಯನನ್ನು ಉಳಿಸಲು ಹೋಗಿ ತನ್ನ ಕಣ್ಣನ್ನು ಕಳೆದುಕೊಂಡ. ಒಕ್ಕಣ್ಣನಾದ. ತನ್ನ ಶಿಷ್ಯನನ್ನೂ ರಕ್ಷಿಸಲಾಗಲಿಲ್ಲ. ವಾಮನನು ಅವನನ್ನು ಪಾತಾಳಕ್ಕೊತ್ತಿದ ನಾರದೀಯ ಪುರಾಣದಲ್ಲಿ ಈ ಕತೆ ಇದೆ ಪುರಂದರ ದಾಸರೂ ಹಾಡಿದ್ದಾರೆ–

ಎಂತಾದರು ಚಿಂತೆ ಬಿಡದು ನಿ–
ಶ್ಚಿಂತರಾದವರ ನಾನೊಬ್ಬರನು ಕಾಣೆ
ರಕ್ಕಸ ಗುರುವಿಗೆ ಕಣ್ಣಿಲ್ಲದ ಚಿಂತೆ... ।

– ೨೧ –

**ಮಾವನ ಕೊಂದೊಬ್ಬ ಮರುಳಾಗಿಹ್ಯನು ಗಡ !**
**ಹಾರ್ವನ ಕೊಂದಬ್ಬ ಬಳಲಿದ ।**
**ಜೀವರ ಕೊಂದೊಬ್ಬ ಕುಲಗೇಡ್ಯೆಂದೆನಿಸಿದ**
**ಶಿವನಿಂದೊಬ್ಬ ಬಯಲಾದ ॥**

ಒಬ್ಬ, ಶಿವ ಮಾವನನ್ನು ಕೊಂದು ಮರುಳಾಗಿದ್ದಾನೆ. ಆಶ್ಚರ್ಯ ! ಇನ್ನೊಬ್ಬ, ಇಂದ್ರ ಬ್ರಹ್ಮಹತ್ಯೆ ಮಾಡಿ ಬಳಲಿದ. ಇನ್ನೊಬ್ಬ, ಮೃತ್ಯುದೇವ ಜೀವರನ್ನೆಲ್ಲ

ಕೊಂದು ಕುಲಗೇಡಿ ಎಂದೆನಿಸಿದ, ಇನ್ನೊಬ್ಬ, ಮನ್ಮಥ, ಶಿವನಿಂದ ಬಯಲಾದ, ಶೂನ್ಯನಾದ.

ಸ್ವಯಂವರದ ಕನ್ಯೆ ಮಹಾಲಕ್ಷ್ಮಿ ದೇವತೆಗಳ ಕುಂದುಕೊರತೆಗಳನ್ನು ಆಲೋಚಿಸುತ್ತಿದ್ದಾಳೆ.

ಮಾವನ ಕೊಂದೊಬ್ಬ ಮರುಳಾಗಿಹನು ಗಡ!

ಶಿವನು ಪರಮೇಶ್ವರ, ಜಗದೀಶ್ವರ ಎಂದೆಲ್ಲ ಪ್ರಸಿದ್ಧನಾದವನು. ಆದರೆ ಅವನು ಮಾವನನ್ನು ಕೊಂದು ಮರುಳಾಗಿದ್ದಾನೆ. ದಕ್ಷ ಪ್ರಜಾಪತಿಯನ್ನು ಕೊಂದ ಬಳಿಕ ಹುಚ್ಚನಂತೆ ಸ್ಮಶಾನಗಳಲ್ಲಿ ಅಲೆಯುತ್ತಿದ್ದಾನೆ.

ವಸ್ತುತಃ ಮಾವನನ್ನು ಕೊಲ್ಲುವುದಕ್ಕೆ ಮೊದಲೆ ಶಿವನು ಹುಚ್ಚನಂತೆ ಅಲೆಯುತ್ತಿದ್ದ. ಏಕೆಂದರೆ, ಆ ಮಾವನೇ ಅಳಿಯನ ಮೇಲೆ ಸಿಟ್ಟಾಗಿ ಹೇಳಿದ ಮೊದಲನೆಯ ಮಾತು–

'ಶಿವಾಪದೇಶೋ ಹ್ಯಶಿವೋ ಮತ್ತೋ ಮತ್ತಜನಾಶ್ರಯಃ ।'

'ಇವನು ಹೆಸರಿಗೆ ಮಾತ್ರ ಶಿವ. ವಸ್ತುತಃ ಅಶಿವ, ಅಮಂಗಳಕರ ತಾನು ಹುಚ್ಚ, ಹುಚ್ಚರಿಗೆಲ್ಲ ಒಡೆಯ' ಆದ್ದರಿಂದ ಮಾವನನ್ನು ಕೊಂದ ಬಳಿಕ ಶಿವ ಹುಚ್ಚನಾದನೆನ್ನುವುದು ಸರಿಯೆ? ಎಂದರೆ, ಮಾವನನ್ನು ಕೊಂದ ಬಳಿಕ ಶಿವ ಮೊದಲಿಗಿಂತ ಹೆಚ್ಚು ಉನ್ಮತ್ತನಾದನೆಂದು ಅಭಿಪ್ರಾಯ ಹೇಳಬೇಕು

'ಯದ್ದೈವ ಪೂರ್ವೇ ಜನನೇ ಶರೀರಂ
ಸಾ ದಕ್ಷರೋಷಾತ್ ಸುದತೀ ಸಸರ್ಜ ।
ತದಾಪ್ರಭೃತ್ಯೇವ ವಿಮುಕ್ತಸಂಗಃ
ಪತಿಃ ಪಶೂನಾಮಪರಿಗ್ರಹೋಽಭೂತ್ ।

'ಪಾರ್ವತೀ ದೇವಿ ತನ್ನ ಹಿಂದಿನ ಸತೀ ಅವತಾರದಲ್ಲಿ ದಕ್ಷನ ಮೇಲೆ ಕೋಪದಿಂದ ಶರೀರತ್ಯಾಗ ಮಾಡಿದಂದಿನಿಂದಲೂ ಶಿವ ಎಲ್ಲ ಆಸಕ್ತಿ ತೊರೆದು ಬೇರೆ ಮದುವೆಯಾಗುವ ಯೋಚನೆಯನ್ನು ಬಿಟ್ಟ, ಎಂದು ಕಾಲಿದಾಸ ಹೇಳಿದ್ದಾನೆ ಮೊದಲೇ ವೈರಾಗ್ಯಮೂರ್ತಿ ಶಿವ, ಸತಿಯ ದೇಹತ್ಯಾಗದ ಅನಂತರವಂತೂ ಇನ್ನೂ ಹೆಚ್ಚಿನ ವೈರಾಗ್ಯದಿಂದ ಉನ್ಮತ್ತನಂತೆ ಅಲೆಯತೊಡಗಿದನೆಂದೂ, ಆ ಉನ್ಮಾದಾವಸ್ಥೆ ಸ್ವಲ್ಪ ಶಾಂತವಾದ ಮೇಲೆ ಮನಸ್ಸನ್ನು ಗಟ್ಟಿಮಾಡಿಕೊಂಡು ಹಿಮಾಲಯದಲ್ಲಿ ಕುಳಿತು ತಪಸ್ಸಿಗಾರಂಭಿಸಿದನೆಂದೂ ಶಿವ ಪುರಾಣ ಹೇಳುತ್ತದೆ

ಆದರೆ ಶಿವನು ಉನ್ಮತ್ತನಾಗಲು ಕಾರಣವೇನು ? ಮಾವನನ್ನು ಕೊಂದುದಂತೂ ಅಲ್ಲ. ಪತ್ನೀವಿಯೋಗವೇ ಕಾರಣವೆನ್ನಬೇಕು, ಆಗ ಪ್ರಣಯಿನಿಯ ವಿರಹ ತಾಳಲಾರದೆ ಉನ್ಮತ್ತನಾಗುವಂಥವನು ಆದರ್ಶ ಪ್ರಣಯಿ ಎನಿಸುತ್ತಾನೆ ಅಂದ ಮೇಲೆ ಶಿವನ ಉನ್ಮತ್ತಾವಸ್ಥೆಯನ್ನು ಸ್ವಯಂವರದ ಕನ್ಯೆ ವರನ ದೋಷವೆಂದು ಪರಿಗಣಿಸಿಯಾಳೆ ? ಆದರೆ, ಈ ಪ್ರಶ್ನೆ ಬೇರೆ ಗಂಡುಗಳ ವಿಷಯದಲ್ಲಾದರೆ ಸರಿಯೇ, ಶಿವನು ಪರಮೇಶ್ವರ, ಜಗದೀಶ್ವರ. ಅಂಥವನು ಹೆಂಡತಿಯನ್ನು ಉಳಿಸಿಕೊಳ್ಳಲಾರದೆ ಹೋದನೇಕೆ ? ಎಲ್ಲ ಅನಾಹುತ ನಡೆದ ಮೇಲೆ ತನ್ನ ಸಿಟ್ಟನ್ನು ಮಾವನಲ್ಲಿ ತೋರಿಸಿದನೇಕೆ ? ಆದರಿಂದೇನು ಲಾಭವಾಯಿತು ? ಹೆಂಡತಿ ಸಿಕ್ಕಿದಳೆ ? ಬಳಿಕ ಹುಚ್ಚನಂತೆ ಅಲೆಯತೊಡಗಿದುದು ತನ್ನ ಅಶಕ್ತಿಯನ್ನೇ ತೋರಿಸುವುದಿಲ್ಲವೇ ? ಆದ್ದರಿಂದ ಶಿವನ ಈ ಹುಚ್ಚು ಆಶ್ಚರ್ಯಕರ ಎಂದು 'ಗಡ' ಎಂಬ ಆಶ್ಚರ್ಯಸೂಚಕ ಅವ್ಯಯ ಹೇಳುತ್ತದೆ ಸ್ವಯಂವರದ ಕನ್ಯೆ ಇಂಥ ಹುಚ್ಚರ ಸಹವಾಸ ಬೇಡವೆಂದು ಭಾವಿಸುವುದರಲ್ಲಿ ತಪ್ಪೇನಿಲ್ಲ.

ಶಿವನು ದೇವೋತ್ತಮ, ಇನ್ನೊಬ್ಬರಿಗೆ ಧರ್ಮವನ್ನು ಉಪದೇಶಿಸುವ ಜಗದ್ಗುರು ಇಂಥವನು ಹೆಣ್ಣು ಕೊಟ್ಟ, ಗುರುಸ್ಥಾನದಲ್ಲಿರುವ ಮಾವನನ್ನು ಕೊಲ್ಲುವಂಥ ಅಮಂಗಳ ಕಾರ್ಯ ಮಾಡಿದ್ದಾನೆ, ನಿಷಿದ್ಧವಾದ ಅಮಂಗಲ ವೇಷವನ್ನು ಧರಿಸಿದ್ದಾನೆ, ಇದು ಆಶ್ಚರ್ಯ ಎಂದೂ 'ಗಡ' ಎಂಬ ಶಬ್ದ ಹೇಳುತ್ತದೆ.

ಶಿವನ ಸ್ವಭಾವವೇನೋ ಒಳ್ಳೆಯದು, ಅವನು ಶಿವರಿಗೆ ಶಿವ, ಒಳ್ಳೆಯವರಿಗೆ ಒಳ್ಳೆಯದನ್ನೇ ಮಾಡುವವ ಅಶಿವರಿಗೆ ಅಶಿವ, ಕೆಟ್ಟವರಿಗೆ ಕೆಡುಕನ್ನೇ ಮಾಡುವವ, 'ಅರ್ಧನಾರೀಶ್ವರನಾಗಿದ್ದು ಶಿವಾರ್ಧನೆನಿಸಿದವ, ಇಂಥ ಶಿವನೆ, ನಿನಗೆ ನಮಸ್ಕಾರ ನನ್ನ ಅಶಿವ ಅಂದರೆ, ಅಶುಭವನ್ನು ಕಳೆ' 'ನಮಃ ಶಿವಶಿವಾಶಿವಾಶಿವ ಶಿವಾರ್ಧ ಕೃಂತಾಶಿವಂ' ಎಂದು ಪ್ರಾರ್ಥಿಸಿದ್ದಾರೆ, ನಾರಾಯಣ ಪಂಡಿತಾಚಾರ್ಯರು. ಭಕ್ತಿಗೆ ಬೇಗನೆ ಒಲಿದು ಬೇಡಿದುದನ್ನು ನೀಡುವ ದೇವನೆ ಶಿವ,

'ದೇವಾಸುರಮನುಷ್ಯೇಷು ಯೇ ಭಜಂತ್ಯಶಿವಂ ಶಿವಂ ।
ಪ್ರಾಯಸ್ತೇ ಧನಿನೋ ಭೋಜಾಃ' ॥

'ದೇವ ದಾನವ ಮಾನವರಲ್ಲಿ ಶಿವನನ್ನು ಭಜಿಸುವವರು ಪ್ರಾಯಃ ಹೆಚ್ಚು ಶ್ರೀಮಂತರಾಗುತ್ತಾರೆ' ಎಂದು ಭಾಗವತ ಹೇಳುತ್ತದೆ. ಈ ಒಳ್ಳೆಯ ಸ್ವಭಾವದ ಜೊತೆಗೆ ಚಿರಂಜೀವಿತ್ವವೂ ಸೇರಿದೆ ಶಿವನಲ್ಲಿ. ಏಕೆಂದರೆ ಈತ ಮೃತ್ಯುಂಜಯ ಮಾತ್ರವಲ್ಲ. ಪ್ರಳಯಕಾರಕನಾಗಿದ್ದು ಪ್ರಳಯ ಮಾಡುವುದಕ್ಕಾಗಿ ಕೊನೆಯವರೆಗೂ ಅವನಿರಬೇಕಾಗುತ್ತದೆ ಆದರೇನು ?

'ಯತ್ರೋಭಯಂ ಕುತ್ರ ಚ ಸೋಽಪ್ಯ ಮಂಗಲಃ'

'ಯಾರಲ್ಲಿ ಒಳ್ಳೆಯ ಸ್ವಭಾವ ಚಿರಂಜೀವಿತ್ವ ಇವೆರಡೂ ಇವೆಯೋ ಅವನು ಅಮಂಗಲನಾಗಿದ್ದಾನೆ' ಎಂದು ಭಾಗವತದಲ್ಲಿ ಮಹಾಲಕ್ಷ್ಮಿ ಹೇಳುವುದು ಶಿವನ ವಿಷಯದಲ್ಲಿ ನಿಜವೆನಿಸುತ್ತದೆ, ಮಾವನನ್ನು ಕೊಂದುದರಿಂದ ಅವನ ನಡತೆಯು ಅಮಂಗಲ, ಮರುಳನಾಗಿರುವುದರಿಂದ ಅವನ ಆಕೃತಿ ವೇಷಗಳೂ ಅಮಂಗಳ ಮೈಯಲ್ಲಿ ಗಜಚರ್ಮ, ರುಂಡಮಾಲೆ, ಸ್ಮಶಾನದ ಭಸ್ಮ ಮುಂತಾದವು ಮಾತ್ರವಲ್ಲ, ಹಣೆಯಲ್ಲಿ ವಿಕಾರವಾಗಿ ಕಾಣುವ ಮೂರನೆಯ ಕಣ್ಣು ಇದೆ. ಪಾರ್ವತಿಯ ತಪಸ್ಸನ್ನು ಪರೀಕ್ಷಿಸಲು ವಟುರೂಪದಿಂದ ಬಂದ ಶಿವನ ಬಾಯಿಯಲ್ಲಿ ಕಾಳಿದಾಸನೇ ಹೇಳಿಸಿದ್ದಾನೆ-'ವಪುರ್ವಿರೂಪಾಕ್ಷಂ' ' ದೇವಿ, ಆ ಶಿವನಲ್ಲಿ ಶರೀರ ಸೌಂದರ್ಯ ಏನಿದೆ ಎಂದು ಅವನನ್ನು ಬಯಸುತ್ತಿರುವಿ ? ಹಣೆಯಲ್ಲಿ ವಿಕಾರವಾದ ಇನ್ನೊಂದು ಕಣ್ಣಿದೆ'

ಲಕ್ಷ್ಮೀಶೋಭನ ಪದದಲ್ಲಿ ಬರುವ ಮರುಳ ಎಂಬ ಶಬ್ದಕ್ಕೆ ಪಿಶಾಚ ಎಂಬ ಅರ್ಥವೂ ಸರಿಯೇ. ಶ್ರೀಪಾದರಾಜರು ಹೇಳುವಂತೆ ಗುಮ್ಮ ಎಂದರೂ ಸರಿಯೇ.

ಕೋಟಿ ಸೂರ್ಯಕಾಂತಿ ಗೆಲುವ ತನುವಿನ
ಪೂಸಿದ ಭಸ್ಮ ನೊಸಲ ಕಣ್ಣಿನ ।
ನೋಟ ಕಿಡಿಯುದುರೆ ಭೂತಗಣಂಗಳು ಬೆದರೆ
ನಾಟ್ಯವಾಡುತ ನಿಮ್ಮ ಚರಣಸೇವೆಗೆ ॥
ಗುಮ್ಮ ಬಂದನೆಲೋ ರಂಗಯ್ಯ ಸುಮ್ಮನಿರೆಲೋ ರಂಗ ॥

ಗುಮ್ಮ ಪಿಶಾಚಿ, ಹುಚ್ಚನೆಂದೆಲ್ಲ ಯಾವ ಹೆಸರಿಂದ ಕರೆದರೂ ಶಿವನಿಗೆ ಏನೂ ಚಿಂತೆ ಇಲ್ಲ ವಿಜಯದಾಸರು ಹೇಳುತ್ತಾರೆ-

ಇನ್ನೊಂದು ರಹಸ್ಯ ಸದಮಲವಾಗಿದೆ ಬಲುಸೋಜಿಗ ತ್ರಿದಶಗಣಕೆ ।
ದುಃಖ ಲೇಶವಾದರು ಇಲ್ಲ ಮುದ ಪುಟ್ಟುವುದು ದಿವಸ ದಿವಸದೆಡಿಗೆ ॥

ಬೇರೆಯವರಿಗೆ ದುಃಖದಾರಿದ್ರ್ಯಗಳನ್ನು ತರಬಲ್ಲ ವೇಷವೂ ಶಿವನಿಗೆ ಹಾಗೆ ಮಾಡುವುದಿಲ್ಲ. ವೈರಾಗ್ಯಾಧಿಪತಿಯಾದ ಮಹಾರುದ್ರ ಅವನ ವೈರಾಗ್ಯಕ್ಕೆ ತಕ್ಕುದಾದ ವೇಷ ಧರಿಸಿದ್ದಾನಷ್ಟೆ. ಈ ವೈರಾಗ್ಯ ವಿಷ್ಣುವಿನ ಪ್ರೀತಿಗಾಗಿ, ಈ ವೇಷ ಅವನ ಆಜ್ಞೆಯನ್ನು ಪಾಲಿಸುವುದಕ್ಕಾಗಿ, ಗುಮ್ಮ ಬಂದಿರುವುದು ರಂಗಯ್ಯನ ಚರಣ ಸೇವೆಗಾಗಿ.

'ಆಜ್ಞಾಕರೀ ತಸ್ಯ ಪಿಶಾಚಚರ್ಯಾ'

'ಪಿಶಾಚಚರ್ಯಾಮಚರದ್ ರುದ್ರೋ ವಿಷ್ಣ್ವಾಜ್ಞಯೈವ ತು
ಗರ್ಭಿಣೀ ವಧನೋದಾರ್ಥಂ' ।

ಶಿವನು ಸಂಹಾರ ಮೂರ್ತಿ. ವಿಶೇಷವಾಗಿ ಸಂಧ್ಯಾಕಾಲದಲ್ಲಿ ಗರ್ಭಧಾರಣೆ ಮಾಡುವ ಗರ್ಭಿಣೀ ಸ್ತ್ರೀಯರನ್ನು ಸಂಹರಿಸುತ್ತಾನೆ ಎಂಬುದು ಭಾಗವತದಲ್ಲಿ ಬರುವ ಕಶ್ಯಪ ದಿತಿ ಸಂವಾದದಿಂದ ಸ್ಪಷ್ಟವಿದೆ. ಆದರೆ ಸಂಹಾರ ಕಾರ್ಯ ಶಿವನಿಗೆ ಬಂಧಕವಲ್ಲ ಎನ್ನಲಾಗುವುದಿಲ್ಲ. ಆದ್ದರಿಂದ ಗರ್ಭಿಣೀಸ್ತ್ರೀಯು ಹತ್ಯೆಯು ಪ್ರಾಯಶ್ಚಿತ್ತಕ್ಕಾಗಿ ಪಿಶಾಚ ಚರ್ಯೆ ಮಾಡೆಂದೂ ಹರಿ ಆಜ್ಞಾಪಿಸಿದನಂತೆ, ಅದನ್ನು ಸಂತೋಷದಿಂದ ಶಿವ ಮನ್ನಿಸಿದ್ದಾನೆ,

'ಲೋಕಾಪವಿದ್ಧಂ ಜಗತಿ ನ ಗಣಯೇಯಂ ತ್ವತ್ಪರಾನುಗ್ರಹೇಣ'

ಶ್ರೀಹರಿ, ನಿನ್ನ ಪರಮಾನುಗ್ರಹ ನನ್ನಲ್ಲಿರುವುದರಿಂದ ಲೋಕವು ನನ್ನ ವೇಷವನ್ನು ಎಷ್ಟು ನಿಂದಿಸಿದರೂ ನಾನು ಅದನ್ನು ಲೆಕ್ಕಿಸುವುದಿಲ್ಲ ಎಂದು ಭಾಗವತದಲ್ಲಿ ಶಿವನೆ ಹೇಳಿದ್ದಾನೆ. ಆದರೆ ನಿಂದಿಸುವ ದುಷ್ಟರಿಗೆ ಮಾತ್ರ ಸರಿಯಾದ ಶಿಕ್ಷೆ ವಿಧಿಸದಿರುವುದಿಲ್ಲ. ಸಜ್ಜನರೂ ಕೆಲವೊಮ್ಮೆ ಅಸುರಾವೇಶದಿಂದ ತನ್ನನ್ನು ನಿಂದಿಸತೊಡಗಿದರೆ ಅವರಿಗೇ ಗುರುದ್ರೋಹ ಪ್ರಯುಕ್ತ ಮಹಾ ಅನರ್ಥ ಬಂದೀತೆಂದು ಅದನ್ನು ತಪ್ಪಿಸುವುದಕ್ಕಾಗಿ ತಾನೇ ಯೋಗ್ಯಶಿಕ್ಷೆ ಕೊಡುತ್ತಾನೆ. ಇದಕ್ಕೆ ದಕ್ಷ ಪ್ರಜಾಪತಿಯೇ ಸಾಕ್ಷಿ.

'ಭೂಯಾನನುಗ್ರಹ ಅಹೋ ಭವತಾ ಕೃತೋ ಮೇ'

'ಹಾಳಾಗಿ ಹೋಗಲೆಂದು ನೀನೇನಾದರೂ ಶಿಕ್ಷಿಸದೆ ಸುಮ್ಮನಿರುತ್ತಿದ್ದರೆ ನನಗೆ ಏನು ಅನರ್ಥ ಉಂಟಾಗುತ್ತಿತ್ತೆಂದು ಊಹಿಸಲಾರೆ. ನೀನು ಸಕಾಲದಲ್ಲಿ ನನಗೆ ಶಿಕ್ಷೆ ನೀಡಿ ಪರಮಾನುಗ್ರಹ ಮಾಡಿರುವಿ' ಎಂದು ದಕ್ಷ ಪ್ರಜಾಪತಿ ಹೇಳುತ್ತಾನೆ

ಶಿವ ಮರುಳನಾಗಿರುವುದು ವಿಷ್ಣುವಿನಾಜ್ಞೆಯಿಂದ ಎನ್ನುವುದಾದರೆ 'ಮರುಳಾಗಿಹನು ಗಡ' ಎಂದೇಕೆ ಆಶ್ಚರ್ಯಪಡಬೇಕು ? ವಿಷ್ಣುವಿನಾಜ್ಞೆಯಿಂದ ಮರುಳಾಗಿದ್ದರೆ ಆಶ್ಚರ್ಯವೇನಿರಲಿಲ್ಲ ನಿಜ. 'ಮಾವನ ಕೊಂದು' ಮರುಳಾಗಿದ್ದಾನೆ. ಇದು ಆಶ್ಚರ್ಯ, ಮಾವ ಸಾಯುವುದಕ್ಕೆ ಮುನ್ನ ಶಾಪ ಕೊಟ್ಟಿದ್ದ, ಪಿಶಾಚನಾಗು ಎಂದು. ಮಾತ್ರವಲ್ಲ, ತಪಃಶಕ್ತಿಯಿಂದ ಹಣೆಯಲ್ಲಿ ಮೂರನೇ ಕಣ್ಣನ್ನೂ ಉಂಟುಮಾಡಿದ್ದ !

'ಯೋ ದಕ್ಷಶಾಪಾತ್ ಪೈಶಾಚ್ಯಂ ಪ್ರಾಪ್ತಃ ಪ್ರೇತಪಿಶಾಚರಾಟ್' ।

'ಯಾವ ಶಿವನು ದಕ್ಷನ ಶಾಪದಿಂದ ಪಿಶಾಚನಂತಿದ್ದು ಪ್ರೇತ ಪಿಶಾಚಗಳಿಗೇ ಒಡೆಯನಾಗಿರುವನೋ ಅವನು ಕೊಟ್ಟ ವರವನ್ನು ನೀನು ನಂಬುವಿಯು ?'– ಇದು ಭಾಗವತದಲ್ಲಿ ಶ್ರೀಹರಿ ವೃಕಾಸುರನಿಗೆ ಹೇಳುವ ಮಾತು.

'ಕ್ರತುವಧಪ್ರಾಪ್ತಮನ್ಯುನಾ ಚ ದಕ್ಷೇಣ ಭೂಯಸ್ತಪಸಾ ಚಾತ್ಮಾನಂ
ಸಂಯೋಜ್ಯ ನೇತ್ರಾಕೃತಿರನ್ಯಾ ಲಲಾಟೇ ರುದ್ರಸ್ಯೋತ್ಪಾದಿತಾ ।'

'ಯಜ್ಞ ಧ್ವಂಸವಾಯಿತೆಂದು ಕೋಪದಿಂದ ದಕ್ಷನು ತನ್ನ ತಪಃಶಕ್ತಿಯನ್ನು ಉಪಯೋಗಿಸಿ ರುದ್ರನ ಹಣೆಯಲ್ಲಿ ವಿಲಕ್ಷಣವಾದ ಕಣ್ಣಿನ ಆಕೃತಿಯೊಂದನ್ನು ಉಂಟುಮಾಡಿದನು' ಇದು ಮಹಾಭಾರತದಲ್ಲಿ ಹೇಳಿದ ಮಾತು.

ಕಿರಿಯರು ಹಿರಿಯರಿಗೆ ಕೊಡುವ ಶಾಪ ಪೂರ್ತಿ ಫಲಿಸುವುದೂ ಇಲ್ಲ, ಹಿರಿಯರು ಮನಸ್ಸು ಮಾಡಿದರೆ ಆ ಶಾಪವನ್ನು ಸುಳ್ಳಾಗಿಸಲೂ ಸಾಧ್ಯ, ಹಿರಿಯರೊಲುಮೆ ಇಲ್ಲದಿದ್ದಲ್ಲಿ ಕಿರಿಯರೇ ಆ ಶಾಪದಿಂದ ಸಂಕಟಕ್ಕೊಳಗಾಗಬೇಕಾಗುವುದು,

ಅಶಕ್ತೈರ್ವಿಹಿತಾಃ ಶಾಪಾದ್ಯಾಃ ಶಕ್ತಿಮತ್ಸು ವೈ ।
ಅತ್ಯಲ್ಪಾ ಅಲ್ಪಕಾಲಾಶ್ಚ ನ ಸಮ್ಯಕ್ ಪ್ರಭವಂತಿ ತೇ ।
ಯತ್ನೇನಾಪ್ಯೋಹಿತುಂ ಶಕ್ಯಾ ಉತ್ತಮೈಸ್ತು ನ ಸಂಶಯಃ ।
ಉತ್ತಮೇಷು ಕೃತಾಃ ಶಾಪಾಃ ಕರ್ತೃಣಾಂ ಜ್ಞಾನಪುಣ್ಯಯೋಃ ।
ನಿಃಶೇಷೇಣ ನಿಹಂತಾರಸ್ತದನುಗ್ರಹಮಂತರಾ' ॥

–ಭಾಗವತ ತಾತ್ಪರ್ಯ.

ಹೀಗಿದ್ದರೂ ಶಿವನು ದಕ್ಷನ ಶಾಪದಿಂದ 'ಮರುಳಾಗೇ ಇಹನು' ಹಾಗೇ ಇರಬೇಕೆಂದು ವಿಷ್ಣುವಿನಾಜ್ಞೆ. ಶಾಪವನ್ನು ಸುಳ್ಳಾಗಿಸುವಂತಿಲ್ಲ, ಇದು ಆಶ್ಚರ್ಯ !

ಇಲ್ಲಿ ಒಂದು ಪ್ರಶ್ನೆ, ಶಿವನಿಗೆ ಯಜ್ಞದಲ್ಲಿ ಭಾಗವಿಲ್ಲದಿರಲೆಂದು ಮಾತ್ರ ದಕ್ಷನು ಶಾಪಕೊಟ್ಟಂತೆ ಕಾಣುತ್ತದೆ ಭಾಗವತದಲ್ಲಿ. ಮಹಾಭಾರತದಲ್ಲಿ ಯಜ್ಞಧ್ವಂಸವಾದ ಬಳಿಕ ಮೂರನೇ ಕಣ್ಣು ಬರಲೆಂದು ದಕ್ಷ ಶಾಪಕೊಟ್ಟಂತೆ ಕಾಣುತ್ತದೆ. ಯಜ್ಞಧ್ವಂಸ ಮಾಡಿದ ವೀರಭದ್ರನು ಒಡನೆ ದಕ್ಷನನ್ನೂ ಸಂಹರಿಸಲಿಲ್ಲವೇ ? ವಿದ್ಯುಕ್ತವಾಗಿ 'ಭೂಯಸ್ತಪಸಾ ಚಾತ್ಮಾನಂ ಸಂಯೋಜ್ಯ' ಎಂದು ಮಹಾಭಾರತ ಹೇಳುವಂತೆ ಬಹುಕಾಲ ಧ್ಯಾನಮಾಡಿ ತಪಃಶಕ್ತಿಯಿಂದ ಶಾಪ ನೀಡಲು ಸಾಕಷ್ಟು ಕಾಲಾವಕಾಶ ದಕ್ಷನಿಗೆ ಇದ್ದಿತೆ ?

ಆದರೆ ಭಾಗವತದಲ್ಲಿ ಸ್ಪಷ್ಟವಾಗಿ ಹೇಳಿರದಿದ್ದರೂ ಸೂಚಿತವಾಗುವ ಒಂದು ಅಂಶವನ್ನು ನಾವು ಗಮನಿಸಬೇಕು. ಶ್ರೀ ಮಧ್ವಾಚಾರ್ಯರೂ ಅದನ್ನು ಹೇಳಿದ್ದಾರೆ, ವೀರಭದ್ರನು ಯಜ್ಞಧ್ವಂಸವನ್ನೇನೋ ಮಾಡಿದ. ದಕ್ಷನ ಶಿರಶ್ಛೇದವನ್ನು ಮಾತ್ರ ಮಾಡುವುದಾಗಲಿಲ್ಲ.

'ಭಿಂದನ್ನಪಿ ತದುದ್ಧರ್ತುಂ ನಾಶಕ್ನೋತ್ ತ್ರ್ಯಂಬಕಸ್ತದಾ'

ತನ್ನ ಪ್ರಯತ್ನದಲ್ಲಿ ತಾನು ಸೋಲುತ್ತಿರುವುದನ್ನು ಕಂಡು ಆಶ್ಚರ್ಯಪಟ್ಟು ದೀರ್ಘಕಾಲ ಧ್ಯಾನಿಸತೊಡಗಿದ. 'ದಧ್ಯೌ ಪಶುಪತಿಶ್ಚಿರಂ' ಇದಿಷ್ಟು ಭಾಗವತದಲ್ಲಿಯೇ ಸ್ಪಷ್ಟವಾಗಿ ಹೇಳಿದ ಮಾತು. ವೀರಭದ್ರನು ಧ್ಯಾನಮಾಡಿದುದು ಮೂಲ ರೂಪವನ್ನು, ಆಗ ಮೂಲರೂಪದಲ್ಲಿಯೇ ಶಿವ ಯಜ್ಞಶಾಲೆಯನ್ನು ಪ್ರವೇಶಿಸಿದ. ದಕ್ಷನ ಶಿರಶ್ಛೇದಕ್ಕೆ ಅವನೂ ಯತ್ನಿಸಿದ, ಆಗಲಿಲ್ಲ, ಇದೇಕೆ ಹೀಗಾಯಿತು ? ಮುಂದೇನು ಉಪಾಯವೆಂದು ಧ್ಯಾನಿಸತೊಡಗಿದ. ಈ ನಡುವೆ ದಕ್ಷನಿಗೆ ಶಿವನಲ್ಲಿ ಕೋಪ ಪರಮಾವಧಿ ಮುಟ್ಟಿದ್ದರೆ ಅಚ್ಚರಿ ಏನಿಲ್ಲ, ಆಗ ಆತ ಧ್ಯಾನ ಮಾಡಿ ವಿಧ್ಯುಕ್ತವಾಗಿ ಶಿವನಿಗೆ ಪಿಶಾಚನಾಗೆಂದು ಶಪಿಸುವ ಸಾಧ್ಯತೆ ಇದೆ, ಬಳಿಕ ಶಿವನು ತಾನೇ ಒಂದು ಮಾನಸಯಜ್ಞಕ್ಕೆ ಸಂಕಲ್ಪಿಸಿ ಆಹುತಿ ರೂಪದಿಂದ ದಕ್ಷನ ಶಿರಸ್ಸನ್ನು ಕತ್ತರಿಸಲು ಯತ್ನಿಸಿದಾಗ ಅದರಲ್ಲಿ ಯಶಸ್ವಿಯಾದ.

ಆದರೂ ಮಾವನನ್ನು ಕೊಂದು ಶಿವ ಮರುಳಾದನೆ ? ಕೊಲ್ಲುವುದಕ್ಕೆ ಮೊದಲೆ ಶಾಪ ಪಡೆದನಲ್ಲವೆ ? ಎಂದರೆ 'ಮಾವನ ಕೊಂದ ಒಬ್ಬ ಮರುಳಾಗಿಹನು' ಎಂದು ಪದವಿಭಾಗ ಮಾಡಿದರೆ ಈ ಪ್ರಶ್ನೆ ಏಳುವುದಿಲ್ಲ, ಮಾವನನ್ನು ಕೊಂದ ಶಿವನು ಮರುಳಾಗಿದ್ದಾನೆ ಎಂದಿಷ್ಟೇ ಹೇಳಿಂದತಾಗುತ್ತದೆ, ಕೊಂದು ಎಂದು ಪದವಿಭಾಗ ಮಾಡಿದರೂ ಕೊಲ್ಲುವುದು ಎಂದರೆ ಮಾನಸವಾಗಿಯೋ ದೈಹಿಕವಾಗಿಯೋ ಮಾಡುವ ಹಿಂಸೆ ಎಂದು ಮಾತ್ರ ಅಭಿಪ್ರಾಯ ಇಟ್ಟುಕೊಳ್ಳಬಹುದು, ದೇವಾಧಿದೇವತೆಗಳ ತುಂಬಿದ ಸಭೆಯಲ್ಲಿ ಪ್ರಜಾಪತಿ ಎನಿಸಿದ ದಕ್ಷನಿಗೆ ಅಳಿಯನಾದ ಶಿವ ಏನೂ ಮರ್ಯಾದೆ ತೋರದಿದ್ದುದು ಮಾನಸವಾಗಿ ಹಿಂಸೆಯೇ. ದಕ್ಷನು ಹೇಳಿದ್ದಾನೆ–

'ಪ್ರತ್ಯುತ್ಥಾನಾಭಿವಾದಾರ್ಹೇ ವಾಚಾಽಪ್ಯಕೃತ ನೋಚಿತಂ'

'ಎದ್ದುನಿಂತು ನಮಸ್ಕರಿಸಬೇಕಾಗಿದ್ದಲ್ಲಿ ಮಾತಿನಿಂದಾದರೂ ಗೌರವ ತೋರಲಿಲ್ಲ, ಶಿವ'. ಯಜ್ಞಧ್ವಂಸವೂ ದಕ್ಷನಿಗಾದ ಒಂದು ಅಸಹನೀಯವಾದ ಪರಾಭವ. ಶಿರಶ್ಛೇದನಕ್ಕಾಗಿ ದೈಹಿಕ ಹಿಂಸೆಯನ್ನಂತೂ ವೀರಭದ್ರ ರೂಪದಲ್ಲಿಯೂ ಮೂಲರೂಪದಲ್ಲಿಯೂ ಶಿವನು ಬಹುಕಾಲ ಮಾಡಿದ, ಹೀಗೆ ಮಾವನ 'ಕೊಂದು' ಅಂದರೆ ಹಿಂಸಿಸಿ ಶಿವನು ಅವನಿಂದ ಶಾಪ ಪಡೆದ, ಅಥವಾ ಮಾವನ 'ಕೊಂದೂ'

ಅಂದರೆ ಅವನ ಶಿರಶ್ಛೇದ ಮಾಡಿಯೂ ಅವನ ಶಾಪವನ್ನು ಸುಳ್ಳಾಗಿಸಲಾರದೆ ಹೋದ ಶಿವ 'ಮರುಳಾಗೇ ಇಹನು' ಎಂದೂ ಅರ್ಥ ಮಾಡಬಹುದು

ಶಿವನು ವಸ್ತುತಃ ಪಿಶಾಚನೆ ಆದನೆ? ವಿಷ್ಣುವಿನಾಜ್ಞೆಯಂತೆ ಪಿಶಾಚ ಚರ್ಯೆಯನ್ನು ಮಾತ್ರ ಮಾಡಿದನಲ್ಲವೆ? ಅವನ ಮೂರನೇ ಕಣ್ಣು ಒಂದು ಶಾಪವೇ? ನರಸಿಂಹ ದೇವರಿಗೆ, ದುರ್ಗಾದೇವಿಗೆ ಮೂರುಕಣ್ಣುಗಳಿಲ್ಲವೆ? ಎಂಬ ಪ್ರಶ್ನೆ ಬರಬಹುದು ಆದರೆ ಅಸುರಾವೇಶಗೊಂಡ ದಕ್ಷನ ಕಣ್ಣಿಗೆ ಶಿವನು ಪಿಶಾಚನಂತೆ ಕಂಡ. ಅವನ ಮೂರನೆ ಕಣ್ಣೂ ವಿಕಾರವಾಗೇ ಕಂಡಿತು. ಕಾಮಾಲೆ ರೋಗಿಗೆ ಪ್ರಪಂಚವೆಲ್ಲ ಹಳದಿಯಾಗಿ ಕಾಣುತ್ತದೆ. ಆದ್ದರಿಂದ ದಕ್ಷನಿಗೆ ತಾನು ಶಿವನಿಗಿತ್ತ ಶಾಪ ಫಲಿಸಿತೆಂದು ಸಂತೃಪ್ತಿಯಾಗಿರಬೇಕು. ಅಸುರಾವೇಶ ಕಳೆದಾಗಲೆ ನಿಜಸ್ಥಿತಿಯ ಅರಿವು, ವಸ್ತುತಃ–

'ಕಾಂತ್ಯಾ ವಿಶ್ವವಿಮೋಹನಂ ಪಶುಪತಿಂ ಮೃತ್ಯುಂಜಯಂ ಭಾವಯೇತ್'

ಎಂದು ಮೃತ್ಯುಂಜಯಮಂತ್ರದ ಧ್ಯಾನಶ್ಲೋಕದಲ್ಲಿ ಹೇಳಿದಂತೆ, 'ಕಾಮನ್ನರೂಪಕ್ಕೆ ಜರಿವ ಚನ್ನಿಗ'ನೆಂದು ಶ್ರೀಪಾದರಾಜರು ಹೇಳುವಂತೆ, 'ಮಾರನ್ನ ಗೆದ್ದ ಮನೋಹರ ಮೂರ್ತಿ' ಎಂದು ವಾದಿರಾಜರೆ ಹೇಳುವಂತೆ ಶಿವನ ಶರೀರಸೌಂದರ್ಯ ಜಗತ್ತನ್ನೇ ಮರುಳುಮಾಡುವಂಥಹುದು. 'ಪ್ರಶಾಂತಮುತ ಭೀಷಣಂ ಭುವನಮೋಹನಂ' 'ಶಿವನ ರೂಪು ಪ್ರಶಾಂತವೂ ಹೌದು. ಭಯಂಕರವೂ ಹೌದು. ಭಯಂಕರವಾಗಿದ್ದರೂ ಜಗನ್ಮೋಹಕವಾದುದು!' ಎಂದು ನಾರಾಯಣ ಪಂಡಿತಾಚಾರ್ಯರು ಹೊಗಳಿದ್ದಾರೆ

'ಮೂರನೆ ಕಣ್ಣು ಹಣೆಯಲ್ಲಿ ತಿಲಕದಂತೆ ಶೋಭಿಸುತ್ತದೆ'.

'ತ್ರಿಲೋಚನ ವಿಲೋಚನೇ ಲಸತಿ ತೇ ಲಲಾಮಾಯಿತೇ'

ಎಂದೂ ಅವರೇ ಹೇಳಿದ್ದಾರೆ

ಭಾಗವತದಲ್ಲಿ ಶಿವನು ದಕ್ಷನ ಶಾಪದಿಂದ ಪಿಶಾಚನಾಗಿದ್ದಾನೆ ಎಂಬ ಮಾತು ಶ್ರೀಹರಿ ವೃಕಾಸುರನನ್ನು ವಂಚಿಸಲು ಅವನಿಗೆ ಒಪ್ಪುವ ಭಾಷೆಯಲ್ಲಿ ಹೇಳಿದುದೆಂಬುದನ್ನು ಗಮನಿಸಬೇಕು. ಮಹಾಭಾರತದಲ್ಲಿಯೂ ದಕ್ಷನ ಶಾಪ ಸಾಮರ್ಥ್ಯವನ್ನು ಹೊಗಳುವ ಅಭಿಪ್ರಾಯ ಮಾತ್ರ ಇಟ್ಟುಕೊಳ್ಳಬೇಕು, 'ವಪುರ್ವಿರೂಪಾಕ್ಷಂ' ಎಂದು ಕಾಳಿದಾಸನಾಗಲಿ 'ಮರುಳಾಗಿಹನು' ಎಂದು ವಾದಿರಾಜರಾಗಲೀ ಹೇಳುವುದು ಅಸುರರ ಇಲ್ಲವೆ ಅವರ ಪ್ರಭಾವಕ್ಕೊಳಗಾದ ಸಜ್ಜನರ ದೃಷ್ಟಿಯಿಂದ ವಸ್ತುತಃ ಶ್ರೀಹರಿಯೊಡನೆ ಹೋಲಿಸಿದಾಗ ಶಿವನಲ್ಲಿರುವ ದೋಷವೆಂದರೆ, ಅಸ್ವಾತಂತ್ರ್ಯ, ಅಲ್ಪಶಕ್ತಿ ಮುಂತಾದವು. ಹಾಗೆ ನೋಡಿದರೆ ಶಿವನು ಯಜ್ಞ ಧ್ವಂಸಮಾಡಿ ಮಾವನನ್ನು ಕೊಂದು ವಿರೂಪಾಕ್ಷನಾದ, ಶ್ರೀಕೃಷ್ಣ

ಧನುರ್ಯಜ್ಞ ಭಂಗಮಾಡಿ ಮಾವ ಕಂಸನನ್ನು ಕೊಂದೂ ಕಮಲಾಕ್ಷನಾಗೇ ಉಳಿದ, ಎಂಬ ವ್ಯತ್ಯಾಸ ಇಲ್ಲಿ ಧ್ವನಿತವಾಗುತ್ತದೆ. ಅಂತರ್ದೃಷ್ಟಿ ಇಲ್ಲದವರಿಗೆ ಮಾತ್ರ ಶಿವ ಅಶಿವನಾಗಿದ್ದಾನೆ 'ತ್ವಮಶಿವೋऽಸ್ಯನಂತರ್ಧಿಯಾಂ' ಎಂದು ಪಂಡಿತಾಚಾರ್ಯರು ಹೇಳುವುದನ್ನು ಮರೆಯಬಾರದು.

ಹಾರ್ವನ ಕೊಂದೊಬ್ಬ ಬಳಲಿದ !

ವೃತ್ರಾಸುರನು ಬ್ರಾಹ್ಮಣ. ಅವನನ್ನು ಕೊಂದು ಇಂದ್ರ ಬಳಲಿದ, ಗಡ ! ಆಶ್ಚರ್ಯ !

ತ್ವಷ್ಟೃಪ್ರಜಾಪತಿಯ ಅಭಿಚಾರ ಹೋಮದ ಅಗ್ನಿಕುಂಡದಿಂದ ಎದ್ದು ಬಂದವನು ಈ ವೃತ್ರ ಈ ತ್ವಷ್ಟೃ ಪ್ರಜಾಪತಿಯ ಮೊದಲನೆಯ ಮಗನಾದ ವಿಶ್ವರೂಪಾಚಾರ್ಯನನ್ನೂ ಇಂದ್ರನೇ ಕೊಂದಿದ್ದ. ಆಗ ಆ ಬ್ರಹ್ಮಹತ್ಯಾಪಾತಕವನ್ನು ಒಂದು ವರ್ಷಕಾಲ ಅನುಭವಿಸಿದ ಬಳಿಕ ನೆಲ, ಜಲ, ವೃಕ್ಷ, ಸ್ತ್ರೀಯರಲ್ಲಿ ಹಂಚಿದ್ದ. ಇದರಿಂದ ನೆಲದ ಬಂಜರು ಪ್ರದೇಶ, ನೀರಿನ ನೊರೆ ಗುಳ್ಳೆ, ಮರದ ಮೇಣ, ಮತ್ತು ಸ್ತ್ರೀಯರ ಮುಟ್ಟು ಇವು ದೋಷಗಳೆನಿಸಿವೆ. ಇಂದ್ರನು ಪ್ರತಿಯಾಗಿ ವರಗಳನ್ನೂ ಕೊಟ್ಟಿದ್ದ ಅದರಂತೆ ನೆಲದಲ್ಲಿ ಹಳ್ಳ ತಿಟ್ಟು ತಾನೇ ತುಂಬಿಕೊಳ್ಳುತ್ತದೆ. ಜಲವು ಪೃಥಿವೀ ತೇಜೋ ಭಾಗಗಳಿಗಿಂತ ಹೆಚ್ಚಾಗಿದೆ ಮರಗಳು ಅವು ಕಡಿದಷ್ಟೂ ತಿರುಗಿ ಚಿಗುರೊಡೆಯುತ್ತವೆ. ಸ್ತ್ರೀಯರು ಒಮ್ಮೆ ಗರ್ಭಧಾರಣೆ ಮಾಡಿ ಪುತ್ರವತಿಯಾದರೂ ತಿರುಗಿ ಪುರುಷ ಸಂಸರ್ಗಕ್ಕೆ ಯೋಗ್ಯರಾಗುತ್ತಾರೆ ಹೀಗೆ ಇಂದ್ರನು ಹೇಗೋ ಒಮ್ಮೆ ಬ್ರಹ್ಮಹತ್ಯೆಯಿಂದ ಪಾರಾದ.

ವೃತ್ರನನ್ನು ಕೊಂದಾಗ ಮಾತ್ರ ಆತ ಬಳಲಿದ. ಕೊಲ್ಲುವುದಕ್ಕೆ ಮೊದಲೇ ಇಂದ್ರ ಅದಕ್ಕೆ ತನ್ನ ಅಸಮ್ಮತಿಯನ್ನು ಋಷಿಗಳ ಮುಂದೆ ಹೇಳಿಕೊಂಡಿದ್ದ 'ಒಂದು ಬ್ರಹ್ಮಹತ್ಯೆಯಿಂದ ಹೇಗೋ ಪಾರಾದೆ ! ಈಗ ಇನ್ನೊಂದನ್ನು ನಾನು ಯಾರಲ್ಲಿ ಹಂಚಲಿ ? ಎಂದು ಕೇಳಿದ್ದ. ಋಷಿಗಳು ಧೈರ್ಯ ಹೇಳಿದರು ಅಶ್ವಮೇಧಯಾಗ ಮಾಡಿಸಿ ಪಾಪಪರಿಹಾರ ಮಾಡಿಸುವೆವೆಂದಿದ್ದರು. ಆದರೇನು ? ವೃತ್ರನು ಹತನಾದಾಕ್ಷಣ ಅವನ ಶರೀರದಿಂದ ಬ್ರಹ್ಮಹತ್ಯಾಭಿಮಾನಿ ಸ್ತ್ರೀ ಆಕೃತಿಯೊಂದು ಇಂದ್ರನನ್ನು ಅಟ್ಟಿಸಿಕೊಂಡು ಬಂದಿತ್ತು ! ಘೋರವಿಕೃತ ರೂಪಿನ, ಕ್ರೂರದೃಷ್ಟಿಯ, ಕೋರೆದಾಡೆಯ, ವೃದ್ಧ ಚಂಡಾಲ ಸ್ತ್ರೀ, ಕ್ಷಯರೋಗಿಷ್ಠೆ, ಕಪ್ಪು ಕಂದುಬಣ್ಣದ ಮೈ, ರಕ್ತಸಿಕ್ತವಾದ ನಾರುಡೆ ಉಟ್ಟಿದ್ದಾಳೆ. ಮೀನಿನ ದುರ್ವಾಸನೆ ರುಂಡಮಾಲೆ ಧರಿಸಿದ್ದಾಳೆ. ತಲೆ ಕೂದಲು ಬಿಚ್ಚಿಕೊಂಡಿದ್ದಾಳೆ.... ಇಂದ್ರನು ನೋಡಿ ಬೆದರಿ ಪಲಾಯನ ಮಾಡತೊಡಗಿದ ದಿಕ್ಕು ದಿಕ್ಕುಗಳಿಗೋಡಿದ. ಕೊನೆಗೆ ಹಿಮಾಲಯದ ಉತ್ತರದಲ್ಲಿ ಮಾನಸ ಸರೋವರವನ್ನು ಹೊಕ್ಕು ಒಂದು ಕಮಲದ ನಾಳದೊಳಗೆ

ಅತಿ ಸೂಕ್ಷ್ಮ ರೂಪದಿಂದ ಅಡಗಿ ಕುಳಿತ. ನರಸಿಂಹ ಮಂತ್ರ ಜಪಿಸತೊಡಗಿದ. ಗಂಗಾಸನ್ನಿಧಾನವಿದ್ದುದರಿಂದ ಸರೋವರದೊಳಕ್ಕೆ ಬ್ರಹ್ಮಹತ್ಯಾಪಾತಕಕ್ಕೆ ಪ್ರವೇಶಿಸಲಾಗಲಿಲ್ಲ.

ಇತ್ತ ಇಂದ್ರನ ಸಿಂಹಾಸನ ತೆರವಾದುದರಿಂದ ಮೂಲೋಕವು ಅರಾಜಕತೆಯಿಂದ ಕ್ಷೋಭೆಗೊಂಡು ಕಂಗಾಲಾಯಿತು. ದೇವತೆಗಳೂ ಋಷಿಗಳೂ ಸೇರಿ ನಹುಷ ಚಕ್ರವರ್ತಿಯನ್ನು ತಮ್ಮ ದಿವ್ಯಶಕ್ತಿಯಿಂದ ತುಂಬಿ ಬಲಿಷ್ಠನನ್ನಾಗಿ ಮಾಡಿ ಇಂದ್ರನ ಸಿಂಹಾಸನದ ಮೇಲೆ ಕೂಡಿಸಿದರು. ಆದರೆ ಆತ ದರ್ಪದಿಂದ ಶಚೀದೇವಿಯನ್ನು ಆಳುವೆನೆಂದ. ದೇವಿ ಈ ಆಪತ್ತನ್ನು ಯಾರಲ್ಲಿ ಹೇಳಿಕೊಳ್ಳಲಿ ? ರಾತ್ರಿದೇವಿಯನ್ನು ಅಂದರೆ ರಾತ್ರಿಯ ಅಭಿಮಾನಿಯಾದ ದುರ್ಗೆಯನ್ನು, ಆರಾಧಿಸಿ ಮೊರೆಹೊಕ್ಕಳು ಆಕೆ ಅಶರೀರವಾಣಿಯಿಂದ 'ಮಗಳೇ ಭಯಪಡಬೇಡ' ಎನ್ನುತ್ತ ಪ್ರತ್ಯಕ್ಷಳಾಗಿ ಬಂದು ಶಚಿಯನ್ನು ಮಾನಸ ಸರೋವರದ ಕಮಲ ನಾಳದೊಳಗೆ ಕರೆದೊಯ್ದು, ಅಲ್ಲಿ ಅಡಗಿದ್ದ ಇಂದ್ರನನ್ನು ತೋರಿದಳು. ಆಗ 'ನಹುಷನಿಗೆ ಹೀಗೆ ಹೇಳು, ಋಷಿಗಳು ನಿನ್ನನ್ನು ಮೇನೆಯಲ್ಲಿ ಹೊತ್ತು ತರಲಿ. ಆಗ ನಾನು ನಿನ್ನವಳಾಗುವೆ' ಎಂದು, ಋಷಿಗಳ ಕೋಪಕ್ಕೆ ತುತ್ತಾದರೆ ಆತ ಸಿಂಹಾಸನದಿಂದ ಉರುಳಲೇ ಬೇಕಲ್ಲವೇ ?' ಎನ್ನುತ್ತ ಶಚಿಯನ್ನು ಸಮಾಧಾನಪಡಿಸಿ ಕಳಿಸಿದ ಇಂದ್ರ. ಶಚಿ ಆವನೆಂದಂತೆಯೇ ಮಾಡಿದಳು. ಫಲವೂ ನಿರೀಕ್ಷಿಸಿದಂತೆಯೇ ಆಯಿತು.

ಇಂದ್ರನ ಈ ಅಜ್ಞಾತವಾಸವೀಗ ದೇವಮಾನದ ಒಂದು ಸಾವಿರ ವರ್ಷ ಪೂರ್ತಿಯಾಯಿತು. ಋಷಿಗಳೆಲ್ಲರೂ ಮಾನಸಸರೋವರದ ಬಳಿ ಬಂದು ಇಂದ್ರನನ್ನು ಕರೆದರು. ಅಶ್ವಮೇಧಯಾಗ ಮಾಡಿಸಿದರು. ಬ್ರಹ್ಮಹತ್ಯೆಯು ಮಾತ್ರ ಇನ್ನೂ ಇಂದ್ರನ ಬೆನ್ನು ಬಿಡಲಿಲ್ಲ. ಬ್ರಹ್ಮದೇವನಲ್ಲಿ ಮೊರೆ ಇಟ್ಟನಾತ. ಬ್ರಹ್ಮನು ಅಗ್ನಿ, ವನಸ್ಪತಿ, ಸ್ತ್ರೀಯರು ಮತ್ತು ಜಲಗಳಲ್ಲಿ ಬ್ರಹ್ಮಹತ್ಯೆಯನ್ನು ಹಂಚಿದ. ಅಗ್ನಿಯಲ್ಲಿ ವಿಧಿವತ್ತಾಗಿ ಹೋಮಿಸದವನನ್ನು, ಪರ್ವಕಾಲದಲ್ಲಿ ವನಸ್ಪತಿಗಳನ್ನು ಕಡಿಯುವವನನ್ನು, ಮುಟ್ಟಾದ ಸ್ತ್ರೀಯ ಸಂಗ ಮಾಡುವವನನ್ನು ಮತ್ತು ನೀರಲ್ಲಿ ಮಲಮೂತ್ರ ವಿಸರ್ಜನೆ ಮಾಡುವವನನ್ನು ಬ್ರಹ್ಮಹತ್ಯೆ ಸೇರಿಕೊಳ್ಳುವಂತೆಯೂ ವ್ಯವಸ್ಥೆ ಮಾಡಿದ. ಇದನ್ನೆಲ್ಲ ಗಮನದಲ್ಲಿಟ್ಟುಕೊಂಡು 'ಹಾರ್ವನ ಕೊಂದೊಬ್ಬ ಬಳಲಿದ' ಎನ್ನಲಾಗಿದೆ. 'ಕ್ವಚಿಚ್ಚಿರಾಯುರ್ನಹಿ ಶೀಲಮಂಗಲಂ' ಎಂಬ ಭಾಗವತದ ಮಾತಿಗೆ ಇದು ಇನ್ನೊಂದು ಉದಾಹರಣೆ ಇಂದ್ರನಿಗೆ ಈ ಕಲ್ಪದ ಕೊನೆಯವರೆಗೂ ಆಯುಷ್ಯವಿದೆ, ಮನ್ಮಥನಂತೆ ಮೊದಲಿಗೇ ಆತ ವಿನಾಶ ಹೊಂದುವುದಿಲ್ಲ. ಆದರೆ ಬ್ರಹ್ಮಹತ್ಯೆಯಂಥಾ ಮಹಾ ಅಮಂಗಲ ಕಾರ್ಯ ಎಸಗುವ ಶೀಲವೇ ಅವನ ದೋಷ. 'ಬ್ರಹ್ಮಹತ್ಯಾಶಿರಸ್ಕಂ ಚ' ಎಂಬಂತೆ ಪಾಪಪುರುಷನ ಶಿರಸ್ಸು ಬ್ರಹ್ಮಹತ್ಯೆ.

ಅದಕ್ಕೆ ಸಮಾನವಾದ ಅಮಂಗಳ ಇನ್ನೊಂದಿಲ್ಲ. ಆದರಲ್ಲೂ ವೃತ್ರನು ಮಹಾ ವಿಷ್ಣುಭಕ್ತನಾದ ಉತ್ತಮ ಬ್ರಾಹ್ಮಣನಾಗಿದ್ದ. ಪಾರ್ ಎಂದರೆ ನಿರೀಕ್ಷಿಸು, ಗಮನಿಸು, ಹಾರೈಸು ಎಂಬುದಾಗಿ ಅರ್ಥವಿರುವುದರಿಂದ ಶ್ರೀ ಹರಿಕರುಣೆಯನ್ನು ನಿರೀಕ್ಷಿಸುತ್ತ, ಅವನ ಅರಿವಿನ ಲಾಭದ ಕಡೆಗೇ ಗಮನ ಕೊಡುತ್ತ, ತನಗೂ ಲೋಕಕ್ಕೂ ಕಲ್ಯಾಣವಾಗಲೆಂದು ಹಾರೈಸುವ ಪಾರ್ವ, ಹಾರ್ವ ಅಥವಾ ಹಾರುವ ಈ ವೃತ್ರನಾಗಿದ್ದ.

ಪೂರ್ವಜನ್ಮದಲ್ಲಿ ಈತ ಚಿತ್ರಕೇತು ಎಂಬ ರಾಜ. ನಾರದರ ಅನುಗ್ರಹದಿಂದ ಶೇಷಮಂತ್ರದ ಉಪಾಸನೆ ಮಾಡಿ ಶೇಷಾಂತರ್ಗತ ಸಂಕರ್ಷಣ ಮೂರ್ತಿಯನ್ನು ಸಾಕ್ಷಾತ್ಕರಿಸಿಕೊಂಡವ. ಪ್ರಾರಬ್ಧವಶಾತ್ ಒಮ್ಮೆ ಶಿವನನ್ನೇ ಅಪಹಾಸ್ಯ ಮಾಡಿದ. 'ಲಜ್ಜೆಯಿಲ್ಲದೆ ತುಂಬಿದ ಸಭೆಯಲ್ಲಿ ತೊಡೆಯ ಮೇಲೆ ಪಾರ್ವತಿಯನ್ನು ಕೂಡಿಸಿಕೊಳ್ಳುತ್ತಾನೆ' ಎಂದು. ಪಾರ್ವತಿ ಕುಪಿತಳಾಗಿ ಅಸುರನಾಗೆಂದು ಶಪಿಸಿದಳು ರಾಜನು ಪಶ್ಚಾತ್ತಾಪಗೊಂಡು ಭಕ್ತಿಯಿಂದ ಆ ಶಾಪವನ್ನು ಸ್ವೀಕರಿಸಿ ವೃತ್ರಾಸುರನಾಗಿ ಜನಿಸಿದನು ಆಗಲೂ ಆತ ವಿಷ್ಣುಭಕ್ತ. ಇಂದ್ರನೊಡನೆ ಸೆಣಸುವ ಕಾಲದಲ್ಲೂ ಹರಿಧ್ಯಾನ ಬಿಡಲಿಲ್ಲ. ಹರಿಯ ತೇಜಸ್ಸಿನಿಂದ ತುಂಬಿದ ವಜ್ರಾಯುಧದಿಂದ ಮಡಿದರೆ ತಾನು ಭಾಗ್ಯಶಾಲಿ ಎಂದುಕೊಂಡಿದ್ದ ಇಂದ್ರನ ಮುಂದೆ ಹಾಗೆ ಆಡಿಯೂ ಇದ್ದ ಆದರೆ ಇಂದ್ರನಿಗೆ ವೃತ್ರನನ್ನು ಕೊಲ್ಲಲಾಗಲಿಲ್ಲ. ದೇವತೆಗಳೂ ಋಷಿಗಳೂ ನಡುವೆ ಬಂದು ಇಬ್ಬರಿಗೂ ಸಂಧಾನ ಏರ್ಪಡಿಸಿದರು ಆಗ ವೃತ್ರನೊಡ್ಡಿದ ಶರತ್ತು ಹೀಗಿತ್ತು – 'ಇಂದ್ರನು ನನ್ನನ್ನು ಹಗಲಿನಲ್ಲಾಗಲಿ, ರಾತ್ರಿಯಲ್ಲಾಗಲಿ ಕೊಲ್ಲಕೂಡದು. ಹಸಿ ಪದಾರ್ಥ, ಒಣಗಿದ ಪದಾರ್ಥ, ಕಲ್ಲು, ಮರ, ಶಸ್ತ್ರ ಅಸ್ತ್ರ ಇದಾವುದರಿಂದಲೂ ನನ್ನನ್ನು ಕೊಲ್ಲಕೂಡದು.' ಇಂದ್ರನು ಒಪ್ಪಿದ. ಸ್ನೇಹಿತನಂತೆ ನಟಿಸಿದ. ಕೊಲ್ಲುವ ಅವಕಾಶಕ್ಕಾಗಿ ಕಾದು ನೋಡಿದ. ಒಂದು ವರ್ಷ ಕಳೆಯಿತು. ಒಮ್ಮೆ ಸಮುದ್ರತೀರದಲ್ಲಿ ಇಬ್ಬರೂ ವಿಹಾರ ಮಾಡುತ್ತಿದ್ದರು ಸಂಧ್ಯಾಕಾಲ, ಸಮುದ್ರದ ನೊರೆಯ ಕಡೆ ಇಂದ್ರನ ಗಮನ ಹರಿಯಿತು ಅದು ಹಸಿಯೂ ಅಲ್ಲ, ಒಣಗಿದ್ದೂ ಅಲ್ಲ. ಮರ, ಕಲ್ಲು, ಶಸ್ತ್ರ ಅಸ್ತ್ರ ಇವಾವುದೂ ಅಲ್ಲ. ಅನಾಯಾಸವಾಗಿ ಸಿಕ್ಕಿದೆ. ಅದೂ, ಹಗಲೂ ಅಲ್ಲದ, ರಾತ್ರಿಯೂ ಅಲ್ಲದ ಸಂಧ್ಯಾಕಾಲದಲ್ಲಿ! ನೊರೆಯ ಅಂತರ್ಗತನಾದ ಹರಿಯನ್ನು ಮನಸ್ಸಿನಲ್ಲೇ ಪ್ರಾರ್ಥಿಸಿದ 'ವೃತ್ರನನ್ನು ಕೊಲ್ಲು' ಎಂದು. ಹರಿಯ ಅಂಶದಿಂದ ಕೂಡಿದ ವಜ್ರಾಯುಧದ ತೇಜಸ್ಸನ್ನು ನೊರೆಯೊಳಗೆ ಕಳಿಸಿದ ವೃತ್ರನನ್ನು ಕಾಲಿಂದ ಸ್ಪರ್ಶಿಸಿ ಆ ನಿಮಿತ್ತದಿಂದ ಜಗಳಾಡಿ ನೊರೆಯಿಂದಲೇ ಅವನ ಶಿರಸ್ಸನ್ನು ತರಿದ. ವಿಷ್ಣುಭಕ್ತನಾದ ಬ್ರಾಹ್ಮಣೋತ್ತಮನಾಗಿದ್ದುದರಿಂದ ವೃತ್ರವಧೆ ಇಷ್ಟು ಕಷ್ಟಸಾಧ್ಯವೆನಿಸಿತ್ತು ಇಂದ್ರನಿಗೆ.

ವೇದದಲ್ಲಿ 'ದೀರ್ಘಂ ತಮ ಆ ಶಯದಿಂದ್ರಶತ್ರುಃ' ಎಂದು ವೃತ್ರನಿಗೆ ಅಂಧತಮಃ ಪ್ರಾಪ್ತಿಯನ್ನು ಹೇಳಿದೆ. ಆದರೆ ಈ ವೃತ್ರ ಬೇರೆ. ತ್ವಷ್ಟೃವಿನ ಮಗನಲ್ಲ. ಆತನು ಕಶ್ಯಪರ ಮಗ, ಮಹಾಪಾಪಿ. ತನ್ನ ಮಗನಾದ ಅಹಿ ಎಂಬ ದಾನವನೊಡಗೂಡಿ ಲೋಕದ ಎಲ್ಲ ನದೀ ಪ್ರವಾಹಗಳಿಗೆ ತಡೆಯೊಡ್ಡಿದವನು. ಅವನನ್ನೂ ವಜ್ರಾಯುಧದಿಂದ ಇಂದ್ರನೇ ಕೊಂದಿದ್ದ ವೇದಮಂತ್ರಗಳು ಈ ಪುಣ್ಯಕಾರ್ಯವನ್ನು ಹೊಗಳುತ್ತಿವೆ. 'ಇಂದ್ರೋ ವೃತ್ರಂ ಹತ್ವಾ ಮಹಾನಭೂತ್ !' ಆದರೆ ಈ ಹಾರ್ವವೃತ್ರನನ್ನು ಕೊಂದು ಇಂದ್ರ ಬಳಲಿದ ಗಡ ! ಇದು ಆಶ್ಚರ್ಯ. ಮೂಲೋಕದ ದೊರೆ, ಮೂಲೋಕಕ್ಕೇ ಧರ್ಮಾಚರಣೆ ಮಾಡಿ ತೋರಿಸಬೇಕಾದಂಥವನು. ಎಂಥ ಅಕೃತ್ಯ ಮಾಡಿದ್ದಾನೆ !

ವಸ್ತುತಃ ಅಪರೋಕ್ಷಿಯಾದ ಇಂದ್ರನಿಗೆ ಪಾಪ ಅಂಟುವುದಿಲ್ಲ ಆತ ಬಳಲಿದುದು ಪಾಪದಿಂದಲ್ಲ. ಪ್ರಾರಬ್ಧದಿಂದ ಪ್ರಾರಬ್ಧಕ್ಕೆ ಇದು ಸೂಚಕ ಮಾತ್ರ. ಇದರಿಂದ ಇಂದ್ರನಿಗೆ ಸಾವಿರ ವರ್ಷಗಳ ಕಾಲದ ನರಸಿಂಹ ಮಂತ್ರೋಪಾಸನೆ ಮತ್ತು ಅಶ್ವಮೇಧ ಯಾಗಗಳಿಂದ ಹೆಚ್ಚು ಪುಣ್ಯ ಸಂಪಾದಿಸುವ ಅವಕಾಶ ದೊರೆಯಿತು. ಹಾಗಾದರೆ ಇಂದ್ರನ ದೋಷವೇನು ? ಪ್ರಾರಬ್ಧ. ಕರ್ಮಲೇಪವಿಲ್ಲದ ಶ್ರೀಹರಿಗೆ ಯೋಗ್ಯಳಾದ ಮಹಾಲಕ್ಷ್ಮಿ ದೇವತೆಗಳಲ್ಲಿ ಪ್ರಾರಬ್ಧವನ್ನು ದೋಷವೆಂದು ಪರಿಗಣಿಸುವುದು ಸಹಜ ತಾನೇ ?

ಜೀವರ ಕೊಂದೊಬ್ಬ ಕುಲಗೇಡ್ಯೆಂದೆನಿಸಿದ ಗಡ !

ಈ ಒಬ್ಬ ಯಾರು ? ಯಮ ಎಂದು ನಮಗೆ ಅನಿಸಬಹುದು. ಆದರೆ ಅವನಿಗೆ ಕುಲಗೇಡಿ ಎನ್ನುವ ಕೆಟ್ಟಹೆಸರಿಲ್ಲ 'ಧರ್ಮರಾಜ' ಎನ್ನುವ ಹೆಸರಿದೆ. ಇಂದರ ಮುಂದಿನ ನುಡಿಯೇ ಹೇಳುತ್ತದೆ – 'ಧರ್ಮ ಉಂಟೊಬ್ಬನಲಿ ಹೆಮ್ಮೆಯ ಹೆಸರಿಗೆ' ಇದಕ್ಕೆ ಕಾರಣ, ಆತ ಜೀವರಲ್ಲಿ ಸಮಾನವಾಗಿ ನಿಷ್ಪಕ್ಷಪಾತ ರೀತಿಯಿಂದ ವರ್ತಿಸುವವ. 'ಸಮವರ್ತಿ' ಎಂದು ಇನ್ನೊಂದು ಹೆಸರೇ ಆತನಿಗಿದೆ. ಆದ್ದರಿಂದ ವಾದಿರಾಜರು ಉಪನ್ಯಾಸ ರತ್ನಮಾಲೆಯಲ್ಲಿ 'ಕ್ವಚಿಚ್ಚಿರಾಯುರ್ನಹಿ ಶೀಲಮಂಗಲಂ' ಎಂಬ ಭಾಗವತ ವಾಕ್ಯಕ್ಕೆ ನೀಡಿರುವ ಒಂದು ಹೊಸ ವ್ಯಾಖ್ಯಾನವನ್ನು ಗಮನಿಸಬೇಕು. – 'ಜಗನ್ಮಾರಕ ಮೃತ್ಯುದೇವನು ಕಲ್ಪದ ಕೊನೆಯವರೆಗೂ ಬದುಕಿದ್ದು ಎಲ್ಲರನ್ನೂ ಕೊಲ್ಲುವುದರಿಂದ ಅವನು ದೀರ್ಘಾಯುಷಿ ಹೌದು. ಆದರೆ ಒಳ್ಳೆಯ ಶೀಲ, ದಯೆ, ಕನಿಕರ ಮುಂತಾದುದು ಇಲ್ಲ. ಮಂಗಳಕರನೂ ಅಲ್ಲ. ಏಕೆಂದರೆ ದಂಪತಿಗಳನ್ನು ಅಗಲಿಸಿ ಪುರುಷರಿಗೆ ವಿಧುರತ್ವವನ್ನೂ, ಸ್ತ್ರೀಯರಿಗೆ ವೈಧವ್ಯವನ್ನೂ ತಂದುಕೊಡುತ್ತಾನೆ' ಯಮನ ಸೋದರ ಈ ಮೃತ್ಯುದೇವ. ಅವನ ಪ್ರಸ್ತಾಪವು ಇಲ್ಲಿ ಬಿಟ್ಟರೆ ಇನ್ನೆಲ್ಲೂ ಲಕ್ಷ್ಮೀಶೋಭನ ಪದದಲ್ಲಿ ಸಿಗುವುದಿಲ್ಲ. ಯಮನ ಬಗ್ಗೆ 'ಧರ್ಮಃ ಕ್ವಚಿತ್ ತತ್ರ

ನ ಭೂತಸೌಹೃದಂ' ಎಂದು ಭಾಗವತದಲ್ಲಿ ಹೇಳಿದಂತೆ ಇಲ್ಲಿಯೂ 'ಧರ್ಮ ಉಂಟೊಬ್ಬನಲಿ ಹೆಮ್ಮೆಯು ಹೆಸರಿಗೆ' ಎಂದು ಮುಂದಿನ ನುಡಿಯಲ್ಲಿಯೇ ಸ್ಪಷ್ಟ ಹೇಳಿದೆ.

ಮಹಾಭಾರತದಲ್ಲಿ ಮೃತ್ಯು ಓರ್ವ ಸ್ತ್ರೀದೇವತೆ ಎಂಬಂತೆ ವರ್ಣನೆ ಇದೆ. ಅಲ್ಲಿ ಬರುವ ಕಥೆಯನ್ನು ವಿಜಯದಾಸರು ಹೀಗೆ ಸಂಗ್ರಹಿಸಿದ್ದಾರೆ–

ಮಿಗಿಯಾಗಿ ತುಂಬಿತು ಕಶ್ಯಪ ಮನುಸೃಷ್ಟಿ
ಜಗವೆಲ್ಲ ನಿಬಿಡವಾಯಿತು ನೋಡಿ ಒಂದು ಹೆ–
ಜ್ಜೆಗೆ ಭೂಮಿ ಇಲ್ಲದಂತಾಗಲು ಅಜರಾಯ ಮೊ–
ಮ್ಮಗನ ವಂಶ ಕಂಡು ಯೋಚಿಸಿ ತನ್ನ
ನಗೆಯಿಂದ ಮೃತ್ಯುದೇವತೆಯ ಪುಟ್ಟಿಸಲಾಗಿ
ಮಗಳಾಗಿ ನಿಂದು ರೋದನ ಮಾಡಲಾಗಿ ಪ್ರಾ–
ಣಿಗಳ ನಾಶಕೆ ಜ್ವರ ಉಳಿದ ರೋಗಗಳುದ್ಭವವಯ್ಯ....

ಮಹಾಭಾರತಕ್ಕಿಂತ ಇಲ್ಲಿ ಒಂದು ವ್ಯತ್ಯಾಸ – ಅಲ್ಲಿ ಬ್ರಹ್ಮನ ಕೋಪಾಗ್ನಿಯಿಂದ ಮೃತ್ಯು ಜನಿಸಿದರೆ ಇಲ್ಲಿ 'ನಗೆಯಿಂದ' ಹುಟ್ಟುತ್ತಾಳೆ 'ದಗೆಯಿಂದ' ಎಂದು ಪಾಠವಿದ್ದಿದ್ದರೆ ಏಕಾಭಿಪ್ರಾಯವಾಗುತ್ತಿತ್ತು

ರುದ್ರದೇವರ ಪ್ರಾರ್ಥನೆಯಂತೆ ಬ್ರಹ್ಮನು ಕೋಪಾಗ್ನಿಯನ್ನು ಶಾಂತಗೊಳಿಸಿದಾಗ ಮೃತ್ಯುದೇವತೆ ಪ್ರಾದುರ್ಭವಿಸಿ ದಕ್ಷಿಣ ದಿಕ್ಕಿನಲ್ಲಿ ನಿಂತಳು ಬ್ರಹ್ಮನು ಆಜ್ಞಾಪಿಸಿದ, 'ಗಚ್ಛ ಸಂಹರ ಸರ್ವಾಸ್ತ್ವಂ ಪ್ರಜಾಃ' ಹೋಗು ಎಲ್ಲ ಪ್ರಾಣಿಗಳನ್ನೂ ಸಂಹರಿಸು' ಮೃತ್ಯು, 'ನಿಂದು ರೋದನ' ಮಾಡಿದಳು– 'ಎಂಥ ನಿರ್ದಯಿ ಕಟುಕನ ಕೆಲಸಕ್ಕೆ ನನ್ನನ್ನು ಅಜ್ಞಾಪಿಸುತ್ತಿರುವಿ ?' 'ನಿನಗೇನೂ ಪಾಪ ತಗುಲದು, ಹೋಗು' ಬ್ರಹ್ಮ ಆಗ್ರಹತೊಟ್ಟ. ಅವನ ಮನ ಒಲಿಸಿ ತಿರುಗಿಸಲು ಕೋಟಿಗಟ್ಟಲೆ ವರ್ಷಗಳ ಕಠಿಣ ತಪಸ್ಸು ಮಾಡಿದಳು, ಮೃತ್ಯು. ಕೊನೆಗೂ ಬ್ರಹ್ಮನು ತನ್ನ ಆಗ್ರಹ ಬಿಡಲಿಲ್ಲ 'ಹೋಗು. ನೀನೆ ಪ್ರಾಣಿಗಳನ್ನು ಸಾಕ್ಷಾತ್ತಾಗಿ ಕೊಲ್ಲಬೇಕಾಗಿಲ್ಲ. ಆಯುಷ್ಯ ತೀರಿದಾಗ ಜರಾವ್ಯಾಧಿಗಳು ಪ್ರಾಣಿಗಳನ್ನು ಆಕ್ರಮಿಸಿ ಮೃತಪ್ರಾಯರನ್ನಾಗಿಸುತ್ತವೆ. ಯಮಧರ್ಮನೂ ನಿನ್ನ ಸಹಾಯಕ್ಕೆ ಬರುತ್ತಾನೆ' ಇದಕ್ಕೆ ಮೃತ್ಯು ಒಪ್ಪಿದಳು.

ಪುರಂದರದಾಸರೂ ಮೃತ್ಯುವನ್ನು ಸ್ತ್ರೀ ಎಂದೇ ಒಪ್ಪಿದಂತಿದೆ– "ಸಾಯಲಾರೆನು ಎನಲು ಬೆನ್ನ ಬಿಡುವಳೆ ಮೃತ್ಯು ?"

ಸ್ವಯಂವರದ ಕನ್ಯೆ ಓರ್ವ ಸ್ತ್ರೀ ದೇವತೆಯ ಬಗ್ಗೆ ವಿಚಾರಿಸುವಳೆ ?

ಮಹಾಭಾರತದಲ್ಲಿ ಇನ್ನೊಬ್ಬ ಪುರುಷರೂಪದ ಮೃತ್ಯುವೂ ಇದ್ದಾನೆ- "ಪ್ರಾಣಿಗಳ ನಾಶಕಾಗಿ ಅಧರ್ಮನು ಜನಿಸಿದ. ಅವನಿಗೆ ಭಯ, ಮಹಾಭಯ ಮತ್ತು ಮೃತ್ಯುಗಳೆಂಬ ಪುತ್ರರು ಜನಿಸಿದರು". ಪದ್ಮ ಪುರಾಣದಲ್ಲಿ ಒಂದು ಕಥೆ – ಈ ಮೃತ್ಯುವಿನ ಮಗಳು ಸುನೀಥಾ ಪುಟ್ಟ ಬಾಲಿಕೆಯಾಗಿದ್ದಾಗಿನಿಂದಲೂ ತಂದೆಯ ವ್ಯವಹಾರಗಳನ್ನು ಗಮನಿಸಿ ಒಂದು ವಿಷಯ ಚೆನ್ನಾಗಿ ಕಲಿತುಕೊಂಡಿದ್ದಳು. ಅದೇನೆಂದರೆ ಕಣ್ಣಿಗೆ ಬಿದ್ದವರನ್ನೆಲ್ಲ ಹೊಡೆದು ಬಡಿದು ಹಿಂಸಿಸಬೇಕೆಂದು. ಇದರ ಪರಿಣಾಮ, ಓರ್ವ ಗಂಧರ್ವಕುಮಾರನು ಅರಣ್ಯದ ಏಕಾಂತ ಪ್ರದೇಶದಲ್ಲಿ ಕುಳಿತು ಸಂಗೀತ ಅಭ್ಯಾಸ ಮಾಡುತ್ತಿದ್ದರೆ ಈಕೆ ಪ್ರತಿದಿನ ಅವನಿಗೆ ನಾನಾಬಗೆಯಿಂದ ಹಿಂಸೆ ಮಾಡತೊಡಗಿದಳು ಗಂಧರ್ವಕುಮಾರ ಎಲ್ಲ ಸಹಿಸಿಕೊಂಡರೂ ಕೊನೆಗೆ ತಾಳ್ಮೆ ತಪ್ಪಿ ನಿನ್ನ ಗರ್ಭದಲ್ಲಿ ಲೋಕಪೀಡಕನಾದ ಮಗ ಜನಿಸಲೆಂದು ಶಪಿಸಿದ. ಆ ಮಗನೇ ಮಹಾಪಾಪಿ ವೇನರಾಜ. ಆದರೆ ಈ ಮೃತ್ಯು ದೇವನಲ್ಲ, ದಾನವನೆನ್ನುವುದು ಸ್ಪಷ್ಟ, ಇವನೆ ವೇನನ ತಾತ 'ವೇನಮಾತಾಮಹೋಽಸುರಃ' ಎಂದು ಭಾಗವತ ತಾತ್ಪರ್ಯ. ದಾನವರು ದೋಷ ಸ್ವರೂಪರಾದುದರಿಂದ ಅವರಲ್ಲಿ ದೋಷಾನ್ವೇಷಣೆಯ ಪ್ರಶ್ನೆಯೇ ಇಲ್ಲ. ಮಹಾಲಕ್ಷ್ಮಿ ಅವರ ಕಡೆಗೆ ದೃಷ್ಟಿಯನ್ನು ಹಾಕಲಿಲ್ಲ ಎಂದು ಹಿಂದೆಯೇ ಹೇಳಿದೆ.

ಈ ಸಮಸ್ಯೆಯ ಪರಿಹಾರ 'ಮಗಳಾಗಿ ನಿಂದು' ಎನ್ನುವ ವಿಜಯದಾಸರ ಸುಳಾದಿಯಲ್ಲಿ ಸಿಗುತ್ತದೆ. ವಾದಿರಾಜರು ಉಪನ್ಯಾಸ ರತ್ನಮಾಲೆಯಲ್ಲಿ ಹೇಳಿದಂತೆ ಮೃತ್ಯುವನ್ನು ಪುರುಷ ದೇವತೆ ಎಂದೆ ಇಟ್ಟುಕೊಳ್ಳಬೇಕು. ದೇವತೆಗಳು ಕಾಮರೂಪಿಗಳಾದುದರಿಂದ ಮೃತ್ಯು ಬ್ರಹ್ಮನ ಮುಂದೆ 'ಮಗಳಾಗಿ ನಿಂದು ರೋದನ' ಮಾಡಿದನು. ಹೆಣ್ಣಿನ ಕಣ್ಣೀರು ತುಂಬ ಪರಿಣಾಮಕಾರಿಯಲ್ಲವೇ ? ಈಗ 'ಮೃತ್ಯುರ್ದೇವೋ ಯಮಭ್ರಾತಾ' ಎನ್ನುವ ಭಾಗವತ ತಾತ್ಪರ್ಯವೂ ಸರಿಹೊಂದುತ್ತದೆ ಮಹಾಭಾರತದ ವಿರೋಧವೂ ಇಲ್ಲ. ಅಲ್ಲಿಯೆ ಹೇಳಿದಂತೆ ಮೃತ್ಯುವಿಗೆ 'ನೀನು ಸ್ತ್ರೀಯರಲ್ಲಿ ಸ್ತ್ರೀರೂಪಿನಿಂದ, ಪುರುಷರಲ್ಲಿ ಪುರುಷರೂಪಿನಿಂದ ನಪುಂಸಕರಲ್ಲಿ ನಪುಂಸಕ ರೂಪದಿಂದ ಇರು' ಎಂದು ಬ್ರಹ್ಮನು ವಿಶೇಷವಾಗಿ ವರವನ್ನು ಕೊಟ್ಟಿದ್ದಾನೆ. ಭಾಗವತದಲ್ಲಿ ಹೇಳಿದಂತೆ ಮೃತ್ಯು ಪ್ರಾಣಿಗಳ ಶರೀರದೊಂದಿಗೇ ಹುಟ್ಟುತ್ತಾನೆ. ಸ್ತ್ರೀಯೋ ಪುರುಷನೋ ನಪುಂಸಕನೋ ಆಗಿ ಪ್ರಾಣಿಯ ಹೆಡತಲೆಯಲ್ಲಿ ವಾಸಿಸುತ್ತಾನೆ. ಆಯುಷ್ಯ ತೀರಿದರೆ ಅರೆಕ್ಷಣವೂ ವಿಲಂಬವಿಲ್ಲದೆ ಸೆಳೆದೊಯ್ಯುತ್ತಾನೆ. ಮಾರ್ಕಂಡೇಯನನ್ನು ಸೆಳೆಯಲು ಬಂದ ಮೃತ್ಯು ಇವನೇ, ಯಮನಲ್ಲ ಇದು ಕಟುಕರ ಉದ್ಯೋಗವೆಂದು ಸ್ವಯಂವರದ ಕನ್ಯೆ ಭಾವಿಸಿದರೆ ತಪ್ಪಿಲ್ಲ, ವಸ್ತುತಃ ಲೋಕದೃಷ್ಟಿಯಿಂದ ಹೀನವಾದ ಒಂದು

ಅಮಂಗಲ ಕಾರ್ಯದಲ್ಲಿ ಒಲ್ಲದ ಮನಸ್ಸಿನಿಂದ ಪ್ರವೃತ್ತನಾಗಬೇಕಾಗುವಂಥ ಅಸ್ವಾತಂತ್ರ್ಯವೇ ಈ ಮೃತ್ಯುವಿನಲ್ಲಿ ಕಂಡುಬರುವ ದೋಷ.

ಶಿವನಿಂದೊಬ್ಬ ಬಯಲಾದ !

ಮನ್ಮಥನು ಶಿವನ ಉರಿಗಣ್ಣಿಗೆ ಆಹುತಿಯಾಗಿ ಬಯಲಾದ, ಬರಿದಾದ, ಶೂನ್ಯನೆನಿಸಿದ ! ಗಡ ! ಆಶ್ಚರ್ಯ ! ತ್ರಿಲೋಕ ವಿಜಯಿಯಾಗೆಂದು ಬ್ರಹ್ಮನ ವರ ಪಡೆದು ಬೀಗಿದ್ದ ಕಂದರ್ಪನ ದರ್ಪವೆಲ್ಲ ಶಿವನ ಒಂದು ಕಣ್ಣುನೋಟದಿಂದ ಬಯಲಾಯಿತು

ಈ ಮನ್ಮಥ ಸಾಮಾನ್ಯ ದೇವತೆಯಲ್ಲ ಮನೋಭಿಮಾನಿ ಶ್ರೀ ಹರಿಯ ಮನಸ್ಸಿನಿಂದ ಹುಟ್ಟಿ ಮನಸಿಜನೆಂದು ಪ್ರಸಿದ್ಧನಾದವ, ಪರಾಕ್ರಮದಲ್ಲಿ ಇಂದ್ರನಿಗೆ ಸಮಾನ ಶ್ರೀಹರಿಯ ಸುದರ್ಶನ ಚಕ್ರಕ್ಕೆ ಅಭಿಮಾನಿ ಪ್ರದ್ಯುಮ್ನರೂಪಿ ಹರಿಯಾವೇಶದಿಂದ "ಪ್ರದ್ಯುಮ್ನ" ಅಂದರೆ "ಅಸಾಮಾನ್ಯ ಬಲ ಉಳ್ಳವ" ನೆಂದೇ ಆತನಿಗೆ ಇನ್ನೊಂದು ಹೆಸರು. ಯಮನಿಗೂ ಯಮ.

"ಯಮಃ ಕಾಲೋ ಮನುಷ್ಯಾಣಾಂ ತಸ್ಯ ಕಾಲಃ ಸುದರ್ಶನಃ"

"ಮಾನವರಿಗೆಲ್ಲ ಯಮನು ಮೃತ್ಯುವಾದರೆ ಅವನಿಗೆ ಸುದರ್ಶನ ಚಕ್ರಾಭಿಮಾನಿ ಕಾಮನು ಮೃತ್ಯು" ಅವನ ಪಟ್ಟದ ರಾಣಿ, ಅರವತ್ತನಾಲ್ಕು ಕಲೆಗಳಿಂದ ಪರಿವೃತಳಾದ ದಕ್ಷಕುಮಾರಿ ರತಿದೇವಿ ಅರವಿಂದ ಅಶೋಕ ಚೂತ ನವಮಲ್ಲಿಕಾ ನೀಲೋತ್ಪಲ ಎಂದು ಐದು ಹೂಬಾಣಗಳು. ಹರ್ಷಣ, ರೋಚನ, ಮೋಹನ, ಶೋಷಣ, ಮಾರಣವೆಂದು ಐದು ಭಯಂಕರ ಅಸ್ತ್ರಗಳು. ಸಹಾಯಕ್ಕೆ ಇವನಂತೇ ಆಕೃತಿ ವೇಷಭೂಷಣಗಳುಳ್ಳ ಐವತ್ತು ಮಂದಿ ಕಾಮ, ಕಾಮಾದ ಮುಂತಾದ ವೀರರು. ಅವರೂ ರತಿಯಂಥ ರಾಣಿಯರಿಂದ ಸಮೇತರಾದವರು ವಸಂತನು ಮಂತ್ರಿ ಶೃಂಗಾರ ರಸವು ಸೇನಾನಾಯಕ ನಲವತ್ತೊಂಭತ್ತು ಶೃಂಗಾರ ಭಾವಗಳು ಪ್ರಚಂಡ ಸೈನಿಕರು. ಮಲಯಾನಿಲ, ಕೋಗಿಲೆ ಇಂಚರ, ದುಂಬಿಯ ಝೇಂಕಾರ ಮುಂತಾದುವು ಪರಿವಾರದವರು ಕಬ್ಬಿನ ಬಿಲ್ಲಿಗೆ ದುಂಬಿಗಳ ಹೆದೆ ಏರಿಸಿ ಹೂಬಾಣ ಬಿಟ್ಟರೆ ಒಂದು ಎದೆ ಸೀಳಾಗಿ ಎರಡಾಗುವುದರ ಬದಲು, ಎರಡು ಎದೆಗಳೇ ಬೆಸೆದು ಒಂದಾಗುವುವು. ಇದು ಮನ್ಮಥನ ಬಿಲ್ಲುಗಾರಿಕೆಯ ವೈಶಿಷ್ಟ್ಯ ! ಇಂದ್ರನ ವಜ್ರಾಯುಧ ತಪಸ್ವಿಗಳ ಮುಂದೆ ನಿರ್ವೀರ್ಯವಾದೀತು, ಕಾಮನ ಹೂಬಾಣ ಮಾತ್ರ ಅವರನ್ನೂ ಕಂಗೆಡಿಸೀತು !

ಇಂಥ ಅಪ್ರತಿಮ ಪರಾಕ್ರಮದ ಮನ್ಮಥನನ್ನೇ ದೇವತೆಗಳೆಲ್ಲಾ ಬೇಡಿ ಶಿವನ ಬಳಿ ಕಳಿಸಿದರು ಅವನ ರಾಣಿ ರತಿದೇವಿಯ ಸೋದರಿ ಶಿವನ ಹಿಂದಿನ ಮಡದಿ,

ಸತೀದೇವಿ ಈಗ ಅವಳೇ ಪಾರ್ವತಿಯಾಗಿ ಜನಿಸಿದ್ದಾಳೆ ಶಿವನು ಆಕೆಯ ಕೈ ಹಿಡಿಯಬೇಕು ಪರಮ ವೈರಾಗ್ಯಮೂರ್ತಿ ವೈರಾಗ್ಯಾಧಿಪತಿಯಾದ ಆ ಶಿವನು ಮನಸ್ಸು ಮಾಡುತ್ತಿಲ್ಲ ಮನ್ಮಥ ತನ್ನ ಪರಿವಾರದೊಂದಿಗೆ ಬಂದು ಶಿವನು ಧ್ಯಾನದಿಂದ ಬಹಿರ್ಮುಖನಾಗಿದ್ದಾಗ, ಪಾರ್ವತಿಯೂ ಸಖಿಯರೊಂದಿಗೆ ಬಂದು ಶಿವನನ್ನು ಉಪಚರಿಸುತ್ತಿದ್ದಾಗ, ಹೊಂಚುಹಾಕಿ ಸಮಯ ನೋಡಿ ತನ್ನ ಹರ್ಷಣಾಸ್ತ್ರವನ್ನು ಶಿವನೆದೆಗೆ ಎಸೆದ. ಒಡನೆ ಶಿವನೆದೆಯಲ್ಲಿ ಅನಿರ್ವಚನೀಯವಾದ ಉಲ್ಲಾಸ ಮೂಡಿತು. ಮನ್ಮಥ ರೋಚನಾಸ್ತ್ರವನ್ನೂ ಎಸೆದ, ಪಾರ್ವತಿಯ ಅಂದ ಶಿವನಿಗೆ ಆಗ ಆಕರ್ಷಕವಾಗಿ ಕಂಡುಬಂದಿತು. ಹೊಗಳಿದ. ಅನಿರೀಕ್ಷಿತವಾಗಿ ಅವನ ಬಾಯಿಂದ ತನ್ನ ಅಂದದ ಬಗ್ಗೆ ಹೊಗಳಿಕೆ ಮಾತು ಕೇಳಿ ಪಾರ್ವತಿ ತಾನು ಧನ್ಯೆ ಎಂದುಕೊಂಡಳು. ತನ್ನ ಅಂದವನ್ನು ತೋರುತ್ತ ತಾನೂ ಮಾದಕವಾಗಿ ಮಂದಹಾಸ ಬೀರಿದಳು, ಶಿವ ಪರವಶನಾದ, "ಓಹ್ ನೋಡಿದರೇ ಇಷ್ಟು ಆನಂದ! ಇನ್ನು ಆಲಿಂಗಿಸಿಕೊಂಡರೆ?" ಎಂದುಕೊಂಡ ಒಂದು ಕ್ಷಣ. ಒಡನೆ ಎಚ್ಚೆತ್ತು ಸುತ್ತಲೂ ಕಣ್ಣು ಹಾಯಿಸಿದ, ಅಷ್ಟರಲ್ಲಿ ಮನ್ಮಥನು ಮೋಹನಾಸ್ತ್ರವನ್ನೂ ಬಿಟ್ಟಿದ್ದ. ಆದರೆ ಎಲ್ಲ ವ್ಯರ್ಥವಾಯಿತು ಮನ್ಮಥ ಭಯದಿಂದ ನಡುಗಿದ. ಎಲ್ಲ ದೇವತೆಗಳನ್ನೂ ನೆನೆದ ಅವರೆಲ್ಲ ಧಾವಿಸಿ ಬಂದರು. ಎಲ್ಲರೂ ನೋಡುತ್ತಿದ್ದಂತೆ ಶಿವನ ದೃಷ್ಟಿ ಮನ್ಮಥನ ಮೇಲೆ ನೆಟ್ಟಿತ್ತು ಮೂರನೇ ಕಣ್ಣು ತೆರೆದುಕೊಂಡಿತ್ತು. ಒಂದು ಬೆಂಕಿಯ ಕಿಡಿ ಹೊರಟು ಆಗಸದಲ್ಲಿ ಬಲು ಎತ್ತರಕ್ಕೇರಿ ಬರಸಿಡಿಲಿನಂತೆ ವೇಗವಾಗಿ ಧರೆಗೆರಗಿತ್ತು. ದೇವತೆಗಳ ಹಾಹಾಕಾರ, ರತಿಯ ಕರುಣಾಕ್ರಂದನ ಮುಗಿಲಿಗೇರಿತ್ತು. ಮನ್ಮಥ ಸುಟ್ಟು ಬೂದಿಯಾಗಿದ್ದ.

'ಸ್ಮರೋ ನಿಯಮಘಸ್ಮರೋ ನಿಯಮಿನಾಮಭೂದ್ ಭಸ್ಮಸಾತ್ ।'

"ತಪಸ್ವಿಗಳ ತಪಸ್ಸನ್ನು ಕೆಡಿಸುತ್ತಿದ್ದ ಮನ್ಮಥ ಭಸ್ಮೀಭೂತನಾದ' ಎಂದು ನಾರಾಯಣ ಪಂಡಿತಚಾರ್ಯರು ಹೇಳಿದ್ದಾರೆ. ಕನಕದಾಸರು ತಪಸ್ವಿಗಳಿಗೆ ಮನ್ಮಥನಿಂದಾಗುವ ತೊಂದರೆಯನ್ನು ವರ್ಣಿಸಿದ್ದಾರೆ–

ಪಥನಡೆಯದಯ್ಯ ಪರಲೋಕ ಸಾಧನಕೆ ಮ- ।
ನ್ಮಥನೆಂಬ ಖಳನು ಮಾರ್ಗವಕಟ್ಟಿ ಸುಲಿಯುತಿರೆ ॥

ತನುರೋಮ ಗಿಡವೃಕ್ಷ ಥಳಥಳಿಪ ಭುಜಲತೆಯು
ವನ ಸಿಂಹ ಗಜಮೃಗಗಳಿಂದೊಪ್ಪುವ ।
ವನಿತೆಯುರ ಕಾಯಕಾಂತಾರಮಾರ್ಗದಲಿ
ಘನ ಕುಚಗಳೆಂಬೊ ಕಣಿವೆಯ ಮಧ್ಯ ಸೇರಿಹನು ॥

ಗಿಳಿ ನವಿಲು ವಸಂತ ಭ್ರಮರಗಳು ಒಂದಾಗಿ
ಬಲದೊಡನೆ ಮದನ ಮಾರ್ಗವ ಕಟ್ಟಲು ।
ಬಲವುಳ್ಳ ಭಕ್ತ ಮುನಿ ಸನ್ಯಾಸಿಯೋಗಿಗಳು
ಸುಲಿಸಿಕೊಂಡರು ಕೆಲರು ಸಿಕ್ಕಿದರು ಸೆರೆಗೆ ॥

ಕಾಳಗದೊಳಿದಿರಿಲ್ಲ ಸುರರು ದಾನವರು ಕ–
ಟ್ಟಾಳು ಮನ್ಮಥನ ಛಲದಂಕ ಬಿರುದು ।
ಹೇಳಲಿನ್ನೇನು ಬಡದಾದಿ ಕೇಶವರಾಯ–
ನಾಳ ಸಂಗಡ ಹೋದರಾವ ಭಯವಿಲ್ಲ ॥

ಇಂಥ ಮನ್ಮಥನ ದರ್ಪವೆಲ್ಲ ಅರೆ ಕ್ಷಣದಲ್ಲಿ ಬಯಲಾಯಿತು! ಗಡ! ಆಶ್ಚರ್ಯ. ಏಕೆಂದರೆ ದೇವತೆಗಳೆಲ್ಲ ಅಮರರು. ಹೀಗಿದ್ದರೂ ಮನ್ಮಥ ಮರಣಹೊಂದಿದನೆಂಬುದು ಆಶ್ಚರ್ಯ.

ಭಾಗವತದಲ್ಲಿ "ಕ್ವಚಿತ್ತದಪ್ಯಸ್ತಿ ನ ವೇದ್ಯಮಾಯುಷಃ" "ಮನ್ಮಥನಲ್ಲಿ ಒಳ್ಳೆಯ ಶೀಲವಿದೆ. ಎಲ್ಲ ಪ್ರಾಣಿಗಳ ಹೃದಯವನ್ನು ಹೊಕ್ಕು ಕಲಕಿ ಸುಖಾನುಭವ ಕೊಡುತ್ತಾನೆ. ಮದನ ಎಂದರೆ ಸುಖಾನುಭವ ಕೊಡುವವ. ಮನ್ಮಥ ಎಂದರೆ ಎದೆಯನ್ನು ಕಲಕುವವನು ಹೀಗೆ ಅವನ ಹೆಸರು ಸಾರ್ಥಕ. ದಂಪತಿಗಳನ್ನು ಜೊತೆ ಸೇರಿಸುವ ಮಂಗಳ ಕಾರ್ಯ ಆತನದು. ಪುತ್ರ ಪೌತ್ರಾದಿ ಸಂತತಿ ವೃದ್ಧಿ ಆತನ ಅನುಗ್ರಹದಿಂದ. ಹೀಗಿದ್ದರೂ ಅವನಿಗೆ ಆಯುಷ್ಯವಿಲ್ಲ ಬೇರೆ ದೇವತೆಗಳೆಲ್ಲ ಇನ್ನೂ ಬದುಕಿರುವಾಗಲೇ ಈ ಮನ್ಮಥ ಮರಣಹೊಂದಿದ!"

ವಸ್ತುತಃ ಮನ್ಮಥ ಸುಟ್ಟು ಹೋದುದು ಅಷ್ಟೇನೂ ಆಶ್ಚರ್ಯದ ಸಂಗತಿ ಅಲ್ಲ. ಆತನಿಗೆ ತ್ರಿಲೋಕ ವಿಜಯಿಯಾಗೆಂದು ವರ ನೀಡಿದ್ದ ಬ್ರಹ್ಮನೇ ಶಿವನ ಹಣೆಗಣ್ಣಿನ ಉರಿಗೆ ಆಹುತಿಯಾಗೆಂದು ಶಾಪವನ್ನೂ ಕೊಟ್ಟಿದ್ದ. ಬ್ರಹ್ಮನು ತಾನು ತನ್ನ ಮಗಳಾದ ವಾಗ್ದೇವತೆಯನ್ನು ಮೋಹಿಸುವಂತೆ ಮಾಡಿದ ಅಪರಾಧಕ್ಕೆ ಆ ಶಾಪ ನೀಡಿದ್ದ. ಮಾನವರಿಗೆಲ್ಲ ಯಮನಂತೆ, ಯಮನಿಗೆ ಕಾಮನಂತೆ, ಕಾಮನಿಗೆ ಸೋಮಶೇಖರ, ಮೃತ್ಯುವಾಗಿದ್ದಾನೆ. ಅವನನ್ನೇ ಕೆಣಕಲು ಹೋಗಿದ್ದಾನೆ ಈ ಮನ್ಮಥ!

ಆಶ್ಚರ್ಯದ ಸಂಗತಿ ಎಂದರೆ ವಾದಿರಾಜರು ರುಕ್ಮಿಣೀಶ ವಿಜಯದಲ್ಲಿ ಹೇಳುವಂತೆ—

ಭಸ್ಮೀಭೂತಮಿವಾರಚಯ್ಯ ಗಿರಿಶೋ ಯಂ ಬಾಹ್ಯದೃಷ್ಟ್ಯಾ ಪುನಃ
ಚಿತ್ತಾಂತಃಸ್ಥಿತಮಾರ್ಪಯದ್ ಗಿರಿಸುತಾಗರ್ಭೇ ಹ್ಯನೇಕಾನನಂ ॥

"ಲೋಕದೃಷ್ಟಿಗೆ ಹರನು ಮನ್ಮಥನನ್ನು ಸುಟ್ಟು ಬೂದಿ ಮಾಡಿದಂತೆ ತೋರಿಕೊಂಡರೂ ವಾಸ್ತವವಾಗಿ ಅವನನ್ನು ತನ್ನ ಎದೆಯಲ್ಲೇ ಇಟ್ಟುಕೊಂಡು, ಒಂದು ಮುಖದಿಂದಲೆ ಮೂಲೋಕವನ್ನು ಗೆಲ್ಲುತ್ತಿದ್ದ ಅವನನ್ನು ಅನೇಕ ಮುಖದಿಂದ ಪಾರ್ವತಿಯ ಗರ್ಭದಲ್ಲಿಟ್ಟ, ಷಣ್ಮುಖನಾಗಿ ಅವತರಿಸುವಂತೆ ಮಾಡಿದ".

ಶ್ರೀ ಕೃಷ್ಣನು ಕೈಲಾಸ ಯಾತ್ರೆ ಮಾಡಿದಾಗ ಶಿವನು ಅವನಿಗೆ ಪುತ್ರವರ ನೀಡುವ ನೆಪದಲ್ಲಿ ಮನ್ಮಥನಿಗೆ ಪ್ರದ್ಯುಮ್ನ ರೂಪದಿಂದಲೂ ಜನಿಸುವಂತೆ ಅನುಗ್ರಹಿಸಿದ.

ಷಣ್ಮುಖ, ಪ್ರದ್ಯುಮ್ನ ರೂಪಗಳಿಂದ ಅಪ್ರತಿಮ ಯುದ್ಧ ವೀರನೆಂದು ಪ್ರಸಿದ್ಧನಾದ ಮನ್ಮಥನು ಅನಂಗನಾಗಿ ಸ್ಥೂಲ ಶರೀರವಿಲ್ಲದವನಾಗಿಯೂ, ಪ್ರಾಣಿಗಳ ಸೂಕ್ಷ್ಮ ಮನಸ್ಸನ್ನು ಪ್ರವೇಶಿಸಿ ಶೃಂಗಾರ ಭಾವದ ರೂಪದಿಂದ ಅವಿರ್ಭವಿಸಿ ಮನಸಿಜನೆನಿಸುತ್ತಾನೆ. ಆಗ ಪ್ರಾಣಿಗಳಿಗೆ ಆ ಶೃಂಗಾರಭಾವದ ಹೊರತು ಬಾಹ್ಯಪ್ರಪಂಚದ ಅರಿವೇ ಇಲ್ಲದಂತೆ ಮಾಡುತ್ತಾನೆ. ಅನಂಗನೆನಿಸುತ್ತಾನೆ. ಅಂಗ ಅಂದರೆ ಬಾಹ್ಯಪ್ರಪಂಚಜ್ಞಾನ, ಅದಿಲ್ಲದಂತೆ ಮಾಡುವುದರಿಂದ ಮನ್ಮಥನಿಗೆ ಅನಂಗನೆಂದು ಹೆಸರು. ಹೀಗೆ ತ್ರಿಲೋಕ ವಿಜಯಿಯಾಗೆಂಬ ಬ್ರಹ್ಮನ ವರವೂ ಸಮೃದ್ಧಿಯಾಗಿಯೇ ಫಲಿಸಿತು, ಹರನ ಹಣೆಗಣ್ಣಿಗೆ ಆಹುತಿಯಾಗೆಂಬ ಶಾಪವೂ ಫಲಿಸಿತು. ಇದು ಆಶ್ಚರ್ಯ !

ಹಾಗಾದರೆ ಮನ್ಮಥನಲ್ಲಿ ದೋಷವೇನು ? ಮಹಾಲಕ್ಷ್ಮಿ ಅವನನ್ನೇಕೆ ತಿರಸ್ಕರಿಸಿದಳು ? ತನ್ನ ಶರೀರವನ್ನು ತಾನು ರಕ್ಷಿಸಿಕೊಳ್ಳಲಾರದ, ಅಲ್ಪಾಯುಷಿಯಾದ ಗಂಡು ಈತ; ನಿತ್ಯಮುತ್ತೈದೆ ತಾನು, ಎಂದು,

– ೨೨ –

**ಧರ್ಮ ಉಂಟೊಬ್ಬನಲಿ ಹೆಮ್ಮೆಯ ಹೆಸರಿಗೆ**
**ಅಮ್ಮಮ್ಮ ತಕ್ಕ ಗುಣವಿಲ್ಲ !**
**ಕ್ಷಮ್ಮೆಯ ಬಿಟ್ಟೊಬ್ಬ ನರಕದಲಿ ಜೀವರ**
**ಮರ್ಮವ ಮೆಟ್ಟಿ ಕೊಲಿಸುವ ॥**

ಒಬ್ಬನಲ್ಲಿ, ಯಮಧರ್ಮರಾಜನಲ್ಲಿ ಧರ್ಮವಿದೆ, ಆದರೇನು ? ಅಮ್ಮಮ್ಮ ! ಏನಾಶ್ಚರ್ಯ ! ಅವನ ಆ ಹೆಮ್ಮೆಯ ಹೆಸರಿಗೆ ತಕ್ಕುದಾದ ಗುಣವಿಲ್ಲ ! ಒಬ್ಬ,

ಇನ್ನೊಂದು ರೂಪದಲ್ಲಿ ಆ ಯಮನೆ, ಕ್ಷಮೆಯನ್ನು ಬಿಟ್ಟು ನರಕದಲ್ಲಿ ಜೀವರ ಮರ್ಮಸ್ಥಳವನ್ನೆ ಮೆಟ್ಟಿ ಹಿಂಸಿಸುತ್ತಾನೆ.

"ಧರ್ಮಃ ಕ್ವಚಿತ್ ತತ್ರ ನ ಭೂತಸೌಹೃದಂ" 'ಒಬ್ಬನಲ್ಲಿ ಧರ್ಮವೇನೋ ಇದೆ. ಆದರೆ ಭೂತದಯೆ ಎಂಬ ಗುಣವೇ ಇಲ್ಲ' ಎಂಬ ಭಾಗವತದ ಮಾತಿಗೆ ವಿವರಣೆ ಇಲ್ಲಿ ಕಾಣುತ್ತದೆ. ಆದರೆ 'ಧರ್ಮರಾಜನಲ್ಲಿ ಅವನ ಆ ಹೆಸರಿಗೆ ತಕ್ಕ ಗುಣವಿಲ್ಲ' ಎಂದಾಗ ಅದಕ್ಕೆ ವಿವರಣೆಯಾಗಿ 'ಕ್ಷಮೆಯನ್ನೆ ತೋರದೆ ನರಕದಲ್ಲಿ ಜೀವಿಗಳನ್ನು ಆತ ಹಿಂಸಿಸುತ್ತಾನೆ' ಎಂದೆ ಅನ್ನಬೇಕು ಇಲ್ಲಿ ಯಮನ ಎರಡು ರೂಪಗಳ ಪ್ರಸ್ತಾಪವೇಕೆ ? ಭಾಗವತದಲ್ಲಿ ಹೇಳಿದಂತೆ ಒಬ್ಬನಲ್ಲಿಯೆ 'ಧರ್ಮವಿದೆ, ಕ್ಷಮಾಗುಣವಿಲ್ಲ' ಎನ್ನಬಹುದಿತ್ತು. 'ಒಂದು ರೂಪದಲ್ಲಿ ಧರ್ಮವಿದೆ, ತಕ್ಕ ಗುಣವಿಲ್ಲ. ಇನ್ನೊಂದು ರೂಪದಲ್ಲಿ ಕ್ಷಮೆ ಇಲ್ಲ.' ಎಂದು ಹೇಳುವುದು ಹೃದ್ಯವಾಗಿಲ್ಲ ಈ ಸಮಸ್ಯೆಗೆ ಒಂದು ಉಪಾಯ– 'ಕ್ಷಮ್ಮೆಯ ಬಿಟ್ಟೊಬ್ಬ' ಎಂಬುದನನು 'ಕ್ಷಮ್ಮೆಯ ಬಿಟ್ಟಬ್ಬ' ಎಂದು ಓದಿಕೊಳ್ಳಬಹುದು. ಕ್ಷಮೆಯನ್ನು ಬಿಟ್ಟು, ಅಬ್ಬ ! ಏನು ಕ್ರೌರ್ಯ ಏನು ನಿಷ್ಕರುಣತೆ ! ನರಕದಲ್ಲಿ ಜೀವರ ಮರ್ಮವನ್ನೇ ಮೆಟ್ಟಿ, ಪ್ರಾಣ ಹೋಗುವಂತೆ ಪೀಡಿಸುತ್ತಾನೆ ! ಎಂದರೆ 'ಧರ್ಮವಿದೆ, ತಕ್ಕ ಗುಣವಿಲ್ಲ' ಎಂಬುದರ ವಿವರಣೆ ಕೊಟ್ಟಂತಾಗುತ್ತದೆ. ಆ ನುಡಿಯ ಪೂರ್ವಾರ್ಧದಲ್ಲಿ "ಅಮ್ಮಮ್ಮ!" ಎಂದೂ ಉತ್ತರಾರ್ಧದಲ್ಲಿ. ಅಬ್ಬ ! ಎಂದೂ ಆಶ್ಚರ್ಯಸೂಚಕ ಶಬ್ದ. ಗರುಡ ಪುರಾಣದಲ್ಲಿ ವರ್ಣಿಸಿರುವ ನರಕಯಾತನೆಯನ್ನು ಕೇಳಿದರೆ ಎಂಥವರಿಗೂ ಮೈ ನಡುಕ ಉಂಟಾದೀತು ಆದ್ದರಿಂದ 'ಅಬ್ಬ !' ಎಂಬ ಶಬ್ದ ಯೋಗ್ಯ.

ಅಥವಾ ಒಬ್ಬ ಎಂಬ ಪಾಠದಲ್ಲಿಯೆ, ಯಮನ ಎರಡು ರೂಪಗಳನ್ನಿಟ್ಟು ಕೊಂಡೇ, ಹೀಗೆ ವಿವರಣೆ ನೀಡಬಹುದು– ಪಾಂಡವರಲ್ಲಿ ಧರ್ಮರಾಜನೆಂದು ಅವತರಿಸಿದ ಯಮನ ಧರ್ಮಾಚರಣೆ ಬಹು ವಿಚಿತ್ರ. ಭೂತದಯೆ, ಅಹಿಂಸೆ, ಸತ್ಯ ಮುಂತಾದ ಗುಣಗಳು ಅವನಲ್ಲಿವೆ ಎಂದು ಪ್ರಸಿದ್ಧಿ. ಅಜಾತಶತ್ರು ಎಂಬ ಬಿರುದೆ ಅವನಿಗಿದೆ. ಆದರೆ ಅವು 'ತಕ್ಕ ಗುಣ'ಗಳಾಗಿಲ್ಲ. ವನಪರ್ವದಲ್ಲಿ ಭೀಮನು ಅವನ ಕ್ಷಮೆ ಅಹಿಂಸೆ ಮುಂತಾದವು ಎಷ್ಟು ಅಯುಕ್ತವೆಂಬುದನ್ನು ಚೆನ್ನಾಗಿ ಸಮರ್ಥಿಸಿದ್ದಾನೆ. ಪಾಪಿ ಕೌರವರಲ್ಲಿ ತೋರುವ ದಯೆ, ಕ್ಷಮೆ, ಅಹಿಂಸೆ, ಸತ್ಯಗಳು ವಾಸ್ತವವಾಗಿ ಆ ಧರ್ಮಗಳಿಗೇ ಅಪಚಾರ. ಈ ಅಭಿಪ್ರಾಯದಿಂದಲೇ 'ಧರ್ಮ ಉಂಟೊಬ್ಬನಲಿ ಹೆಮ್ಮೆಯ ಹೆಸರಿಗೆ' 'ಧರ್ಮರಾಜನಲ್ಲಿ ಧರ್ಮವಿದೆಯಂತೆ, ಕೇವಲ ಹೆಮ್ಮೆಯ ಹೆಸರಿಗೆ ಮಾತ್ರ. ನಿಜವಾಗಿಯೂ ಧರ್ಮಕ್ಕೆ ತಕ್ಕ ಗುಣ ಅವನಲ್ಲಿಲ್ಲ , ಎಂದು ಲಕ್ಷ್ಮೀಶೋಭನ ಪದದಲ್ಲಿ ಹೇಳಿದೆ. ಇದರಿಂದ ಭಾಗವತದ ಮೇಲೆ ಬರಬಹುದಾಗಿದ್ದ ಒಂದು ಆಕ್ಷೇಪ ಇಲ್ಲದಂತಾಗಿದೆ. ಭಾಗವತದಲ್ಲಿ ಧರ್ಮ

ಉಂಟು, ಭೂತದಯೆ ಇಲ್ಲವೆಂದು ಹೇಳುವುದಕ್ಕೆ ಏನರ್ಥ? ದಯೆ ಇಲ್ಲದ ಧರ್ಮ ಒಂದಿದೆಯೇ?

'ಶ್ರೂಯತಾಂ ಧರ್ಮಸರ್ವಸ್ವಂ ಶ್ರುತ್ವಾ ಚೈವಾವಧಾರ್ಯತಾಂ।
ಪರೋಪಕಾರಃ ಪುಣ್ಯಾಯ ಪಾಪಾಯ ಪರಪೀಡನಂ' ॥

ಈ ಆಕ್ಷೇಪಕ್ಕೆ ಉತ್ತರವಾಗಿ ಇಲ್ಲಿ 'ಧರ್ಮ ಉಂಟೊಬ್ಬನಲಿ' ಎಂದು ಭಾಗವತದ ಮಾತನ್ನೆ ಹೇಳಿ ಹೆಮ್ಮೆಯ ಹೆಸರಿಗೆ ಎಂದೂ ಸೇರಿಸಲಾಗಿದೆ. ಹೆಸರಿಗೆ ಮಾತ್ರ, ವಾಸ್ತವವಾಗಿ ಇಲ್ಲ ಎಂದು ಭಾಗವತದ ಅಭಿಪ್ರಾಯ.

ದಯೆ, ಕ್ಷಮೆ, ಅಹಿಂಸೆ ಮುಂತಾದ ಗುಣಗಳ ಮೂರ್ತಿವೆತ್ತಂತಿರುವವನೆಂದು ಪ್ರಸಿದ್ಧನಾದ ಧರ್ಮರಾಜ ಆ ಗುಣಗಳನ್ನು ಅಪವ್ಯಯಗೊಳಿಸಿದನೆಂದು ಮಹಾಲಕ್ಷ್ಮಿಗೆ ಅತೃಪ್ತಿ. ಮಾನವನಾಗಿ ಅವತರಿಸಿದಾಗ ದೇವನೂ ಹೀಗೆ ಮಾಡುವುದು ಸಹಜವೆಂದು ಸಮಾಧಾನ ಪಟ್ಟುಕೊಂಡರೂ ಮೂಲರೂಪದಲ್ಲಿ ತಕ್ಕ ಗುಣವಿದೆಯೇ? ಇಲ್ಲ. ಕ್ಷಮೆಯನ್ನು ಬಿಟ್ಟು ಆ ಇನ್ನೊಬ್ಬ ನರಕದಲ್ಲಿ ಜೀವರನ್ನು ಪೀಡಿಸುತ್ತಾನೆ. ಯಮನಿಗೆ ಮೂಲರೂಪದಲ್ಲಿ ಎರಡು ಅಂಶಗಳಿವೆ.

'ಯಮೋ ದೇವೋ ಧರ್ಮಃ ಕಾಲ ಇತಿ ದ್ವಿಧಾ'

'ಯಮದೇವನಿಗೆ ಧರ್ಮ, ಕಾಲ ಎಂದು ಎರಡು ಅಂಶಗಳಿವೆ' ಎಂದು ವಿಷ್ಣುರಹಸ್ಯ ಹೇಳಿದೆ. ಬ್ರಹ್ಮನ ಎದೆಯಿಂದ ಬ್ರಾಹ್ಮಣ ಜಾತಿಯವನಾಗಿ ಜನಿಸಿದ ಅಂಶವೆ ಯಮಧರ್ಮ. ಈತ ಪಿತೃಲೋಕಾಧಿಪತಿ. ಸೂರ್ಯನಿಂದ ಸಂಜ್ಞಾದೇವಿಯಲ್ಲಿ ಶೂದ್ರ ಜಾತಿಯವನಾಗಿ ಹುಟ್ಟಿ ದಕ್ಷಿಣದಿಕ್ಕಿಗೂ ನರಕಲೋಕಗಳಿಗೂ ಅಧಿಪತಿಯಾಗಿರುವ ಅಂಶ ಕಾಲಯಮ ಈ ಎರಡು ಅಂಶಗಳಲ್ಲಿ ಯಮಧರ್ಮನ ಬಗ್ಗೆ ಹೆಚ್ಚು ಪ್ರಸಿದ್ಧಿ ಇಲ್ಲ. ಕಾಲಯಮನ ಬಗ್ಗೆ ಹೇಳುವುದಾದರೆ ಅವನಲ್ಲಿ 'ತಕ್ಕ ಗುಣ' ಏಕೆ, ಗುಣವೇ ಇಲ್ಲ! ಧರ್ಮರಾಜನಲ್ಲಿ ಕ್ಷಮೆ ಇತ್ತು, ಪಾಪಿ ಕೌರವರ ಬಗ್ಗೆ! ಕಾಲಯಮನಲ್ಲಿ ಕ್ಷಮೆ ಎಂಬುದೆ ಇಲ್ಲ. ಏಕೆಂದರೆ ಅವನ ಲೋಕ ನರಕ. ಪ್ರಜೆಗಳು ಪಾಪಿಗಳು, ಅವರ ವಿಷಯದಲ್ಲಿ ಕ್ಷಮೆಯ ಮಾತೇ ಇಲ್ಲ.

ವಸ್ತುತಃ ಪಾಪಿಗಳನ್ನು ದಂಡಿಸುವ ಯಮನಲ್ಲಿ ದೋಷವಿಲ್ಲ. ಅವರ ಬಗ್ಗೆ ಕ್ಷಮೆ ತೋರಿದರೇ ಕರ್ತವ್ಯಲೋಪವಾದೀತು. ಆದರೆ ಅವನಿಗೆ ಭೂತದಯೆ ಎಂಬ ಮುಖ್ಯ ಧರ್ಮವನ್ನು ಆಚರಿಸಲು ಅವಕಾಶವೇ ಇಲ್ಲ.

ಧರ್ಮ ಒಳ್ಳೆಯವನಿರಬಹುದು, ನರಕಾಧಿಪತಿಯಾದ ಕಾಲಯಮನನ್ನು ನೆನೆದರೆ ಮಾತ್ರ ಈ ಧರ್ಮನೂ ಬೇಡ ಎನ್ನಬೇಕಾಗುತ್ತದೆ, ಸ್ವಯಂವರದ ಕನ್ನೆಗೆ.

ಅಥವಾ 'ಧರ್ಮ ಉಂಟು' ತಕ್ಕ ಗುಣವಿಲ್ಲ ಎಂಬುದು ಯಮನ ಬಗ್ಗೆ. ಅವನಲ್ಲಿ ತಕ್ಕಗುಣ ಏಕೆ ಇಲ್ಲ ಎನ್ನುವುದು ಪ್ರಸಿದ್ಧ. ವಿವರಣೆ ಬೇಕಾಗಿಲ್ಲ, ಮುಂದೆ 'ಕ್ಷಮೆಯ ಬಿಟ್ಟೊಬ್ಬ ನರಕದಲ್ಲಿ ಜೀವರನ್ನು ಹಿಂಸಿಸುತ್ತಾನೆ' ಎಂಬುದು ವಾಯು ದೇವನ ಬಗ್ಗೆ. ಅವನಲ್ಲಿ ಧರ್ಮವಿದೆ ಎಂಬುದು ಪ್ರಸಿದ್ಧವೆಂದು ಅದನ್ನು ಹೇಳಿಲ್ಲ, ಪರಶುಕ್ಲತ್ರಯದಲ್ಲಿ ಸೇರಿದ್ದು,

'ತಸ್ಮಾದೇಕೋ ವಾಯುರೇವ ಧರ್ಮೋ ಭಾಗವತೇ ಸ್ಥಿತಃ'

ಎಂಬಂತೆ ಧರ್ಮಉಳ್ಳವನೆ ಆತ. ಅವನು ನಿತ್ಯನರಕದಲ್ಲಿ ಜೀವರ ಮರ್ಮವ ಮೆಟ್ಟಿ ಕೊಲಿಸುತ್ತಾನೆ. ವಾಯುಸ್ತುತಿಯಲ್ಲಿ ಇದರ ವರ್ಣನೆ ಇದೆ. ತಮೋಜೀವಿಗಳ ಬಗ್ಗೆ ವಾಯುದೇವನು ಕ್ಷಮೆಯನ್ನು ಬಿಟ್ಟವ. ಯಮನಾದರೂ ಅನಿತ್ಯನರಕದ ಪಾಪಿಗಳ ಬಗ್ಗೆ ಸ್ವಲ್ಪ ಕ್ಷಮೆ ತೋರಿ ಪಾಪಶೇಷಕ್ಕೆ ಶಿಕ್ಷೆ ನೀಡದೆ ಭೂಮಿಯಲ್ಲಿ ಹೀನಯೋನಿಯಲ್ಲಿ ಜನಿಸುವಂತೆ ನರಕದಿಂದ ಹೊರಗೆ ಅಟ್ಟುತ್ತಾನೆ. ವಾಯುದೇವನ ಅಧೀನವಿರುವ ನಿತ್ಯ ನರಕದಲ್ಲಿ ಒಮ್ಮೆ ಬಿದ್ದವರು ಹೊರಗೆ ಬರುವ ಸಂಭವವೆ ಇಲ್ಲ. ವಾಯುಸ್ತುತಿಯಲ್ಲಿ ಹೇಳಿದಂತೆ ಅವರನ್ನು ಸದಾ ಮರ್ಮವ ಮೆಟ್ಟಿ ಕೊಲಿಸುತ್ತಾನೆ, ವಾಯುದೇವ.

ಈಗ ಒಂದು ಪ್ರಶ್ನೆ, ಇದು ವಾಯುದೇವನಲ್ಲಿ ದೋಷವೆ? ಲೋಕ ರೀತಿಯಿಂದ ಹೌದೆನ್ನಬೇಕು. ಕ್ಷಮೆಯೆ ಇಲ್ಲದ ದೀರ್ಘದ್ವೇಷ ದೋಷವಲ್ಲದೆ ಮತ್ತೇನು? ಪಾಪಿಗಳಲ್ಲಿಯೂ ಅನುಕಂಪೆ ತೋರುವುದು ಸಾಧುಗಳ ಗುಣವೆಂದು ಭಾಗವತ ಹೇಳಿದೆ, ನಾರದರಿಗೆ ವಸುದೇವ ಹೇಳುತ್ತಾನೆ–

ಭೂತಾನಾಂ ದೇವಚರಿತಂ ದುಃಖಾಯ ಚ ಸುಖಾಯ ಚ ।
ಸುಖಾಯೈವ ಹಿ ಸಾಧೂನಾಂ ತ್ವಾದೃಶಾಮಚ್ಯುತಾತ್ಮನಾಂ ॥
ಭಜಂತಿ ಯೇ ಯಥಾ ದೇವಾನ್ ದೇವಾ ಅಪಿ ತಥೈವ ತಾನ್ ।
ಛಾಯೇವ ಕರ್ಮಸಚಿವಾಃ ಸಾಧವೋ ದೀನವತ್ಸಲಾಃ ॥

'ದೇವತೆಗಳು ಮಾನವರ ಕರ್ಮಗಳನ್ನು ತಿಳಿದವರು, ಅವುಗಳಿಗನುಸಾರ ಸುಖ ದುಃಖಗಳೆರಡನ್ನೂ ಕೊಡುತ್ತಾರೆ. ಸಾಧುಗಳು ಹಾಗಲ್ಲ. ಅವರು ದೀನದಲಿತರು ಯಾರೆ ಇರಲಿ, ಎಲ್ಲೆ ಇರಲಿ, ದಯೆದೋರುತ್ತಾರೆ'. ಈ ಲೌಕಿಕ ದೃಷ್ಟಿಯನ್ನನುಸರಿಸಿ ಯಮನಲ್ಲಿಯೂ ವಾಯುದೇವನಲ್ಲಿಯೂ

ಕ್ಷವಾಗುಣವಿಲ್ಲದುದು ದೋಷವೆನ್ನಲಾಗಿದೆ. ವಾಸ್ತವವಾಗಿ ಹರಿಯಾಜ್ಞೆಯಂತೆ ಅವರು ನಡೆಯುವವರು ಸ್ವತಂತ್ರರಲ್ಲವೆಂಬುದೆ ದೋಷ,

— ೨೯ —

**ಖಳನಂತೆ ಒಬ್ಬ ತನಗೆ ಸಲ್ಲದ ಭಾಗ್ಯವ**
**ಬಲ್ಲಿದಗಂಜಿ ಬರಿಗೈದ ।**
**ದುರ್ಲಭ ಮುಕ್ತಿಗೆ ದೂರವೆಂದೆನಿಸುವ ಪಾ—**
**ತಾಳ ತಳಕ್ಕೆ ಇಳಿದ ಗಡ ॥**

ಒಬ್ಬನು ದುರ್ಜನನಂತೆ ತನಗೆ ಯೋಗ್ಯವಲ್ಲದ ಭಾಗ್ಯವನ್ನು ಬಲಿಷ್ಠನಾದ ಒಬ್ಬನಿಗೆ ಅಂಜಿ ಬಿಟ್ಟುಕೊಟ್ಟ, ಮಾತ್ರವಲ್ಲ, ದುರ್ಲಭ ಮುಕ್ತಿಗೆ ಇನ್ನೂ ದೂರವೆನಿಸುವ ಪಾತಾಳ ತಳಕ್ಕೆ ಇಳಿದ, ಆಶ್ಚರ್ಯ !

ಈ ನುಡಿಯಲ್ಲಿ ಸಲ್ಲದ, ಬಲ್ಲಿದ, ದುರ್ಲಭ ಎಂಬ ಪ್ರಾಸಗಳ ಸಾಲಿನಲ್ಲಿ ಖಳನಂತೆ ಎಂಬುದು ಕಳ್ಳನಂತೆ ಎಂದಿದ್ದರೆ ಒಪ್ಪುತ್ತಿತ್ತು, ಅರ್ಥ ಸ್ವಾರಸ್ಯವೂ ಹೆಚ್ಚುತ್ತಿತ್ತು. ಕಳ್ಳನು ಪರರ ಸೊತ್ತನ್ನು ಅಪಹರಿಸಿ ಸಿಕ್ಕಿಬಿದ್ದಾಗ ಅಂಜಿ ಬಿಟ್ಟುಕೊಟ್ಟು ಸೆರೆಮನೆ ಸೇರುವಂತೆ ಬಲಿ ಚಕ್ರವರ್ತಿ ತನಗೆ ಸಲ್ಲದ ಇಂದ್ರನ ಸಿಂಹಾಸನವನ್ನು ಅಪಹರಿಸಿ ವಾಮನನಿಗೆ ಅಂಜಿ ಬಿಟ್ಟುಕೊಟ್ಟು ಪಾತಾಳವಾಸದ ಶಿಕ್ಷೆ ಅನುಭವಿಸಿದ. ಅಲ್ಲಿ ಆತನಿಗೆ ಗೃಹಬಂಧನ. ಬಾಗಿಲಲ್ಲೇ ಗದಾಪಾಣಿ ವಾಮನ ಕಾಯುತ್ತಿರುತ್ತಾನೆ ! ದಾನಶೂರನೆಂದು ಪ್ರಖ್ಯಾತನಾದ, ಮುಂದಿನ ಮನ್ವಂತರದಲ್ಲಿ ಇಂದ್ರನ ಪದವಿಯನ್ನೇರಲಿರುವ ಬಲೀಂದ್ರನು ಕಳ್ಳತನ ಮಾಡಿ ಸಿಕ್ಕಿಬಿದ್ದು ಅಪಹಾಸಕ್ಕೀಡಾದನೆಂದರೆ ಇದು ನಿಜವಾಗಿಯೂ ಆಶ್ಚರ್ಯ ಎನ್ನುತ್ತಿದ್ದಾಳೆ ಮಹಾಲಕ್ಷ್ಮಿ.

ಖಳನಂತೆ ಎಂಬ ಪ್ರಚಲಿತ ಪಾಠದಲ್ಲಿಯೂ ಬಲಿಚಕ್ರವರ್ತಿ ಸಜ್ಜನನಂತೆ ಶ್ರದ್ಧೆಯಿಂದ ದಾನ ಮಾಡಿಲ್ಲ, ದುಷ್ಟನಂತೆ ಅಂಜಿ ಬಿಟ್ಟುಕೊಟ್ಟ. ಆದ್ದರಿಂದ ಈ ದಾನ ಮೋಕ್ಷವನ್ನು ತಂದುಕೊಡಲಿಲ್ಲ. ದೂರದ ಪಾತಾಳಕ್ಕೆ ಇಳಿಸಿತು. "ತ್ಯಾಗಃ ಕ್ವಚಿತ್ತಚ್ಚ ನ ಮುಕ್ತಿ ಕಾರಣಂ" ಎಂದು ಭಾಗವತ ಹೇಳಿದುದು ಇದನ್ನೇ.

ಆದರೆ ಭಾಗವತದಲ್ಲಿ ಬರುವ ಬಲಿಚಕ್ರವರ್ತಿಯ ಕಥೆಯನ್ನು ನೋಡಿದರೆ ಆತನೊಬ್ಬ ಭಕ್ತಿಯಿಂದ ಮೂಲೋಕವನ್ನು ಶ್ರೀಹರಿಗೆ ದಾನ ಮಾಡಿದ ಮಹಾತ್ಮ. ವಾಮನನೂ ಆತನ ಮನೆ ಬಾಗಿಲು ಕಾಯುವ ಆಳು. ಇಂಥವನ ಮೇಲೆ ಕಳ್ಳತನ ಇಲ್ಲವೇ ಖಳತನದ ಆಪಾದನೆಯನ್ನು ಮಹಾಲಕ್ಷ್ಮಿ ಮಾಡುತ್ತಿದ್ದಾಳೆ ! ವಾದಿರಾಜರು ಹೀಗೇಕೆ ವರ್ಣನೆ ಮಾಡಿದರು ? ಮುಂದಿನ ಮನ್ವಂತರದಲ್ಲಿ ಇಂದ್ರ

ಪದವಿಯನ್ನಾಳುವವನಿಗೆ ಇಂದ್ರನ ಸಿಂಹಾಸನ ಸಲ್ಲದ ಭಾಗ್ಯವೆನ್ನುವುದು ಹೌದೆ ? ಅದನ್ನು ಅಂಜಿ ಬರಿಗೈದುದು ನಿಜವೇ ?

"ಛೇಲೈರುಕ್ತೋ ಮಯಾ ಧರ್ಮೋ ನಾಯಂ ತ್ಯಜತಿ ಸತ್ಯವಾಕ್ ।"

ನಾನು ತ್ರಿವಿಕ್ರಮನಾಗಿ ಬೆಳೆದು ಬ್ರಹ್ಮಾಂಡವನ್ನು ಅಳೆಯಲು ಹೊರಟಾಗ "ನಾನು ನಿನ್ನ ವಾಮನ ಮೂರ್ತಿಯ ಪುಟ್ಟ ಪಾದದಷ್ಟೇ ಭೂಮಿ ಕೊಡುವೆನೆಂದಿದ್ದೆ ಅದಕ್ಕಿಂತ ಹೆಚ್ಚು ಕೊಡಲಾರೆ" ಎಂದು ಬಲಿ ಹೇಳಬಹುದಿತ್ತು. ಹೇಳಲಿಲ್ಲ, ಇದು ಆತನ ಸತ್ಯನಿಷ್ಠೆ. ಎಂದು ವಾಮನನೇ ಬಲಿಯನ್ನು ಹೊಗಳಿದ್ದ. ಬಲಿ ಅಂಜಿದ್ದರೆ ಅದು ಸತ್ಪುರುಷನಂತೆ ತನ್ನ ವಚನ ಸುಳ್ಳಾದೀತೆಂದೇ ಹೊರತು, ಖಳನಂತೆ ಪರರಿಗೆ ಆತ ಅಂಜಲಿಲ್ಲ. 'ಬರಿಗೈದ'ನೆನ್ನುವುದೂ ಭಾಗವತಕ್ಕೆ ವಿರುದ್ಧ. ಬ್ರಹ್ಮನು ವಾಮನನಲ್ಲಿ ಕೇಳಿದ ಪ್ರಶ್ನೆ– "ಶ್ರೀಹರಿ, ನಿರ್ವಂಚನೆಯಿಂದ ನಿನ್ನ ಪಾದಕ್ಕೆ ಒಂದಿಷ್ಟು ನೀರೆರೆದು ಗರಿಕೆ ಹುಲ್ಲಿನಿಂದ ಅರ್ಚಿಸಿದರೂ ಉತ್ತಮಗತಿ ಲಭ್ಯವಿರುವಾಗ ನಿಷ್ಕಲ್ಮಷ ಹೃದಯದಿಂದ ಮೂಲೋಕವನ್ನೇ ನಿನಗೆ ಅರ್ಪಿಸಿದ ಈ ಬಲಿಯು ಏಕೆ ಅನರ್ಥಭಾಜನನಾಗಬೇಕು ?"

ದುರ್ಲಭಮುಕ್ತಿಗೆ ದೂರವೆಂದೆನಿಸುವ ಪಾತಾಳ ತಳಕ್ಕೆ ಬಲಿ ಇಳಿದನೆಂದು ಅಪಹಾಸ ಮಾಡುವುದೂ ಭಾಗವತಕ್ಕೆ ವಿರುದ್ಧ. 'ಬಲಿಮಹಾರಾಜ, ನಿನಗೆ ಒಳ್ಳೆಯದಾಗಲಿ. ದೇವತೆಗಳೂ ಬಯಸುವಂಥ ಸುತಲಲೋಕಕ್ಕೆ ಪರಿವಾರ ಸಮೇತನಾಗಿ ಹೋಗು. ಲೋಕಪಾಲಕರೂ ಅಲ್ಲಿ ನಿನ್ನನ್ನು ಆಕ್ರಮಿಸಲಾರರು. ಉಳಿದವರ ಪಾಡೇನು ? ನಿನ್ನಾಜ್ಞೆಗೆ ತಲೆ ಬಾಗದ ಅಸುರರನ್ನು ನನ್ನ ಚಕ್ರವು ಸಂಹರಿಸುತ್ತದೆ'– ಇದು ವಾಮನನು ಬಲಿಗೆ ಹೇಳಿದ ಮಾತು.

ಕರ್ಮಜ ದೇವತೆಯಾದ ಬಲಿ ಮುಕ್ತಿಗೆ ದೂರನಾಗುವುದೂ ಸುಳ್ಳು.

ವಸ್ತುತಃ ವಾಮನನೇ ಬಲಿಯನ್ನು ವಂಚಿಸಿದ್ದ, 'ಛಲೈರುಕ್ತೋ ಮಯಾ' ಎಂದು ವಾಮನನೇ ಹಾಗೆ ಹೇಳಿದ್ದಾನೆ. ತಾತ್ಪರ್ಯನಿರ್ಣಯದಲ್ಲಿ ಮಧ್ವಾಚಾರ್ಯರೂ 'ಜಹಾರ ಚಾಸ್ಮಾಚ್ಛಲತಸ್ತ್ರಿವಿಷ್ಟಪಂ' "ವಾಮನನು ಮೋಸದಿಂದ ಬಲಿಯ ಸ್ವರ್ಗ ಸಿಂಹಾಸನವನ್ನು ಅಪಹರಿಸಿದ" ಎಂದಿದ್ದಾರೆ. ದಾಸರ ಪದಗಳೆಲ್ಲ ಹೀಗೇ ಹೇಳುತ್ತಿವೆ. ಸ್ವತಃ ವಾದಿರಾಜರ ಒಂದು ಕೀರ್ತನೆಯಲ್ಲಿಯೇ ಶ್ರೀಕೃಷ್ಣ ಸತ್ಯಭಾಮೆಯರ ಪ್ರಣಯ ಕಲಹ ಹೀಗಿದೆ–

ವಾಸವನನುಜನು ವಾಮನರೂಪನು
ನಾಶರಹಿತನು ಭಾಮೆ, ಬಾಗಿಲ ತೆರೆಯೆ ।

ಕೂಸಿನ ರೂಪದಿ ಮೋಸ ಮಾಡಿದಗೆ
ದಾಸಿಯೊಬ್ಬಳು ಬೇಕೇ ರಂಗ ॥

ಇವೆಲ್ಲಕ್ಕೂ ವ್ಯತಿರಿಕ್ತವಾಗಿ ಲಕ್ಷ್ಮೀಶೋಭನ ಪದ ಹೇಳುತ್ತಿದೆ !

'ತ್ಯಾಗಃ ಕ್ವಚಿತ್ತಚ್ಚ ನ ಮುಕ್ತಿಕಾರಣಂ' ಎಂಬ ಭಾಗವತ ವಾಕ್ಯಕ್ಕೆ ಎಲ್ಲ ವ್ಯಾಖ್ಯಾನಕಾರರೂ ಕೊಡುವ ವಿವರಣೆ– 'ದೇವತೆಗಳು ಬೇಡಿದರೆ ನಮಗೇನನ್ನಾದರೂ ಕೊಡಬಲ್ಲರು, ಮೋಕ್ಷವನ್ನು ಮಾತ್ರ ಕೊಡಲಾರರು' ಇದಕ್ಕೂ ಲಕ್ಷ್ಮೀಶೋಭನ ಪದ ವ್ಯತಿರಿಕ್ತವಾಗಿದೆ

ಈ ಆಕ್ಷೇಪಕ್ಕೆ ಸಮಾಧಾನವಾಗಿ ಲಕ್ಷ್ಮೀಶೋಭನಪದಕ್ಕೆ ಹೀಗೆ ಅರ್ಥ ಹೇಳೋಣ–

ಒಮ್ಮೆ ಶ್ವೇತದ್ವೀಪದಲ್ಲಿ ವಿಷ್ಣು ಮಲಗಿ ನಿದ್ರಿಸುತ್ತಿದ್ದಂತೆ ನಟಿಸುತ್ತಿದ್ದಾಗ ಈ ಬಲಿ ಚಕ್ರವರ್ತಿ ವಿಷ್ಣುವಿನ ಕಿರೀಟವನ್ನು ಕದ್ದೊಯ್ದನಂತೆ ಗರುಡನು ಬೆನ್ನಟ್ಟಿ ಬರಲು ಅಂಜಿ ಅದನ್ನು ಅವನಿಗೆ ಕೊಟ್ಟು ಪಾತಾಳಕ್ಕೆ ಓಡಿಹೋದನಂತೆ. ಭಾಗವತದಲ್ಲಿ ಈ ಕಥೆ ಇದೆ. ಇಲ್ಲಿ 'ಬಲಿಯು ತನಗೆ ಸಲ್ಲದ ಭಾಗ್ಯವನ್ನು, ಶ್ರೀಹರಿಯ ಕಿರೀಟವನ್ನು ಬಲ್ಲಿದನಾದ ಗರುಡನಿಗೆ ಅಂಜಿ ಬರಿಗೈದ, ಖಳನಂತೆ. ಅತಿ ದೂರದಲ್ಲಿರುವ ಪಾತಾಳ ತಳಕ್ಕೆ ಓಡಿಹೋದ ಬ್ರಹ್ಮಾಂಡದಲ್ಲಿ ಅತಿ ಕೆಳಗಿನ ಲೋಕ, ಪಾತಾಳ. ಬಲಿಯೊಬ್ಬ ಸಾತ್ವಿಕನಾದ ಕರ್ಮಜದೇವತೆ. ಮುಕ್ತಿಗೆ ದೂರನಾಗಿಲ್ಲ, ಆತ. ಮುಕ್ತಿಲೋಕವಾದ ಶ್ವೇತದ್ವೀಪಕ್ಕೆ ಅತಿ ದೂರದ ಪಾತಾಳಕ್ಕೆ ಓಡಿದನಷ್ಟೆ, ಅದರೂ ಮಹಾತ್ಮ ಬಲಿಚಕ್ರವರ್ತಿ ಕಿರೀಟ ಕದ್ದು ಅಪಹಾಸಕ್ಕೀಡಾದುದು ಎಂಥ ಆಶ್ಚರ್ಯ ! ಇಂಥಹವನನ್ನು ನಾನು ವರಿಸಲಾರೆ' ಎನ್ನುತ್ತಾಳೆ ಮಹಾಲಕ್ಷ್ಮಿ.

ಹೀಗೆ ಲಕ್ಷ್ಮೀಶೋಭನ ಪದಕ್ಕೇನೋ ಬೇರೆ ಅರ್ಥ ಕಲ್ಪಿಸಬಹುದು. ಆದರೆ ವಾದಿರಾಜರೆ ಉಪನ್ಯಾಸರತ್ನಮಾಲೆಯಲ್ಲಿ ಭಾಗವತದ 'ತ್ಯಾಗಃ ಕ್ವಚಿತ್ತಚ್ಚ ನ ಮುಕ್ತಿಕಾರಣಂ' ಎಂಬ ಮಾತಿಗೆ ಬಲಿಯು ದಾನ ಮಾಡಿದರೂ ಅದು ಅವನಿಗೆ ಮೋಕ್ಷ ತಂದು ಕೊಡಲಿಲ್ಲ ಎಂದು ವಿವರಣೆ ಕೊಟ್ಟಿದ್ದಾರೆ. ಇದಕ್ಕೆ ಏನು ಗತಿ ?

ವಾದಿರಾಜರ ಅಭಿಪ್ರಾಯದಲ್ಲಿ ಬಲಿಯ ದಾನ 'ಬಲಿದಾನ' ವೆಂದು ಹೊಗಳಿಸಿಕೊಳ್ಳುವಂಥ ಉತ್ತಮ ದಾನವಾಗಿರಲಿಲ್ಲ, ಏಕೆ, ದಾನವೇ ಆಗಿರಲಿಲ್ಲ ಅದು ಮೋಕ್ಷ ಸಾಧನವಾಗುವುದು ದೂರವೇ ಉಳಿಯಿತು. ಏಕೆಂದರೆ ಅವನಿಗೆ ಮುಂದಿನ ಮನ್ವಂತರದಲ್ಲಿ ಇಂದ್ರನ ಸಿಂಹಾಸನ ನಿಶ್ಚಿತವೇ ಆಗಿದ್ದರೂ ಈ ಮನ್ವಂತರದಲ್ಲಿ ಅದು ಅವನಿಗೆ 'ಸಲ್ಲದ ಭಾಗ್ಯ'ವೇ. ಶಿವನಿಗೆ ಮುಂದಿನ ಕಲ್ಪದಲ್ಲಿ

ಶೇಷಪದವಿ ನಿಶ್ಚಿತವೆಂದಮಾತ್ರಕ್ಕೆ ಈ ಕಲ್ಪದಲ್ಲಿಯೇ ಆತ ಅದನ್ನು ಆಕ್ರಮಿಸುವನೆ ? ಶೇಷಾಂತರ್ಗತ ಸಂಕರ್ಷಣ ಮೂರ್ತಿಯನ್ನು ಈ ಕಲ್ಪವಿಡೀ ಆರಾಧಿಸುತ್ತಾನೆ. ಆದ್ದರಿಂದ ದ್ವಾದಶಸ್ತೋತ್ರದಲ್ಲಿ ನಾಗಪತಿಯು 'ಶರ್ವಾದಿವಂದ್ಯಚರಣ' ನೆನಿಸಿದ್ದಾನೆ. ಇಂದ್ರನು ವೃತ್ರ ಹತ್ಯೆಯಿಂದ ಪೀಡಿತನಾಗಿ ದೇವಮಾನದ ಸಾವಿರ ವರ್ಷಗಳ ಕಾಲ ತಲೆಮರೆಸಿಕೊಂಡಿದ್ದಾಗಲೂ ಅರಾಜಕತೆಯಿಂದ ಮೂಲೋಕವು ಕಂಗೆಟ್ಟಿದ್ದಾಗಲೂ ಇಂದ್ರನ ಸಿಂಹಾಸನವನ್ನು ಬೇರೆ ದೇವತೆಗಳಾರೂ ಏರುವ ಪ್ರಯತ್ನ ಮಾಡಲಿಲ್ಲ. ಇಂದ್ರನಿಗೆ ಶಕ್ತಿ ಸಾಮರ್ಥ್ಯಗಳಲ್ಲಿ ಸರಿದೊರೆಯಾದ ಮನ್ಮಥನೆ ಸುಮ್ಮನಿದ್ದ. ಬಲಿಯು ಮಾತ್ರ ಇಂದ್ರನು ಚೆನ್ನಾಗಿ ಸಿಂಹಾಸನವನ್ನಾಳುತ್ತಿದ್ದಾಗಲೇ ಅದನ್ನು ಅಪಹರಿಸಿದ, ಖಳನಂತೆ, ಅಥವಾ ಹಗಲುಗಳ್ಳನಂತೆ, ದರೋಡೆಕೋರನಂತೆ. ಅದನ್ನು ದಾನ ಮಾಡುವ ಅಧಿಕಾರ ಆತನಿಗುಂಟೆ ? ಅದರಲ್ಲಿಯೂ ಈ ಕಳ್ಳನನ್ನು ಶಿಕ್ಷಿಸಲೆಂದೆ ಬಂದಿದ್ದ 'ಬಲ್ಲಿದ'ನಾದ ವಾಮನ ಮೂರ್ತಿಗೆ ದಾನವೇ ? ಆದ್ದರಿಂದಲೇ ಬ್ರಹ್ಮನ ಪ್ರಶ್ನೆಗೆ ವಾಮನನ ಮೊದಲನೇ ಉತ್ತರ– 'ಯಾರಿಗೆ ಅನುಗ್ರಹ ಮಾಡಬಯಸುವೆನೋ ಅವನ ಸಂಪತ್ತನ್ನು ಅಪಹರಿಸುವೆನು' ಅನ್ಯಾಯದಿಂದ ಪಡೆದ ಸಂಪತ್ತು ಅಹಂಕಾರಕ್ಕೆ ಕಾರಣವಾಗುತ್ತದೆ. ಆದ್ದರಿಂದ ಬಲಿಯನ್ನು ಅಹಂಕಾರ ಬರದಂತೆ ಕಾಪಾಡಿ ಅನುಗ್ರಹಿಸಲೆಂದೇ ವಾಮನ ಬಂದ. ದಾನ ಬೇಡಿದ, ವಂಚನೆಗಾಗಿ ಅಲ್ಲ. ಪ್ರಹ್ಲಾದನಿಗೆ ಹಾಗೆ ಮಾತು ಕೊಟ್ಟಿದ್ದ, ಬಲಾತ್ಕಾರ ಮಾಡದೆ ಬೇಡಿಯೇ ಬಲಿಯನ್ನು ಶಿಕ್ಷಿಸುವೆನೆಂದು. ಹೀಗೆ ವಾಮನ ಬೇಡುತ್ತಲೇ ನಯವಾಗಿ 'ಬಲಿಯೇ, ಇಂದ್ರನ ಸಿಂಹಾಸನ ಬಿಟ್ಟುಕೊಡು' ಎಂದ, ಬಲಿಗೆ ಇದು ತಿಳಿದಿರಬೇಕು ಕೂರ್ಮವಾಮನ ಪುರಾಣಗಳಲ್ಲಿ ಪ್ರಹ್ಲಾದನೆ ಬಲಿಗೆ ಹೇಳಿದ್ದಾನೆ, ಶುಕ್ರಾಚಾರ್ಯರೂ ಸ್ಪಷ್ಟವಾಗಿಯೆ ಹೇಳಿದ್ದಾರೆ ಭಾಗವತದಲ್ಲಿ–

'ಮಾಯಾಮಾಣವಕೋ ಹರಿಃ ।
ತ್ರಿಭಿಃ ಕ್ರಮೈರಿಮಾನ್ ಲೋಕಾನ್ ವಿಶ್ವಕಾಯಃ ಕ್ರಮಿಷ್ಯತಿ' ॥

ಈ ಮಾಯಾವಟುರೂಪಿ ಹರಿಯು ವಿರಾಡ್ರೂಪಿಯಾಗಿ ಬೆಳೆದು ಮೂರು ಹೆಜ್ಜೆಗಳಿಂದ ಈ ಎಲ್ಲ ಲೋಕಗಳನ್ನೂ ಆಕ್ರಮಿಸುವನು'.

ಹೀಗಿದ್ದರೂ ಬಲಿಯು ದಾನಮಾಡುವ ಸಾಹಸಕ್ಕೇ ತೊಡಗಿದ. ಕದ್ದ ಒಡವೆಯೊಂದಿಗೆ ಕಳ್ಳ ಸಿಕ್ಕಿಬಿದ್ದಾಗ ಅದನ್ನು ದಾನಮಾಡುವೆನೆಂದರೆ ಏನರ್ಥ ? ಬಲಿ ತಾನು ಕದ್ದ ವಿಷ್ಣುವಿನ ಕಿರೀಟವನ್ನು ಗರುಡನಿಗೆ ದಾನ ಮಾಡಿದನೇ ? ಅಂಜಿ ಬರಿಗೈದ, ಪಾತಾಳಕ್ಕೆ ಓಡಿದ. ಲಕ್ಷ್ಮೀಶೋಭನ ಪದಕ್ಕೆ ಎರಡೂ ಅರ್ಥ ವಿವಕ್ಷಿತ. ಕಿರೀಟವನ್ನು ಗರುಡನಿಗೆ ಕೊಟ್ಟು ಓಡಿದಂತೆ, ಮೂಲೋಕವನ್ನೂ ವಾಮನನಿಗೆ

ಕೊಟ್ಟು ಪಾತಾಳಕ್ಕೆ ಇಳಿದ ಎಂದು ದೃಷ್ಟಾಂತದಿಂದ ಪ್ರಕೃತಾರ್ಥಕ್ಕೆ ಪುಷ್ಟಿಯನ್ನಿತ್ತಿದ್ದಾರೆ ವಾದಿರಾಜರು.

ಬಲಿ ವಾಮನನಿಗೆ ಇಂದ್ರನ ಸಿಂಹಾಸನವನ್ನು ಬರಿಗೈದ, ಸಜ್ಜನನಂತೆ ಅಲ್ಲ, ಖಳನಂತೆ. ವಾಮನನನ್ನು ವಂಚಿಸಲು ಯತ್ನಿಸಿದ. ಲೋಕದ ಕಣ್ಣಿಗೆ ತಾನು ನಿರಪರಾಧಿಯಾಗಬೇಕು ಮಾತ್ರವಲ್ಲ, ಸತ್ಯಸಂಧ, ದಾನಶೂರ ಎಂದೆಲ್ಲ ಲೋಕವು ಹೊಗಳಬೇಕು, ಬ್ರಹ್ಮದೇವರು ಹಾಗೇ ಹೊಗಳಿದ್ದಾರೆ. ಶ್ರೀಹರಿ ಅನ್ಯಾಯಗಾರ, ದೇವತೆಗಳ ಮೇಲಿನ ಪಕ್ಷಪಾತದಿಂದ ಬಂದವ, ಅಂಜಿ ವಟುರೂಪ ಧರಿಸಿದವ, ಮೂರಡಿ ನೆಲ ಕೇಳಿ ವಂಚಿಸಿದವ ಎಂದೆಲ್ಲ ಲೋಕ ಅಂದುಕೊಳ್ಳಬೇಕೆಂದು ಬಗೆದ. ಸಂಪತ್ತು ಕೈ ತಪ್ಪಿಹೋದರೂ ಕೀರ್ತಿ ಬರಲಿ ಎಂದುಕೊಂಡ. ಆ ದುರ್ಬುದ್ಧಿ ಕಂಡೆ ಹರಿವಂಶದಲ್ಲಿ ಪ್ರಹ್ಲಾದ ತಡೆಯುತ್ತಾನೆ. ಭಾಗವತದಲ್ಲಿ ಗುರು ಶುಕ್ರಾಚಾರ್ಯರೂ ಶಪಿಸುತ್ತಾರೆ– ಐಶ್ವರ್ಯ ಭ್ರಷ್ಟನಾಗೆಂದು. ಆದರೂ ಶಿಷ್ಯನ ಮೇಲಿನ ಪ್ರೀತಿಯಿಂದ ದಾನಜಲಪಾತ್ರೆಯಲ್ಲಿ ನೀರಿಗೆ ಅಡ್ಡವಾಗಿ ಕೀಟರೂಪದಿಂದ ನಿಂತು ತಡೆದರು. ಭಗವಂತ ಬಲಿನಿಗ್ರಹಕ್ಕೆ ಸಂಕಲ್ಪಿಸಿದ್ದರಿಂದ ಆಚಾರ್ಯರ ಕಣ್ಣನ್ನೆ ತೆಗೆದ.

ಹಿಂದೊಮ್ಮೆ ಪ್ರಹ್ಲಾದನೂ ಬಲಿಗೆ ಶಾಪವಿತ್ತಿದ್ದ–

ಯಥಾ ಮೇ ಶಿರಸಚ್ಛೇದಾದಿದಂ ಗುರುತರಂ ವಚಃ ।
ತ್ವಯೋಕ್ತಮಚ್ಯುತಾಕ್ಷೇಪಿ ರಾಜ್ಯಭ್ರಷ್ಟಸ್ತಥಾ ಪತ ॥
ದಾನಾನ್ಯವಿಧಿದತ್ತಾನಿ ಶ್ರಾದ್ಧಾನ್ಯಶ್ರೋತ್ರಿಯಾಣಿ ಚ ।
ಹುತಾನ್ಯಶ್ರದ್ಧಯಾ ಯಾನಿ ತಾನಿ ದಾಸ್ಯಂತಿ ತೇ ಫಲಂ ॥

"ಹರಿಯನ್ನು ನಿಂದಿಸಿ ಆಡುವ ನಿನ್ನ ಈ ಮಾತು ನನಗೆ ಶಿರಚ್ಛೇದಕ್ಕಿಂತ ಹೆಚ್ಚಿನ ವೇದನೆ ಉಂಟುಮಾಡುವುದರಿಂದ ನೀನು ರಾಜ್ಯಭ್ರಷ್ಟನಾಗಿ ಪತನ ಹೊಂದು, ವಿಧ್ಯುಕ್ತವಾಗಿ ನೀಡದ ದಾನ, ಶ್ರೋತ್ರಿಯನಿಲ್ಲದ ಶ್ರಾದ್ಧ, ಶ್ರದ್ಧೆಯಿಲ್ಲದ ಹೋಮ –ಇವುಗಳ ಫಲ ನಿನ್ನದಾಗಲಿ"

ಬಲಿಯು ನೀಡಿದ ದಾನವೂ ಮೇಲೆ ಹೇಳಿದಂತೆ ಕಪಟ ಮನೋಭಾವ ಯುಕ್ತವಾದ್ದರಿಂದ ವಿಧ್ಯುಕ್ತವಾಗಿ ನೀಡದ ದಾನವೇ ಆಗಿತ್ತೆಂಬುದು ಇಲ್ಲಿ ಗಮನಾರ್ಹ. ವಸ್ತುತಃ ಈ ಶಾಪವು ಬಲಿಯಲ್ಲಿ ಆವಿಷ್ಟನಾದ ಬಲಿ ಎಂಬ ಅಸುರನ ಮೇಲೆಯೇ ಎರಗಿತ್ತು. ಏಕೆಂದರೆ ಬಲಿಯಲ್ಲಿ ಆಗಾಗ ಕಂಡುಬರುತ್ತಿದ್ದ ಅಸ್ವಾಭಾವಿಕವಾದ ಆಸುರೀ ಪ್ರವೃತ್ತಿ ಈ ಅಸುರನ ಪ್ರಭಾವದಿಂದಲೇ ಬಂದುದು.

ಪ್ರಕೃತದಲ್ಲಿ ಬಲಿಯು ತನಗೆ ಹರಿಯು ವೈರಿಯಾಗಿದ್ದಾನೆ, ಅಂಜಿ ವಟುರೂಪದಿಂದ ಬಂದಿದ್ದಾನೆ ಎಂದು ಶುಕ್ರಾಚಾರ್ಯರ ಮುಂದೆ ಹೇಳುತ್ತಿದ್ದಾನೆ–

ಯದಪ್ಯಸಾವಧರ್ಮೇಣ ಮಾಂ ಬಧ್ನೀಯಾದನಾಗಸಂ ।
ತಥಾಪ್ಯೇನಂ ನ ಹಿಂಸಿಷ್ಯೇ ಭೀತಂ ಬ್ರಹ್ಮತನುಂ ರಿಪುಂ ॥

"ಹರಿಯು ನಿರಪರಾಧಿಯಾದ ನನ್ನನ್ನು ಅನ್ಯಾಯದಿಂದ ನಿಗ್ರಹಿಸಿದರೂ ಸರಿಯೆ, ನಾನು ಅವನನ್ನು ಹಿಂಸಿಸಲಾರೆ. ವೈರಿ, ಆದರೆ ಅಂಜಿ ಬ್ರಾಹ್ಮಣ ವೇಷದಿಂದ ಬಂದಿದ್ದಾನೆ"

ಮಧ್ವಾಚಾರ್ಯರು ಭಾಗವತ ತಾತ್ಪರ್ಯದಲ್ಲಿ ಬಲಿಯ ಈ ವರ್ತನೆ ಅಸುರಾವೇಶಪ್ರಯುಕ್ತ ಎಂದಿದ್ದಾರೆ. ವಾದಿರಾಜರೂ 'ಖಳನಂತೆ', ಖಳನೇ ಅಲ್ಲ ಎಂದು ಹೇಳುತ್ತ ಇದನ್ನೆ ಸೂಚಿಸಿದ್ದಾರೆ.

ವಾಮನನ ನಿಜರೂಪ ತಿಳಿಯುವುದಕ್ಕೆ ಮೊದಲೆ ಬಲಿ ವಾಗ್ದಾನ ಮಾಡಿಲ್ಲವೆ ? ಅನಂತರವೂ 'ನಾ ನಿನ್ನ ಪುಟ್ಟ ಹೆಜ್ಜೆಯಷ್ಟೇ ನೆಲ ಕೊಡುವೆನೆಂದಿದ್ದೆ ಹೆಚ್ಚು ಕೊಡಲಾರೆ' ಎನ್ನದೆ ನಿಷ್ಕಲ್ಮಷ ಹೃದಯದಿಂದ ಸರ್ವಸ್ವವನ್ನೆ ಆತ ದಾನ ಮಾಡಿಲ್ಲವೆ ? ಇಲ್ಲ. ಕೂರ್ಮವಾಮನ ಪುರಾಣಗಳ ಪ್ರಕಾರ ಇಲ್ಲ. ಅಥವಾ ಹೌದೆನ್ನೋಣ ಸ್ವಭಾವತಃ ಸಜ್ಜನನೇ ಆದ ಬಲಿ, ಯಜ್ಞದೀಕ್ಷಿತನಾದವನು ಬೇಡಿದವರಿಗೆ ಅವರ ಇಷ್ಟವನ್ನು ನೀಡಬೇಕಾಗಿರುವುದರಿಂದ, ವಾಗ್ದಾನವನ್ನೇನೋ ಮಾಡಿದ ಆದರೆ ಶುಕ್ರಾಚಾರ್ಯರಿಂದ ವಾಮನನಾರೆಂದು ತಿಳಿದ ಮೇಲೂ, ಪುಟ್ಟ ಹೆಜ್ಜೆಯಷ್ಟೇ ಕೊಟ್ಟುಬಿಡುವೆನೆಂಬ ಭಾವನೆಯಿಂದ, ಮೂರಡಿ ನೆಲ ದಾನ ಕೊಡುವೆನೆಂದು ಹಟ ತೊಡುತ್ತಾನೆ. ಇದು ನಿಷ್ಕಲ್ಮಷತೆಯಲ್ಲ. ವಚನ ಭ್ರಷ್ಟನೆನಿಸುವ ಭೀತಿಯಿಂದ ಈ ಹಟ ಎನ್ನುವುದಾದರೆ ತಾನು ಅಪಹರಿಸಿದ ತನ್ನದಲ್ಲದ ಸೊತ್ತನ್ನು ಅದರ ಒಡೆಯನಿಗೇ ದಾನ ಮಾಡಿದರೆ ವಚನ ಪೂರೈಸುವುದೆ ? ಈಗ ಬಲಿ ತಾನು ದಾನ ಮಾಡುವೆನೆಂದರೂ ವಚನಭ್ರಷ್ಟ, ದಾನ ಮಾಡಲಾರೆ ಎಂದರೂ ವಚನಭ್ರಷ್ಟ, ಇನ್ನು, ಇಷ್ಟೆ ಕೊಡುವನೆಂದಿದ್ದೆ, ಹೆಚ್ಚು ಕೊಡಲಾರೆ ಎಂದೆಲ್ಲಾ ಸಂತೆ ವ್ಯಾಪಾರದ ಚರ್ಚೆಗೆ ಎಲ್ಲಿಯ ಅವಕಾಶ ? ಬಲ್ಲಿದಗೆ ಅಂಜಿ ಬರಿಗೈಯುವುದೊಂದೆ ಬಲಿಗೆ ಉಳಿದಿರುವ ಮಾರ್ಗ, ಅಪರಾಧಿಯಾಗಿ ಜಗದೊಡೆಯನ ಮುಂದೆ ನಿಂತಿದ್ದಾನೆ ಆತ. ಯಾವ ಚರ್ಚೆಯನ್ನೂ ಮಾಡುವ ಸ್ಥಿತಿಯಲ್ಲಿರಲಿಲ್ಲ

ವಾಮನನೂ ಬಲಿಯ ಸತ್ಯನಿಷ್ಠೆಯನ್ನು ಹೊಗಳಲಿಲ್ಲ. ಅವನು ದಾನಮಾಡುವ ವೈಖರಿಯನ್ನೇ ಸೂಚ್ಯವಾಗಿ ಹೇಳಿದನಾತ–

'ಯನ್ಮದಃ ಪುರುಷಸ್ತಬ್ಧೋ ಲೋಕಂ ಮಾಂ ಚಾವಮನ್ಯತೇ'

'ಬಲಿ ಅಹಂಕಾರಿಯಾಗಿ ಲೋಕವನ್ನೂ ನನ್ನನ್ನೂ ಅವಮಾನಿಸುತ್ತಾನೆ ಇದು ದಾನವಲ್ಲ ನನಗೆ ಅವಮಾನ ಲೋಕಕ್ಕೆ ಅವಮಾನ. ಸತ್ಯನಿಷ್ಠ ತಾನೆಂದು ಪ್ರದರ್ಶನ ಮಾಡಿಕೊಳ್ಳುತ್ತಿದ್ದಾನೆ!'

ಕ್ಷೀಣರಿಕ್ಥಶ್ಚ್ಯುತಃ ಸ್ಥಾನಾತ್ ಕ್ಷಿಪ್ತೋ ಬದ್ಧಶ್ಚ ಶತ್ರುಭಿಃ!
ಜ್ಞಾತಿಭಿಶ್ಚ ಪರಿತ್ಯಕ್ತೋ ಯಾತನಾಮನುಯಾಪಿತಃ ।
ಗುರುಣಾ ಭರ್ತ್ಸಿತಃ ಶಪ್ತಃ . . . ॥

ಬಲಿಯ ಐಶ್ವರ್ಯ ಬತ್ತಿತು, ಸ್ಥಾನ ತಪ್ಪಿತು, ಶತ್ರುವೆಂದು ಆತ ತಿಳಿದಿರುವ ನನ್ನಿಂದಾಗಿ ವರುಣಪಾಶಕ್ಕೆ ಸಿಕ್ಕಿದ್ದಾನೆ ಈಗ ಪ್ರಹ್ಲಾದನಂಥ ಬಂಧುಗಳು ಅವನ ದುರ್ಬುದ್ಧಿ ಕಂಡು ಅವನ ಪಾಡಿಗೆ ಅವನನ್ನು ಬಿಟ್ಟಿದ್ದಾರೆ ನನ್ನಲ್ಲಿ ಅಪರಾಧ ಮಾಡಿ ಅವನು ದುಃಖಕ್ಕೊಳಗಾಗಿದ್ದಾನೆ ಗುರು ಶುಕ್ರಾಚಾರ್ಯರಿಂದಲೂ ಬೈಸಿಕೊಂಡು ಶಾಪ ಪಡೆದಿದ್ದಾನೆ, ಏಕೆ? 'ಜಹೌ ಸತ್ಯಂ ನ ಸುವ್ರತಃ' ಸುವ್ರತನಂತೆ ಸತ್ಯನಿಷ್ಠೆ ತೋರಿಸಿಕೊಂಡಿದ್ದಾನೆ 'ಛಲೈರುಕ್ತೋ ಮಯಾ' ಛಲದ ಮಾತನ್ನಾಡುತ್ತಿರುವೆ ಎಂದು ಅವನನ್ನು ನಾನು ಆಕ್ಷೇಪಿಸಿದೆ. ಆದರೂ ಸತ್ಯನಿಷ್ಠೆಯ ಪ್ರದರ್ಶನ! 'ಧರ್ಮಃ ಪ್ರೋಜ್ಝಿತ ಕೈತವಃ' ಧರ್ಮ ಕಪಟರಹಿತವಾಗಬೇಕು

ಭಾಗವತ ಶ್ಲೋಕಗಳಿಗೆ ಅನ್ಯಾರ್ಥ ಮಾಡುವುದೇಕೆ? ಎನ್ನಬಹುದು. ಆದರೆ ವಾದಿರಾಜರು ಮಹಾಭಾರತ ತಾತ್ಪರ್ಯ ನಿರ್ಣಯ ಟೀಕೆಯಲ್ಲಿ 'ಜಹಾರ ಚಾಸ್ಮಾಚ್ಛಲತಸ್ತ್ರಿವಿಷ್ಟಪಂ' ಎಂಬ ನಿರ್ಣಯ ವಾಕ್ಯಕ್ಕೆ ಹೀಗೆ ಅರ್ಥ ಬರೆದಿದ್ದಾರೆ– 'ವಾಮನನು' 'ಪುಟ್ಟ ಹೆಜ್ಜೆಯಲ್ಲಿ' ಮೂರಡಿ ನೆಲ ಕೊಡು ಎನ್ನಲಿಲ್ಲ, ಮೂರಡಿ ನೆಲ ಕೊಡೆಂದು ಮಾತ್ರ ಹೇಳಿದ್ದ. ಬಲಿಯು ಪುಟ್ಟ ಹೆಜ್ಜೆಯಲ್ಲಿ ಮೂರಡಿ ಕೊಡುವೆನೆಂಬ ಅರ್ಥ ಗ್ರಹಿಸಿ ಮೂರಡಿ ಕೊಡುವೆನೆಂದು ದ್ವಂದ್ವಾರ್ಥದ ಮಾತನ್ನಾಡಿದುದರಿಂದ 'ನೀನು ಛಲದ ಮಾತನ್ನಾಡುತ್ತಿರುವೆ' ಎಂದು ವಾಮನನು ಅವನನ್ನು ಆಕ್ಷೇಪಿಸಿ ನಿಗ್ರಹಿಸಿದ'.

ಹೀಗೆ ಬಲಿ ತನ್ನ ಛಲದ ಮಾತಿನಲ್ಲಿ ತಾನೇ ಸಿಕ್ಕಿಬಿದ್ದು ಸೋತ, ವಾಮನ ಗೆದ್ದ ಪ್ರಹ್ಲಾದ ಆನಂದಬಾಷ್ಪ ಸುರಿಸಿದ ಜಾಂಬವಂತನು ಆನಂದದಿಂದ ಕುಣಿದಾಡಿ ಓಡೋಡಿ ಮೂಲೋಕಕ್ಕೆ ಈ ವಿಜಯವನ್ನು ಸಾರಿದನಂತೆ. ವಾಮನನು ಬಲಿಯನ್ನು ವಂಚಿಸಿದನೆಂದು ದಾಸರ ಪದಗಳು ಹೇಳಿದರೆ ಅವೆಲ್ಲ ನಿಂದಾಸ್ತುತಿ–

'ತೊಳಸದಕ್ಕಿಯ ತಿಂಬ ಕಿಲುಬು ತಳಿಗೆಯೊಳುಂಬ . . .'

ಎಂದು ಮುಂತಾದುವುಗಳಂತೆ.

ಬಲಿಯಲ್ಲಿ ಆವಿಷ್ಟನಾದ ಬಲಿಯೆಂಬ ಅಸುರನನ್ನು ದುರ್ಲಭ ಮುಕ್ತಿಗೆ ದೂರ ಅಟ್ಟಿದರೂ, ಸ್ವಭಾವದಿಂದ ಭಕ್ತನೇ ಆದ ಬಲಿಯನ್ನು ಮಾತ್ರ ಇನ್ನು ಇಂಥ ಅಪರಾಧ ಮಾಡಬೇಡವೆನ್ನುತ್ತ ದೂರದ ಸುತಳವೆಂಬ ಪಾತಾಳ ಲೋಕಕ್ಕೆ ಕಳುಹಿಸಿ ತಾನೂ ಅವನ ಮನೆಯಲ್ಲಿ ವಾಸಮಾಡತೊಡಗಿದ, ಕರುಣಾಳು ವಾಮನ. ಗದಾಪಾಣಿಯಾಗಿ ನಿಂತು ನಿತ್ಯ ತನ್ನ ದರ್ಶನವಿತ್ತು ಬಲಿಗೆ ಅಸುರಾವೇಶ ಬರದಂತೆ ನೋಡಿಕೊಂಡ. ಬಲಿಗೆ ಏನು ನಷ್ಟವಿಲ್ಲ. ಮೂಲೋಕದೊಡೆತನ ಹೋದರೇನಾಯಿತು ? ಮೂಲೋಕದೊಡೆಯ ತನ್ನ ಮನೆ ಬಾಗಿಲು ಕಾಯುತ್ತಾನೆ ! ಈ ಭಾಗ್ಯಕ್ಕೆ ಪ್ರಹ್ಲಾದನೂ ಭಾಗಿಯೇ. ಅವನಿಗಾಗಿಯೂ ತಾನು ಬಲಿಯ ಮನೆಯಲ್ಲಿ ನಿಲ್ಲುತ್ತೇನೆ ಎಂದಿದ್ದ ವಾಮನ

ಅಂತೂ 'ತ್ಯಾಗಃ ಕ್ವಚಿತ್ತಚ್ಚ ನ ಮುಕ್ತಿಕಾರಣಂ' ಎಂಬ ಭಾಗವತ ವಾಕ್ಯಕ್ಕೆ ವಾದಿರಾಜರ ವ್ಯಾಖ್ಯಾನ ಹೊಸದು. ಬೇರೆಯವರ ವ್ಯಾಖ್ಯಾನವೂ ಸರಿಯೇ. ಅದರಂತೆ ಲಕ್ಷ್ಮೀಶೋಭನ ಪದದಲ್ಲಿಯೆ ಮುಂದೆ 'ಸರ್ಬರಿಗಾವ ಅಮೃತವನುಣಿಸುವ' ಎನ್ನುತ್ತಾರೆ- 'ದೇವತೆಗಳೇನು ಕೊಟ್ಟರೂ ಮೋಕ್ಷ ಒಂದನ್ನು ಕೊಡಲಾರರು ಹರಿಯೇ ಎಲ್ಲರಿಗೂ ಮೋಕ್ಷ ಕೊಡಬಲ್ಲವನು'.

ವಾದಿರಾಜರ ವ್ಯಾಖ್ಯಾನವನ್ನಿಟ್ಟುಕೊಂಡಾಗ ಒಂದು ಅನುಪಪತ್ತಿ ತೋರಬಹುದು. ಭಾಗವತ ದ್ವಿತೀಯಸ್ಕಂಧದಲ್ಲಿ ಈ ಮಾತು ಬರುತ್ತದೆ—

ನಾರ್ಥೋ ಬಲೇರಯಮುರುಕ್ರಮಪಾದಶೌಚಂ
ಅಂಭಃ ಶಿವಂ ಧೃತವತೋ ವಿಬುಧಾಧಿಪತ್ಯಂ ।

'ಬಲಿಯು ತ್ರೈಲೋಕ್ಯವನ್ನೇ ದಾನಮಾಡಿದ್ದರಿಂದ ಮುಂದಿನ ಮನ್ವಂತರದಲ್ಲಿ ಇಂದ್ರಪದವಿ ಅವನಿಗೆ ಲಭ್ಯವಾಗಿದ್ದರೂ ಅದು ನಿಜವಾಗಿ ಫಲವಲ್ಲ. ಬೇಸಾಯಮಾಡಿದರೆ ಧಾನ್ಯದ ಜೊತೆಗೆ ಹುಲ್ಲು ಸಿಗುವಂತೆ ಇದೂ ಒಂದು ಮುಖ್ಯಫಲ, ಮೋಕ್ಷದಲ್ಲಿ ಆನಂದಾತಿಶಯ'. ಇದರಿಂದ ಬಲಿಯ ದಾನ ಮಹಾ ಸಾತ್ವಿಕ ಎಂದಂತಾಯಿತು. "ತ್ಯಾಗಃ ಕ್ವಚಿತ್ ತಚ್ಚ ನ ಮುಕ್ತಿಕಾರಣಂ" ಎಂಬ ಅಷ್ಟಮಸ್ಕಂಧದ ವಾಕ್ಯಕ್ಕೆ ವಾದಿರಾಜರು ಹೇಳುವ ಪ್ರಕಾರ ಬಲಿಯ ದಾನ ಸಾತ್ವಿಕವಲ್ಲ ಎನ್ನುವುದು ಅಭಿಪ್ರಾಯ. ವಿರೋಧ ಸ್ಪಷ್ಟ.

ಆದರೆ ಬಲಿನಿಗ್ರಹವಾದಮೇಲೆ ಬಲಿಯ ಯಜ್ಞವನ್ನು ಅಚ್ಛಿದ್ರಗೊಳಿಸಲು, ಅಂದರೆ ಅದರ ಲೋಪದೋಷಗಳನ್ನು ಸರಿಪಡಿಸಲು ಶ್ರೀಹರಿ ಶುಕ್ರಾಚಾರ್ಯರಿಗೆ ಆಜ್ಞೆಮಾಡುತ್ತಾನೆ. ಆಗ ಶುಕ್ರಾಚಾರ್ಯರು, "ಶ್ರೀಹರಿ, ನಿನ್ನನ್ನು ಸರ್ವಾತ್ಮನಾ ಪೂಜಿಸಿದ್ದಾನೆ, ಬಲಿ. ಅಲ್ಲದೆ ನಿನ್ನ ನಾಮ ಸಂಕೀರ್ತನೆ ಮಾಡಿದರೆ "ಕರ್ಮದ

ಲೋಪದೋಷಗಳೆಲ್ಲ ಸರಿಹೊಂದುತ್ತವೆ. ಆದರೂ ನಿನ್ನಾಜ್ಞೆಯಂತೆ ಪ್ರಾಯಶ್ಚಿತ್ತ ಮಾಡುತ್ತೇನೆ'' ಎಂದರಂತೆ. ಇದರಿಂದ ಒಂದು ಅಂಶವನ್ನು ನಾವು ಊಹಿಸಬಹುದು. ಬ್ರಹ್ಮದೇವರು ''ಶ್ರೀಹರಿಯ ಭಕ್ತನಾದ ಬಲಿಯನ್ನೇಕೆ ನಿಗ್ರಹಿಸಿದಿ ?'' ಎಂದಾಗ 'ಅವನ ದಾನ ಸಾತ್ವಿಕವಾಗಿರಲ್ಲಿಲ್ಲ' ಎನ್ನುವ ಅಭಿಪ್ರಾಯ ಬರುವಂತೆ ಮಾತನಾಡಿದ್ದಾನೆ, ವಾಮನ ಆ ಕಾಲದಲ್ಲಿ ವಾಮನನಾಡಿದ,

'ಕ್ಷೀಣರಿಕ್ಥಶ್ಚ್ಯುತಃ ಸ್ಥಾನಾತ್ ಕ್ಷಿಪ್ತೋ ಬದ್ಧಶ್ಚ ಶತ್ರುಭಿಃ'

ಎಂದು ಮುಂತಾದ ಬಿರುನುಡಿ ಕೇಳಿದಾಗ, ಮೊದಲೇ ತ್ರಿವಿಕ್ರಮನ ಪರಾಕ್ರಮಕ್ಕೆ ಸೋತಿದ್ದ ಬಲಿ ಈಗ ಪೂರ್ತಿ ಇಳಿದುಹೋಗಿ, ಅಸುರಾವೇಶ ಕಳೆದುಕೊಂಡು ಮನಸ್ಸಿನಲ್ಲಿಯೇ ಶ್ರೀಹರಿಯನ್ನು ಸರ್ವಾತ್ಮನಾ ಪೂಜಿಸಿ ನಾಮತ್ರಯ ಜಪಿಸಿರಬೇಕು. ಇಲ್ಲದಿದ್ದರೆ ಶುಕ್ರಾಚಾರ್ಯರು ಅದನ್ನು ಪ್ರಸ್ತಾಪಿಸುತ್ತಿರಲ್ಲಿಲ್ಲ. ನಾಮತ್ರಯಜಪದಿಂದ ಸರ್ವಲೋಪದೋಷಪ್ರಾಯಶ್ಚಿತ್ತ ಸಹಜ. ಹೀಗಾಗಿ ಬಲಿಯು ಕೊಟ್ಟ ದಾನವು ಸರ್ವಲೋಪದೋಷಗಳಿಂದ ಕೂಡಿದ್ದು ಅಸಾತ್ವಿಕವಾಗಿದ್ದರೂ ಶ್ರೀಹರಿ ಅದನ್ನು ಮಹಾಸಾತ್ವಿಕ ಹಾಗೂ ಅನಂತಫಲವನ್ನಾಗಿ ಮಾಡಿದ್ದಾನೆ. ಅಂದು ಶಿವನು ನಾಮತ್ರಯ ಜಪಿಸುತ್ತ ಹಾಲಾಹಲವನ್ನು ಕುಡಿದಾಗ ಶ್ರೀಹರಿಯು ಅದನ್ನು ಅಮೃತವನ್ನಾಗಿಸಲಿಲ್ಲವೇ ? ಹಾಗೆ. ಆದ್ದರಿಂದ 'ಕ್ಷೀಣರಿಕ್ಥಶ್ಚ್ಯುತಃ ಸ್ಥಾನಾತ್' ಎಂದು ಮುಂತಾಗಿ ಹೇಳುತ್ತಿದ್ದ ವಾಮನನು ಒಡನೆ 'ಏಷ ಮೇ ಪ್ರಾಪಿತಃ ಸ್ಥಾನಂ' ಎಂದು ಮುಂದಿನ ಸಾವರ್ಣಿ ಮನ್ವಂತರದಲ್ಲಿ ಇಂದ್ರ ಪದವಿ ಬಲಿಗೆ ಸಿಗುವಂತೆ ವರನೀಡಿದ್ದಾನೆ. ವಸ್ತುತಃ ಇದು ಮುಖ್ಯ ಫಲವಲ್ಲ ಬಲಿಯು ಕರ್ಮಜ ದೇವತೆಯಾಗಿದ್ದು ಅಪರೋಕ್ಷಿಯಾಗಿದ್ದುದರಿಂದ ಅವನ ಈ ಜ್ಞಾನೋತ್ತರ ಕರ್ಮಕ್ಕೆ ಮೋಕ್ಷದಲ್ಲಿ ಆನಂದವೃದ್ಧಿಯನ್ನೇ ಶ್ರೀಹರಿ ಅನುಗ್ರಹಿಸಿದ್ದಾನೆ.

ಈಗ ಅಷ್ಟಮ ದ್ವಿತೀಯ ಸ್ಕಂಧಗಳಿಗೆ ಪರಸ್ಪರ ವಿರೋಧವಿಲ್ಲ. ಅಷ್ಟಮದಲ್ಲಿ ಮಹಾಲಕ್ಷ್ಮಿ ಹೇಳುತ್ತಿರುವುದು–ಸಾತ್ವಿಕನಾದ, ದಾನಶೂರನೆಂದು ಪ್ರಖ್ಯಾತನಾದ ಬಲಿ ಎಷ್ಟು ದೊಡ್ಡ ದಾನ ಕೊಟ್ಟಿದ್ದರೂ ಆದು ಅಷ್ಟೇ ತಾಮಸವಾಗಿತ್ತು, ಮೋಕ್ಷಕ್ಕೆ ಅನುಪಯುಕ್ತವಾಗಿತ್ತು ಎಂದು. ದ್ವಿತೀಯದಲ್ಲಿ ವರ್ಣಿಸಿರುವುದು– ಬಲಿಯ ತಾಮಸದಾನವನ್ನು ಶ್ರೀಹರಿ ಮಹಾಸಾತ್ವಿಕವನ್ನಾಗಿ ಪರಿವರ್ತಿಸಿ ಅನುಗ್ರಹಿಸಿದನೆಂದು. ಬಲಿಯ ದಾನ ಮೊದಲಿಗೆ ಮುಕ್ತಿಸಾಧನವಾಗಿಲ್ಲದಿದ್ದುದೂ ಸರಿಯೆ, ಬಳಿಕ ಮೋಕ್ಷಾನಂದದ ವೃದ್ಧಿಗೆ ಕಾರಣವೆನಿಸಿದುದೂ ಸರಿಯೆ, ವಿರೋಧವಿಲ್ಲ 'ಬಲಿದಾನ' ಎಂಬ ಶಬ್ದದ ಹಿನ್ನೆಲೆಯಲ್ಲಿ ದಾನದ ಮಹತ್ವ ದ್ರವ್ಯದ ಮೊತ್ತದಲ್ಲಿಲ್ಲ ಮನಸ್ಸಿನ ಭಾವದಲ್ಲಿದೆ ಎಂಬ ತತ್ವವಿದೆ.

**ಎಲ್ಲರಾಯುಷ್ಯವ ಶಿಂಶುಮಾರದೇವ**
**ಸಲ್ಲೀಲೆಯಿಂದ ತೊಲಗಿಸುವ ।**
**ಒಲ್ಲೆ ನಾನಿವರ ನಿತ್ಯಮುತ್ತೈದೆಯೆಂದು**
**ಬಲ್ಲವರೆನ್ನ ಭಜಿಸುವರು ॥**

ಈ ಎಲ್ಲ ದೇವತೆಗಳ ಆಯುಷ್ಯವನ್ನು ಶಿಂಶುಮಾರದೇವನು ಲೀಲಾಮಾತ್ರದಿಂದ ಕಳೆಯುತ್ತಾನೆ. ನಾನು ಇವರನ್ನು ಒಲ್ಲೆ. ಏಕೆಂದರೆ ಬಲ್ಲವರು ನನ್ನನ್ನು ನಿತ್ಯ ಮುತ್ತೈದೆ ಎಂದು ಭಜಿಸುತ್ತಾರೆ.

ಭಾಗವತದಲ್ಲಿ ರುಕ್ಮಿಣೀಕೃಷ್ಣರ ಪ್ರಣಯಕಲಹ ಪ್ರಸಂಗದಲ್ಲಿ ಕೃಷ್ಣನು,

ವೈಧರ್ಭ್ಯೇತದವಿಜ್ಞಾಯ ತ್ವಯಾಧೀರ್ಘಸಮೀಕ್ಷಯಾ ।
ವೃತಾ ವಯಂ ... .......... ॥

'ರುಕ್ಮಿಣಿ, ಅದೀರ್ಘಸಮಿಕ್ಷೆ ಅಂದರೆ ದೂರಾಲೋಚನೆ ಇಲ್ಲದುದರಿಂದ ನೀನು ನನ್ನನ್ನು ಮದುವೆಯಾದೆ', ಎನ್ನುತ್ತಾನೆ. ವಾದಿರಾಜರು ಇಲ್ಲಿ ಒಂದು ಅಪೂರ್ವ ವ್ಯಾಖ್ಯಾನ ನೀಡಿ ರುಕ್ಮಿಣೀದೇವಿಯು ಕೃಷ್ಣನ ಮಾತನ್ನು ಹೇಗೆ ಯಥಾರ್ಥವೆನ್ನಿಸಿದಳೆಂಬುದನ್ನು ಸರಸಭಾರತಿಯಲ್ಲಿ ತೋರಿಸಿದ್ದಾರೆ, ಅದೀರ್ಘ ಸಮೀಕ್ಷೆ ಎಂದರೆ 'ದೀರ್ಘವಾದ ಸಮೀಕ್ಷೆ ಇಲ್ಲದವಳು' ದೂರಾಲೋಚನೆ ಇಲ್ಲವದಳು ಎಂದರ್ಥವಲ್ಲ. ಬ್ರಹ್ಮಾದಿದೇವತೆಗಳ ಆಯುಷ್ಯ ಅದೀರ್ಘವೆಂದು ಸಮೀಕ್ಷೆ ಉಳ್ಳವಳು, ಅವರು ನಿತ್ಯರಲ್ಲವೆಂದು ತಿಳಿದವಳು ಎಂದರ್ಥ. ಇಂಥ ದೇವತೆಗಳನ್ನು ಮದುವೆಯಾದರೆ ತನ್ನ ಮಾಂಗಲ್ಯ ನಿತ್ಯವಾಗಿರಲಾರದು ಎಂದು ಬಗೆದೇ ನಿತ್ಯನಾದ ಶ್ರೀಕೃಷ್ಣನನ್ನು ರುಕ್ಮಿಣಿ ವರಿಸಿದ್ದಳು. ಈ ಅಭಿಪ್ರಾಯದಲ್ಲಿ ಕೃಷ್ಣನು ಹೇಳಿದ ಮಾತು ನಿಜವೆ.

ಈ ಅರ್ಥ ಕಾಲ್ಪನಿಕವೇನಲ್ಲ. ಕೃಷ್ಣನ ಆಕ್ಷೇಪಗಳಿಗೆ ಉತ್ತರಕೊಡುವ ಕಾಲದಲ್ಲಿ ರುಕ್ಮಿಣಿ ಸ್ಪಷ್ಟವಾಗಿ ಹೀಗೆ ಹೇಳಿದ್ದಾಳೆ–

ತ್ವಂ ನ್ಯಸ್ತದಂಡಮುನಿಭಿರ್ಗದಿತಾನುಭಾವ
ಆತ್ಮಾತ್ಮದಶ್ಚ ಜಗತಾಮಿತಿ ಮೇ ವೃತೋಽಸಿ ।
ಹಿತ್ವಾ ಭವದ್ಭ್ರುವದುದೀರಿತ ಕಾಲಗಂಧ
ಧ್ವಸ್ತಾಶಿಷೋಽಬ್ಜಭವನಾಕಪತೀನ್ ಕುತೋಽನ್ಯಾನ್ ॥

'ನಿನ್ನ ನಿಯಂತ್ರಣದಲ್ಲಿಯೇ ಇರುವ ಕಾಲದ ಒಂದು ಲೇಶಮಾತ್ರದಿಂದ ಈ ಎಲ್ಲ ದೇವತೆಗಳ ಅಧಿಕಾರ, ಸಂಪತ್ತು ಮುಂತಾದುವು ಅವರ ಜೊತೆಗೇ ಇಲ್ಲವಾಗುವುದರಿಂದ ಅವರನ್ನು ಬಿಟ್ಟು ನಿನ್ನನ್ನೇ ನಾನು ವರಿಸಿದ್ದೇನೆ'.

ಇದನ್ನೇ ಸರಸಭಾರತಿಯಲ್ಲಿ ಹೀಗೆ ಹೇಳಿದೆ–

"ಯತಶ್ಚ ಬ್ರಹ್ಮರುದ್ರಾದ್ಯಾಃ ಕಲ್ಪಾಂತಪರಮಾಯುಷಃ ।
ತತಃ ಸೌಮಂಗಲ್ಯಭಂಗಭೀತ್ಯಾ ತ್ಯಕ್ತಾ ಇಮೇ ಮಯಾ ॥"

'ಬ್ರಹ್ಮ ರುದ್ರಾದಿಗಳ ಆಯುಷ್ಯ ಹೆಚ್ಚೆಂದರೆ ಒಂದು ಕಲ್ಪದ ಕೊನೆಯವರೆಗೆ ಇದ್ದೀತು. ಮುಂದೆ ಅವರಿಗೆ ಮರಣ ನಿಶ್ಚಿತ. ನಾನು ಅವರನ್ನು ವರಿಸಿದೆನಾದರೆ ನನ್ನ ಮಾಂಗಲ್ಯ ಹಾಳಾದೀತೆಂದು ಭಯದಿಂದ ಅವರನ್ನು ನಾನು ಬಿಡಬೇಕಾಯಿತು' ಲಕ್ಷ್ಮೀಶೋಭನ ಪದವೂ ಇದನ್ನೇ ಹೇಳಿದೆ.

ಭಾಗವತದಲ್ಲಿ ಮಹಾಲಕ್ಷ್ಮಿಯೂ 'ವೀರ್ಯಂ ನ ಪುಂಸೋಽಸ್ತ್ಯಜವೇಗ ನಿಷ್ಕೃತಂ' ಎಂಬ ಮಾತಿನಲ್ಲಿ ಇದನ್ನೇ ಹೇಳುತ್ತಾಳೆ ಎಂಬುದು ವಾದಿರಾಜರ ಅಭಿಪ್ರಾಯ, ಯಾವ ಪುರುಷರಿಗೂ ಕಾಲದ ವೇಗವನ್ನು ತಡೆದುಕೊಳ್ಳುವ ಸಾಮರ್ಥ್ಯವಿರಲಾರದು, ಅಂದರೆ ಎಲ್ಲರ ಆಯುಷ್ಯವೂ ಪರಿಮಿತವೇ ಎಂದು ಉಪನ್ಯಾಸರತ್ನಮಾಲೆಯಲ್ಲಿ ರಾಜರು ವ್ಯಾಖ್ಯಾನ ಮಾಡಿದ್ದಾರೆ. ಪ್ರಾಚೀನ ವ್ಯಾಖ್ಯಾನಕಾರರು ಮಾತ್ರ ಕ್ಷತ್ರಿಯ ವೀರಪುರಷರ ಪರಾಕ್ರಮವು ಕಾಲದ ವೇಗವನ್ನು ತಡೆದುಕೊಳ್ಳುವಂಥಹುದಲ್ಲ ಎಂದೇ ಅರ್ಥಮಾಡಿದ್ದಾರೆ. ಅವರ ಆಯುಷ್ಯ ಅಲ್ಪವೆನ್ನುವ ವಿಷಯವನ್ನು ಹೇಳಲು 'ಕ್ವಚಿತ್ತದಪ್ಯಸ್ತಿ ನ ವೇದ್ಯಮಾಯುಷಃ' ಎಂದು ಬೇರೆಯೇ ವಾಕ್ಯವಿದೆ ಎಂಬ ಅಭಿಪ್ರಾಯವಿರಬಹುದು, ಆದರೆ ಇಲ್ಲಿ 'ಕ್ವಚಿತ್' ಯಾರೋ ಒಬ್ಬನಲ್ಲಿ ಎಂಬ ಶಬ್ದದಿಂದ ಮನ್ಮಥನೊಬ್ಬನ ಬಗ್ಗೆ ಹೇಳಲಾಗಿದೆ ಎಲ್ಲ ದೇವತೆಗಳ ಬಗ್ಗೆ ಅಲ್ಲ ಎಂಬುದನ್ನು ನಾವು ಹಿಂದೆಯೇ ನೋಡಿದ್ದೇವೆ. ಎಲ್ಲ ದೇವತೆಗಳಿಗೂ ಅನ್ವಯಿಸುವಂತೆ ಅಲ್ಪಾಯುಷ್ಯವೆಂಬ ದೋಷವನ್ನು ಹೇಳಲು 'ವೀರ್ಯಂ ನ ಪುಂಸೋ' ಎಂಬ ಮಾತನ್ನೇ ರಾಜರು ಬಳಸಿಕೊಂಡಿದ್ದಾರೆ. ಇದು ಅಪೂರ್ವ ವ್ಯಾಖ್ಯಾನ

ಶಿಂಶುಮಾರದೇವನು ಎಲ್ಲರ ಆಯುಷ್ಯವನ್ನು ಲೀಲೆಯಿಂದಲೆ ತೊಲಗಿಸುತ್ತಾನೆ. ಏಕೆಂದರೆ ಅವನು ಕಾಲನಿಯಾಮಕನಾಗಿರುವುದರಿಂದ ಎನ್ನಬೇಕು. ಅವನು ಹೇಗೆ ಕಾಲನಿಯಾಮಕನೆನ್ನುವುದು ಭಾಗವತ ಪಂಚಮ ಸ್ಕಂಧದಲ್ಲಿ ಸ್ಪಷ್ಟವಿದೆ. ಶಿಂಶುಮಾರ ಅಂದರೆ ಚೇಳು. ಮೈಯನ್ನು ಸುರುಳಿಯಾಗಿ

ಸುತ್ತಿಕೊಂಡು ತಲೆಕೆಳಗಾಗಿ ನಿಂತ ಚೇಳಿನ ಆಕಾರದಲ್ಲಿ ಆಕಾಶದಲ್ಲಿ ಕಾಣುವ ಮಹಾ ಜ್ಯೋತಿರ್ಮಂಡಲವೇ ಶಿಂಶುಮಾರ ಚಕ್ರ. ಎಲ್ಲ ಗ್ರಹನಕ್ಷತ್ರಗಳ ಪರಿಭ್ರಮಣಕ್ಕೆ ಕೇಂದ್ರಬಿಂದುವಾಗಿರುವ ಧ್ರುವಮಂಡಲವಿರುವುದು, ಈ ಶಿಂಶುಮಾರ ಚಕ್ರದ ಬಾಲದ ತುದಿಯಲ್ಲಿ. ಉಳಿದ ಅಂಗಗಳಲ್ಲಿ ಒಂಬತ್ತು ಗ್ರಹಗಳೂ, ಇಪ್ಪತ್ತೆಂಟು ದೊಡ್ಡ ನಕ್ಷತ್ರಗಳೂ ಆಶ್ರಯಿಸಿವೆ. ಉಳಿದ ನಕ್ಷತ್ರಗಳೆಲ್ಲ ರೋಮಗಳಲ್ಲಿ ಆಶ್ರಯ ಪಡೆದಿವೆ. ಈ ಶಿಂಶುಮಾರ ಚಕ್ರವು ಶಿಂಶುಮಾರರೂಪಿ ಶ್ರೀಹರಿಯಿಂದ ಅಧಿಷ್ಠಿತವಾಗಿದ್ದು ಎಲ್ಲ ಗ್ರಹನಕ್ಷತ್ರಗಳ ಗತಿಯನ್ನು ನಿಯಂತ್ರಿಸುವಂಥಹುದು.

ರುಕ್ಮಿಣೀಶವಿಜಯವು ಹೇಳುವಂತೆ ಈ ಶಿಂಶುಮಾರಮೂರ್ತಿಯು ದೋಷಾ ಮತ್ತು ಶರ್ವರೀ ಎಂಬ ದಂಪತಿಗಳಲ್ಲಿ ಅವತರಿಸಿದವನು. ಧ್ರುವಮಹಾರಾಜನಿಗೆ ಹೆಣ್ಣುಕೊಟ್ಟ ಮಾವನೆಂದು ಭಾಗವತ ಹೇಳಿದೆ. ಶಿಂಶುಮಾರನ ಮಗಳು ಭ್ರಮಿ ಮತ್ತು ವಾಯುದೇವನ ಮಗಳು ಇಳಾ ಇವರಿಬ್ಬರೂ ಧ್ರುವನ ರಾಣಿಯರು.

ಅರ್ಚಿರಾದಿಮಾರ್ಗದಲ್ಲಿ ಹೋಗುವ ಬ್ರಹ್ಮಜ್ಞಾನಿಗಳು ಶಿಂಶುಮಾರನ ದರ್ಶನ ಮಾಡಿಯೇ ಮುಕ್ತಿ ಪಡೆಯಬೇಕು. ಸರ್ವಲೋಕಾಧಾರನೀತ. ಮೂರು ಸಂಧ್ಯೆಗಳಲ್ಲಿಯೂ ಭಕ್ತಿಯಿಂದ ಮೌನವಾಗಿ ಶಿಂಶುಮಾರ ಚಕ್ರವನ್ನು ದಿಟ್ಟಿಸುತ್ತ

'ನಮೋ ಜ್ಯೋತಿರ್ಲೋಕಾಯ ಕಾಲಾಯನಾಯಾನಿಮಿಷಾಂ
ಪತಯೇ ಮಹಾ ಪುರುಷಾಯಾಭೀ ಧೀಮಹಿ ।'

ಎಂದು ಉಪಸ್ಥಾನ ಮಾಡುವುದು ಭಾಗವತದಲ್ಲಿ ವಿಹಿತವಾಗಿದೆ. ಇದರಿಂದ ಮೂರು ಕಾಲಗಳಲ್ಲಿ ನಾವು ಮಾಡುವ ಪಾಪ ಪರಿಹಾರವಾಗುತ್ತದೆ ಎನ್ನಲಾಗಿದೆ.

ಮೇಲಿನ ಮಂತ್ರದಲ್ಲಿ 'ಕಾಲಾಯನ' ಎಂದು ಹೇಳಿದ ಕಾಲನಿಯಾಮಕತ್ವವನ್ನು ಗಮನದಲ್ಲಿಟ್ಟುಕೊಂಡು ಎಲ್ಲರ ಆಯುಷ್ಯಕ್ಕೂ ಶಿಂಶುಮಾರನು ನಿಯಾಮಕನ್ನೆನ್ನಲಾಗಿದೆ. ಏಕೆಂದರೆ ಆಯುರ್ವ್ಯವಸ್ಥಾಪಕತ್ವವೇ ಕಾಲದ ಲಕ್ಷಣ. ಅಂಥ ಕಾಲಕ್ಕೆ ನಿಯಾಮಕನೆಂದಮೇಲೆ ಆಯುರ್ನಿಯಾಮಕನೆಂದು ಬೇರೆ ಹೇಳಬೇಕಾಗಿಲ್ಲ.

ಎಲ್ಲ ಗ್ರಹನಕ್ಷತ್ರಗಳಿಗೆ ಆಶ್ರಯನಾಗಿದ್ದು ಅವುಗಳ ಗತಿಯನ್ನು ನಿಯಂತ್ರಿಸುವವನಾದ್ದರಿಂದ ಶಿಂಶುಮಾರ ಕಾಲನಿಯಮಕ. ಗ್ರಹನಕ್ಷತ್ರಗಳು ಧ್ರುವಮಂಡಲದ ಸುತ್ತ ನಿಯತವಾಗಿ ತಮ್ಮ ತಮ್ಮ ಕಕ್ಷೆಗಳಲ್ಲಿ ಒಂದಿಷ್ಟೂ ತಪ್ಪದೆ ತಿರುಗುವಂತೆ ಮಾಡುವವನೇ ಶಿಂಶುಮಾರದೇವ. ಈ ಪರಿಭ್ರಮಣಕ್ಕೆ ಸರಿಯಾಗಿ

ಸ್ವಲ್ಪವೂ ತಪ್ಪದೆ ಕ್ಷಣ, ಮುಹೂರ್ತ, ದಿನ, ರಾತ್ರಿ ಮುಂತಾದ ಎಲ್ಲ ಕಾಲಗಳೂ ಆಯಾ ಕಾಲಗಳಲ್ಲಿಯೇ ಹುಟ್ಟುತ್ತವೆ, ಇರುತ್ತವೆ ಮತ್ತು ಲಯ ಹೊಂದುತ್ತವೆ, ಪ್ರಕೃತಿಯ ಸೂಕ್ಷ್ಮ ಪರಮಾಣುಗಳ ಪರಿಣಾಮವೇ ಈ ಕಾಲಗಳು ಅವುಗಳಲ್ಲಿಯೇ ಹುಟ್ಟಿ ಅವುಗಳಲ್ಲಿಯೇ ಲಯ ಹೊಂದುತ್ತವೆ. ಪ್ರತಿಯೊಂದು ಕಾಲವು ಆಕಾಶದಂತೆ ಸರ್ವವ್ಯಾಪ್ತ. ಪರಮಾಣುವಿನಿಂದ ವ್ಯಾಪ್ತಕಾಲಗಳ ಉತ್ಪತ್ತಿಯಾಗುವುದು ಭಗವಂತನ ಸೃಷ್ಟಿಯ ವೈಚಿತ್ರ್ಯ. ಒಂದು ಸಣ್ಣ ದೀಪದ ಪ್ರಕಾಶ ಮನೆಯನ್ನೇ ಬೆಳಗುವುದರಿಂದ ಅಸಂಭಾವಿತವೇನಲ್ಲ ಕಾಲಸೃಷ್ಟಿ ಪ್ರಳಯಕಾಲದಲ್ಲಿಯೂ ಅವ್ಯಾಹತವಾಗಿ ನಡೆದಿರುತ್ತದೆ ಆದರಿಂದ ಕಾಲಪ್ರವಾಹ ಅನಾದಿ ನಿತ್ಯ ಕೆಲವು ದಾರ್ಶನಿಕರು ಅಖಂಡ ನಿತ್ಯ ಮಹಾಕಾಲ ಒಂದನ್ನು ಒಪ್ಪಿ ಅದಕ್ಕೆ ಸೂರ್ಯಾದಿಗತಿಗಳ ಸಂಬಂಧ ಕಲ್ಪಿಸಿ ಔಪಾಧಿಕವಾಗಿ ಕ್ಷಣಾದಿಕಾಲವಿಭಾಗಗಳನ್ನು ಮಾಡಿಕೊಳ್ಳುತ್ತಾರೆ. ಅತೀತಾದಿ ವ್ಯವಹಾರ ಹೇತು ಎಂದು ಲಕ್ಷಣವನ್ನು ಹೇಳುತ್ತಾರೆ

ಸೂರ್ಯಾದಿ ಗತಿಗಳಿಗನುಸಾರವಾಗಿ ಪ್ರಕೃತಿಯ ಪರಮಾಣುಗಳಿಂದ ಅನಿತ್ಯ ಪ್ರಪಂಚದ ಆಯುಷ್ಯವನ್ನೇ ನಿರ್ಧರಿಸಬಲ್ಲ ಆಯಾ ಕಾಲಗಳ ಉತ್ಪತ್ತಿಯಾಗುವುದೊಂದು ಸೃಷ್ಟಿಯ ಅದ್ಭುತ. ನಾಟ್ಯದಲ್ಲಿ ಪ್ರತಿ ಹೆಜ್ಜೆಯೂ ತಾಳಕ್ಕೆ ಅನುಸಾರವಾಗಿರುವಂತೆ ಈ ಕಾಲಸೃಷ್ಟಿ. ಪ್ರಪಂಚದ ಆಗುಹೋಗುಗಳೆಲ್ಲ ಶಿಂಶುಮಾರನ ನಿಯಂತ್ರಣದಲ್ಲಿರುವ ಸೂರ್ಯಾದಿಗತಿಗಳನ್ನು, ಅವುಗಳಿಗನುಸಾರವಾಗಿರುವ ಕಾಲಪ್ರವಾಹವನ್ನೂ ಅವಲಂಬಿಸಿರುವುದರಿಂದ ಸೃಷ್ಟಿ ಎಂಬುದು ತಾಳಲಯಬದ್ಧವಾದ ಶಾಸ್ತ್ರ ಶುದ್ಧ ನಾಟ್ಯದಂತಿದೆ ಕಾಲನಿಯಾಮಕನು ಇಲ್ಲಿ ಸೂತ್ರಧಾರ. ಅವನ ಇಚ್ಛೆಯಂತೆಯೇ ತೃಣವೂ ಹುಟ್ಟಬೇಕು, ನಾಶವಾಗಬೇಕು.

ಕಾಲೋ ಬಲೀಯಾನ್ ಬಲಿನಾಂ ಭಗವಾನೀಶ್ವರೋಽವ್ಯಯಃ ।
ಪ್ರಜಾಃ ಕಾಲಯತೇ ಕ್ರೀಡನ್ ಪಶುಪಾಲೋ ಯಥಾ ಪಶೂನ್ ॥

ಕುರಿಮಂದೆ ಕುರುಬನ ಇಚ್ಛೆಗನುಸಾರ ನಡೆಯುವಂತೆ ಲೋಕವು ಕಾಲನಿಯಾಮಕನಾದ ಶಿಂಶುಮಾರನ ಸಂಕಲ್ಪಾನುಸಾರ ನಡೆಯುತ್ತದೆ. ಅವನು ಬಯಸಿದರೆ ಕ್ಷಣವು ಯುಗವಾಗಬಹುದು ಯುಗವೇ ಕ್ಷಣವಾಗಬಹುದು. ಶ್ರೀಕೃಷ್ಣನು ಕೈಲಾಸಯಾತ್ರೆಯ ಸಂದರ್ಭದಲ್ಲಿ ಹನ್ನೆರಡು ವರ್ಷಗಳನ್ನು ಒಂದು ದಿನದಲ್ಲಿ ಅಡಗಿಸಿದ್ದನಂತೆ ! ತನ್ನ ಬಾಲದ ತುದಿಯಲ್ಲಿ ಧ್ರುವಮಂಡಲವನ್ನಿಟ್ಟುಕೊಂಡು ಅದರ ಸುತ್ತ ಎಲ್ಲ ಗ್ರಹನಕ್ಷತ್ರಗಳನ್ನು ತಿರುಗಿಸಿ ಸರ್ವಾಧಾರವಾದ ಕಾಲವನ್ನು ನಿರ್ಮಿಸಿ ಎಲ್ಲರ ಆಯುಷ್ಯವನ್ನು ನಿರ್ಧರಿಸುತ್ತಾನೆ, ಶಿಂಶುಮಾರ ಇದು ಅವನಿಗೆ ಒಂದು ಲೀಲೆ !

ಸಂಸಾರಾವಸ್ಥೆಯಲ್ಲಿ ಜೀವರೆಲ್ಲ ಕಾಲದ ನಿಯಂತ್ರಣಕ್ಕೊಳಪಟ್ಟು ಜನನಮರಣಗಳಿಗೆ ಈಡಾಗುತ್ತಾರೆ. ಬ್ರಹ್ಮಾದಿದೇವತೆಗಳಿಗೂ ಇದು ತಪ್ಪಿದ್ದಲ್ಲ. ಅವರ ಆಯುಷ್ಯ ಸೀಮಿತ. ಅದನ್ನು ಕಾಲವು ನಿರ್ಧರಿಸುತ್ತದೆ. ಶಿಂಶುಮಾರದೇವನ ವಶದಲ್ಲಿ ಅದು ಇರುತ್ತದೆ ಅಮೃತವನ್ನು ಕುಡಿದು ಅಮರರೆನಿಸಿದರೂ ಮಹಾಪ್ರಳಯದಲ್ಲಿ ಆಯುಷ್ಯ ತೀರುವುದರಿಂದ ಮರಣ ಅನಿವಾರ್ಯ, ಬ್ರಹ್ಮದೇವರೇ ಹೇಳುತ್ತಾರೆ–

ಸ್ಥಾನಂ ಮದೀಯಂ ಸಹ ವಿಶ್ವಮೇತತ್
ಕ್ರೀಡಾವಸಾನೇ ದ್ವಿಪರಾರ್ಧಸಂಜ್ಞೇ ॥
ಭ್ರೂಭಂಗ ಮಾತ್ರೇಣ ಹಿ ಸಂದಿಧಕ್ಷೋಃ
ಕಾಲಾತ್ಮನಃ ಪಶ್ಯತಿ ಕೋ ಭವಿಷ್ಯತ್ ?

ಜನನ ಮರಣಗಳ ಕಾಲವನ್ನೂ ತಿಳಿಯಲಾರದಂಥ ಅಸಹಾಯಕ ಸ್ಥಿತಿ ಜೀವರದು. ಕನಕದಾಸರು ಹಾಡಿದ್ದಾರೆ—

ಮೊದಲು ಜನನವನರಿಯೆ ಮರಣದ
ಹದನ ಕಡೆಯಲಿ ತಿಳಿಯೆನೈ ನಾ
ಮಧ್ಯದಲಿ ನೆರೆ ನಿಪುಣನೆಂಬುದು ಬಳಿಕ ನಗೆಗೇಡು ।
ಮೊದಲು ಕಡೆ ಮಧ್ಯಗಳ ಬಲ್ಲವ
ಮದನಜನಕನು ನೀನು ನಿನ್ನಯ
ಪದಯುಗವ ಬಯಸುವೆನು ರಕ್ಷಿಸು ನಮ್ಮನನವರತ ॥

ದೇವತೆಗಳ ಕಾಲಮಾನವೇನೋ ದೊಡ್ಡದು. ಆಯುಷ್ಯವೂ ದೊಡ್ಡದು, ಮನುಷ್ಯರ ಒಂದು ವರ್ಷ ದೇವತೆಗಳಿಗೆ ಒಂದು ದಿನ. ಈ ರೀತಿ ದೇವಮಾನದ ಹನ್ನೆರಡು ಸಾವಿರ ವರ್ಷಗಳು ಒಂದು ಚತುರ್ಯುಗ. ಸಾವಿರ ಚತುರ್ಯುಗಗಳು ಬ್ರಹ್ಮನಿಗೆ ಒಂದು ಹಗಲು. ಈ ಗಣನೆಯಲ್ಲಿ ಬ್ರಹ್ಮದೇವನಿಗೆ ನೂರು ವರ್ಷ ಆಯುಷ್ಯವಿದೆ. ಆದರೆ ಈ ಇಡೀ ಆಯುಷ್ಯ ನಾರಾಯಣನಿಗೆ ಒಂದು ಬಾರಿ ಕಣ್ಣುರೆಪ್ಪೆ ಮುಚ್ಚಿ ತೆರೆಯುವಷ್ಟು ಕಾಲ. ವಾದಿರಾಜರು ವೈಕುಂಠವರ್ಣನೆಯಲ್ಲಿ–

"ಒಮ್ಮೊಮ್ಮೆ ಕಣ್ತೆರೆದು ಮುಚ್ಚುವ ಕಾಲದಲಿ
ಜನನ ಮರಣವನೈದುವ ।
ಬ್ರಹ್ಮಾದಿ ಜೀವರ ಹರಿಗೆ ಸರಿಯೆಂಬ
ದುರ್ಮತವನೇನೆಂಬೆನು !'

ಎಂದು ಉದ್ಗರಿಸಿದ್ದಾರೆ. ಶ್ರೀಹರಿ ಎಲ್ಲಿ ಬ್ರಹ್ಮಾದಿಗಳೆಲ್ಲಿ? ಹರಿಯು ರಾಣಿಯಾಗಲು ಯೋಗ್ಯಳಾದ ತನಗೆ ಬ್ರಹ್ಮಾದಿಗಳು ಪತಿಗಳಾಗಲು ಯೋಗ್ಯರಾದಾರೆ? ಆದರಿಂದ 'ಒಲ್ಲೆ ನಾನಿವರ' ಎನ್ನುತ್ತಿದ್ದಾಳೆ ಮಹಾಲಕ್ಷ್ಮಿ

ನಾರಾಯಣನಿಗೆ ಕಾಲದ ಬಂಧನವಿಲ್ಲ. ಹಾಗೇ ಮಹಾಲಕ್ಷ್ಮಿಗೂ ಅದಿಲ್ಲ.

'ದ್ವಾವೇತೌ ಅನಾದಿನಿತ್ಯೌ ಅನಾದಿಯುಕ್ತೌ ನಿತ್ಯಮುಕ್ತೌ ।'

'ಪ್ರಕೃತಿ ಪುರುಷರೆನಿಸಿದ ಲಕ್ಷ್ಮೀನಾರಾಯಣರಿಬ್ಬರೂ ಅನಾದಿನಿತ್ಯರು. ಅನಾದಿ ಕಾಲದಿಂದಲೂ ಸತಿಪತಿಗಳಾಗಿರುವವರು, ನಿತ್ಯಮುಕ್ತರು' ಮುಕ್ತರಾದ ಜೀವರಿಗೇ ಕಾಲದ ಬಂಧನವಿಲ್ಲ–

ನ ವರ್ತತೇ ಯತ್ರ ರಜಸ್ತಮಸ್ತಯೋಃ
ಸತ್ವಂ ಚ ಮಿಶ್ರಂ ನ ಚ ಕಾಲ ವಿಕ್ರಮಃ ॥

ನಿತ್ಯಮುಕ್ತರಿಗೆ ಎಲ್ಲಿ ಈ ಕಾಲದ ಬಂಧನ? ಆದ್ದರಿಂದ ಎಂದೂ ಪತಿ ವಿಯೋಗವಿಲ್ಲದೆ ನಿತ್ಯಮುತ್ತೈದೆಯಾಗಿ, ಮುತ್ತೈದೆಯರ ಮಾಂಗಲ್ಯಕ್ಕೆ ಅಧಿದೇವತೆಯಾಗಿ, ಮಂಗಳದೇವತೆಯಾಗಿ, ಸರ್ವಮಂಗಲಮಾಂಗಲ್ಯೆಯಾಗಿ ಬಲ್ಲವರಿಂದ ಪೂಜೆ ಕೈಗೊಳ್ಳುವ ಮಹಾಲಕ್ಷ್ಮಿ ಒಮ್ಮೊಮ್ಮೆ ಕಣ್ದೆರೆದು ಮುಚ್ಚುವ ಕಾಲದಲ್ಲಿ ಜನನ ಮರಣಗಳನ್ನು ಹೊಂದುವ, ಅಂದರೆ ಕಣ್ದೆರೆದರೆ ಪ್ರಪಂಚ ಸೃಷ್ಟಿ, ಮುಚ್ಚಿದರೆ ಪ್ರಳಯ ಹೊಂದುವ ಬ್ರಹ್ಮಾದಿಗಳನ್ನು ವರಿಸಿ ತನ್ನ ಮುತ್ತೈದೆತನಕ್ಕೆ ಭಂಗ ತಂದು ಕೊಂಡಾಳೆ? ಒಮ್ಮೆ ಕಣ್ಮುಚ್ಚಿ ತೆರೆಯುವಷ್ಟು ಕಾಲದಲ್ಲಿ ವೈಧವ್ಯ ಬರಬೇಕೆ? ಪ್ರತಿ ಕ್ಷಣ ಪುನರ್ವಿವಾಹವೇ? ಇದೆಲ್ಲ ಮೂರ್ಖತನವಾದೀತು ಎಂದು 'ಒಲ್ಲೆ ನಾನಿವರ'' ಎನ್ನುತ್ತಿದ್ದಾಳೆ ಮಹಾಲಕ್ಷ್ಮಿ.

– ೨೫ –

**ಪ್ರಕೃತಿಯ ಗುಣದಿಂದ ಕಟ್ಟುವಡೆದು ನಾನಾ**
**ವಿಕೃತಿಗೊಳಗಾಗಿ ಭವದಲ್ಲಿ ।**
**ಸುಖದುಃಖವುಂಬ ಬೊಮ್ಮಾದಿ ಜೀವರು**
**ದುಃಖಕೆ ದೂರಳೆನಿಪ ಎನಗೆಣೆಯೆ ॥**

'ಬ್ರಹ್ಮಾದಿ ದೇವತೆಗಳೆಲ್ಲರೂ ಜೀವರು. ಅವರು ಪ್ರಕೃತಿಯ ಸತ್ವರಜಸ್ತಮೋ ಗುಣಗಳ ಬಂಧನದಲ್ಲಿ ಸಿಲುಕಿ ಸಂಸಾರದಲ್ಲಿ ಕಾಮ ಕ್ರೋಧಾದಿ ನಾನಾ ವಿಧವಾದ ಮನೋವಿಕಾರಗಳಿಗೆ ಬಲಿಯಾಗಿ ಸುಖ ದುಃಖ ಉಣ್ಣುತ್ತಾರೆ. ನಾನಾದರೂ ನಿತ್ಯ

ಮುಕ್ತಳಾಗಿದ್ದು ದುಃಖಲೇಶವೂ ಇಲ್ಲದವಳು ಆದ್ದರಿಂದ ಬ್ರಹ್ಮಾದಿಗಳು ನನಗೆ ಅನುರೂಪರಾದ ವರರಾಗಬಲ್ಲರೆ ?' ಎನ್ನುತ್ತಾಳೆ ಮಹಾಲಕ್ಷ್ಮಿ

ಭಾಗವತದಲ್ಲಿ 'ನ ಹಿ ದ್ವಿತೀಯೋ ಗುಣಸಂಗವರ್ಜಿತಃ' 'ಶ್ರೀ ಹರಿಯನ್ನು ಹೊರತು ಇನ್ನಾರೂ ತ್ರಿಗುಣಗಳ ಬಂಧನಕ್ಕೆ ಒಳಗಾಗದವರಿಲ್ಲ' ಎಂದಿದ್ದಾಳೆ, ಮಹಾಲಕ್ಷ್ಮಿ ಅದರ ವಿವರಣೆ ಇಲ್ಲಿ ಇದೆ

ಸತ್ವರಜಸ್ತಮಸ್ಸುಗಳಿಗೆ ಗುಣಗಳೆಂದೇಕೆ ಹೆಸರು ಎನ್ನುವುದಕ್ಕೆ 'ಕಟ್ಟುವಡೆದು' ಎಂಬ ಶಬ್ದದಲ್ಲಿ ಸೂಚನೆ ಇದೆ 'ಗುಣ'ವೆಂದರೆ ಸಂಸ್ಕೃತದಲ್ಲಿ ಹಗ್ಗ ಎಂದೂ ಅರ್ಥವಿದೆ ಜೀವರನ್ನು ಹಗ್ಗದಂತೆ ದುಃಖದಾಯಕ ಬಂಧನದಲ್ಲಿಡು ವುದರಿಂದ 'ಗುಣ' ಎನ್ನುವುದು ಸರಿಯೆ ದೋಷವಾದರೂ ಗುಣವೆ !

'ಪ್ರಕೃತಿ' ಬಂಧನದಲ್ಲಿದ್ದೂ 'ವಿಕೃತಿ'ಗೊಳಗಾಗುವುದು 'ಗುಣ'ಗಳ ಮಹಾ !

ಜೀವನ ಸ್ಥೂಲಶರೀರದೊಳಗೆ ಅನೇಕ ಸೂಕ್ಷ್ಮ ಶರೀರಗಳಿವೆ ಅದರಿಂದಾಗಿ ಜನನ ಮರಣಗಳಲ್ಲಿ ಶರೀರದಿಂದ ಶರೀರಕ್ಕೆ ಜೀವನು ಸಂಚರಿಸುವಂತಾಗಿದೆ ಸ್ಥೂಲ ಶರೀರದಂತೆ ಈ ಸೂಕ್ಷ್ಮ ಶರೀರಗಳೂ ಪಂಚಜ್ಞಾನೇಂದ್ರಿಯ, ಪಂಚಕರ್ಮೇಂದ್ರಿಯ, ಪಂಚಪ್ರಾಣಗಳು ಮತ್ತು ಮನಸ್ಸು ಎಂಬ ಷೋಡಶ ಕಲೆಗಳಿಂದ ಯುಕ್ತವಾಗಿವೆ.

'ಲಿಂಗ ಅನಿರುದ್ಧ ಪ್ರಾಕೃತ ಭೌತಿಕ
ಹಿಂಗದೆ ನಾಲ್ಕಕೆ ಷೋಡಶ ಕಲೆಗಳು'-

ಎಂದು ವಿಜಯದಾಸರ ಸುಳಾದಿ ಇದೆ ಸೂಕ್ಷ್ಮ ಶರೀರಗಳಲ್ಲೆಲ್ಲ ಅತ್ಯಂತ ಸೂಕ್ಷ್ಮ ಆದರೆ ಪ್ರಧಾನ, ಲಿಂಗಶರೀರ ಅನಾದಿಕಾಲದಿಂದ ಜೀವನಿಗೆ ಅಂಟಿಕೊಂಡು ಬಂದಿದೆ ಅನಿಷ್ಟ, ನಮ್ಮಿಚ್ಛೆಯಿಂದ ಬಂದುದಲ್ಲ, ಬೇಡವೆಂದರೆ ಹೋಗುವಂಥಹುದೂ ಅಲ್ಲ.

ಆದರೆ ಜಗನ್ನಾಥ ದಾಸರು ಹರಿಕಥಾಮೃತಸಾರದಲ್ಲಿ ಈ ಗುಣ ಸಂಬಂಧವನ್ನು ತಂದೆಯು ಮಗನಿಗೆ ಪ್ರೀತಿಯಿಂದ ಮಾಡುವ ಮದುವೆಗೆ ಹೋಲಿಸಿದ್ದಾರೆ -

ತಂದೆ ಬಹು ಸಂಭ್ರಮದಿ ತನ್ನಯ
ಬಂಧುಬಳಗವ ನೆರಹಿ ಮದುವೆಯ
ನಂದನಗೆ ತಾ ಮಾಡಿ ಮನೆಯೊಳಗಿಡುವ ತೆರನಂತೆ ।
ಇಂದಿರಾಧವ ತನ್ನ ಇಚ್ಛೆಗ-
ಳಿಂದ ಗುಣಗಳ ಚೇತನಕೆ ಸಂ-
ಬಂಧಗೈಸಿ ಸುಖಾಸುಖಾತ್ಮಕ ಸಂಸೃತಿಯಲಿಡುವ ॥

ಜೀವನಿಗೆ ತ್ರಿಗುಣ ಸಂಬಂಧ ಒಂದು ಮದುವೆಯಂತೆ, ಈ ಮದುವೆ ಮಾಡುವವನು ತಂದೆಯಾದ ಶ್ರೀಹರಿ ಜೀವಯೋಗ್ಯತೆ ಮುಂತಾದವು ಬಂಧುಬಳಗ. ಅವರ ಸಮಕ್ಷಮದಲ್ಲಿ ಗುಣಗಳನ್ನು ಅಂದರೆ ಗುಣಮಯವಾದ ಲಿಂಗ ಅನಿರುದ್ಧ ಮುಂತಾದ ಸೂಕ್ಷ್ಮ ಶರೀರಗಳೆಂಬ ಕನ್ನೆಯರನ್ನು ಮದುವೆ ಮಾಡಿಕೊಡುತ್ತಾನೆ, ಶ್ರೀ ಹರಿ. ಈ ದಂಪತಿಗಳಿಗೆ ವಾಸದ ಮನೆ ಸ್ಥೂಲಶರೀರ. ಸಂಸ್ಮೃತಿ ಎಂದರೆ ಶರೀರದಿಂದ ಶರೀರಕ್ಕೆ ಹೋಗುವುದು, ದಂಪತಿಗಳು ಹಳೆಮನೆ ಬಿಟ್ಟು ಹೊಸಮನೆ ಪ್ರವೇಶ ಮಾಡುವಂತೆ ಜೀವನು ತನ್ನ ಸೂಕ್ಷ್ಮ ಶರೀರದೊಂದಿಗೆ ಜನನ ಮರಣಗಳಲ್ಲಿ ಸುತ್ತುತ್ತಾನೆ ಮದುವೆಯಾದವನಿಗೆ ಮಾತ್ರ ಮನೆ ಆವಶ್ಯಕ. ಹಾಗೇ ಸೂಕ್ಷ್ಮ ಶರೀರ ಉಳ್ಳವರಿಗೇ ಸ್ಥೂಲಶರೀರ ಪ್ರಾಪ್ತಿ

ಈ ಹೋಲಿಕೆಯ ಔಚಿತ್ಯವಿರುವುದು ವಿವಾಹದ' ಪವಿತ್ರ ಉದ್ದೇಶದಲ್ಲಿ ಸೂಕ್ಷ್ಮ ಸ್ಥೂಲ ಶರೀರಪ್ರಾಪ್ತಿ ಅನಿಷ್ಟವೆಂದು ಬಗೆಯಬಾರದು ವಿವಾಹವು ಹೇಗೆ ತ್ರಿವರ್ಗ ಸಾಧನವೊ ಹಾಗೇ ಇದೂ ತ್ರಿವರ್ಗ ಸಾಧನ ಏಕೆ, ಮೋಕ್ಷಸಾಧನ ! ಅವರವರ ಸಾಧನೆಗನುಗುಣವಾಗಿ ಸುಖವೋ ದುಃಖವೋ ಬರಬಹುದು ಆದ್ದರಿಂದ ಸಂಸ್ಕೃತಿಯು ಸುಖಾಸುಖಾತ್ಮಕವೆಂದಿದ್ದಾರೆ, ದಾಸರಾಯರು

ಈ ಮದುವೆ ಜೀವಯೋಗ್ಯತೆ ಅನಾದಿಕರ್ಮ ಮುಂತಾದ ಬಂಧುಬಳಗದ ಸಮಕ್ಷಮದಲ್ಲಿ ನಡೆದಿರುವುದರಿಂದ 'ಬಾಂಧವಾಃ ಕುಲಮಿಚ್ಛಂತಿ' ಎಂಬಂತೆ ಯೋಗ್ಯಳಾದ ಕನ್ನೆಯೊಡನೆಯೆ ಮದುವೆಯಾಗಿದೆ. ಆದ್ದರಿಂದ, ತಂದೆಯಾದ ಶ್ರೀ ಹರಿಗೆ ವೈಷಮ್ಯ ನೈರ್ಘೃಣ್ಯಾದಿ ದೋಷ ತಟ್ಟಲಾರದು

ಸೂಕ್ಷ್ಮ ಶರೀರಗಳಲ್ಲಿ ಲಿಂಗಶರೀರವು ಮಾತ್ರ ಅನಾದಿಯಿಂದಲೂ ಜೀವನಿಗೆ ಭಾರ್ಯೆಯಾಗಿರುವುದರಿಂದ ಮದುವೆ 'ಮಾಡಿದ್ದು' ಸರಿಯಲ್ಲ. ಆದರೆ ಸರ್ವಕರ್ತನಿಗೆ ಅನಾದಿ ಗುಣಸಂಬಂಧ ಕರ್ತೃತ್ವವನ್ನೂ ಹೇಗಾದರೂ ಹೇಳಬೇಕು

ಅಂತೂ ಲಕ್ಷ್ಮೀ ಶೋಭನ ಪದದಲ್ಲಿ, ಗುಣದಿಂದ ಕಟ್ಟುವಡೆದು ಭವದಲ್ಲಿ ಸುಖದುಃಖ ಉಣ್ಣುತ್ತಾರೆ, ಜೀವರು ಹರಿಕಥಾಮೃತಸಾರದಲ್ಲಿ ಗುಣಗಳನ್ನು ಮದುವೆಯಾಗಿ ಸಂಸ್ಕೃತಿಯ ಮನೆಯಲ್ಲಿದ್ದು ಸುಖದುಃಖ ಉಣ್ಣುತ್ತಾರೆ, ಅಭಿಪ್ರಾಯ ಒಂದೆ ಅನಾದಿಯಿಂದ ವಿವಾಹಿತರಾಗಿರುವ ಜೀವರನ್ನು ಈಗ ನಾನು ವಿವಾಹವಾಗಲೆ ? ಅದರಲ್ಲಿಯೂ ಹೀನಜಾತಿಯ ಜಡಪ್ರಕೃತಿಯನ್ನು ಮದುವೆಯಾಗಿರುವುದರಿಂದ ಉತ್ತಮ ಸ್ತ್ರೀಯಾದ ಚೇತನ ಪ್ರಕೃತಿ ತಾನು ಅವರನ್ನು ಮದುವೆಯಾಗಲಾರೆ ಎನ್ನುತ್ತಾಳೆ ಮಹಾಲಕ್ಷ್ಮಿ

ಗುಣಮಯವಾದ ಲಿಂಗಶರೀರವು ಜೀವಸ್ವಭಾವಕ್ಕೆ ಅನುರೂಪವಾಗಿದ್ದು ತ್ರಿವಿಧ ಜೀವರಲ್ಲಿ ತ್ರಿವಿಧವಾಗಿರುತ್ತದೆ. ಸಾತ್ವಿಕರಿಗೆ ಸಾತ್ವಿಕವಾದ ಲಿಂಗಶರೀರ ಸುಖಕೊಡುತ್ತದೆ, ತಾಮಸರಿಗೆ ತಾಮಸವಾದ ಲಿಂಗಶರೀರ ದುಃಖ ಕೊಡುತ್ತಧೆ ರಾಜಸರಿಗೆ ರಾಜಸವಾದ ಲಿಂಗಶರೀರ ಸುಖದುಃಖಗಳೆರಡನ್ನೂ ಕೊಡುತ್ತದೆ, ಸಾತ್ವಿಕ ಶರೀರ ಸುಖ ಕೊಡುತ್ತದೆ ಎಂದರೆ ಕೇವಲ ಸುಖವನ್ನೆ ಕೊಡುತ್ತದೆ ಎಂದಲ್ಲ ಅಲ್ಪ ಪ್ರಮಾಣದಲ್ಲಿ ದುಃಖವೂ ಜೊತೆಗಿರುತ್ತದೆ ಕೇವಲ ಸುಖ ಸಿಗುವುದು ಮೋಕ್ಷದಲ್ಲಿ ಮಾತ್ರ. ಬ್ರಹ್ಮಾದಿ ಜೀವರೆಲ್ಲರಿಗೂ ಇದು ಸಮಾನ.

'ಸರ್ವೇ ವಿಮೋಹಿತಧಿಯಸ್ತವ ಮಾಯಯೈವ ಬ್ರಹ್ಮಾದಯಃ।'

ಎಂದು ಭಾಗವತ ಹೇಳಿದೆ ಇಲ್ಲಿ ಮಾಯೆ ಎಂದರೆ ಪ್ರಕೃತಿ ಅದರ ಗುಣಗಳು, ಅರ್ಥಾತ್ ಗುಣಮಯವಾದ ಸ್ಥೂಲ ಸೂಕ್ಷ್ಮ ಶರೀರಗಳನ್ನೂ ಇಟ್ಟುಕೊಳ್ಳಬೇಕು ಆದ್ದರಿಂದ ಬ್ರಹ್ಮಾದಿಗಳೆಲ್ಲ ಸುಖದುಃಖ ಉಣ್ಣುವವರೆಂದು ಮಹಾಲಕ್ಷ್ಮಿ ಹೇಳುತ್ತಿದ್ದಾಳೆ

ಸುಖದುಃಖಗಳನ್ನು ಉಣ್ಣುವುದೆಂದರೇನು ? ಸುಖದುಃಖಗಳೆಂದರೆ ಸಮುದ್ರದ ಅಲೆಗಳಂತೆ ಅಂತಃಕರಣದಲ್ಲಿ ಉಂಟಾಗುವ ಪರಿಣಾಮಗಳು, ಜೀವನಿಗೆ ಅವುಗಳಲ್ಲಿ ತನ್ನವು ಎಂಬ ಅಭಿಮಾನ ಆದ್ದರಿಂದ ಆತ ಮೋಸ ಹೋಗುತ್ತಾನೆ ಶ್ರೀಪಾದರಾಜರ ಮಾತಿನಲ್ಲಿ ಹೇಳಬೇಕಾದರೆ, ' ಮೀನು ಗಾಳವ ನುಂಗಿ ಮೋಸ ಹೋದ ತೆರನಂತೆ.'

ಜೀವಸ್ವರೂಪಜ್ಞಾನವು ಸುಖದುಃಖಗಳನ್ನು ಗ್ರಹಿಸಿದಾಗ ಸ್ವರೂಪ ದೇಹದಲ್ಲಿ ಉಚ್ಚತ್ವ ನೀಚತ್ವಗಳುಂಟಾಗುತ್ತವೆ ಅಂದರೆ, ಸುಖ ಬಂದಾಗ ಸ್ವರೂಪೇಂದ್ರಿಯಗಳು ಪ್ರಸನ್ನವಾಗುತ್ತವೆ, ಉತ್ಸಾಹದಿಂದ ತಮ್ಮ ಚಟುವಟಿಕೆಗಳಲ್ಲಿ ತೊಡಗುತ್ತವೆ ದುಃಖ ಬಂದಾಗ ಮುದುಡಿಕೊಂಡು ತಮ್ಮ ಚಟುವಟಿಕೆಗಳನ್ನು ನಿಲ್ಲಿಸುತ್ತವೆ ಸುಖದುಃಖ ಎಂಬ ಶಬ್ದಗಳೆ ಅವುಗಳ ಸ್ವಭಾವವನ್ನು ತಿಳಿಸಬಲ್ಲವು. 'ಖ' ಎಂದರೆ ಇಂದ್ರಿಯಗಳು ಅವುಗಳನ್ನು 'ಸು' ಅಂದರೆ ಪ್ರಸನ್ನವಾಗುವಂತೆ ಮಾಡುವುದು ಸುಖ 'ದುಃಖ' ಅಂದರೆ ಅಪ್ರಸನ್ನವಾಗಿ ಮುದುಡುವಂತೆ ಮಾಡುವುದು ದುಃಖ ತತ್ವ ಪ್ರಕಾಶಿಕಾ ಗುರ್ವರ್ಥ ದೀಪಿಕೆಯಲ್ಲಿ ವಾದಿರಾಜರು ಈ ವಿಷಯವನ್ನು ಸ್ಪಷ್ಟಪಡಿಸಿದ್ದಾರೆ.

ಬ್ರಹ್ಮ ವಾಯು ಸರಸ್ವತಿ ಭಾರತಿಯರಿಗೆ ಅಜ್ಞಾನ ದುಃಖ ಭಯ ಮುಂತಾದುವು ಇಲ್ಲ ಏಕೆಂದರೆ ಅವರಿಗೆ ಬಾಹ್ಯಶರೀರದಲ್ಲಿ ಅಭಿಮಾನವಿಲ್ಲ ಆದರೆ,

'ಅಜ್ಞಾನಂ ತು ಚತುರ್ವಾರಂ ದ್ವಿವಾರಂ ಭಯಮೇವ ಚ ।
ಶೋಕೋಽ ಪಿ ತಾವಾನ್ ।,

ಎಂಬಂತೆ ಒಮ್ಮೊಮ್ಮೆ ದುಃಖಾದಿ ವಿಕಾರವಿಲ್ಲದಿಲ್ಲ ಅದು ನಿತ್ಯಮುಕ್ತರಿಗಿಂತ ಅವರಲ್ಲಿ ವೈಲಕ್ಷಣ್ಯ ತೋರಿಸುವುದಕ್ಕಾಗಿ, ' ನೈವ ಬ್ರಹ್ಮಾದಿಭಯದಾ' ಎಂಬಂತೆ ಲಕ್ಷ್ಮೀದೇವಿಯ ಇಚ್ಛಾನುಸಾರ, ಭಗವಂತನ ಪ್ರೀತಿಗಾಗಿ, ಅರೆಕ್ಷಣ ಮಾತ್ರ ಉಂಟಾಗುತ್ತದೆ

ಸೃಷ್ಟಿಕರ್ತನೆಂದು ಪ್ರಸಿದ್ಧನಾದ ಬ್ರಹ್ಮನಿಗೆ ಅವಿದ್ಯೆಯನ್ನು ಸೃಷ್ಟಿಸಿದ ಕೀರ್ತಿಯೂ ಬರಲೆಂದು ಶ್ರೀಹರಿ ಅವನಲ್ಲಿ ಅವಿದ್ಯೆಯನ್ನು ಇರಿಸಿದ, ಒಡನೆ ಅದು ಹೊರಗೆ ಬಂದಿತು ಎಂದು ಭಾಗವತ ತಾತ್ಪರ್ಯ ಹೇಳಿದೆ ಹೀಗೆ ಅಜ್ಞಾನದ ಸಂಪರ್ಕ ಬ್ರಹ್ಮನಿಗೆ ಆಗಿದೆ

ಆದ್ದರಿಂದ ಬ್ರಹ್ಮಾದಿಗಳೆಲ್ಲ ದುಃಖಸ್ಪೃಷ್ಟರೆ, ದುಃಖಾಸ್ಪೃಷ್ಟರು ರಮಾ ನಾರಾಯಣರು ಮಾತ್ರ

'ನಿತ್ಯಾದುಃಖಾ ರಮಾನ್ಯೇ ತು ಸ್ಪೃಷ್ಟದುಃಖಾಃ ಸಮಸ್ತಶಃ ।'

'ಎಂದೂ ದುಃಖವಿರದವಳು ರಮೆ. ಇತರರೆಲ್ಲರೂ ಎಂದಾದರೊಮ್ಮೆ ದುಃಖವುಳ್ಳವರೆ' ಎಂದು ಸ್ಪಷ್ಟವಾಗಿ ತತ್ವಸಂಖ್ಯಾನ ಹೇಳಿದೆ.

'ನೈವ ಬ್ರಹ್ಮಾದೇರಸ್ತಿಸಾ ಕ್ವಚಿತ್' 'ಅತಿರೋಹಿತವಿಜ್ಞಾನಾದ್ ವಾಯುರಪ್ಯಮೃತಃ ಸ್ಮೃತಃ' ಎಂದು ಮುಂತಾಗಿ ಬ್ರಹ್ಮವಾಯು ತತ್ಪತ್ನಿಯರಿಗೆ ಅಜ್ಞಾನ ಸ್ಪರ್ಶವೆ ಇಲ್ಲವೆಂದಿರುವುದೂ ಪರಶುಕ್ಲತ್ರಯದಲ್ಲಿ ಸೇರಿದವರೆಂದು ಹೇಳಿರುವುದೂ ಬೇರೆ ಚೇತನರೊಂದಿಗೆ ಹೋಲಿಸಿ ಹೇಳಿದ ಮಾತು ಋಗ್ಭಾಷ್ಯದಲ್ಲಿ 'ಆದೋಷಃ ಪ್ರಾಯಶೋ ಬ್ರಹ್ಮಾ' ಎಂದು ಪ್ರಾಯಶಃ ಎಂಬ ಪದವನ್ನಿಡಲಾಗಿದೆ ಬೃಹದಾರಣ್ಯಕ ಭಾಷ್ಯದಲ್ಲಿ,

ಇಚ್ಛತೋ ವಿಷ್ಣುಯಜನಂ ಬ್ರಹ್ಮಣಃ ಸಾಧನಾಸ್ಮೃತೇಃ ।
ಶ್ರಮಾತ್ ತಾಪಾಚ್ಚ ತಂ ದೇಹಂ ತ್ಯಕ್ತುಮಿಚ್ಛಾ ಬಭೂವ ಹ ॥

ಎಂದು ಸ್ಪಷ್ಟವಾಗಿ ಅಜ್ಞಾನದುಃಖಾನುಭವ ವರ್ಣಿತವಾಗಿದೆ, ಆದ್ದರಿಂದ ' ನೈವ ಬ್ರಹ್ಮಾದೇರಸ್ತಿ ಸಾ ಕ್ವಚಿತ್'ಎಂಬ ಮಾತಿಗೆ ಹೆದರಿ ಬ್ರಹ್ಮನಿಗೆ ಎಂದೂ ದುಃಖ ಲೇಶವೂ ಇಲ್ಲ ಎಂದುಕೊಂಡು ಲಕ್ಷ್ಮೀಶೋಭನಪದದ 'ಬೊಮ್ಮಾದಿ ಜೀವರ' ಎಂಬ ಪದಕ್ಕೆ ಬೊಮ್ಮನೆ ಆದಿಯಾಗಿ ಅಂದರೆ ಮೊದಲಿಗನಾಗಿ ಅಥವಾ ಸೃಷ್ಟಿಕರ್ತನಾಗಿ ಉಳ್ಳ ಇತರ ಜೀವರೆಂದು ಅರ್ಥೈಸುವ ಪ್ರಯಾಸ

ಮಾಡಬೇಕಾಗಿಲ್ಲ. ಏಕೆ, ಮಾಡಕೂಡದೆಂದೆ ಹೇಳಬಹುದು. ಬ್ರಹ್ಮವಾಯುಗಳನ್ನು ಮಹಾಲಕ್ಷ್ಮಿ ಏಕೆ ವರಿಸಕೂಡದೆಂಬ ಪ್ರಶ್ನೆಗೆ ಈ ನುಡಿಯಲ್ಲಿ ಉತ್ತರವಿಲ್ಲ ಎಂದೇಕೆ ಇಟ್ಟುಕೊಳ್ಳಬೇಕು ? ಭಾಗವತವೂ 'ನಹಿ ದ್ವಿತೀಯೋ ಗುಣಸಂಗವರ್ಜಿತಃ' ಎಂದು 'ಹರಿಯನ್ನು ಬಿಟ್ಟರೆ ಇನ್ನಾವ ಪುರುಷನೂ ಗುಣ ಸಂಗವಿಲ್ಲದವನಲ್ಲ' ಎಂದು ಸ್ಪಷ್ಟ ಹೇಳಿದೆ. ಈ ವಾಕ್ಯಕ್ಕೆ ವ್ಯಾಖ್ಯಾನ ಮಾಡುವಾಗ ಉಪನ್ಯಾಸ ರತ್ನಮಾಲೆಯಲ್ಲಿ ವಾದಿರಾಜರೂ 'ಇವೌ ದೋಷೌ ಸಕಲ ಚೇತನ ಸಾಧಾರಣೌ, ' ಅಲ್ಪಾಯುಷ್ಯ ಮತ್ತು ಗುಣಸಂಗ ರೂಪವಾದ ಎರಡೂ ದೋಷಗಳು ಬ್ರಹ್ಮಾದಿ ಸಕಲ ಚೇತನರಲ್ಲಿಯೂ ಸಮಾನವಾಗಿವೆ' ಎಂದಿದ್ದಾರೆ. ಪುರಂದರದಾಸರೂ ಹಾಡಿದ್ದಾರೆ

ಬೊಮ್ಮಗೆ ಶಿರ ಹೋಗಿ ಭಿನ್ನವಾದ ಚಿಂತೆ
ಮುನ್ನ ಮಾರುತಿಗೆ ಕಪಿಯಾದ ಚಿಂತೆ ।
ಮನ್ಮಥಗೆ ಸುಟ್ಟು ಬೂದಿಯಾದ ಚಿಂತೆ
ಕಣ್ಣು ಮೂರುಳ್ಳವಗೆ ತಿರಿದುಂಬೊ ಚಿಂತೆ ॥

ಎಂತಾದರು ಚಿಂತೆ ಈ ಒಡಲು
ನಿಶ್ಚಿಂತರಾದವರೊಬ್ಬರನು ಕಾಣೆ ॥

ಇದನ್ನು ಬರಿ ವಿನೋದವೆನ್ನಲಾಗದು, ಅರ್ಥಗರ್ಭಿತವಾಗಿದೆ

ಮಹಾಲಕ್ಷ್ಮಿ ದುಃಖಕ್ಕೆ ದೂರಳೆನಿಸುವವಳು. ನಾರಾಯಣನಂತೆ ಅವಳೂ ಪ್ರಾಕೃತ ಶರೀರವಿಲ್ಲದವಳು, ಅವತಾರಗಳಲ್ಲಿಯೂ ಶುದ್ಧ ಚಿನ್ಮಯ ಶರೀರದವಳು. ಸೀತಾಕೃತಿ ಪ್ರಾಕೃತವೆ ಆಗಿದ್ದರೂ ಅದರಲ್ಲಿ ಇಂದ್ರ ಅಭಿಮಾನಿಯಾಗಿ ಇದ್ದುದರಿಂದ ಸೀತಾದೇವಿಯೂ ಒಂದು ಅಂಶದಿಂದ ಸನ್ನಿಹಿತಳಾದಳು, ಹೀಗೆ ನಿತ್ಯಮುಕ್ತಳಾದ ರಮೆಗೆ ನಾರಾಯಣನೆ ಯೋಗ್ಯ ವರ. ಜೀವರು ಆಕೆಗೆ ಎಣೆಯಲ್ಲ, ಅಂದರೆ ಸಮಾನರಲ್ಲ. ಸಮಾನರೊಳಗೇ ವಿವಾಹ ಸಂಬಂಧ ಯುಕ್ತವೆನಿಸುತ್ತದೆ

ಯಯೋರಾತ್ಮಸಮಂ ವಿತ್ತಂ ಜನ್ಮೈಶ್ವರ್ಯಾಕೃತಿರ್ಭವಃ ।
ತಯೋರ್ವಿವಾಹೋ ಮೈತ್ರೀ ಚ ನೋತ್ತಮಾಧಮಯೋಃ ಕ್ವಚಿತ್ ॥

'ಕುಲ ಸಂಪತ್ತು ರೂಪಸೌಂದರ್ಯಾದಿಗಳಲ್ಲಿ ಸಮಾನರಾದವರಿಗೆ ಮಾತ್ರ ವಿವಾಹವಾಗಲೀ ಮೈತ್ರಿಯಾಗಲೀ ಉಚಿತ. ಉತ್ತಮ ಅಧಮರೊಳಗೆ ಅದು ಉಚಿತವಲ್ಲ' ಎಂದು ಭಾಗವತ ಹೇಳಿದೆ. ಆದ್ದರಿಂದ ಬೊಮ್ಮಾದಿ ಜೀವರು ಎನಗೆಣೆಯೆ ಎಂದು ಆಕ್ಷೇಪಿಸಿದ್ದಾಳೆ ಮಹಾಲಕ್ಷ್ಮಿ

**ಒಬ್ಬನವನ ಮಗ ಮತ್ತೊಬ್ಬನವನ ಮೊಮ್ಮ**
**ಒಬ್ಬನವನಿಗೆ ಶಯನಾಹ ।**
**ಒಬ್ಬನವನ ಪೊರುವ ಮತ್ತಿಬ್ಬರವನಿಗಂಜಿ**
**ಅಬ್ಬರದಲಾವಾಗ ಸುಳಿವರು ॥**

ಒಬ್ಬನು ಅಂದರೆ ಚತುರ್ಮುಖನು, ಅವನ ಮಗ. ಮತ್ತೊಬ್ಬ, ಶಿವ, ಅವನ ಮೊಮ್ಮಗ ಒಬ್ಬನು, ಶೇಷ, ಅವನಿಗೆ ಹಾಸಿಗೆಯಾಗಿದ್ದಾನೆ, ಒಬ್ಬನು, ಗರುಡ, ಅವನನ್ನು ವಾಹನವಾಗಿ ಹೊರುತ್ತಾನೆ ಮತ್ತೆ ಇಬ್ಬರು, ಸೂರ್ಯಚಂದ್ರರು ಅವನಿಗೆ ಅಂಜಿ ಅಬ್ಬರದಲ್ಲಿ ಅಂದರೆ ಆಕಾಶದಲ್ಲಿ ಯಾವಾಗಲೂ ಸಂಚರಿಸುತ್ತಾರೆ.

ಇಲ್ಲಿ ' ಅವನು' ಎಂದರೆ ಯಾರು ?

'ಓಂ ತತ್ ಸದತಿ ನಿರ್ದೇಶೋ ಬ್ರಹ್ಮಣಸ್ತ್ರಿವಿಧಃ ಸ್ಮೃತಃ ।'

ಎಂದು ಗೀತೆಯಲ್ಲಿ ಹೇಳಿದಂತೆ 'ತತ್' ಅಂದರೆ ಪರಬ್ರಹ್ಮ ನಾರಾಯಣ. ಇದು ಸಂಸ್ಕೃತದಲ್ಲಿ. ಕನ್ನಡದಲ್ಲಿ ' ಅವನು' ಎಂದರೂ ಆ ನಾರಾಯಣನೆ ಅಥವಾ ಹಿಂದಿನ ನುಡಿಯಲ್ಲಿ ' ಎಲ್ಲರಾಯುಷ್ಯವ ಶಿಂಶುಮಾರದೇವ ನಲ್ಲೀಲೆಯಿಂದ ತೊಲಗಿಸುವ' ಎನ್ನುವಾಗ ಪ್ರಕೃತನಾದುದರಿಂದ ಆ ನಾರಾಯಣನೆ ಇಲ್ಲಿ 'ಅವನು'.

'ಒಬ್ಬನಾವನ ಮಗ ಮತ್ತೊಬ್ಬನಾವನ ಮೊಮ್ಮ'

ಎಂದು ಮುಂತಾಗಿಯೂ ಪಾಠವಿದೆ. ಆ ಪಾಠದಲ್ಲಿ ಸಂಗೀತಕ್ಕಾಗಿ 'ಅವನ ಎಂದು ದೀರ್ಘಗೊಳಿಸಲಾಗಿದೆ ಎನ್ನಬಹುದು.

ಅಥವಾ ಬ್ರಹ್ಮನು ಯಾರ ಮಗನೋ ಶಿವನು ಯಾರ ಮೊಮ್ಮಗನೊ ಎಂದು ಮುಂತಾಗಿ ಹೇಳಬೇಕು ಮುಂದಿನ ನುಡಿಯಲ್ಲಿ ಬರುವ 'ಅವನೊಬ್ಬನೆ ನಿರನಿಷ್ಟ ನಿರವದ್ಯ' ಎಂಬಲ್ಲಿ ವಾಕ್ಯಪೂರ್ತಿಯಾಗುತ್ತದೆ. ಆಗ ರುಕ್ಮಿಣೀಶವಿಜಯದ ಒಂದು ಪದ್ಯಕ್ಕೆ ಇದು ಹೆಚ್ಚು ಸಮೀಪವೂ ಆಗುತ್ತದೆ–

ಪುತ್ರೋ ಯಸ್ಯ ಸ ಪದ್ಮಭೂಃ ಫಣಿಪತಿಃ ಶಯ್ಯಾ ಖಗೇಶೋ ರಥಃ
ಶಂಭುರ್ಯಚ್ಚರಣಾಂಬುಮೌಲಿರಗಭಿತ್ತದ್ದತ್ತ ಸಾಮ್ರಾಜ್ಯಭುಕ್ ।
ನಿತ್ಯಂ ಯತ್ಪದಸಂಗತೌ ವಿಧುರವೀ ಯದ್ವಲ್ಲಭಾ ಶ್ರೀವಧೂ-
ಸ್ತಂ ವರ್ಯಂ ವರಯಾಂಬಭೂವ ಸುದತೀ ಸಾ ದ್ವಾರಕಾನಾಯಕಂ ॥

'ಬ್ರಹ್ಮನು ಯಾರ ಮಗನೊ, ಶೇಷನು ಯಾರಿಗೆ ಹಾಸಿಗೆಯೊ, ಗರುಡನು ಯಾರ ವಾಹನವೊ, ಶಿವನು ಯಾರ ಪಾದೋದಕವನ್ನು ಶಿರದಲ್ಲಿ ಧರಿಸಿದನೊ, ಇಂದ್ರ ಯಾರು ಕೊಟ್ಟ ಸ್ವರ್ಗಸಿಂಹಾಸನವನ್ನಾಳುವನೊ, ಚಂದ್ರಸೂರ್ಯರು ಯಾರ ಪಾದದಲ್ಲಿ ಭಕ್ತಿ ಇಟ್ಟು ಆಕಾಶದಲ್ಲಿ ಸದಾ ಸಂಚರಿಸುವರೊ, ಶ್ರೀದೇವಿ ಯಾರ ಪ್ರೇಯಸಿಯೋ ದ್ವಾರಕಾಧೀಶನಾದ ಆ ಕೃಷ್ಣನನ್ನು ರುಕ್ಮಿಣಿ ವರಿಸಿದಳು'

ಬ್ರಹ್ಮಾದಿ ದೇವತೆಗಳೆಲ್ಲರೂ ಹರಿಯ ಸೇವಕರಾದುದರಿಂದ ಅವರಾರೂ ತನಗೆ ಪತಿಗಳಾಗಲು ಯೋಗ್ಯರಲ್ಲವೆಂಬುದು ಮಹಾಲಕ್ಷ್ಮಿಯ ಅಭಿಪ್ರಾಯ.

ಗರುಡ ಶೇಷಾದಿಗಳು ಹರಿಯ ಸೇವಕರಾದುದರಿಂದ ಅವರನ್ನು ಮಹಾಲಕ್ಷ್ಮಿ ವರಿಸಲಾರಳೆಂದರೆ ಒಪ್ಪಬಹುದು ಬ್ರಹ್ಮನು ಮಗ, ಶಿವನು ಮೊಮ್ಮಗ ಎಂದು ಅವರನ್ನು ತಿರಸ್ಕರಿಸುವುದು, ನ್ಯಾಯವೆ? ಕನ್ಯೆಯಾದವಳು ಕನ್ಯಾರ್ಥಿಯಾಗಿ ಬಯಸಿಬಂದ ಮಗನು ಬೇಡ, ಅವನ ತಂದೆ ಬೇಕು. ಮೊಮ್ಮಗನು ಬೇಡ ಅವನ ತಾತನೇ ಬೇಕು ಎನ್ನಬಹುದೆ? ಎಂಬ ಪ್ರಶ್ನೆ ಬರುತ್ತದೆ ಆದರೆ ಈ ಪ್ರಶ್ನೆ ಮಾನವರಲ್ಲಿ ಯುಕ್ತವಾದೀತು ದೇವತೆಗಳಲ್ಲಿ ಅಲ್ಲ ಯಾಕೆಂದರೆ ದೇವತೆಗಳಲ್ಲಿ ಮಗನಿಗಿಂತ ತಂದೆಯೇ ಎಲ್ಲ ವಿಧದಲ್ಲಿಯೂ ಶ್ರೇಷ್ಠ ತಂದೆಗೇ ಮಗನಿಗಿಂತ ಹೆಚ್ಚು ಆಯುಸ್ಸು. ಅಧಿಕ ಶಕ್ತಿ ಸಾಮರ್ಥ್ಯಗಳಿರುತ್ತವೆ ಮಾನವರಲ್ಲಿ ಮೊದಲು ಹುಟ್ಟಿದ ತಂದೆಗೇ ಮೊದಲು ಮರಣ ಬಳಿಕ ಮಗನಿಗೆ. ದೇವತೆಗಳಲ್ಲಿ ಮಗನಿಗೇ ಮೊದಲು ಮರಣ ಬಳಿಕ ತಂದೆಗೆ ಮಗನಿಗೆ ತಂದೆಯಲ್ಲಿ, ತಂದೆಗೆ ತಾತನಲ್ಲಿ, ತಾತನಿಗೆ ಮುತ್ತಾತನಲ್ಲಿ ಹೀಗೆ ದೇವತೆಗಳಿಗೆ ಲಯ ಆದ್ದರಿಂದ ಹಿರಿಯರು ಕಿರಿಯರಿಗಿಂತ ಹೆಚ್ಚು ದೀರ್ಘಾಯುಷಿಗಳು. ತಾರುಣ್ಯವು ಮಾತ್ರ ಎಲ್ಲರಿಗೂ ಸಮಾನ ಎಲ್ಲರದೂ ಹದಿನಾರರ ಹರೆಯದ ದೃಢಕಾಯ. ಮುಪ್ಪು ಯಾರಿಗೂ ಇಲ್ಲ. ಶಕ್ತಿಸಾಮರ್ಥ್ಯಗಳೂ ಹಿರಿಯರಿಗೆ ಹೆಚ್ಚು. ಆದ್ದರಿಂದ ಮಗನಿಗಿಂತ ತಂದೆಯೆ ಯೋಗ್ಯ. ಮೊಮ್ಮಗನಿಗಿಂತಲೂ ತಾತ ಬಲು ಯೋಗ್ಯನೆನ್ನಬೇಕು. ಕಿರಿಯರು ಹಿರಿಯರ ಅನುಗ್ರಹರಕ್ಷೆಯನ್ನು ಬೇಡುವವರು. ಅದರಲ್ಲಿಯೂ ಬ್ರಹ್ಮನು ಮಗನಾಗಿ ವಿಷ್ಣುವನ್ನು ಸೇವಿಸುತ್ತಿದ್ದರೆ ಶಿವನು ಮಗನಾಗಿ ಬ್ರಹ್ಮನನ್ನೂ, ಮೊಮ್ಮಗನನ್ನಾಗಿ ವಿಷ್ಣುವನ್ನೂ ಸೇವಿಸುವವನು. ಇಂದ್ರಾದಿಗಳಂತೂ ಶಿವ ಬ್ರಹ್ಮ ವಿಷ್ಣು ಮೂವರನ್ನು ಸೇವಿಸುವವರು ಹೀಗೆ ಕಿರಿಯರಲ್ಲಿ ಪರಾಧೀನತೆ ಅಧಿಕ ಶಕ್ತಿಸಾಮರ್ಥ್ಯಗಳು ಅಲ್ಪ. ಈ ತಾರತಮ್ಯವು ಈ ನುಡಿಯಲ್ಲಿ ವ್ಯಕ್ತವಾಗಿದೆ–

'ಬ್ರಹ್ಮನು ಮಗ, ಶಿವನು ಮೊಮ್ಮಗ'

ಶಂಭೋಃ ಪಿತಾಮಹೋ ಬ್ರಹ್ಮಪಿತಾ ಶಕ್ರಾದ್ಯಧೀಶ್ವರಃ ।

ಎಂದು ವಾಸುದೇವ ಸಹಸ್ರನಾಮವು ಇದಕ್ಕೆ ಸಂವಾದಿ ಎನ್ನಬಹುದು ಶ್ರೀ ಮಧ್ವಾಚಾರ್ಯರೂ ದ್ವಾದಶಸ್ತೋತ್ರ (ಹೃಷೀಕೇಶತೀರ್ಥೀಯಪಾಠ)ದಲ್ಲಿ ಹೇಳಿದ್ದಾರೆ—

ಬ್ರಹ್ಮಣಃ ಪಿತರಂ ವಂದೇ ಶಂಕರಸ್ಯ ಪಿತಾಮಹಂ ।

"ಯಸ್ಯ ಪ್ರಸಾದಜೋ ಬ್ರಹ್ಮಾ ರುದ್ರಶ್ಚ ಕ್ರೋಧಸಂಭವಃ"

ಎಂದು ಮುಂತಾದ ವಾಕ್ಯಗಳನ್ನು ನೋಡಿದರೆ ಬ್ರಹ್ಮನಂತೆ ರುದ್ರನೂ ಹರಿಗೆ ಮಗನೆ

ಚಂದ್ರಮಾ ಮನಸೋ ಜಾತಶ್ಚಕ್ಷೋಃ ಸೂರ್ಯೋ ಅಜಾಯತ ।
ಮುಖಾದಿಂದ್ರಶ್ಚಾಗ್ನಿಶ್ಚ ಪ್ರಾಣಾದ್ವಾಯುರಜಾಯತ ॥

ಎಂಬ ಪುರುಷ ಸೂಕ್ತದ ಹೇಳಿಕೆಯಂತೂ ಎಲ್ಲ ದೇವತೆಗಳನ್ನೂ ಹರಿಯ ಮಕ್ಕಳೆಂದೆ ಪರಿಗಣಿಸಿದೆ ಆದ್ದರಿಂದಲೆ ನಮಗೆಲ್ಲ ಶ್ರೀ ಹರಿ ತಂದೆ–

'ಯೋ ನಃ ಪಿತಾ ಜನಿತಾ ಯೋ ವಿಧಾತಾ'

ಈಗ ಒಂದೆ ಮಾತಿನಿಂದ 'ಎಲ್ಲ ದೇವತೆಗಳೂ ಶ್ರೀಹರಿಯ ಮಕ್ಕಳು' ಎಂದು ಲಕ್ಷ್ಮೀಶೋಭನ ಪದದಲ್ಲಿ ಹೇಳಬಹುದಿತ್ತು ಆದರೆ ವಿಷ್ಣು ಸರ್ವೋತ್ತಮತ್ವದ ಜೊತೆಗೆ ದೇವತಾ ತಾರತಮ್ಯವನ್ನು ಪ್ರಸಿದ್ಧ ಪಡಿಸುವುದೂ ದೇವಿಯ ಉದ್ದೇಶವಿದ್ದಂತೆ ಕಾಣುತ್ತದೆ. ಆದ್ದರಿಂದ 'ಅಹಮಸ್ಮಿ ಪ್ರಥಮಜಾ ಋತಸ್ಯ' 'ಅಹಂ ಸುವೇ ಪಿತರಮಸ್ಯ ಮೂರ್ಧನ್' ಎಂದು ಮುಂತಾಗಿ ಶ್ರುತಿಗಳು ಹೇಳುವಂತೆ ಬ್ರಹ್ಮವಾಯುಗಳ ಜೀವೋತ್ತಮತ್ವವನ್ನು ತಿಳಿಸುದಕ್ಕಾಗಿ ಅವರಿಬ್ಬರನ್ನೂ ಒಬ್ಬನವನ ಮಗ ಎನ್ನಲಾಗಿದೆ ಉಳಿದವರೆಲ್ಲ ಮೊಮ್ಮಕ್ಕಳೊ ಮರಿಮಕ್ಕಳೊ ಆಗಿದ್ದಾರೆ ಎಂಬ ಅಭಿಪ್ರಾಯದಿಂದ 'ಒಬ್ಬನವನ ಮೊಮ್ಮ' ಎನ್ನಲಾಗಿದೆ

ರುದ್ರ, ಶೇಷ ಗರುಡರು ಮೂವರೂ ಸಮಾನರು. ಮೂವರೂ ಹರಿಯ ಮೊಮ್ಮಕ್ಕಳು. ಬ್ರಹ್ಮಾಂಡ ಸೃಷ್ಟಿಗಿಂತ ಮೊದಲೆ, ಏಕೆ, ಮಹದಾದಿ ತತ್ವಸೃಷ್ಟಿಗಿಂತ ಮೊದಲೆ ಶ್ರೀಹರಿಯ ವಾಸುದೇವ ಮೂರ್ತಿಯಿಂದ ಜನಿಸಿದ ಬ್ರಹ್ಮನ ಮಗನೆ ಶೇಷ ಸಂಕರ್ಷಣಮೂರ್ತಿಯಿಂದ ಜನಿಸಿದ ವಾಯುದೇವನ ಮಗನೆ ಗರುಡ ರುದ್ರನು ಇವರಿಬ್ಬರಿಗೆ ಮಗನಾಗಿ ಎರಡುಬಾರಿ ಜನಿಸಿದ್ದಾನೆ. ಒಬ್ಬನವನ ಮೊಮ್ಮ ಎಂದಾಗ ಮೂವರನ್ನೂ ಹೇಳಿದಂತಾಯಿತು. ತಿರುಗಿ ಒಬ್ಬನವನ ಶಯನಾಹ ಒಬ್ಬನವನ ಪೊರುವ ಎನ್ನುವುದು ಆವಶ್ಯಕವಿತ್ತೇ ? ರುದ್ರನು ಮೊಮ್ಮಗ, ಶೇಷನು

ಮೊಮ್ಮಗನಾದರೂ ಹಾಸಿಗೆ ಎಂದಾಗ ರುದ್ರನಿಗಿಂತ ಶೇಷನು ಕಡಿಮೆ ಎಂದಾಗಲಿಲ್ಲವೆ ? ಎಂಬ ಪ್ರಶ್ನೆ ಬರಬಹುದು ಆದರೆ ಇದು ಬ್ರಹ್ಮಾಂಡ ಬಾಹ್ಯ ಸೃಷ್ಟಿ. ಬ್ರಹ್ಮಾಂಡದೊಳಗೆ ಕಶ್ಯಪನ ಮಕ್ಕಳಾಗಿ ಶೇಷಗರುಡರು ಹುಟ್ಟಿದರು. ಹರಿಯು ಮೊಮ್ಮಕ್ಕಳಾಗಿ ಅಲ್ಲ. ಅಥವಾ 'ತೌ ವಾಹನಂ ಶಯನಂ ಚೈವ ವಿಷ್ಣೋಃ' ಎಂದು ಹೇಳುವಂತೆ ಹರಿಯ ವಾಹನ ಶಯನರಾಗುವಂಥ ದೊಡ್ಡ ಪದವಿ ಗರುಡ ಶೇಷರಿಗೆ ದೊರಕಿದೆ ರುದ್ರನಿಗೆ ಇನ್ನೂ ದೊರಕಿಲ್ಲ ಪದವಿ ಪ್ರಯುಕ್ತ ಸ್ವಲ್ಪ ಹೆಚ್ಚಿನ ಶ್ರೇಷ್ಠತೆ ಗರುಡ ಶೇಷರಿಗೇ ಇದೆ ಎಂಬ ಅಭಿಪ್ರಾಯವಿಟ್ಟುಕೊಳ್ಳಬೇಕು

ದೇವತೆಗಳಲ್ಲಿ ಹಿರಿಯರಿಗಿಂತ ಕಿರಿಯರು ಹೆಚ್ಚು ದುರ್ಬಲರು ಎನ್ನುವ ಅಂಶ ಸರಿಯೆ ? 'ಚಂದ್ರಮಾ ಮನಸೋ ಜಾತಃ' ಎಂದು ಮುಂತಾಗಿ ಪುರುಷಸೂಕ್ತವು ಹೇಳುವ ಪ್ರಕಾರದಲ್ಲಿ ಚಂದ್ರಸೂರ್ಯರಿಗಿಂತಲೂ ಇಂದ್ರ ವಾಯುಗಳು ಕಿರಿಯರು. ಏಕೆಂದರೆ ಅನಂತರ ಹುಟ್ಟಿದವರು ಆದರೆ ಅವರ ಶಕ್ತಿ ಸಾಮರ್ಥ್ಯಗಳು ಹೆಚ್ಚು. ಈ ಪ್ರಶ್ನೆಗೆ ವಾದಿರಾಜರು ನಿರ್ಣಯಟೀಕೆಯಲ್ಲಿ ಪರಿಹಾರ ನೀಡಿದ್ದಾರೆ ಪುರುಷಸೂಕ್ತದಲ್ಲಿ ಹೇಳಿದುದು ಬ್ರಹ್ಮನ ಪ್ರತಿಯೊಂದು ದಿನದಲ್ಲಿಯೂ ಮೊದಲಿಗೆ ಪರಮಪುರುಷ ನಾರಾಯಣನು ತನ್ನ ಅಂಗಾಂಗಗಳಿಂದ ಮಾಡಿರುವ ಸೃಷ್ಟಿ ಇದು ತಾರತಮ್ಯಾನುಸಾರಿಯಲ್ಲ ನಾರಾಯಣನ ಅಂಗಾಂಗಗಳ ಮಹಿಮೆಯನ್ನು ಪ್ರತ್ಯಕ್ಷ ಕಂಡು ಉಪಾಸನೆ ಮಾಡುವ ಅವಕಾಶವು ಬ್ರಹ್ಮವಾಯುಗಳಿಗೆ ದೊರೆಯಲೆಂದೇ ಈ ಸೃಷ್ಟಿ ನಾರಾಯಣನ ನಾಭಿ ಕಮಲದಲ್ಲಿ ಜನಿಸಿದ ಬ್ರಹ್ಮನು ತನ್ನ ಮೊದಲಿನ ಐವತ್ತು ವರ್ಷಗಳನ್ನು ಹೀಗೆ ಉಪಾಸನೆಯಲ್ಲಿ ಕಳೆದಿದ್ದಾನೆ ಈಗ ತಾನೂ ಸೃಷ್ಟಿಮಾಡಲು ತೊಡಗಿದ್ದಾನೆ. ಇದು ಪಾದ್ಮಸೃಷ್ಟಿ, ಪದ್ಮದಿಂದ ಜನಿಸಿದ ಬ್ರಹ್ಮನು ಮಾಡಿದ ಸೃಷ್ಟಿ. ಬ್ರಹ್ಮಾಂಡದ ಹೊರಗಿನ ಸೃಷ್ಟಿಯೂ ಒಳಗಿನ ಈ ಪಾದ್ಮಸೃಷ್ಟಿಯೂ ತಾರತಮ್ಯಾನುಸಾರಿ. ಪುರುಷಕೃತ ಸೃಷ್ಟಿಮಾತ್ರ ಹಾಗಿಲ್ಲ. ಮಹಾಲಕ್ಷ್ಮಿಯ ಮುಂದೆ ಸ್ವಯಂವರ ಮಂಟಪದಲ್ಲಿ ಕುಳಿತವರೆಲ್ಲ ಪಾದ್ಮಸೃಷ್ಟಿಯಲ್ಲಿ ಹುಟ್ಟಿದವರು ಆದ್ದರಿಂದ ಇಲ್ಲಿ ಇಂದ್ರ ವಾಯುಗಳೇ ಚಂದ್ರಸೂರ್ಯರಿಗಿಂತ ಹಿರಿಯರು ಹಾಗೂ ಶ್ರೇಷ್ಠರು

ಹೀಗೆ ಬ್ರಹ್ಮಾದಿ ದೇವತೆಗಳೆಲ್ಲ ಹರಿಯನ್ನೇ ಆಶ್ರಯಿಸಿದವರು. ಅವರು ಮಾಡುವ ಸೇವೆ ಅಷ್ಟಿಷ್ಟಲ್ಲ ಮಾನವರು,

"ಹಗಲು ನಿನ್ನ ನೆನೆಯಲಿಲ್ಲ ಹಸಿವು ತೃಷೆಯಿಂದ !
ಇರುಳು ನಿನ್ನ ನೆನೆಯಲಿಲ್ಲ ನಿದ್ರೆಭರದಿಂದ !"

ಎಂದು ಪುರಂದರ ದಾಸರು ಹಾಡಿದಂತೆ ಹರಿಯ ಸೇವೆ ಕ್ಷಣಕಾಲ ಮಾಡಿದರೆ ಅದೇ ದೊಡ್ಡದು. ದೇವತೆಗಳು ಕ್ಷಣವೂ ಬಿಡದೆ ಸೇವೆ ಮಾಡುತ್ತಾರೆ.

ಮಾನವನ ಬಾಳೆ ಮೂರು ದಿನದ ಬಾಳು, ಅದರಲ್ಲಿ ಬಾಲ್ಯ ವಾರ್ಧಕ್ಯಗಳಿಗೆ ಎರಡು ದಿನ ಕಳೆದರೆ ಸಿಗುವ ತಾರುಣ್ಯದ ಒಂದು ದಿನವೂ ಆಹಾರ ನಿದ್ರೆಗಳಿಗೆ ಎಂದು ವ್ಯಯವಾಗುತ್ತದೆ ಈ ನಡುವೆ ದೊರೆಯುವ ಅಲ್ಪಕಾಲದಲ್ಲಿಯೂ ಮಾನವನು,

"ಆವಿನ ಕೊಂಬಿನ ತುದಿಯಲ್ಲಿ ಸಾಸಿವೆ ಕಾಳಿದ್ದಷ್ಟೊತ್ತಾಗಲಿ
ನಿನ್ನ ನೆನೆದವ ಜೀವನ್ಮುಕ್ತನಲ್ಲವೇನು ?"

ಎಂದು ಪುರಂದರದಾಸರು ಹೇಳಿದಂತೆ ಪ್ರಾಮಾಣಿಕವಾಗಿ ಹರಿಸೇವೆ ಮಾಡುತ್ತಿಲ್ಲ. ದೇವತೆಗಳು ಹಾಗಲ್ಲ. ದೇವಮಾನದಿಂದ ಅನೇಕ ಕೋಟಿವರ್ಷಗಳ ಕಾಲ ಹರಿಯು ತಮಗೆ ಒಪ್ಪಿಸಿದ ಕಾರ್ಯಭಾರವನ್ನು ವಂಚನೆಯಿಲ್ಲದೆ ಮಾಡುತ್ತಾರೆ ಸಹಸ್ರಶೀರ್ಷ ಸಹಸ್ರಾಕ್ಷನಾದ, ಅನಾದಿನಿತ್ಯನೂ ಆದ ಪರಮಪುರುಷನಿಗೆ ಎಂದೂ ಎಲ್ಲಿಯೂ ತಾವು ವಂಚನೆ ಮಾಡಲಾರೆವೆಂಬ ಪ್ರಜ್ಞೆ ಅವರಿಗಿದೆ ಕ್ಷಣಮಾತ್ರವೂ ಕರ್ತವ್ಯಚ್ಯುತರಾಗುವುದಿಲ್ಲ–

ಚಂದಿರಗೊಂದು ಕ್ಷಣ ನಿಂದಿರಲಿಕ್ಕಿಂಬಿಲ್ಲ,
ಇಂದ್ರಾದಿಗಳಿಗೆ ಕುಳ್ಳಿರಲಿಕ್ಹೊತ್ತಿಲ್ಲ
ಒಂದು ಕ್ಷಣವಾದರು ಸೂರ್ಯಾದಿಗಳಿಗೆ
ನಿಂದು ತೊರಿಸಿಕೊಳ್ಳಲೂ ಹೊತ್ತಿಲ್ಲವು ಪು
ರಂದರವಿಠ್ಠಲರಾಯ ಕಟ್ಟರಸು ಕಾಣಿರೊ ॥

ಅರೆಕ್ಷಣವೂ ಹರಿಸೇವೆ ತಪ್ಪಕೂಡದೆಂದೆ ದೇವತೆಗಳು ಅನಿಮಿಷರಾಗಿದ್ದಾರೆ, ಕಣ್ಣು ರೆಪ್ಪೆ ಮುಚ್ಚುವುದನ್ನೇ ಬಿಟ್ಟಿದ್ದಾರೆ. ನಿದ್ದೆಯನ್ನೂ ಬಿಟ್ಟಿದ್ದಾರೆ ಎಂದು ರುಕ್ಮಿಣಿ ಅಂದುಕೊಳ್ಳುತ್ತಿದ್ದಳಂತೆ ರುಕ್ಮಿಣೀಶವಿಜಯದಲ್ಲಿ–

ಇಮೇ ಸುರಾಃ ಶ್ರೀಪತಿ ನಿತ್ಯಸೇವಾ–
ವಿಯೋಗಭೀತ್ಯಾऽನಿಮಿಷಾ ವಿನಿದ್ರಾಃ ।

ಹೀಗೆ ನಮ್ಮ ಕಲ್ಪನೆಗೇ ನಿಲುಕದಂಥ ರೀತಿಯಲ್ಲಿ ದೇವತೆಗಳು ಹರಿಸೇವೆ ಮಾಡುತ್ತಾರೆ. ಅದೂ ಒಂದಲ್ಲ ಅನೇಕ ರೂಪಗಳಿಂದ ಪ್ರತಿಯೊಂದು ಪ್ರಾಣಿಯ ರೋಮ ರೋಮಗಳಲ್ಲಿಯೂ ನಿಂತು ಹರಿಸೇವೆ ಮಾಡಿಸುತ್ತಿರುವವರೂ ಅವರೆ ಅವರ ಕಾರ್ಯಗಳು ಎಷ್ಟು ಕ್ಲಪ್ತವಾಗಿ ನಡೆಯುತ್ತಿವೆ ಎನ್ನುವುದು ಸೂರ್ಯ ಚಂದ್ರರ ಚಲನೆಯನ್ನು ನೋಡಿದರೆ ತಿಳಿದೀತು—

'ಮತ್ತಿಬ್ಬರು ಅವನಿಗೆ ಅಂಜಿ ಅಬ್ಬರದಲಿ ಆವಾಗ ಸುಳಿವರು'

ಪ್ರಾಣಿಶರೀರಗಳಲ್ಲಿ ಅನೇಕ ರೂಪದಿಂದ ಇದ್ದು ಕರ್ಮಮಾಡಿಸುತ್ತಲೇ ಆಕಾಶದಲ್ಲಿಯೂ ಸೂರ್ಯ ಚಂದ್ರಮಂಡಲಗಳಲ್ಲಿ ಕುಳಿತು ಅವುಗಳನ್ನು ಕ್ಲಪ್ತಕಾಲಕ್ಕೆ ಸರಿಯಾಗಿ ಅನವರತ ತಿರುಗಿಸುತ್ತಾರೆ. ಸರ್ವದೇವತಾ ವಾಸಸ್ಥಾನವಾದ ಮತ್ತು ಬ್ರಹ್ಮಸದನವೂ ಆಗಿರುವ ಮೇರುಪರ್ವತಕ್ಕೆ ಪ್ರದಕ್ಷಿಣೆ ಬರುತ್ತಾರೆ.

'ಭೀಷೋದೇತಿ ಸೂರ್ಯಃ' ।

ಶ್ರೀಹರಿಯ ಭಯದಿಂದ ಸೂರ್ಯಚಂದ್ರರು ಆಕಾಶದಲ್ಲಿ ನಿಯತವಾಗಿ ಸಂಚರಿಸುತ್ತಾರಂತೆ! ಪಾಪ ಈ ದೇವತೆಗಳಿಗೂ ಪ್ರಾಚೀನಕರ್ಮ ಬಿಟ್ಟಿಲ್ಲ! ಪುರಂದರದಾಸರು ಪರಿತಪಿಸುತ್ತಾರೆ–

ಪ್ರಾಚೀನ ಕರ್ಮವು ಬಿಡಲರಿಯದು
ಯೋಚನೆಯ ಮಾಡಿ ನೀ ಬಳಲಬೇಡ ॥

ಲೋಕಾತಿಲೋಕಗಳ ತಿರುಗುವ ರವಿರಥಕೆ
ಏಕಗಾಲಿಗೆ ಏಳು ಕುದುರೆಗಳ ಕಟ್ಟಿ ।
ಆಕಾಶ ಮಾರ್ಗದಲಿ ತಿರುಗುವ ಅರುಣನಿಗೆ
ಬೇಕಾದ ಚರಣಗಳ ಕೊಡಲಿಲ್ಲ ಹರಿಯು ॥

ಸೇತುವೆಯ ಕಟ್ಟಿ ಲಂಕೆಗೆ ಹಾರಿ ಹನುಮಂತ
ಖ್ಯಾತಿಯನೆ ಮಾಡಿ ರಾವಣನ ಗೆದ್ದು ।
ಸೀತೆಯ ಸಂದೇಶ ರಾಮನಿಗೆ ಕೊಡಲಾಗಿ
ಪ್ರೀತಿಯಿಂ ಕೌಪೀನ ಬಿಡಿಸಲಿಲ್ಲ ಹರಿಯು ॥

ನಿತ್ಯದಲಿ ಗರುಡ ಸೇವೆಯಲಿ ವಿಷ್ಣುವನು
ಹೊತ್ತು ತಿರುಗುತಲಿರುವ ಜಗವರಿಯಲು ।
ಅತ್ಯಂತ ಸೇವಕನೆಂದು ಮೂಗಿನ ಡೊಂಕು
ಎತ್ತಿ ನೆಟ್ಟಗೆ ಮಾಡಲಿಲ್ಲ ಕೃಷ್ಣ ॥ . .

ಹಾಗಾದರೆ ಇದು ಕೇವಲ ಅಂಜಿಕೆಯೆ? ಇಂಥ ಪ್ರಾಮಾಣಿಕ ಸೇವಕರಲ್ಲಿಯೂ ಅಂಜಿಕೆ ಉಂಟುಮಾಡುವ ಕಟ್ಟರಸು ಪುರಂದರ ವಿಟ್ಠಲರಾಯನಲ್ಲಿಯೇ ಏನಾದರೂ ದೋಷವಿರಬಹುದೆ? ಭೀಷಾ' ಅಂಜಿಕೆಯಿಂದ ಎಂದು ಉಪನಿಷತ್ತು ಹೇಳಿದೆ.

ಆದರೆ ಈ ಪ್ರಶ್ನೆಗೆ ಭಕ್ತಿ ಎಂದರೆ ಏನೆಂಬುದರಲ್ಲಿಯೇ ಉತ್ತರ ಅಡಗಿದೆ. ಮಾಹಾತ್ಮ್ಯಜ್ಞಾನದಿಂದ ಕೂಡಿದ ಪ್ರೇಮವೆ ಭಕ್ತಿ ಮಾಹಾತ್ಮ್ಯಜ್ಞಾನವಿರುವಲ್ಲಿ ಭಯವೂ ಇರುತ್ತದೆ ಈ ಭಯ ಅಸುರರಲ್ಲಿರುವ ಭಯದಂತಲ್ಲ. ಅದು ದ್ವೇಷಯುಕ್ತ ಇದು ಪ್ರೇಮಯುಕ್ತ ಉಗ್ರನರಸಿಂಹ ಮೂರ್ತಿಯನ್ನು ಕಂಡಾಗ ದೇವತೆಗಳಿಗೂ ಅಸುರರಿಗೂ ಒಂದೇ ವಿಧದ ಭಯ ಮೂಡಲು ಶಕ್ಯವಿಲ್ಲ. ಅಸುರ ಹಿರಣ್ಯಕನನ್ನು ಸಂಹರಿಸಿ ಭಕ್ತಪ್ರಹ್ಲಾದನನ್ನು ಕಾಪಾಡಲು ಬಂದ ಕರುಣೆಯನ್ನು ಕಂಡು ದೇವತೆಗಳು ದೈತ್ಯರಂತೆ ಭಯಪಡಲು ಕಾರಣವಿಲ್ಲ. ತಾವೂ ಅಸುರಾವೇಶದಿಂದ ಅಪರಾಧಗೈದರೆ ಹರಿ ಶಿಕ್ಷಿಸಿಯಾನೆಂಬ ಎಚ್ಚರವೇನೂ ಇಲ್ಲದಿಲ್ಲ ಆದರೆ ಆ ಶಿಕ್ಷೆಯನ್ನು ಸ್ವಾಗತಿಸುವವರೆ ದೇವತೆಗಳು ಅದಕ್ಕೆ ಭಯವೆ ? ಶಸ್ತ್ರಚಿಕಿತ್ಸೆಗೆ ಬಂದ ವೈದ್ಯನ ಬಗ್ಗೆ ರೋಗಿಗೆ ಭಯವೆ ? ರೋಗ ಪರಿಹಾರ ಮಾಡುವ ವೈದ್ಯನಂತೆ, ಮಗುವಿನ ಮೈ ತಿಕ್ಕಿತೊಳೆದು ಕೊಳೆ ನೀಗುವ ತಾಯಿಯಂತೆ, ಹರಿಯು ದೇವತೆಗಳಿಗೆ ಆಪ್ತನಾಗಿರುವಾಗ ಭಯಕ್ಕೆ ಅವಕಾಶವಿಲ್ಲ. ಅತ್ಯಂತ ಆಸಕ್ತರಿಗೆ ನಮ್ಮಿಂದಾಗಿ ಒಂದಿಷ್ಟೂ ಬೇಸರವಾಗದಂತೆ ಯತ್ನಿಸುತ್ತ ಭಯ ಪಡುವುದು ಪ್ರೀತಿಯ ಇನ್ನೊಂದು ರೂಪ ಹರಿಯ ವ್ಯಕ್ತಿತ್ವದ ಔನ್ನತ್ಯಕಂಡು ಭಯಾಶ್ಚರ್ಯಗಳುಂಟಾದರೂ ಅದು ಭೂಷಣವೇ ಭಾಗವತದಲ್ಲಿ ನೃಸಿಂಹಾವತಾರದ ಸಂದರ್ಭದಲ್ಲಿ ಭಯದ ವರ್ಣನೆ ಮಾಡಿರುವುದು ಈ ಅಭಿಪ್ರಾಯದಿಂದ

ಮಹಾಲಕ್ಷ್ಮಿಯ ಅಭಿಪ್ರಾಯದಲ್ಲಿ ದೇವತೆಗಳೆಲ್ಲರೂ ಶ್ರೀಹರಿಯಲ್ಲಿ ಹೀಗೆ ಅಂಜಿ ನಡೆಯುವವರು ಅವರೆಂದೂ, ಶ್ರೀ ಹರಿಯ ಮಟ್ಟಕ್ಕೆ ಏರಲಾರರು. 'ಸ ಈಶ್ವರಃ ಕಿಂ ಪರತೋ ವ್ಯಪಾಶ್ರಯಃ' ಇನ್ನೊಬ್ಬರಿಗೆ ಅಂಜಿ ನಡೆಯುವವರು ಲೋಕಾಧಿಪತಿಗಳೆನ್ನಬಹುದೆ ? ಎಂಬ ಭಾಗವತ ವಾಕ್ಯಕ್ಕೆ ಈಗ ಇನ್ನಷ್ಟು ವಿವರಣೆ ನೀಡಿದಂತಾಯಿತು

— ೨೭ —

**ಒಬ್ಬನಾವನ ನಾಮಕಂಜಿ ಬೆಚ್ಚುವ ಗಡ !**
**ಸರ್ಬರಿಗಾವ ಅಮೃತವ ।**
**ಸರ್ಬರಿಗಾವ ಅಮೃತವನುಣಿಸುವ ಅವ**
**ನೊಬ್ಬನೆ ನಿರನಿಷ್ಟ ನಿರವದ್ಯ ॥**

ಒಬ್ಬನು ಯಾರ ಹೆಸರು ಕೇಳಿದರೆ ಅಂಜಿ ಬೆಚ್ಚಿಬೀಳುತ್ತಾನೋ–ಇದೊಂದು ಆಶ್ಚರ್ಯದ ಸಂಗತಿ !– ಯಾರು ಎಲ್ಲರಿಗೂ ಅಮೃತ ಉಣಿಸುವನೋ ಆ ಶ್ರೀಹರಿಯೊಬ್ಬನೇ ಯಾವ ಅನಿಷ್ಟವೂ ಇಲ್ಲದವನು, ಆದ್ದರಿಂದಲೇ ದೋಷವಿಲ್ಲದವನು

ಮಹಾಲಕ್ಷ್ಮಿಯು ಶ್ರೀಹರಿಯೊಂದಿಗೆ ಇತರ ದೇವತೆಗಳನ್ನು ಹೋಲಿಸಿ ನೋಡಿ ಅವರೆಲ್ಲರೂ ಒಂದಲ್ಲ ಒಂದು ರೀತಿಯ ಅನಿಷ್ಟಭಾಗಿಗಳೆ. ಶ್ರೀಹರಿಯೊಬ್ಬನೆ ನಿರ್ದುಃಖನಾದವನು ಅವನನ್ನೇ ನಾನು ವರಿಸುವೆನೆಂದುಕೊಳ್ಳುತ್ತಾಳೆ.

ಶ್ರೀಹರಿಯ ನಾಮಕ್ಕೆ ಅಂಜಿ ಬೆಚ್ಚಿಬೀಳುವವನಂತೆ ಒಬ್ಬ, ಅವನಾರು ?

'ಹರಿಯ ನಾಮಕ್ಕೆ ಹರಿಯದ ಪಾಪವು ಧರೆಯೊಳಗಿಲ್ಲವೆಂಬೋದು ಖರೆ' ಎನ್ನುತ್ತಾರೆ ವಿಜಯದಾಸರು

ಕಲುಷ ಪರ್ವತಕಿದು ಕುಲಿಶವಾಗಿಹ ಮಂತ್ರ, ।
ದುರಿತಕಾನನಕಿದು ದಾವಾನಲ ಮಂತ್ರ ।
ರಾಮಮಂತ್ರವ ಜಪಿಸೊ ॥'
'ದುರಿತಕೋಟಿಯ ತರಿದು ಭಾಗ್ಯವನು ಕೊಡುವ
ನರಸಿಂಹ ಮಂತ್ರ ಒಂದಿರಲು ಸಾಕು ।'

ಎನ್ನುತ್ತಾರೆ, ಪುರಂದರದಾಸರು.

'ಎನ್ನ ನಾಮಸ್ಮರಣೆ ಪಾಪಾಟವಿಗೆ ಕಾಳ್ಗಿಚ್ಚು ।'

ಎನ್ನುತ್ತದೆ ಸ್ವಪ್ನಪದ.

ನಾಮ್ನೋಽಸ್ತಿ ಯಾವತೀ ಶಕ್ತಿಃ ಪಾಪನಿರ್ಹರಣೇ ಹರೇಃ ।
ತಾವತ್ ಕರ್ತುಂ ನ ಶಕ್ನೋತಿ ಪಾತಕಂ ಪಾತಕೀ ಜನಃ ॥

"ಹರಿನಾಮವು ಪರಿಹಾರ ಮಾಡುವಷ್ಟು ಪಾಪವನ್ನು ಮಾಡಲು ಪಾಪಿಗಳಿಗೇ ಶಕ್ತಿ ಇಲ್ಲ" "ಬ್ರಹ್ಮಹತ್ಯಾಶಿರಸ್ಕಂ ಚ" ಎಂದು ಮುಂತಾಗಿ ವರ್ಣಿತನಾಗಿರುವ ಪಾಪ ಪುರುಷನಾದ ಕಲಿಯೇ ಪಾಪಕ್ಕೆ ಅಭಿಮಾನಿ. ಅವನು ಪಾಪಪರಿಹಾರಕವಾದ ಹರಿನಾಮಕ್ಕೆ ಅಂಜಿ ಬೆಚ್ಚಿಬೀಳುತ್ತಾನೆ.

ನಾಮ ಸಂಕೀರ್ತನೆಯಿಂದ ಪ್ರಸನ್ನನಾಗುವ ಹರಿಯೇ ಪಾಪವನ್ನು ಕಳೆಯುವವನು ಕೇವಲ ನಾಮಕ್ಕೆ ಎಲ್ಲಿಯ ಶಕ್ತಿ ಎಂಬ ಸಂದೇಹಕ್ಕೆ ಜಗನ್ನಾಥದಾಸರು ಉತ್ತರ ಕೊಡುತ್ತಾರೆ–

ಅಂಗುಟಾಗ್ರದಿ ಜನಿಸಿದಮರ ತ
ರಂಗಿಣಿಯು ಲೋಕತ್ರಯಗಳಘ
ಹಿಂಗಿಸುವಳವ್ಯಾಕೃತಾಕಾಶಾಂತ ವ್ಯಾಪಿಸಿದ ।

ಇಂಗಡಲ ಮಗಳೊಡೆಯನಂಗೋ
ಪಾಂಗಗಳಲಿಪ್ಪವುಲನಂತ ಸು-
ಮಂಗಳಪ್ರದ ನಾಮ ಪಾವನ ಮಾಳ್ಪುದೇನರಿದು ||

"ತ್ರಿವಿಕ್ರಮನ ಪಾದಾಂಗುಷ್ಠ ನಖದಿಂದ ಹುಟ್ಟಿರುವ ಗಂಗೆಯೇ ಮೂಲೋಕದವರ ಪಾಪಗಳನ್ನು ಪರಿಹರಿಸುತ್ತಿರುವಾಗ ಸರ್ವತ್ರವ್ಯಾಪ್ತವಾದ ಅವ್ಯಾಕೃತಾಕಾಶ ಇರುವಲ್ಲೆಲ್ಲ ಅದರಂತೆಯೇ ವ್ಯಾಪ್ತವಾದ ಹರಿಯ ಅಂಗೋಪಾಂಗಗಳಲ್ಲಿ ಅವನ ಅನಂತ ನಾಮಗಳಿವೆ ಎಂದ ಮೇಲೆ ಅವು ಪಾಪ ಪರಿಹಾರ ಮಾಡುವುದೇನಾಶ್ಚರ್ಯ? ಇನ್ನೂ ಹೆಚ್ಚಿನ ಪಾಪಪರಿಹಾರ ಶಕ್ತಿ ಇದೆ ಎನ್ನಬೇಕು" ಆದರೆ

"ಅಭಕ್ತ್ಯೋದಾಹೃತಂ ನೈವ ಫಲದಾತೃ ಭವಿಷ್ಯತಿ"

ಭಕ್ತಿ ಇಲ್ಲದೆ ನಾಮಸಂಕೀರ್ತನೆ ಮಾಡಿದರೆ ಫಲವಿಲ್ಲ. ಮಾರೀಚನೂ ಸಾಯುವ ಹೊತ್ತಿನಲ್ಲಿ ಹಾ ಲಕ್ಷ್ಮಣ! ಹಾ ಸೀತೇ! ಎಂದಿದ್ದ.

ಸಾಂಕೇತ್ಯಂ ಪಾರಿಹಾಸ್ಯಂ ವಾ ಸ್ತೋಭಂ ಹೇಲನಮೇವ ವಾ ।
ವೈಕುಂಠ ನಾಮಗ್ರಹಣಮಶೇಷಾಘಹರಂ ವಿದುಃ ||

ಬಿಟ್ಟಿಗಳ ನೆವದಿಂದಲಾಗಲಿ
ಪೊಟ್ಟೆಗೋಸುಗವಾದಡಾಗಲಿ !
ಕೆಟ್ಟರೋಗ ಪ್ರಯುಕ್ತವಾಗಲಿ ಅಣಕದಿಂದೊಮ್ಮೆ ||
ನಿಟ್ಟುಸಿರಿನಿಂ ಬಾಯ್ದೆರೆದು ಹರಿ
ವಿಟ್ಠಲಾ ಸಲಹೆಂದೆನಲು ಕೈ
ಗೊಟ್ಟುಕಾವ ಕೃಪಾಳು ಸಂತತ ತನ್ನ ಭಕ್ತರನು ||

ಎಂದು ಮುಂತಾಗಿ ಪ್ರಶಂಸೆ ಮಾಡುವುದುಂಟು. ಆದರೆ ಭಕ್ತಿ ಬೇಕು, ಅರ್ಥಜ್ಞಾನ ಬೇಕು ರಾಮ ಮಂತ್ರವು ದುರಿತ ಕಾನನಕ್ಕೆ ದಾವಾನಲವೆನಿಸಬೇಕಾದರೆ ರಾಮ ಎಂಬಲ್ಲಿ ರ ಎಂದರೆ ಅಗ್ನಿ, ಅಗ್ನಿಯಂತೆ ಪಾಪವನ್ನು ಸುಡುವ ಶಕ್ತಿಯುಳ್ಳವ ಅಮ ಎಂದರೆ ಅಪರಿಮಿತ. ಪೂರ್ಣಗುಣ ಇಂಥ ರಾಮನ ನಾಮ ಎಂಬ ಜ್ಞಾನ ಬೇಕು.

"ಮಾನಾತ್ ತ್ರಾತೀತಿ ಮಂತ್ರಃ" ಗೀತಾತಾತ್ಪರ್ಯ

ಮನ್- ಅರ್ಥಜ್ಞಾನದಿಂದ ತ್ರ-ರಕ್ಷಿಸುವುದು, ಮನ್‌ತ್ರ. ಮಂತ್ರ ಅರ್ಥಜ್ಞಾನವಿಲ್ಲದಿದ್ದರೂ ಭಕ್ತಿಯಿಂದ ಉಚ್ಚರಿಸಿದರೆ ಕ್ರಮೇಣ ಅರ್ಥಜ್ಞಾನವುಂಟಾಗಿ ಶ್ರೇಯಸ್ಸಾಗುವುದೆಂದೇ ಮೇಲಿನ ಪ್ರಶಂಸೆಗಳ ತಾತ್ಪರ್ಯ.

ಹಾಗಾದರೆ ನಾಮೋಚ್ಚಾರಣೆಯಿಂದ ಪಾಪಪರಿಹಾರ ಸುಲಭವೇನಲ್ಲ, ಭಕ್ತಿ ಬೇಕು ಅರ್ಥಜ್ಞಾನ ಬೇಕು ಕೋಶವ್ಯಾಕರಣಗಳಿಂದ ಅರ್ಥ ತಿಳಿದರೆ ಸಾಲದು. ಸಾವಿರಾರು ಜನ್ಮಗಳಲ್ಲಿ ವೇದವೇದಾಂತ ಪುರಾಣೇತಿಹಾಸಗಳ ನಿರಂತರ ಅಧ್ಯಯನ ಮಾಡಿ ಆ ಅರ್ಥವನ್ನು ಮನವರಿಕೆ ಮಾಡಿಕೊಳ್ಳಬೇಕು. ದೃಢಭಕ್ತಿ ಸಂಪಾದಿಸಬೇಕು. 'ಬಿಗಿದ ಕಂಠದಿಂ ದೃಗ್ಬಾಷ್ಪಗಳಿಂ'' ಎಂಬಂತೆ ತಲ್ಲೀನತೆಯಿಂದ ಹಾಡುವಂಥ ಮನಃಸ್ಥಿತಿ ಬರಬೇಕು ಆಗ ಪಾಪಪುರುಷನು ಅಂಜಿ ಬೆಚ್ಚಿಬೀಳುವಂತಾದೀತು. ''ಅಂಜಿ ಬೆಚ್ಚುವ ಗಡ'' ಎಂದು ಆಶ್ಚರ್ಯ ಸೂಚಕವಾದ 'ಗಡ' ಶಬ್ದವೇಕೆ ? ಇದರಲ್ಲೇನು ಆಶ್ಚರ್ಯವಿದೆ ?

ನಾರಾಯಣೋ ನಾಮ ನರೋ ನರಾಣಾಂ
ಪ್ರಸಹ್ಯಚೋರಃ ಕಥಿತಃ ಪೃಥಿವ್ಯಾಂ ।
ಅನೇಕ ಜನ್ಮಾರ್ಜಿತ ಪಾಪಸಂಚಯಂ
ಹರತ್ಯಶೇಷಂ ಸ್ಮೃತಮಾತ್ರ ಏವ ॥

'ನಾರಾಯಣನೆಂದರೆ ಒಬ್ಬ ದೊಡ್ಡ ದರೋಡೆಕೋರ. ಸ್ಮರಣೆ ಮಾಡಿದರೆ ಸಾಕು ಅನೇಕ ಜನ್ಮಗಳಲ್ಲಿ ನಾವು ಸಂಪಾದಿಸಿದ ಪಾಪರಾಶಿಯನ್ನೇ ಅಪಹರಿಸುತ್ತಾನೆ ' ಪಾಪಕ್ಕೆ ಹೀಗೆ ಭಯಂಕರ ಶತ್ರುವೆನಿಸಿದ ಹರಿಯ ನಾಮಕ್ಕೆ ಪಾಪಪುರುಷನು ಅಂಜುವುದರಲ್ಲೇನಾಶ್ಚರ್ಯ ?

ಆಶ್ಚರ್ಯದ ಸಂಗತಿ ಬೇರೆಯೇ ಇದೆ.

''ಯದೀಯ ನಾಮ ಸ್ಮರತಾಂ ಜನಾನಾಂ
ಬಿಭೇತ್ಯಸಹ್ಯೋಽಪಿ ಹಿ ದಂಡಪಾಣಿಃ ।''

'' ಭಯಂಕರ ಯಮದಂಡವನ್ನು ಹಿಡಿದ ಆ ಯಮನೇ ಹರಿಯ ನಾಮವನ್ನು ಸ್ಮರಿಸುವ ಭಕ್ತರಿಗೆ ಭಯಪಡುತ್ತಾನೆ'' ಎಂದು ರುಕ್ಮಿಣೀಶವಿಜಯ ಹೇಳಿದೆ. ''ಹರಿನಾಮ ಕೇಳಲು ಮಧುರ, ಸುಂದರ ಮುದ್ದಾದ ಅರಗಿಣಿ ಅದು. ಆದರೆ ಕ್ರೂರ ಯಮ ಭಟರನ್ನು ಕೊಕ್ಕಿನಿಂದಲೂ ರೆಕ್ಕೆಗಳಿಂದಲೂ ಬಡಿದೋಡಿಸುತ್ತದೆ'' ಎಂದು ಪುರಂದರದಾಸರು ಹಾಡಿದ್ದಾರೆ–

ಹರಿನಾಮದರಗಿಣಿಯು ಹಾರುತಿದೆ ಜಗದಿ ।
ಕ್ರೂರಯಮಭಟರನ್ನು ಮೂಗುರೆಕ್ಕೆಲಿ ಬಡಿದು
ದಾರಿತೋರುವುದು ಮುರಾರಿ ಪಟ್ಟಣಕೆ ॥

ಎಲ್ಲರೂ ೮೪ ಲಕ್ಷ ನರಕಗಳಿಗೆ ಅಧಿಪತಿಯಾದ ಆ ಯಮನಿಗೆ ಅಂಜಿದರೆ ಯಮನು ಹರಿಗೆ ಅಂಜುವನಂತೆ ! ಎಂಥ ಆಶ್ಚರ್ಯ !

"ನೃಸಿಂಹ ಭೀಷಣಂ ಭದ್ರಂ ಮೃತ್ಯು ಮೃತ್ಯುಂ ನಮಾಮ್ಯಹಂ ।"

ಎಂಬಂತೆ ನರಸಿಂಹನು ಯಮನಿಗೂ ಯಮ. ಅತಿ ಭಯಂಕರ.

"ದೇವ ನೃಸಿಂಹ ಹಿರಣ್ಯಕಶತ್ರೋ ಸರ್ವಭಯಾಂತಕ ದೈವತಬಂಧೋ ।"

ಅಸುರರಿಗೆ ಭಯಂಕರನಾದರೂ ದೇವತೆಗಳಿಗೆ ಸರ್ವಭಯ ಪರಿಹಾರಕ. ಅವನಿಗೆ ಒಬ್ಬ ದೇವೋತ್ತಮನಾದ ಯಮನು ಅಂಜುವನಂತೆ ! ಧರ್ಮರಕ್ಷಕನಾದ ಹರಿಗೆ, ಅಧರ್ಮಾಭಿಮಾನಿ ಕಲಿಯಂತೆ, ಧರ್ಮಾಭಿಮಾನಿ ಯಮಧರ್ಮರಾಜನೂ ಅಂಜುವುದೆಂದರೆ ಅಚ್ಚರಿಯಲ್ಲವೇ ? ಹೀಗೆ ಲಕ್ಷ್ಮೀಶೋಭನಪದಕ್ಕೆ ಅರ್ಥ ಹೇಳಬೇಕು. 'ಕಲಿಯು ಅಂಜಿ ಬೆಚ್ಚಿಬೀಳುತ್ತಾನೆ' ಎನ್ನುವುದು ಸಂದರ್ಭಕ್ಕೆ ಸರಿಯಲ್ಲ. ಮಹಾಲಕ್ಷ್ಮಿ ದೇವತೆಗಳಲ್ಲಿ ದೋಷಗಳನ್ನು ವಿಮರ್ಶಿಸುತ್ತಿದ್ದಾಳೆ. ಅಸುರರಲ್ಲಿ ಅಲ್ಲ. ಅದರಲ್ಲೂ ಕಲಿಯಲ್ಲಿ ಅಲ್ಲವೇ ಅಲ್ಲ. ಅವನು ಕೇವಲ ದೋಷಮಯ. ದೋಷವನ್ನು ಅವನಲ್ಲಿ ಹುಡುಕುವಂತಿಲ್ಲ

ಯಮನು ಶ್ರೀಹರಿಗೆ ಅಂಜುವುದು ಆಶ್ಚರ್ಯ ಎಂದರೆ ಅಸಂಭವ ಎನ್ನಬೇಕೆ ? ಉಪನಿಷತ್ತಿನ 'ಭೀಷೋದೇತಿ ಸೂರ್ಯಃ' ' ಸೂರ್ಯನು ಹರಿಯ ಭಯದಿಂದ ಕಾಲಕ್ಕೆ ಸರಿಯಾಗಿ ಉದಯಿಸುತ್ತಾನೆ' ಎಂದರೆ 'ಮೃತ್ಯುರ್ಧಾವತಿ ಪಂಚಮಃ' 'ಯಮನು ಅಂಜಿ ಓಡಿಹೋಗುತ್ತಾನೆ' ಎಂದಿದೆ ಆದ್ದರಿಂದಲೇ ನೃಸಿಂಹನು 'ಮೃತ್ಯುಮೃತ್ಯು' ಎನಿಸಿದ್ದಾನೆ

ದೇವತೆಗಳಲ್ಲಿ ತಂದೆಗಿಂತ ಮಗನು ದುರ್ಬಲನೆಂದು 'ಒಬ್ಬನಾವನ ಮಗ' ಎಂಬ ನುಡಿಯಲ್ಲಿ ಹೇಳಿದಂತಾಗಿದೆ. ಯಮನು ಸೂರ್ಯನ ಮಗನಾದ್ದರಿಂದ ಅವನಿಗಿಂತಲೂ ಹೆಚ್ಚು ಅಂಜುತ್ತಾನೆ ಎನ್ನೋಣವೆ ? ಆದರೆ ಕಶ್ಯಪ ಪ್ರಜಾಪತಿ ಸೃಷ್ಟಿಯಲ್ಲಿ ಯಮನು ಸೂರ್ಯನ ಮಗ. ಪಾದ್ಮಸೃಷ್ಟಿಯಲ್ಲಿ ಯಮನೇ ಸೂರ್ಯನಿಗಿಂತ ಹಿರಿಯವ. ಬ್ರಹ್ಮನು ತನ್ನ ಎದೆಯಿಂದ ಯಮನನ್ನು ಹುಟ್ಟಿಸಿದ ಬಳಿಕ ಕಿವಿಯಿಂದ ಚಂದ್ರನನ್ನೂ ಬಲಗಣ್ಣಿನಿಂದ ಸೂರ್ಯನನ್ನೂ ಹುಟ್ಟಿಸಿದ್ದಾನೆ ಈ ಸೃಷ್ಟಿಕ್ರಮವೇ ದೇವತೆಗಳಲ್ಲಿ ಹಿರಿಯ ಕಿರಿಯರೆನ್ನುವ ವ್ಯವಸ್ಥೆಗೆ ಆಧಾರ. ಆದ್ದರಿಂದ ಯಮನಿಗೇ ಸೂರ್ಯನಿಗಿಂತ ಹೆಚ್ಚು ಭಯ. ಹೇಗೆ ?

ಗರುಡಪುರಾಣದಲ್ಲಿ ಹೇಳಿದೆ –

ಯಮಶ್ಚತುರ್ಭುಜೋ ಭೂತ್ವಾ ಶಂಖಚಕ್ರಗದಾದಿಭೃತ್ ।
ಪುಣ್ಯಕರ್ಮರತಾನ್ ಸಮ್ಯಕ್ ಸ್ನೇಹಾನ್‌ಮಿತ್ರವದಾಚರೇತ್ ॥
ಪ್ರಲಯಾಂಬುದ ನಿರ್ಘೋಷೋ ಹ್ಯಂಜನಾದ್ರಿ ಸಮಪ್ರಭಃ ।
ಮಹಿಷಸ್ಥೋ ದುರಾರಾಧ್ಯೋ ವಿದ್ಯುತ್ತೇಜಃಸಮದ್ಯುತಿಃ ।
ಯೋಜನತ್ರಯವಿಸ್ತಾರ ದೇಹೋ ರುದ್ರೋಽತಿಭೀಷಣಃ ।
ಲೋಹದಂಡಧರೋಃ ಭೀಮಃ ಪಾಶಪಾಣಿರ್ದುರಾಕೃತಿಃ ।
ರಕ್ತನೇತ್ರೋಽತಿಭಯದೋ ದರ್ಶನಂ ಯಾತಿ ಪಾಪಿನಾಂ ॥

ಚತುರ್ಭುಜ ಶಂಖಚಕ್ರ ಗದಾಧಾರಿಯಾಗಿ ಬಂದು ಪುಣ್ಯಕರ್ಮಿಗಳನ್ನು ಚೆನ್ನಾಗಿ ಸ್ನೇಹದಿಂದ ಕಾಣುತ್ತಾನಂತೆ, ಯಮ ಆದರೆ ಪಾಪಿಗಳಿಗೆ ಪ್ರಲಯಮೇಘದಂತೆ ಘುಡುಘುಡಿಸುತ್ತಾ ಕಾಡಿಗೆಯ ಬೆಟ್ಟದಂತಿದ್ದು ಅತಿ ಭೀಕರವಾದ ಮೂರು ಯೋಜನ ಗಾತ್ರದ ಆಕಾರದಲ್ಲಿ ಕೋಣನ ಬೆನ್ನೇರಿ ಬರುತ್ತಾನೆ. ದಂಡಪಾಶಗಳನ್ನು ಹಿಡಿದು ಕೆಂಗಣ್ಣಿನಿಂದ ನೋಡುತ್ತ ಅತಿಯಾದ ಭಯ ಉಂಟುಮಾಡುತ್ತಾನೆ ಆದ್ದರಿಂದ ಯಮಭಟರಾಗಲಿ ಯಮನಾಗಲಿ ಅಂಜಿ ಓಡುವ ಪ್ರಸಂಗವೆ ಇಲ್ಲ. ಯಮಭಟರಿಗೆ ಯಮನ ಸಾರ್ವಕಾಲಿಕ ಶಾಸನ ಹೀಗಿದೆ–

ಕಮಲನಯನ ವಾಸುದೇವ ವಿಷ್ಣೋ
ಧರಣಿಧರಾಚ್ಯುತ ಶಂಖಚಕ್ರಪಾಣೇ ।
ಭವ ಶರಣಮಿತೀರಯಂತಿ ಯೇ ವೈ
ತ್ಯಜ ಭಟ ದೂತರೇಣ ತಾನಪಾಪಾನ್ ॥

'ಕಮಲನಯನ, ವಾಸುದೇವ ಎಂದು ಮುಂತಾಗಿ ಹರಿಯನ್ನು ಕೂಗಿ ಕಾಪಾಡೆಂದು ಬೇಡುವವರನ್ನು ದೂರದಿಂದಲೇ ಬಿಟ್ಟುಬಿಡು, ಓ ಭಟನೆ, ಅವರು ಪಾಪರಹಿತರು.'

ತೇ ದೇವಸಿದ್ಧ ಪರಿಗೀತ ಪವಿತ್ರಗಾಧಾ
ಯೇ ಸಾಧವಃ ಸಮದೃಶೋ ಭಗವತ್ಪ್ರಪನ್ನಾಃ ।
ತಾನ್ ನೋಪಸೀದತ ಹರೇರ್ಗದಯಾಭಿಗುಪ್ತಾನ್
ನೈಷಾಂ ಭಯಂ ನಚ ವಯಂ ಪ್ರಭವಾಮ ದಂಡೇ ॥

'ಹರಿಯ ಭಕ್ತರಿಗೆ ಅವನ ಗದೆಯ ರಕ್ಷಣೆ ಇದೆ. ಅವರ ಬಳಿ ಹೋಗಬೇಡಿ ಅವರಿಗೆ ಯಾರ ಭಯವೂ ಇಲ್ಲ ಅವರನ್ನು ದಂಡಿಸುವ ಶಕ್ತಿಯೂ ನಮಗಿಲ್ಲ.'

ಆದ್ದರಿಂದ ಯಮನು ವಿಷ್ಣುಭಕ್ತರಿಗೆ ತನ್ನ ಭಯಂಕರ ರೂಪವನ್ನು ತೋರಲು ಅಂಜುತ್ತಾನೆ ಎಂದೆ ಅರ್ಥ ಶ್ರುತಿಗೂ ಯಮನು ಹರಿಯ ಭಯದಿಂದ ಪಾಪಿಗಳನ್ನು ದಂಡಿಸಲು ಧಾವಿಸುತ್ತಾನೆ ಎಂದರ್ಥ ನರಕದಲ್ಲಿ ಪಾಪಿಗಳು ಶಿಕ್ಷೆ ಅನುಭವಿಸುವಾಗ ನೀವೇಕೆ ಹರಿಯನ್ನು ಆರಾಧಿಸಲಿಲ್ಲವೆಂದೇ ಕೇಳುತ್ತಾನೆ ಯಮ–

ನರಕೇ ಪಚ್ಯಮಾನಸ್ತು ಯಮೇನ ಪರಿಭಾಷಿತಃ ।
ಕಿಂ ತ್ವಯಾ ನಾರ್ಚಿತೋ ದೇವಃ ಕೇಶವಃ ಕ್ಲೇಶನಾಶನಃ ॥

ಯಮನು ಸೂರ್ಯನಿಗಿಂತ ಹೆಚ್ಚು ಅಂಜಲು ಕಾರಣವಿದೆ ದೇವತೆಗಳಲ್ಲಿ ಹಿರಿಯರು ಕಿರಿಯರಿಗಿಂತ ಹೆಚ್ಚು ಶಕ್ತಿಶಾಲಿಗಳಾದರೂ ಅಷ್ಟೇ ಜ್ಞಾನಿಗಳೂ ಆಗಿದ್ದಾರೆ ಹರಿಯ ಮಹೋನ್ನತಗುಣಗಳ ದರ್ಶನವಾದಾಗ ಅವರಿಗೆ ತಮ್ಮ ಅಲ್ಪತೆಯ ಅರಿವಾಗುತ್ತದೆ, ಅಂಜಿ ಬೆಚ್ಚಿಬೀಳುವಂತಾಗುತ್ತದೆ. ಏಕೆಂದರೆ ಹರಿಯ ಗುಣಗಳ ಔನ್ನತ್ಯ ಅವರಿಗೆ ಇನ್ನೂ ಹೆಚ್ಚು ಕಾಣುತ್ತದೆ

ಎಲ್ಲ ದೇವತೆಗಳೂ ಹರಿಗೆ ಅಂಜುವುದು ಸ್ವಾಭಾವಿಕ ಏಕೆಂದರೆ ಆತ ಸಾರ್ವಭೌಮ ಪ್ರಭು ಇವರು ಅವನ ಅಧೀನದಲ್ಲಿರುವ ಲೋಕಪಾಲಕರು. ಅವರಿಗೆ ಆ ಪದವಿಯನ್ನಿತ್ತು ಅದನ್ನಾಳುವ ಶಕ್ತಿಯನ್ನು ಅವನೇ ಕೊಟ್ಟವನು. ಅದಕ್ಕಾಗಿ ಅವನು ಅವರ ಆಕಾರದಲ್ಲಿಯೇ ಅಂತರ್ಯಾಮಿಯಾಗಿ ಅವರೊಳಗಿರುತ್ತಾನೆ ಅಂತರ್ಯಾಮಿಯನ್ನು ವಿರೋಧಿಸುವದು ಶಕ್ಯವಿಲ್ಲ ವಾದಿರಾಜರು ಸರಸ ಭಾರತಿಯಲ್ಲಿ ಹೇಳುತ್ತಾರೆ –

ದಶಾಸ್ಯ ಸದೃಶಾಕಾರಾ ದಿಶಾಸು ತ್ರಿದಶಾರ್ಥದಾಃ ।
ಕೃಶಾನು ಮುಖ್ಯಾ ಯದ್ಭೀತ್ಯಾನುಶಾಸಂತಿ ಜಗತ್ ಕಿಲ ॥

ಎರಡು ಅರ್ಥ – ಅಗ್ನಿ ಮುಂತಾದ ದಿಕ್ಪಾಲಕರು ಒಬ್ಬೊಬ್ಬರೂ ರಾವಣನಂತೆ ಬಲಾಢ್ಯರು. ಆಯಾ ದಿಕ್ಕುಗಳಲ್ಲಿದ್ದು ಇತರ ದೇವತೆಗಳಿಗೆ ಬೇಕಾದುದನ್ನು ಕೊಡುವವರು ಅವರೂ ಶ್ರೀಹರಿಯ ಭಯದಿಂದ ಜಗತ್ಪಾಲನೆ ಕಾರ್ಯ ಮಾಡುತ್ತಿದ್ದಾರೆ ಏಕೆಂದರೆ ಅವರಿಗೆ ಸದೃಶವಾದ ಹರಿಯ ಹತ್ತು ಅಂತರ್ಯಾಮಿ ರೂಪಗಳು ಅವರಿಗೆ ಬೇಕಾದುದನ್ನು ಕೊಡುತ್ತಾ ಎಲ್ಲ ದಿಕ್ಕುಗಳಲ್ಲಿಯೂ ಇವೆ. ಅವುಗಳಿಗೆ ಈ ದಿಕ್ಪಾಲಕರು ತಂದೆಗೆ ಮಕ್ಕಳಂತೆ ಅಂಜುತ್ತಾರೆ.

'ಸರ್ಬರಿಗಾವ ಅಮೃತವನುಣಿಸುವ' ಎಂಬ ಮಾತು ಬಲು ಅರ್ಥಗರ್ಭಿತ. ಮೊದಲಿಗೆ ಅಮೃತವೆಂದರೆ ಮೇಲೆ ಹೇಳಿದ ಹರಿಯ- ಅಂತರ್ಯಾಮಿ ರೂಪ.

ಅಮೃತದಂತೆಯೆ ಪುಷ್ಟಿಕರ, ಚೈತನ್ಯದಾಯಕ ಎಲ್ಲ ದೇವತೆಗಳಿಗೂ ಈ ಅಮೃತವನ್ನು ಉಣಿಸುತ್ತಾನೆ, ಶ್ರೀಹರಿ. ಇದನ್ನೆ 'ದಶಾಸ್ಯ ಸದೃಶಾಕಾರಾಃ' ಎಂಬ ಸರಸಭಾರತಿಯ ಪದ್ಯವೂ ಹೇಳಿದೆ ಅದಕ್ಕೆ ಅನುಗುಣವಾಗಿ 'ಒಬ್ಬನಾವನ ನಾಮಕಂಜಿ ಬೆಚ್ಚುವ' ಎಂಬುದನ್ನು ಕೇವಲ ಯಮನ ಬಗ್ಗೆ ಮಾತ್ರ ಇಟ್ಟುಕೊಳ್ಳದೆ ಎಲ್ಲ ದಿಕ್ಪಾಲಕರ ಪರವಾಗಿ ಇಟ್ಟುಕೊಂಡರೆ ಉತ್ತಮ ಹೀಗೆ ದೇವತೆಗಳಿಗೆ ತನ್ನ ಅಂತರ್ಯಾಮಿ ರೂಪವೆಂಬ ಅಮೃತ ಉಣಿಸಿ ಎಲ್ಲ ಪ್ರಾಣಿಗಳ ಶರೀರೇಂದ್ರಿಯಗಳಲ್ಲಿ ಅವರನ್ನಿರಿಸಿ ಅವರು ಪ್ರಾಣಿಗಳಿಂದ ಶುಭಾಶುಭಕರ್ಮ ಮಾಡಿಸುವಂತೆ ಆಜ್ಞಾಪಿಸುತ್ತಾನೆ. ಶುಭಫಲವನ್ನು ಅಂದರೆ ಸುಖವೆಂಬ ಅಮೃತವನ್ನು ಆ ದೇವತೆಗಳಿಗೆ ಉಣಿಸುತ್ತಾನೆ. ಸ್ವತಃ ಉಣಲು ಅವರಿಗೆ ಶಕ್ತಿ ಇಲ್ಲ ಉಣಲು ಕಲಿಸುತ್ತಾನೆ–

ತನ್ನ ಸ್ವಾತಂತ್ರ್ಯ ಗುಣಗಳ ಹಿ
ರಣ್ಯಗರ್ಭಾದ್ಯರಿಗೆ ಕಲಿಮುಖ
ದಾನ್ನವರ ಸಂತತಿಗೆ ಅವರಧಿಕಾರವನುಸರಿಸಿ ।
ಪುಣ್ಯಪಾಪಗಳೀವ ಬಹು ಕಾ
ರುಣ್ಯಸಾಗರನಲ್ಪಶಕ್ತಿಗಳುಣ್ಣಲರಿಯದೆ
ಇರಲು ಉಣಕಲಿಸಿದನು ಜೀವರಿಗೆ ॥ –ಹರಿಕಥಾಮೃತಸಾರ

'ತನ್ನ ಸ್ವಾತಂತ್ರ್ಯ ಗುಣಗಳನ್ನು ಅಂದರೆ ಸ್ವತಂತ್ರವಾದ ಅಂತರ್ಯಾಮಿ ಬಿಂಬರೂಪವನ್ನು ಬ್ರಹ್ಮಾದಿಗಳಿಗೂ ಕಲ್ಯಾದಿಗಳಿಗೂ ನಿತ್ಯ ಸಂಸಾರಿಗಳಿಗೂ ಅವರೊಳಗಿಟ್ಟು ಅವರವರ ಯೋಗ್ಯತೆಯಷ್ಟೇ ಪುಣ್ಯಪಾಪ ಫಲಗಳನ್ನು ಕೊಡುತ್ತಾನೆ. ದಯಾಸಾಗರನಾಗಿದ್ದರಿಂದ ಅದನ್ನು ಉಣಲು ಸ್ವತಃ ಶಕ್ತಿ ಇಲ್ಲದ ಆ ಜೀವರಿಗೆ ಉಣಲೂ ಕಲಿಸಿದ್ದಾನೆ ಆತ'

ಇಂದಿಗೂ ದೇವತೆಗಳು ಶ್ರವಣಮನನಾದಿ ಮಾಡುತ್ತಿದ್ದಾರೆ. ಅಪರೋಕ್ಷವಾಗಿದೆ ಎಂದು ಬಿಟ್ಟಿಲ್ಲ. ಆದ್ದರಿಂದ ವೇದಶಾಸ್ತ್ರಗಳೆಂಬ ಅಮೃತವನ್ನು ಉಣಿಸುತ್ತಾನೆ. 'ಋಚಃ ಸಾಮಾನಿ ಯಜೂಂಷಿ ಸಾ ಹಿ ಶ್ರೀರಮೃತಾ ಸತಾಂ' ಎಂಬಂತೆ ಅಮೃತ ಸ್ವರೂಪಳಾದ ಮಹಾಲಕ್ಷ್ಮಿಯಿಂದ ಅಧಿಷ್ಠಿತವಾದ ವೇದಶಾಸ್ತ್ರವೆಂಬ ಅಮೃತವನ್ನು ಕಿವಿಗಳಿಂದಲೂ, ಅದರ ತತ್ವಜ್ಞಾನಾಮೃತವನ್ನು ಹೃದಯದಿಂದಲೂ ಉಣಿಸುತ್ತಾನೆ. ತತ್ವಜ್ಞಾನಾಮೃತ, ಮೋಕ್ಷಸುಖಾಮೃತ ಉಣಿಸುವುದರ ಸಂಕೇತವಾಗಿಯೇ ಕ್ಷೀರಸಮುದ್ರದಿಂದ ಉದಿಸಿದ ಅಮೃತವನ್ನು ದೈತ್ಯರಿಂದ ವಂಚಿಸಿ ದೇವತೆಗಳಿಗೆ ಉಣಿಸುತ್ತಾನೆ. ಸ್ವತಃ ಉಣಲು ಶಕ್ತಿಯಿಲ್ಲ ಧನ್ವಂತರಿಯ ಕೈಯಿಂದ ಅಮೃತ ಕಲಶವನ್ನು ದೈತ್ಯರು ಅಪಹರಿಸಿಬಿಟ್ಟಿದ್ದರು

'ಒಬ್ಬನಾವನ ಮಗ ಮತ್ತೊಬ್ಬನಾವನ ಮೊಮ್ಮ' ಎಂಬಂತೆ ಮಕ್ಕಳು ಮೊಮ್ಮಕ್ಕಳು ಸೇವಕರು ಪರಿಜನ ಮುಂತಾದ ಪರಿವಾರ ರೂಪದಿಂದ ಸದಾ ತನ್ನನ್ನು ಸೇವಿಸುತ್ತಾ ಪ್ರೀತಿ ಪಾತ್ರರಾದ ದೇವತೆಗಳಿಗೆ ತನ್ನ ಕರುಣಾಮೃತವುಣಿಸಿ ಸಮುದ್ರಮಥನ ಮಾಡಿಸಿ ಅಮೃತಸ್ವರೂಪಳಾದ ಲಕ್ಷ್ಮಿಯನ್ನಾವಿರ್ಭಾವಗೊಳಿಸಿ ಅವಳ ಕರುಣಾಕಟಾಕ್ಷಾಮೃತ ಕೊಡಿಸಿ, ದೈತ್ಯರ ಪಾಲಿಗೆ ಮೋಹಿನಿಯಾಗಿ ವಂಚನೆಮಾಡಿದರೂ ದೇವತೆಗಳಿಗೆ ಒಲವಿನ ತಾಯಾಗಿ ಹೆಣ್ಣಿನ ರೂಪದಿಂದ ಬಂದು ಅಮೃತವನ್ನು ಪ್ರೀತಿಯಿಂದ ಕೈಯಾರ ಬಡಿಸಿ ಉಣಿಸುತ್ತಾನೆ, ಶ್ರೀಹರಿ. ಮುಂದೆ ಅದೇ ಪ್ರೀತಿಯಿಂದ ಮೋಕ್ಷ ಸುಖಾಮೃತವನ್ನು ಅವರಿಗೆ ಉಣಿಸುತ್ತಾನೆ ತ್ರಿಕಾಲಜ್ಞಳಾದ ದೇವಿ ಮೊದಲೇ ಇದನ್ನು ಆಲೋಚಿಸುತ್ತಿದ್ದಾಳೆ. ಇಲ್ಲದಿದ್ದರೆ ಸ್ವಯಂವರವಾದ ಬಳಿಕ ನಡೆಯುವ ವಿವಾಹಭೋಜನ ಈ ಅಮೃತದೂಟ

ಇಮೇ ಸುರಾಃ ಶ್ರೀಪತಿನಿತ್ಯಸೇವಾವಿಯೋಗಭೀತ್ಯಾಽನಿಮಿಷಾ ವಿನಿದ್ರಾಃ ।
ಪ್ರಪೇದಿರೇ ತತ್ಕರುಣಾಪ್ರಭೂತಸುಧಾರಸಾಸ್ವಾದನತೋಽಮರತ್ವಂ ॥

"ದೇವತೆಗಳೆಲ್ಲ ಹರಿಯನ್ನು ನಿತ್ಯ ಸೇವೆಮಾಡಲೆಂದೇ ಅನಿಮಿಷರಾದರು. ವಿನಿದ್ರರಾದರು ಆದ್ದರಿಂದಲೇ ಹರಿಯ ಕರುಣೆಯಿಂದ ಅಮೃತ ಪಾನಮಾಡಿ ಅಮರರೂ ಆದರು" ಎಂದು ರುಕ್ಮಿಣಿಶ ವಿಜಯ ಹೇಳಿದೆ ಭಾಗವತದಲ್ಲಿ ರುಕ್ಮಿಣಿ ಕೃಷ್ಣನಲ್ಲಿ ಹೇಳುತ್ತಾಳೆ– 'ಆತ್ಮಾತ್ಮದಶ್ಚ ಜಗತಾಮಿತಿ ಮೇ ವೃತೋಽಸಿ' ಇದಕ್ಕೆ ಉಪನ್ಯಾಸರತ್ನಮಾಲೆಯಲ್ಲಿ ವಿವರಣೆ– "ಮೂರು ವಿಧದ ಜಗತ್ತಿಗೂ ಅವರವರ ಆತ್ಮ ಅಂದರೆ ಸ್ವರೂಪವನ್ನು ಕೊಡುವವನು, ಸ್ವರೂಪಾಭಿವ್ಯಕ್ತಿರೂಪಮೋಕ್ಷ ಕೊಡುವವನು ನೀನೆಂದೇ ನಾ ನಿನ್ನನ್ನು ವರಿಸಿದ್ದೇನೆ."

'ವವ್ರೇ ವರಂ ಸರ್ವಗುಣೈರಪೇಕ್ಷಿತಂ
ರಮಾ ಮುಕುಂದಂ ನಿರಪೇಕ್ಷಮೀಪ್ಸಿತಂ ।'

ಎಂಬ ಭಾಗವತ ಶ್ಲೋಕದಲ್ಲಿಯೂ ಮುಕುಂದನನ್ನು 'ಮುಕುಂದ' ಮೋಕ್ಷವನ್ನು ಕೊಡುವವನು ಎಂದೇ ಮಹಾಲಕ್ಷ್ಮಿ ವರಿಸಿದಳೆಂದು ಹೇಳಿದೆ, ಸರಸಭಾರತಿಯಲ್ಲಿ–

'ಕುತೋಽಸ್ಯ ಸದೃಶೋಽತೋಽನ್ಯಃ ಸತೋ ಮುಕ್ತರಿತೋ ಯತಃ ।

"ಸಜ್ಜನರಿಗೆ ಮೋಕ್ಷಕೊಡುವ ಶ್ರೀಹರಿಗೆ ಯಾರು ಸಮಾನರು ?" ಎಂದಿದೆ.. ಎಲ್ಲ ಸಜ್ಜನರಿಗೆ ಮೋಕ್ಷ ಕೊಡುವವನು ಶ್ರೀ ಹರಿ ಒಬ್ಬನೇ. 'ಕಾಶೀಮರಣಾನ್ಮುಕ್ತಿಃ' ಎಂಬಂತೆ ಶಿವನೂ ಮೋಕ್ಷದಾಯಕನೆನ್ನುವುದುಂಟು ಆದರೆ,

'ಜಂತೋಃ ಪ್ರಾಣೇಷೂತ್ಕ್ರಮಮಾಣೇಷು ರುದ್ರಸ್ತಾರಕಮಂತ್ರಂ ವ್ಯಾಚಷ್ಟೇ ಯೇನಾಸಾವಮೃತೀ ಭೂತ್ವಾ ಮೋಕ್ಷೀ ಭವತಿ'.

'ಜಂತು ಕಾಶಿಯಲ್ಲಿ ಸಾಯುತ್ತಿದ್ದರೆ ಅದರ ಕಿವಿಯಲ್ಲಿ ರುದ್ರನು ತಾರಕ ರಾಮಮಂತ್ರವನ್ನು ಉಪದೇಶಿಸುತ್ತಾನೆ ಅದರಿಂದ ಅದು ಮೋಕ್ಷವನ್ನು ಹೊಂದುತ್ತದೆ' ಎಂದು ಜಾಬಾಲಿಶ್ರುತಿ ಹೇಳಿದೆ ಸಾವಿರಾರು ಮನ್ವಂತರಗಳ ಕಾಲ ರುದ್ರನು ಕಾಶಿಯಲ್ಲಿ ರಾಮಮಂತ್ರವನ್ನು ಜಪಿಸಿ ಹೋಮಾರ್ಚನೆ ಮಾಡಿ ರಾಮನನ್ನು ಒಲಿಸಿಕೊಂಡನು. ರಾಮನು ಮೈದೋರಿದಾಗ ಗಂಗಾತೀರ ಮಣಿಕರ್ಣಿಕೆಯಲ್ಲಿ ಮಡಿದವರಿಗೆ ಮುಕ್ತಿ ನೀಡೆಂದು ಬೇಡಿಕೊಂಡನು ರಾಮನು ತಥಾಸ್ತು ಎನ್ನುತ್ತ 'ನಿನ್ನಿಂದ ಅಥವಾ ಬ್ರಹ್ಮನಿಂದ ನನ್ನ ಮಂತ್ರೋಪದೇಶ ಸಾಯುವ ಯಾವ ಜಂತುವಿನ ಕಿವಿಗೆ ಬೀಳುವುದೋ ಅದು ಮುಕ್ತಿ ಹೊಂದಲಿ' ಎಂದು ವರವಿತ್ತನು.

ಹೀಗೆ ಸರ್ವರಿಗೆ ಸರ್ವಾನಿಷ್ಟ ನಿವಾರಕವಾದ ಮೋಕ್ಷಾಮೃತ ನೀಡುವವನು ಶ್ರೀಹರಿ ಅವನಿಗೇ ಅನಿಷ್ಟವಿರಲು ಸಾಧ್ಯವೇ ? ಅವನೊಬ್ಬನೇ ನಿರನಿಷ್ಟ ದೇವತೆಗಳಿಗೆ ಶ್ರೀಹರಿಯಲ್ಲಿ ಅಸಾಧಾರಣ ಭಕ್ತಿ ಪ್ರೇಮವಿರುವುದರಿಂದ ಮಕ್ಕಳು ಮೊಮ್ಮಕ್ಕಳಾಗಿಯೋ ಸೇವಕರಾಗಿಯೋ ಅಂಜುತ್ತಾ ಹರಿಗೆ ಸೇವೆಮಾಡುವುದು ಅವರಿಗೆ ಅನಿಷ್ಟವೆಂದು ಎಂದೂ ಅನಿಸದು ಆದರೆ ಲೋಕರೀತಿಯಿಂದ ಇದು ಅನಿಷ್ಟವೇ ಹರಿಗೆ ಈ ಅನಿಷ್ಟವಿಲ್ಲ ಅವನು ಸಾರ್ವಭೌಮ, ದೇವತೆಗಳು ಪರಿವಾರ

ನಿರನಿಷ್ಟ, ಏಕೆ ? ನಿರವದ್ಯನಾದ್ದರಿಂದ. ಆತ ಸ್ವತಂತ್ರನಾಗಿರುವುದರಿಂದ ಪರಾಧೀನತೆ ಎಂಬ ಅವದ್ಯ ಎಂದರೆ ದೋಷ ಅವನಲ್ಲಿಲ್ಲ, ದೇವತೆಗಳಲ್ಲಿ ಆ ದೋಷವಿದೆ ನಿರ್ದೋಷನಾದ ಶ್ರೀ ಹರಿಯನ್ನೇ ವರಿಸುವೆನೆಂದು ಮಹಾಲಕ್ಷ್ಮಿ ಹೇಳುತ್ತಿದ್ದಾಳೆ

– ೨೮ –

**ನಿರನಿಷ್ಟ ನಿರವದ್ಯ ಎಂಬ ಶ್ರುತ್ಯರ್ಥವ**
**ಒರೆದು ನೋಡಲು ನರಹರಿಗೆ ।**
**ನರಕಯಾತನೆ ಸಲ್ಲ ದುರಿತಾತಿದೂರನಿಗೆ**
**ಮರುಳ ಮನ ಬಂದಂತೆ ನುಡಿಯದಿರು ॥**

'ನಿರನಿಷ್ಟೋ ನಿರವದ್ಯಃ' ಎಂಬ ಶ್ರುತಿಯ ಅರ್ಥವನ್ನು ಒರೆದು, ಪರೀಕ್ಷಿಸಿ ನೋಡಿದಾಗ ತಿಳಿಯುತ್ತದೆ, ನರಹರಿಗೆ ನರಕಯಾತನೆ ಸಲ್ಲದು ಎಂದು

ದುರಿತಲೇಶವೂ ಇಲ್ಲದವನಿಗೆ ನರಕಯಾತನೆಯೋ ? ಸಲ್ಲದು, ಮರುಳ, ಮನಸ್ಸಿಗೆ ಬಂದಂತೆ ನುಡಿಯಬೇಡ'.

ಸ್ವಯಂವರ ಮಾಲಿಕೆಯನ್ನು ಕೈಯಲ್ಲಿ ಹಿಡಿದು ನಿಂತು ದೇವತೆಗಳನ್ನು ಪರೀಕ್ಷಿಸುತ್ತಿರುವ ಮಹಾಲಕ್ಷ್ಮಿಯು ದೇವತೆಗಳಲ್ಲಿ ಒಂದಲ್ಲ ಒಂದು ದೋಷವಿದೆ, ಶ್ರೀಹರಿಯಲ್ಲಿ ಒಂದೂ ಇಲ್ಲವೆಂದು, ಅವನನ್ನೇ ವರಿಸುವೆನೆಂದುಕೊಳ್ಳುತ್ತಿದ್ದಾಳೆ

ಯುಕ್ತಿಮಲ್ಲಿಕೆಯಲ್ಲಿ ಹೇಳಿದೆ–

ಶ್ರುತಿಸ್ತು ನಿರನಿಷ್ಟೋಽಸೌ ನಿರವದ್ಯ ಇತಿ ಪ್ರಭುಂ ।
ಸ್ಪಷ್ಟಮಾಚಷ್ಟ ತತ್ಕಷ್ಟಂ ದ್ರಷ್ಟುಮೀಷ್ಟೇ ಕ ಈಶಿತುಃ ॥

"ಶ್ರೀಹರಿಯು ನಿರನಿಷ್ಟ, ನಿರವದ್ಯ ಎಂದು ಶ್ರುತಿಯು ಸ್ಪಷ್ಟವಾಗಿ ಹೇಳಿದೆ. ಅಂಥ ಪ್ರಭುವಿಗೆ ಅನಿಷ್ಟ ಬಂದೀತೆಂದು ಯಾರು ಹೇಳಬಲ್ಲ ?"

ಯುಕ್ತಿಮಲ್ಲಿಕೆ ಹೇಳುವಂತೆ ಶ್ರುತಿಯು ಸ್ಪಷ್ಟವಾಗಿಯೇ ಹರಿಗೆ ಅನಿಷ್ಟವಿಲ್ಲವೆನ್ನುತ್ತಿದೆ ಲಕ್ಷ್ಮೀಶೋಭನಪದವು ಆ ಶ್ರುತಿಯ ಅರ್ಥವನ್ನು ಪರೀಕ್ಷಿಸಿ ನೋಡಬೇಕೆನ್ನುತ್ತಿದೆ ! ಏಕೆ ?

ಇನ್ನೊಂದು ಪ್ರಶ್ನೆ – ಶ್ರೀಹರಿಗೆ ಅನಿಷ್ಟ ಬರಲಾರದೆಂದು ಯುಕ್ತಿಮಲ್ಲಿಕೆ ಹೇಳಿದರೆ, ಲಕ್ಷ್ಮೀಶೋಭನಪದ ನರಕಯಾತನೆ ಇಲ್ಲವೆನ್ನುತ್ತಿದೆ ನರಕಯಾತನೆ ಬರುತ್ತದೆ ಎಂದವರು ಯಾರು ? ಶೈವ ಶಾಕ್ತ ಮುಂತಾದವರು ಹರಿಯ ನಿರಂಕುಶಪ್ರಭುತ್ವವನ್ನೊಪ್ಪದಿದ್ದರೂ ಅವರವರ ಇಷ್ಟದೇವತೆಗೆ ಹರಿ ಅತ್ಯಂತ ಪ್ರಿಯನೆಂದೇ ಹೇಳಿದ್ದಾರೆ, ಹೊರತು ಅವನಿಗೆ ನರಕಯಾತನೆ ಹೇಳಿದಂತಿಲ್ಲ. ಎಲ್ಲ ದೇವತೆಗಳಂತೆ ಅವನಿಗೂ ಕಷ್ಟಬರುತ್ತದೆ ಎಂದು ಮಾತ್ರ ಹೇಳುತ್ತಾರೆ. ಭರ್ತೃಹರಿ ಹೇಳುತ್ತಾನೆ–

ಬ್ರಹ್ಮಾ ಯೇನ ಕುಲಾಲವನ್ನಿಯಮಿತೋ ಬ್ರಹ್ಮಾಂಡ ಭಾಂಡೋದರೇ
ವಿಷ್ಣುರ್ಯೇನ ದಶಾವತಾರಗಹನೇ ಕ್ಷಿಪ್ತೋ ಮಹಾಸಂಕಟೇ ।
ರುದ್ರೋ ಯೇನ ಕಪಾಲಪಾಣಿ ಪುಟಕೇ ಭಿಕ್ಷಾಟನಂ ಕಾರಿತಃ
ಸೂರ್ಯೋ ಭ್ರಾಮ್ಯತಿ ಯೇನ ಖೇಽನವರತಂ ತಸ್ಮೈ ನಮಃ ಕರ್ಮಣೇ ॥

"ಕರ್ಮವಶದಿಂದ ಬ್ರಹ್ಮನು ಬ್ರಹ್ಮಾಂಡದ ಸೃಷ್ಟಿಕಾರ್ಯದಲ್ಲಿ ಕುಂಬಾರನ ಕೆಲಸ ಮಾಡಬೇಕಾಗಿದೆ. ವಿಷ್ಣು ಹತ್ತಾರು ಅವತಾರವೆತ್ತುತ್ತ ಸದಾ ಮಹಾಸಂಕಟದಲ್ಲಿ ಬೀಳಬೇಕಾಗಿದೆ ರುದ್ರನು ಬ್ರಹ್ಮಕಪಾಲ ಹಿಡಿದು ಭಿಕ್ಷೆ

ಬೇಡಬೇಕಾಗಿದೆ ಸೂರ್ಯನು ಅವಿಶ್ರಾಂತವಾಗಿ ಆಕಾಶದಲ್ಲಿ ಸುತ್ತುತ್ತಿರಬೇಕಾಗಿದೆ ಆ ಕರ್ಮಕ್ಕೇ ನನ್ನ ನಮಸ್ಕಾರ !"

ಇಲ್ಲಿ ವಿಷ್ಣುವಿಗೂ ಮಹಾಸಂಕಟವಿದೆ, ಹತ್ತಾರು ಅವತಾರವೆತ್ತಬೇಕಾಗಿದೆ ಎಂದಿದೆ ನರಕಪ್ರಾಪ್ತಿ ಎನ್ನುವವರು ಯಾರಿರಬಹುದು ? ಏಕೆ ಈ ಇಲ್ಲದ ಶಂಕೆ ? ನಮಗೇ ಹಾಗೆ ಸಂದೇಹಬಂದರೆ ಸಮಾಧಾನಕ್ಕಾಗಿ ಅದನ್ನು ಪ್ರಸ್ತಾಪಿಸಿರಬಹುದೆನ್ನೋಣವೇ ? ಹಾಗಿದ್ದರೆ 'ಮರುಳ ! ಹುಚ್ಚ ! ಮನಸ್ಸಿಗೆ ತೋಚಿದಂತೆಲ್ಲಾ ಮಾತನಾಡಬೇಡ !' ಎಂದು ಕಟ್ಟುವಾಗಿ ಉತ್ತರ ಕೊಡಬಹುದೇ ? ಇನ್ನು ಮುಂದೆಯೂ ಲಕ್ಷ್ಮೀಶೋಭನ ಪದದಲ್ಲಿ 'ಕೊಬ್ಬದಿರೆಲೋ ಪರವಾದಿ !' 'ಬಾಯಿಗೆ ಬಂದಂತೆ ಬೊಗಳದಿರು' ಎಂದೆಲ್ಲ ಆಕ್ರೋಶ ಮಾಡಿದುದು ಕಂಡುಬರುತ್ತದೆ ಜಿಜ್ಞಾಸುಗಳ ಸಂದೇಹಗಳಿಗೆ ಸೌಹಾರ್ದದಿಂದಲೇ ಉತ್ತರಿಸಬೇಕು. ಅದು ಘನತೆ, ಆದ್ದರಿಂದ ಯಾರೋ 'ಪರವಾದಿ' ಯನ್ನು ಕುರಿತು ಬಲವಾಗಿ ಆಕ್ಷೇಪಿಸುತ್ತಿರುವಂತೆ ಕಾಣುತ್ತದೆ. ಯಾರು ಆ ಪರವಾದಿ ?

ಅದ್ವೈತಿಯೇ ? ಈಶ್ವರನಿಗೆ ಜೀವೈಕ್ಯವಿರುವ ಪ್ರಯುಕ್ತ ನರಕವಾಸಿಗಳ ಐಕ್ಯವೂ ಬರುವುದರಿಂದ, ಮುಂದೆ ಲಕ್ಷ್ಮೀಶೋಭನ ಪದದಲ್ಲಿಯೇ 'ಶ್ರೀ ನಾರಾಯಣರ ಜನಸೀ ಜನಕರ ನಾನೆಂಬ ವಾದಿ ನುಡಿಯೆಲೋ' ಎಂಬ ಮಾತೂ ಬರುವುದರಿಂದ ಈ ಸಂದೇಹಕ್ಕೆ ಅವಕಾಶವಿದೆ ಆದರೆ ಪ್ರಕೃತ, 'ನಿರನಿಷ್ಠೋ ನಿರವದ್ಯಃ' ಎಂಬ ಶ್ರುತಿಯಲ್ಲಿ ಪರಬ್ರಹ್ಮನಿಗೆ ನಿರ್ದೋಷತ್ವವನ್ನು ಹೇಳಿದೆ ಎಂದಾಕ್ಷಣ ಅದ್ವೈತ ನಿರಾಕರಣೆಯಾಯಿತೆ ? ದುರಿತಾತಿದೂರ, ಪಾಪವಿಲ್ಲದವ ಎಂದ ಮಾತ್ರಕ್ಕೆ ನರಕಯಾತನೆ ಇಲ್ಲವೆನ್ನಬಹುದೇ ? ಪಾರಮಾರ್ಥಿಕವಾಗಿ ಶುದ್ಧ ಸಚ್ಚಿದಾನಂದ ಸ್ವರೂಪಿಯಾದ ಪರಬ್ರಹ್ಮನಿಗೇ ಅನಾದ್ಯವಿದ್ಯಾ ಸಂಬಂಧದಿಂದ ಅವಾಸ್ತವವಾದ ದುಃಖ ಪ್ರತೀತಿ ಉಂಟಾಗಬಹುದು ಈಶ್ವರನಿಗೆ ಸ್ವತಃ ಪಾಪವಿಲ್ಲದಿದ್ದರೂ ಪಾಪಿಜೀವರ ಐಕ್ಯವಿರುವುದರಿಂದ ನರಕಯಾತನೆ ಇರಬಹುದೆಂದೆಲ್ಲ ಅದ್ವೈತಿಗಳು ಸಮಾಧಾನ ಹೇಳಬಹುದು. ಇದಕ್ಕೆ ಉತ್ತರವಾಗಿ ಶ್ರೀಮದಾಚಾರ್ಯರಂತೆ ಅಜ್ಞಾನಾಸಂಭವವನ್ನೇ ಹೇಳಬೇಕಾಗಿತ್ತು, ಪಾಪದೂರತ್ವ ಹೇಳಿ ಫಲವಿಲ್ಲ, ಸಯುಕ್ತಿಕವಾಗಿ ನಿರಾಕರಣೆ ಮಾಡದೆ 'ಮರುಳ ಮನಬಂದಂತೆ ನುಡಿಯದಿರೆಂದು' ಕೋಪಿಸಿದರೆ ಘನತೆ ಎನಿಸಲಾರದು.

'ಕಲ್ಪಲತಾ' ಎಂಬ ಗ್ರಂಥವನ್ನು ನೋಡಿದರೆ ಈ ಪ್ರಶ್ನೆಗಳೆಲ್ಲ ಬಗೆಹರಿಯುತ್ತವೆ ವಾದಿರಾಜ ಎಂಬ ಒಬ್ಬ ಜೈನಪಂಡಿತನ 'ಪ್ರಮಾಣ ನಿರ್ಣಯ'

ಎಂಬ ಗ್ರಂಥದ ಖಂಡನೆಗಾಗಿ ವಾದಿರಾಜರ ಕಲ್ಪಲತೆ ಹೊರಟಿದೆ ಅದರಲ್ಲಿ ವಾದಿರಾಜರು ಹೇಳುತ್ತಾರೆ–

> ಯಾ ಚ ನಾರಾಯಣಸ್ಯ ನರಕಕಥಾ ಸಾಪಿ ವೃಥಾ ।
> ಅತ್ಯಂತ ಪರಿಹಾಸ್ಯಾ ಚ । ಶ್ರೋತೃಣಾಮಪಿ ನರಕಕರೀ ಕಿಮು ವಕ್ತುಃ ।
> ..ನಾನಾ ನರಕಯಾತನಾಶ್ಚ ತವೈವ ಸ್ಯುಃ . ನ ತು ಸ್ಮರಣಾದೇವ
> ಸಕಲ ಕಲುಷ ನಿರ್ವಹಣ ಸಮರ್ಥಸ್ಯ ನಾರಾಯಣಸ್ಯ ।

'ನಾರಾಯಣನಿಗೂ ನರಕವಿದೆ ಎನ್ನುವ ನಿನ್ನ ಮಾತು ಅರ್ಥವಿಲ್ಲದ್ದು ಅತ್ಯಂತ ಹಾಸ್ಯಾಸ್ಪದವೂ ಹೌದು ಅದನ್ನು ಕೇಳುವವರಿಗೇ ನರಕ ಹೇಳುವವರಿಗೆ ಇನ್ನೇನು ? ಆ ನರಕಯಾತನೆಗಳೆಲ್ಲ ನಿನಗೇ ಸರಿ. ಸ್ಮರಣ ಮಾತ್ರದಿಂದ ಸಕಲಪಾಪ ಪರಿಹಾರ ಮಾಡಬಲ್ಲ ನಾರಾಯಣನಿಗಲ್ಲ'

ಜೈನಮತದಲ್ಲಿ ಚೇತನರು ಸಂಸಾರಿಗಳೆಂದೂ ಕೇವಲಿಗಳೆಂದೂ ಎರಡುವಿಧ, ಕೇವಲಿಗಳೆಂದರೆ ಮುಕ್ತರು. ಸಂಸಾರಿಗಳು ಪುಣ್ಯಪಾಪಗಳಿಂದ ದೇವ, ಮನುಷ್ಯ, ತಿರ್ಯಕ್, ನಾರಕ ಎಂಬ ನಾಲ್ಕು ಬಗೆಯ ಶರೀರ ಪಡೆಯುತ್ತಾರೆ. ಪುಣ್ಯದಿಂದ ದೇವಶರೀರ ಪಾಪದಿಂದ ತಿರ್ಯಕ್ ಅಂದರೆ ಪ್ರಾಣಿಶರೀರ ಅಥವಾ ನಾರಕ ಅಂದರೆ ನರಕವಾಸಿಗಳ ಶರೀರ. ಪುಣ್ಯಪಾಪ ಮಿಶ್ರಕರ್ಮದಿಂದ ಮನುಷ್ಯ ಶರೀರ. ದೇವತೆಗಳೂ ಸಂಸಾರಿಗಳು. ಪಾಪಮಾಡಿ ನರಕದಲ್ಲಿ ಹುಟ್ಟಬಹುದು. ಈ ದೇವತೆಗಳಲ್ಲಿ ಕೆಲವು ಗುಂಪುಗಳಿವೆ – ಒಂಭತ್ತುಮಂದಿ ಬಲದೇವರು, ಒಂಭತ್ತು ಮಂದಿ ವಾಸುದೇವರು, ಒಂಭತ್ತು ಮಂದಿ ಪ್ರತಿವಾಸುದೇವರು. ಬಲದೇವ ವಾಸುದೇವರು ಅಣ್ಣತಮ್ಮಂದಿರ ಜೋಡಿಗಳು ಅವರ ವಿರೋಧಿಗಳು ಪ್ರತಿವಾಸುದೇವರು ಈ ಮೂರು ಗುಂಪಿನವರೂ ಜಿನಭಕ್ತರು, ಅಹಿಂಸಾವಾದಿಗಳು ಉದಾಹರಣೆಗೆ ಜೈನ ರಾಮಾಯಣದ ಪ್ರಕಾರ ರಾಮನು ಬಲದೇವ, ಲಕ್ಷ್ಮಣನು ವಾಸುದೇವ. ರಾವಣನು ಪ್ರತಿ ವಾಸುದೇವ. ಈ ರಾವಣ ವಸ್ತುತಃ ಪರನಾರೀ ಸೋದರ, ವಿಧಿವಶಾತ್ ಸೀತೆಯನ್ನು ಮೋಹಿಸಿ ಕದ್ದ. ಬಳಿಕ ಅವಳ ಪತಿನಿಷ್ಠೆ ಕಂಡು ತನ್ನ ತಪ್ಪಿಗೆ ಪಶ್ಚಾತ್ತಾಪ ಪಟ್ಟ. ರಾಮಲಕ್ಷ್ಮಣರನ್ನು ಯುದ್ಧದಲ್ಲಿ ಸೆರೆಹಿಡಿದು, ಬಳಿಕ ಸೀತೆಯನ್ನು ಅವರಿಗೇ ಒಪ್ಪಿಸಬೇಕೆಂದಿದ್ದ. ಆದರೆ ಲಕ್ಷ್ಮಣನಿಂದ ಹತನಾದ ಈ ಹಿಂಸೆಯ ಫಲವಾಗಿ ಲಕ್ಷ್ಮಣನಿಗೆ ಅನೇಕ ಜನ್ಮ ಪ್ರಾಪ್ತವಾಯಿತು. ರಾಮನಾದರೋ ಆ ಜನ್ಮದಲ್ಲಿಯೇ ಜ್ಞಾನಸಂಪಾದಿಸಿ ಕೇವಲಿಯಾದ. ಹೀಗೆ ರಾವಣನನ್ನು ಕೊಂದ ಪಾಪದಿಂದ ವಾಸುದೇವ ನಾನಾ ಜನ್ಮ ಪಡೆದನೆಂದರೆ ನರಕದಲ್ಲೂ ಹುಟ್ಟಿದನೆಂದಂತಾಯಿತು.

"ನಿರನಿಷ್ಠೋ ನಿರವದ್ಯಃ" ಎಂಬ ಶ್ರುತಿಯು ಸ್ಪಷ್ಟವಾಗಿ ನಾರಾಯಣನು ಪಾಪಾದಿ ದೋಷರಹಿತನೆನ್ನುತ್ತಿದೆಯಾದರೂ ಜೈನಮತದಲ್ಲಿ ಶ್ರುತಿ ಅಪ್ರಮಾಣವಾಗಿರುವುದರಿಂದ ಅವರ ಮುಂದೆ ಅದನ್ನು ಹೇಳಿ ಫಲವಿಲ್ಲ. ಅವರು ವೇದವನ್ನು ಕಾಲಾಸುರನಿಂದ ನಿರ್ಮಿತವೆನ್ನುತ್ತಾರೆ. ಇದಕ್ಕೆ ಸಮಾಧಾನವನ್ನು ಕಲ್ಪಲತೆಯಲ್ಲಿ ಹೇಳಿದೆ–

"ಕಶ್ಯಪನಿಂದ ದಿತಿಯಲ್ಲಿ ಹುಟ್ಟಿದ ಕಾಲಾಸುರನು ಕಶ್ಯಪರ ತಾತನಾದ ಚತುರ್ಮುಖ ಬ್ರಹ್ಮನಿಗಿಂತ ಹಿಂದೆ ಇರುವುದು ಅಸಂಭವ. ಚತುರ್ಮುಖನನ್ನು ಆದಿ ಸೃಷ್ಟಿಯಲ್ಲಿ ಹುಟ್ಟಿಸಿ ಅವನಿಗೆ ವೇದಗಳನ್ನು ಉಪದೇಶಿಸಿದನಂತೆ, ನಾರಾಯಣ. ಇದು ವೇದದಲ್ಲಿ ಹೇಳಿದೆ–

ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ
ಯೋ ವೈ ವೇದಾಂಶ್ಚ ಪ್ರಹಿಣೋತಿತಸ್ಮೈ ।

ವಸ್ತುತಃ ಕಾಲಾಸುರನು ದೇವಬ್ರಾಹ್ಮಣ ನಿಂದೆಗಾಗಿ ವೇದವಾಕ್ಯಗಳಂತೆಯೇ ಕಾಣುವ ಕೆಲವು ಅಣಕು ನುಡಿಗಳನ್ನಾಡಿ ಅವನ್ನು ವೇದಗಳೆಂದು ಪ್ರಚಾರಮಾಡಿದ್ದಾನೆ. ಆದ್ದರಿಂದಲೇ ಕರ್ಣಾಟಕದಲ್ಲಿ ಎಲ್ಲರೂ ಹೇಳುವ ಒಂದು ಗಾದೆ – "ಕಾಲಾಸುರನ ವೇದದಂತೆ ಏಕೆ ಅಬದ್ಧ ಮಾತನಾಡುವಿ ?" ಎನ್ನುತ್ತದೆ. ಜೈಮಿನಿಭಾರತ, ಚಂಪೂ ರಾಮಾಯಣ ಮುಂತಾದ ಗ್ರಂಥಗಳು ಸಂಸ್ಕೃತದಲ್ಲಿ ಇವೆ. ಪ್ರಾಕೃತ ಭಾಷೆಗಳಲ್ಲಿಯೂ ಭಾರತ ಭಾಗವತ ರಾಮಾಯಣಗಳಿವೆ. ಅಂದರೆ ಮೂಲ ಭಾರತ ರಾಮಾಯಣಾದಿಗಳನ್ನು ಜೈಮಿನಿ ಮುಂತಾದವರೇ ರಚಿಸಿದರೆನ್ನಬಹುದೇ ? ಅಸುರರೇ ವೇದಗಳನ್ನು ಬರೆದಿದ್ದರೆ ಅದರಲ್ಲಿ ದೇವತೆಗಳ ಸ್ತುತಿ, ತಮ್ಮ ಕುಲನಾಶಕ್ಕಾಗಿ ಇರುವ ರಕ್ಷೋಘ್ನ ಸೂಕ್ತದಂಥ ಮಂತ್ರಗಳು, ಹಿಂಸಾಪ್ರಿಯರಾದ ತಮಗೆ ಹಿತವಲ್ಲದ 'ಮಾಹಿಂಸ್ಯಾತ್ ಸರ್ವಾಭೂತಾನಿ' ಎಂದು ಮುಂತಾದ ನಿಷೇಧಗಳು ಹೇಗೆ ಬಂದುವು ? ಯಜ್ಞಬಾಹ್ಯ ಹಿಂಸೆಯನ್ನು ನಿಷೇಧಿಸಿ ತಮ್ಮ ಹೊಟ್ಟೆಗೇ ಆಹಾರವಿಲ್ಲದಂತೆ ಮಾಡಿ ತಮ್ಮ ಶತ್ರುಗಳಾದ ದೇವತೆಗಳಿಗೆ ಆಹಾರ ದೊರಕಿಸುವ ಯಜ್ಞಪಶು ಹಿಂಸೆಯನ್ನು ವಿಧಿಸುವಷ್ಟು ಮೂರ್ಖರೆ ಅಸುರರು ? ಆದ್ದರಿಂದ ಅಸುರರು ವೇದವನ್ನು ಮಾಡಿಲ್ಲ. ಚತುರ್ಮುಖನಂತೂ ಭಗವಂತನಿಂದ ವೇದೋಪದೇಶ ಪಡೆದವನು. ಭಗವಂತನೇ ಮಾಡಿದನೆನ್ನಲು ಭಗವಂತನ ಅಸ್ತಿತ್ವವನ್ನೇ ಜೈನರು ಒಪ್ಪುವುದಿಲ್ಲ. ಹೀಗಾಗಿ ವೇದ ಅಪೌರುಷೇಯ, ಪರಮಪ್ರಮಾಣ" ಎಂದು ವಾದದಲ್ಲಿ ಜೈನರನ್ನು ಒಪ್ಪಿಸಿ ಅವರ ಮುಂದೆ 'ನಿರನಿಷ್ಠೋ ನಿರವದ್ಯಃ' ಎಂಬ ಶ್ರುತಿಯನ್ನು ಹೇಳಬೇಕು.

ಆದರೂ ಈ ಶ್ರುತಿಯ ಅರ್ಥ ಸ್ಪಷ್ಟವಿರುವಾಗ 'ಒರೆದು ನೋಡಬೇಕು, ಪರೀಕ್ಷಿಸಿ ನೋಡಬೇಕು' ಎಂದು ಲಕ್ಷ್ಮೀಶೋಭನ ಪದ ಹೇಳುವುದು ಯುಕ್ತವೇ ? ಎಂಬ ಪ್ರಶ್ನೆ ಉಳಿಯುತ್ತದೆ ಆದಕ್ಕೆ ಸಮಾಧಾನ, ಶ್ರುತಿ ಎಷ್ಟೇ ಸ್ಪಷ್ಟವಾಗಿ ಹೇಳುತ್ತಿದ್ದರೂ ಅದರಲ್ಲಿ ತಾತ್ಪರ್ಯವಿಲ್ಲದಿದ್ದರೆ ಒಪ್ಪಲಾಗದು ತಾನೆ !

'ಕೋ ಹಿ ತದ್ವೇದ ಯದ್ಯಮುಷ್ಮಿನ್ ಲೋಕೋऽಸ್ತಿ ವಾ ನ ವೇತಿ'

ಎಂಬಂತೆ ಕೇವಲ ಪ್ರಶಂಸೆ ಏಕಾಗಿರಬಾರದು ? ಪರೀಕ್ಷಿಸಿ ನೋಡಿ ತಾತ್ಪರ್ಯವಿದೆಯೋ ಇಲ್ಲವೇ ಎಂಬುದನ್ನು ತೀರ್ಮಾನಿಸಬೇಕು.

ವಸ್ತುತಃ ಶ್ರುತಿಯಲ್ಲಿ 'ನಿರವದ್ಯ' ಎಂದಿರುವುದರಿಂದ ತಾತ್ಪರ್ಯವಿದೆ ಎನ್ನುವುದು ಸಿದ್ಧವಾಗುತ್ತದೆ. 'ಹರಿಯು ಅನಿಷ್ಟಗಳಿಲ್ಲದವನು ಏಕೆಂದರೆ ಅವನು ನಿರವದ್ಯ, ದೋಷವಿಲ್ಲದವನು' ಎಂದು ಕಾರಣಕೊಟ್ಟು ಸಮರ್ಥಿಸುವುದರಿಂದ ಉಪಪತ್ತಿ ಎಂಬ ತಾತ್ಪರ್ಯಲಿಂಗ ಕಂಡುಬರುತ್ತಿದೆ ಆದ್ದರಿಂದ ಹರಿಯು ನಿರನಿಷ್ಟ ಎಂಬ ವಿಷಯದಲ್ಲಿ ತಾತ್ಪರ್ಯಯುಕ್ತ ಶ್ರುತಿವಾಕ್ಯ ದೊರೆತಂತಾಯಿತು ಜೊತೆಗೆ ಶ್ರುತಿಯಲ್ಲಿಯೋ ಹೇಳಿದ ಒಂದು ಯುಕ್ತಿಯೂ ದೊರೆಯಿತು – ಹರಿಗೆ ಯಾವ ಅನಿಷ್ಟವೂ ಇಲ್ಲ ಏಕೆಂದರೆ ಅನಿಷ್ಟಕ್ಕೆ ಕಾರಣವಾದ ದೋಷ ಒಂದೂ ಇಲ್ಲ ಎಂದು ದೋಷವಿಲ್ಲದಿದ್ದರೂ ಅನಿಷ್ಟ ಬರಲಿ ಎಂದರೆ ಹಾಗನ್ನುವ ಪ್ರತಿವಾದಿ 'ಮರುಳ' ಹುಚ್ಚನೇ ಸರಿ ಕಾರಣವಿಲ್ಲದೆ ಕಾರ್ಯ ಸಂಭವಿಸುವುದೇ ? ಹೀಗೆ ಪ್ರಬಲ ಯುಕ್ತಿ ಇದೆ ಅದರಲ್ಲೂ ಶ್ರುತ್ಯುಕ್ತವಾದ ಯುಕ್ತಿ ಇದೆ ಶ್ರುತಿಯ ಬೆಂಬಲವಿದ್ದರೆ ಸಾಕು, ಯುಕ್ತಿ ಪ್ರಮಾಣವೆ ಶ್ರುತಿಯಲ್ಲೇ ಹೇಳಿದ್ದರೆ ಇನ್ನೇನು ?

ಮೇಲಿನ ವಿಚಾರಸರಣಿಯನ್ನು ವಾದಿರಾಜರು ಸುಧಾಗುರ್ವರ್ಥ ದೀಪಿಕೆಯಲ್ಲಿ ತೋರಿಸಿದ್ದಾರೆ .ಯುಕ್ತಿ ಮಲ್ಲಿಕೆಯಲ್ಲಿ ಇನ್ನೊಂದು ರೀತಿಯಿಂದ ಶ್ರುತ್ಯರ್ಥವನ್ನು ಒರೆದು ನೋಡುವ ವಿಧಾನವನ್ನು ತಿಳಿಸಿದ್ದಾರೆ–

'ನಿರನಿಷ್ಟೋ ನಿರವದ್ಯಃ' ಎಂಬ ಶ್ರುತಿಗೆ ಅದು ಸ್ಪಷ್ಟವಾಗಿ ಹೇಳುವ ಅರ್ಥವನ್ನು ಇಟ್ಟುಕೊಳ್ಳಬೇಕೆ ? ಅಥವಾ ಪುರಾಣಗಳಲ್ಲಿ ಕೆಲವಡೆ ಹರಿಗೆ ರಾಮ ಕೃಷ್ಣಾದ್ಯವತಾರಗಳಲ್ಲಿ ಅನೇಕ ಬಗೆಯ ಕಷ್ಟಗಳು ಬಂದೊದಗಿದುದರ ವರ್ಣನೆ ಇರುವುದರಿಂದ ಅದಕ್ಕೆ ಅನುಗುಣವಾಗಿ ಶ್ರುತಿಗೆ ಬೇರೆ ಅರ್ಥಮಾಡಬೇಕಾಗಬಹುದೆ ? ಎಂಬ ಸಂದೇಹ ಬರಬಹುದು ವಸ್ತುತಃ ಪುರಾಣಕ್ಕೆ ಹೆಚ್ಚಿನ ಪ್ರಾಶಸ್ತ್ಯ ನೀಡಿ ಸ್ಪಷ್ಟವಾದ ಶ್ರುತಿಗೆ ಬೇರೆ ಅರ್ಥ ಕಲ್ಪಿಸುವುದು ಯುಕ್ತವಲ್ಲ.

'ಶ್ರುತ್ಯೇಕ ಗಮ್ಯೇऽರ್ಥೇ ಶ್ರುತಿರೇವ ಬಲೀಯಸೀ ।'

ಕೇವಲ ವೇದದಿಂದ ಮಾತ್ರ ತಿಳಿಯಬಹುದಾದ ವಿಷಯದಲ್ಲಿ ವೇದವೇ ಎಲ್ಲಕ್ಕಿಂತ ಪ್ರಬಲ ಆಧಾರ ಬೇರೆ ಪ್ರಮಾಣಗಳು ಆ ವಿಷಯದ ಬಗ್ಗೆ ಏನು ಹೇಳಿದರೂ ವೇದದ ಹೇಳಿಕೆಯನ್ನು ಅನುಸರಿಸಿರಬೇಕೇ ಹೊರತು ವಿರುದ್ಧವಾಗಿ ಹೇಳಿದರೆ ಅದಕ್ಕೆ ಬೆಲೆ ಇಲ್ಲ ಒಂದು ಉದಾಹರಣೆ – ಒಂದು ಶ್ರೀಗಂಧದ ತುಂಡನ್ನು ಕಣ್ಣಿಂದ ನೋಡಿದಾಗ 'ಇದು ಪರಿಮಳ ಯುಕ್ತವಾದ ಶ್ರೀಗಂಧದ ತುಂಡು' ಎಂದು ನಾವು ಅಂದುಕೊಂಡರೆ ಅದು ಹಿಂದೊಮ್ಮೆ ಎಂದಾದರೂ ಅದನ್ನು ಮೂಸಿ ನೋಡಿದ್ದುದರ ಪರಿಣಾಮ. ಮೂಗಿನಿಂದ ಹಿಂದೆ ಬಂದಿದ್ದ ಅನುಭವವನ್ನು ಕಣ್ಣು ಏನೂ ವ್ಯತ್ಯಾಸ ಮಾಡದೆ ಅದನ್ನೂ ಸೇರಿಸಿಕೊಂಡೆ ತಾನೊಂದು ಅನುಭವ ನೀಡುತ್ತದೆ. ಪರಿಮಳದ ಅನುಭವ ಮೂಗಿನ ಕಾರ್ಯವ್ಯಾಪ್ತಿಗೆ ಮಾತ್ರ ಒಳಪಟ್ಟಿದುದು ಕಣ್ಣಿಗೆ ಆ ವಿಷಯದಲ್ಲಿ ಸಾಮರ್ಥ್ಯವಿಲ್ಲ. ಶ್ರೀಗಂಧದ ತುಂಡಿನ ಅನುಭವ ಮಾತ್ರ ಕಣ್ಣಿಂದ ಆಗುತ್ತದೆ. ಆದ್ದರಿಂದ ಪರಿಮಳದ ಅನುಭವವನ್ನು ಕಣ್ಣು ತಿರಸ್ಕರಿಸಲಾರದು. ವಿರುದ್ಧವಾಗಿಯೂ ಏನೂ ಅನುಭವ ನೀಡಲಾರದು ಹಾಗೇ ಪ್ರಕೃತದಲ್ಲಿ ಹರಿಯ ಸ್ವರೂಪ ವೇದೈಕ ಸಮಧಿಗಮ್ಯ. ಅದನ್ನು ಸ್ಪಷ್ಟವಾಗಿ ವೇದವು ನಿರ್ದೋಷವೆಂದು ವರ್ಣಿಸಿರುವಾಗ ಪುರಾಣವು ಅದನ್ನು ಅಲ್ಲಗಳೆಯಲಾರದು ಆದ್ದರಿಂದ 'ನಿರಣಿಷ್ಟೋ ನಿರವದ್ಯಃ' ಎಂಬ ಶ್ರುತಿಗೆ ಬೇರೆ ಅರ್ಥಮಾಡುವ ಪ್ರಸಂಗವೆ ಇಲ್ಲ ಹರಿಯು ದೋಷದೂರನಾದ್ದರಿಂದ ದುಃಖದೂರನೂ ಆಗಿದ್ದಾನೆ

'ದುರಿತಾತಿ ದೂರನಿಗೆ' ಎಂದು ಲಕ್ಷ್ಮೀ ಶೋಭನ ಪದದಲ್ಲಿ ಇನ್ನೊಂದು ಯುಕ್ತಿಯನ್ನು ಹೇಳಿದೆ ಅದನ್ನೂ ಯುಕ್ತಿಮಲ್ಲಿಕೆ ಹೀಗೆ ಹೇಳಿದೆ–

ಪ್ರಾಗ್ಜನ್ಮಾರ್ಜಿತ ದುಷ್ಕರ್ಮ ದುಃಖಮೂಲಂ ಧ್ರುವಂ ನೃಣಾಂ ।
ನ ಕರ್ಮಣಾ ವರ್ಧತೇ ಯೋ ನೋ ಕನೀಯಾನ್ ಕುತೋऽಸ್ಯ ತತ್ ।

'ಪೂರ್ವಜನ್ಮದಲ್ಲಿ ಮಾಡಿದ ಪಾಪವೆ ಮುಖ್ಯವಾಗಿ ದುಃಖ ಕಾರಣ ಯಾವ ಕರ್ಮದಿಂದಲೂ ಹರಿಗೆ ಅವನ ಸ್ಥಿತಿಯಲ್ಲಿ ಏರುಪೇರು ಇರುವುದಿಲ್ಲ 'ನ ಕರ್ಮಣಾ ವರ್ಧತೇ ನೋ ಕನೀಯಾನ್' ಎಂದು ಶ್ರುತಿ ಇದನ್ನೇ ಹೇಳಿದೆ.'

ಆದ್ದರಿಂದ 'ಹರಿ ಪಾಪರಹಿತನಾದುದರಿಂದ ದುಃಖಕ್ಕೀಡಾಗುವ ಪ್ರಸಂಗವಿಲ್ಲ. ಹೀಗೆ ಸ್ಪಷ್ಟವಾದ ಶ್ರುತಿ, ಶ್ರುತಿಯಲ್ಲಿಯೆ ಹೇಳಿದ, ಶ್ರುತಿಯ ಬೆಂಬಲವನ್ನೂ ಪಡೆದ ಯುಕ್ತಿ ಇವುಗಳನ್ನೆಲ್ಲ ಬದಿಗಿಟ್ಟು ಕೇವಲ ಪುರಾಣಗಳ ಬಲದಿಂದ ಹರಿಗೆ ನರಕಯಾತನೆ ಸಂಭವವಿದೆ ಎನ್ನುವುದು ವಿವೇಕಿಗಳ ಲಕ್ಷಣವಲ್ಲ ಜೈನರು ನಮ್ಮ ಪುರಾಣಗಳನ್ನು ಮಾನ್ಯ ಮಾಡುವರೆಂದಲ್ಲ ನಮ್ಮೊಡನೆ ವಾದಮಾಡುವ ಪ್ರಸಂಗದಲ್ಲಿ ಅವನ್ನು ಎತ್ತಿ ತೋರಬಹುದು. ಅಥವಾ ಜೈನ

ಪುರಾಣಗಳನ್ನೇ ನಮ್ಮ ಮುಂದಿಡಬಹುದು ಅಂತೂ ವೇದ ವಿರುದ್ಧವಾಗಿ ಅವರು ಏನು ಹೇಳಿದರೂ ಅದು ಖಂಡನಾರ್ಹವೆಂಬ ಅಭಿಪ್ರಾಯದಿಂದ 'ಮರುಳ, ಮನ ಬಂದಂತೆ ನುಡಿಯದಿರು' ಎನ್ನುತ್ತಿದ್ದಾಳೆ ಮಹಾಲಕ್ಷ್ಮಿ

— ೨೯ —

**ಒಂದೊಂದು ಗುಣಗಳು ಇದ್ದಾವು ಇವರಲ್ಲಿ**
**ಸಂದಣಿಸಿವೆ ಬಹು ದೋಷ ।**
**ಕುಂದೆಳ್ಳಷ್ಟಿಲ್ಲದ ಮುಕುಂದನೆ ತನಗೆಂದು**
**ಇಂದಿರೆ ಪತಿಯ ನೆನೆದಳು ॥**

ಈ ದೇವತೆಗಳಲ್ಲೆಲ್ಲ ಒಂದೊಂದು ಗುಣಗಳಿರಬಹುದು. ಆದರೆ ದೋಷಗಳು ಮಾತ್ರ ಬಹಳ ಇವೆ ಎಳ್ಳಷ್ಟೂ ದೋಷವಿಲ್ಲದ ಶ್ರೀಹರಿಯೆ ತನಗೆ ಯೋಗ್ಯನಾದ ಪತಿ ಎಂದು ಆಲೋಚಿಸಿ ಅನಾದಿಕಾಲದಿಂದಲೂ ತನ್ನ ಪತಿಯೆ ಆಗಿರುವ ಆತನನ್ನೆ ಮಹಾಲಕ್ಷ್ಮಿ ನೆನೆದಳು

ಶ್ರೀಹರಿಯೊಡನೆ ಹೋಲಿಸಿದಾಗ ಬ್ರಹ್ಮಾದಿ ದೇವತೆಗಳೆಲ್ಲರ ಜ್ಞಾನಾನಂದಾದಿ ಗುಣಗಳು ಸಾಗರದ ಮುಂದೆ ಹನಿಯಂತೆ ಅತ್ಯಲ್ಪ, ಇದ್ದರೂ ಇಲ್ಲದಂತೆಯೆ. ದುಗ್ಗಾಣಿ ಕಾಸು ಇದೆ ಎಂದು ಧನಿಕರೆನ್ನುತ್ತಾರೆಯೆ ? ದೋಷಗಳ ಮಟ್ಟಿಗೆ ಹೇಳುವುದಾದರೆ ಯಾವ ಸಂಕೋಚವೂ ಬೇಡ

'ಯಃ ಸದೋಷಃ ಸಾಂಜನಃ ಸಜನಿಃ ಸ ಜೀವಃ'

ಎನ್ನುತ್ತ ಕಾಷಾಯಣ ಶ್ರುತಿಯು ಪಾರತಂತ್ರ್ಯಾದಿ ದೋಷಗಳಿಂದ ಕೂಡಿರುವುದು ಜೀವರ ಒಂದು ಲಕ್ಷಣವೆಂದೆ ಹೇಳಿದೆ. ಜೀವರೆಲ್ಲರೂ ಪ್ರಕೃತಿಬದ್ಧರು ಪ್ರಕೃತಿಯಲ್ಲಿ ಸತ್ವಗುಣ ಒಂದೇ– ಅದು ಅಧಿಕವಾಗಿದ್ದರೆ ಮಾತ್ರ- ಜ್ಞಾನ ಆನಂದಾದಿ ಗುಣವನ್ನು ಜೀವರಿಗೆ ಕೊಟ್ಟೀತು ಇನ್ನುಳಿದ ರಜ ತಮ ಎಂಬ ಎರಡು ಗುಣಗಳು ದೋಷಗಳನ್ನೇ ಕೊಡುವುವು ಹೀಗಾಗಿ ಗುಣಕ್ಕಿಂತ ದೋಷ ಹೆಚ್ಚು ಈ ಅಭಿಪ್ರಾಯದಿಂದ 'ಒಂದೊಂದು ಗುಣಗಳು ಇದ್ದಾವು' ಇವೆ ಎನ್ನುವುದು ಕಷ್ಟ. ದೋಷಗಳು ಮಾತ್ರ ಬಹು 'ಸಂದಣಿಸಿವೆ', ಸಂಶಯವಿಲ್ಲ ಎನ್ನಲಾಗಿದೆ.

ಭಾಗವತದಲ್ಲಿ 'ನೂನಂ ತಪೋ ಯತ್ರ ನ ಮನ್ಯುನಿರ್ಜಯಃ' ಎಂದು ಮುಂತಾಗಿ ಹೇಳಿದ ದೋಷಗಳನ್ನೇ 'ಕೆಲವರು ತಲೆಯೂರಿ ತಪಗೈದು ಪುಣ್ಯವಗಳಿಸಿದ್ದರೇನೂ ಫಲವಿಲ್ಲ' ಎಂದು ಲಕ್ಷ್ಮೀ ಶೋಭನ ಪದದಲ್ಲಿ ವರ್ಣಿಸಿದೆ ಆದರೂ ಬೇರೆ ಪುರಾಣಗಳಲ್ಲಿ ಇನ್ನೂ ಬೇರೆಯೆ ದೋಷಗಳನ್ನು ಹೇಳಿದ್ದುಂಟು.

ಭಾಗವತ ವ್ಯಾಖ್ಯಾನಕಾರರು ಒಂದು ಪುರಾಣ ವಚನವನ್ನು ಹೀಗೆ ಉದಾಹರಿಸಿದ್ದಾರೆ–

ಏಷ ಬ್ರಹ್ಮಾತಿವೃದ್ಧಸ್ತಪತಿ ದಿನಪತಿಶ್ಚಂಚಲೋ ಮಾತರಿಶ್ವಾ
ದಿಗ್ವಾಸಾ ನೀಲಕಂಠಸ್ತ್ರಿದಶಪತಿರಸೌ ಗರ್ವಿತಃ ಕ್ಷೀಯತೇಽಬ್ಜಃ ।
ಇತ್ಥಂ ದೇವ್ಯಾ ವಿಚಿಂತ್ಯ ಭ್ರಮರಕುಲಕಲಾಗೀತಶಬ್ದ ಪ್ರಫುಲ್ಲಾ
ದತ್ತಾ ಮಾಲಾ ಮುರಾರೇಃ ಸುರತರುಕುಸುಮಾಲಂಕೃತಾ ಪಾತು
ಯುಷ್ಮಾನ್ ॥

'ಬ್ರಹ್ಮನು ಹಣ್ಣು ಹಣ್ಣು ಮುದುಕ ಸೂರ್ಯನು ಉರಿಯುವ ಕೆಂಡ ವಾಯು ನಿಂತಲ್ಲಿ ನಿಲ್ಲದವ ಶಿವನು ದಿಗಂಬರ. ದೇವೇಂದ್ರ ಮಹಾಗರ್ವಿ ಚಂದ್ರನು ಕ್ಷಯರೋಗಿ ಎಂದು ಮುಂತಾಗಿ ಆಲೋಚಿಸಿ ದುಂಬಿಗಳ ಮಧುರ ಧ್ವನಿಯುಳ್ಳ ಅರಳಿದ ಕಲ್ಪವೃಕ್ಷದ ಹೂಗಳ ಮಾಲೆಯನ್ನು ದೇವಿ ಹರಿಯ ಕೊರಳಿಗೆ ಹಾಕಿದಳು '

ರುಕ್ಮಿಣೀಶ ವಿಜಯದಲ್ಲಿ–

ಉಗ್ರೋಽಯಂ ಸಖಿ ಚಂಚಲೋಽಯಮಮಲೇ ಸೋಽಯಂ ರವೋ
ಗೂಢಪಾತ್ ।
ವೃದ್ಧೋಽಸೌ ಜ್ವಲನೋಽಯಮೇಷ ತಪನಃ ಸದ್ವಕ್ರತಂಡೋ ಹ್ಯಸೌ ।
ಮುಗ್ಧೇಽದಂತಕ ಏಷ ಜಲರಾಟ್ ಗೋತ್ರಾಸಹೋಽಸೌ ಕ್ಷಿತಾ–
ವಿತ್ಯಾದ್ಯಾಭಿಧಯೈವ ಧಿಕ್ಕೃತಸುರಾ ಶ್ರೀರಾಸಸಾದಾಚ್ಯುತಂ ॥

'ಶಿವನ ಹೆಸರೇ ಉಗ್ರ ಎಂದು ಭಯಂಕರನೆಂದರ್ಥ ವಾಯು ಹೇಗೂ ಚಂಚಲ, ಶೇಷನ ಹೆಸರೇ ಗೂಢಪಾತ್, ಕಾಲುಗಳೆಲ್ಲಿವೆ ತಿಳಿಯದು. ಬ್ರಹ್ಮನು ವೃದ್ಧ. ಅಗ್ನಿಯು ಉರಿಯುವವ, ಸೂರ್ಯನೂ ಉರಿಯುವವ ಗರುಡನ ಮೂಗು ನೆಟ್ಟಗಿಲ್ಲ. ಪೂಷನಿಗೆ ಹಲ್ಲಿಲ್ಲ ವರುಣನ ಹೆಸರೇ ಜಲರಾಟ್ ಜಲಾಧಿಪತಿಯಾದರೇನು, ಇನ್ನೊಂದು ಅರ್ಥದಲ್ಲಿ ಜಡರಿಗೆ ಅಂದರೆ ಮೂರ್ಖರಿಗೆ ಶಿಖಾಮಣಿ ಇಂದ್ರನು ಗೋತ್ರಾಸಹ, ಪರ್ವತವೈರಿ, ಇನ್ನೊಂದು ಅರ್ಥದಲ್ಲಿ ಕುಲಗೋತ್ರವಿಲ್ಲದವ. ಹೀಗೆ ದೇವತೆಗಳ ಹೆಸರುಗಳೆ ಅವರ ದೋಷಗಳನ್ನು ಎತ್ತಿ ಹೇಳುತ್ತವೆ ಎಂದುಕೊಳ್ಳುತ್ತ ರುಕ್ಮಿಣಿಯು ಶ್ರೀಕೃಷ್ಣನನ್ನೇ ಸೇರಿದಳು '

ರುಕ್ಮಿಣೀಶ ವಿಜಯದಲ್ಲಿಯೆ ಇನ್ನೊಂದು ಪದ್ಯ–

ವೇಧಾ ವೈದಿಕವೌಲಿರೇಷ ಪವನೋ ಮಂತ್ರಂ ಜಪನ್ ಸಂತತಂ
ಶರ್ವೋಽಸೌ ಸುವಿರಕ್ತಧೀಃ ಸ ಮಘವಾ ವ್ಯಾಪಾರಭಾರಾಕುಲಃ ।
ಸೂರ್ಯಃ ಪರ್ಯಟನಪ್ರಿಯಃ ಸ ತು ಶಶೀ ದೋಷಾಕರೋಽಸೌ
ಸ್ಮರೋಽ
ನಂಗಶ್ಚೇತ್ಯಖಿಲಾನುಪೇಕ್ಷ್ಯ ಕಮಲಾ ವವ್ರೇ ಯದೂನಾಂ ಪತಿಂ ॥

'ಬ್ರಹ್ಮನು ಗೊಡ್ಡು ವೈದಿಕಬ್ರಾಹ್ಮಣ ವಾಯುವೂ ಸದಾ ಮಂತ್ರಜಪ ಮಾಡುವವ ಜೀವಿಗಳು ಮಲಗಿ ನಿದ್ರಿಸುವಾಗಲೂ ಈತ ಶ್ವಾಸ ಜಪ ಮಾಡುತ್ತಾನೆ ಶಿವನು ಮಹಾವಿರಾಗಿ ಇಂದ್ರನಿಗೆ ಸದಾ ಲೋಕವಾಳುವ ಚಿಂತೆ, ಸೂರ್ಯನೊಬ್ಬ ಅಲೆಮಾರಿ. ಚಂದ್ರನ ಹೆಸರೆ ದೋಷಾಕರ. ಎಂದರೆ ದೋಷಗಳೆಲ್ಲ ಅವನಲ್ಲೆ ಇರುತ್ತವೆ ಮನ್ಮಥನಿಗೆ ಒಂದೆರಡು ಅಂಗ ವೈಕಲ್ಯವಲ್ಲ, ಶರೀರವೆ ಇಲ್ಲದವನಾತ ಹೀಗೆ ಎಲ್ಲ ದೇವತೆಗಳನ್ನು ಬಿಟ್ಟು ರುಕ್ಮಿಣಿ ಕೃಷ್ಣನನ್ನೇ ವರಿಸಿದಳು.'

ಹೀಗೆ ದೇವತೆಗಳ ದೋಷಗಳನ್ನು ಹೇಳುತ್ತಾ ಹೋದರೆ ಕೊನೆಯಲ್ಲಿ ? 'ಸಂದಣಿಸಿವೆ ಬಹುದೋಷ' ಎಂದು ಒಂದುಮಾತಿನಲ್ಲಿ ಉಪಸಂಹಾರ ಮಾಡುವುದೇ ಒಳಿತು ಮಹಾತ್ಮರ ದೋಷಗಳನ್ನು ಮತ್ತೂ ಮತ್ತೂ ಹೇಳುವುದರಲ್ಲೇನು ಔಚಿತ್ಯವಿದೆ ?

ಆದರೆ ದೋಷವರ್ಣನೆಯು ಉಪಸಂಹಾರದೃಷ್ಟಿ ಇರುತ್ತಿದ್ದರೆ, 'ಅವನೊಬ್ಬನೆ ನಿರನಿಷ್ಟ ನಿರವದ್ಯ' ಎಂದೊಡನೆಯೆ ಪ್ರಕೃತದ ನುಡಿ ಬರಬೇಕಾಗಿತ್ತು ನಡುವೆ 'ನರಹರಿಗೆ ನರಕಯಾತನೆ ಸಲ್ಲ' ಎಂದು ಶ್ರೀಹರಿಯ ನಿರ್ದೋಷತ್ವ ವಿಚಾರವೇಕೆ ? ಅವನೊಬ್ಬನೆ ನಿರನಿಷ್ಟ ನಿರವದ್ಯ ಎಂದಾಗ 'ನಿರನಿಷ್ಟೋ ನಿರವದ್ಯಃ' ಎಂಬ ಶ್ರುತಿಯು ನೆನಪಾಯಿತು. ಆ ಶ್ರುತಿಯು ಬಲದಿಂದ ಶ್ರೀಹರಿಗೆ ನರಕಯಾತನೆ ನಿರಾಕರಿಸಬಹುದು ಎಂದು ಆತುರದಲ್ಲಿ ಆ ನುಡಿ ನಡುವೆ ಬಂದುಬಿಟ್ಟಿತು ಎನ್ನೋಣವೆ ? ಬೇಡ ಹಾಗೆ ಹೇಳಿದರೆ ನೆನಪಾದುದನ್ನೆಲ್ಲ, ಸಂಗತಿ ಇಲ್ಲದಿದ್ದರೂ ಹೇಳಿದೆ ಎಂದಂತಾಗುತ್ತದೆ. ಅದಕ್ಕಿಂತ "ದೇವತೆಗಳ ದೋಷವರ್ಣನೆಯಲ್ಲಿ ತಾತ್ಪರ್ಯ ಅಷ್ಟಾಗಿಲ್ಲ, ಶ್ರೀಹರಿಯ ನಿರ್ದೋಷತ್ವ ವಿಚಾರದಲ್ಲಿಯೆ ಹೆಚ್ಚಿನ ಆದರ, 'ನಿರನಿಷ್ಟೋ ನಿರವದ್ಯಃ' ಎಂಬ ಶ್ರುತಿಯನ್ನು ತೋರಿಸಿ ಕೊಟ್ಟಮೇಲೆ ಅದರ ಪುಷ್ಟಿಗಾಗಿ ಇನ್ನು ಯುಕ್ತಿಗಳನ್ನು ಹೇಳಬೇಕು, ಅದರ ಉಪಕ್ರಮವಿದು 'ಕುಂದೆಳ್ಳಷ್ಟಿಲ್ಲದ ಮುಕುಂದನಿ' ಎಂದು ಹರಿಯ ನಿರ್ದೋಷತ್ವದಲ್ಲಿರುವ ವೈಶಿಷ್ಟ್ಯ ಎದ್ದು ಕಾಣುವಂತೆ, ದೇವತೆಗಳಲ್ಲಿ ಬಹುದೋಷವಿದೆ, ಹೋಲಿಕೆಯೆ ಇಲ್ಲ ಎನ್ನಲು 'ಸಂದಣಿಸಿವೆ ಬಹುದೋಷ' ಎಂದೂ ಎನ್ನಲಾಗಿದೆ" ಎನ್ನೋಣ, ಹರಿಯ ನಿರ್ದೋಷತ್ವ ವಿಷಯದಲ್ಲಿ ಇನ್ನು ಮುಂದಿನ ನುಡಿಗಳಲ್ಲೆಲ್ಲ 'ದೇವರ್ಷಿವಿಪ್ರರ

ಕೊಂದು ತನ್ನುದರದೊಳಿಟ್ಟು ತೀವಿದ್ದ ಹರಿಗೆ ದುರಿತವ ನೆನೆವರೆ ?' ಎಂದು ಮುಂತಾಗಿ ಪ್ರಬಲ ಯುಕ್ತಿಗಳನ್ನೇ ಹೇಳ ಹೊರಟಿರುವುದು ಸ್ಪಷ್ಟ 'ಕುಂದೆಳ್ಳಷ್ಟಿಲ್ಲದ ಮುಕುಂದ' ನೆಂಬುದು ಅದಕ್ಕೆ ಉಪಕ್ರಮ

ವಸ್ತುತಃ ಈ ಪ್ರಸಂಗದಲ್ಲಿ ಹರಿಯು ನಿರ್ದೋಷತ್ವ ವಿಚಾರಕ್ಕಿಂತ ಗುಣಪೂರ್ಣತ್ವ ವಿಚಾರದಲ್ಲಿಯೆ ತಾತ್ಪರ್ಯವೆನ್ನುವುದು ಭಾಗವತ ಮೂಲದಲ್ಲಿ ಹೆಚ್ಚು ಸ್ಪಷ್ಟವಿದೆ. 'ಏವಂ ವಿಮೃಶ್ಯಾವ್ಯಭಿಚಾರಿ ಸದ್ಗುಣಂ' ಎಂಬ ಮಾತು ಅಲ್ಲಿ ಈ ಸಂದರ್ಭದಲ್ಲಿ ಬಂದಿದೆ. ಹರಿಯು ಸದ್ಗುಣಗಳು ಅವ್ಯಭಿಚಾರಿ ಎಂದರೇನು ? "ಒಂದು ಗುಣವಿದ್ದರೆ ಇನ್ನೊಂದಿಲ್ಲವೆಂದೂ ಅವನಲ್ಲಿರುವ ಗುಣವು ಅವನೊಬ್ಬನಲ್ಲೆ ಇರುವಂಥಹುದಲ್ಲ, ಬೇರೆಯುವರಲ್ಲೂ ಕಂಡುಬರುತ್ತದೆ ಎಂದೂ ಎರಡು ಬಗೆಯ ವ್ಯಭಿಚಾರ ಜೀವರ ಗುಣಗಳಲ್ಲಿವೆ ಹರಿಯು ಗುಣಗಳಲ್ಲಿ ಆವೆರಡೂ ಇಲ್ಲ" ಎಂದು ಉಪನ್ಯಾಸರತ್ನ ಮಾಲೆಯಲ್ಲಿ ವಾದಿರಾಜರು ಒಂದು ಅಪೂರ್ವ ವ್ಯಾಖ್ಯಾನಮಾಡಿದ್ದಾರೆ 'ಏವಂ ವಿಮೃಶ್ಯಾವ್ಯಭಿಚಾರಿಸದ್ಗುಣಂ' ಎಂದರೆ ಹೀಗೆ ಹರಿಯು ಸದ್ಗುಣಗಳಲ್ಲಿ ವ್ಯಭಿಚಾರವಿಲ್ಲವೆಂಬುದನ್ನು ವಿಮರ್ಶಿಸಿ' ದೇವಿ ಹರಿಯುನ್ನು ವರಿಸಿದಳು ಎಂದು ಅರ್ಥವಾಗುತ್ತದೆ ದೇವಿ ಇಷ್ಟರವರೆಗೆ ವಿಮರ್ಶೆ ಮಾಡಿದುದಂತೂ ದೇವತೆಗಳ ದೋಷಗಳನ್ನೇ ಎಂಬುದು ಸ್ಪಷ್ಟ. ಆದ್ದರಿಂದ ದೇವತೆಗಳ ದೋಷ ವಿಚಾರವೆ ಹರಿಯು ಗುಣಪಿಚಾರವೆಂಬುದು ಭಾಗವತದ ವಿವಕ್ಷೆ ಎಂದಂತಾಯಿತು ದೇವತೆಗಳಲ್ಲಿ ಕಾಮುಕ್ರೋಧಾದಿ ದೋಷವಿದೆ ಎಂದು ಹಿಂದೆ ಹೇಳಿದ್ದರೆ ಆ ಮಾತಿಗೆ ಕಾಮಾದಿ ನಿಗ್ರಹ ರೂಪಗುಣವು ಹರಿಯಲ್ಲಿರುವಂತೆ ಪೂರ್ಣಪ್ರಮಾಣದಲ್ಲಿ ಇಲ್ಲವೆಂದು ಅಭಿಪ್ರಾಯು ಗುಣ ಅಲ್ಪವಾಗಿದ್ದರೂ ಅದನ್ನು ದೋಷವೆಂದು ವ್ಯವಹರಿಸುವುದುಂಟು. ಉದಾ 'ಋಜುಗಳಲ್ಲಿಯೂ ಮುಕ್ತಿಗಾಗಿ ಮಹಾಪ್ರಯತ್ನ ಮಾಡದಿರುವುದೆಂಬ ದೋಷವಿದೆ ಎಂದು ಹೇಳಿ 'ಸ ಗುಣಾಲ್ಪತ್ವಮಾತ್ರತ್ವಾತ್' ಅಲ್ಪಗುಣವಾದುದರಿಂದ ಅದೊಂದು ದೋಷ ಎಂದಿದೆ ಈಗ ದೇವತೆಗಳ ದೋಷವಿಚಾರವೆಲ್ಲ ಹರಿಯು ಗುಣಗಳ ವೈಶಿಷ್ಟ್ಯ ವಿಚಾರವೆ ಆಯಿತು, ಔಚಿತ್ಯ ಪೂರ್ಣವೂ ಆಯಿತು 'ಯಃ ಸದೋಷಃ ಸ ಜೀವಃ' ಎಂಬ ಶ್ರುತಿಯುನ್ನು ಅರ್ಥೈಸುವಾಗ ಜೀವಯೋಗ್ಯತಾನುಗುಣವಾಗಿ ದೋಷವಾಗಲಿ ಅಲ್ಪಗುಣವಾಗಲಿ ಜೀವರ ಲಕ್ಷಣವೆಂದೆನಿಸುತ್ತದೆ ಎನ್ನಬೇಕು ದಾನವರಲ್ಲಿ ದೋಷವಿದೆ ದೇವತೆಗಳಲ್ಲಿಯೂ ಹರಿಯೊಡನೆ ಹೋಲಿಸಿದಾಗ ಅಲ್ಪವೆನಿಸುವಂಥ ಗುಣಗಳಿರುವುದರಿಂದ ಲಕ್ಷಣವು ಸರಿಕೂಡುತ್ತದೆ ಇಲ್ಲದಿದ್ದರೆ ದೇವತೆಗಳಲ್ಲಿ, ಅದರಲ್ಲೂ ಋಜುಯೋಗಿಗಳಲ್ಲಿ ಲಕ್ಷಣಕ್ಕೆ ಅವ್ಯಾಪ್ತಿ ಬಂದೀತು.

ಹೀಗೆ ಹರಿಯು ಗುಣಗಳಲ್ಲಿ ಒಂದು ವ್ಯಭಿಚಾರವನ್ನು ಅಂದರೆ ಅವು ಅವನಲ್ಲಿಯೇ ಅಸಾಧಾರಣವಾಗಿ ಇರುವಂಥವಲ್ಲ ಎಂಬುದನ್ನು 'ಕೆಲವರು

ತಲೆಯೂರಿ ತಪಗೈದು ಪುಣ್ಯವಗಳಿಸಿದ್ದರೇನು ಫಲವಿಲ್ಲ', ಎಂದು ಮುಂತಾಗಿ ಪರಿಹಾರವಮಾಡಿ ಈಗ ಇನ್ನೊಂದು ವ್ಯಭಿಚಾರವನ್ನು ಅಂದರೆ ಹರಿಯಲ್ಲಿ ಒಂದು ಗುಣವಿದ್ದರೆ ಇನ್ನೊಂದಿಲ್ಲ ದೋಷವೆ ಇದೆ ಎಂಬುದನ್ನು ನಿರಾಕರಿಸಬೇಕಾಗಿದೆ ಯುಕ್ತಿಯಿಂದ ನಿರಾಕರಿಸುವ ಮುನ್ನ, ಶ್ರುತಿಯನ್ನು ಉದಾಹರಿಸುವುದು ಸಂಪ್ರದಾಯ ಆದಕ್ಕೆ 'ನಿರನಿಷ್ಟೋ ನಿರವದ್ಯಃ' ಎಂಬ ಶ್ರುತಿಯನ್ನು ತೋರಿಸಿದ್ದಾಯಿತು. ಒಂದು ವಿಷಯ ಶ್ರುತಿಸಿದ್ಧವೆಂದಮೇಲೆ ಸಿದ್ಧಾಂತವಾಯಿತೆಂದೇ ಅರ್ಥ, ಆದ್ದರಿಂದ 'ಒಂದೊಂದು ಗುಣಗಳು ಇದ್ದಾವು ಇವರಲ್ಲಿ' ಎಂದು ಮೊದಲನೆ ವ್ಯಭಿಚಾರ ಪರಿಹಾರದೊಡನೆ 'ಕುಂದೆಳ್ಳಷ್ಟಿಲ್ಲದ ಮುಕುಂದ'ನೆಂದು ಎರಡನೆ ವ್ಯಭಿಚಾರ ಪರಿಹಾರವನ್ನು ಉಪಸಂಹಾರ ಮಾಡಲಾಗಿದೆ

ಮುಂದೆ 'ದೇವರ್ಷಿ ವಿಪ್ರರ ಕೊಂದು ತನ್ನುದರದೊಳಿಟ್ಟು' ಎಂದು ಮುಂತಾಗಿ ಯುಕ್ತಿಯಿಂದಲೂ ವಿಚಾರವಮಾಡಿ ಕೊನೆಯಲ್ಲಿ ಒಳನೇ ನುಡಿಯು ಅನಂತರ 'ಒಂದೊಂದು ಗುಣಗಳು ಇದ್ದಾವು ಇವರಲ್ಲಿ' ಎಂದು ಪ್ರಕೃತದ ನುಡಿಯನ್ನೇ ಇನ್ನೊಮ್ಮೆ ಪುನರುಚ್ಚರಿಸಿ ಯುಕ್ತಿ ವಿಚಾರದ ಉಪಸಂಹಾರ ಮಾಡಲಾಗುತ್ತಿದೆ, ಆದ್ದರಿಂದ ಪುನರುಕ್ತಿ ಇಲ್ಲ ಮುಂದೆ ಮಾಡಲಿರುವ ಯುಕ್ತಿ ವಿಚಾರವು ಭಾಗವತ ಮೂಲದಲ್ಲಿ ಸೂಚಿತವಾಗಿದ್ದು ಅದರದೆ ವ್ಯಾಖ್ಯಾನವೆಂದಂತಾಗುತ್ತದೆ.

— ೩೦ —

**ದೇವರ್ಷಿ ವಿಪ್ರರ ಕೊಂದು ತನ್ನುದರದೊಳಿಟ್ಟು**
**ತೀವಿರ್ದ ಹರಿಗೆ ದುರಿತವ ।**
**ಭಾವಜ್ಞರೆಂಬರೆ ಆಗಾಲದೆಲೆ ಮೇಲೆ**
**ಶಿವನ ಲಿಂಗವ ನಿಲಿಸುವರೆ ॥**

ಶ್ರೀಹರಿ ಪ್ರಳಯಕಾಲದಲ್ಲಿ ದೇವತೆಗಳನ್ನೂ ಋಷಿಗಳನ್ನೂ ವಿಪ್ರರನ್ನೂ ಬಿಡದೆ ಎಲ್ಲ ಜೀವಿಗಳನ್ನೂ ಕೊಂದು ತಿಂದು ಮುಗಿಸಿದವ. ಅಂಥವನಿಗೂ ಪಾಪಲೇಪ ಉಂಟೆಂದು ಜ್ಞಾನಿಗಳು ಹೇಳುವರೆ ? ಪ್ರಳಯಕಾಲದಲ್ಲಿ ಆಲದೆಲೆ ಮೇಲೆ ಶಿವಲಿಂಗ ಇತ್ತೆನ್ನುವರೆ ?

'ನರಕಯಾತನೆ ಸಲ್ಲ ದುರಿತಾತಿದೂರನಿಗೆ' ಎಂದು ಹೇಳಿದ ಶ್ರೀಹರಿಯು ಪಾಪದೂರತ್ವವನ್ನೇ ಈಗ ಯುಕ್ತಿಯಿಂದ ಮಹಾಲಕ್ಷ್ಮಿ ಸಮರ್ಥಿಸುತ್ತಾಳೆ.

ಶ್ರೀಹರಿಯು ದೈತ್ಯಾರಿ ದೈತ್ಯರನ್ನು ಕೊಲ್ಲುವುದು ಅವನ ಸ್ವಭಾವ. ಆದ್ದರಿಂದ ಅವನ ಕೈಯಲ್ಲಿ ಯಾವಾಗಲೂ ಚಕ್ರವಿರುತ್ತದೆ. ಹಿಂಸೆಯು ಮಹಾಪಾಪ, ಅದರಲ್ಲಿಯೂ ದೈತ್ಯರು ಕಶ್ಯಪ ದಿತಿ ದಂಪತಿಗಳ ವಂಶಜರು, ಬ್ರಾಹ್ಮಣರು ಆದ್ದರಿಂದ ಬ್ರಹ್ಮಹತ್ಯೆ ಇದು.

'ಹಿಂಸೆ ಎಲ್ಲವೂ ಪಾಪಕರವಾಗಬೇಕಾಗಿಲ್ಲ ರಣರಂಗದಲ್ಲಿ ಧರ್ಮಯುದ್ಧದಿಂದ ಬ್ರಾಹ್ಮಣನನ್ನೂ ಕೊಲ್ಲಬಹುದು. ಮಹಾಭಾರತ ಯುದ್ಧದಲ್ಲಿ ದ್ರೋಣರೂ ಕಾದಿ ಮಡಿದಿದ್ದರು ಅವರು ಬ್ರಾಹ್ಮಣರು' ಎಂದು ಹೇಳುವವರಿಗೆ ಭಗವದ್ಗೀತೆಯಲ್ಲಿಯೇ 'ಪಾಪಮೇವಾಶ್ರಯೇದಸ್ಮಾನ್' ಎಂದು ಮುಂತಾಗಿ ಸಮಾಧಾನವಿದೆ

ಯುದ್ಧ ಪಾಪಕರವಲ್ಲದಿದ್ದಲ್ಲಿ ರಾಮನು ರಾವಣನನ್ನು ಕೊಂದು ರಾಮೇಶ್ವರಲಿಂಗ ಪ್ರತಿಷ್ಠೆ ಏಕೆ ಮಾಡಿದ ? ಕೃಷ್ಣನು ಮಾವ ಕಂಸನನ್ನು ಕೊಂದ ಗುರುಹಿರಿಯರನ್ನು ಕೊಲ್ಲುವುದು ದೊಡ್ಡಪಾಪ ರಣರಂಗದಲ್ಲಿ ಯುದ್ಧ ಮಾಡಿಯೂ ಕೊಂದುದಲ್ಲ ಆದ್ದರಿಂದ ಅವನು ರಾಮೇಶ್ವರದ ಕೋಟಿತೀರ್ಥದಲ್ಲಿ ಕ್ಷೇತ್ರವಿಧಿ ಮಾಡಿ ಪಾಪಪರಿಪರಿಸಿಕೊಂಡನೆನ್ನಲಾಗಿದೆ ಪ್ರಭಾಸಕ್ಷೇತ್ರದಲ್ಲಿಯೂ ಮಿಂದನಂತೆ ಪಾಪವೇನೋ ಪರಿಹಾರವಾಗಿರಬಹುದು, ಪಾಪಲೇಪ ಉಂಟೆನ್ನುವುದು ಇದರಿಂದ ಸ್ಪಷ್ಟವಾಯಿತು !

ದುಷ್ಟರನ್ನೂ ಅವರ ಕಡೆಯುವರನ್ನೂ ಕೊಲ್ಲುವುದು ಪಾಪಕರವಲ್ಲವೆಂದು ಕೆಲವರ ಆಕ್ಷೇಪ ಆದರೆ ಪರಶುರಾಮನು ದುಷ್ಟಕ್ಷತ್ರಿಯರ ಸಂಹಾರ ಮಾಡಿದರೂ ಪಾಪಪರಿಹಾರಕ್ಕಾಗಿ ವಸಿಷ್ಠಾದಿ ಋಷಿಮುನಿಗಳ ಆದೇಶದಂತೆ ಭೂ ಸುವರ್ಣಾದಿ ದಾನಮಾಡಿದನಂತೆ.

ಮೇಲಿನ ಆಕ್ಷೇಪಕ್ಕೆ ಉತ್ತರ- ಪ್ರಳಯಕಾಲದಲ್ಲಿ ಎಲ್ಲ ಹತ್ಯೆಗಳನ್ನೂ ಮಾಡಿದ ಹರಿ ಆಗ ಏನು ಪ್ರಾಯಶ್ಚಿತ್ತ ಮಾಡಿಕೊಂಡಿದ್ದಾನೆ ? ಮಾಡುವುದಾಗಿದ್ದರೆ ಶಿವಲಿಂಗ ಪ್ರತಿಷ್ಠೆ ಮಾಡಬಹುದಿತ್ತು. ಅದಕ್ಕೆ ಬೇರಾವ ಸ್ಥಳವಿಲ್ಲದಿದ್ದರೂ ತಾನು ಮಲಗುವ ಆಲದೆಲೆಯೆ ಇತ್ತು ಅದರಮೇಲೆ ಶಿವಲಿಂಗ ಪ್ರತಿಷ್ಠೆ ಮಾಡಿದನೆ ? ಶಿವನನ್ನಾರಾಧಿಸಿದನೆ ? ಶಿವನೆ ಆಗ ಇರಲಿಲ್ಲ, ಅವನನ್ನು ಹರಿಯೇ ಆಗ ಕೊಂದಿದ್ದಾನೆ ಆದ್ದರಿಂದಲೆ ಹರಿ ಎಂಬ ಹೆಸರು

ಬ್ರಹ್ಮಾಣಮಿಂದ್ರಂ ರುದ್ರಂ ಚ ಯಮಂ ವರುಣಮೇವ ಚ ।
ನಿಹತ್ಯ ಹರತೇ ಯಸ್ಮಾತ್ ತಸ್ಮಾದ್ಧರಿರಿಹೋಚ್ಯತೇ ॥'

ಆದ್ದರಿಂದ ಹರಿಗೆ ಪಾಪಲೇಪವಿಲ್ಲವೆಂದೆ ಹೇಳಬೇಕು. ಇದನ್ನೇ ವಾದಿರಾಜರು ತೀರ್ಥಪ್ರಬಂಧದಲ್ಲಿಯೂ ಹೇಳಿದ್ದಾರೆ–

ಕಲ್ಪಾಂತೇ ಸುರಭೂಸುರಾಸುರ ಮುನಿಸ್ತೋಮಂ ಹರನ್ ಕಂ ಹರಂ ।
ಪೃಥ್ವ್ಯಾಂ ಪಾತಕ ಕೋಟಿ ಪಾಟನ ಪಟೂ ರಾಮಃ ಸಮಾರಾಧಯತ್ ॥

ಭಾವಜ್ಞರು ಆಲದೆಲೆ ಮೇಲೆ ಶಿವಲಿಂಗ ನಿಲ್ಲಿಸುವರೆ ? ಎಂಬ ಮಾತಿಗೆ ವಿದ್ವಾಂಸರು ಆಲದೆಲೆ ಮೇಲೆ ಶಿವಲಿಂಗ ಪ್ರತಿಷ್ಠೆ ಮಾಡುತ್ತಾರೆಯೆ ಎಂದು ಅರ್ಥವಲ್ಲ. ಹರಿಯು ಶಿವಲಿಂಗ ಪ್ರತಿಷ್ಠೆ ಮಾಡಿದನೆಂದು ಒಪ್ಪುವರೆ ? ಎಂದರ್ಥ. ಸಂಸ್ಕೃತದಲ್ಲಿ 'ವಿಲಾಪಯತಿ' ಎಂದರೆ ಪ್ರಪಂಚ ಲಯ ಮಾಡುತ್ತಾನೆ ಎಂದೇ ಅರ್ಥವಲ್ಲ. ಕೆಲವೆಡೆ 'ಪ್ರಪಂಚ ಲಯವನ್ನು ಧ್ಯಾನಿಸುತ್ತಾನೆ' ಎಂದು ಅರ್ಥವೂ ಇದೆ

'ಸುವಿದ್ಯಮಾನಮಪಿ ಯೋ ಧ್ಯಾಯೇತ್ಯೈವ ಸುನಿಶ್ಚಿತಃ ।
ಉಚ್ಯತೇ ತಸ್ಯ ಕರ್ತೇತಿ ॥'

'ಇರುವ ವಸ್ತುವನ್ನೇ ಆದರೂ ಯಾರು ಧ್ಯಾನಮಾಡುವನೋ ಅವನು ಅದರ ನಿರ್ಮಾತನೆಂದು ವ್ಯವಹರಿಸುವುದುಂಟೆಂದು ನಾರದ ಪುರಾಣದಲ್ಲಿ ಹೇಳಿದಂತೆ ಇಲ್ಲದುದನ್ನು ಮನಸ್ಸಿನಲ್ಲಿ ಮಾಡಿಕೊಂಡರೂ ಅದನ್ನು ಸೃಷ್ಟಿ ಮಾಡಿದಂತೆಯೆ ಆದ್ದರಿಂದ ಆಲದೆಲೆ ಮೇಲೆ ಶಿವಲಿಂಗವನ್ನು ಹರಿ ಪ್ರತಿಷ್ಠಿಸಿದನೆಂದು ವಿದ್ವಾಂಸರು ಮನಸ್ಸಿನಲ್ಲಿ ಆಲೋಚಿಸುವರೆ ? ಎಂಬ ಅಭಿಪ್ರಾಯವಿಟ್ಟುಕೊಳ್ಳಬೇಕು.

'ಲಯಕಾರಕನು ಶ್ರೀಹರಿ ಎನ್ನುವುದು ಹೌದಾದರೆ ಮೇಲಿನ ಮಾತು ಒಪ್ಪತಕ್ಕದ್ದೆ. ಆದರೆ ಶಿವನೆ ಲಯಕಾರಕನೆಂದು ಪ್ರಸಿದ್ಧ' ಎಂದು ಆಕ್ಷೇಪಿಸುವವರಿಗೂ ಇದುವೆ ಉತ್ತರ– ವಿದ್ವಾಂಸರು, ಪ್ರಳಯ ಕಾಲದಲ್ಲಿ ಆಲದೆಲೆ ಮೇಲೆ ಇದ್ದುದು ಶಿವಲಿಂಗವೆ ಹೊರತು ಬಾಲ ಮುಕುಂದನಲ್ಲ ಎಂದು ಒಪ್ಪುವರೆ ?

'ಅಸಾವೇಕಾರ್ಣವೀಭೂತೇ ಮಾಯಾವಟದಲೇ ಪುಮಾನ್ ।
ಜಗತ್ ಸ್ವಜಠರೇ ಬಿಭ್ರತ್ ತಸ್ಮಿನ್ ಶೇತೇ ಜನಾರ್ದನಃ ॥'

ಎಂಬಂತೆ ಶ್ರೀಹರಿಯು ವಟಪತ್ರಶಾಯಿ ಎನ್ನುತ್ತಾರೆ. ಈ ವಿಷಯದಲ್ಲಿ ಪ್ರತ್ಯಕ್ಷ ಸಾಕ್ಷಿ ಮಾರ್ಕಂಡೇಯ ಮುನಿಗಳು. ಅವರು ಮಹಾಪ್ರಳಯವನ್ನು ಕಂಡವರು. ಆ ಪ್ರಳಯ ಸಮುದ್ರದಲ್ಲಿ.

"ಅತಸೀಪುಷ್ಪವರ್ಣಾಭಃ ಶ್ರೀವತ್ಸಕೃತಭೂಷಣಃ"

ಎಂದು ವರ್ಣಿತನಾದ, ಅಗಸಿ ಹೂವಿನಂತೆ ನೀಲವರ್ಣದಿಂದ ಹೊಳೆವ, ಎದೆಯಲ್ಲಿ ಶ್ರೀವತ್ಸ ಚಿಹ್ನೆಯಿಂದೊಪ್ಪುವ ಹರಿಯನ್ನು ಪ್ರತ್ಯಕ್ಷ ಕಂಡವರು

ಮಹಾಪ್ರಳಯದಲ್ಲಿ ಶ್ರೀಹರಿಯು ದೇವರ್ಷಿ ವಿಪ್ರರ ಕೊಂದು ತನ್ನುದರದಲ್ಲಿಟ್ಟುಕೊಂಡ ವೈಖರಿಯನ್ನು ಉಪನಿಷತ್ತು ಹೀಗೆ ಹೇಳುತ್ತಿದೆ–

'ಸ ಐಕ್ಷತ ಯದಿ ಹ ವಾವ ಇಮಮಭಿಮಂಸ್ಯೇ
ಕನೀಯೋಽನ್ನಂ ಕರಿಷ್ಯ ಇತಿ'

ಇದರ ತಾತ್ಪರ್ಯವನ್ನು ವಾದಿರಾಜರು ವೈಕುಂಠ ವರ್ಣನೆಯಲ್ಲಿ ಹೀಗೆ ಹೇಳಿದ್ದಾರೆ–

ಹಿಂದೆ ಬೊಮ್ಮನ ಸೃಜಿಸಿ ಅವನಂಗವಾಗಲೆ
ತಿಂದರೆ ತುತ್ತು ಕುಂದುವುದು ।
ಎಂದುದಾಸೀನವ ಮಾಡಿದ ಶ್ರೀಕೃಷ್ಣ
ನಿಂದು ಭುಂಜಿಸಿ ತೇಗುತಿರ್ದ ॥

ಹೆಡತಲೆಯ ಮೃತ್ಯುವೆ ಅಡಿಗಡಿಗೆ ತುಪ್ಪವಾ
ಯ್ತೊಃಕಲೊಂದೊಂದೆಂಬುದೆ ತುತ್ತುಗಳಾದವು ॥

ಇದನ್ನು ನೋಡಿದರೆ ಹರಿಯು ಸ್ಥಿತಿಕಾರ್ಯವನ್ನು ಮಾಡುತ್ತಿರುವುದು ಏಕೆನ್ನುವುದು ಸ್ಪಷ್ಟ. ಕಟುಕನು ಕುರಿಗಳನ್ನು ಸಾಕುವುದೇಕೆ? ಬೆಳೆದು ಕೊಬ್ಬಿನಂತ ಮೇಲೆ ಕಡಿದು ತಿನ್ನಬೇಕೆಂದಲ್ಲವೆ? ರಾಮ, ಕೃಷ್ಣರು ಹಿಂಸೆ ಮಾಡಿ ಪಾಪ ಮಾಡಿದರೆಂದು ಆಕ್ಷೇಪ ಬಂದಾಗ, 'ನಾರಾಯಣ ರೂಪದಲ್ಲಿ ಅವರೆ ಲಯಕಾರಕರು ಆದ್ದರಿಂದ ಪಾಪವಿಲ್ಲ'ವೆಂದು ವಾದಿಸುವುದು ಜಾಣತನವಲ್ಲ. ರಾವಣಾದಿಗಳ ಹತ್ಯೆಯೆ ಪಾಪಕರವೆನ್ನುತ್ತಿರುವಾಗ ಜಗತ್ಪ್ರಳಯದ ಮಹಾಹತ್ಯಾಕಾಂಡ ಮಾಡಿದವ ಹರಿ ಎಂದು ಪ್ರತಿಭಟಿಸುವುದು ಶೋಚನೀಯವೆ ಸರಿ. 'ಆ ಹತ್ಯಾಕಾಂಡಕ್ಕೆ ತಕ್ಕ ಪ್ರಾಯಶ್ಚಿತ್ತ ಮಾಡಿಕೊಳ್ಳಲಿಲ್ಲವಲ್ಲ!' ಎಂದರೆ, ಅದು ಇನ್ನೊಂದು ಅಪರಾಧವೆ ಆಗುತ್ತದೆ! 'ಪ್ರಾಯಶ್ಚಿತ್ತ ಮಾಡಿಕೊಳ್ಳದಿದ್ದರೂ ಏನೊಂದು ಅನಿಷ್ಟ ಉಂಟಾಗಿಲ್ಲವಲ್ಲ!' ಎಂದರೆ ಆತ ಅಷ್ಟೊಂದು ಶಕ್ತನಾಗಿದ್ದಾನೆ ಎಂದೊಪ್ಪೋಣ. ಅಪರಾಧ ಅಪರಾಧವೆ. ಕೊಲೆಗಾರನು ರಾಜಭಟರ ಕಣ್ಣುತಪ್ಪಿಸಿ ಶಾಶ್ವತವಾಗಿಯೇ 'ಪಾರಾದರೆ' ಆತ ನಿಜವಾಗಿಯೂ ನಿರಪರಾಧಿಯಾಗುವನೆ?

ವಸ್ತುತಃ ಜಗತ್ಪ್ರಳಯದ ಮಹಾಪಾಪ ಮಾಡಿಯೂ ಏನೂ ಪ್ರಾಯಶ್ಚಿತ್ತ ಮಾಡಿಕೊಳ್ಳದೇ ಸುಖಿಯಾಗಿಯೆ ಇದ್ದಾನೆ ಹರಿ ಎನ್ನುವ ಮಾತೂ ನಂಬಲರ್ಹವಲ್ಲ. ಹಲವಾರು ಅವತಾರವೆತ್ತಿ ನಾನಾ ಸಂಕಷ್ಟಗಳಿಗೆ ಈಡಾಗಬೇಕಾದರೆ ಅದಕ್ಕೆ ಕಾರಣ ಪಾಪವೆಂದು ಹೇಳಬಾರದೇಕೆ ? ಭರ್ತೃಹರಿ ಹೇಳಿದ್ದಾನೆ–

'ವಿಷ್ಣುರ್ಯೇನ ದಶಾವತಾರ ಗಹನೇ ಕ್ಷಿಪ್ತೋ ಮಹಾಸಂಕಟೇ ..,
ತಸ್ಮೈ ನಮಃ ಕರ್ಮಣೇ ॥'

'ವಿಷ್ಣುವು ದಶಾವತಾರವೆತ್ತಿ ಮಹಾಸಂಕಟದಲ್ಲಿ ಬಿದ್ದುದು ಕರ್ಮದಿಂದಾಗಿ, ಅಂಥ ಕರ್ಮಕ್ಕೇ ಇದೋ ನಮಸ್ಕಾರ '

ಮೇಲಿನ ಎಲ್ಲ ಆಕ್ಷೇಪಗಳಿಗೂ ಸಮಾಧಾನವಿದೆ– 'ದೇವರ್ಷಿವಿಪ್ರರ ಕೊಂದು ತನ್ನುದರದೊಳಿಟ್ಟು ತಿವಿರ್ದ ಹರಿಗೆ ದುರಿತವ ಭಾವಜ್ಞರೆಂಬರೆ ?' 'ಭಾವ' ಅಂದರೆ ಶ್ರೀಹರಿಯ ಭಾವವನ್ನು ತಿಳಿದವರು ಹರಿಗೆ ದುರಿತವಿದೆ ಎಂದೊಪ್ಪಲಾರರು ಅವನು ಮಾಡುವ ಜಗತ್ಪ್ರಳಯವು ಯಾವ ಉದ್ದೇಶದಿಂದ ಕೂಡಿದೆ ಎನ್ನುವುದನ್ನು ತಿಳಿಯಬೇಕು ಅವನು ಜಗತ್ತನ್ನು ಸೃಷ್ಟಿಸುವುದು ಆತ ಪೂರ್ಣಾನಂದವಾಗಿ ನಿತ್ಯ ತೃಪ್ತನಾಗಿರುವುದರಿಂದ, ಆನಂದ ಉದ್ರೇಕದಿಂದ ಎಂದು ಉಪನಿಷತ್ತೇ ಹೇಳುತ್ತದೆ–

'ಕೋ ಹ್ಯೇವಾನ್ಯಾತ್ ಕಃ ಪ್ರಾಣ್ಯಾತ್,
ಯದೇಷ ಆಕಾಶ ಆನಂದೋ ನ ಸ್ಯಾತ್ ?

ಅಂಥವನು ಸಂಹಾರ ಮಾಡುವುದು ಬೇರೆ ಕಾರಣದಿಂದ ಎನ್ನಲಾಗದು ಹಾಗೆ ಉಪನಿಷತ್ತೇ ಹೇಳಿದರೂ ನಂಬಲಾಗದು. ಅದೊಂದು ಲೀಲೆ ಮಾತ್ರ ಎಂದೇ ಉಪನಿಷತ್ತಿನ ಆಶಯ. ಅಷ್ಟೊಂದು ಹೊಟ್ಟೆಬಾಕನಾಗಿರುತ್ತಿದ್ದರೆ ಅವನಿಗೆ ತೃಪ್ತಿ ಕೊಡುವಷ್ಟು ಆಹಾರ ಎಲ್ಲಿ ದೊರಕೀತು ? ಏಕೆಂದರೆ, ಅವನ ರೋಮಕೂಪದಲ್ಲಿ ಕೋಟಿ ಬ್ರಹ್ಮಾಂಡಗಳು ಅಡಗಬಲ್ಲವು ! ಆ ಮಹಾಕಾಯದವನಿಗೆ ಒಂದು ಬ್ರಹ್ಮಾಂಡ ಯಾವ ಮೂಲೆಗೆ ? ರಾವಣನ ಹೊಟ್ಟೆಗೆ ಕಾಸಿನ ಮಜ್ಜಿಗೆಯೋ ? ವಾದಿರಾಜರು ಯುಕ್ತಿಮಲ್ಲಿಕೆಯಲ್ಲಿ ಹೇಳಿದ್ದಾರೆ–

'ಬೃಹಚ್ಛರೀರಃ ಕಿಂ ಭುಂಕ್ತೇ ಬ್ರಹ್ಮಾಂಡಂ ಯಸ್ಯ ರೋಮಸು ?'

ಲಕ್ಷ್ಮೀ ಶೋಭನ ಪದದಲ್ಲಿಯೂ ಮುಂದಿನ ನುಡಿಯಲ್ಲಿ,

'ಹಸಿತೃಷೆ ಜರೆಮರಣ..' ಎಂದು ಹಸಿವು ನೀರಡಿಕೆಗಳು ಹರಿಯನ್ನು ಬಾಧಿಸಲಾರವೆಂದು ಪ್ರತಿಪಾದಿಸಲಾಗುತ್ತದೆ

ಹರಿಯು ಆನಂದೋದ್ರೇಕದಿಂದ ಸೃಷ್ಟಿ ಅಥವಾ ಸ್ಥಿತಿಯ ಲೀಲೆಗಳನ್ನು ಮಾತ್ರ ಬೇಕಾದಷ್ಟು ಮಾಡಲಿ. ಸಂಹಾರವೇಕೆ ? ಅಂಥ ಕ್ರೂರ ಕಾರ್ಯವೂ ಒಂದು ಲೀಲೆಯೇ ? ಜೀವರ ದುಃಖ ಪೂರ್ಣಾನಂದನಿಗೆ ತಿಳಿಯುವುದಿಲ್ಲವೆ ? ಎಂಬ ಪ್ರಶ್ನೆ ಬರಬಹುದು. ಇದಕ್ಕೂ 'ಭಾವಜ್ಞರು' ಉತ್ತರ ಕೊಡುತ್ತಾರೆ–ಅನೇಕ ಕಲ್ಪಗಳ ಕಾಲ ಜನನ ಮರಣಗಳ ಚಕ್ರದಲ್ಲಿ ಸಿಲುಕಿ ಬಳಲಿ ಬೆಂಡಾಗಿರುವ, ತನ್ನ ಮಕ್ಕಳೇ ಆದ, ಜೀವರನ್ನು ತನ್ನುದರದೊಳಗೆ ಮಲಗಿಸಿಟ್ಟು ಸುಖನಿದ್ರೆ ಬರಿಸುವ ಮಾತೃಹೃದಯ ಶ್ರೀಹರಿಯದೆಂದು ತಿಳಿಯಬೇಕು. ವಾದಿರಾಜರು ಹೇಳುತ್ತಾರೆ–

'ಹೊಟ್ಟೆಯೆಂಬ ಹೊನ್ನ ತೊಟ್ಟಿಲೊಳಗಿಟ್ಟು ವಿಟ್ಠಲ
ಜೀವರ ನಿದ್ರೆಗೊಳಿಸುವನು ।'

ಟೀಕಾಕೃತ್ಪಾದರೂ ಹೇಳುತ್ತಾರೆ–

'ಸ್ವಾಪಂ ಪ್ರಾಪಯತಿ ಶ್ರಮಾಪಹೃತಯೇ ಕಲ್ಪಾವಸಾನೇ ಚ ಯಃ'

ಇಲ್ಲಿ ಪಾಂಡುರಂಗಿ ಕೇಶವ ಭಟ್ಟಾರಕರ ವ್ಯಾಖ್ಯಾನ–

ಸಂಹಾರಂ ಪ್ರಾಪಯಯನ್ನಪ್ಯಸೌ ಮಾತೃವತ್ ನ ದ್ವೇಷ್ಯಃ
ಕಿಂ ತು ತದ್ವತ್ ಹಿತಕಾರಿತ್ವಾತ್ ವಂದನೀಯ ಏವ ।

ಭರ್ತೃಹರಿಯು ಹರಿಯು ಕರ್ಮದಿಂದಾಗಿ ದಶಾವತಾರವೆತ್ತುತ್ತಿದ್ದಾನೆ ಎಂದಿದ್ದಾನೆ. ಹೌದು, ಕರ್ಮದಿಂದ. ಯಾರ ಕರ್ಮದಿಂದ ? ಜೀವರ ಕರ್ಮದಿಂದ ಜೀವರಿಗಾಗಿ ಎನ್ನೋಣ. ತನ್ನ ಕರ್ಮದಿಂದಲೆ ತಾನು ಜನಿಸಿದರೆ ಆ ಜನನ ತನಗರಿವಿಲ್ಲದಂತೆ ನಡೆದೀತು. ಕೃಷ್ಣನು,

'ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ।
ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಂ ॥'

ಎನ್ನುತ್ತ ಬುದ್ಧಿಪೂರ್ವಕವಾಗಿ ಅವತರಿಸುತ್ತಾನೆ. ತನ್ನ ಅವತಾರದ ಆದ್ಯಂತವೆಲ್ಲ ಆತನಿಗೆ ಗೊತ್ತು–

"ತಾನ್ಯಹಂ ವೇದ ಸರ್ವಾಣಿ".

ನ್ಯಾಯವೈಶೇಷಿಕರ ಈಶ್ವರನೂ ಇದೇ ರೀತಿ ಜೀವಾದೃಷ್ಟ ನಿರ್ಮಿತ ಶರೀರದಿಂದ ಅವತರಿಸುತ್ತಾನಂತೆ. ಆದ್ದರಿಂದ ಹರಿಯ ಜಗತ್ಸಂಹಾರ ಕಾರ್ಯ ಪಾಪಕರವಲ್ಲ. ಹಾಗೆಯೆ ರಾವಣಾದಿ ವಧವೂ ಪಾಪಕರವಲ್ಲ.

ಹಾಗಾದರೆ ಶ್ರೀರಾಮನು 'ರಾಮೇಶ್ವರದಲ್ಲಿ ಶಿವಲಿಂಗವನ್ನೇಕೆ ಪ್ರತಿಷ್ಠಿಸಿದ ?' ಎಂಬ ಆಕ್ಷೇಪಕ್ಕೆ ಉತ್ತರವಾಗಿ 'ಆಲದೆಲೆಯ ಮೇಲೆ ಶಿವನ ಲಿಂಗವನಿರಿಸುವರೆ ?' ಎಂಬ ಪ್ರಶ್ನೆ ಬಂದಿದೆ. ಆಲದೆಲೆಯ ಮೇಲೆ ಶಿವನ ಲಿಂಗವೇಕೆ ನಿಲ್ಲಿಸಬೇಕು ? ಶ್ರೀಹರಿ ತನ್ನ ಬ್ರಹ್ಮಹತ್ಯಾದಿ ಪಾಪಪರಿಹಾರಕ್ಕಾಗಿ ಹಾಗೆ ಮಾಡಬೇಕೆ ? ಸ್ವತಃ ಶಿವನೇ ಬ್ರಹ್ಮನ ಒಂದು ತಲೆಯನ್ನು ಕತ್ತರಿಸಿದ ಮಾತ್ರಕ್ಕೆ ಬ್ರಹ್ಮಹತ್ಯೆಯಿಂದ ಬಳಲುತ್ತಿದ್ದಾನೆ. ಬ್ರಹ್ಮನನ್ನೆ ಕೊಲ್ಲುವ ಹರಿಯು ಶಿವನನ್ನು ಪೂಜಿಸಿದರೆ ಆ ಪಾಪ ಪರಿಹಾರ ಸಾಧ್ಯವೆ ? ವಸ್ತುತಃ ರಾಮನಾದರೂ ತನ್ನ ಪಾಪ ಪರಿಹಾರಕ್ಕಾಗಿ ಶಿವಲಿಂಗ ಪ್ರತಿಷ್ಠೆ ಮಾಡಿಲ್ಲ. ರಾಮಾಯಣದ ಕಥೆ ಮಹಾಪುಣ್ಯಕರವೆಂದು ಎಲ್ಲರೂ ಒಪ್ಪುತ್ತಾರೆ. ರಾಮ ರಾವಣನನ್ನು ಕೊಂದುದು ಮಾತ್ರ ಪಾಪವೆ ? ರಾವಣವಧೆಗಾಗಿಯೇ ನಿರ್ಮಿಸಲಾಗಿರುವ ಸೇತುವು ದರ್ಶನ ಮಾತ್ರದಿಂದ ಬ್ರಹ್ಮಹತ್ಯೆಯನ್ನು ಕಳೆಯುವುದಾರೆ ರಾವಣವಧದಿಂದ ರಾಮನಿಗೆ ಬ್ರಹ್ಮಹತ್ಯೆ ಅಂಟೀತೆ ? ಲಂಕೆಯ ಸಿಂಹಾಸನದಲ್ಲಿ ವಿಭೀಷಣನನ್ನು ಕುಳ್ಳಿರಿಸಿ ಅಭಿಷೇಕ ಮಾಡಿದ ರಾಮನೆ ರಾಮೇಶ್ವರದಲ್ಲಿ ಶಿವನನ್ನು ಪ್ರತಿಷ್ಠಿಸಿ ಅಭಿಷೇಕ ಮಾಡಿದ ! ಎರಡರಲ್ಲಿ ಏನಾದರೂ ವ್ಯತ್ಯಾಸ ಉಂಟೆ ? ಇಬ್ಬರೂ ರಾಮನಿಗೆ ಭಕ್ತರು. ಭಕ್ತರನ್ನು ಉನ್ನತಸ್ಥಾನದಲ್ಲಿಟ್ಟು ಹಿಗ್ಗುವುದು ಭಕ್ತವತ್ಸಲನಾದ ಆ ಭಗವಂತನಿಗೆ ಒಪ್ಪುವಂತಹುದು. ಆದ್ದರಿಂದ ಸೇತುದರ್ಶವು ಬ್ರಹ್ಮಹತ್ಯಾಪಾತಕ ಪರಿಹಾರಕವೆಂದು ಘೋಷಿಸುತ್ತಿರುವ ಶಾಸ್ತ್ರವನ್ನು ನಿಜಗೊಳಿಸುತ್ತ ಶಿವನ ಬ್ರಹ್ಮಹತ್ಯಾ ಪಾಪಪರಿಹಾರಕ್ಕಾಗಿ ಅವನ ಲಿಂಗವನ್ನು ಸೇತುವೆಯ ಮುಂದೆಯೇ ನಿಲ್ಲಿಸಿದ್ದಾನೆ ಶ್ರೀರಾಮ ಎನ್ನುವುದೆ ಸರಿ. ಇದನ್ನು ವಾದಿರಾಜರು ಯುಕ್ತಿಮಲ್ಲಿಕೆಯಲ್ಲಿಯೂ ಹರಿಸರ್ವೋತ್ತಮ ಸಾರದಲ್ಲಿಯೂ ಯುಕ್ತಿಯುಕ್ತವಾಗಿ ಸಮರ್ಥಿಸಿದ್ದಾರೆ.

– ೩೧ –

**ಹಸಿವು ತೃಷೆ ಜರೆಮರಣ ರೋಗರುಜಿನಗಳೆಂಬ**
**ಅಸುರ ಪಿಶಾಚಿಗಳ ಭಯವೆಂಬ ।**
**ವ್ಯಸನ ಬರಬಾರದು ಎಂಬ ನಾರಾಯಣಗೆ**
**ಪಶು ಮೊದಲಾಗಿ ನೆನೆಯದು ॥**

ಹಸಿವು, ತೃಷೆ, ಜರೆ, ಮರಣ, ರೋಗ-ರುಜಿನಗಳೆಂಬ ಆಧ್ಯಾತ್ಮಿಕ ತಾಪವಾಗಲಿ, ಅಸುರ ಪಿಶಾಚಿಗಳ ಭಯವೆಂಬ ಆಧಿಭೌತಿಕ ತಾಪವಾಗಲಿ ಬರಬಾರದೆನ್ನುವ ನಾರಾಯಣನಿಗೆ ಹಸಿವು ಮುಂತಾದ ಯಾವ ದೋಷವೂ ತಾನು ಅವನಲ್ಲಿ ಬಂದು ಸೇರಿಕೊಂಡೇನೆಂದು ನೆನೆಯದು

ಇಲ್ಲಿ ' ವ್ಯಸನ ಬರಬಾರದು' ಎಂದ ಮಾತ್ರಕ್ಕೆ ಅದು ಬಾರದಿರುತ್ತದೆಯೆ ? 'ಪಶು ಮೊದಲಾಗಿ' ಎಂದರೆ 'ಹಸಿವು ಮುಂತಾದುದು' ಎಂಬ ಅರ್ಥವಾದರೂ ಹೇಗೆ ? ಎಂಬ ಪ್ರಶ್ನೆಗಳು ಸಹಜ. ನಾವು 'ವ್ಯಸನ ಬರಬಾರದು' ಎಂದ ಮಾತ್ರಕ್ಕೆ ಅದು ಬಾರದಿರುವುದಿಲ್ಲ, ಸರಿಯೆ ನಾವು ನರರು. ಆತ ನಾರಾಯಣ ಆದ್ದರಿಂದ ಅವನಿಗೆ ವ್ಯಸನ ಬರಲಾರದು ಎನ್ನಬೇಕು. 'ಪಶು' ಎಂಬ ಶಬ್ದಕ್ಕೆ 'ಪಸು' ಅಂದರೆ ಹಸಿವು ಎಂದರ್ಥ, ವಸಿಷ್ಠ ವಶಿಷ್ಠ ಮುಂತಾದ ಶಬ್ದಗಳಂತೆ ಎಂದಿಟ್ಟುಕೊಳ್ಳಬೇಕು. ಅಥವಾ 'ಪಸು' ಎಂದೆ ಶುದ್ಧಪಾಠವಿರಬಹುದು. ಹಸಿವು ಅಸುರ ವ್ಯಸನಗಳ ಸಾಲಿಗೆ 'ಪಸು'ವೆ ಯೋಗ್ಯ. ಸಕಾರಪ್ರಾಸ ಈ ಪಾಠದಲ್ಲಿ ಹೊಂದುತ್ತದೆ.

ನಾರಾಯಣನೂ ನರರಂತೆ ಹಸಿವು ಉಳ್ಳವನೆ. ಹಿಂದೆ ದೇವರ್ಷಿ ವಿಪ್ರರ ಕೊಂದು ತಿಂದುದರ ಪ್ರಸ್ತಾವ ಬಂದಿದೆ. ಅದರ ವಿಸ್ತಾರ ವೈಕುಂಠ ವರ್ಣನೆಯಲ್ಲಿದೆ– "ಸಪ್ತದ್ವೀಪಗಳಲ್ಲೆಲ್ಲ ಸಮೃದ್ಧವಾಗಿ ಬೆಳೆದಿರುವ ಧಾನ್ಯ, ಕಂದಮೂಲ, ಫಲಶಾಕಗಳು ಮೃಗ ಪಕ್ಷಿ ಮಾನವ ಪ್ರಾಣಿಗಳು, ಏಳು ಸಾಗರಗಳ ಜಲಜಂತುಗಳು ಒಂದೊಂದೂ ಅವನಿಗೆ ತುತ್ತುಗಳು ಆ ಪ್ರಾಣಿಗಳ ಹೆಡತಲೆಯ ಮೃತ್ಯುವೆ ಆ ಒಂದೊಂದು ತುತ್ತಿಗೂ ತುಪ್ಪದ ಸೇಚನೆ ! ಏಳು ಕೋಟಿ ಯೋಜನ ಗಾತ್ರದ ಇಡಿಯ ಭೂಮಿಯೆ ಮಾಂಸದ ಊಟ ! ಮಧು ಕೈಟಭರ ಕೊಬ್ಬಿದ ದೈತ್ಯಶರೀರದ ರಸಗಂಧಭರಿತವಾದ ಮೇದದಿಂದಲೆ ಉಂಟಾದುದು ಈ ಭೂಮಿ. ಆದರಿಂದಲೆ ಮೇದಿನೀ ಎಂಬ ಹೆಸರು. ಈ ಭೂರಿಭೋಜನದ ಅಡುಗೆ ಮಾಡಿದವಳು ಮಹಾಲಕ್ಷ್ಮಿ, ಜ್ವಾಲೆಯ ರೂಪದಿಂದ ಎಲ್ಲೆಡೆ ವ್ಯಾಪಿಸಿ ಎಲ್ಲ ಪದಾರ್ಥಗಳನ್ನೂ ಸಪ್ತಸಾಗರಗಳ ಲವಣ, ಇಕ್ಷು, ಮಧು, ದಧಿ, ಘೃತ, ಕ್ಷೀರ ರಸಗಳೊಂದಿಗೆ ಬೆರೆಸಿ ಚಿನ್ನದ ಬ್ರಹ್ಮಾಂಡ ಕಟಾಹದಲ್ಲಿ ಪಾಕಮಾಡಿಕೊಟ್ಟವಳು ದೇವಿ. ಸರ್ವಲೋಕ ವ್ಯಾಪ್ತವಾದ ಮಹಾಕಾಯದ ನಾರಾಯಣನು ಬಾಯ್ತೆರೆದು ಎಲ್ಲವನ್ನೂ ಉಂಡು ತೇಗಿದ. ಆಗ ಆಯಾಸ ಪರಿಹಾರಕ್ಕಾಗಿ ವಾಯುದೇವ ಬೀಸುತ್ತಿದ್ದ ಭೋಜನದ ಬಳಿಕ ಶುದ್ಧೋದಕ ಸಮುದ್ರದ ನೀರನ್ನು ಕುಡಿದು ಆಚಮನ ಮಾಡಿದ. ತಿಂದ ಆಹಾರ ಚೆನ್ನಾಗಿ ಜೀರ್ಣವಾಗಲೆಂದು ಚಿನ್ನದ ಬ್ರಹ್ಮಾಂಡ ಕಟಾಹವನ್ನೆ ಭಸ್ಮಮಾಡಿ ಆ ಸ್ವರ್ಣಭಸ್ಮವನ್ನು ಸೇವಿಸಿದ ಬಾಹ್ಯಜಲಾವರಣದ ನೀರನ್ನು ಕಷಾಯದಂತೆ ಕುಡಿದ. ತೃಪ್ತನಾಗಿ ಪ್ರಿಯತಮೆಯಾದ ಮಹಾಲಕ್ಷ್ಮಿಯೊಡನೆ ಏಕಾಂತದಲ್ಲಿ ಮಲಗಿದ"

ಎಂಥ ಭಯಂಕರ ಊಟ! ಎಂಥ ಹಸಿವು! ಹರಿಗೆ ಆಧಿದೈವಿಕವಾಗಿ ಏನೂ ತಾಪವಿಲ್ಲವೆಂದು ಸಮರ್ಥಿಸುವುದಕ್ಕಾಗಿ 'ಲಯಕಾರಕನಾದ ಆತನಿಗೆ ಏನು ಅಪಾಯವಿದ್ದಿತು ?' ಎಂದು ಕೇಳಿದರೆ ಹಸಿವು ತೃಷೆ ಮುಂತಾದ ಆಧ್ಯಾತ್ಮಿಕ ತಾಪ ಉಂಟೆಂದು ಒಪ್ಪಿಕೊಂಡಂತಾಯಿತು!

ಮೇಲಿನ ಪ್ರಶ್ನೆಗೆ ಉತ್ತರ– ಹಸಿವು ಮುಂತಾದುದು ತನಗೆ ಏಕೆ, ತನ್ನ ಭಕ್ತನಿಗೂ ಬರಬಾರದೆಂದು ಆಜ್ಞೆ ಮಾಡಬಲ್ಲವನು ನಾರಾಯಣ. ಪ್ರಹ್ಲಾದನಿಗೆ ಹಿರಣ್ಯಕಶಿಪುವಿನಿಂದ ಯಾವ ಪೀಡೆಯೂ ತಗುಲದಿದ್ದುದು ಹರಿಯ ಆಜ್ಞೆಯಿಂದ. ತತ್ವಪ್ರಕಾಶಿಕಾ ಗುರ್ವರ್ಥದೀಪಿಗೆಯಲ್ಲಿ ರಾಜರು ಹೇಳುತ್ತಾರೆ-

ನೃಸಿಂಹಾವತಾರಾತ್ ಪ್ರಾಕ್ ದೈತ್ಯಕೃತಶಸ್ತ್ರಘಾತಾದ್ಯುಪದ್ರವಸ್ಯ
ಸ್ವಾಂಗಾಸ್ಪರ್ಶನಂ ಭಗವದಾಜ್ಞಾಮಾತ್ರೇಣೇತ್ಯತೋ
ನ ಕೇವಲಂ ಮೇ ಭವತಶ್ಚ ರಾಜನ್ನಿತಿ ಪ್ರಹ್ಲಾದವಾಕ್ಯೋದ್ಧರಣಂ ॥

'ನೃಸಿಂಹಾವತಾರಕ್ಕೆ ಮೊದಲು ಹಿರಣ್ಯಕಶಿಪು ಮಾಡಿದ ಶಸ್ತ್ರಾದಿ ಉಪದ್ರವವು ಪ್ರಹ್ಲಾದನ ಮೈಗೆ ತಗುಲದಿದ್ದುದು ಭಗವಂತನ ಆಜ್ಞಾಮಾತ್ರದಿಂದ ಎಂಬ ಅಭಿಪ್ರಾಯದಿಂದ ಭಾಷ್ಯದಲ್ಲಿ 'ನ ಕೇವಲಂ ಮೇ ಭವತಶ್ಚ ರಾಜನ್' ಎಂಬ ಪ್ರಹ್ಲಾದನ ಮಾತನ್ನು ಎತ್ತಿ ತೋರಿಸಲಾಗಿದೆ'

ಯುಕ್ತಿ ಮಲ್ಲಿಕೆಯಲ್ಲಿ ಹೇಳಿದೆ–

ಯತ್ಕೃಪಾಲೇಶತಸ್ತ್ರಾತಂ ಪ್ರಹ್ಲಾದಂ ಕಿಲ ರಕ್ಷಸಾಂ ।
ಚಿಚ್ಛಿದುರ್ನಾಸ್ತ್ರಶಸ್ತ್ರಾಣಿ .... ॥

ನ್ಯಾಯರತ್ನಾವಳಿಯಲ್ಲಿಯೂ ಇದನ್ನೆ ಹೇಳಿದೆ–

ಭಕ್ತೋऽಪಿ ಯಾತನಾಂ ನಾರ್ಹೇತ್ ಕಿಂ ಪುನಃ ಸ ಮಹಾಪ್ರಭುಃ ?

ಇದಕ್ಕೆಲ್ಲ ಭಾಗವತದ ಈ ಮಾತು ಮೂಲ–

ಪತಿತಃ ಸ್ಖಲಿತೋ ಭಗ್ನಸ್ಸಂದಷ್ಟಸ್ತಪ್ತ ಆಹತಃ ।
ಹರಿರಿತ್ಯವಶೇನಾಹ ಪುಮಾನ್ನಾರ್ಹತಿ ಯಾತನಾಂ ॥

'ಭಕ್ತನು ಯಾವುದೇ ಅವಸ್ಥೆಯಲ್ಲಿರಲಿ, ಆಸನ ಪ್ರಾಣಾಯಾಮಾದಿ ಅನುಷ್ಠಾನವಿಲ್ಲದಿದ್ದರೂ ಸರಿಯೆ, ಆರ್ತಭಾವದಿಂದ, ಭಕ್ತಿಯಿಂದ ಒಮ್ಮೆ 'ಹರಿ!' ಎಂದು ಕೂಗಿದರೆ ಸಾಕು, ಅವನಿಗೆ ಯಾವ ಯಾತನೆಯೂ ಬರಲಾರದು', ಇದಕ್ಕೆ ಅಜಾಮಿಳನೂ ಇನ್ನೊಬ್ಬ ಸಾಕ್ಷಿ.

ಸಂಸಾರದಲ್ಲಿ ಮಾತ್ರವಲ್ಲ, ಮುಂದೆ ಎಂದಿಗೂ ತಾಪತ್ರಯ ಬಾರದಂತೆ ಕಳೆಯಬಲ್ಲವನು ನಾರಾಯಣ

'ನಾರಾಯಣೇತಿ ಮಂತ್ರೋಽಸ್ತಿ ವಾಗಸ್ತಿ ವಶವರ್ತಿನೀ ।
ತಥಾಪಿ ನರಕೇ ಘೋರೇ ಪತಂತೀತ್ಯೇತದದ್ಭುತಂ ॥'

'ನಾರಾಯಣ' ಎಂಬ ಸುಲಭವಾದ ಮಂತ್ರವಿದೆ, ನಾಲಿಗೆ ವಶದಲ್ಲಿದೆ, ಆದರೂ ಜನರು ನರಕಭಾಗಿಗಳಾಗುತ್ತಿರುವುದು ಒಂದು ಸೋಜಿಗವೆ ಸರಿ!

'ವ್ಯಸನ ಬರಬಾರದು' ಎಂದು ನಾರಾಯಣನು ಅಂದುಕೊಂಡರೆ ಆಗಲೆ ಜೀವನಿಗೆ ಮುಕ್ತಿ. ಲಿಂಗಭಂಗವೆ ನಿಜವಾದ ಮುಕ್ತಿಯಲ್ಲ, ಲಿಂಗಶರೀರ ನಿಮಿತ್ತಮಾತ್ರ, ಹರಿಯ ಇಚ್ಛೆಯೆ ಬಂಧಕ ಈ ಜೀವನ ಸ್ವರೂಪಾನಂದ ವ್ಯಕ್ತವಾಗದಿರಲಿ ಎಂಬ ಆತನ ಇಚ್ಛೆ -ಇಚ್ಛಾವರಣ- ತೊಲಗಬೇಕು. ಆಗಲೆ ಮುಕ್ತಿ. ಆತ ನಾರಾಯಣ. ನಾರ ಅಂದರೆ ಹಸಿವು ಮುಂತಾದ ದುಃಖದ ಲೇಶವೂ ಇಲ್ಲದ ಮುಕ್ತರು. ಅವರಿಗೆ ಅಯನ, ಆಶ್ರಯ ನಾರಾಯಣ. ನಾರಾಯಣನಾದ್ದರಿಂದಲೆ 'ವ್ಯಸನ ಬರಬಾರದು' ಎನ್ನುತ್ತಾನೆ, ಮುಕ್ತಿ ನೀಡುತ್ತಾನೆ.

'ಭಕ್ತನಿಗೆ ವ್ಯಸನ ಬರಬಾರದು ಎಂಬ ನಾರಾಯಣನಿಗೆ' ಎಂದು ಸ್ಪಷ್ಟವಾಗಿ ಹೇಳದಿರುವುದಕ್ಕೆ ಒಂದು ಉದ್ದೇಶವಿದೆ ಕೆಲವು ವಾದಿಗಳು, ನಿಂಬಾರ್ಕ ಭಾಸ್ಕರ ಮುಂತಾದವರು ವಿಷ್ಣು ಸರ್ವಶಕ್ತನಾದ್ದರಿಂದಲೆ ಲೀಲೆಗಾಗಿ ಸ್ವೇಚ್ಛೆಯಿಂದಲೆ ಜೀವನಾಗಿ, ಹಸಿವು ಮುಂತಾದ ವ್ಯಸನಗಳನ್ನು ಅನುಭವಿಸುತ್ತಾನೆ ಎನ್ನುತ್ತಾರೆ. ಮಾಯಾವಾದಿಗಳೂ ಈಶ್ವರನನ್ನು ಮಾಯಾಮಯ ಶರೀರ ಉಳ್ಳವನೆಂದೂ, ಮಾಯೆಯ ಪರದೆಯಿಂದ ಆವೃತನಾದವನೆಂದೂ ಆ ಮಾಯೆ ಮಾತ್ರ ಆತನಿಗೆ ವಶವೆಂದೂ ಹೇಳುತ್ತಾರೆ. ಅಂದರೆ ಮಾಯೆಯಿಂದ ಜಗತ್ತನ್ನು ಸೃಜಿಸಿ ತನ್ನ ಸ್ವರೂಪನೆ ಆದ ಜೀವನಿಗೆ ದುಃಖ ಕೊಡುತ್ತಿದ್ದಾನೆ ಎಂದಂತಾಯಿತು. ಇದೇಕೆ? ತನಗೆ ತಾನೇ ದುಃಖ ತಂದುಕೊಳ್ಳುವಷ್ಟು ಬುದ್ಧಿಗೇಡಿಯೆ ಭಗವಂತ? ವಾದಿರಾಜರು ಹೇಳುತ್ತಾರೆ-

'ತನಗೂ ಹಸಿವು ಮೊಂತಾದ ವ್ಯಸನ ಬರಬಾರದೆಂದೆ ಹೇಳುತ್ತಾನೆ ನಾರಾಯಣ' ಯುಕ್ತಿಮಲ್ಲಿಕೆ ಹೇಳುತ್ತದೆ–

'ತಚ್ಛಕ್ತ್ಯಾ ಕಿಂ ನ ಘಟತೇ? ಸೋಽಪಿ ನ ಸ್ವಾತ್ಮಘಾತಕಃ'

ಹರಿಯು ಸರ್ವಶಕ್ತನೆ ಹೌದು. ಆದರೂ ಆತ ಅದರಿಂದ ತನಗೆ ಕೇಡು ತಂದುಕೊಳ್ಳಲಾರ. ಅಂಥ ಬುದ್ಧಿಗೇಡಿತನವನ್ನು ಆತ ಎಂದೂ ತೋರಿಸಿಕೊಳ್ಳಲೂ

ಇಲ್ಲ. ಉದಾಹರಣೆಗೆ, ಚಕ್ರವನ್ನು ಹಿಡಿದ ಆತ ತನ್ನ ರೋಮವನ್ನಾದರೂ, ಅದರಿಂದ ಕುಯ್ದುಕೊಂಡನೆ ?

'ಸ್ವರೋಮಾಪಿ ಕ್ವಚಿಚ್ಚಕ್ರೀ ಚಕ್ರೇಣ ನಿಚಕರ್ತ ಕಿಂ ?

ರಾಜರು ಕೇಳುತ್ತಾರೆ–

'ಚಿತ್ರಶಕ್ತಿ ವಿಶೇಷಶ್ಚ ಯದ್ಯಸ್ತಿ ಪರಮಾತ್ಮನಿ ।
ಕಥಂ ದುಃಖಾರ್ಣವೇ ಮಂಕ್ತುಮುತ್ಸಹೇತ ಸ ಬುದ್ಧಿಮಾನ್ ?'

ನಾರಾಯಣ ಅಂದರೆ ನ ಆರಾಯಣ, ದೋಷವಿಲ್ಲದವನು, ಅವನ ಶರೀರ ಎಂದಿಗೂ ಅಪ್ರಾಕೃತ, ಆನಂದಮಯ. ಆದರಿಂದಲೂ ಅವನಿಗೆ ನಾರಾಯಣ ಎಂಬ ಹೆಸರೆಂದು ಅವನೆ ಹೇಳಿಕೊಡಿದ್ದಾನೆ–

ದೇಹೋಽಯಂ ಮೇ ಸದಾನಂದೋ ನಾಯಂ ಪ್ರಕೃತಿನಿರ್ಮಿತಃ ।
ಪರಿಪೂರ್ಣಶ್ಚ ಸರ್ವತ್ರ ತೇನ ನಾರಾಯಣೋಽಸ್ಮ್ಯಹಂ ॥— ಬ್ರಹ್ಮವೈವರ್ತ

ಇಂಥ ನಾರಾಯಣನು ಜೀವನಾಗಿಯೊ ಈಶ್ವರನಾಗಿಯೊ ಪ್ರಾಕೃತಶರೀರ ಹೊಂದುವನೆ ? ಪೀಡೆಗೊಳಗಾಗುವನೆ ?

ಶ್ರೀಕೃಷ್ಣನು ವಿಪ್ರಪತ್ನಿಯರಲ್ಲಿ ಅನ್ನಬೇಡಲಿಲ್ಲವೇ ? ಬಾಣಾಸುರನೊಂದಿಗೆ ಯುದ್ಧಮಾಡುವಾಗ ಜ್ವರಪೀಡಿತನಾಗಲಿಲ್ಲವೇ ? ಶೈವಜ್ವರದೊಂದಿಗೆ ಕಾಳಗ ಮಾಡಿ ಕೊನೆಗೆ ವೈಷ್ಣವ ಜ್ವರವನ್ನು ಮುಂದೆ ಅಟ್ಟಿ ಆ ಮೂಲಕ ಶೈವ ಜ್ವರವನ್ನು ನಿಗ್ರಹಿಸಿದನಂತೆ ! ಗಾಂಧಾರಿಯ ಶಾಪದಿಂದ ಜಗನ್ನಾಥನೇ ಕಾಡಿನಲ್ಲಿ ಅನಾಥನಂತೆ ಯಾರೂ ಅರಿಯದ ಒಂದು ಕಡೆ ಬೇಡನ ಬಾಣಕ್ಕೆ ತುತ್ತಾಗಿ ಅವತಾರ ಸಮಾಪ್ತಿ ಮಾಡಿಕೊಂಡನಂತೆ ! ಈ ವಿಷಯ ಕೇಳಿ ಅರ್ಜುನನು ದ್ವಾರಕೆಗೆ ಧಾವಿಸಿ ಬಂದು ಆಪ್ತಜನರಿಂದ ಕೃಷ್ಣನ ಪಾರ್ಥಿವ ಶರೀರವನ್ನು ಹುಡುಕಿಸಿ ಕಂಡುಹಿಡಿದು ಅಂತ್ಯಕ್ರಿಯೆ ಮಾಡಿದನೆಂದು ಮಹಾಭಾರತ ಹೇಳಿದೆ. ಹೀಗೆ ಹಸಿವು, ತೃಷೆ, ಜರೆ, ಮರಣ, ರೋಗ-ರುಜಿನಗಳೆಲ್ಲ ಕೃಷ್ಣನಲ್ಲಿ ಕಂಡುಬರುತ್ತಿವೆಯಲ್ಲ ?

ಮೇಲಿನ ಆಕ್ಷೇಪಕ್ಕೆ ಉತ್ತರವೂ ಇಲ್ಲಿ ಇದೆ– "ಭಕ್ತರಿಗೆ ವ್ಯಸನ ಬಾರದಂತೆ ಮಾಡುವ ನಾರಾಯಣನಿಗೆ ವ್ಯಸನವೇ ?" ಪಾಂಡವರ ವನವಾಸ ಕಾಲದಲ್ಲಿ ದೂರ್ವಾಸರು ಹತ್ತುಸಾವಿರ ಮಂದಿ ಶಿಷ್ಯರೊಡನೆ ಬಂದು ಪಾಂಡವರ ಸತ್ವಪರೀಕ್ಷೆಗಾಗಿ ಅನ್ನಭಿಕ್ಷೆ ಬೇಡಿದಾಗ ಶ್ರೀಕೃಷ್ಣನು ಅಕ್ಷಯ ಪಾತ್ರೆಯ ಒಂದು ಅನ್ನದ ಅಗುಳನ್ನುಂಡು ಅಷ್ಟು ಜನರಿಗೂ ಉದರ ಪೂರ್ತಿಯಾದುದರ ಅನುಭವ ನೀಡಿದ್ದಾನೆ. ಅಂಥವನಿಗೆ ಹಸಿವು ಉಂಟೆ ? ಬಲರಾಮನಿಗೆ ಶೈವಜ್ವರ ಪೀಡೆ

ಬಂದಾಗ ಆಲಿಂಗನದಿಂದಲೇ ಅದನ್ನು ಕಳೆದವನು ಕೃಷ್ಣ ಅವನಿಗೆ ರೋಗ ಪೀಡೆ ಇದ್ದೀತೆ ? ರಾಮಾವತಾರ ಕಾಲದಲ್ಲಿಯೆ ಮುದುಕನಾಗಿದ್ದ ಜಾಂಬವಂತನು ತನ್ನ ಕನ್ಯೆಯನ್ನು ಕೃಷ್ಣನಿಗೆ ಕೊಟ್ಟು ವಿವಾಹ ಮಾಡುವುದಕ್ಕಾಗಿಯೇ ಕೃಷ್ಣಾವತಾರದವರೆಗೂ ಬದುಕಿದ್ದು ಹಣ್ಣು ಮುದುಕನಾಗಿದ್ದ. ಅವನನ್ನು ಶ್ರೀಕೃಷ್ಣ ಸುದರ್ಶನ ಚಕ್ರದ ಶಸ್ತ್ರಚಿಕಿತ್ಸೆಗೊಳಪಡಿಸಿ ನವ ತರುಣನನ್ನಾಗಿ ಮಾಡಿದ. ಇಂಥ ಕೃಷ್ಣನಿಗೆ ಜರೆ ಬಂದೀತೆ ? ಮೃತನಾದ ಗುರುಪುತ್ರನನ್ನೂ ಪರೀಕ್ಷಿತನನ್ನೂ ತಿರುಗಿ ಬದುಕಿಸಿಕೊಟ್ಟ ಕೃಷ್ಣನಿಗೆ ಮರಣ ಭಯವೇ ? ಎಲ್ಲವೂ ನಟನೆ ಅವನು ತತ್ಕಾಲದಲ್ಲಿ ನಿರ್ಮಿಸಿ ಬಿಟ್ಟುಹೋದ ಪಾರ್ಥಿವ ಶರೀರಕ್ಕೆ ಅರ್ಜುನ ಉತ್ತರಕ್ರಿಯೆ ಮಾಡಿದನಷ್ಟೇ ? ಈ ಎಲ್ಲ ಯುಕ್ತಿಗಳನ್ನೂ 'ನಾರಾಯಣಗೆ' ಎಂದು ನಾರಾಯಣ ಶಬ್ದ ಪ್ರಯೋಗದಿಂದ ಊಹಿಸಿಕೊಳ್ಳಬೇಕು, ಅಪ್ರಾಕೃತ ಆನಂದಮಯ ಶರೀರನಾದ್ದರಿಂದಲೇ ಆತ ನಾರಾಯಣನೆನಿಸಿದ್ದಾನಲ್ಲವೇ ?

'ನಾರಾಯಣ' ಎಂದರೆ ಭಕ್ತರ ವ್ಯಸನ ಕಳೆವವನು, ತಾನೂ ವ್ಯಸನವಿಲ್ಲದವನು ಎಂದು ಅದರ ಅಕ್ಷರಾರ್ಥ ಹೇಳುವುದೂ ಉಂಟು–

ನ ಅಂದರೆ ಸಕಲ ಚೇತನಾಚೇತನ ಪ್ರಪಂಚಕ್ಕಿಂತ ವಿಲಕ್ಷಣ. ಅ ಅಂದರೆ ಅಧಿಕ, ಉತ್ತಮ, ಆದ್ದರಿಂದಲೆ ರ ಎಂದರೆ ಸಮಸ್ತದೋಷಕ್ಷಯ ಉಳ್ಳವನು ಅದರಿಂದಲೂ ಅ, ಉತ್ತಮನು. ಆದ್ದರಿಂದ ಯ ಎಂದರೆ ಭಕ್ತರ ದೋಷ ವ್ಯಸನಗಳನ್ನು ಹೋಗಲಾಡಿಸುವವನು. ಆದ್ದರಿಂದಲೆ ನ ಅಂದರೆ ಎಲ್ಲ ದೋಷವ್ಯಸನಗಳಿಗೆ ವಿರುದ್ಧವಾದ ಕಾರುಣ್ಯಾದಿ ಪೂರ್ಣಗುಣಸ್ವರೂಪನು ನ + ಅ + ರ + ಅ + ಯ + ನ, ನಾರಾಯನ, ರೂಢಿಯಲ್ಲಿ ನಕಾರವು ಣಕಾರವಾಗುತ್ತದೆ, ನಾರಾಯಣ.

'ಪಸು ಮೊದಲಾಗಿ ಬಾರದು' ಎನ್ನುವುದರ ಬದಲು 'ನೆನೆಯದು' ಎಂದುದು 'ಬಂದೇನೆಂದು ಮನಸ್ಸಿನಲ್ಲಿ ಆಲೋಚಿಸಲೂ ಶಕ್ತವಾಗದು' ಎಂದು ಆಲಂಕಾರಿಕವಾಗಿ ಹೇಳಿದುದೆಂದು ಇಟ್ಟುಕೊಳ್ಳಬೇಕು.

'ಪಶು ಮೊದಲಾಗಿ ನೆನೆಯದು' ಎಂಬ ಪಾಠವಿಟ್ಟುಕೊಂಡು ಪಶು ಎಂದರೆ ಗೋವು ಎಂದರ್ಥವಿಟ್ಟುಕೊಂಡರೂ ಹೀಗೆ ಅರ್ಥ ಹೇಳಬಹುದು– ಲಯಕಾರಕ, ಸರ್ವಶಕ್ತನೆಂದು 'ದೇವರ್ಷಿವಿಪ್ರರ ಕೊಂದು' ಎಂಬ ನುಡಿಯಲ್ಲಿ ಹರಿಯನ್ನು ಹೊಗಳಿದರೂ ಅವನಲ್ಲಿ ಕರುಣೆ ಎಂಬ ಮುಖ್ಯ ಗುಣವೇ ಇಲ್ಲದಂತಾಗುತ್ತದೆ ಎಂಬ ಆಕ್ಷೇಪ ಬರುತ್ತದೆ ಇದಕ್ಕೆ 'ಭಾವಜರೆಂಬರೆ' ಎಂಬಲ್ಲಿಯೇ ಉತ್ತರವಿದೆ ಆದರೂ ಲಯವನ್ನೇ ಕರುಣೆಯ ವ್ಯಾಪಾರವೆನ್ನುವುದು ಆಗ್ರಹವೆಂದು ವಾದಿಸುವವರೆಗೆ ಕೃಷ್ಣಾವತಾರದಲ್ಲಿ ಅವನ ದಯಾರ್ದ್ರಹೃದಯವನ್ನು ತೋರುವ

ಒಂದು ನಿದರ್ಶನವನ್ನು ಈ ನುಡಿಯು ಹೇಳುತ್ತಿದೆ– ಗೋವುಗಳಿಗೂ, ಅವುಗಳಂತೆ ಅಮಾಯಕರಾದ ಸಾಧುಗಳಾದ ಗೋವಳರಿಗೂ ಹಸಿವು, ತೃಷೆ, ಜರೆ, ಮರಣ ರೋಗ-ರುಜಿನಗಳೆಂಬ ಅಸುರ, ಪಿಶಾಚಿಗಳ ಭಯವೆಂಬ ವ್ಯಸನ ಬರಬಾರದು ಎನ್ನುವವ ಕೃಷ್ಣರೂಪಿಯಾದ ನಾರಾಯಣ. ಅವನ ಜಗದುದ್ಧಾರ ಕಾರ್ಯದಲ್ಲಿ ಪಶು ಮೊದಲಾದುದು ಅಂದರೆ ಗೋವುಗಳೂ ಗೋಪಾಲಕರೂ ಮಳೆ ನೀರಲ್ಲಿ ನೆನೆಯುದು ನೆನೆಯಲೂ ಕೂಡದು. ಗೋವರ್ಧನ ಪರ್ವತವನ್ನೆತ್ತಿ ಹಿಡಿದು ಏಳುದಿನಗಳ ಕಾಲ, ಏಳು ವರ್ಷದ ಬಾಲಗೋಪಾಲನು ಇಡೀ ಗೋಕುಲವನ್ನು ರಕ್ಷಿಸಿದನಂತೆ "ಮಳೆ ನಿಂತಿತೆ ? ನೋಡೆಂದು" ಒಬ್ಬ ಗೋವಳನನ್ನು ಹೊರಗೆ ಕಳಿಸಿದರೆ ಆತ ತಿರುಗಿ ಬಂದು "ಕೃಷ್ಣ ಮಳೆನೀರಿನ ಧಾರೆ ನಿಂತಿದೆ, ಆದರೆ ಗೋವಳರ ಕಣ್ಣಿಂದ ಆನಂದದ ಪ್ರೇಮಾಶ್ರುಧಾರೆ ಇನ್ನೂ ಸುರಿಯುತ್ತಿದೆ" ಎಂದನಂತೆ. ಏಳುದಿನ ಕಾಲ ಪರ್ವತದ ಅಡಿಯಲ್ಲಿ ಶ್ರೀಕೃಷ್ಣನ ಕರುಣಾಜಲ ಸುರಿಸುವ ಕಣ್ಣುಗಳೆಂಬ ಮೋಡಗಳನ್ನೇ ದಿಟ್ಟಿಸುತ್ತ ಗೋವಳರು ಆನಂದದಿಂದ ಕುಳಿತಿದ್ದರಂತೆ– ಹೀಗೆ ರುಕ್ಮಿಣೀಶವಿಜಯ ಹೇಳುತ್ತಿದೆ.

ಇಂಥ ಕೃಷ್ಣನ ಕರುಣಾಸ್ವಭಾವವನ್ನು 'ಪಶು' ಅಂದರೆ ಪಶುಗಳಂತೆ ಅಜ್ಞಾನಿಗಳಾದ ಮಾನವರೂ 'ಮೊದಲಾಗಿ' ಎಂದರೆ ವಿಪರೀತ ಜ್ಞಾನವುಳ್ಳ ಅಸುರರ ಸಮೂಹವೂ ನೆನೆಯದು. ಭಕ್ತಿಯಿಂದ ಕೃತಜ್ಞತಾಭಾವದಿಂದ ಸ್ಮರಿಸಲಾರದು ಈ ಅರ್ಥದಲ್ಲಿ 'ಕೃಷ್ಣ' ಎನ್ನದೆ 'ನಾರಾಯಣ' ಎಂದುದು 'ಬ್ರಹ್ಮಾಂಡಾಧಾರಕತ್ವಾದ್ಧಿ ನಾರಾಯಣ ಇತೀರಿತಃ' ಎಂಬಂತೆ ನಾರಾಯಣ ಎಂದರೆ ಬ್ರಹ್ಮಾಂಡಾಧಾರ ಅಂಥ ನಾರಾಯಣನಿಗೆ ಗೋವರ್ಧನೋದ್ಧಾರ ಕಷ್ಟವೇ ? ಎಂದೂ, "ಆಪೋ ನಾರಾ ಇತಿ ಪ್ರೋಕ್ತಾಃ" ಎಂಬಂತೆ ಜಲಶಾಯಿಯಾದ ನಾರಾಯಣನಿಗೆ ಮಳೆ ನೀರಿನಿಂದ ಗೋಕುಲವನ್ನು ರಕ್ಷಿಸುವುದು ಕಷ್ಟವೇ ? ಎಂದೂ ಸೂಚಿಸುವುದಕ್ಕಾಗಿ.

'ರೋಗರುಜಿನಗಳೆಂಬ' ಎಂದೂ 'ಭಯವೆಂಬ' ಎಂದೂ ಎರಡುಬಾರಿ 'ಎಂಬ' ಎಂದುದು ಮೇಲೆ ಹೇಳಿದಂತೆ ಆಧ್ಯಾತ್ಮಿಕ ಆಧಿಭೌತಿಕ ವ್ಯಸನಗಳನ್ನು ಪ್ರತ್ಯೇಕವಾಗಿ ಹೇಳುವುದಕ್ಕಾಗಿ.

'ನಾರಾಯಣ'ಗೆ ಪಸು ಮೊದಲಾಗಿ ನೆನೆಯದು ಎನ್ನುವಾಗ ನಾರಾಯಣ ಎಂಬ ಅನ್ವರ್ಥನಾಮ ಉಳ್ಳವನಿಗೆ ಹಸಿವು ಮುಂತಾದುವು ಇರಬಹುದೆಂದು ನನ್ನ ಮನಸ್ಸು ನೆನೆಯುವುದೂ ಶಕ್ಯವಿಲ್ಲ, ಒಪ್ಪುವುದು, ಹಾಗೆ ಹೇಳುವುದು ಎಲ್ಲ ಬಲುದೂರದ ಮಾತೆಂದು ಮಹಾಲಕ್ಷ್ಮಿ ಅಂದುಕೊಳ್ಳುವ ಭಾವವಿದೆ. ಏಕೆಂದರೆ ನಾರಾಯಣ ಎಂಬುದು ರೂಢಿಯಲ್ಲಿ ಶ್ರೀಹರಿಗೊಬ್ಬನಿಗೇ ಇರುವ ಹೆಸರು. ರೂಢಿ

ಎಂದರೆ ಕೇವಲ ರೂಢಿಯಲ್ಲ ಅನ್ವರ್ಥವೂ ಆಗಿದೆ ವಿಷ್ಣುಸಹಸ್ರನಾಮಗಳಲ್ಲಿ ಒಂದಾಗಿದೆ.

ಯಾನಿ ಗೌಣಾನಿ ನಾಮಾನಿ ವಿಖ್ಯಾತಾನಿ ಮಹಾತ್ಮನಃ ।
ಋಷಿಭಿಃ ಪರಿಗೀತಾನಿ ತಾನಿ ವಕ್ಷ್ಯಾಮಿ ಭೂತಯೇ ॥

ಎಂದು ಗೌಣ ಎಂಬ ಪದದಿಂದ ವಿಷ್ಣುಸಹಸ್ರನಾಮಗಳೆಲ್ಲವೂ ಯೌಗಿಕ ಅಂದರೆ ಗುಣವಾಚಕವಾಗಿದ್ದು ಅರ್ಥಗರ್ಭಿತವೆನ್ನಲಾಗಿದೆ.

ವಿಷ್ಣೋಃ ಸಹಸ್ರನಾಮಾಪಿ ನಿರಂತರ ಶತಾರ್ಥಕಂ ।

ಎಂದು ಪ್ರತಿಯೊಂದು ನಾಮಕ್ಕೂ ನೂರಕ್ಕೆ ಕಡಿಮೆ ಇಲ್ಲದಂತೆ ಅರ್ಥಗಳಿವೆ ಎಂದೂ ಹೇಳಲಾಗಿದೆ. ಆದ್ದರಿಂದ ನಾರಾಯಣ ಶಬ್ದದಿಂದ ಶ್ರೀಹರಿಯು ನ ಅರಾಯಣ ಅಂದರೆ ಪಾಪಾದಿ ಸಕಲ ದೋಷ ದೂರನೆಂದಂತಾಯಿತು ಪಾಪವಿಲ್ಲದವನಿಗೆ ತಾಪ ಉಂಟೆ ? ಮಾನವರ ದುಃಖಕ್ಕೆಲ್ಲ ಅವರ ಪೂರ್ವಜನ್ಮದ ಪಾಪ ಕಾರಣ.

ಪ್ರಾಗ್ ಜನ್ಮಾರ್ಜಿತ ದುಷ್ಕರ್ಮ ದುಃಖಮೂಲಂ ಧ್ರುವಂ ನೃಣಾಂ ।

ಎಂದು ಯುಕ್ತಿಮಲ್ಲಿಕೆ ಹೇಳಿದೆ 'ದೇವರ್ಷಿ ವಿಪ್ರರ ಕೊಂದು ತನ್ನುದರದೊಳು ಇಟ್ಟು ತೀವಿದ್ದ ಹರಿಗೆ ದುರಿತವ ನೆನೆವರೆ ?' ಎಂದು ಹಿಂದೆ ಹೇಳಿದೆ. ಈಗ, ದುರಿತವಿಲ್ಲದವನಿಗೆ ಹಸಿವು ಮುಂತಾದ ಸಂಕಟವಿರಬಹುದೆ ಎಂದು ಪ್ರಶ್ನೆ.

ನಾರಾಯಣ ಶಬ್ದಕ್ಕೆ ಹಿಂದೆ ಹೇಳಿದಂತೆ ಸದಾನಂದ ಸ್ವರೂಪನೆಂದು ಅರ್ಥವಿಟ್ಟುಕೊಂಡರೆ ಸದಾ ನಿರ್ಮಲವಾದ ಆನಂದದಿಂದ ಕೂಡಿದವನಲ್ಲಿ ದುಃಖಕ್ಕೆಲ್ಲಿ ಅವಕಾಶ ? ಹಸಿವು ಮುಂತಾದ ಪೀಡೆಗೆಲ್ಲಿ ಅವಕಾಶ ? ಸುಖದ ಅನಂತರವೆ ದುಃಖ ಭ್ರಮವೂ ಯಥಾರ್ಥಜ್ಞಾನ ಕಾಲದಲ್ಲಿರುವುದಿಲ್ಲ ಎಂಬುದು ಎಲ್ಲರ ಅನುಭವ.

ಸುಖಸ್ಯಾನಂತರಂ ದುಃಖಂ ಭ್ರಮೋ ನ ಪ್ರಮಯಾ ಸಹ ।
ನಹಿ ಪೂರ್ಣಸುಖಜ್ಞಾನೋ ದುಃಖಭ್ರಾಂತ್ಯವಕಾಶವಾನ್ ॥

--ಯುಕ್ತಿಮಲ್ಲಿಕಾ.

ಹಿಂದೆ ಹೇಳಿದಂತೆ ನಾರರಿಗೆ ಮುಕ್ತರಿಗೆ ಅಯನ ಆಶ್ರಯ ನಾರಾಯಣ ಎಂದು ಅರ್ಥವಿಟ್ಟುಕೊಂಡಾಗ ಅನಾದಿಕಾಲದಿಂದ ಮುಕ್ತರಾಗುವವರೆಲ್ಲರಿಗೂ ನಾರಾಯಣನು ಆಶ್ರಯನೆಂದರೆ ಆತ ನಿತ್ಯಮುಕ್ತನೆಂದಾಯಿತು ಮರ್ತ್ಯರಿಗೂ ಮುಕ್ತಿ ಸಿಗುವವರೆಗೆ ಮಾತ್ರ ಹಸಿವು ಬಾಯಾರಿಕೆ ಮುಂತಾದ ಪೀಡೆ ಹೊರತು ಮುಕ್ತಿಯಲ್ಲಿ ಅಲ್ಲ.

ಕ್ಷುತ್‌ಪಿಪಾಸಾದಿ ಮರ್ತ್ಯಾನಾಮಪ್ಯಾ ಮುಕ್ತೇರ್ನ ಸರ್ವದಾ ।

—ಯುಕ್ತಿಮಲ್ಲಿಕೆ

ಮುಕ್ತರಾಗುವ ಮರ್ತ್ಯರಿಗೇ ಇಲ್ಲದ ಪೀಡೆ ನಿತ್ಯಮುಕ್ತನಿಗಿರಬಲ್ಲುದೆ ?

ನಾರಾಯಣ ಎಂಬ ಒಂದು ಹೆಸರಿಗೆ ಈ ಎಲ್ಲ ಅರ್ಥವನ್ನೂ ಸುಲಭವಾಗಿ ಒಪ್ಪಿಕೊಳ್ಳುವ ನಾರಾಯಣಭಕ್ತರ ಮುಂದೆ ಈ ಎಲ್ಲ ಸವಾಲುಗಳೂ ಸರಿಯೆ. ಒಪ್ಪದವರಿಗೆ ಏನನ್ನೋಣ ಎಂದರೆ 'ವ್ಯಸನ ಬರಬಾರದು ಎಂಬ ನಾರಾಯಣಗೆ' ಎಂಬಲ್ಲಿ ಕೆಲವು ಯುಕ್ತಿ ಸೂಚಿತವಾಗಿವೆ–

'ವ್ಯಸನ ಬರಬಾರದು ಎಂಬ' ಎಂದರೆ ನಾರಾಯಣನು ವೇದೋಪದೇಶ ಮಾಡುವಾದ ಸಜ್ಜನರಿಗೆ ಸಂಸಾರದುಃಖ ದೂರವಾಗಬೇಕು, ವೇದದಿಂದ ತತ್ವಜ್ಞಾನ ಪಡೆದು ಅವರು ಮುಕ್ತರಾಗಬೇಕು ಎಂಬ ಉದ್ದೇಶವಿರುತ್ತದೆ. ವೇದದ ಉದ್ದೇಶವೆ ಇದು.

ಅದುಃಖಮಿತರತ್ ಸರ್ವಂ ಜೀವಾ ಏವ ತು ದುಃಖಿನಃ ।
ತೇಷಾಂ ದುಃಖಪ್ರಹಾಣಾಯ ಶ್ರುತಿರೇಷಾ ಪ್ರವರ್ತತೇ ॥

ವೇದದ ಉದ್ದೇಶವೆಂದರೆ ಅದು ವಸ್ತುತಃ ಅದನ್ನು ಉಪದೇಶಿಸುವ ನಾರಾಯಣನ ಉದ್ದೇಶ. ಅಚೇತನವಾದ ವೇದವಾಕ್ಯಕ್ಕೆ ಸ್ವತಃ ಒಂದು ಉದ್ದೇಶ ಇರಬಹುದೆ ? ಅದು ಅಪೌರುಷೇಯವೇನೋ ಹೌದು. ಆದರೆ ಯಾವೊಬ್ಬ ಪುರುಷನೂ ಹೇಳಿದುದಲ್ಲವೆಂದಲ್ಲ.

ವೇದಾನಾಂ ಪ್ರಥಮೋ ವಕ್ತಾ ಹರಿರೇವ ಯತೋ ವಿಭುಃ ।
ಅತೋ ವಿಷ್ಣ್ವಾತ್ಮಕಾ ವೇದಾ ಇತ್ಯಾಹುರ್ವೇದವಾದಿನಃ ॥

ವೇದಗಳನ್ನು ಪ್ರಪ್ರಥಮವಾಗಿ ಲೋಕಕ್ಕೆ ಉಪದೇಶಿಸುವವ ನಾರಾಯಣ. ಅದರಿಂದಲೆ ವೇದಗಳನ್ನು ವಿಷ್ಣುರೂಪವೆಂದು ಗೌರವಿಸುವುದು ವೈದಿಕ ಸಂಪ್ರದಾಯ.

ಶ್ರುತಿಸ್ಮೃತೀ ಮಮೈವಾಜ್ಞೇ ಯಸ್ತೇ ಉಲ್ಲಂಘ್ಯ ವರ್ತತೇ ।
ಆಜ್ಞಾಚ್ಛೇದೀ ಮಮ ದ್ವೇಷೀ ಮದ್ಭಕ್ತೋಽಪಿ ನ ವೈಷ್ಣವಃ ॥

'ಶ್ರುತಿಸ್ಮೃತಿಗಳೆರಡೂ ನನ್ನ ಶಾಸನಗಳು. ಅವನ್ನು ಮೀರುವವನು ನನ್ನನ್ನು ದ್ವೇಷಿಸಿದಂತಾಗುತ್ತದೆ. ಅವನು ನನ್ನ ಭಕ್ತನೆ ಅಲ್ಲ.' ಎಂದು ಭಗವಂತ ಸ್ವತಃ ಹೇಳಿದ್ದಾನೆ ಆದ್ದರಿಂದಲೇ 'ಊರ್ಜಿತ ಶಾಸನ' ಎಂಬ ಒಂದು ನಾಮ ವಿಷ್ಣು ಸಹಸ್ರನಾಮದಲ್ಲಿದೆ. ಹೀಗೆ ಅಪೌರುಷೇಯವಾಗಿದ್ದು ದೋಷರಹಿತವಾದ ವೇದವನ್ನು ಲೋಕಹಿತಕ್ಕಾಗಿ ತನ್ನಲ್ಲಿಟ್ಟುಕೊಂಡು ರಕ್ಷಿಸುತ್ತಿರುವುದರಿಂದಲೂ ಅವನು ನಾರಾಯಣ ನಾರ ಅಂದರೆ ನಿರ್ದೋಷವಾದ ವೇದ. ಅದಕ್ಕೆ ಅವನು ಆಶ್ರಯ. ಅಪೌರುಷೇಯವಾಗಿದ್ದು ಅನಾದಿಯಾದ ವೇದವನ್ನು ಪ್ರಪ್ರಥಮವಾಗಿ ಅಂದರೆ ಪ್ರತಿ ಕಲ್ಪದ ಆದಿಯಲ್ಲಿ ಮೊದಲಿಗೆ ಚತುರ್ಮುಖ ಬ್ರಹ್ಮನನ್ನು ಸೃಷ್ಟಿಸಿ ಅವನಿಗೆ ಉಪದೇಶ ಮಾಡುವವ ನಾರಾಯಣ.

ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ ।
ಯೋ ವೈ ವೇದಾಂಶ್ಚ ಪ್ರಹಿಣೋತಿ ತಸ್ಮೈ ॥

ಎಂದು ಶ್ರುತಿ ಹೇಳುತ್ತಿದೆ. ಅನಾದಿ ವೇದೋಪದೇಶಕನು ಅನಾದಿ ಆಗಲೆಬೇಕು. ಅನಾದಿಕಾಲದಿಂದಲೂ ಪ್ರತಿಕಲ್ಪದ ಆದಿಯಲ್ಲಿ ಪ್ರಪ್ರಥಮವಾಗಿ ವೇದವನ್ನು ಉಪದೇಶಿಸಬೇಕೆಂದರೆ ಆಗ ವೇದವೂ ಇತ್ತು, ಅದರಂತೆ ಅದನ್ನು ಉಪದೇಶಿಸುವವನೂ ಇದ್ದನೆಂದಾಯಿತು. ಚತುರ್ಮುಖನಂತೆ ಆಗ ಹುಟ್ಟಿ ಬೆಳೆದು ಇತರರಿಂದ ಉಪದೇಶ ಪಡೆಯುವವನಲ್ಲವೆಂದಂತಾಯಿತು. ಆದ್ದರಿಂದ ಅವನು ಅನಾದಿ. ಅವನಿಗೆ ಉತ್ಪತ್ತಿ ಇಲ್ಲ. ಶೈಶವಾದಿ ಅವಸ್ಥೆಗಳಿಲ್ಲ. 'ಪಸು ಮೊದಲಾಗಿ' ಎಂಬಲ್ಲಿ ಪಸುಗೂಸು ಎಂಬಂತೆ ಪಸು ಎಂದರೆ ಎಳೆತನ, ಶೈಶವ. ಶೈಶವಾದಿ ಅವಸ್ಥೆಗಳನ್ನೂ ಹರಿಗೆ ನೆನೆಯಲಾಗದು–

ಯಾವದ್ ಬ್ರಹ್ಮ ವಿಷ್ಠಿತಂ ತಾವತೀ ವಾಕ್ ।

ವೇದವೆಷ್ಟು ಅನಾದಿಯೋ ಅಷ್ಟೇ ಪರಬ್ರಹ್ಮನೂ ಅನಾದಿ

'ಹಿಂದೆಯೇ ಇದ್ದ ವೇದವನ್ನು ಅನಂತರ ಬರುವ ವ್ಯಕ್ತಿಯೊಬ್ಬನು ಉಪದೇಶಿಸಬಹುದು. ವೇದದಂತೆಯೇ ಅದನ್ನು ಉಪದೇಶಿಸುವವನೂ ಏಕೆ ಅನಾದಿಯಾಗಿರಬೇಕು ?' ಎಂಬ ಆಕ್ಷೇಪ ಸರಿಯಲ್ಲ. ಅನಾದಿ ಕಾಲದಿಂದಲೂ ಕಲ್ಪದ ಆದಿಯಲ್ಲಿ ಪ್ರಪ್ರಥಮವಾಗಿ ಉಪದೇಶಿಸಬೇಕೆಂದರೆ ಆ ವ್ಯಕ್ತಿ ಅನಾದಿಯೇ ಆಗಿರಬೇಕು.

ಅನಾದೇಃ ಪೃಷ್ಠಲಗ್ನಸ್ಯಾಪ್ಯನಾದಿತ್ವಂ ಹಿ ಯುಕ್ತಿಮತ್ ।
ಯಾವದ್ ಯಾವದ್ ಗಜೋ ಗಚ್ಛೇತ್ ತಾವತ್ ಪುಚ್ಛಂ ಚ ಗಚ್ಛತಿ ॥

ಅನಾದಿಯಾದ ವಸ್ತುವಿಗೆ ಬೆನ್ನಹಿಂದೆಯೆ ಅಂಟಿಕೊಂಡ ವಸ್ತುವೂ ಅನಾದಿಯೆ ಆಗಿರಬೇಕು ಆನೆ ಹೋದಷ್ಟು ದೂರಕ್ಕೆ ಅದರ ಬಾಲವೂ ಹೋಗಬೇಕು ತಾನೆ! ವೇದಾನಾದಿತ್ವ ಸಾಧನೆಗೆ ಯುಕ್ತಿಮಲ್ಲಿಕೆಯಲ್ಲಿ ಹೇಳಿದ ಯುಕ್ತಿ ಇದು. ಒಂದು ವರ್ಣದ ಅನಂತರ ಇನ್ನೊಂದು ಎಂಬಂತೆ ಕ್ರಮದಿಂದ ವೇದವಾಕ್ಯದ ವರ್ಣಗಳು ಬರುತ್ತಿದ್ದರೂ ಅವೆಲ್ಲ ಅನಾದಿಯೆ. ಏಕೆಂದರೆ ಒಂದು ವರ್ಣವು ಅನಾದಿ ಎಂದ ಮೇಲೆ ಅದರ ಬೆನ್ನ ಹಿಂದೇ ಬರುವ ಮುಂದಿನ ವರ್ಣವೂ ಅನಾದಿಯೇ ಆಗಬೇಕು. ಈ ಯುಕ್ತಿ ಪ್ರಕೃತದಲ್ಲಿಯೂ ಸಮಾನ. ಹಿಂದೆ ಪ್ರತಿಕಲ್ಪದ ಆದಿಯಲ್ಲಿಯೂ ವೇದವಿತ್ತು ಎಂದರೆ ಅದನ್ನು ಉಪದೇಶಿಸಿದವನೂ ಇದ್ದ. ಹೀಗಾಗಿ ಆತ ಅನಾದಿಯೆ ಆಗಬೇಕು

ಇನ್ನೊಂದು ಯುಕ್ತಿ– ವ್ಯಸನ ಬರಬಾರದು ಎನ್ನುವವ ನಾರಾಯಣ, ಅಂದರೆ ಅವನು ಉಪದೇಶಿಸುವ ವೇದವು ಜೀವರ ಮುಕ್ತಿಗೆಂದೆ ಹೊರಟಿದೆ. ಅಂಥ ವೇದವು ನಾರಾಯಣನಲ್ಲಿ ದೋಷವನ್ನು ಹೇಳಲಾರದು. ಏಕೆಂದರೆ ದೋಷಜ್ಞಾನದಿಂದ ಪ್ರಯೋಜನವಿಲ್ಲ, ಮಾತ್ರವಲ್ಲ ಅನರ್ಥವೂ ಇದೆ. ಹೇಗೆಂದರೆ ಸಂಸಾರವು ಸುಳ್ಳಲ್ಲ, ಸುಳ್ಳೆನ್ನಲು ಆಧಾರವಿಲ್ಲ. ಸತ್ಯವಾದ ಸಂಸಾರದಿಂದ ಮುಕ್ತಿ ಕೊಡಬಲ್ಲ ಒಬ್ಬನಿರಬೇಕು, ಮುಕ್ತಿ ಬಯಸುವವನು ಅವನ ಗುಣಗಳನ್ನು ತಿಳಿಯಬೇಕು, ತಿಳಿದು ಹೊಗಳಿ ಅವನ ಪ್ರೀತಿ ಸಂಪಾದಿಸಬೇಕು ದೋಷವನ್ನು ತಿಳಿದು ತೆಗಳಿ ಅವನ ಆಗ್ರಹಕ್ಕೆ ತುತ್ತಾಗಬಾರದು. ಆದ್ದರಿಂದ ವೇದವು ಹರಿಯಲ್ಲಿ ಗುಣವನ್ನೇ ಹೇಳುತ್ತದೆ, ದೋಷವನ್ನಲ್ಲ. ಮುಕ್ತಿ ನೀಡುವ ಭಗವಂತನ ಬಗ್ಗೆ ಸ್ವತಂತ್ರವಾಗಿ ಬೇರಾವ ಪ್ರಮಾಣವೂ ಇಲ್ಲವೆಂದು ಬ್ರಹ್ಮಸೂತ್ರದ ಸಿದ್ಧಾಂತವಿದೆ. ಇರುವ ಏಕೈಕ ಪ್ರಮಾಣವಾದ ವೇದವು ದೋಷವನ್ನು ಹೇಳಲಾರದೆಂದ ಮೇಲೆ ದೋಷವಿದೆ ಎನ್ನಲು ಯಾವ ಆಧಾರವೂ ಇಲ್ಲದಂತಾಗುತ್ತದೆ. ಆದ್ದರಿಂದ ಹಸಿವು ಮುಂತಾದ ವ್ಯಸನಗಳು ನಾರಾಯಣನಿಗೂ ಇರಬಹುದೆನ್ನುವುದು ಅತ್ಯಂತ ಅನುಚಿತ ಈ ಯುಕ್ತಿ ನಾರಾಯಣ ಶಬ್ದದಲ್ಲಿಯೂ ಅಡಗಿದೆ. ನಾರ ಎಂದರೆ ನಿರ್ದೋಷಿ ವೇದೋತ್ಪನ್ನ ಜ್ಞಾನ. ಅಯನ ಎಂದರೆ ಅದಕ್ಕೆ ವಿಷಯನಾಗಿ ಆಶ್ರಯನೆನಿಸಿದವ ಅಥವಾ ನಾರ ಎಂದರೆ ನಿರ್ದೋಷವಾದ ವೇದ. ಅಯನ ಎಂದರೆ ಅದಕ್ಕೆ ಪ್ರತಿಪಾದ್ಯನಾಗಿ ಆಶ್ರಯನೆನಿಸಿದವ. ಇಂಥ ನಾರಾಯಣನಿಗೂ ಹಸಿವು ಮುಂತಾದ ಪೀಡೆಗಳಿವೆ ಎಂದು ನನ್ನ ಮನಸ್ಸು ನೆನೆಯುವುದೆ ಅಶಕ್ಯ ಎನ್ನುತ್ತಿದ್ದಾಳೆ, ಮಹಾಲಕ್ಷ್ಮಿ.

**ತಾ ದುಃಖಿಯಾದರೆ ಸುರರರತಿಯ ಕಳೆದು**
**ಮೋದವೀವುದಕೆ ಧರೆಗಾಗಿ ।**
**ಮಾಧವ ಬಾಹನೆ ಕೆಸರೊಳು ಮುಳುಗಿದವ ಪರರ**
**ಬಾಧಿಪ ಕೆಸರ ಬಿಡಿಸುವನೆ ॥**

ಮಾಧವನು ತಾನೆ ದುಃಖಿಯಾಗಿರುವುದಾದರೆ ಸುರರ ದುಃಖ ಕಳೆದು ಸುಖ ನೀಡುವುದಕ್ಕಾಗಿ ಭೂಮಿಗೆ ಬರುವನೆ ? ಕೆಸರಲ್ಲಿ ಮುಳುಗಿದವನು ಪರರನ್ನು ಬಾಧಿಸುವ ಕೆಸರನ್ನು ಬಿಡಿಸುವನೆ ?

ಹಿಂದಿನ ನುಡಿಯಲ್ಲಿ 'ವ್ಯಸನ ಬರಬಾರದು ಎಂಬ ನಾರಾಯಣಿಗೆ' ಎನ್ನುತ್ತ ತನಗೆ ಸಂಸಾರದುಃಖ ಬೇಕೆಂದು ಯಾವ ವಿವೇಕಿಯೂ ಬಯಸುವುದು ಶಕ್ಯವಿಲ್ಲದಿರುವುದರಿಂದ ಪರಬ್ರಹ್ಮ ತಾನಾಗಿ ಬಯಸಿ ಜೀವನಾಗಿ ದುಃಖ ತಂದುಕೊಳ್ಳುವನೆಂಬುದನ್ನು ಮನಸ್ಸಿನಲ್ಲಿ ಆಲೋಚಿಸಲೂ ಒಲ್ಲೆನೆಂದಿದ್ದಾಳೆ, ಮಹಾಲಕ್ಷ್ಮಿ ಈ ನುಡಿಯಲ್ಲಿ "ಪರಬ್ರಹ್ಮ ಜೀವನಾದುದು ಅದು ಬೇಕೆಂದಲ್ಲ, ಜೀವಬ್ರಹ್ಮ ವಿಭಾಗ ಅನಾದಿ" ಎಂಬ ವಾದವನ್ನು ವಿಮರ್ಶಿಸಿದೆ–

ಅನಾದಿ ಕಾಲದಿಂದಲೂ ಮಾಧವನು ತಾನೆ ಸಂಸಾರಿ ಜೀವನಾಗಿದ್ದು ದುಃಖಿಯಾಗಿರುವುದಾದರೆ ಸುರರ ಅಂದರೆ ಸಜ್ಜನರ ಸಂಸಾರ ದುಃಖ ಕಳೆದು ಬ್ರಹ್ಮಾನಂದ ನೀಡುವುದಕ್ಕಾಗಿ ಜ್ಞಾನಕಾರ್ಯದ ಉದ್ದೇಶದಿಂದ ವ್ಯಾಸಾದಿರೂಪದಿಂದಲೂ, ಮೋಕ್ಷ ಮಾರ್ಗದ ವಿಘ್ನಪರಿಹಾರ ಮಾಡುವಂಥ ಬಲಕಾರ್ಯದ ಉದ್ದೇಶದಿಂದ ರಾಮಕೃಷ್ಣಾದಿರೂಪದಿಂದಲೂ ಏಕೆ ಅವತರಿಸುತ್ತಾನೆ ? ಸ್ವತಃ ಕೆಸರಲ್ಲಿ ಬಿದ್ದವನು ತನ್ನ ಹಾಗೆ ಬಿದ್ದಿರುವ ಇತರರನ್ನು ಎತ್ತಲು ಬಯಸುವುದಾದರೆ ಮೊದಲಿಗೆ ತನ್ನ ರಕ್ಷಣೆಗಾಗಿಯೆ ಪರರನ್ನು ಬೇಡಬೇಕು ತಾನೇ ? 'ಉಪಜೀವಕತ್ವಂ ಜೀವತ್ವಂ' ಇನ್ನೊಬ್ಬರನ್ನಾಶ್ರಯಿಸುವುದು ಜೀವಸ್ವಭಾವ ವಾದಿರಾಜರು ಕಲ್ಪಲತೆಯಲ್ಲಿಯೂ ಹೀಗೇ ಹೇಳಿದ್ದಾರೆ–

'ದುಃಖಂ ಚ ಪರದುಃಖ ಜಿಹೀರ್ಷಯಾ ಕಾಲೇಕಾಲೇ
ಮತ್ಸ್ಯಾದಿರೂಪೈರವತರತಃ ಸಕಲ ದುರ್ಜನ ಗರ್ವ
ನಿರ್ವಾಪಣ ಸಮರ್ಥಸ್ಯ ಕಥಮುರೀ ಕ್ರಿಯತಾಂ ? ಸ್ವಯ–
ಮನುತ್ತೀರ್ಣಃ ಕಃ ಪರಾಂಸ್ತಾರಯೇತೇತಿಹಿ ಪ್ರಾಚಾಂ ವಾಚಃ ॥

ಒಂದು ಆಕ್ಷೇಪ– 'ಪರಬ್ರಹ್ಮ ಕೇವಲ ಜೀವನೆ ಆಗಿಲ್ಲ ಈಶ್ವರನೂ ಆಗಿದ್ದಾನೆ ಸರ್ವಶಕ್ತ ಸ್ವತಂತ್ರ ಈಶ್ವರನಾಗಿ ದುಃಖಿ ಜೀವರನ್ನು ಉದ್ಧರಿಸುತ್ತಾನೆ. ಪರರ ಆಶ್ರಯು ಬೇಡ.'

ಇದಕ್ಕೆ ಉತ್ತರ– 'ಮಾಧವ, ಮಾ ಅಂದರೆ ವಿದ್ಯೆ, ಧವ ಅಂದರೆ ಸ್ವಾಮಿ, ವಿದ್ಯಾಧಿಪತಿ, ಪರಂಜ್ಯೋತಿಃಸ್ವರೂಪ. ಅಂಥವನಲ್ಲಿ ಅವಿದ್ಯೆಯು ಪರಿಣಾಮವಾದ ಈಶ್ವರತ್ವ ಹೇಗೆ ಇದ್ದೀತು ?

ಅವಿದ್ಯೆ ಕಾಮಧೇನುವೆಂದೂ ಜೀವ–ಈಶ್ವರರು ಆಕೆಯು ಮಕ್ಕಳೆಂದೂ ಹೇಳುವುದುಂಟು ಜ್ಞಾನ ಸೂರ್ಯನಿಗೆ ಅವಿದ್ಯೆಯು ಕತ್ತಲು ಕವಿಯುವುದೆ ? 'ಅಸಂಗೊ ಹ್ಯಯಂ ಪುರುಷಃ' ಎಂದು ಬೇರೆ, ಶ್ರುತಿಯು ಘೋಷಿಸುತ್ತಿದೆ ಅವಿದ್ಯೆಯು ಶಕ್ತಿ ಅಂಥಹುದು, ಅಘಟಿತ ಘಟನಾ ಪಟು ಎನ್ನುವುದಾದರೆ ಪರಬ್ರಹ್ಮ ಅಸಹಾಯಕವಾಗಿ ಆ ಶಕ್ತಿಗೆ ಮಣಿಯುತ್ತದೆ ಎಂದಂತಾಯಿತು !

ಈ ಈಶ್ವರತೆಯೆಂಬುದು ಒಂದು ಚಿನ್ನದ ಸಂಕೋಲೆ ! ಸರ್ವಜ್ಞತ್ವ ಸರ್ವೇಶ್ವರತ್ವ ಮುಂತಾದ ಮಹತ್ವವೆಲ್ಲ ಅದರಿಂದ ಸಿಗುತ್ತದೆ. ಆದರೆ ತನ್ನ ವಿಚಿತ್ರ ಮಾಯೆಯಿಂದ ಈ ಪ್ರಪಂಚ ಸೃಷ್ಟಿ ಮಾಡಿ ಅದರಲ್ಲಿ ಹೊರಳಿಸಿ ತನ್ನದೇ ಭಾಗವಾದ ಜೀವನನ್ನು ದುಃಖಿಗೊಳಿಸುತ್ತದೆ. ಅದು ಬೇಡವೆಂದಾಗ ದೂರವಾಗುವಂತಹುದಲ್ಲ. ಅವಿದ್ಯೆಯು ಪರಿಣಾಮರೂಪವಾಗಿರುವುದರಿಂದ ಮನಸ್ಸಿನಲ್ಲಿ ಉದಯಿಸುವ ತತ್ವಜ್ಞಾನದಿಂದ ಮಾತ್ರ ಅದು ಕರಗುತ್ತದೆ ಆದರೆ ಈಶ್ವರನಿಗೆ ಮನಸ್ಸೆಂಬುದೆ ಇಲ್ಲ.

'ನಿಷ್ಕಲೇ ನ ಬ್ರಹ್ಮಣಿ ಮನೋಽಪ್ಯಸ್ತಿ' –ಯುಕ್ತಿ ಮಲ್ಲಿಕಾ

ಮಾಯಾಮಯವಾದ ಶರೀರ ಮನಸ್ಸುಗಳನ್ನು ನಿರ್ಮಿಸಿ ಗ್ರಹಣ ಮಾಡಬೇಕು ಬಳಿಕ ಶ್ರವಣಾದಿಗಳನ್ನು ಮಾಡಿ ತತ್ವಜ್ಞಾನ ಪಡೆಯಬೇಕು. ಆದರೆ ತಾನೆ ಗ್ರಂಥರಚನೆ ಮಾಡಿದವನು, ತಾನೆ ಶ್ರವಣ ಮಾಡಬಹುದೆ ?

'ಕಥಂ ಚ ಸ್ವಕೃತಗ್ರಂಥಶ್ರವಣಂ ತಸ ಶೋಭತೇ ?' –ನ್ಯಾಯರತ್ನಾವಳಿ.

ಮಾಯೆ ಕೇವಲ ಪರವ್ಯಾಮೋಹಕರಿಯಾದುದರಿಂದ ತನಗೆ ತತ್ವಜ್ಞಾನವು ಚೈತನ್ಯ ಸ್ವರೂಪದಲ್ಲಿಯೆ ಇದೆ ಆದರೆ ಅದರ ಬಿಸಿಗೆ ಮಾಯೆ ಕರಗುವುದಿಲ್ಲ. ಅದು ಅನಿಷ್ಟವಲ್ಲ ಎನ್ನೋಣವೆ ? ಅದು ಶಕ್ಯವಿಲ್ಲ ಈಶ್ವರನು ಈ ಮಾಯೆಯು ಬಲದಿಂದಲೆ ತನ್ನ ಅಂಶರೆ ಆದ ಅಜ್ಞ ಜೀವರಿಗೆ ದುಃಖ ಕಾರಣವಾದ ಪ್ರಪಂಚ ಸೃಷ್ಟಿ ಮಾಡುತ್ತಾನೆ. ಭಯ ರೋಗ ದಾರಿದ್ರ್ಯಗಳಿಂದ ಬಳಲಿಸಿ ಅವರಿಂದ ಹರಕೆ

ಕಾಣಿಕೆಗಳನ್ನು ಸುಲಿಯುತ್ತಾನೆ ಲೋಕಕ್ಕೆ ಅನಿಷ್ಟವಾದ ಇಂಥ ಮಾಯೆ ಕರುಣಾಸಮುದ್ರನೆನಿಸಿದ ಈಶ್ವರನಿಗೆ ಇಷ್ಟವಾಗಕೂಡದು

ಈ ಈಶ್ವರನು ಒಂದು ವಿಧದಿಂದ ಸ್ವಾರ್ಥಿ ಎಂದೂ ಹೇಳಬಹುದು. ತಾನು ಅನೇಕ ಅವತಾರ ಮಾಡಿ ಜೀವರಿಗೆ ಗುರುವಾಗಿ, ಶಾಸ್ತ್ರೋಪದೇಶಮಾಡಿ, ಶ್ರವಣಾದಿಗಳ ಮೂಲಕ ತತ್ವಸಾಕ್ಷಾತ್ಕಾರ ಹೊಂದುವಂತೆ ಮಾಡಿದರೆ ಅದಕ್ಕೆ ಅವರು ನಿಷ್ಪ್ರಪಂಚ ಸ್ಥಿತಿಗೆ ಬಂದಾಗ ಪ್ರಪಂಚದಲ್ಲಿ ಅಂತರ್ಗತವಾದ ತನ್ನ ಮಾಯೆಯೂ ಕರಗಿಹೋದೀತೆಂಬ ಅಭಿಪ್ರಾಯ ಊಹಿಸಿದರೆ ತಪ್ಪಾಗದು. ಏಕಾಜ್ಞಾನವಾದದಲ್ಲಿ ಮಾತ್ರ ಇದು ಸಾಧ್ಯ; ಅನೇಕಾಜ್ಞಾನವಾದದಲ್ಲಿ ಈಶ್ವರನಿಗೆ ಮಾಯೆಯ ಬಂಧನ ಶಾಶ್ವತವೆ ಸರಿ

ಅಂತೂ ತಾನು ಭಕ್ತವತ್ಸಲ, 'ಪರಿತ್ರಾಣಾಯ ಸಾಧೂನಾಂ' ಎಂಬಂತೆ ಭಕ್ತರಿಗಾಗಿ ಅವತರಿಸುವೆನೆಂದೆಲ್ಲ ಹೇಳುವುದು ಹಾಸ್ಯಾಸ್ಪದ.

ವಸ್ತುತಃ ಅವತಾರಗಳಿಂದ ಪ್ರಯೋಜನವೂ ಇಲ್ಲ ಶಾಸ್ತ್ರೋಪದೇಶವೆ? ಶ್ರುತಿ ಸ್ಮೃತಿ ವಾಕ್ಯಗಳು ಯಾವುವೂ-ಕೆಲವು 'ಮಹಾವಾಕ್ಯ'ಗಳನ್ನು ಬಿಟ್ಟರೆ-ತತ್ವ ಉಪದೇಶ ಮಾಡುವುದಿಲ್ಲ. ಮಹಾವಾಕ್ಯಗಳೂ ಸ್ಪಷ್ಟವಾಗಿ ತತ್ವವನ್ನು ಹೇಳುವುದಿಲ್ಲ. ಸೂಚ್ಯವಾಗಿ ಹೇಳುತ್ತವೆ ಎಂದರೆ ಯಾವ ವಸ್ತುವಿನ ಪರಿಚಯವೆ ಇಲ್ಲವೊ ಅದರ ಸೂಚನೆ ಸಿಗುವುದೂ ಅಸಂಭವ 'ಗಂಗೆಯಲ್ಲಿ ಹಳ್ಳಿ' ಎಂದಾಗ ಗಂಗೆಯ ದಡವೆಂದು ಪರಿಚಿತವಾದ ದಡವನ್ನೇ ಗಂಗಾಶಬ್ದವು ಸೂಚ್ಯವಾಗಿ ತಿಳಿಸೀತು ಹೊರತು ಯಾರೂ ತಿಳಿಯದ ಒಂದು ಪದಾರ್ಥವನ್ನು ಅದು ತಿಳಿಸಲಾರದು–

ನ ಹಿ ಗಂಗಾಪದಾಲ್ಲಕ್ಷ್ಯಂ ನೃಶೃಂಗಂ ಕ್ವಾಪಿ ಕಥ್ಯತೇ ।
ಕಿಂತು ಪ್ರಾಮಾಣಿಕಂ ತೀರಂ ।

–ನ್ಯಾಯರತ್ನಾವಳೀ.

ಆದ್ದರಿಂದ ತತ್ವೋಪದೇಶ ಮಾಡಲು ಹೊರಟ ಗುರು, 'ಗುರೋಸ್ತು ಮೌನಂ ವ್ಯಾಖ್ಯಾನಂ ಶಿಷ್ಯಾಸ್ತು ಛಿನ್ನಸಂಶಯಾಃ' ಎಂದುಕೊಳ್ಳುತ್ತ ಸುಮ್ಮನಿರಬೇಕಾಗುತ್ತದೆ. ಹೀಗಾಗಿ ಈಶ್ವರನ ಅವತಾರಗಳಿಂದ ಅಧ್ಯಾತ್ಮಕ್ಷೇತ್ರದಲ್ಲಿ ಸಾಧಿಸಲಾಗುವಂತಹುದೇನಿಲ್ಲ

ಅಂತರ್ಯಾಮಿಯಾಗಿ ಪ್ರೇರಿಸಿ ಜ್ಞಾನೋದಯ ಮಾಡಿಸುವನೆ? ಹಾಗಿದ್ದರೂ ಅದು ಶ್ರವಣಾದಿ ಸಾಧನಗಳ ಮೂಲಕವೆ ತಾನೆ? ಶ್ರವಣಾದಿಗಳೆ ವ್ಯರ್ಥವೆಂದು ತೋರಿಸಿದ್ದಾಯಿತು. ಯಾವ ಸಾಧನವೂ ಬೇಡ, ತಾನು

ಪ್ರಸನ್ನನಾದರೆ ಒಡನೆ ಜ್ಞಾನೋದಯ ಮಾಡಿಸುವನು ಎಂದರೆ ಪ್ರಸನ್ನತೆಗೆ ಏಕೆ ಕಾಯಬೇಕು ? ಅವನಿಗೆ ಅದರಿಂದೇನಾಗಬೇಕಾಗಿದೆ ? ಪರಂಜ್ಯೋತಿಃ ಸ್ವರೂಪನಾದ ಆತ್ಮನಿಗೆ ಅಸ್ವಾಭಾವಿಕವಾಗಿ ಅಂಟಿಕೊಂಡ ಅವಿದ್ಯೆಯನ್ನು ತೊಲಗಿಸಿ ದುಃಖ ದೂರ ಮಾಡಲು ಈಶ್ವರನು ಏಕೆ ಇಷ್ಟೊಂದು ಅನುಮಾನಪಡುತ್ತಾನೆ ?

ರಾಮಕೃಷ್ಣಾದಿ ಅವತಾರಗಳಲ್ಲಿ ಮೋಕ್ಷಸಾಧಕರಾದ ಸಜ್ಜನರಿಗೆ ಕಂಟಕ ಪ್ರಾಯರಾದ ಅಸುರರನ್ನು ಕೊಲ್ಲುತ್ತಾನೆ, ಏಕೆ ? ಅವಿದ್ಯಾ ಸಂಬಂಧ ಪ್ರಯುಕ್ತವಾಗಿದ್ದು ಅಸ್ವಾಭಾವಿಕವಾದ ಅಸುರ ಸ್ವಭಾವವನ್ನು ತಿದ್ದಬಾರದೆ ? ಅಸುರತ್ವವನ್ನೆ ಕಳೆಯಬಾರದೆ ? ಸರ್ವಶಕ್ತನಾಗಿದ್ದು ಹಾಗೆ ಮಾಡದೆ ಕರುಣೆಯಿಲ್ಲದೆ ಅಸುರರನ್ನೆ ಕಡಿದು ಕೊಲ್ಲುವುದು ಚೆಂದವೆ ?

ಹೀಗೆ ಅದ್ವೈತಿಗಳ ಈಶ್ವರ ತತ್ವವೆ ಲೋಕಕ್ಕೆ ನಿರುಪಯುಕ್ತ, ಮಾತ್ರವಲ್ಲ ಅನಿಷ್ಟ. ತಾನೂ ತನ್ನ ಮಾಯೆಯೆಂಬ ಕೆಸರಲ್ಲಿ ಮುಳುಗಿ ಅಸಹಾಯಕವಿನಿಸಿದೆ ಪರರನ್ನು ಬಾಧಿಸುವ ಅವಿದ್ಯೆಯ ಕೆಸರನ್ನು ಬಿಡಿಸುವುದೆ ? ವಾದಿರಾಜರು ಇದನ್ನೆ ಯುಕ್ತಿಮಲ್ಲಿಕೆಯಲ್ಲಿಯೂ ಹೇಳಿದ್ದಾರೆ–

ಅನುತ್ತೀರ್ಣಃ ಸ್ವಯಂ ಪಂಕಾತ್ ಕಿಮನ್ಯೋತ್ತಾರಕೋ ಭವೇತ್ ।
ಯದಿ ಬದ್ಧಂ ಪರಂ ಬ್ರಹ್ಮ ಕಃ ಸ್ಯಾದ್ ಬಂಧಸ್ಯ ಮೋಚಕಃ ॥

ಮಧ್ವಮತದ ಈಶ್ವರನು ಸ್ವಾಭಾವಿಕವಾಗಿಯೆ ಈಶ್ವರ, ಸ್ವತಂತ್ರ, ಸರ್ವಶಕ್ತ ಜೀವನೂ ಸ್ವಾಭಾವಿಕವಾಗಿಯೆ ಜೀವ ಅವನ ಸಂಸಾರದುಃಖ ಮಾತ್ರ ಅಸ್ವಾಭಾವಿಕ ಅದನ್ನು ದೂರಮಾಡಿ ಸ್ವಾಭಾವಿಕವಾದ ಆನಂದವನ್ನು ಅಭಿವ್ಯಕ್ತಿಗೊಳಿಸಲು, ಅದು ಯೋಗ್ಯತಾನುಸಾರ ಬೇರೆ ಬೇರೆಯಾದುದರಿಂದ, ಬೇರೆ ಬೇರೆ ಮಟ್ಟದ ಸಾಧನಾನುಷ್ಠಾನ ಮಾಡಿಸಲು ವಿಚಿತ್ರ ಪ್ರಪಂಚ ಸೃಷ್ಟಿ ಮಾಡುತ್ತಾನೆ. ಸದಸತ್ ಪ್ರವೃತ್ತಿಗಳ ನಿರಂತರ ಸಂಘರ್ಷ ಏರ್ಪಡಿಸುತ್ತಾನೆ ಆ ಎರಡು ಪ್ರವೃತ್ತಿಗಳ ಸಮತೋಲನವನ್ನೂ ಕಾಪಾಡುತ್ತ ಅಸುರರ ಕೈ ಮೇಲೇದಾಗ ಅವತಾರ ಮಾಡುತ್ತಾನೆ. ಸಜ್ಜನರಿಗೆ ಸಹಾಯಮಾಡುತ್ತಾನೆ ಅವರು ಜೀವನ ಸಂಗ್ರಾಮದಲ್ಲಿ ಜಯಶೀಲರಾಗುವಂತೆ ಮಾಡಿ ಮುಕ್ತಿ ನೀಡುತ್ತಾನೆ. ಅಸುರರಲ್ಲಿ ಅಸುರತ್ವವನ್ನೆ, ಅದು ಸ್ವಾಭಾವಿಕವಾದ್ದರಿಂದ ನಾಶ ಮಾಡದೆ ವಿಕಾಸಗೊಳಿಸಿ ಅವರಿಗೆ ಯೋಗ್ಯವಾದ ಗತಿ ನೀಡುತ್ತಾನೆ. ಇದು ಅವನ ಸಂಕಲ್ಪ. ಜೀವರ ಅನಾದಿಯೋಗ್ಯತೆಯನ್ನು ಅಳಿಸಿ ಎಲ್ಲರನ್ನು ನಾಶಪಡಿಸುವ ವಿಧ್ವಂಸಕಕೃತ್ಯಕ್ಕೆ ಆತ ತೊಡಗುವುದಿಲ್ಲ. ತೊಡಗಿಸುವುದು ಯಾರಿಂದಲೂ ಶಕ್ಯವಿಲ್ಲ. ಆದ್ದರಿಂದಲೆ 'ಪರಿತ್ರಾಣಾಯ ಸಾಧೂನಾಂ' ಎನ್ನುತ್ತ ಲೀಲೆಯಿಂದ ನಾನಾ ಅವತಾರವೆತ್ತುತ್ತಾನೆ ಅದರಿಂದ ಜ್ಞಾನಕಾರ್ಯ ಬಲಕಾರ್ಯಗಳು ಮಾತ್ರವಲ್ಲ 'ಸ್ಮೃತಿ ಕೀರ್ತನ

ಪ್ರಣತಿಭಿರ್ವಿಮುಕ್ತಯೇ' ಎಂಬಂತೆ ಸಾಧಕರಿಗೆ ಶ್ರವಣಮನಕಾನಂದ ನೀಡುವುದೂ ಪ್ರಯೋಜನ

ಮಧ್ವಮತದಲ್ಲಿ ಹೊರತು ಬೇರಾವ ಮತದಲ್ಲಿಯೂ ಹೀಗೆ ಈಶ್ವರ ತತ್ವದ ಸಾರ್ಥಕತೆಯನ್ನು ತೃಪ್ತಿಕರವಾಗಿ ವರ್ಣಿಸುವುದು ಅಶಕ್ಯ ಮಾಧವ-ಮಧ್ವರೊಳಗಿನ ಸಂಬಂಧವೆ ಅನನ್ಯಾದೃಶ, ಸ್ವಾಭಾವಿಕ ಮಧು ಅಂದರೆ ಆನಂದ, ಆನಂದತೀರ್ಥರು, ಅವರಿಗೆ ಪ್ರಿಯನಾದರಿಂದ ಮಾಧವನೆನಿಸಿದವ ಮಾಧವ. 'ಇದಂ ತೇ ಪಾತ್ರಂ' 'ತದಸ್ಯಪ್ರಿಯಂ' ಎಂದು ಮುಂತಾಗಿ ಶ್ರುತಿಯೆ ಇದನ್ನು ಕೊಂಡಾಡುತ್ತದೆ

ನಾರಾಯಣನು ಮೋಕ್ಷದಾತನಾದ್ದರಿಂದ ನಿತ್ಯಮುಕ್ತ 'ನಾರಾಯಣ' ಎಂದರೂ ಮುಕ್ತರಿಗಾಶ್ರಯ ಎಂದು ಅರ್ಥವಾಗುವುದರಿಂದ ಆತ ನಿತ್ಯಮುಕ್ತ ಎಂದು ಹಿಂದಿನ ನುಡಿಯಲ್ಲಿ ಹೇಳಿದೆ. ಆದರೆ ನಾರಾಯಣನು 'ಮಾಧವ'ನೆಂದೂ ಪ್ರಸಿದ್ಧನಾಗಿದ್ದಾನೆ ಮಾಧವನೆಂದರೆ ಲಕ್ಷ್ಮೀಪತಿ ಲಕ್ಷ್ಮೀ ಬ್ರಹ್ಮಾದಿಗಳ ದೊಡ್ಡ ಸಂಸಾರ ಆತನದು, ಅವತಾರದಲ್ಲಿಯೂ 'ಮಾಧವ'ನಾಗಿ ಅಂದರೆ, ಮಧು ಎಂಬ ಯಾದವನ ಕುಲದಲ್ಲಿ ಹುಟ್ಟಿ ಸ್ತ್ರೀಯರೊಂದಿಗೆ ರಮಿಸುತ್ತ ಮಧುವನ ವಿಹಾರ ಮಾಡುವುದರಿಂದಲೂ ಮಾಧವನೆನಿಸಿದವ ಸಂಸಾರದಿಂದ ಬೇಸತ್ತ ಜನ ಯಾರನ್ನು ಮೊರೆ ಹೊಗಬೇಕು ? ಈ ಸಂಸಾರಿ ಮಾಧವನನ್ನೆ ? ಅವನು ನಿತ್ಯ ಮುಕ್ತನೆ ? ಇದೆಲ್ಲ ನಿಜ ಸಂಗತಿಯನ್ನು ಮರೆಮಾಚುವ ಯತ್ನವಲ್ಲವೆ ?

ಈ ಪ್ರಶ್ನೆಗೆ ಉತ್ತರ- 'ಮಾಧವನು ತಾ ದುಃಖಿಯಾದರೆ ಸುರರ ಅರತಿ ಕಳೆದು ಮೋದವೀವುದಕ್ಕೆ ಧರೆಗೆ ಬಾಹನೆ' ? ಹೆಂಡತಿ ಮಕ್ಕಳೆ ಸಂಸಾರವಲ್ಲ. ಹೆಂಡತಿ ಮಕ್ಕಳಿಲ್ಲದ ಸನಕಾದಿಗಳನ್ನೂ ಸಂಸಾರಿ ಜೀವರೆಂದೆ ಶಾಸ್ತ್ರದಲ್ಲಿ ವ್ಯವಹರಿಸುತ್ತಾರೆ ಜಡ ದೇಹವೆ ಸಂಸಾರ. ಮಾಧವ ಎಂದರೆ , ಮಾ-ಜ್ಞಾನ ಸ್ವರೂಪಿ, ಧವ-ಜಗತ್ಪತಿ ಸದಾ ಜ್ಞಾನಸ್ವರೂಪನಾಗಿದ್ದು ಎಂದೂ ಜಡದೇಹ ಧರಿಸುವವನಲ್ಲ. ಜಡದೇಹ ಧರಿಸಿ ಸಂಸಾರದ ಸುಖ ದುಃಖ ಅನುಭವಿಸುವನಲ್ಲ. ವಸ್ತುತಃ ಎಲ್ಲ ಸಜ್ಜೀವರೂ ಜ್ಞಾನಸ್ವರೂಪಿಗಳೇ ಆದರೂ ಜಡದೇಹ ಅವರಿಗಿದೆ. ಆದರೆ ಮಾಧವನು ಮಾ-ಇಲ್ಲ, ಧವ-ಅಧಿಪತಿ. ಅಂದರೆ, ಅವನಿಗೊಬ್ಬ ಅಧಿಪತಿ ಇಲ್ಲ, ಸ್ವತಂತ್ರ. ತನ್ನಿಚ್ಛೆಯಂತೆಯೇ ನಡೆಯುವ. ಜಡದೇಹ ಬೇಡವೆಂದರೆ ಧರಿಸಬೇಕಾಗಿಲ್ಲ ಬೇಕೆನ್ನುವುದಿಲ್ಲವೆಂದು 'ವ್ಯಸನ ಬರಬಾರದು ಎಂಬ ನಾರಾಯಣಗೆ' ಎಂದು ಹಿಂದೆಯೇ ಹೇಳಿದೆ

ಹಾಗಾದರೆ ಲಕ್ಷ್ಮೀ ಬ್ರಹ್ಮಾದಿಗಳ ದೊಡ್ಡ ಸಂಸಾರ ಕಟ್ಟಿಕೊಂಡು 'ತ್ರೈಲೋಕ್ಯ ಕುಟುಂಬ ಪಾಲನ ಪರ'ನಾದನೇಕೆ ? ಅವರಿಗೆಲ್ಲ ಸುಖ ನೀಡುವುದಕ್ಕಾಗಿ. ತಾನು ತನ್ನದೇ ಆದ ಸುಖ ಅನುಭವಿಸುತ್ತ ಇತರರಿಗೆ ಸುಖ ನೀಡುವುದು ಅವನ ಸ್ವಭಾವ. ಬೇಡುವುದಲ್ಲ ಮಧು ಅಂದರೆ ಸುಖ. ಅದನ್ನು ನೀಡುವುದರಿಂದಲೂ ಮಾಧವ. ಮಧುವಿದ್ಯೆಯಿಂದ ಉಪಾಸನೆ ಮಾಡಿ ದೇವತೆಗಳು ಒಲಿಸಿಕೊಳ್ಳುವುದೂ 'ದೇವ ಮಧು' ಎಂದು ಉಪನಿಷತ್ತು ಕೊಂಡಾಡುವ ಈ ಮಾಧವನನ್ನೇ ಮಧುವಿನಂತೆ ಈ ಮಾಧವ. ಮಧು ಅಂದರೆ ಜೇನು, ಸವಿಯನ್ನು ನೀಡುತ್ತದೆ, ಬೇಡುವುದಿಲ್ಲ. ಸವಿಗಾಗಿ ನಾವೇನೂ ಅದಕ್ಕೆ ಸೇರಿಸುವುದಿಲ್ಲ. ಆದ್ದರಿಂದಲೆ ವಿಷ್ಣು ಸಹಸ್ರನಾಮದಲ್ಲಿ 'ಮಾಧವೋ ಮಧುಃ' ಎಂದು ಹೇಳಿದೆ.

'ಮಾಧವ' ಶಬ್ದದ ಮೇಲೆ ಬರಿಯ ದೊಂಬರಾಟ ಬೇಡ ವಾಸ್ತವವಾಗಿ, ಕೃಷ್ಣಾವತಾರದಲ್ಲಿ ಆತ ತನ್ನ ಸುಖಕ್ಕಾಗಿ ಸಂಸಾರಿಯಾಗಿರಲಿಲ್ಲವೆ ? ಎಂದರೆ 'ಮಾಧವ ತಾ ದುಃಖಿಯಾದರೆ ಸುರರ ಅರತಿ ಕಳೆದು ಮೋದವೀವುದಕ್ಕೆ ಧರೆಗಾಗಿ ಬಾಹನೆ ?' ನಾರದರಂಥ ಸುರರು ತಮ್ಮ ದುಃಖ ಪರಿಹರಿಸಿಕೊಂಡು ಸುಖಿಸಲು ಸದಾ ದ್ವಾರಕೆಯಲ್ಲಿಯೇ ಶ್ರೀಕೃಷ್ಣನ ಅರಮನೆಯಲ್ಲಿ ಏಕೆ ಇರುತ್ತಿದ್ದರು ? ಸಂಸಾರದಲ್ಲಿ ವಿರಕ್ತರು ಅವರು ಕಮಲವನ್ನು ದುಂಬಿ ಬಿಡದಿರುವಂತೆ ಇವರು ಕೃಷ್ಣನ ಬಳಿಯೆ ಇರುತ್ತಿದ್ದರೆಂದರೆ ಏನು ಅರ್ಥ ? ವಿರಕ್ತ ಶಿಖಾಮಣಿಯಾದ ಮನ್ಮಥ ವೈರಿಯಾದ ಶಿವನ ನಾಮಕ್ಕಿಂತಲೂ ಸಂಸಾರಿಯಾದ ಮನ್ಮಥ ಪಿತನಾದ ನಾರಾಯಣನ ನಾಮವನ್ನೇ ನಾರದರು ಸದಾ ಹಾಡಿ ಕುಣಿಯುವುದರ ಗುಟ್ಟೇನಿರಬಹುದು ? ಮಾಧವನು ತಾನೇ ಸಂಸಾರದ ಕೆಸರಲ್ಲಿ ಮುಳುಗಿದ್ದರೆ ನಾರದಾದಿಗಳನ್ನು ಜನನ ಮರಣಗಳ ಸಂಸಾರದ ಕೆಸರಿನಿಂದ ಎತ್ತಲು ಸಾಧ್ಯವಾದೀತೆ ? ವಸ್ತುತಃ ಮಾಧವನು ನಿತ್ಯ ಮುಕ್ತ. ಆದ್ದರಿಂದಲೇ ಇತರರಿಗೆ ಮುಕ್ತಿ ನೀಡುತ್ತಾನೆ ಪದ್ಮಪುರಾಣದಲ್ಲಿ ಹೇಳಿದೆ–

ನಿತ್ಯ ತೀರ್ಣಾಶನಾಯಾದಿರೇಕ ಏವ ಹರಿಃ ಸ್ವತಃ ।
ಅಶನಾಯಾದಿಕಾನನ್ಯೇ ತತ್ಪ್ರಸಾದಾತ್ತರಂತಿ ಹಿ ॥

'ನಾರದ ಸನಕಾದಿ ಮೊದಲಾದ ಯೋಗಿಗಳು ನಾರಿಯರಿಗೆ ಮರುಳಹರೆ ?, ಎಂದು ಮುಂದೆ ಲಕ್ಷ್ಮೀಶೋಭನ ಪದದಲ್ಲಿ ಈ ಅಂಶವನ್ನು ಸ್ಪಷ್ಟಪಡಿಸಿದೆ. 'ಭೂಮಿಯಲ್ಲಿ ಋಷಿಗಳು ಹೆಂಡಿರುಮಕ್ಕಳ ಸಂಸಾರ ತೊರೆದು ಕಾಡಿಗೆ ಹೋಗಿ ತಪಸ್ಸು ಮಾಡುವುದು ಸ್ವರ್ಗದಲ್ಲಿ ಅಪ್ಸರೆಯರ ಸಂಗಕ್ಕಾಗಿ' ಎಂದು ಕುಚೋದ್ಯ ಮಾಡುವುದುಂಟು. ಆದರೆ ಋಷಿಗಳು ಸ್ವರ್ಗ ಬಯಸುವುದು ಜ್ಞಾನಿಗಳಾದ ದೇವತೆಗಳ ಒಡನಾಟಕ್ಕಾಗಿ. ಹರಿಯ ದರ್ಶನಕ್ಕಾಗಿ. ಏಕೆಂದರೆ ನಾರದರಂಥ

ದೇವರ್ಷಿಗಳು ದೇವಲೋಕದಲ್ಲಿಯೇ ಎಲ್ಲ ದೇವತೆಗಳಂತೆ ಜನಿಸಿದರು. ಅವರೆ ಭೂಮಿಗೆ ಬಂದು ನಾರಾಯಣನನ್ನು, ಕೃಷ್ಣನನ್ನು ಆಶ್ರಯಿಸುತ್ತಾರೆ ಎಂಬುದನ್ನು ಮರೆಯಬಾರದು ಈ ಅಭಿಪ್ರಾಯದಿಂದಲೆ 'ಸುರರ ಅರತಿ' ಎನ್ನಲಾಗಿದೆ

ಕೃಷ್ಣ ಎಲ್ಲರಂತೆ ಹುಟ್ಟಿ ಸಂಸಾರಿಯಾದವನಲ್ಲ ಎನ್ನುವುದು ಯುಕ್ತಿ ಯುಕ್ತವಾಗಿ ಕಾಣುವುದಿಲ್ಲ ಅವನು ಎಲ್ಲ ದೇವತೆಗಳಂತೆ ಶಾಪದಿಂದ ಮನುಷ್ಯನಾಗಿ ಹುಟ್ಟಿದವನು ದೇವಾನಾಂ ನಿರಯೋ ನಾಸ್ತಿ. ದೇವತೆಗಳಿಗೆ ಬೇರೆ ನರಕವಿಲ್ಲ ಮನುಷ್ಯ ಜನ್ಮವೆ ನರಕ ತಮ್ಮ ಅಪರಾಧಗಳಿಂದ ಶಾಪ ಪಡೆದು ಮನುಷ್ಯರಾಗಿ ಹುಟ್ಟುತ್ತಾರೆ. ನಾರಾಯಣನೂ ಇದಕ್ಕೆ ಹೊರತಲ್ಲ ವೈಕುಂಠದಲ್ಲಿ ಸುಖವಾಗಿ ಮಲಗುವವನು ಶಾಪದಿಂದ, ಅಂದರೆ ಶಾಪಕ್ಕೆ ಕಾರಣವಾದ ದುಷ್ಕರ್ಮದಿಂದ, ಭರ್ತೃಹರಿ ಹೇಳಿದಂತೆ 'ವಿಷ್ಣುರ್ಯೇನ ದಶಾವತಾರ ಗಹನೇ ಕ್ಷಿಪ್ತೋ ಮಹಾ ಸಂಕಟೇ' ಮಹಾ ಸಂಕಟಮಯವಾದ ದಶಾವತಾರ ತಾಳುವಂತಾಯಿತು. ಒಮ್ಮೆ ಶುಕ್ರಾಚಾರ್ಯರು ತಪಸ್ಸಿನಲ್ಲಿದ್ದಾಗ ದೇವೇಂದ್ರನು ಅಸುರರ ಮೇಲೆ ದಾಳಿ ಇಟ್ಟ ಅವನ ಕೈಮೇಲಾಯಿತು. ಶುಕ್ರಾಚಾರ್ಯರ ತಾಯಿ, ಭೃಗುಮುನಿಗಳ ಪತ್ನಿ, ಖ್ಯಾತಿ ದೇವಿ ಅವನನ್ನು ಸ್ತಂಭಿಸಿದಳು ವಿಷ್ಣು ಅವನ ರಕ್ಷಣೆಗೆ ಬಂದಾಗ ಇಬ್ಬರನ್ನೂ ತಪೋಜ್ವಾಲೆಯಿಂದ ಸುಡತೊಡಗಿದಳು. ವಿಷ್ಣು ಸುದರ್ಶನ ಚಕ್ರದಿಂದ ಅವಳ ಶಿರಶ್ಛೇದ ಮಾಡಿದ ಸ್ತ್ರೀ ಹತ್ಯೆಯ ಮಹಾಪಾತಕಿಗೆ ಭೃಗುಮುನಿ ಶಾಪವಿತ್ತ–ಏಳು ಬಾರಿ ಮಾನವನಾಗಿ ಭೂಮಿಯಲ್ಲಿ ಹುಟ್ಟು ಎಂದು ವಾಯು ಪುರಾಣ ಮತ್ಸ್ಯಪುರಾಣ ಮುಂತಾದವುಗಳಲ್ಲಿ ಈ ಕಥೆ ಬರುತ್ತದೆ. ಶಾಪದಿಂದ ಜನಿಸಿದರೆ ಅದು ಲೀಲಾವತಾರವೆನ್ನಬಹುದೇ ? ಹಾಗಿದ್ದರೆ ಉಳಿದ ದೇವತೆಗಳ ವಿಷಯದಲ್ಲಿಯೂ ಹಾಗೆನ್ನಬಹುದು.

ಮೇಲಿನ ಆಕ್ಷೇಪಕ್ಕೆ ಉತ್ತರ– ಮಾಧವ ತಾ ದುಃಖಿಯಾದರೆ, ಶಾಪದಿಂದ ದುಃಖಮಯವಾದ ಜನ್ಮತಾಳುವುದಾಗಿದ್ದರೆ ಸುರರ ಅರತಿ ಕಳೆದು ಮೋದವೀವುದಕ್ಕೆ 'ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಂ' ಎನ್ನುತ್ತ ಧರೆಯಲ್ಲಿ ಅವತರಿಸುವನೆ ? ದೇವತೆಗಳಿಗೆ ಅವರ ಜನ್ಮ ಏಕೆ ಹೇಗೆ ಆಯಿತೆಂಬುದು ತಿಳಿದಿರುವುದಿಲ್ಲ 'ಕಿಂ ಪಶುಃ ಪೂರ್ವದೇಹೇ' ಎಂದು ಎಚ್ಚರಿಸಬೇಕಾಗುತ್ತದೆ ಕೃಷ್ಣ ಹೇಳಿದ್ದಾನೆ–

ಬಹೂನಿ ಮೇ ವ್ಯತೀತಾನಿ ಜನ್ಮಾನಿ ತವ ಚಾರ್ಜುನ ।
ತಾನ್ಯಹಂ ವೇದ ಸರ್ವಾಣಿ ನ ತ್ವಂ ವೇತ್ಥ ಪರಂತಪ ॥

ಕೃಷ್ಣನಿಗೆ ತನ್ನ ಜನ್ಮಗಳೆಲ್ಲವೂ ಗೊತ್ತು ಅರ್ಜುನನಿಗೆ ಗೊತ್ತಿಲ್ಲ. ಆದ್ದರಿಂದ ಕೃಷ್ಣನದು ಲೀಲಾವತಾರ. ಇತರ ದೇವತೆಗಳಂತಲ್ಲ. ತಿಳಿದು ಸ್ವೇಚ್ಛೆಯಿಂದ ರೂಪ

ಧರಿಸುತ್ತಾನೆ 'ಅವತಿತೀರ್ಷತಿ' ಅವತರಿಸ ಬಯಸುತ್ತಾನೆ. ಬಯಸಿ ಅವತರಿಸುತ್ತಾನೆ. ಹುಟ್ಟುವುದಿಲ್ಲ.

ತಿಳಿದರೂ ಶಾಪಪ್ರಭಾವದಿಂದಾಗಿ ತಪ್ಪಿಸಿಕೊಳ್ಳಲಾರದವನಾಗಿರಬಾರದೇಕೆ ಎಂದರೆ ಆತ 'ಮಾಧವ' ಮಾ ಧೂಯತೇ ಕಂಪಿಸುವವನಲ್ಲ, ಯಾತರ ಭಯವೂ ಇಲ್ಲದವ. 'ತದೇಜತಿ ತನ್ನೇಜತಿ' ಆತನಿಗೆ ಎಲ್ಲರೂ ಭಯಪಡಬೇಕು. ಆತ ಯಾರಿಗೂ ಭಯಪಡುವವನಲ್ಲ, ಶಾಪಕ್ಕಂಜುವವನಲ್ಲ. ಋಷಿಗಳ ತಪಸ್ಸಿಗೆ ಬೆಲೆ ಕೊಡುವುದಕ್ಕಾಗಿ ಲೋಕವು ಅವರನ್ನು ಹಗುರವಾಗಿ ಕಾಣದಿರುವಂತೆ, ತಾನು ಅವರ ಶಾಪವನ್ನು ಸತ್ಯಗೊಳಿಸುವಂತೆ ಕಾಣಿಸಿಕೊಳ್ಳುತ್ತಾನೆ ಇಲ್ಲದಿದ್ದರೆ ಆತ 'ಪರಿತ್ರಾಣಾಯ ಸಾಧೂನಾಂ' ಎನ್ನದೆ 'ಪೂರ್ವಕರ್ಮವಶಾತ್ ಶಾಪವಶಾತ್' ಎಂದೆಲ್ಲ ಹೇಳಬೇಕಾಗಿತ್ತು. ಆತ ಸುಳ್ಳು ಹೇಳಬೇಕಾಗಿಲ್ಲ, ಯಾರ ಅಂಜಿಕೆ ?

'ಮಾಧವ' ಅಂದರೆ ಮಧುದಾನವನನ್ನು ಕೊಂದವ ಎಂದೂ ಅರ್ಥವಿದೆ ಮಧು ಕೈಟಭರೊಡನೆ ಐದುಸಾವಿರ ವರ್ಷಗಳ ಕಾಲ ಹೋರಾಡಿಯೂ ವಿಷ್ಣುವಿಗೆ ಅವರನ್ನು ಕೊಲ್ಲಲಾಗಲಿಲ್ಲ ದೇವಿ ಆದಿಶಕ್ತಿ ದಾನವರ ಬುದ್ಧಿಗೆ ಮೋಹ ಕವಿಸಿದಳು ಅವರು ವಿಷ್ಣುವೆ, ನೀನು ಇಷ್ಟುಕಾಲ ನಮ್ಮೊಡನೆ ಹೋರಾಡಬೇಕೆಂದರೆ ಮಹಾ ಪರಾಕ್ರಮಿಯೇ ಸರಿ, ನಿನ್ನ ಪರಾಕ್ರಮಕ್ಕೆ ಮೆಚ್ಚಿದ್ದೇವೆ ಬೇಕಾದ ವರ ಕೇಳೆಂದರು, 'ನೀವು ನನ್ನ ಕೈಯಿಂದ ಸಾಯಬೇಕು' ಎಂದು ವಿಷ್ಣು ವರಕೇಳಿದ. ಬೇರೆ ದಾರಿಗಾಣದೆ ದಾನವರು ವಿಷ್ಣುವಿನ ಕೈಯಲ್ಲಿ ಹತರಾದರು ಇದು ವಂಚನೆಯಲ್ಲವೆ ? ಸುಳ್ಳು, ವಂಚನೆ ಕಪಟನಾಟಕ ಸೂತ್ರಧಾರಿಯಾದ ಕೃಷ್ಣನಲ್ಲಿ ಬೇಕಾದಷ್ಟಿದೆ, ಮೂಲರೂಪದಲ್ಲಿಯೂ ಇಲ್ಲದಿಲ್ಲ !

ಮೇಲಿನ ಪ್ರಶ್ನೆಗೆ ಉತ್ತರ– ಮಾಧವ ಅಸುರ ಭಯದಿಂದ ದುಃಖಿಯಾಗಿರುವುದಾದರೆ ಅವರನ್ನು ಕೊಂದು ದೇವತೆಗಳಿಗೆ ಸುಖನೀಡಲು ಗೋಪಾಲ ಬಾಲಕನಾಗಿ ಏಕೆ ಹುಟ್ಟಬೇಕಾಗಿತ್ತು ? ತಾನು ದುರ್ಬಲ ಮಾನವನಾಗಿ ಹುಟ್ಟಬೇಕೇ ? ಕೆಸರಲ್ಲಿ ಮುಳುಗಿಕೊಂಡು ಪರರನ್ನು ಎತ್ತಲಾದೀತೆ ? ಆದ್ದರಿಂದ ಇದು ಕೇವಲ ಲೀಲಾವತಾರ ಎನ್ನದೆ ಗತಿ ಇಲ್ಲ.

ಲೀಲಾವತಾರವಾದರೂ ಏಕೆ ? ವೈಕುಂಠದಲ್ಲಿರುವ ದಿವ್ಯ ದೇಹದಿಂದಲೆ ಏಕೆ ಅಸುರವಧೆಯ ಕಾರ್ಯಮಾಡಬಾರದು ? ಎಂದರೆ ಭಾಗವತ ಇದಕ್ಕೆ ಉತ್ತರ ನೀಡಿದೆ–

ಮರ್ತ್ಯಾವತಾರಸ್ತ್ವಿಹ ಮರ್ತ್ಯಶಿಕ್ಷಣಂ
ರಕ್ಷೋವಧಾಯೈವ ನ ಕೇವಲಂ ವಿಭೋಃ ॥

ಮಾನವರು ಮಾನವರಂತೆ ಹೇಗೆ ಬಾಳಬೇಕೆಂಬುದನ್ನು ತೋರಿಸುವುದಕ್ಕಾಗಿ ಅವತಾರ, ಕೇವಲ ರಾಕ್ಷಸರ ವಧೆಗಾಗಿ ಅಲ್ಲ. ಅವತಾರ ಮಾಡದೆಯೆ ಅವರನ್ನು ಆತ ಕೊಲ್ಲಲು ಸಮರ್ಥ, 'ವಿಭು'

— ೩೩ —

**ಬೊಮ್ಮನಾಲಯದಲ್ಲಿ ಇದ್ದವಗೆ ಲಯ ಉಂಟೆ**
**ಜನ್ಮ ಲಯವಿಲ್ಲದವನಿಗೆ ।**
**ಅಮ್ಮಿಯನುಣಿಸಿದ್ದ ಯಶೋದೆಯಾಗಿದ್ದಳೆ**
**ಅಮ್ಮ ಇವಗೆ ಹಸಿ ತೃಷೆಯುಂಟೆ ॥**

"ಬ್ರಹ್ಮನ ಮನೆಯಲ್ಲಿದ್ದ ನಾರಾಯಣನಿಗೆ ಲಯ ಉಂಟೆ ? ಜನ್ಮ ಮತ್ತು ಲಯಗಳಿಲ್ಲದವನಿಗೆ ಎದೆ ಹಾಲೂಡಿಸಿದ ಯಶೋದೆ ನಿಜವಾಗಿಯೂ ಅಮ್ಮ ಆಗಿದ್ದಳೆ ? ಇವನಿಗೆ ಹಸಿವು ತೃಷೆಗಳುಂಟೆ ?"–ಇದು ಮೇಲುನೋಟಕ್ಕೆ ಕಾಣುವ ಅರ್ಥ. ಆದರೆ, ಅನರ್ಥ !

ಬ್ರಹ್ಮನ ಮನೆ ಸತ್ಯಲೋಕ. ಅಲ್ಲಿರುವ ಬ್ರಹ್ಮನಿಗೆ ಆ ಲೋಕದ ಜೊತೆಗೇ ಕಲ್ಪಪ್ರಳಯದಲ್ಲಿ ಲಯ ಉಂಟು ನಾರಾಯಣನೂ ಅಲ್ಲಿರುತ್ತಾನೆ ಎಂದ ಮಾತ್ರಕ್ಕೆ ಅವನಿಗೇಕೆ ಲಯವಿಲ್ಲ ?

ಬ್ರಹ್ಮನ ಮನೆಯಲ್ಲಿರುವುದೆಂದರೆ ಸುಮ್ಮನೆ ಇರುವುದಲ್ಲ,

ಬೊಮ್ಮನ ಮನೆಯಲ್ಲಿ ರನ್ನದ ಪೀಠದಿ ಕುಳಿತು
ಒಮ್ಮನದಿ ಸೇಹವ ಮಾಡುವ ।
ನಿರ್ಮಲ ಪೂಜೆಯ ಕೈಗೊಂಬ ಶ್ರೀ ಕೃಷ್ಣ ಪ–
ರಮ್ಮಮೂರುತಿಯೆ ಹಸೆಗೆ ಬಾ ॥

ಎಂದು ಲಕ್ಷ್ಮೀಶೋಭನ ಪದದಲ್ಲಿಯೆ ಮುಂದೆ ಹೇಳುವಂತೆ ಬ್ರಹ್ಮನಿಗೂ ಆರಾಧ್ಯ ದೈವನಾಗಿ ನಾರಾಯಣನಿದ್ದಾನೆ ಎನ್ನೋಣವೆ ? ಆದರೂ 'ಸೃಷ್ಟಿಕರ್ತನಾದ ಬ್ರಹ್ಮನಿಗೇ ಸೃಷ್ಟಿಕರ್ತ' ತಂದೆ ಎಂದು ಪೂಜ್ಯನಾಗಿರುವ ನಾರಾಯಣನಿಗೂ 'ಸೃಷ್ಟಿ ಉಂಟೆ', ಎನ್ನಬೇಕಾಗಿತ್ತು 'ಲಯ ಉಂಟೆ ?' ಎಂದಲ್ಲ. 'ಬೊಮ್ಮನಾಲಯದಲ್ಲಿ ಇದ್ದವಗೆ ಜನ್ಮ ಉಂಟೆ ?' ಎಂದಿರಬೇಕಾಗಿತ್ತು ಆಗ.

"ಪುನರ್ಭವೋ ಹಿ ಭವತ್ಯೇವ ಭವತಿ ।
ನ ತು ಸ್ರಷ್ಟುಶ್ಚ ಸ್ರಷ್ಟರಿ ಪರೇ ನಾರಾಯಣೇ
ಭವನಂ ಸ್ಮರ್ತುಂ ಯೋಗ್ಯಂ" ॥

ಎಂದು ಕಲ್ಪಲತೆಯಲ್ಲಿ ವಾದಿರಾಜರು ಹೇಳಿದುದಕ್ಕೆ ಇದು ಸಂವಾದಿಯಾಗುತ್ತಿತ್ತು. 'ಸೃಷ್ಟಿಕರ್ತನಿಗೂ ಸೃಷ್ಟಿಕರ್ತನಾದ ನಾರಾಯಣನಿಗೆ ಜನ್ಮ ಉಂಟೆಂದು ಕನಸಿನಲ್ಲೂ ಎಣಿಸಲಾಗದು,' ಎಂದು ಅಲ್ಲಿ ಹೇಳಿದೆ.

ಇಲ್ಲಿಯೂ ಎರಡನೆ ಮೂರನೆ ಚರಣಗಳಲ್ಲಿ 'ಜನ್ಮಲಯವಿಲ್ಲದವನಿಗೆ ಅಮ್ಮಿಯನುಣಿಸಿದ್ದ ಯಶೋದೆ ಅಮ್ಮ ಆಗಿದ್ದಳೆ?' ಎನ್ನುವಾಗ ಜನ್ಮವನ್ನೂ ಸೇರಿಸಿ ಜನ್ಮಲಯವಿಲ್ಲದವನಿಗೆ ಎಂದಿರುವುದರಿಂದ ಜನ್ಮವಿಲ್ಲವೆಂಬ ಅಂಶವನ್ನು ಸಮರ್ಥಿಸಬೇಕಾಗಿತ್ತು. ಸ್ತನ್ಯಪಾನ ಮಾಡಿಸುವ ಯಶೋದೆಯಂಥ ಒಬ್ಬ ತಾಯಿಯ ಆವಶ್ಯಕತೆಯೂ ಜನ್ಮವಿದ್ದರೆ ತಾನೆ! ಆದ್ದರಿಂದ 'ಲಯ ಉಂಟೆ' ಎಂಬ ಆಕ್ಷೇಪ ಅರ್ಥಹೀನವಾಗುವುದು

ಬೊಮ್ಮನ ಆಲಯವೆಂದರೆ ಪರಬ್ರಹ್ಮ ನಾರಾಯಣನ ಆಲಯ, ವೈಕುಂಠ ಎಂದು ಕೆಲವರು ವ್ಯಾಖ್ಯಾನಿಸುವುದುಂಟು ವೈಕುಂಠ ನಿತ್ಯ ಅಲ್ಲಿರುವವರಿಗೆ ಲಯವಿಲ್ಲ ಎಂದು ಅಭಿಪ್ರಾಯ. ಆದರೆ ವೈಕುಂಠ ನಿತ್ಯವೆಂದು ಪ್ರತಿವಾದಿ ಒಪ್ಪುವನೆ? ನಾರಾಯಣನಿಗೇ ಲಯ ಉಂಟೆನ್ನುವವನು ಅವನ ವೈಕುಂಠಕ್ಕೆ ಲಯ ಉಂಟೆನ್ನಲು ಹಿಂಜರಿಯುವನೆ? ಲೋಕ ನಿತ್ಯವೆಂದೊಪ್ಪಿದರೂ ಲೋಕದ ಜನರು ನಿತ್ಯರಾಗಬೇಕೆ? ಹಾಗೆ ನಿಯಮವಿದೆಯೆ? 'ಅದು ಮುಕ್ತಸ್ಥಾನ, ಅದರೊಡೆಯ ನಿತ್ಯಮುಕ್ತನೆ ಇರಬೇಕು. ಅವನಿಗೆ ಲಯವಿರಲಾರದು' ಎನ್ನುವುದೂ ವ್ಯರ್ಥ ಪ್ರಯಾಸವೆ ವೈಕುಂಠವನ್ನು ಮುಕ್ತಸ್ಥಾನವೆಂದು ಅವನು ಒಪ್ಪುವುದಿಲ್ಲ. ಮತ್ತು 'ಪರಬ್ರಹ್ಮನ ಆಲಯದಲ್ಲಿ ಇರುವವನು' ಎಂದರೆ ಪ್ರಾಯಶಃ ಪರಬ್ರಹ್ಮನಲ್ಲದಿರಬೇಕು ಎಂಬ ಭಾವನೆಗೆ ಅವಕಾಶವಿದೆ. 'ಬೊಮ್ಮನ ಆಲಯದಲ್ಲಿ ಇದ್ದವನು' ಎಂದಿದೆ. ಹಿಂದೆ ಇದ್ದ, ಈಗ ಅಲ್ಲಿ ಇಲ್ಲ, ಬೇರೆಲ್ಲೊ ಇರಬೇಕು ಎಂಬ ಅನರ್ಥ ಪ್ರತೀತಿಯನ್ನೂ ತಳ್ಳಿ ಹಾಕುವಂತಿಲ್ಲ. ಆಲಯದಲ್ಲಿದ್ದವನೆಂದರೆ ಅದರೊಡೆಯನಾಗಬೇಕಾಗಿಯೂ ಇಲ್ಲ.

'ಬೊಮ್ಮ' ಪರಬ್ರಹ್ಮನಾಗಬಹುದು–ಆದರೂ ವಾದಿರಾಜರು ಆ ಅರ್ಥದಲ್ಲಿ ಆ ಪದವನ್ನು ಬಳಸಿರುವುದು ಸಂದೇಹಾಸ್ಪದ. ತಮ್ಮ ಕೀರ್ತನೆಗಳಲ್ಲಿ ಎಲ್ಲಿಯೂ ಹಾಗೆ ಶಬ್ದಪ್ರಯೋಗ ಮಾಡಿರುವುದು ಕಂಡಿಲ್ಲ. 'ಪದ್ಮನಾಭನ ನಾಭಿಯಿಂದುದ್ಭವಿಸಿದ್ದ ಕಾರಣ ಪದ್ಮಜ ಎಂಬ ಹೆಸರು ಪ್ರಸಿದ್ಧವಲ್ಲವೆ ಬೊಮ್ಮಗೆ', 'ಬೊಮ್ಮ ಹೆಮ್ಮಗ, ರುದ್ರ ಮೊಮ್ಮಗ' ಎಂದು ಮುಂತಾಗಿ ಚತುರ್ಮುಖನೆಂಬ

ಅರ್ಥದಲ್ಲಿಯೆ 'ಬೊಮ್ಮ' ಶಬ್ದವನ್ನು ಪ್ರಯೋಗಿಸುವುದು ಕಂಡಿದೆ. ಪರಬ್ರಹ್ಮನ ಬಗ್ಗೆ ಹೇಳುವಾಗ 'ಪರಬೊಮ್ಮ' ಎಂದೆ ಹೇಳಿದ್ದಾರೆ. ಉದಾ:– 'ನಿಮಗೆ ಪರಬೊಮ್ಮವಿದಿರಮ್ಮದಯ್ಯ !'

ಲಕ್ಷ್ಮೀಶೋಭನಪದದಲ್ಲಿಯೂ 'ಬೊಮ್ಮ'ಶಬ್ದಪ್ರಯೋಗ ಮಾಡಿರುವಲ್ಲೆಲ್ಲ ಚತುರ್ಮುಖನೆಂಬ ಅರ್ಥದಲ್ಲಿಯೆ ಪ್ರಯೋಗ ಮಾಡಿದ್ದಾರೆ. ಉದಾ·–

ಬೊಮ್ಮನ ಪ್ರಳಯದಲ್ಲಿ. ... (ನುಡಿ ೩ )
ಬೊಮ್ಮಾದಿ ಜೀವರು ........ (ನುಡಿ ೨೫)
ಬೊಮ್ಮನ ನೂರುವರುಷ .. (ನುಡಿ ೫೮)
ಬೊಮ್ಮನ ಮನೆಯಲ್ಲಿ.. . .(ನುಡಿ ೮೩)
ಬೊಮ್ಮ ತನ್ನರಸಿ . . . (ನುಡಿ ೯೪)
ಸತ್ಯಲೋಕದ ಬೊಮ್ಮ ... (ನುಡಿ ೯೫)
ಬೊಮ್ಮನ ದಿನದಲ್ಲಿ .. . .(ನುಡಿ ೧೧೧)

ಆದ್ದರಿಂದ 'ಬೊಮ್ಮ' ಶಬ್ದಕ್ಕೆ ಪರಬ್ರಹ್ಮನೆಂದು ಕಷ್ಟದಿಂದ ಅರ್ಥ ಮಾಡುವುದೂ ಬಳಿಕ ಹಿಂದೆ ಹೇಳಿದ ಅನೇಕ ಸಮಸ್ಯೆಗಳನ್ನು ಇದಿರಿಸುವುದೂ ಕೇವಲ ಶ್ರಮವಾಗುತ್ತದೆ

ಚತುರ್ಮುಖನೆಂದೆ ಅರ್ಥಮಾಡಿ, 'ಬೊಮ್ಮನ ಆಲಯ'ವೆಂದರೆ ಚತುರ್ಮುಖನ ಮನೆಯಾದ ಬ್ರಹ್ಮಾಂಡವೆಂದಿಟ್ಟುಕೊಳ್ಳೋಣ ಅಲ್ಲಿ ಇದ್ದವ ನಾರಾಯಣ. ಈಗಲೂ ಇದ್ದಾನೆ, ನಿಜ. ಹಿಂದಿನ ಕಲ್ಪದ ಬ್ರಹ್ಮಾಂಡವನ್ನಿಟ್ಟುಕೊಂಡರೆ ಅದರೊಳಗಿದ್ದವನೂ ನಾರಾಯಣನೆ. ಆ ಬ್ರಹ್ಮಾಂಡಕ್ಕೆ ಲಯವಾದಾಗಲೂ ಅದರೊಳಗಿದ್ದ ನಾರಾಯಣನಿಗೆ ಲಯವಾಗಲಿಲ್ಲ. ಅಂಥವನಿಗೂ ಲಯ ಉಂಟೆ ? ಎಂದು ಅರ್ಥೈಸೋಣ.

ಮನೆ ಸುಟ್ಟರೂ ಮನೆಯೊಳಗಿದ್ದವನು ಸುಡಲಿಲ್ಲವೆಂದರೆ ಅದು ವಿಶೇಷ ಸಾಮರ್ಥ್ಯವೆ ಸರಿ. ಅಂಥ ಸಾಮರ್ಥ್ಯ ನಾರಾಯಣನಿಗೆ ಇದೆ ಎಂದು ಅವನೆ ಭಗವದ್ಗೀತೆಯಲ್ಲಿ ಹೇಳಿಕೊಂಡಿದ್ದಾನೆ–

'ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ'

ಈ ಮಾತಿಗೆ ಜಯತೀರ್ಥರು ಮಾಯಾವಾದ ಖಂಡನ ಟೀಕೆಯಲ್ಲಿ ವ್ಯಾಖ್ಯಾನ ಮಾಡುತ್ತ 'ನಾರಾಯಣನು ಮೂಲೋಕದೊಳಗಿದ್ದು ಅದನ್ನು ಧರಿಸುತ್ತಿದ್ದರೂ ಅದು ನಾಶವಾಗುವಾಗ ತಾನು ನಾಶವಾಗದಿರುವುದು

ಅಚಿಂತ್ಯಶಕ್ತಿಯು ಬಲದಿಂದ' ಎಂದಿದ್ದಾರೆ. ರಾಘವೇಂದ್ರರೂ ಹೀಗೆ ವಿವೃತಿಯಲ್ಲಿ ಹೇಳಿದ್ದಾರೆ.

ಲಯವಿಲ್ಲವೆಂದು ಸಮರ್ಥಿಸಿದ್ದಾಯಿತು. ಜನ್ಮವಿಲ್ಲವೆಂಬುದನ್ನು ಸಮರ್ಥಿಸಿಲ್ಲ. ಆದರೂ ಲಯವಿಲ್ಲದವನಿಗೆ ಜನ್ಮ ಶಕ್ಯವಿಲ್ಲದುದರಿಂದ ಜನ್ಮವಿಲ್ಲವೆಂದು ಬೇರೆ ಹೇಳಬೇಕಾಗಿಲ್ಲವೆಂದಿಟ್ಟುಕೊಳ್ಳಬೇಕು.

ಹೀಗೆ ಜನ್ಮಲಯಗಳೆರಡೂ ಇಲ್ಲದವನಿಗೆ ಸ್ತನ್ಯಪಾನ ಮಾಡಿಸಿದ ಮಾತ್ರಕ್ಕೆ ಯಶೋದೆ ತಾಯಿಯಾದಳೆ ? ಅಚಿಂತ್ಯ ಶಕ್ತಿಯಿಂದ ಜನ್ಮ ಲಯಗಳನ್ನೆ ಪರಿಹರಿಸಿಕೊಂಡವನಿಗೆ ಹಸಿವು ತೃಷೆಗಳ ಬಾಧೆಯನ್ನು ಪರಿಹರಿಸಿಕೊಳ್ಳಲಾಗದೆ ?

ಹಸಿವು ತೃಷೆಗಳ ಬಾಧೆ ಇದ್ದರೆ ತಾನೆ ಅದರಿಂದ ಬಳಲುವ ಕಂದನ ರಕ್ಷಣೆಗಾಗಿ ತಾಯಿ ಧಾವಿಸಬೇಕು ? 'ಅಮ್ಮ' ಎನಿಸಬೇಕು ? ಅಮ್ಮ ಎಂದರೆ ಸಂಸ್ಕೃತದಲ್ಲಿ 'ಅಬಿ ಗತೌ' ಎಂಬ ಧಾತುವಿನಿಂದ ನಿಷ್ಪನ್ನವಾದ 'ಅಂಬ' ಶಬ್ದದ ಕನ್ನಡ ರೂಪಾಂತರ. ತನ್ನ ಕಂದನ ಬಳಿಗೆ ಹೋಗುವವಳು, ರಕ್ಷಿಸುವವಳು ಎಂದರ್ಥ. ಈ ಅರ್ಥದಲ್ಲಿ ಯಶೋದೆ ಕೃಷ್ಣನಿಗೆ 'ಅಮ್ಮ' ಎನಿಸಲಾರಳು.

ಯಶೋದಾತನಯ ದೇವಕೀತನಯ ಎಂದೆಲ್ಲ ಪ್ರಸಿದ್ಧಿ ಇದೆ. ಆದರೆ ಅದು ಕೇವಲ ಪ್ರಸಿದ್ಧಿಯೇ ಹೊರತು ವಾಸ್ತವವಲ್ಲ. ಉದಾಹರಣೆಗೆ, ವೇದವ್ಯಾಸರಿಗೆ ಜನ್ಮವಿತ್ತವರೆಂದು ಪ್ರಸಿದ್ಧರಾದ ಪರಾಶರರು ಅವರಿಗೆ ನಾಮಕರಣ ಮಾಡಿದುದು 'ದ್ವೈಪಾಯನ' ಎಂದು. ದ್ವೀಪದ ಕೂಸು ಎಂದರ್ಥ. ನಿರರ್ಥಕವಾದ ಈ ಹೆಸರನ್ನೆ ಏಕೆ ಇಟ್ಟರೆಂದರೆ ಪರಾಶರಸುತನೆಂದು ಮುಂದೆ ವೇದವ್ಯಾಸರು ಪ್ರಸಿದ್ಧರಾದರೂ ಆ ಹೆಸರು ಈ ದ್ವೈಪಾಯನ ಎಂಬ ಹೆಸರಿನಂತೆಯೆ ಬರಿ ಹೆಸರೆಂದು ಲೋಕಕ್ಕೆ ತಿಳಿಯಲೆಂಬ ಉದ್ದೇಶವೆಂದು ಭಾಗವತ ವಿಜಯಧ್ವಜೀಯದಲ್ಲಿ ಹೇಳಿದೆ.

ಹೀಗೆ ವ್ಯಾಖ್ಯಾನ ಮಾಡಿದರೆ ಅಸಂಗತಿ ಏನಿಲ್ಲ. ಆದರೂ 'ಬ್ರಹ್ಮಾಂಡ'ವೆನ್ನದೆ 'ಬ್ರಹ್ಮನ ಮನೆ' ಎಂದುದೇಕೆ ? ಬ್ರಹ್ಮನು ಬ್ರಹ್ಮಾಂಡಕ್ಕೆ ಅಭಿಮಾನಿ. ಅದು ಅವನ ಶರೀರ. ಮನೆ ಎನ್ನುವುದೂ ಅಷ್ಟು ಉಚಿತವಲ್ಲ. ಬ್ರಹ್ಮಾಂಡವೆಂದೂ, ಗೀತೆಯಲ್ಲಿ ಹೇಳಿದಂತೆ ಮೂಲೋಕವೆಂದೂ ಹೇಳಬಹುದಿತ್ತು. ಬ್ರಹ್ಮನ ಮನೆ ಎಂದುದಕ್ಕೆ ಪ್ರಯೋಜನವೂ ಕಂಡುಬರುವುದಿಲ್ಲ. ಬೊಮ್ಮನಾಲಯದಲ್ಲಿ ಇದ್ದವನೆಂದರೆ ಈಗ ಇಲ್ಲವೆಂದೆ ಅರ್ಥ ಹೊಳೆದೀತು ಗೀತೆಯಲ್ಲಿ 'ಯೋ ಲೋಕತ್ರಯಮಾವಿಶ್ಯ ಬಿಭರ್ತಿ' 'ಮೂಲೋಕವನ್ನು ಪ್ರವೇಶಿಸಿ ಧರಿಸುತ್ತಾನೆ' ಎಂದು ವರ್ತಮಾನಕಾಲ ಪ್ರಯೋಗವೆ ಇದೆ. ಅಲ್ಲಿ ಹಿಂದಿನ ಮುಂದಿನ ಎಲ್ಲ ಬ್ರಹ್ಮಾಂಡಗಳನ್ನು ಧರಿಸುತ್ತಾನೆ ಎಂದು ಅಭಿಪ್ರಾಯ. ಇಲ್ಲಿ ಹಿಂದಿನ ಬ್ರಹ್ಮಾಂಡ ಧರಿಸಿದ್ದನೆಂಬ ಅಭಿಪ್ರಾಯ ಎಂದರೂ 'ಹಿಂದಿನ' ಎಂಬ ವಿಶೇಷಣವಿದ್ದರೆ ಚೆನ್ನಾಗಿರುತ್ತಿತ್ತು.

'ಬೊಮ್ಮನಾಲಯುದಲ್ಲಿ ಇದ್ದವಗೆ' ಎಂದರೆ ಇದ್ದೂ ನಾಶ ಹೊಂದದವನಿಗೆ ಎಂದು ಅಭಿಪ್ರಾಯ ಹೇಳಬೇಕಾಗಿರುವುದರಿಂದ 'ಇದ್ದವಗೂ' ಅಥವಾ 'ಇದ್ದರೂ' ಎನ್ನಬೇಕಾಗಿತ್ತು 'ಇದ್ದವಗೆ' ಎಂದರೆ 'ಇದ್ದುದರಿಂದ ಅವನಿಗೆ' ಎಂಬ ವಿರುದ್ಧಾರ್ಥ ಹೊಳೆದೀತು.

ಇನ್ನೂ ಒಂದು ತೊಡಕು – ಮುಂದಿನ ನುಡಿ 'ಆಗ ಭಕ್ಷ್ಯಭೋಜ್ಯವಿತ್ತು ಪೂಜಿಸುವ ಯೋಗಿಗಳುಂಟೆ? ಧನಧಾನ್ಯ ಆಗ ದೊರಕೊಂಬುದೆ?' ಎನ್ನುತ್ತಿದೆ.'ಆಗ' ಎಂದರೆ ಯಾವಾಗ? ಪ್ರಳಯಕಾಲದಲ್ಲಿ. ನಾರಾಯಣನಿಗೆ ಹಸಿವು ತೃಷೆಗಳಿರುವುದೇ ಆದರೆ ಪ್ರಳಯಕಾಲದಲ್ಲಿ ಭಕ್ಷ್ಯಭೋಜ್ಯವಿತ್ತು ಪೂಜಿಸುವ ಯೋಗಿಗಳಿರುವರೆ? ಆಗ ಭಕ್ಷ್ಯಭೋಜ್ಯ ತಯಾರಿಸಲು ಬೇಕಾದ ಧನಧಾನ್ಯಗಳಾದರೂ ದೊರಕುವುದೆ? ಎಂದು ಅರ್ಥ ಇಲ್ಲಿ 'ಆಗ' ಎಂದರೆ ಪ್ರಳಯ ಕಾಲದಲ್ಲಿ ಎಂಬ ಅರ್ಥ ಸಿಗಬೇಕಾದರೆ ಅದರ ಹಿಂದಿನ ನುಡಿಯಾದ ಈ ನುಡಿಯಲ್ಲಿ ಪ್ರಳಯಕಾಲ ಪ್ರಸ್ತುತವಾಗಿರಬೇಕು, ಆಗಿಲ್ಲ.

ಈ ಎಲ್ಲ ಅನುಪಪತ್ತಿಗಳ ಪರಿಹಾರಕ್ಕೆ 'ಬೊಮ್ಮನ ಲಯುದಲ್ಲಿ' ಎಂದೆ ಪಾಠವಿಟ್ಟುಕೊಳ್ಳೋಣ 'ಬೊಮ್ಮನಾಲಯುದಲ್ಲಿ' ಎಂಬುದು ಧ್ಯಾತ, ಅಂದರೆ ಹಾಡಿನಲ್ಲಿ ಎಳೆದು ದೀರ್ಘವಾಗಿಸಿದ್ದೆನ್ನೋಣ ಅಥವಾ ಬೊಮ್ಮನ ಆ ಲಯುದಲ್ಲಿ ಎಂದು ಮೂರು ಪದಗಳಾಗಿ ವಿಂಗಡಿಸಿಕೊಳ್ಳೋಣ, 'ಆ ಲಯು' ವೆಂದರೆ ಪ್ರಳಯುಗಳಲ್ಲೆಲ್ಲ ಅತ್ಯಂತ ದೊಡ್ಡ ಪ್ರಳಯುವೆಂದು ಪ್ರಸಿದ್ಧವಾದ ಕಲ್ಪಪ್ರಳಯ ಎಂದರ್ಥ. ಮನ್ವಂತರ ಪ್ರಳಯ, ದಿನ ಪ್ರಳಯುಗಳು ಎಲ್ಲಕ್ಕೂ ನಾಶ ತರುವುದಿಲ್ಲ ಆಗ ನಾರಾಯಣನು ನಾಶವಾಗದೆ ಇರುತ್ತಾನೆ ಎಂದರೆ ಅದೊಂದು ಹೆಚ್ಚುಗಾರಿಕೆ ಏನಲ್ಲ. ಕಲ್ಪಪ್ರಳಯ ಮಾತ್ರ ಸೃಷ್ಟಿಯ ಎಲ್ಲ ಪದಾರ್ಥಗಳಿಗೂ, ಏಕೆ, ಅವನ್ನು ಸೃಷ್ಟಿ ಮಾಡಿದ ಬ್ರಹ್ಮನಿಗೂ ನಾಶ ತರುತ್ತದೆ. ಆಗಲೂ ನಾಶಹೊಂದದೆ ಇರುವವನು ನಾರಾಯಣ. 'ಏಕೋ ನಾರಾಯಣ ಆಸೀತ್' ಎಂದು ಮುಂತಾದ ಅನೇಕ ಶ್ರುತಿಗಳು ಇದನ್ನು ಒಕ್ಕೊರಲಿಂದ ಸಾರುತ್ತಿವೆ. ಅಂಥ ನಾರಾಯಣನಿಗೆ ಲಯ ಉಂಟೆ ಎನ್ನುತ್ತಿದೆ, 'ಬೊಮ್ಮನ ಲಯುದಲ್ಲಿ ಇದ್ದವಗೆ ಲಯ ಉಂಟೆ' ಎಂಬ ಮೊದಲನೆ ಚರಣ

ಈಗ 'ಬೊಮ್ಮ' ಅಂದರೆ ಚತುರ್ಮುಖ ಬ್ರಹ್ಮ ಎಂಬ ಪ್ರಸಿದ್ಧಾರ್ಥವೇ ಸಿಕ್ಕಿದಂತಾಯಿತು. 'ಲಯುದಲ್ಲಿ ಇದ್ದವಗೆ' ಎಂದರೆ 'ಲಯುದಲ್ಲಿ ಇದ್ದವನಾದ್ದರಿಂದ ಅಂಥವನಿಗೆ' ಎಂಬ ಸರಳ ಅರ್ಥವೂ ಸಿಕ್ಕಿದೆ. 'ಇದ್ದವಗೆ' ಎಂದು ಭೂತಕಾಲ ಪ್ರಯೋಗವಮಾಡಿ ಹೇಳಿದ್ದರಿಂದ 'ಏಕೋ ನಾರಾಯಣ ಆಸೀತ್' ಎಂದು ಭೂತಕಾಲ ಪ್ರಯೋಗವಿರುವ ಶ್ರುತಿವಾಕ್ಯವು ಪ್ರಮಾಣವೆಂಬ ಸೂಚನೆಯೂ ಸಿಕ್ಕಿತು ಲಯುದಲ್ಲಿ ಇದ್ದವನೆಂದರೆ ಲಯುದಲ್ಲಿಯೂ

ಇದ್ದವನೆಂದಂತಾಗುವುದರಿಂದ 'ಈಗ ಇಲ್ಲ' ಎಂಬ ವಿರುದ್ಧಾರ್ಥಕ್ಕೂ ಅವಕಾಶವಿಲ್ಲ. ಏಕೆಂದರೆ ಶ್ರುತಿಯಲ್ಲಿಯೂ ಹಾಗೆಯೆ 'ಆಸೀತ್' ಎಂದು ಭೂತಕಾಲ ಪ್ರಯೋಗ ಮಾಡಲಾಗಿದೆ.

ಈ ರೀತಿ ವ್ಯಾಖ್ಯಾನ ಮಾಡುವಾಗ ವಾದಿರಾಜರದೇ ಆದ ಬೇರೆ ಕೃತಿಗಳ ಸಂವಾದವೂ ಸುಲಭವಾಗಿ ಸಿಗುತ್ತದೆ. ಉದಾ:-

'ಪ್ರಳಯೇಽಪ್ಯಪ್ರಳಯೋ ತಸ್ಮಿನ್ನೇವ ನಾರಾಯಣೇ
ಮೃತತ್ವಂ ನಸ್ಮರ್ತುಂ ಯೋಗ್ಯಂ'

'ಪ್ರಳಯಕಾಲದಲ್ಲಿಯೂ ನಾಶಹೊಂದದ ಆ ನಾರಾಯಣನಿಗೆ ಮರಣವನ್ನು ಕನಸಿನಲ್ಲಿಯೂ ನೆನೆಯಲಾಗದು' ಎಂದು ಕಲ್ಪಲತೆಯಲ್ಲಿ ಹೇಳಿದೆ ಸ್ವಪ್ನ ಪದದಲ್ಲಿಯೂ,

ಹಿಂದೆ ಬೊಮ್ಮನ ಪ್ರಳಯ ಜಲಧಿಯೊ-
ಳೊಂದು ವಟಪತ್ರದಲಿ ಮಲಗಿದ
ಇಂದಿರಾಪತಿ ಎನಿಪ ನಾ ನಿತ್ಯರೊಳು ನಿತ್ಯನೆಲ್ಲೆ ॥

ಎಂದು ಇದನ್ನೇ ಹೇಳಿದೆ. ಲಕ್ಷ್ಮೀಶೋಭನ ಪದದಲ್ಲಿಯೂ ಹಿಂದೆ,

'ಬೊಮ್ಮನ ಪ್ರಳಯದಲಿ ತನ್ನರಸಿಯೊಡಗೂಡಿ
ಸುಮ್ಮನೆಯಾಗಿ ಮಲಗಿದ್ದ'. (ನುಡಿ-೨)

ಎಂದು ಇದನ್ನೇ ಹೇಳಿದ್ದುಂಟು. ಆದರೂ ಪುನರುಕ್ತಿಯಾಗಿಲ್ಲ ಅಲ್ಲಿ ಲಕ್ಷ್ಮೀ ನಾರಾಯಣರ ನಿತ್ಯತ್ವವನ್ನು ರಾಜರು ಸ್ವತಃ ಹೇಳಿದ್ದಾರೆ ಇಲ್ಲಿ ನಾರಾಯಣನ ನಿತ್ಯತ್ವವನ್ನು ಮಹಾಲಕ್ಷ್ಮಿಯ ಮೂಲಕ ಹೇಳಿಸಿದ್ದಾರೆ.

ಎರಡು ಮೂರು ನಾಲ್ಕನೆ ಚರಣಗಳನ್ನೆಲ್ಲ ಸೇರಿಸಿ, ಹಿಂದೆ ಹೇಳಿದಂತೆ, 'ಜನ್ಮಲಯವಿಲ್ಲದವಗೆ ಅಮ್ಮಿಯನುಣಿಸಿದ್ದ ಯಶೋದೆಯಾಗಿದ್ದಳೆ ಅಮ್ಮ?' ಎಂದು ಆಕ್ಷೇಪವಿಟ್ಟುಕೊಂಡರೆ ನಾರಾಯಣನಿಗೆ ಲಯವಿಲ್ಲವೆನ್ನಲು ಮೊದಲನೆ ಚರಣದಲ್ಲಿ ಯುಕ್ತಿ ಹೇಳಿದಂತೆ ಜನ್ಮವಿಲ್ಲವೆನ್ನಲು ಏನೂ ಯುಕ್ತಿ ಹೇಳಿದಂತಾಗಿಲ್ಲವೆಂಬ ನ್ಯೂನತೆ ಎದ್ದು ಕಾಣುತ್ತದೆ. 'ಲಯವಿಲ್ಲ, ಜನ್ಮಲಯ ಎರಡೂ ಇಲ್ಲದವನಿಗೆ ಯಶೋದೆಯಂಥವರು ತಾಯಿಯಾಗಬಲ್ಲರೆ?' ಎಂದು ಪ್ರಶ್ನಿಸುವುದು ಸಂಗತವಾಗುವುದಿಲ್ಲ. 'ಲಯವಿಲ್ಲದವನಿಗೆ ಜನ್ಮವಿರಲಾರದು. ಆದ್ದರಿಂದ, ಜನ್ಮವಿಲ್ಲವೆಂದು ಬೇರೆ ಹೇಳಬೇಕಾಗಿಲ್ಲ' ಎಂದು ಸಮಾಧಾನವನ್ನು,

ಹಿಂಥೆ ಹೇಳಿದಂತೆ, ಸ್ಥಾವೇ ಇಟ್ಟುಕೊಳ್ಳುವುದಕ್ಕಿಂತ ಇಲ್ಲಿಯೆ, 'ಜನ್ಮ ಲಯವಿಲ್ಲದವಗೆ ಉಂಟೆ ಎಂದು ಬಿಡಿಸಿ ಓದಿಕೊಂಡರೆ ಒಳ್ಳೆಯದು. 'ಉಂಟೆ' ಎಂಬ ಪದ ಮೊದಲನೆ ಚರಣದಿಂದ ಸುಲಭವಾಗಿ ಸಿಗುತ್ತದೆ. ಲಯವಿಲ್ಲದವನಿಗೆ ಜನ್ಮವಿರಲು ಶಕ್ಯವಿಲ್ಲವೆಂದು ಸ್ಪಷ್ಟವಾಗಿಯೇ ಹೇಳಿದಂತಾಗುತ್ತದೆ.

ಹಿಂದೆ ಇಲ್ಲದಿದ್ದ ಒಂದು ಪದಾರ್ಥ ಈಗ ಹೊಸದಾಗಿ ಅಸ್ತಿತ್ವಕ್ಕೆ ಬಂದರೆ ತಾನೆ ಅದಕ್ಕ ಜನ್ಮವೆನ್ನುತ್ತೇವೆ? ಸ್ವತಃ ಇರುವ ವಸ್ತುವನ್ನೆ ತಿರುಗಿ ಯಾರು ಉತ್ಪತ್ತಿಮಾಡಬಲ್ಲರು? ನಾರಾಯಣನು ಸೃಷ್ಟಿಯ ಆದಿಯಲ್ಲಿಯೂ ಸ್ವತಃ ಇದ್ದವನೆಂದು 'ಏಕೋ ನಾರಾಯಣ ಆಸೀತ್' ಎಂದು ಶ್ರುತಿಗಳು ಸಾರುತ್ತಿವೆ. ಆದ್ದರಿಂದ ಅವನು ಹಿಂದೆ ಎಂದೂ ಇಲ್ಲದಿದ್ದವನಲ್ಲ. ಅಂದರೆ, ತಾರ್ಕಿಕರ ಭಾಷೆಯಲ್ಲಿ ಹೇಳುವುದಾದರೆ, ಹಿಂದೆಂದೂ ಅವನ ಪ್ರಾಗಭಾವವಿರಲಿಲ್ಲ. ಪ್ರಾಗಭಾವವಿಲ್ಲದ ವಸ್ತುವಿಗೆ ಉತ್ಪತ್ತಿ ಇಲ್ಲ. ಆದ್ದರಿಂದ ನಾರಾಯಣನಿಗೆ ಲಯವಿಲ್ಲದ ಪ್ರಯುಕ್ತ ಪ್ರಾಗಭಾವವಿಲ್ಲದ್ದರಿಂದ ಜನ್ಮವಿಲ್ಲ

ಈ ಯುಕ್ತಿಯನ್ನು ರಾಜರು ಸರಸಭಾರತಿಯಲ್ಲಿ ಸ್ಪಷ್ಟವಾಗಿ ಹೇಳಿದ್ದಾರೆ-

ಲಯೋಽಪಿ ಲಯಹೀನಸ್ಯ ಶಯಾನಸ್ಯ ಶ್ರೀಯಾ ಸಹ ।
ಪ್ರಾಗಭಾವಬಹಿರ್ಭಾವಾತ್ ಸೃಷ್ಟೌ ಜನ್ಮೋಜ್ಝಿತಸ್ಯ ಚ ॥

ಇವರ ಕನ್ನಡಾನುವಾದವೆನ್ನಬಹುದು ರಾಜರ ತತ್ವಸಾರ (ವೈಕುಂಠ ವರ್ಣನ)ದ ಈ ಪದ್ಯ-

ಬೊಮ್ಮನ ಪ್ರಳಯದಲಿ ಸುಮ್ಮನೆಯಾಗಿರ್ದ
ನಮ್ಮ ದೇವಗೆ ಮೃತ್ಯು ಇಲ್ಲ ।
ಜನ್ಮವಿವಗೆ ಸಲ್ಲ ಪ್ರಾಗಭಾವವಿಲ್ಲ. . ॥

ಯುಕ್ತಿಮಲ್ಲಿಕೆಯಲ್ಲಿ ಈ ವಿಷಯವನ್ನು ತುಸು ಬೇರೆ ರೀತಿಯಿಂದ ಬಣ್ಣಿಸಲಾಗಿದೆ-

ಅತೋಽಭೂದ್ದೇಹಲೀದೀಪಃ ಪ್ರಲಯೋ ಸತ್ವಮೀಶಿತುಃ ।
ಕಲ್ಪಾಂತೇ ಯಲ್ಲಯಂ ರುಂಧೇ ಕಲ್ಪಾದೌ ಜನ್ಮ ಚ ಪ್ರಭೋಃ ॥

'ಪ್ರಳಯಕಾಲದಲ್ಲಿ ಹರಿಯ ಅಸ್ತಿತ್ವವೆಂಬುದು, ಹೊಸ್ತಿಲ ಮೇಲಿಟ್ಟ ದೀಪ ಎರಡೂ ಕಡೆ ಬೆಳಕು ಚೆಲ್ಲುವಂತೆ, ಹರಿಗೆ ಕಲ್ಪಾಂತ್ಯದಲ್ಲಿ ಲಯವಿಲ್ಲವೆಂಬುದನ್ನೂ ಕಲ್ಪಾದಿಯಲ್ಲಿ ಜನ್ಮವಿಲ್ಲವೆಂಬುದನ್ನೂ ತೋರಿಸುತ್ತದೆ.

ಈಗ 'ಅಮ್ಮಿಯುನುಣಿಸಿದ್ದ ಯಶೋದೆಯಾಗಿದ್ದಳೆ ? ಅಷ್ಟೇ [illegible] ಎಂಬ ಪ್ರಶ್ನೆಯನ್ನು ಕೈಬಿಟ್ಟು 'ಅಮ್ಮಿಯುನುಣಿಸಿದ್ದ ಯಶೋದೆಯಾಗಿದ್ದಳೆ ? ಎಂಬ ಮೂರನೆ ಚರಣವನ್ನು ಬೇರೆಯಾಗಿಯೆ ತೆಗೆದುಕೊಳ್ಳೋಣ 'ಯಶೋದೆ ಆಗ ಇದ್ದಳೆ' ಎಂದು ಪದವಿಭಾಗ. ನಾಲ್ಕನೆ ಚರಣದಲ್ಲಿ ಇದರ ಫಲಿತಾರ್ಥ– 'ಅಮ್ಮ! ಏನಾಶ್ಚರ್ಯ. ಇವನಿಗೆ ಹಸಿವು ತೃಷೆ ಉಂಟೆ ?

'ನಾರಾಯಣನಿಗೂ ಹಸಿವು ತೃಷೆಗಳ ಬಾಧ [illegible] ಯಶೋದೆಯು ಎದೆ ಹಾಲಿಗಾಗಿ ಅತ್ತ, ಬೆಣ್ಣೆಮುದ್ದೆ ಬೇಡಿ ತಿಂದ ಎಂದೆಲ್ಲ ಕಥೆ ಪ್ರಸಿದ್ಧವೆ ಇದೆ'–ಈ ಆಕ್ಷೇಪಕ್ಕೆ ಉತ್ತರವಾಗಿ, ಕಲ್ಪಪ್ರಳಯದಲ್ಲಿಯೂ, ಎಲ್ಲವೂ ಶೂನ್ಯವಾಗಿದ್ದಾಗ, ನಾರಾಯಣನಿದ್ದ. ಅವನೇನು ತಿನ್ನುತ್ತಿದ್ದ ? ಒಬ್ಬಂಟಿಗನಾಗಿ ಆಲದೆಲೆಯ ಮೇಲೆ ಶಿಶುವಾಗಿ ನೂರುವರ್ಷಗಳ ಪರ್ಯಂತ ಆತ ಮಲಗಿರಲಿಲ್ಲವೆ ? ಆಗ ಆ ಶಿಶುವಿಗೆ ಯಾವ ಯಶೋದೆ ಎದೆ ಹಾಲುಣಿಸಿದ್ದಳು ? ಬೆಣ್ಣೆಮುದ್ದೆ ತಿನಿಸಿದ್ದಳು ? ಆದರೂ ನಾರಾಯಣನಿಗೆ ಹಸಿವು ತೃಷೆಗಳುಂಟೆನ್ನುವಿರಲ್ಲ ? ಅಮ್ಮ ಏನಾಶ್ಚರ್ಯ ! ಎನ್ನುವ ಭಾವ ಇಲ್ಲಿದೆ.

ಇದನ್ನೆ ಮುಂದೆಯೂ ಲಕ್ಷ್ಮೀಶೋಭನಪದದಲ್ಲಿ ಸ್ವಲ್ಪ ಬೇರೆ ರೀತಿಯಾಗಿ ಹೇಳಿದೆ–

ಬೊಮ್ಮನ ನೂರು ವರ್ಷ ಪರ್ಯಂತ ಪ್ರಳಯದಲಿ  
ಸುಮ್ಮನೆಯಾಗಿ ಮಲಗಿಪ್ಪ ।  
ನಮ್ಮ ನಾರಾಯಣಗೆ ಹಸಿತೃಷೆಜರೆಮರಣದು–  
ಷ್ಕರ್ಮ ದುಃಖಂಗಳು ತೊಡಸುವರೆ ॥ (ನುಡಿ–೫೮)

'ಅಮ್ಮ!' ಎಂಬ ಆಶ್ಚರ್ಯ ಸೂಚಕಪದದ ಬಳಕೆಯನ್ನು ಲಕ್ಷ್ಮೀಶೋಭನ ಪದದಲ್ಲಿ ಹಿಂದೆ 'ಧರ್ಮ ಉಂಟೊಬ್ಬನಲಿ ಹೆಮ್ಮೆಯ ಹೆಸರಿಗೆ ಅಮ್ಮಮ್ಮ! ತಕ್ಕಗುಣವಿಲ್ಲ' (ನುಡಿ ೨೨) ಎಂಬಲ್ಲಿ ಕಂಡಿದ್ದೇವೆ

'ಯಶೋದೆ ಆಗ ಇದ್ದಳೆ'ಎಂಬ ಪದವಿಭಾಗಕ್ಕೆ ಕಲ್ಪಲತೆಯ ಸಂವಾದವಿದೆ–

ಲಯೇಽಪಿ ಬ್ರಹ್ಮಶತವರ್ಷಪರ್ಯಂತಂ ವಟಪತ್ರಶಾಯೀ  
ಕಥಮುಕ್ತೋಪದ್ರವವಾನ್ ಸ್ಯಾತ್ ? ನ ಹಿ ತತ್ರಾಪಿ ಗೋಕುಲಂ  
ನ ವಾ ನಂದಗೋಪೀ ಯಾ ನವನೀತಂ ದಿಶೇತ್ ।

ಪ್ರಳಯಕಾಲದಲ್ಲಿಯೂ ಬ್ರಹ್ಮನ ನೂರುವರ್ಷ ಪರ್ಯಂತ ಆಲದೆಲೆಯ ಮೇಲೆ ಮಲಗಿದವನಿಗೆ ಹಸಿವು ತೃಷೆಗಳ ಬಾಧೆ ಹೇಗಿದ್ದೀತು ? ಆ ಕಾಲದಲ್ಲಿಯೂ

ನಂದಗೋಕುಲ ಇರಲಿಲ್ಲ ತಾನೆ ? ಬೆಣ್ಣೆ ತಿನ್ನಿಸುವ ಯಶೋದೆಯಾದರೂ ಆಗ ಇರಲಿಲ್ಲ ತಾನೆ ?'

ಲಕ್ಷ್ಮೀಶೋಭನ ಪದದಲ್ಲಿಯೆ 'ಆಗ ಭಕ್ಷ್ಯಭೋಜ್ಯವಿತ್ತು ಪೂಜಿಸುವ ಯೋಗಿಗಳುಂಟೆ ? ಎಂದು ಮುಂತಾಗಿ ಮುಂದೆ ಹೇಳುವುದೂ ಈಗ ಹೊಂದಿಕೆಯಾಗುತ್ತದೆ

ಹೀಗೆ, ಪ್ರಳಯದಲ್ಲಿ ನಾರಾಯಣನ ಅಸ್ತಿತ್ವ ಶ್ರುತಿಸಿದ್ಧವಾಗಿದ್ದು ಅದೊಂದೆ, ಹರಿಗೆ ಲಯವಿಲ್ಲವೆಂಬುದನ್ನೂ, ಜನ್ಮವಿಲ್ಲವೆಂಬುದನ್ನೂ ಜೊತೆಗೆ, ಹಸಿವು ತೃಷೆಗಳಿಲ್ಲವೆಂಬುದನ್ನೂ ಸುಲಭವಾಗಿ ಸಮರ್ಥಿಸಬಲ್ಲುದೆಂದು ತೋರಿಸಿ ಒಂದು ಯುಕ್ತಿಯಿಂದ ಅನೇಕ ಪ್ರಮೇಯಗಳನ್ನು ಸಾಧಿಸುತ್ತ ರಾಜರು,

ಯುಕುತಿ ಕೋವಿದರನು ಕುಣಿಸುವೆನು
ಅಖಿಲ ಕುಜನರನು ದಣಿಸುವೆನು
ಈ ಖಳರ ಮತವನು ಮಾಣಿಸುವೆನು

ಎಂದು ತತ್ವಸಾರದಲ್ಲಿ ತಾವು ಮಾಡಿದ ಪ್ರತಿಜ್ಞೆಯನ್ನು ನೆನಪಿಸುತ್ತಿದ್ದಾರೆನ್ನಬಹುದು.

ಆದ್ದರಿಂದ 'ಬ್ರಹ್ಮನ ಆ ಕಲ್ಪಪ್ರಳಯದಲ್ಲಿಯೂ ಲಯಹೊಂದದೆ ಇದ್ದ ನಾರಾಯಣನಿಗೆ ಲಯವೆಂಬುದುಂಟೆ ? ಜನ್ಮವೂ ಲಯವಿಲ್ಲದವನಿಗೆ ಉಂಟೆ ? ಕೃಷ್ಣಾವತಾರದಲ್ಲಿ ಅಮ್ಮಿಯನುಣಿಸಿದ್ದ ಯಶೋದೆ ಆಗ ಆ ಪ್ರಳಯಕಾಲದಲ್ಲಿಯೂ ಇದ್ದಳೆ ? ಅಮ್ಮ! ಏನಾಶ್ಚರ್ಯ ! ಒಬ್ಬಂಟಿಗನಾಗಿ ಹಸುಗೂಸಾಗಿ ಸುದೀರ್ಘವಾದ ಆ ಪ್ರಳಯಕಾಲದಲ್ಲಿ ಮಲಗಿದ್ದವನಿಗೂ ಹಸಿವು ತೃಷೆ ಉಂಟೆ ?'ಎಂದು ಮಹಾಲಕ್ಷ್ಮಿ ಆಕ್ಷೇಪಿಸುತ್ತಿದ್ದಾಳೆ

— ೩೪ —

**ಆಗ ಭಕ್ಷ್ಯ ಭೋಜ್ಯವಿತ್ತು ಪೂಜಿಸುವ**
**ಯೋಗಿಗಳುಂಟೆ ಧನಧಾನ್ಯ ।**
**ಆಗ ದೊರಕೊಂಬುದೆ ಪಾಕಮಾಡುವ ವಹ್ನಿ**
**ಮತ್ತಾಗಲೆಲ್ಲಿಹುದು ವಿಚಾರಿಸಿರೊ ॥**

ಆಗ ಆ ಬ್ರಹ್ಮಪ್ರಳಯದ ಸುದೀರ್ಘ ಕಾಲದಲ್ಲಿ ಶ್ರೀಹರಿಗೆ ಭಕ್ಷ್ಯ ಭೋಜ್ಯಾದಿಗಳನ್ನಿತ್ತು ಪೂಜಿಸುವ ಭಕ್ತರಿರುವರೆ ? ಆ ನೈವೇದ್ಯದ ಪಾಕಕ್ಕೆ ಬೇಕಾಗುವ ಧನಧಾನ್ಯ ಆಗ ದೊರಕುವುದೇ ? ಅನ್ನ ಬೇಯಿಸುವಂಥ ಬೆಂಕಿ ಆಗ

ಎಲ್ಲಿರುತ್ತದೆ.? ನಮ್ಮಂತೆ ಶ್ರೀಹರಿಗೂ ಹಸಿವು ತೃಷೆ ಇದೆ ಎನ್ನುವುದಾದರೆ ಆ ಪ್ರಳಯಕಾಲದಲ್ಲಿ ಆಹಾರವಿಲ್ಲದೆ ಆತ ಹೇಗೆ ಬದುಕಿರಬಲ್ಲ? ವಿಚಾರಿಸಿರೋ.

ಹಿಂದಿನ ನುಡಿಯಲ್ಲಿ 'ಅಮ್ಮ! ಇವಗೆ ಹಸಿವು ತೃಷೆ ಉಂಟೆ? ಎಂಬ ಆಶ್ಚರ್ಯದ ಉದ್ಗಾರ ಮಾಡಿದ್ದಾಳೆ, ಮಹಾಲಕ್ಷ್ಮಿ. ಆದರೆ ಪ್ರತಿವಾದಿಯ ದೃಷ್ಟಿಯಲ್ಲಿ ಹರಿಗೆ ಹಸಿವು ತೃಷೆ ಇಲ್ಲವೆಂದರೇನೆ ಅದೊಂದು ಆಶ್ಚರ್ಯದ ಸಂಗತಿಯಾಗುತ್ತದೆ. ಸ್ವತಃ ಮಹಾಲಕ್ಷ್ಮಿಯೆ ಬ್ರಹ್ಮಾದಿದೇವತೆಗಳೆಲ್ಲರ ಸಹಾಯದಿಂದ ನಿತ್ಯಪಾಕ ಮಾಡಿ ನಾರಾಯಣನಿಗೆ ಬಡಿಸುತ್ತಾಳೆ–

ಅನ್ನಂ ಸರಸ್ವತೀ ಕುರ್ಯಾತ್ ಬ್ರಹ್ಮಾ ಕುರ್ಯಾತ್ತಥಾ ರಸಂ ।
ಸೂಪಂ ಕುರ್ಯಾನ್ಮಹಾಲಕ್ಷ್ಮೀಃ ಘೃತಂ ನಾರಾಯಣಃ ಸ್ವಯಂ ॥
ಪರಮಾನ್ನಂ ಭಾರತೀ ಚ ಭಕ್ಷ್ಯಂ ವಾಯುರ್ಜಗತ್ಪತಿಃ ।
ಇಂದ್ರಶಚ್ಯಾದಿಕಾಃ ಸರ್ವಾಃ ಕುರ್ಯುಃ ಶಾಕಾದಿಕಂ ತಥಾ ॥

ಇಲ್ಲಿ ನಾರಾಯಣನೂ ಅಡಿಗೆಯವರಲ್ಲಿ ಒಬ್ಬನಾಗಿರುವುದು ಇನ್ನೊಂದು ಆಶ್ಚರ್ಯವೆನ್ನಬೇಕು. ಹೀಗೆ ಸಿದ್ಧವಾದ ಅನ್ನವನ್ನು ಆತ ಹಸಿವಿನಿಂದ ಕಂಗೆಟ್ಟವನಂತೆ ಉಣ್ಣುತ್ತಾನೆ ಎಂದರೆ ಅದಕ್ಕಿಂತ ಆಶ್ಚರ್ಯವೂ ಬೇರೊಂದಿಲ್ಲ. ನೈವೇದ್ಯ ಶ್ರೀಹರಿಯ ಮುಂದಿಟ್ಟು ನಾವು ಹೀಗೆ ಕೇಳಿಕೊಳ್ಳಬೇಕಂತೆ–

ಯಥೈವ ಘರ್ಮಸಂತಪ್ತಃ ಕ್ಷುತ್ ಪಿಪಾಸಾರ್ದಿತಸ್ತಥಾ ।
ಚಿದಾನಂದಘನೈಶ್ವರ್ಯೈರಿಂದ್ರಿಯೈಃ ಸ್ವೀಕುರು ಪ್ರಭೋ ॥

ಹಸಿವಿಲ್ಲದವನು ಹಸಿದವನಂತೆ ಉಣಬಲ್ಲನೆ? ಅಜೀರ್ಣೇ ಭೋಜನಂ ವಿಷಂ ! ಹಸಿವಿಲ್ಲದವನಿಗೆ ಅನ್ನ ವಿಷವಾಗುತ್ತದೆ. ಆದರೂ ಬ್ರಹ್ಮಾಂಡದೊಳಗಿರುವ ಅಸಂಖ್ಯಾತ ಭಕ್ತಜನರು ನೀಡುವ ಭಕ್ಷ್ಯಭೋಜ್ಯಾದಿಗಳನ್ನೆಲ್ಲ ಆತ ನಿತ್ಯ ಉಣ್ಣುತ್ತಿರುತ್ತಾನೆ. ಭಕ್ತರಿಗೆ ಸಿಗುವುದು ಅದರಲ್ಲಿ ಸ್ಥೂಲವಾದ ಷಡ್ರಸಗಳು ಮಾತ್ರ ಇನ್ನುಳಿದ ಸೂಕ್ಷ್ಮವಾದ ಅನಂತಾನಂತ ರಸಗಳಲ್ಲಿ ಸಿಂಹಪಾಲು ಆತನಿಗೆ ಲಕ್ಷ್ಮೀಬ್ರಹ್ಮಾದಿಗಳಿಗೆಲ್ಲೋ ಅಲ್ಪ ಸ್ವಲ್ಪ ಈ ಜಡವಾದ ರಸಗಳ ಜೊತೆಗೆ ಲಕ್ಷ್ಮೀಬ್ರಹ್ಮಾದಿ ಚೇತನ ಸ್ವರೂಪವಾದ ಅನಂತಾನಂತ ರಸಗಳನ್ನು ಹರಿ ಸವಿಯುತ್ತಾನಂತೆ. ಅವತಾರ ರೂಪಗಳಲ್ಲಿ ಸ್ಥೂಲವಾದ ಜಡ ರಸಗಳನ್ನೂ ಭುಂಜಿಸುತ್ತಾನೆ. ಗೋವರ್ಧನಪರ್ವತ ವೇಷಧಾರಿಯಾಗಿ ಆ ಗಿರಿಯಜ್ಞದ ಅನ್ನವನ್ನೆಲ್ಲ ತಾನೆ ಮೆದ್ದನಂತೆ, ಶ್ರೀಕೃಷ್ಣ. ಅದಕ್ಕಾಗಿ, ಅವರು ಮಾಡುತ್ತಿದ್ದ ಇಂದ್ರಯಜ್ಞವನ್ನು ನಿಲ್ಲಿಸಿದನಂತೆ! ದೇವತೆಗಳಿಂದ ಯಜ್ಞ ಸ್ವೀಕರಿಸುವಲ್ಲಿಯೂ ಹರಿಗೆ ಬಹಳ ಆಗ್ರಹ ದಕ್ಷಯಜ್ಞ ಪ್ರಸಂಗದಲ್ಲಿ ಶಿವನು ದಕ್ಷನ ಶಿರಶ್ಛೇದಕ್ಕೆ

ಶತಪ್ರಯತ್ನ ಮಾಡಿದರೂ ಸಾಧ್ಯವಾಗದಿದ್ದಾಗ ತಾನೆ ಒಂದು ಯಜ್ಞಕ್ಕೆ ಸಂಕಲ್ಪಿಸಿ ದಕ್ಷನ ಶಿರಸ್ಸನ್ನು ಹರಿಗೆ ಆಹುತಿ ಕೊಡುವೆನೆಂದುಳಕೊಂಡಾಗ ಶಿರಶ್ಛೇದ ಸುಲಭವಾಯಿತಂತೆ! ಮೊದಲಿಗೆ ಏಕೆ ಇದು ಹೀಗಾಲಿಲ್ಲ? ದಕ್ಷನು ಸತ್ತರೆ ಆತ ತನಗೆ ಮಾಡುತ್ತಿರುವ ಯಜ್ಞ ನಿಂತಂತಾಗುತ್ತದೆ, ಎಂದು ಶ್ರೀಹರಿಯೆ ಆತನನ್ನು ಅವಧ್ಯನನ್ನಾಗಿಸಿದ್ದ! ಕೊನೆಯಲ್ಲಿ ಶಿವನು ಮಾಡಿದ ಯಜ್ಞ, ದಕ್ಷನು ಬದುಕಿ ಬಂದು ಪೂರ್ತಿಗೊಳಿಸಿದ ಹಿಂದಿನ ಯಜ್ಞ ಇವರೆಡನ್ನೂ ಶ್ರೀಹರಿ ಗಿಟ್ಟಿಸಿಕೊಂಡ.

ದೇವಾನ್ ಭಾವಯತಾನೇನ ತೇ ದೇವಾ ಭಾವಯಂತು ವಃ ।
ಪರಸ್ಪರಂ ಭಾವಯಂತಃ ಶ್ರೇಯಃ ಪರಮವಾಪ್ಸ್ಯಥ ॥

ಎಂದು ಭಗವದ್ಗೀತೆಯಲ್ಲಿ ಶ್ರೀಕೃಷ್ಣ ಎಲ್ಲ ದೇವತೆಗಳಿಗೂ ಯಜ್ಞ ಮಾಡಿರೆಂದು ಮಾನವರಿಗೆ ಉಪದೇಶಿಸಿ, ಯಜ್ಞ ಮಾಡದವರಿಗೆ,

ಭುಂಜತೇ ತೇ ತ್ವಘಂ ಪಾಪಾ ಯೇ ಪಚಂತ್ಯಾತ್ಮಕಾರಣಾತ್ ।

ಎಂದು ಬೆದರಿಕೆ ಹಾಕುತ್ತಲೆ, ಯಜ್ಞಮಾಡುವವರಿಗೆ,

ಯಜ್ಞಶಿಷ್ಟಾಶಿನಃ ಸಂತೋ ಮುಚ್ಯಂತೇ ಸರ್ವಕಿಲ್ಬಿಷೈಃ ।

ಎಂದು ಪ್ರಶಂಸೆಯನ್ನು ಮಾಡಿ, ಕೊನೆಯಲ್ಲಿ ಎಲ್ಲ ದೇವತೆಗಳೊಳಗೂ ಇದ್ದು ಅವರಿಗೆಂದು ನೀಡುವ ಎಲ್ಲ ಆಹುತಿಗಳನ್ನೂ ಮೆಲ್ಲುವವನು ತಾನೆ ಎಂದು ತಾನೆ ಹೇಳಿಕೊಂಡಿದ್ದಾನೆ, ಕೃಷ್ಣ–

ಯೇಽಪ್ಯನ್ಯದೇವತಾಭಕ್ತಾ ಯಜಂತೇ ಶ್ರದ್ಧಯಾನ್ವಿತಾಃ ।
ತೇಽಪಿ ಮಾಮೇವ ಕೌಂತೇಯ ಯಜಂತ್ಯವಿಧಿಪೂರ್ವಕಂ ॥

ಹೀಗೆ ಎಲ್ಲ ಯಜ್ಞಗಳನ್ನೂ ಸ್ವೀಕರಿಸುತ್ತ ಯಜ್ಞ, ಯಜ್ಞಪುರುಷ ಯಜ್ಞೇಶ್ವರ, ಯಜ್ಞಭಾವನ ಎಂದು ಮುಂತಾಗಿ ಅನೇಕ ನಾಮಗಳಿಂದ ಕರೆಸಿಕೊಳ್ಳುತ್ತಿದ್ದಾನೆ. ಯಜ್ಞವೆಂದರೆ ಕೇವಲ ಅಶ್ವಮೇಧ ರಾಜಸೂಯಾದಿಗಳೇ ಅಲ್ಲ, ಪ್ರತಿಮಾ ಮುಖದಿಂದ ನೈವೇದ್ಯ ರೂಪದಲ್ಲಾಗಲೀ, ಅಗ್ನಿಮುಖದಿಂದ ಅನುಯಾಗ ರೂಪದಲ್ಲಾಗಲಿ, ಬ್ರಾಹ್ಮಣ ಮುಖದಿಂದ ಭೋಜನ ರೂಪದಲ್ಲಾಗಲಿ ಹರಿಗೆ ಅನ್ನವನ್ನು ಸಮರ್ಪಿಸಬಹುದು. ಅದು ಯಜ್ಞವೆನಿಸುತ್ತದೆ. ಅನೇಕ ದೇವಾಲಯಗಳಲ್ಲಿ ಈ ಮೂರು ವಿಧದ ಯಜ್ಞಗಳು ಇಂದಿಗೂ ನಡೆಯುತ್ತಿವೆ. ಈ ಎಲ್ಲ ಯಜ್ಞಗಳನ್ನೂ ಭುಂಜಿಸಿ ಯಜ್ಞಭುಕ್ ಎನಿಸಿರುವ ಶ್ರೀಹರಿಗೆ ಹಸಿವಿಲ್ಲ ಎಂದರೆ ನಂಬಬಹುದೆ?

ಈ ಪ್ರಶ್ನೆಗೆ ಪ್ರತಿ ಸವಾಲೊಡ್ಡಿದೆ ಮೇಲಿನ ನುಡಿ– 'ಇಷ್ಟು ಹಸಿವು ಉಳ್ಳವನು ಶ್ರೀಹರಿ ಎನ್ನುವುದಾದರೆ ಪ್ರಳಯಕಾಲದಲ್ಲಿ ಆತನೇನು ಉಣ್ಣುತ್ತಾನೆ ? ಆಗ ಯಜ್ಞಗಳನ್ನು ಮಾಡುವ ಕರ್ಮಯೋಗಿಗಳು ಯಾರಾದರೂ ಇರುವರೆ ? ಪಾಕಮಾಡಿ ನೈವೇದ್ಯ ಅರ್ಪಿಸಿ ಪೂಜೆಮಾಡುವ ಭಕ್ತಿಯೋಗಿಗಳಿರುವರೆ ? ಪಾಕಕರ್ತರಿಲ್ಲವೆಂದ ಮೇಲೆ ಪಕ್ವಾನ್ನ ಸಿದ್ಧವಾಗುವುದಾದರೂ ಹೇಗೆ ? ಪಾಕಕರ್ತೃಗಳಲ್ಲಿ ಸೇರಿರುವ ಲಕ್ಷ್ಮೀನಾರಾಯಣರು ಸ್ವತಃ ತಾವೇ ಆ ಕಾಲದಲ್ಲಿ ಇದ್ದರೂ ಅವರು ಸ್ವಯಂಪಾಕ ಮಾಡಬೇಕೆಂದರೆ ಧನಧಾನ್ಯ ಆಗ ದೊರಕುವುದೇ ? ಮತ್ತೆ ಪಾಕ ಮಾಡುವ ವಹ್ನಿ ಆಗ ಎಲ್ಲಿರುತ್ತದೆ ? ವಿಚಾರಿಸಿ ನೋಡಿ ಪ್ರಳಯ ಜಲ ಒಂದೆ ಎಲ್ಲೆಡೆ ಹಬ್ಬಿರುವುದರಿಂದ ನೀರು ಸಮೃದ್ಧಿಯಾಗಿಯೇ ಸಿಕ್ಕೀತು ಆದರೆ ಬೆಂಕಿ ಎಲ್ಲಿ ? ಧಾನ್ಯವೆಲ್ಲಿ ? ಶೂನ್ಯದಿಂದ ಪದಾರ್ಥ ಸೃಷ್ಟಿ ಮಾಡಬಲ್ಲ ಶ್ರೀಹರಿ. ಆದರೂ ಮಾಡಲೊಲ್ಲ. ಅದು ಅವನ ಸಂಕಲ್ಪ. ಸೃಷ್ಟಿಗೆ ಮೂಲವಸ್ತುಗಳು ಬೇಕು. ಪ್ರಕೃತ್ಯಾದಿ ಸೂಕ್ಷ್ಮತತ್ವಗಳು ಆಗಲೂ ಇವೆಯಾದರೂ ಅವು ಉಪಚಿತವಾಗಿಲ್ಲ ಸೃಷ್ಟಿಕಾಲದಲ್ಲಿ ಅವುಗಳಿಗೆ ಉಪಚಯ. ಲಯಕಾಲದಲ್ಲಿ ಅಲ್ಲ. ಹಸಿವಿರುತ್ತಿದ್ದರೆ ಶ್ರೀಹರಿ ಆಗಲೂ ಪದಾರ್ಥಗಳನ್ನು ಸೃಷ್ಟಿ ಮಾಡಿರುತ್ತಿದ್ದನೊ ಏನೊ ? ಏಕೆಂದರೆ ಆಗಲೂ ಕಾಲಾದಿ ಸೃಷ್ಟಿಮಾಡುತ್ತಾನೆ. ಋಜುಯೋಗಿಗಳ ಅಂತಃಕರಣದಲ್ಲಿ ವಾಸನಾಮಯ ಪದಾರ್ಥ ಸೃಷ್ಟಿ ಮಾಡುತ್ತಾನೆ. ಇದನ್ನೆಲ್ಲ ವಿಚಾರಿಸಿ ಹರಿಯು ಲಯಕಾಲದಲ್ಲಿ ಅನ್ನ ಉಣ್ಣುವನೇ ಹೇಗೆಂಬುದನ್ನು ನಿರ್ಧರಿಸಬೇಕಾಗುತ್ತದೆ. ಪೂರ್ಣಾನಂದಮಯನಾದ ಆತನಿಗೆ ಹಸಿವಿನ ಪೀಡೆ ಹೇಗಿದ್ದೀತು ? '

ಹಾಗಾದರೆ ಆತ ಯಜ್ಞಭೋಕ್ತನಾಗುವುದಾದರೂ ಹೇಗೆ ? ಆತ ಆನಂದಕ್ಕಾಗಿ ಉಣ್ಣುವುದಿಲ್ಲ. ಅನ್ನ ಉಣ್ಣುವುದರಿಂದ ಅವನಲ್ಲಿ ಮೊದಲೇ ಇದ್ದ ಆನಂದ ಅಭಿವ್ಯಕ್ತವಾಗುತ್ತದೆ ಎಂದು ಸಮಾಧಾನ ಹೇಳಿದರೆ ಹೊಸದಾಗಿ ಆನಂದ ಉತ್ಪನ್ನವಾದರೇನು, ಇದ್ದ ಆನಂದವೆ ಅಭಿವ್ಯಕ್ತವಾದರೇನು ? ಆನಂದಾನುಭವವು ಒಂದೇ ರೀತಿಯಾಗಿದ್ದು ಅನ್ನ ಉಣ್ಣುವ ನರನಿಗೂ ನಾರಾಯಣನಿಗೂ ಏನು ಅಂತರ ಎಂಬ ಪ್ರಶ್ನೆ ಬರುತ್ತದೆ ನರನು ಸ್ವಲ್ಪ ಉಂಡು ಸ್ವಲ್ಪ ಆನಂದ ಪಡೆಯುತ್ತಾನೆ ಎಂದರೆ ಹಸಿವು ಇಬ್ಬರಿಗೂ ಬೇಕಲ್ಲವೆ ? ಚಿಕ್ಕಮಕ್ಕಳಿಗೂ ದೊಡ್ಡವರಿಗೂ ಉಣ್ಣುವ ಆಹಾರದ ಪ್ರಮಾಣದಲ್ಲಿ ವ್ಯತ್ಯಾಸವಿದ್ದರೂ ಹಸಿವು ಒಂದೇ ರೀತಿ ತಾನೆ ? ಹೀಗಿದ್ದರೂ ಹರಿಯು 'ಹಸಿದವನಂತೆ' ಉಣ್ಣುವುದೆಂದರೇನರ್ಥ ? ಇದಕ್ಕೂ ಉತ್ತರ ಕಂಡುಹಿಡಿಯಲು 'ವಿಚಾರಿಸಿರೊ' ಎನ್ನುತ್ತಿದ್ದಾಳೆ ಮಹಾಲಕ್ಷ್ಮಿ

ಆಗಮಿಷ್ಯತ್ ಸುಖಂ ಚಾಪಿ ತಚ್ಚಾಸ್ತ್ಯೇವ ಸದಾಪಿ ತು ।
ತಥಾಪ್ಯಚಿಂತ್ಯಶಕ್ತಿತ್ವಾತ್ ಜಾತಂ ಸುಖಮತೀವ ಚ ॥

ಎಂಬ ಗೀತಾಭಾಷ್ಯೋಕ್ತ ನಾರದಪುರಾಣವಚನದಂತೆ ಹರಿಯ ಆನಂದ ನಿತ್ಯ ಅಭಿವ್ಯಕ್ತವೇ ಆಗಿದ್ದರೂ ಅದನ್ನೆ ಅಚಿಂತ್ಯ ಶಕ್ತಿಯಿಂದ ಅನ್ನ ಉಣ್ಣುವ ಕಾಲದಲ್ಲಿ ತಿರುಗಿ ಅಭಿವ್ಯಕ್ತಗೊಳಿಸುತ್ತಾನೆ ಅನಭಿವ್ಯಕ್ತವಾಗಿ ಎಂದೂ ಇಲ್ಲದಿರುವುದರಿಂದ ಹಸಿವಿನ ಪೀಡೆಗೆ ಅವಕಾಶವಿಲ್ಲ. ಆದರೂ ತುಂಬ ಹಸಿದವರುಂಡಾಗ ಪಡುವ ಆನಂದ ಎಷ್ಟಿರಬಹುದೋ ಅಷ್ಟು ಆನಂದದ ಅಭಿವ್ಯಕ್ತಿ ಮಾಡಿಕೊಳ್ಳುತ್ತಾನೆ. ಹಸಿವು ಹೆಚ್ಚಿದಂತೆಲ್ಲ ಊಟದಿಂದ ಸಿಗುವ ಸುಖವೂ ಹೆಚ್ಚು. ಈ ಅಭಿಪ್ರಾಯದಿಂದಲೆ ಹಸಿವಿನಿಂದ ಕಂಗೆಟ್ಟವನಂತೆ ಹರಿ ಉಣ್ಣುವನೆನ್ನಲಾಗಿದೆ ನಿತ್ಯ ಅಭಿವ್ಯಕ್ತವಾಗಿರುವ ಮಹಾನಂದವನ್ನೆ ತಿರುಗಿ ಏಕೆ ಅಚಿಂತ್ಯಶಕ್ತಿಯಿಂದ ಅಭಿವ್ಯಕ್ತಗೊಳಿಸುತ್ತಾನೆ ಎಂದರೆ ಅದೊಂದು ಲೀಲೆ. ತನಗೆ ಅದರಿಂದೇನೂ ಪ್ರಯೋಜನವಿಲ್ಲ. ಭಕ್ತರ ಅನುಗ್ರಹಕ್ಕಾಗಿ ಮಾತ್ರ. 'ಅನುಗ್ರಹ ವ್ಯಕ್ತಿರೇವ ತದ್ಗುಣಾನಾಂ ನ ಚಾನ್ಯಥಾ' ಎಂದು ಋಗ್ಭಾಷ್ಯದಲ್ಲಿ ಇದನ್ನೇ ಹೇಳಿದೆ.

'ಯಥೈವ ಘರ್ಮ ಸಂತಪ್ತಃ' ಎಂಬ ಪ್ರಾರ್ಥನೆಯಲ್ಲಿಯೂ ಈ ಭಾವನೆ ಅಡಗಿದೆ. ಎಲ್ಲ ದೇವತೆಗಳೊಳಗಿದ್ದು ತಾನು ಭೋಗಿಸುವುದೂ ಆ ದೇವತೆಗಳ ಭಕ್ತರನ್ನು ತಾನು ಅನುಗ್ರಹಿಸುವುದಕ್ಕಾಗಿ. ಅವನ ಅನುಗ್ರಹವಿಲ್ಲದೆ ಆ ದೇವತೆಗಳಿಂದಲೇ ನೇರವಾಗಿ ಭಕ್ತರಿಗೆ ಯಾವ ಅಭೀಷ್ಟವೂ ಸಿಗಲಾರದು ಇದನ್ನು ಶ್ರೀಕೃಷ್ಣನೆ ಭಗವದ್ಗೀತೆಯಲ್ಲಿ ಹೇಳಿದ್ದಾನೆ–

ಯೇ ಯಥಾ ಮಾಂ ಪ್ರಪದ್ಯಂತೇ ತಾಂಸ್ತಥೈವ ಭಜಾಮ್ಯಹಂ ।
ಮಮ ವರ್ತ್ಮಾನುವರ್ತಂತೇ ಮನುಷ್ಯಾಃ ಪಾರ್ಥ ಸರ್ವಶಃ ॥
ಕಾಂಕ್ಷಂತಃ ಕರ್ಮಣಾಂ ಸಿದ್ಧಿಂ ಯಜಂತ ಇಹ ದೇವತಾಃ ।
ಕ್ಷಿಪ್ರಂ ಹಿ ಮಾನುಷೇ ಲೋಕೇ ಸಿದ್ಧಿರ್ಭವತಿ ಕರ್ಮಜಾ ॥

ಭಕ್ತರನ್ನು ಅನುಗ್ರಹಿಸುವುದಕ್ಕಾಗಿಯೇ ಭಕ್ತರಿಂದ ಆಗ್ರಹಪೂರ್ವಕವಾಗಿ ಆತ ಬೇಡಿ ತಿನ್ನುತ್ತಾನೆ, ಕುಚೇಲನ ಹಿಡಿ ಅವಲಕ್ಕಿ ತಿಂದಂತೆ. ಹಿರಿಯರು ಸಣ್ಣ ಮಕ್ಕಳಿಂದ ನಮಸ್ಕಾರ ಮಾಡಿಸಿಕೊಂಡು ಆಶೀರ್ವದಿಸುವಂತೆ.

ನಿತ್ಯ ತೃಪ್ತನಾದ ಪೂರ್ಣಾನಂದನಾದ ನಾರಾಯಣ ತುಂಬ ಹಸಿದವನಂತೆ ಉಣಲು ಆತ ನಿತ್ಯತೃಪ್ತಪೂರ್ಣಾನಂದನಾಗಿರುವುದೂ ಒಂದು ಮುಖ್ಯಕಾರಣ! ಆನಂದದಿಂದ ನಗುವಾಗ ಆ ನಗುವಿಗೆ, ಕುಣಿವಾಗ ಆ ಕುಣಿತಕ್ಕೆ ಯಾವ ಪ್ರಯೋಜನದ ಉದ್ದೇಶವನ್ನೂ ಹೇಳಲು ಬರುವುದಿಲ್ಲ. ಅದು ಆನಂದಕ್ಕಾಗಿ ಅಲ್ಲ,

ಆನಂದದಿಂದಾಗಿ. ಆದ್ದರಿಂದಲೆ ಮುಕ್ತ ಜೀವರೂ ಹೀಗೇ ಅನ್ನ ಉಣ್ಣುತ್ತಾರೆ. 'ಸಾಶನಾನಶನೇ ಅಭಿ' ಎಂದು ಮುಂತಾಗಿ ಶ್ರುತಿಯು ಮುಕ್ತರಿಗೆ ಪ್ರಾಕೃತಾನ್ನ ಇಲ್ಲವೆಂದಿದೆ ಹೊರತು ಶುದ್ಧಸತ್ವಾತ್ಮಕ ಅನ್ನವನ್ನಲ್ಲ. ಜಡವಾದ ಶುದ್ಧಸತ್ವಾತ್ಮಕ ಅನ್ನದ ಜೊತೆಗೆ, ಚೇತನ ಸ್ವರೂಪವಾದ ಅನ್ನವನ್ನೂ ಮುಕ್ತರು ಉಣ್ಣುತ್ತಾರೆ. ಒಬ್ಬ ಮುಕ್ತ ಜೀವ ಇನ್ನೊಬ್ಬ ಮುಕ್ತ ಜೀವನನ್ನು ತಿಂದು ನಲಿಯುತ್ತಾನೆ. ಆ ಇನ್ನೊಬ್ಬ ಜೀವನಿಗೆ ಆದರಿಂದೇನೂ ದುಃಖವಾಗುವುದಿಲ್ಲ ಉಂಡವನ ಹೊಟ್ಟೆಯಲ್ಲಿ ತಾತ್ಕಾಲಿಕವಾಗಿ ರೂಪಾಂತರ ಹೊಂದಿ ಹೊರಗೆ ಬಂದು ತಿರುಗಿ ಹಿಂದಿನ ರೂಪವನ್ನೇ ತಳೆಯುತ್ತಾನೆ. ವಾತಾಪಿ ಇಲ್ವಲರ ಕಥೆ ಇದಕ್ಕೆ ನಿದರ್ಶನ ಅಲ್ಲಿ ವಾತಾಪಿ ಹಿಂದಿನ ರೂಪು ತಳೆದು ಹೊಟ್ಟೆಬಗಿದು ಹೊರಬರುತ್ತಿದ್ದ. ಇಲ್ಲಿ ಹೊರಗೆ ಬಂದು ಹಿಂದಿನ ರೂಪು ತಳೆಯುತ್ತಾರೆ ಎನ್ನುವುದು ವ್ಯತ್ಯಾಸ. ವಾದಿರಾಜರು ತಮ್ಮ ತತ್ವಸಾರ (ವೈಕುಂಠವರ್ಣನ)ದಲ್ಲಿ ಮುಕ್ತರ ಕ್ರೀಡೆಯನ್ನು ಹೀಗೆ ಬಣ್ಣಿಸಿದ್ದಾರೆ–

> ನಿತ್ಯಾಪ್ರಾಕೃತ ಫಲಂಗಳವರ್ಗೆ ಸುಖವಿತ್ತು ಮುನ್ನಿನಂದದಲಿಹವು ।
> ಇದು ಚಿತ್ರವಲ್ಲ ತುಂಡಿಸಿ ಶಾಕಂಗಳ ಮಾಡಿ ಕುದಿಸಿ ವಿಪ್ರರಿಗುಣಿಸಿದ ।
> ಚದುರ ವಾತಾಪಿ ತಮ್ಮಣ್ಣ ಕರೆದಾಗಲೆ ಮೊದಲ ಹಾಗೆ ಬಾಹ ಕಂಡ್ಯ ॥

ಆದ್ದರಿಂದ ಮುಕ್ತರಂತೆ ಮುಕ್ತಿದಾತನಾದ ನಾರಾಯಣನೂ ಉಣ್ಣುವುದರಲ್ಲಿ ಅಚ್ಚರಿ ಏನಿಲ್ಲ

'ಏಕೋ ನಾರಾಯಣ ಆಸೀತ್' ಎಂಬ ಶ್ರುತಿ ಪ್ರಳಯಕಾಲದಲ್ಲಿ ನಾರಾಯಣನೊಬ್ಬನೇ ಇದ್ದನೆನ್ನುತ್ತಿದ್ದರೂ ನಾರಾಯಣನೊಬ್ಬನೆ ಇದ್ದನೆಂದು ಅರ್ಥವಲ್ಲ. 'ವಾಯುರ್ವಾವ ನಿತ್ಯಃ' 'ವಾಯುದೇವನು ನಿತ್ಯ' ಎಂದೂ ಶ್ರುತಿ ಇದೆ. ವಾಯುದೇವನೂ ಪ್ರಳಯಕಾಲದಲ್ಲಿ ಇದ್ದ. ಅವನ ಸ್ಥೂಲ ಶರೀರ ನಾಶವಾಗಿದ್ದರೂ ಲಿಂಗಶರೀರದಿಂದ ಆತನಿದ್ದ. ಲಿಂಗಶರೀರದಿಂದ ಎಲ್ಲ ಸಂಸಾರಿಜೀವರೂ ಪ್ರಳಯಕಾಲದಲ್ಲಿರುತ್ತಾರೆ ಎನ್ನುವುದು ನಿಜವೆ. ಆದರೆ ಸುಪ್ತರಾಗಿರುತ್ತಾರೆ. ವಾಯುದೇವನೊಬ್ಬನೆ ಎಚ್ಚೆತ್ತಿರುತ್ತಾನೆ. ಅವನ ಲಿಂಗದೇಹದ ಸೂಕ್ಷ್ಮಮನಸ್ಸು ಎಚ್ಚೆತ್ತಿರುತ್ತದೆ. ಉಳಿದವರದು ಸುಪ್ತವಾಗಿರುತ್ತದೆ. ಆದ್ದರಿಂದ ವಾಯು ದೇವನೊಬ್ಬನೆ 'ಪ್ರಳಯೇಽಪಿ ಪ್ರತಿಭಾತ ಪರಾವರ' 'ಅತಿರೋಹಿತ ವಿಜ್ಞಾನಿ' ಯಾಗಿದ್ದು ಪ್ರಳಯಕಾಲದಲ್ಲಿ ಇದ್ದ. ಉಳಿದವರು ಸುಪ್ತರಾಗಿದ್ದುದರಿಂದ 'ಇರಲಿಲ್ಲ'.

ಮನಸ್ಸು ಎಚ್ಚತ್ತೇ ಇರುವುದರಿಂದ ಪ್ರಳಯಕಾಲದಲ್ಲಿಯೂ ವಾಯುದೇವ ಹರಿಧ್ಯಾನ ಮಾಡುತ್ತ ಮನಸ್ಸಿನೊಳಗೇ ಮಾನಸ ವಾಸನಾಮಯವಾದ ಭಕ್ಷ್ಯ

ಭೋಜ್ಯಗಳನ್ನಿತ್ತು ಹರಿಯನ್ನು ಪೂಜಿಸುತ್ತಾನೆ 'ಈ ಮನಸ್ಸಿನ ಮಂಡಿಗೆಯಿಂದ ಹೊಟ್ಟೆ ತುಂಬುವುದೇ ?' ಎನ್ನಲಾಗದು. ಮಾನಸಪೂಜೆಗೇ ಏನೂ ಅರ್ಥವಿಲ್ಲ ಎಂದಾದೀತು. ಪ್ರಳಯಕಾಲ ಹರಿಯ ನಿದ್ರಾಕಾಲ. ಆಗ ಆತ ಭಕ್ಷ್ಯಭೋಜ್ಯಗಳನ್ನು ಉಣ್ಣುವುದಿಲ್ಲ ಎಂದೂ ಹೇಳಲಾಗದು. ಚಾತುರ್ಮಾಸ್ಯದ ಶಯನ ಕಾಲದಲ್ಲಿಯೂ ನೈವೇದ್ಯ ಸ್ವೀಕರಿಸುತ್ತಾನೆ, ಸ್ವೀಕರಿಸುವುದು ಮಾತ್ರವಲ್ಲ ವಿಶೇಷ ಸುಪ್ರೀತನಾಗುತ್ತಾನೆ. ಹಾಗಾದರೆ ಪ್ರಳಯಕಾಲದಲ್ಲಿ ಹರಿಗೆ ಭಕ್ಷ್ಯಭೋಜ್ಯಗಳನ್ನಿತ್ತು ಪೂಜಿಸುವ ಯೋಗಿ, ಋಜುಯೋಗಿ ವಾಯುದೇವನಿರುವಾಗ ಯೋಗಿಗಳುಂಟೆ ಎಂದು ಆಕ್ಷೇಪಿಸುವುದು ಸರಿಯೆ ? ಈ ಪ್ರಶ್ನೆಗೂ ಉತ್ತರ ಲಕ್ಷ್ಮೀಶೋಭನ ಪದದಲ್ಲಿ ಹೀಗೆ ಬಂದಿದೆ–

ಪ್ರಳಯಕಾಲದಲ್ಲಿ ಹರಿಗೆ ಭಕ್ಷ್ಯಭೋಜ್ಯವಿತ್ತು ಪೂಜಿಸುವ ಯೋಗಿ ವಾಯುದೇವನಿದ್ದರೆ ಇರಲಿ. ಆ ವಾಯುದೇವನಿಗೆ ಭಕ್ಷ್ಯಭೋಜ್ಯವಿತ್ತು ಪೂಜಿಸುವ ಯೋಗಿಗಳುಂಟೆ ? ಧನಧಾನ್ಯ ಆಗ ದೊರಕೊಂಬುದೆ ? ಪಾಕಮಾಡಿಸುವ ವಹ್ನಿ ಆಗ ಎಲ್ಲಿ ? ವಿಚಾರಿಸಿರಿ ಆ ಸುದೀರ್ಘವಾದ, ಇಡಿ ಸೃಷ್ಟಿಕಾಲದಷ್ಟೇ ಪರಿಮಾಣದ ಪ್ರಳಯಕಾಲದಲ್ಲಿ ಏನೂ ಉಣದೆ ಹರಿಧ್ಯಾನ ಮಾಡುವ ವಾಯುದೇವನಿಗೆ ಹಸಿವಿನ ಪೀಡೆ ಇಲ್ಲವೆಂದರೆ ಅವನ ಆರಾಧ್ಯ ದೇವನಾದ ನಾರಾಯಣನಿಗೆ ಉಂಟೆನ್ನಬಹುದೆ ?'

'ವಾಯುದೇವನಿಗೆ ಎಂದೂ ಹಸಿವಿಲ್ಲದಿದ್ದರೆ ಭೋಜನದ ಸುಖವೂ ಇಲ್ಲವೆಂದಾದೀತು. ನಾರಾಯಣನಂತೆ ಅವನಿಗೂ ಮೊದಲೇ ಇದ್ದ ಸುಖ ಭೋಜನದಿಂದ ಅಭಿವ್ಯಕ್ತವಾಗುತ್ತದೆ ಎಂದೆಲ್ಲ ಹೇಳಲಾಗದು ಅವನು ಇನ್ನೂ ಅಮುಕ್ತ ಆದರಿಂದ ಭೋಜನದಿಂದ ಸುಖವೆ ಲಭಿಸುತ್ತದೆ ಎನ್ನಬೇಕು. ಭೋಜನ ಸುಖ ಲಭಿಸಬೇಕಾದರೆ ಹಸಿವುಂಟೆನ್ನಬೇಕು. ಲಯಕಾಲದಲ್ಲಿ ಎಚ್ಚತ್ತಿರುವನೆಂದ ಮೇಲೆ ವಾಯುದೇವನಿಗೆ ಹಸಿವಿನಿಂದ ಪೀಡೆ ಉಂಟಾಗದೆ ? ಈ ಪ್ರಶ್ನೆಗೆ ಪರಿಹಾರ ಹೀಗೆ– ಹಸಿವೇನೋ ಇದೆ. ಆದರೂ ದೇವತೆಗಳಿಗೆ ಹಸಿವಿರುವುದರಿಂದ ಭೋಜನದಿಂದ ಸುಖ ಲಭಿಸುತ್ತದೆ ಹೊರತು ಆಹಾರ ಸಿಗದಿದ್ದಾಗ ದುಃಖ ಉಂಟಾಗುವುದಿಲ್ಲ ಎಂಬ ನಿಯಮವಿದೆ. ಮನುಷ್ಯರಿಗೆ ಹಸಿವಾದಾಗ ಸಕಾಲದಲ್ಲಿ ಆಹಾರ ಸಿಗದಿದ್ದರೆ ಶಕ್ತಿ ಉಡುಗುತ್ತದೆ. ಮೈ ಕೈ ನೋವು, ಶ್ರಮ, ಆಲಸ್ಯ, ಬೌದ್ಧಿಕ ಚಟುವಟಿಕೆಯ ಅಭಾವ, ಶರೀರ ಧಾತುಗಳ ದಾಹ ಅಶಕ್ತಿಗಳಾಗುತ್ತವೆ. ಇದನ್ನು ಭಾವಪ್ರಕಾಶವೆಂಬ ಆಯುರ್ವೇದ ಗ್ರಂಥ ಹೀಗೆ ಹೇಳುತ್ತದೆ–

ಭೋಜನೇಚ್ಛಾವಿಘಾತಾತ್ ಸ್ಯಾತ್ ಅಂಗಮರ್ದೋಽರುಚಿಃ ಶ್ರಮಃ ।
ತಂದ್ರಾಽಽಲೋಚನ ದೌರ್ಬಲ್ಯಂ ಧಾತುದಾಹೋ ಬಲಕ್ಷಯಃ ॥

ಇನ್ನೂ ಸ್ಪಷ್ಟ ಹೇಳಬೇಕೆಂದರೆ–

ಆಹಾರಂ ಪಚತಿ ಶಿಖೀ ದೋಷಾನಾಹಾರವರ್ಜಿತಃ ।
ಪಚತಿ ದೋಷಕ್ಷಯೇ ಧಾತೂನ್ ಪ್ರಾಣಾನ್ ಧಾತುಕ್ಷಯೇಽಪಿ ಚ ॥

'ಜಾಠರಾಗ್ನಿ, ಆಹಾರ ಸಿಕ್ಕರೆ ಅದನ್ನು ಸುಡುತ್ತದೆ, ಸಿಗದಿದ್ದರೆ ಶರೀರದ ವಾತಾದಿ ದೋಷಗಳನ್ನು ಸುಡುತ್ತದೆ. ದೋಷವನ್ನು ಸುಟ್ಟುಹಾಕಿದ ಮೇಲೆ ಧಾತುಗಳನ್ನೇ ಸುಡುತ್ತದೆ, ಎಂದೂ ಆದೇ ಆಯುರ್ವೇದ ಗ್ರಂಥ ಹೇಳುತ್ತದೆ. ದೇವತೆಗಳು ತಮ್ಮ ಹುಟ್ಟಿನಿಂದಲೇ ಒಂದಿರುವ ಅಷ್ಟೈಶ್ವರ್ಯ ರೂಪವಾದ ಯೋಗಸಿದ್ಧಿಯ ಬಲದಿಂದ ಈ ಜಾಠರಾಗ್ನಿಯ ಪ್ರಕೋಪವನ್ನು ತಡೆದುಕೊಳ್ಳಬಲ್ಲರು. ದೊರೆತರೆ ಎಷ್ಟು ಹೆಚ್ಚು ಅನ್ನವನ್ನಾದರೂ ಉಂಡು ಸುಖಪಡಬಲ್ಲರು ಐತರೇಯ ಭಾಷ್ಯದಲ್ಲಿ ಹೀಗೆ ಹೇಳಿದೆ–

ಕ್ಷುತ್ಪಿಪಾಸಾದಯಶ್ಚೈವ ದೇವಾನಾಂ ಭೋಗಸಾಧಕಾಃ ।
ನ ತು ಪೀಡಾಕರಾಸ್ತೇಷಾಂ ಐಶ್ವರ್ಯಾದಿ ಗುಣೋನ್ನತೇಃ ॥

ಹೀಗೆ ದೇವತೆಗಳಿಗೆ ಯಾರಿಗೂ ಇಲ್ಲದ ಹಸಿವಿನ ಪೀಡೆ ದೇವದೇವನಾದ ನಾರಾಯಣನಿಗೆ ಉಂಟೆನ್ನಬಹುದೆ ? ಆತನ ಯೋಗಸಿದ್ಧಿ ಇತರ ದೇವತೆಗಳಂತಲ್ಲ ಎಲ್ಲಕ್ಕಿಂತ ಮಿಗಿಲಾದುದು, ಅಸದೃಶವಾದುದು, ಅಚಿಂತ್ಯವಾದುದು, ಮಹಾಯೋಗಿ ದೂರ್ವಾಸರೆ ಎರಡು ಬಾರಿ ಇದನ್ನು ಪರೀಕ್ಷಿಸಿ ನೋಡಿ ತೃಪ್ತಿಪಟ್ಟಿದ್ದಾರೆ. ಒಮ್ಮೆ ರಾಮಾವತಾರ ಸಮಾಪ್ತಿಯ ಕಾಲ. ಸಾವಿರ ವರ್ಷಗಳ ಕಾಲ ಅನ್ನ ನೀರು ತೊರೆದು ತಪಸ್ಸುಮಾಡಿ ಬಳಲಿ ಹಸಿದು ಬಂದಿದ್ದರು. "ರಾಮಚಂದ್ರ, ನನಗೆ ಈಗಲೇ ಅನ್ನಭಿಕ್ಷೆ ನೀಡು. ಮೊದಲೆ ಪಾಕಮಾಡಿ ಇಟ್ಟಿರುವ ಅನ್ನ ನನಗೆ ಸೇರದು. ಮುಂದೆ ಪಾಕಮಾಡುವ ವಿಲಂಬವನ್ನೂ ಸಹಿಸಲಾರೆ ಈಕ್ಷಣವೆ ನನ್ನ ಈ ಬೊಗಸೆಯಲ್ಲಿ ಯಥೇಚ್ಛ ಷಡ್ರಸಾನ್ನವಿತ್ತು ಉಣಿಸಿ ನನ್ನನ್ನು ತೃಪ್ತಿಪಡಿಸಬೇಕು. ಲೋಕದಲ್ಲಿ ಇದಕ್ಕೆ ಸಮರ್ಥರಾದವರು ಇಂದಿನವರೆಗೂ ಯಾರೂ ಸಿಕ್ಕಿಲ್ಲ" ಎಂದರು. ಶ್ರೀರಾಮ ನಕ್ಕು ಕಾಮಧೇನುವಿನ ಸ್ತನಗಳಂತಿರುವ ತನ್ನ ಕೈಯ ನಾಲ್ಕು ಬೆರಳುಗಳ ತುದಿಯಿಂದ ಮುನಿಯ ಬೊಗಸೆಯಲ್ಲಿ ರುಚಿರುಚಿಯಾದ ಭಕ್ಷ್ಯ ಭೋಜ್ಯ ಲೇಹ್ಯ ಪೇಯವೆಂಬ ನಾಲ್ಕು ವಿಧದ ದಿವ್ಯಾನ್ನವನ್ನು ಯಥೇಚ್ಛವಾಗಿ, ಮುನಿಯು ಬಯಸಿದುದಕ್ಕಿಂತ ಹೆಚ್ಚಾಗಿಯೆ ಸುರಿದು ಉಣಿಸಿ 'ಇನ್ನು ಸಾಕು' ಎಂದು ಹೇಳಿಸಿ ಕಳುಹಿಸಿದ. ಇನ್ನೊಮ್ಮೆ ಕೃಷ್ಣಾವತಾರ ಕಾಲ. 'ನನಗೆ ಹೊಟ್ಟೆತುಂಬುವಷ್ಟು ಉಣಬಡಿಸಿ, ತೃಪ್ತಿಪಡಿಸಲು ಸಮರ್ಥರು ಪ್ರಪಂಚದಲ್ಲಿಯೆ ಯಾರೂ ಇಲ್ಲ' ಎಂದು ಹೇಳಿಕೊಳ್ಳುತ್ತ ಎಲ್ಲೆಡೆ

ಸಂಚರಿಸುತ್ತಿದ್ದರು. ಪ್ರಪಂಚಲಯ ಗೈಯುವ ಆ ಲಯಮೂರ್ತಿ ಮಹಾರುದ್ರದೇವರ ಅವತಾರರಾದ, ಮಹಾಯೋಗಿಗಳೂ ಆದ ದೂರ್ವಾಸರ ಭೋಜನಶಕ್ತಿಯನ್ನು ಪರೀಕ್ಷಿಸುವ ಶಕ್ತಿ ಯಾರಿಗಿದೆ? ಕೊನೆಗೆ ಅವರು ವೃಂದಾವನದಲ್ಲಿ ಗೋವಳರೊಂದಿಗೆ ಆಟವಾಡುತ್ತಿದ್ದ ಬಾಲಕೃಷ್ಣನ ಬಳಿಬಂದು ಅವನ ಕೈತುತ್ತನ್ನವನ್ನುಂಡು ತೇಗಿ 'ಸಾಕು, ಸಾಕು, ಇನ್ನೊಂದಿಷ್ಟೂ ಹೆಚ್ಚು ಉಣಲಾರೆ' ಎನ್ನುತ್ತ ತೃಪ್ತಿಯಿಂದ ಹೊರಟು ಹೊದರು ಈ ಎರಡು ಪ್ರಸಂಗಗಳನ್ನೂ ಲಕ್ಷ್ಮೀಶೋಭನದ ಈ ನುಡಿಯೇ ಸೂಚಿಸುವಂತಿದೆ–

"ಆಗ ಅಂದರೆ ಆಗಲೆ ('ಆಗಲೆ' ಎಂಬ ಒಂದು ಪಾಠಾಂತರವೂ ಉಂಟು) ಭಕ್ಷ್ಯಭೋಜ್ಯಾದಿ ಚತುರ್ವಿಧ ಅನ್ನವನ್ನಿತ್ತು ದೂರ್ವಾಸರಂಥ ಯೋಗಿಗಳನ್ನು ಪೂಜಿಸುವ ಯೋಗಿಗಳು, ಶ್ರೀ ಹರಿಯನ್ನು ಹೊರತು, ಇನ್ನು ಯಾರಾದರೂ ಉಂಟೆ? ಒಂದು ಕ್ಷಣವೂ ವಿಲಂಬವಿಲ್ಲದಂತೆ ಅನ್ನ ನೀಡಬೇಕಾದರೆ ಯೋಗಸಿದ್ಧಿ ಇಲ್ಲದವನಿಗೆ ಧನಧಾನ್ಯ ಆಗಲೆ ದೊರಕುವುದೆ? ಅಷ್ಟು ಶೀಘ್ರವಾಗಿ ಪಾಕಮಾಡಬಲ್ಲ ವಹ್ನಿಯಾದರೂ ಎಲ್ಲಿದೆ? ವಿಚಾರಿಸಿರಿ". ಇದು ಕೇವಲ ಶ್ರೀಹರಿಯ ಅಚಿಂತ್ಯ ಅಷ್ಟೈಶ್ವರ್ಯದ ಪ್ರಭಾವ ಕಲ್ಕಿಸುಳಾದಿಯಲ್ಲಿ ವಾದಿರಾಜರು ಶ್ರೀಹರಿಯ ಬೆರಳುಗಳನ್ನು ಹೀಗೆ ಕೊಂಡಾಡಿದ್ದಾರೆ–

'ಅವನ್ನ ಬೆರಳ್ಗಳು ಮುನಿಗಿಷ್ಟಾನ್ನವ ಕೊಟ್ಟವು'

ದೂರ್ವಾಸರು ಕಂಡಂತೆ ಪ್ರಪಂಚದಲ್ಲಿ ಇನ್ನಾರಿಗೂ ಇರದ ಇಂಥ ಯೋಗಸಿದ್ಧಿಯಿಂದ ಶ್ರೀಹರಿ ಪ್ರಳಯಕಾಲದಲ್ಲಿ ಬ್ರಹ್ಮಾಂಡವನ್ನೆ ಲೀಲಾಜಾಲವಾಗಿ ಕಬಳಿಸುವಂಥ ಭಯಂಕರವಾದ ತನ್ನ ಹಸಿವನ್ನು ತನಗೆ ಭೋಗ ಮಾತ್ರ ಸಾಧನವಾಗುವಂತೆ ಒಂದಿಷ್ಟೂ ಪೀಡೆ ಉಂಟುಮಾಡದಂತೆ ನಿಯಂತ್ರಿಸಿಕೊಂಡಿದ್ದರೆ ಇದರಲ್ಲಿ ಆಶ್ಚರ್ಯವೇನಿಲ್ಲ. ಆದ್ದರಿಂದ ಹುಲು ಮಾನವರಂತೆ ದೇವ ದೇವೊತ್ತಮನಾದ ನಾರಾಯಣನಿಗೆ ಹಸಿವುತೃಷೆಗಳ ಬಾಧೆ ಉಂಟೆನ್ನಬಹುದೆ?

'ಆಗಲೆ ಭಕ್ಷ್ಯಭೋಜ್ಯವಿತ್ತು ಪೂಜಿಸುವ
ಯೋಗಿಗೆ ಉಂಟೆ ಧನಧಾನ್ಯ'

ಎಂದು ಒಂದು ಪಾಠವಿದೆ. ಈ ಪಾಠದಲ್ಲಿ ಯೋಗಸಿದ್ಧಿಯ ಬಲದಿಂದ ತಕ್ಷಣವೆ ಭಕ್ಷ್ಯಭೋಜ್ಯಗಳನ್ನಿತ್ತು ಪೂಜಿಸಬಲ್ಲ ಯೋಗಿಗೆ ಧನಧಾನ್ಯ ಉಂಟೆ ಎಂಬ ಪ್ರಶ್ನೆಗೆ, 'ಬೇಕೆ?' ಎಂದು ಪ್ರತಿಯಾಗಿ ಕೇಳಬಹುದು ಮುಂದೆ, 'ಆಗ ದೊರಕೊಂಬುದೆ ಪಾಕಮಾಡುವ ವಹ್ನಿ?' ಎಂದು ಎರಡನೆ ಪ್ರಶ್ನೆ ಇಟ್ಟುಕೊಂಡರೆ 'ಆಗಲೆಲಿಹುದು?' ಎಂಬ ಮೂರನೆ ಪ್ರಶ್ನೆ ಅಪೂರ್ಣವಾಗುವುದು. ಆದ್ದರಿಂದ

'ಯೋಗಿಗಳುಂಟೆ ?' ಎಂಬ ಪಾಠವೆ ಉತ್ತಮ. ಅಥವಾ 'ಆಗಲೆ ಇತ್ತು ಪೂಜಿಸುವ ಯೋಗಿಗೆ ಅಂದರೆ ಕರ್ಮಯೋಗಿಗೆ ಭಕ್ಷ್ಯಭೋಜ್ಯ ಉಂಟೆ ? ಯೋಗಸಿದ್ಧಿ ಇಲ್ಲದ ಕರ್ಮಯೋಗಿ ಒಬ್ಬ ತಕ್ಷಣವೆ ದೂರ್ವಾಸರಂಥವರಿಗೆ ಏನನ್ನಾದರೂ ಕೊಟ್ಟು ತೃಪ್ತಿಪಡಿಸಬೇಕೆಂದರೆ ಹಿಂದೆ ಪಾಕವಾಗಿರದ ಮುಂದೆ ಪಾಕಮಾಡದಿರುವ ಭಕ್ಷ್ಯಭೋಜ್ಯ ಆತನಿಗೆ ಉಂಟೆ ?' ಎಂದು ಮುಂತಾಗಿ ಅನ್ವಯಿಸಿಕೊಳ್ಳಬಹುದು. ಆಗ ಮೂರು ಪ್ರಶ್ನೆಗಳು ಪೂರ್ಣವಾಗಿ ಸಿಗುತ್ತವೆ.

– ೩೫ –

**ರೋಗವನೀವ ವಾತಪಿತ್ತಶ್ಲೇಷ್ಮ**
**ಆಗ ಕೂಡುವುದೆ ರಮೆಯೊಡನೆ ।**
**ಭೋಗಿಸುವವಗೆ ದುರಿತವ ನೆನೆವರೆ**
**ಈ ಗುಣನಿಧಿಗೆ ಎಣೆಯುಂಟೆ ॥**

ರೋಗವನ್ನುಂಟುಮಾಡುವ ವಾತ, ಪಿತ್ತ, ಶ್ಲೇಷ್ಮ ಎಂಬ ಶಾರೀರ ದೋಷಗಳು ಪ್ರಳಯಕಾಲದಲ್ಲಿ ಕೂಡುವುವೇ ? ಶ್ರೀರಮಾದೇವಿಯೊಡನೆ ಭೋಗಿಸುವ ಶ್ರೀಹರಿಗೆ ದುರಿತ ಉಂಟೆಂದು ನೆನೆಯುವುದೂ ಶಕ್ಯವೆ ? ಇಂಥ ಗುಣನಿಧಿಯಾದ ಶ್ರೀಹರಿಗೆ ಎಣೆಯಾದವರು ಯಾರಾದರೂ ಇರುವರೆ ?

ಶ್ರೀಕೃಷ್ಣ ತಾಯಿಯು ಎದೆಹಾಲಿಗಾಗಿ ಅತ್ತ, ಬೆಣ್ಣೆ ಮುದ್ದೆ ಬೇಡಿ ಮೆದ್ದ, ಗೋಪಿಯರ ಮನವನ್ನೇ ಕದ್ದ ಎಂದೆಲ್ಲ ಕತೆ ಇದ್ದರೂ ಅವೆಲ್ಲವನ್ನೂ ಹೇಳಿ ಕೊನೆಗೆ ಇದೆಲ್ಲ ನಟನೆ ಎಂದು ಬಿಡುವುದು ಯಾರೊ ಒಬ್ಬಳು ತನ್ನ ಸಖಿಯು ಮುಂದೆ ತನ್ನ ಅನೈತಿಕ ವ್ಯವಹಾರವನ್ನು ವರ್ಣಿಸುತ್ತ ಪತಿಯು ಬಂದಾಗ 'ತತಃ ಪ್ರಬುದ್ಧಾಸ್ಮಿ' 'ಆಗ ಕನಸಿನಿಂದ ಎಚ್ಚತ್ತೆನೆಂ'ದು ಸಮಾಪ್ತಿ ಮಾಡಿದಂತೆ ಆಗುತ್ತದೆ ಕೃಷ್ಣನೂ ಗೋಪಿಯರ ಸಂಗಮಾಡಿ ಬಂದು, ತಾಯಿ ಯಶೋದೆ,

'ಎನ್ನಯ್ಯ ನೋಡೊ ಈ ಹೆಣ್ಣುಗಳೆಲ್ಲರು
ನಿನ್ನ ದೂರುತಲೈದಾರೊ ಗೋವಿಂದ'

ಎಂದಾಗ ಅದಕ್ಕೆ ಉತ್ತರವಾಗಿ ಹೀಗೆ ಹೇಳಿದನಂತೆ, ಶ್ರೀವಾದಿರಾಜರ ಒಂದು ಕೀರ್ತನೆಯಲ್ಲಿ–

'ಕನ್ನೇರು ಕೊಬ್ಬಿಂದಲನ್ಯಾಯ ನುಡಿವೋರು !
ಇನ್ನೇನು ಮಾಡಲಮ್ಮ ಗೋಪೆಮ್ಮ ?'

ಈ ಆಕ್ಷೇಪದ ಅಭಿಪ್ರಾಯವನ್ನು ಇನ್ನೂ ಸ್ಪಷ್ಟಗೊಳಿಸಬೇಕೆಂದರೆ, ಅದು ಹೀಗೆ– "ಕೃಷ್ಣನಿಗೂ ಹಸಿವು ನೀರಡಿಕೆಗಳಿವೆ ಕಾಮಾದಿ ಉಪದ್ರವಗಳು ಇವೆ. ಅವನೂ ನಮ್ಮಂತೆ ಪ್ರಾಕೃತಿಕ ಶರೀರದವನು. ಪ್ರಾಕೃತ ಶರೀರವೆಂದರೆ ರೋಗಬರುವುದು ಸ್ವಾಭಾವಿಕ. ಅದರಲ್ಲಿಯೂ ಸ್ವಾಭಾವಿಕ ರೋಗಗಳಾದ ಹಸಿವು, ನೀರಡಿಕೆ, ನಿದ್ರೆ, ಜರೆ, ಮರಣ ಮುಂತಾದವು ಅನಿವಾರ್ಯ. ಜ್ವರ ಮುಂತಾದ ಆಗಂತುಕ ರೋಗಗನ್ನು ಮಾತ್ರ ಬಾರದಂತೆ ತಡೆಗಟ್ಟಬಹುದು. ಇದು ಶಾರೀರ ರೋಗಗಳ ಮಾತಾಯಿತು. ಮಾನಸಿಕ ರೋಗಗಳಲ್ಲಿ ಸ್ವಾಭಾವಿಕವಾದ ಕಾಮ ಕ್ರೋಧಾದಿಗಳನ್ನು ನಿಗ್ರಹಿಸಿಕೊಳ್ಳಬೇಕೇ ಹೊರತು ಬಾರದಂತೆ ತಡೆಗಟ್ಟುವುದಾಗದು. ಉನ್ಮಾದಾದಿ ಆಗಂತುಕ ರೋಗಗಳನ್ನು ಬರದಂತೆ ಮಾಡಬಹುದು ಆದ್ದರಿಂದ ಕೃಷ್ಣನಿಗೆ ಸ್ವಾಭಾವಿಕವಾದ ಹಸಿವು ಮುಂತಾದ ಶಾರೀರರೋಗಗಳೂ ಕಾಮಾದಿ ಮಾನಸ ರೋಗಗಳೂ ಇರುವುದು ಅಸಂಭಾವಿತವೇನಲ್ಲ

ಶಾರೀರವೇ ಇರಲಿ, ಮಾನಸಿಕವೇ ಇರಲಿ, ಎಲ್ಲ ರೋಗಗಳಿಗೂ ಪೂರ್ವಜನ್ಮದ ಪಾಪ ಕಾರಣವಾಗಿರುತ್ತದೆ ಪ್ರತ್ಯಕ್ಷವಾಗಿ ಕಂಡುಬರುವ ವಾತ ಪಿತ್ತ ಕಫಗಳೆಂಬ ಮೂರು ದೋಷಗಳೂ ಎಲ್ಲ ರೋಗಗಳಿಗೆ ಕಾರಣ. 'ನಾಸ್ತಿ ರೋಗೋ ವಿನಾ ದೋಷೈಃ' ಕರ್ಮಜ, ದೋಷಜ, ಉಭಯಜಗಳೆಂದು ರೋಗಗಳನ್ನು ಮೂರುವಿಧವಾಗಿ ಶಾಸ್ತ್ರದಲ್ಲಿ ವಿಂಗಡಿಸಿದ್ದರೂ 'ದೋಷಜ'ವೆನಿಸಿರುವ ರೋಗಗಳಿಗೂ ಪೂರ್ವಜನ್ಮದ ಪಾಪ ಕಾರಣವೆನ್ನಲೇಬೇಕು. ಏಕೆಂದರೆ ಅಹಿತಕರವಾದ ರೀತಿಯಲ್ಲಿ ಆಹಾರ ವಿಹಾರ ಸೇವನೆ ಮಾಡಿದರೂ ದೋಷಜ ರೋಗಗಳು ಪೂರ್ವಜನ್ಮದ ಪುಣ್ಯವಿರುವವರಿಗೆ ಬರಲಾರವು. ಚಿಕಿತ್ಸೆಯನ್ನು ದೋಷಕ್ಕೆ ಮಾತ್ರವೆ ಮಾಡುತ್ತಿದ್ದರೂ ಔಷಧಿ ಸೇವನೆಯಲ್ಲಿ ಕಂಡುಬರುವ ದುಃಖ, ಶ್ರಮ, ಧನವ್ಯಯ ಮುಂತಾದುದರಿಂದಲೂ, ರೋಗದ ಸಂತಾಪವನ್ನು ಅನುಭವಿಸುವುದರಿಂದಲೂ ಪೂರ್ವಜನ್ಮದ ಪಾಪ ಕಳೆದುಹೋಗುತ್ತದೆ ಪಾಪ ಪ್ರಬಲವಾಗಿದ್ದರೆ ರೋಗ ಕರ್ಮಜವಾಗಿದ್ದು ಪ್ರಾಯಶ್ಚಿತ್ತವೆ ಬೇಕಾಗುತ್ತದೆ. ಚಿಕಿತ್ಸೆಯಿಂದ ಏನೂ ಪರಿಣಾಮವಾಗಲಾರದು ಉಭಯಜ ರೋಗಗಳಿಗೆ ಚಿಕಿತ್ಸೆಯಿಂದ ಬಹುಮಟ್ಟಿಗೆ ಗುಣ ಕಂಡುಬರುತ್ತದೆ. ಪ್ರಾಯಶ್ಚಿತ್ತವೂ ಬೇಕಾಗುತ್ತದೆ. ಅಂತೂ ಎಲ್ಲ ಮೂರು ವಿಧಧ ರೋಗಗಳಿಗೂ ಪೂರ್ವಜನ್ಮದ ಪಾಪ ಕಾರಣ. ಸ್ವಾಭಾವಿಕ ರೋಗಗಳಾದ ಹಸಿವು ನೀರಡಿಕೆಗಳೂ ಇದಕ್ಕೆ ಹೊರತಲ್ಲ.

ದೇವತೆಗಳ ಶರೀರವೂ ಪ್ರಾಕೃತವೆ, ಅವರೂ ಪಾಪಕಾರ್ಯ ಮಾಡುತ್ತಾರೆ. ಕೃಷ್ಣನೂ ಪರನಾರಿಯರನ್ನು ಕೂಡಿದ್ದಾನೆ. ರುಕ್ಮಿಣೀಶ ವಿಜಯದ ಪ್ರಕಾರ 'ಮಾನ್ಯಂ

ಭಜಧ್ವಂ ರಮಣಂ ವಿಹಾಯ', 'ಪತಿಯನ್ನು ಬಿಟ್ಟು ಅನ್ಯರನ್ನು ಕೂಡುವುದು ಸರಿಯಲ್ಲ' ಎಂದು ತಾನೆ ಅವರಿಗೆ ಹೇಳಿ, 'ಮಾನ್ಯಂ ಭಜಾಮೋ ರಮಣಂ ವಿಹಾಯ' ಪತಿಯನ್ನು ಬಿಟ್ಟು ಮಾನ್ಯನಾದ ನಿನ್ನನ್ನೇ ಕೂಡುತ್ತೇವೆ ಎಂದು ಅವರಿಂದ ಹೇಳಿಸಿಕೊಂಡು ಪರಸ್ತ್ರೀಸಂಗ ಮಾಡಿದ ಕೃಷ್ಣ ಪೂರ್ವಜನ್ಮದಲ್ಲಿಯೂ ಅಂಥ ಪಾಪಗಳನ್ನು ಮಾಡಿರಬಹುದು."

'ಮೇಲಿನ ಆಕ್ಷೇಪಕ್ಕೆ ಉತ್ತರ– ಪ್ರಲಯಕಾಲದಲ್ಲಿಯೂ ಶ್ರೀಕೃಷ್ಣನಿದ್ದ. ಆದರೆ ರೋಗವನ್ನುಂಟುಮಾಡುವ ವಾತ ಪಿತ್ತ ಶ್ಲೇಷ್ಮಗಳು ಆ ಪ್ರಲಯಕಾಲದಲ್ಲಿ ಇರಬಲ್ಲವೇ ? ಅವು ಆಹಾರದಿಂದ ಉದ್ಭವಿಸುವವುಗಳು. ಆಹಾರದಿಂದ ವೈಷಮ್ಯ ಹೊಂದಿ ರೋಗಕ್ಕೆ ಕಾರಣವಾಗುವವುಗಳು. ಅವು ಮೂರು ಸಮಪ್ರಮಾಣದಲ್ಲಿದ್ದರೆ ಆರೋಗ್ಯ ವಿಷಮ ಪ್ರಮಾಣದಲ್ಲಿ, ಅಂದರೆ ಮೂರರಲ್ಲಿ ಒಂದೋ ಎರಡೋ ಅಧಿಕ ಪ್ರಮಾಣದಲ್ಲಿ ವೃದ್ಧಿ ಹೊಂದಿದರೆ ರೋಗ ಉಂಟಾಗುವುದು.

'ರೋಗಸ್ತು ದೋಷವೈಷಮ್ಯಂ ದೋಷಸಾಮ್ಯಮರೋಗತಾ'

ಎನ್ನುತ್ತಾನೆ ವಾಗ್ಭಟ ಪ್ರಲಯ ಕಾಲದಲ್ಲಿ ಈ ವಾತಾದಿಗಳೆ ಇಲ್ಲ. ಅವು ವಿಷಮಾವಸ್ಥೆಗೆ ಬಂದು ರೋಗವನ್ನುಂಟುಮಾಡುವ ಸಂಭವವೂ ಇಲ್ಲ ಆದ್ದರಿಂದ ಆಗ ನಾರಾಯಣನಿಗೆ ಹಸಿವು ಮುಂತಾದ ಯಾವ ರೋಗವೂ ಇಲ್ಲವೆಂದ ಮೇಲೆ ಸೃಷ್ಟಿಕಾಲದಲ್ಲಿ ಇದೆ ಎನ್ನುವುದು ಸರಿಯಲ್ಲ. ಪ್ರಲಯಕಾಲದಲ್ಲಿ ರೋಗಮುಕ್ತನಾಗಿ ರಮೆಯೊಡನೆ ಭೋಗಿಸುತ್ತ ನಲಿಯುವವನು ಸೃಷ್ಟಿಕಾಲದಲ್ಲಿ ರೋಗಗಳನ್ನು ಏಕೆ ತಂದುಕೊಳ್ಳುತ್ತಾನೆ ? ಪಾಪದಿಂದಲೇ ? ಪರನಾರಿಯರ ಸಂಗ ಮಾಡಿದನೆಂದೆ ? ರಮೆಯೊಡನೆ ಭೋಗಿಸುವವನು ಪರನಾರಿಯರನ್ನು ಬಯಸಿಯಾನೆ ? ಉತ್ತಮವಾದ ರತಿಯನ್ನು ಕೊಡುವುದರಿಂದಲೇ ರಮೆ ಎನಿಸಿದವಳು ಮಹಾಲಕ್ಷ್ಮಿ ಈ ರೀತಿಯಿಂದ ರಮೆ ಎನಿಸದ ಪರನಾರಿಯಲ್ಲಿ ರತಿಯನ್ನರಸುವನೆ ನಾರಾಯಣ ?

ಹಾಗಾದರೆ ತಮ್ಮ ಪತಿಗನ್ನು ಬಿಟ್ಟು ಓಡಿಬಂದ ಗೋಪಿಯರೊಡನೆ ಕೃಷ್ಣ ರಮಿಸಲಿಲ್ಲವೇ ? ಇಲ್ಲ

ನೈವಾನ್ಯಾಂ ರಮಯೇತ್ ಕನ್ಯಾಂ ಪೂರ್ಣೋಽಯಂ ಪುರುಷಾಗ್ರಣೀಃ ।
ಋತೋಽಪ್ಯನ್ಯಾಂಗನಾದೇಹೇ ರಮಯೇತ್ ಪ್ರೇಯಸೀಮಿಮಾಂ ॥

– ರುಕ್ಮಿಣೀಶವಿಜಯ

ನಾರಾಯಣನು ರಮೆಯೊಡನೆ ಹೊರತು ಅನ್ಯರೊಡನೆ ರಮಿಸುವುದಿಲ್ಲ. ಅನ್ಯರಲ್ಲಿ ರಮೆಯ ಸಾನ್ನಿಧ್ಯವಿದ್ದಲ್ಲಿ ಮಾತ್ರ ಅವರಲ್ಲಿರುವ ರಮೆಯೊಡನೆ

ರಮಿಸುವನೆ ಹೊರತು ಅವರೊಡನೆ ಅಲ್ಲ. ಆದರೂ ಅವರಿಗೆ ಅನಿರ್ವಚನೀಯ ಆನಂದ.

ವಸ್ತುತಃ ರಮೆಯೊಡನೆ ರಮಿಸುವಾಗಲೂ ರಮೆಯಲ್ಲಿರುವ ತನ್ನ ಸ್ತ್ರೀರೂಪದಿಂದಲೇ ರಮಿಸುತ್ತಾನೆ. ಸ್ವ ರಮಣನಾತ.

ರಮಯಾ ರಮಣಂ ತಸ್ಮಾದ್ರಮಾಯಾ ರತಿಪಾತ್ರತಾ ।

– ಐತರೇಯಭಾಷ್ಯ

ಸ್ವರಮಣನಾದರೂ ರಮೆಯನ್ನೇಕೆ ಹರಿ ವರಿಸಿದ ?

'ಕೃಪೋದಧಿಯು ಸ್ವೀಕರಿಸಿದನು ಲೋ–
ಕಾಧಿಪನು ಭಿಕ್ಷುಕನ ಮನೆಯೌತಣವ ಕೊಂಬಂತೆ' ॥

–ಹರಿಕಥಾಮೃತಸಾರ.

ತನ್ನ ಸುಖಕ್ಕಾಗಿ ಆತ ಹೆಣ್ಣನ್ನು ಬಯಸಿದ್ದರೆ, 'ವೇದತತಿಗಳಭಿಮಾನಿ ಲಕ್ಷ್ಮಿ ಧರಾಧರನ ಗುಣರೂಪಕ್ರಿಯೆಗಳಾದಿ ಮಧ್ಯಾಂತವನು ಕಾಣಳೆಂದಿರುವಾಗ ಇಂಥ ಗುಣನಿಧಿಗೆ ಎಣೆಯುಂಟೆ ? ಅಂದರೆ ಎಣೆಯಾಗಬಲ್ಲ ಹೆಣ್ಣು ಉಂಟೆ ? ಆದರೂ ಕೃಪೋದಧಿಯಾದ್ದರಿಂದ ರಮೆಯನ್ನು ಸ್ವೀಕರಿಸಿದ ಇಂಥ ಕರುಣಾಸಾಗರನಾದ ಗುಣನಿಧಿಗೆ ಎಣೆಯುಂಟೇ ? ಎನ್ನುತ್ತಿದ್ದಾಳೆ ಮಹಾಲಕ್ಷ್ಮಿ.

ಶ್ವೇತಕೇತು ಎಂಬ ರಾಜನು ಹನ್ನೆರಡು ವರ್ಷಗಳ ಕಾಲ ಯಜ್ಞಮಾಡಿ ಸತತವಾಗಿ ಅಗ್ನಿಯಲ್ಲಿ ತುಪ್ಪದ ಧಾರೆಯನ್ನು ಹೋಮಿಸಿದಾಗ ಅಗ್ನಿಗೆ ಅಜೀರ್ಣರೋಗ ಉಂಟಾಯಿತಂತೆ. ಅದರ ಪರಿಹಾರಕ್ಕಾಗಿ ಖಾಂಡವದಹನ ನಡೆಯಿತು ಅಗ್ನಿಯ ಅಜೀರ್ಣ ರೋಗಕ್ಕೆ ಅವನ ಒಂದು ಪಾಪವೂ ಕಾರಣವಾಗಿತ್ತು. ಎಲ್ಲ ದೇವತೆಗಳಿಗೂ ಅವರವರ ಆಹುತಿಯನ್ನು ಒಯ್ದುಕೊಡುವ ತನ್ನ ಕೆಲಸಕ್ಕೆ ಪ್ರತಿಫಲವಾಗಿ ಪ್ರತಿಯಾಗದಲ್ಲಿಯೂ ಪ್ರಯಾಜ ಅನುಯಾಜಗಳನ್ನು ತನಗೆ ಕೊಡಬೇಕೆಂದು ಅಗ್ನಿ ದೇವತೆಗಳನ್ನು ನಿರ್ಬಂಧಿಸಿದ. ಅವರು ಒಪ್ಪಿದರು ಆದರೆ ಕೋಪದಿಂದ ನೀನು ಬಲಗುಂದು ಎಂದು ಶಾಪವನ್ನೂ ಕೊಟ್ಟರು. ಹೀಗೆ ದೇವತೆಗಳಲ್ಲಿ ಅಪರಾಧ ಮಾಡಿ ಅಗ್ನಿದೇವ ಪಾಪ ಕಟ್ಟಿಕೊಂಡಿದ್ದ. ಆದ್ದರಿಂದ ತುಪ್ಪದಾಹುತಿಯನ್ನು ಉಂಡಾಗ ಆತ ಅಜೀರ್ಣ ರೋಗಕ್ಕೆ ವಶನಾಗಿ ಬಲಗುಂದಿದ. ನಾರಾಯಣನಿಗೂ ಬ್ರಹ್ಮಾಂಡ ಲಯಮಾಡಿ ದೇವರ್ಷಿ ವಿಪ್ರರ ಕೊಂದ ಪಾಪ, ಇಡೀ ಬ್ರಹ್ಮಾಂಡವನ್ನೇ 'ಭುವನ ವ್ಯಾಪ್ತವಾದ ಸ್ಥೂಲದೇಹದ ಬಾಯ ವಿವರವ ತೆರೆದು ಭುಂಜಿಸು'ವ ಮಿತಿಮೀರಿದ ಭೋಜನ ಈ ಎರಡು ಕಾರಣಗಳಿಂದ

ಅಜೀರ್ಣ ರೋಗ ಬಂದಿರಬಹುದು. ಆದ್ದರಿಂದ ಲಯಕಾಲದಲ್ಲಿ ಆತ ಹಸಿವಿಲ್ಲದೆ, ಏನೂ ತಿನ್ನದೆ ಇದ್ದನೆನ್ನೋಣ ಎಂಬ ಕುಚೋದ್ಯಕ್ಕೂ ಉತ್ತರ ಇಲ್ಲಿದೆ–

ಅಧಿಕ ಆಹಾರ ಸೇವನೆಯಿಂದ ಶ್ಲೇಷ್ಮವೃದ್ಧಿಯಾಗಿ ಅಗ್ನಿಮಾಂದ್ಯ, ಅದರಿಂದ ಅಜೀರ್ಣರೋಗ ಉಂಟಾಗುತ್ತದೆ. ಅಗ್ನಿ ಎಂದರೆ ಜಠರದಲ್ಲಿರುವ ಪಾಚಕಾಗ್ನಿ ದ್ರವ, ತೇಜೋಭಾಗಗಳಿಂದ ಕೂಡಿದ ಪಿತ್ತರಸದಲ್ಲಿ ತೇಜೋಭಾಗವೇ ಅಗ್ನಿ. ಅದು ಪಾಚಕ, ರಂಜಕ, ಭ್ರಾಜಕ ಎಂದು ಮುಂತಾಗಿ ಐದು ವಿಧ. ಪಾಚಕಾಗ್ನಿಯಿಂದಲೇ ಆಹಾರ ಪಚನ. ಈ ಅಗ್ನಿ ಮಂದವಾದರೆ ಅಜೀರ್ಣರೋಗ ಹೀಗೆ ಅಜೀರ್ಣ ರೋಗವನ್ನು ತಂದುಕೊಡುವ ವಾತ ಪಿತ್ತ ಕಫಗಳೆಂಬ ಮೂರು ದೋಷಗಳು ಪ್ರಳಯ ಕಾಲದಲ್ಲಿ ಇಲ್ಲದಿರುವುದರಿಂದ ನಾರಾಯಣನಿಗೆ ಅಜೀರ್ಣರೋಗ ಉಂಟಾಗಲು ಶಕ್ಯವಿಲ್ಲ.

ಅಗ್ನಿದೇವನಂತೆ ಅಜೀರ್ಣ ರೋಗದಿಂದ ನಾರಾಯಣನು ಬಲಗುಂದಲೂ ಇಲ್ಲ. ರಮೆಯೊಡನೆ ಭೋಗಿಸಿದ. ಅಜೀರ್ಣ ರೋಗಕ್ಕೆ ಕಾರಣವಾದ ಪಾಪವನ್ನೂ ನಾರಾಯಣನಲ್ಲಿ ಹೇಳುವಂತಿಲ್ಲ. ಕಾರ್ಯದಿಂದ ತಾನೇ ಕಾರಣವನ್ನು ಊಹಿಸುವುದು ಶಕ್ಯ ? ರಮೆಯೊಡನೆ ಭೋಗಿಸುವುದರಿಂದ ಬಳಲುತ್ತಿದ್ದಿಲ್ಲವೆಂದ ಮೇಲೆ ರೋಗಕಾರಣವಾದ ಪಾಪವೂ ಇರಲಿಲ್ಲವೆಂದಾಯಿತು ಇದ್ದರೂ ಅದು ಸ್ವತಃ ರೋಗಕಾರಣವಲ್ಲ ವಾತ ಪಿತ್ತ ಕಫಗಳಲ್ಲಿ ವೈಷಮ್ಯ ಉಂಟುಮಾಡಿ ಆ ಮೂಲಕ ರೋಗಕಾರಣವಾಗುತ್ತದೆ. ವಾತಾದಿಗಳೇ ಇಲ್ಲದ ಪ್ರಲಯಕಾಲದಲ್ಲಿ ಹಾಗೆ ಪಾಪವು ರೋಗವನ್ನುಂಟುಮಾಡುವಂತಿಲ್ಲ.

ಹೀಗೆ ನೀರೋಗಿಯಾದ ವ್ಯಕ್ತಿ ಆಯುರ್ವೇದದ ಪ್ರಕಾರ ಸಕಲ ಸದ್ಗುಣ ಭರಿತನಾಗಿರುತ್ತಾನೆ. ವಾತಪ್ರಕೃತಿ, ಪಿತ್ತ ಪ್ರಕೃತಿ, ಕಫ ಪ್ರಕೃತಿಯವರು ಕ್ರಮವಾಗಿ ಒಬ್ಬರಿಗಿಂತ ಇನ್ನೊಬ್ಬರು ಹೆಚ್ಚು ಗುಣಶಾಲಿಗಳು. ಈ ಮೂವರಿಗಿಂತಲೂ ವಾತಾದಿ ಮೂರು ದೋಷಗಳ ಸಾಮ್ಯ ಪ್ರಕೃತಿಯವರು ಹೆಚ್ಚು ಗುಣವಂತರು. ನಾರಾಯಣನಲ್ಲಿ ರೋಗವನೀವ ವಾತ ಪಿತ್ತ ಶ್ಲೇಷ್ಮ ಅಂದರೆ ಪ್ರಾಕೃತವಾದ ವಾತಾದಿ ದೋಷಗಳಿಲ್ಲ. ಆದರೂ ಅವನ ಸ್ವರೂಪಭೂತವಾದ ವಾತಾದಿಗಳು ಸದಾ ಸಾಮ್ಯಾವಸ್ಥೆಯಲ್ಲಿಯೇ ಇರುವುದರಿಂದ ಧಾತುಸಾಮ್ಯ ಪ್ರಕೃತಿಯವನು ಆತ. ಆದ್ದರಿಂದ ಸಕಲ ಗುಣನಿಧಿ. ಆತನ ಮಡದಿ ರಮೆಯೂ ಹೀಗೆಯೇ ಪ್ರಾಕೃತ ವಾತಾದಿ ದೋಷರಹಿತಳಾಗಿ ಸ್ವರೂಪಭೂತ ವಾತಾದಿ ಧಾತುಸಾಮ್ಯ ಪ್ರಕೃತಿಯವಳಾಗಿರುವುದರಿಂದ ಸಕಲ ಗುಣನಿಧಿಯೇ ಎನ್ನಬೇಕು. ಉಳಿದ ಬ್ರಹ್ಮಾದಿ ದೇವತೆಗಳಲ್ಲಿ ಯಾರೂ ಹೀಗೆ ಗುಣನಿಧಿಗಳಿಲ್ಲ. ಅವರೆಲ್ಲರೂ ರೋಗವನೀವ ವಾತಪಿತ್ತಶ್ಲೇಷ್ಮ ಉಳ್ಳವರೆ. ಆದ್ದರಿಂದ ರಮಾನಾರಾಯಣರಂಥ ಗುಣನಿಧಿಗಳಿಗೆ ಎಣೆಯುಂಟೆ ? ಎನ್ನುತ್ತಿದ್ದಾಳೆ ಮಹಾಲಕ್ಷ್ಮಿ.

**ರಮ್ಮೆ ದೇವಿಯರನಪ್ಪಿಕೊಂಡಿಪ್ಪುದು**
**ರಮ್ಮೆಯರಸಗೆ ರತಿ ಕಾಣಿರೊ ।**
**ಅಮ್ಮೋಘವೀರ್ಯವು ಚಲಿಸಿದರೆ ಪ್ರಳಯದಲಿ**
**ಕುಮ್ಮಾರರ್ ಯಾಕೆ ಜನಿಸರು ॥**

ರಮಾದೇವಿಯರನ್ನು ಆಲಿಂಗಿಸಿಕೊಂಡಿರುವುದು ರಮೆಯ ಅರಸನಿಗೆ ರತಿ ಎಂದು ತಿಳಿಯಿರಿ ಅಮೋಘವಾದ ವೀರ್ಯವು ಚಲಿಸಿದರೆ ಪ್ರಲಯದಲ್ಲಿ ಕುಮಾರರು ಏಕೆ ಜನಿಸರು ?

ಬ್ರಹ್ಮನ ನೂರು ವರ್ಷಗಳ ಕಾಲ ಪ್ರಳಯದಲ್ಲಿ ಪತ್ನಿಯೊಡನೆ ರಮಿಸುವ ಹರಿಗೆ ಅತಿಸುರತ ಪ್ರಯುಕ್ತ ಧಾತುಕ್ಷಯವಾಗದೆ ? ಎಂದರೆ ಇಲ್ಲ ವೀರ್ಯಸ್ಖಲನವೆ ಇಲ್ಲ ಎಂದು ಇಲ್ಲಿ ಸಮಾಧಾನ

ಹಿಂದಿನ ನುಡಿಯಲ್ಲಿ ಈ ಗುಣನಿಧಿಗೆ ಎಣೆಯುಂಟೆ ? ಎಂಬ ಮಾತಿನಿಂದ ನಾರಾಯಣ ರಮೆಯೊಡನೆ ಭೋಗಿಸುವುದು ತನಗಾಗಿ ಅಲ್ಲ ಕೇವಲ ರಮೆಗಾಗಿ ಎಂದು ಸೂಚ್ಯವಾಗಿ ಹೇಳಿದಂತಾಗಿದೆ. ಆದರೆ ಇಲ್ಲಿ ಅದಕ್ಕೆ ವಿರುದ್ಧವಾಗಿ ರಮಾದೇವಿಯರನ್ನು ಅಪ್ಪಿಕೊಂಡಿರುವುದು ರಮೆಯ ಅರಸನಿಗೆ ರತಿ ಎಂದಿದೆ. ಇದು ಸರಿಯೇ ? ವೀರ್ಯ ಚಲಿಸಿದರೆ ಪ್ರಳಯದಲ್ಲಿ ಕುಮಾರರು ಏಕೆ ಜನಿಸರು ಎಂಬ ಆಕ್ಷೇಪಕ್ಕೂ ಏನು ಪ್ರಸಕ್ತಿ ?

ರತಿ ಶಬ್ದದ ಮೇಲೆ ಪ್ರಶ್ನಾರ್ಥಕ ಚಿಹ್ನೆ ಇಟ್ಟು ಓದಬೇಕು. ರಮಾದೇವಿಯರನ್ನು ಅಪ್ಪಿಕೊಂಡಿರುವುದು ರಮೆಯ ಅರಸನಿಗೆ ರತಿಯೇ ? ಅಲ್ಲ. ಇದೇನೋ ಕೃತಕ ಅಸ್ಪಷ್ಟ ಎನಿಸಬಹುದು. ಆದರೆ ಈ ಮಾತಿನ ಅರ್ಥವ್ಯಾಪ್ತಿ ಇಷ್ಟೆ ಅಲ್ಲ. ರಮೆಯ ಅರಸನಿಗೆ ಅದು ಕೇವಲ ರತಿ ಅಂದರೆ ಕ್ರೀಡೆ, ಲೀಲೆ ಎಂದರ್ಥ.

ಕೇವಲ ಲೀಲೆಯಾದುದರಿಂದ ವೀರ್ಯಚಲನೆ ಇಲ್ಲವೆಂದಂತಾಯಿತು. ಇದೆ ಎನ್ನುವುದಾದರೆ ಪ್ರಳಯದಲ್ಲಿ ಮಕ್ಕಳು ಏಕೆ ಆಗುವುದಿಲ್ಲ ಎಂಬ ಆಕ್ಷೇಪ ಯುಕ್ತವೆ.

ಕೇವಲ ಲೀಲೆ. ತನಗೇನೂ ಪ್ರಯೋಜನವಿಲ್ಲ, ರಮೆಯ ಸುಖಾಭಿವ್ಯಕ್ತಿಗಾಗಿ ಈ ಆಲಿಂಗನ, ಎನ್ನುವುದಾದರೆ ಅವನೇ ಬಹುರೂಪಗಳನ್ನು ಧರಿಸಿ ಆಕೆಯನ್ನು ರಮಿಸಬೇಕಾಗಿತ್ತು. ಆದರೆ ಅಸಂಖ್ಯಾತ ಗೋಪಿಯರಲ್ಲಿ, ಹದಿನಾರು ಸಾವಿರ ಹೆಂಡಿರಲ್ಲಿ ಪ್ರತಿಯೊಬ್ಬರಲ್ಲಿಯೂ ಒಂದೊಂದು ರೂಪದಿಂದ ಇದ್ದು ರಮೆಯೆ

ಶ್ರೀಕೃಷ್ಣನನ್ನು ರಮಿಸಿದ್ದಾಳೆ. ಹೀಗೆ ಬಹುರೂಪದಿಂದಿರುವ ರಮೆಯುನ್ನು ನಾರಾಯಣ ಅಪ್ಪಿಕೊಂಡಿರುತ್ತಾನೆ. 'ರಮ್ಮೆ ದೇವಿಯುರನಪ್ಪಿಕೊಂಡಿಪ್ಪು'ದೆಂದು ಬಹುವಚನದಲ್ಲಿ ಇದರ ಧ್ವನಿ ಇದೆ. ಬಹುರೂಪದಿಂದ ರಮೆ ತನ್ನನ್ನು ರಮಿಸಿದರೆ ತನಗೆ ಸುಖಾನುಭವ ಹೆಚ್ಚು, ಹೆಚ್ಚು ಸಂಖ್ಯೆಯಲ್ಲಿ ಮಕ್ಕಳನ್ನು ಪಡೆಯಲೂ ಅನುಕೂಲವೆಂದು ನಾರಾಯಣ ಅದನ್ನು ಬಯಸಿರಬಹುದು. ಆದ್ದರಿಂದಲೆ ಗೋಪಿಯರಲ್ಲಿ ಹತ್ತುಲಕ್ಷ ಮಂದಿ ಮಕ್ಕಳಾದರು. ಹದಿನಾರು ಸಾವಿರದ ನೂರೆಂಟು ಪತ್ನಿಯರಲ್ಲಿಯೂ ಒಬ್ಬೊಬ್ಬರಲ್ಲಿ ಹತ್ತು ಮಂದಿ ಗಂಡು ಮಕ್ಕಳು, ಒಬ್ಬಳು ಹೆಣ್ಣುಮಗು '

ಮೇಲಿನ ಆಕ್ಷೇಪಕ್ಕೂ ಉತ್ತರ – ರಮ್ಮೆದೇವಿಯರ ಅಂದರೆ ರಮಾದೇವಿಯ ಬಹುರೂಪಗಳನ್ನು ಅಪ್ಪಿಕೊಂಡಿರುವುದು ಕೂಡ ರಮೆಯ ಅರಸನಿಗೆ ಕೇವಲ ಲೀಲೆ ತನಗೆ ಹೆಚ್ಚು ಸುಖಾನುಭವವಾಗಲೆಂದೂ ಅಲ್ಲ. ಹೆಚ್ಚು ಮಕ್ಕಳಾಗಲೆಂದೂ ಅಲ್ಲ. ರಮೆಗೇ ಅವಳ ಬಹುರೂಪಗಳಲ್ಲಿ ಹೆಚ್ಚು ಆನಂದಾನುಭವವಾಗಲಿ ಎಂದು, ಅವಳಿಗೇ ಹೆಚ್ಚು ಮಕ್ಕಳಾಗಲಿ ಎಂದು ಏಕೆಂದರೆ ತಾನು ರಮೆಯ ಅರಸ. ರಮೆ ತನ್ನನ್ನು ರಮಿಸುವುದಕ್ಕಿಂತ ಅಧಿಕವಾಗಿ ತಾನೆ ಅವಳನ್ನು ರಮಿಸುತ್ತಾನೆ. ತಾನು ಪೂರ್ಣಾನಂದ. ಮಕ್ಕಳನ್ನು ಇಚ್ಛಾ ಮಾತ್ರದಿಂದ ಸೃಷ್ಟಿಸಬಲ್ಲ. ವಸ್ತುತಃ ಗೋಪಿಯರಲ್ಲಿಯೂ ಹದಿನಾರು ಸಾವಿರ ಹೆಂಡಿರಲ್ಲಿಯೂ ಇಚ್ಛಾ ಮಾತ್ರದಿಂದಲೆ ಮಕ್ಕಳನ್ನು ಹುಟ್ಟಿಸಿದ್ದ. ರತಿಕ್ರೀಡೆಯಿಂದಲ್ಲ ಆತ ರತಿಕ್ರೀಡೆಯಾಡುವುದೆ ಇಲ್ಲ. ರಮಾದೇವಿಯರನ್ನಾಲಿಂಗಿಸಿಕೊಂಡಿರುವುದೇ ರಮಾರಮಣನಿಗೆ ರತಿ ಬೇರೆ ಸುರತ ಕ್ರೀಡೆಯೆಂಬುದಿಲ್ಲ

ಹಾಗಾದರೆ ರಮಾನಾರಾಯಣರ ದಾಂಪತ್ಯದಲ್ಲಿ ಏನು ಸೊಗಸಿದೆ ? ನಾರಾಯಣ ರಮೆಯ ಅರಸ ಹೇಗಾದಾನು ? ಕೇವಲ ಆಲಿಂಗನ ತಂದೆ ಮಕ್ಕಳಲ್ಲಿಯೂ ಇದೆ, ಸೋದರ ಸೋದರಿಯರಲ್ಲಿಯೂ ಇದೆ. ಈ ಆಕ್ಷೇಪಕ್ಕೂ ಉತ್ತರ– ರಮಾದೇವಿಯರನ್ನು ಅಪ್ಪಿಕೊಂಡಿಪ್ಪುದೆ ರಮೆಯ ಅರಸನಿಗೆ ರತಿ ಅಂದರೆ ರತಿಕ್ರೀಡೆ. ಸಂಭೋಗ ರೂಪವಾದ ಆಭ್ಯಂತರ ಸುರತಕ್ರೀಡೆ ಇಲ್ಲದಿದ್ದರೂ ಆಲಿಂಗನ ಚುಂಬನರೂಪವಾದ ಬಾಹ್ಯ ಸುರತಕ್ರೀಡೆಯು ಇಲ್ಲವೆನ್ನುವಂತಿಲ್ಲ. ಆದರಿಂದಲೇ ಪೂರ್ತಿ ಸುಖಾನುಭವ ರಮಾದೇವಿಗೆ. ಇದರಲ್ಲಿ ಆಶ್ಚರ್ಯವೇನಿಲ್ಲ. ಮುಕ್ತರಿಗೂ ಹೀಗೆಯೆ.

'ರತ್ಯಂತ ಉಭಯೋಚ್ಛೈಕ್ಯಾತ್ ರೇತೋದ್ರಾವಸುಖಂ'

ಎನ್ನುತ್ತದೆ ವಿಷ್ಣುರಹಸ್ಯ. ಆಲಿಂಗನ ಕಾಲದಲ್ಲಿ ಇಬ್ಬರ ಮನಸ್ಸು ಒಂದುಗೂಡಿದಾಗ ಸಂಭೋಗ ಸುಖವೆ ಅಭಿವ್ಯಕ್ತವಾಗುತ್ತದೆ. ಹೇಗೆ ಎಂದು

ಆಕ್ಷೇಪಿಸಕೂಡದು. ಅಲೌಕಿಕ. ಲೋಕದಲ್ಲಿಯೂ, ನವಿಲುಗಳಿಗೆ ರೆಕ್ಕೆಗಳ ಶಾಖ, ಮೀನುಗಳಿಗೆ ದೃಷ್ಟಿಗಳ ಮಿಲನ, ಆಮೆಗಳಿಗೆ ಪರಸ್ಪರ ಸ್ಮರಣೆಗಳಿಂದಲೆ ರತಿಕ್ರೀಡೆಯು ಆನಂದವೆಂದೂ ವಿಷ್ಣುರಹಸ್ಯ ಹೇಳಿದೆ ಮುಕ್ತರಿಗೇ ಹೀಗೆಂದ ಮೇಲೆ ಪರಮಮುಕ್ತರಾದ ರಮಾನಾರಾಯಣರಿಗೆ ಇನ್ನೇನು ?

ಅಮುಕ್ತರಾದ ದೇವತೆಗಳೂ ವೀರ್ಯದ ಸಹಾಯವಿಲ್ಲದೆ ಕೇವಲ ಸಂಕಲ್ಪ, ಮಾತು ನೋಟ, ಸ್ಪರ್ಶಗಳಿಂದಲೂ ಮಕ್ಕಳನ್ನು ಪಡೆಯಬಲ್ಲರೆಂದು ಮಹಾಭಾರತ ಹೇಳಿದೆ–

ಸಂತಿ ದೇವನಿಕಾಯಾಶ್ಚ ಸಂಕಲ್ಪಾಜ್ಜನಯಂತಿ ಯೇ ।
ವಾಚಾದೃಷ್ಟ್ಯಾ ತಥಾ ಸ್ಪರ್ಷಾತ್ ಸಂಘರ್ಷಣೇತಿ ಪಂಚಧಾ ॥

ಮುಕ್ತಿದಾಯಕನಾದ ಶ್ರೀಕೃಷ್ಣನಿಗೆ ಇದು ಅಶಕ್ಯವೆ ?

ಶ್ರೀಕೃಷ್ಣನಿಗೆ ವೀರ್ಯದಿಂದಲೇ ಮಕ್ಕಳು ಜನಿಸಿದ್ದರೆ ಆ ಮಕ್ಕಳ ಶಕ್ತಿ ಅಪರಿಮಿತವೇ ಇರುತ್ತಿತ್ತು. ವಸ್ತುತಃ ಸಾಂಬ ಪ್ರದ್ಯುಮ್ನ ಮುಂತಾದ ಕೃಷ್ಣನ ಮಕ್ಕಳು ಪರಾಕ್ರಮಿಗಳೆಂದು ಪ್ರಸಿದ್ಧರಾದರೂ ಕೃಷ್ಣನಿಗೆ ಹೋಲಿಸಿದರೆ ಬಹು ದುರ್ಬಲರೆನ್ನಬೇಕು. ಸಾಂಬ ಲಕ್ಷಣೆಯನ್ನು ವಿವಾಹವಾಗುವ ಸಂದರ್ಭದಲ್ಲಿ ದುರ್ಯೋಧನನಿಗೆ ಸೆರೆಸಿಕ್ಕು, ಬಲರಾಮನಿಂದ ಬಿಡುಗಡೆ ಹೊಂದಿದ. ಪ್ರದ್ಯುಮ್ನ ಶಿಶುವಾಗಿದ್ದಾಗ ಶಂಬರನಿಂದ ಅಪಹೃತನಾಗಿ ತನ್ನ ಮಡದಿ ರತಿಯಿಂದಲೇ ಕಾಪಾಡಲ್ಪಟ್ಟು ಅವಳ ಆರೈಕೆಯಲ್ಲಿಯೆ ಬೆಳೆದು ಅವಳ ಸಹಾಯದಿಂದಲೇ ಶಂಬರನನ್ನು ಸಂಹರಿಸಿ ವಿಜಯ ಸಂಪಾದಿಸಿದ. ಆದರೆ ಶ್ರೀಕೃಷ್ಣ ನಾರಾಯಣನ ಒಂದು ಕೂದಲಿನಿಂದ ಪ್ರಾದುರ್ಭವಿಸಿ, ನಾರಾಯಣನಂತೆಯೇ ಅನುಪಮ ಸಾಮರ್ಥ್ಯ ಅಸಹಾಯ ಶೂರತೆಗಳನ್ನು ತೋರಿದ. ಒಂದು ಕೂದಲಿಗೇ ಇಷ್ಟು ಶಕ್ತಿಯಾದರೆ ಪುರುಷಶಕ್ತಿ ಎಲ್ಲವನ್ನೂ ತುಂಬಿಕೊಂಡ ವೀರ್ಯ ಎಷ್ಟು ಅಮೋಘವಾಗಿರದು ? ಇಂಥ ಅಮೋಘ ವೀರ್ಯಕ್ಕೂ ಚಲನೆ ಎಂಬುದು ಇರುತ್ತಿದ್ದರೆ ಪ್ರಳಯಕಾಲದಲ್ಲಿ ಚಲಿಸಬೇಕಾಗಿತ್ತು. ಏಕೆಂದರೆ ಪ್ರಳಯಕಾಲದಲ್ಲಿ ರಮೆ್ಮದೇವಿಯರನಪ್ಪಿಕೊಂಡಿಪ್ಪುದು ರಮ್ಮೆಯರಸನಿಗೆ ಒಳ್ಳೆಯ ರತಿಕ್ರೀಡೆ ಎಂದು ತಿಳಿಯಿರಿ'.

ತತ್ವಸಾರ (ವೈಕುಂಠ ವರ್ಣನ)ದಲ್ಲಿ ವಾದಿರಾಜರು ಹಾಡಿದ್ದಾರೆ– ರಮೆ ಪ್ರಳಯಕಾಲದಲ್ಲಿ ನಾರಾಯಣನಿಗೆ ತಾನೆ ವಸ್ತ್ರಾಭರಣಗಳಾದಳು. ಹೊಂಬಣ್ಣದಾಲದೆಲೆ ತಾನೆ ಆದಳು. ಮಂದಮಾರುತನಂತೆ ಸುತ್ತಲೂ ತಾನೆ ಸುಳಿದಳು. ಮುಖವೆಂಬ ಚಂದ್ರಮನ ಸೊಬಗು ಬೀರಿದಳು. ಗಿಳಿಯಂತೆ ಮಾತನಾಡಿದಳು. ಕೋಗಿಲೆಯಂತೆ ಹಾಡಿದಳು. ಪ್ರಾಣನಾಯಕನೆಂದು ಸಕಲ

ಸಂಭ್ರಮ ತೋರಿದಳು. ಕಂಗಳ ನೋಟದಿಂದ ದುಂಬಿ ಸುಳಿವಂತೆ ಅಂಬುಜಾಕ್ಷನಿಗೆ ಅರ್ತಿಯಿತ್ತಳು. ಬಿಂಬಾಧರದ ಸುಧೆಯ ರಸವನ್ನು ಚುಂಬಿಸಿ ಉಣಿಸಿದಳು. ಇಷ್ಟೇ ಅಲ್ಲ ಆಕೆ ಒಮ್ಮೆ ದುರ್ಗೆಯಾಗುವಳು, ಒಮ್ಮೆ ಭೂಮಿಯಾಗುವಳು, ಇನ್ನೊಮ್ಮೆ ಶ್ರೀದೇವಿಯಾಗುವಳು, ಒಮ್ಮೊಮ್ಮೆ ಎರಡು ರೂಪಗಳಿಂದ ಏಕಕಾಲದಲ್ಲಿ ಪತಿಯನ್ನಪ್ಪುವಳು. ಪ್ರಳಯ ಸಮುದ್ರದ ತೆರೆಗಳ ಮೇಲೆ ತೇಲುವ ಆಲದೆಲೆಯ ಮೇಲೆ ಶ್ರೀಭೂದುರ್ಗೆಯರೊಡನೆ ಉಯ್ಯಾಲೆಯಾಡುವನು, ನಾರಾಯಣ

ಹೀಗೆ ಚತುರ್ಮುಖಬ್ರಹ್ಮನ ನೂರು ವರ್ಷಗಳಷ್ಟು ದೀರ್ಘವಾದ ಮಹಾಪ್ರಳಯದಲ್ಲಿ ಯಾರೂ ಇಲ್ಲದಂಥ ಏಕಾಂತದಲ್ಲಿ ರಮೆಯನ್ನಾಲಿಂಗಿಸಿದ್ದರೂ ವೀರ್ಯ ಚಲಿಸಲಿಲ್ಲ ಚಲಿಸಿದ್ದರೆ. ಪ್ರಳಯದಲ್ಲಿ ಕುಮಾರರು ಯಾಕೆ ಜನಿಸರು? ಏಕೆ ಮಕ್ಕಳಾಗಲಿಲ್ಲ? ಇದನ್ನೆ ಸರಸ ಭಾರತಿಯಲ್ಲಿ ವಾದಿರಾಜರು ಸ್ಪಷ್ಟ ಹೇಳಿದ್ದಾರೆ–

ಬ್ರಹ್ಮಾಬ್ದ ಶತಪರ್ಯಂತಂ ಭೂಮ್ಯಾ ರಮ್ಯಶ್ರಿಯಾ ಲಯೇ ।
ರಹಸ್ಯಾಲಿಂಗಿತಾಂಗೋಽಪಿ ವಟಪತ್ರಪುಟೇ ಪ್ರಭುಃ ।
ಯೋಽಸ್ಖಲನ್ನಿಜವೀರ್ಯೋಽಭೂತ್ ತಸ್ಯ ವೀರ್ಯಚ್ಯುತಿಃ ಕದಾ ।
ಅಮೋಘವೀರ್ಯಸ್ಯ ಹರೇರ್ಯದಿ ವೀರ್ಯಂ ಸ್ಖಲೇತ್ತದಾ ।
ಮನೋಹರಾಃ ಕುಮಾರಾಶ್ಚ ಲಯೇಽಪಿ ಸ್ಯುರನೇಕಶಃ ॥

ಇಲ್ಲಿ 'ಬ್ರಹ್ಮಾಬ್ದಶತಪರ್ಯಂತಂ' ಅಂದರೆ ಬ್ರಹ್ಮಮಾನದ ನೂರು ವರ್ಷಪೂರ್ತಿ ಪ್ರಳಯಕಾಲದಲ್ಲಿ ವಟಪತ್ರಶಯನವೆಂದಿದ್ದರೂ,

ಲಯಸ್ಯ ತ್ವಷ್ಟಮೋ ಭಾಗಃ ಸೃಷ್ಟಿಕಾಲ ಉದಾಹೃತಃ ।

ಎಂಬ ನಾರದಪುರಾಣವಚನದಂತೆ ಪ್ರಳಯದ ಕೊನೆಯ ಎಂಟನೆಯ ಭಾಗ ಸೃಷ್ಟಿಕಾಲವಾದುದರಿಂದ ಆಗ ವಟಪತ್ರಶಯನವಿಲ್ಲ. ವಾದಿರಾಜರೂ ತತ್ವಸಾರದಲ್ಲಿ ಹೀಗೆ ಹೇಳಿದ್ದಾರೆ–

ಬ್ರಹ್ಮನ ನೂರು ವರ್ಷ ಪ್ರಳಯಮಾನ ತನ್ಮಧ್ಯ ಎಂಬತ್ತೇಳುವರೆ ಅಬ್ದ ।
ಸುಮ್ಮನೆ ಹೋಹುದು ಅದರ ತುದಿಯಲಿ ನಮ್ಮ ದುರ್ಗಮ್ಮಗೆ
ಎಚ್ಚರಿಕೆ ॥

ಪ್ರಳಯದ ಒಂದು ಭಾಗ ಸೃಷ್ಟಿಕಾಲ. ಹೇಗೆಂದರೆ ರಾತ್ರಿಯ ಕೊನೆಯ ಭಾಗ, ಸೂರ್ಯೋದಯಕ್ಕಿಂತ ಹಿಂದಿನ ಒಂದೂವರೆ ತಾಸು ಮರುದಿನಕ್ಕೆ ಸೇರುತ್ತದೆ. ಆಗ ಮಾಡುವ ಸ್ನಾನಾಹ್ನಿಕಗಳಿಗೆ ಮರುದಿನದ ತಿಥಿವಾರಗಳನ್ನೇ ಸಂಕಲ್ಪದಲ್ಲಿ

ಉಚ್ಚರಿಸುತ್ತೇವೆ. ಪ್ರಳಯಕಾಲ ಶ್ರೀಹರಿಗೆ ರಾತ್ರಿ. ಅದರ ಕೊನೆ ಭಾಗದಲ್ಲಿ ಸೃಷ್ಟಿ ಮಾಡುತ್ತಾನೆ. ಆಗ ಶಯನವಿಲ್ಲ. ಆದರೂ ರಾತ್ರಿ ಇಡೀ ಶಯನವೆಂದು ವ್ಯವಹಾರ.

ಕೆಲವರು ಬ್ರಹ್ಮನಿಗೆ ಎಂಬತ್ತೇಳುವರೆ ವರ್ಷವೇ ಆಯುಸ್ಸೆಂದೂ ಅದರ ಕೊನೆಯ ಒಂದು ರಾತ್ರಿ ಶ್ರೀಹರಿ ವಟಪತ್ರ ಶಯನಮಾಡಿ ಉಳಿದ ಹನ್ನೆರಡುವರೆ ವರ್ಷ ಸೃಷ್ಟಿ ಮಾಡುವನೆಂದೂ ಹೇಳುವುದುಂಟು. ಆದರೆ,

ಪ್ರಳಯಃ ಪರಸಂಖ್ಯಾತಃ ।

ಅಂದರೆ ಚತುರ್ಮುಖನ 'ಪರ' ಎಂಬ ನೂರು ವರ್ಷದ ಆಯುಷ್ಯ ಕಾಲದಷ್ಟೇ ದೀರ್ಘವಾದುದು ಪ್ರಳಯಕಾಲವೆಂದು ವಿಷ್ಣುರಹಸ್ಯದಲ್ಲಿ ಹೇಳಿರುವುದರಿಂದ ಈ ವಾದ ನಿರಾಧಾರವೆನ್ನಬೇಕು

ಲಯಸ್ಯ ಸಮಯಂ ಪ್ರಾಹುರ್ಬ್ರಹ್ಮಾಯುಃಸಮ್ಮಿತಂ ಬುಧಾಃ ।

ಎಂದು ಚಾತುರ್ಮಾಸ್ಯ ವರಾಹ ಕಲ್ಪದಲ್ಲಿಯೂ ಹೇಳಿದೆ.

ಅಂತೂ ಬ್ರಹ್ಮಮಾನದ ಎಂಬತ್ತೇಳುವರೆ ವರ್ಷಗಳಷ್ಟು ದೀರ್ಘಕಾಲ ರಮೆಯೊಡನೆ ಏಕಾಂತದಲ್ಲಿ ಶಯನ ಮಾಡಿದರೂ ಶ್ರೀಹರಿಗೆ ಮಕ್ಕಳಾಗಿಲ್ಲವೆಂದರೆ ಆಗ ವೀರ್ಯ ಚಲನೆಯಾಗಿಲ್ಲ ಎಂದೇ ಹೇಳಬೇಕು. ಆಗ ಆಗದಿರುವುದನ್ನು ಸೃಷ್ಟಿಕಾಲದಲ್ಲಿ ಆಗುವುದೆಂದು ಊಹಿಸುವುದು ಶಕ್ಯವಿಲ್ಲ. ಆದ್ದರಿಂದ ಶ್ರೀಕೃಷ್ಣ ಸಾಂಬ ಪ್ರದ್ಯುಮ್ನ ಮುಂತಾದವರನ್ನು ಇಚ್ಛಾಮಾತ್ರದಿಂದ ಹುಟ್ಟಿಸಿದನೆನ್ನಬೇಕು. ಸೃಷ್ಟಿ ಕಾಲದಲ್ಲಿಯೂ ಲೋಕೈಕ ಲಾವಣ್ಯವತಿಯಾದ ರಮೆಯೊಡನೆ ಶೇಷನ ಮೃದುಶಯ್ಯೆಯಲ್ಲಿ ಪವಡಿಸಿದ್ದರೂ ನಾರಾಯಣ ತನ್ನ ಹೊಕ್ಕಳಲ್ಲಿ ಚತುರ್ಮುಖನನ್ನು ಹುಟ್ಟಿಸಿದ. ಪ್ರಣಯ ಕಲಹದಲ್ಲಿ ಒಮ್ಮೆ ಶ್ರೀಕೃಷ್ಣ ಭಾಮೆಗೆ ಹೇಳಿದನಂತೆ–

ಒಲಿದು ನಾನಿನ್ನ ಮನೆಗಾಗಿ ಬಂದರೆ ಕಲಹದ ಮಾತುಗಳಾಡುವೆ ।
ಲಲನೆ ಉರದಲಿದ್ದು ನಾಭಿ ಕಮಲದಿಂದ ಛಲದಿ ಮಗನ ಪಡೆದೆ ॥

ಇದನ್ನು ಕೇಳಿದಾಗ ಭಾಮೆ ಸೋತು ನಿರುತ್ತರಳಾದಳೆಂದು ವಾದಿರಾಜರ ಕೀರ್ತನೆ ಇದೆ. ಆದ್ದರಿಂದ ಮಕ್ಕಳನ್ನು ಹುಟ್ಟಿಸಲು ಹರಿಗೆ ಸ್ತ್ರೀಯರ ಅಪೇಕ್ಷೆ ಇಲ್ಲ.

ಇಲ್ಲಿ ಒಂದು ಆಕ್ಷೇಪ ಬರಬಹುದು–

ಮಮ ಯೋನಿರ್ಮಹದ್ಬ್ರಹ್ಮ ತಸ್ಮಿನ್ ಗರ್ಭಂ ದಧಾಮ್ಯಹಂ ।
ಅಪ ಏವ ಸಸರ್ಜಾದೌ ತಾಸು ವೀರ್ಯಮವಾಸೃಜತ್ !

ಎಂದು ಮುಂತಾಗಿ ನಾರಾಯಣನು ರಮೆಯಲ್ಲಿ ಗರ್ಭಾಧಾನ ಮಾಡುತ್ತಾನೆ ಎಂದೆನ್ನುವ ಗೀತೆ ಮನುಸ್ಮೃತಿ ಮುಂತಾದವು ಹೇಳುವುದು ಸುಳ್ಳೇ ? ಇದಕ್ಕೆ ಸರಸ ಭಾರತಿಯಲ್ಲಿ ಉತ್ತರ ಬಂದಿದೆ–

ಪ್ರಬುದ್ಧ ಕರ್ಮಾ ದೈವೇನ ತ್ರಯೋವಿಂಶತಿಕೋ ಗಣಃ ।
ಪ್ರೇರಿತೋಽಜನಯತ್ ಸ್ವಾಭಿರ್ಮಾತ್ರಾಭಿರಧಿಪೂರುಷಂ ॥
ಪರೇಣ ವಿಶತಾ ಸ್ವಸ್ಮಿನ್ ಮಾತ್ರಯಾ ವಿಶ್ವಸೃಗ್ಗಣಃ ।
ಚುಕ್ಷೋಭಾನ್ಯೋನ್ಯಮಾಸಾದ್ಯ ಯಸ್ಮಿಂಲ್ಲೋಕಾಶ್ಚರಾಚರಾಃ ॥
ಸ ಏವ ಭೂಯೋ ನಿಜವೀರ್ಯ ಚೋದಿತಾಂ ।
ಸ್ವಜೀವಮಾಯಾಂ ಪ್ರಕೃತಿಂ ಸಿಸೃಕ್ಷತೀಂ .. ॥

ಎಂದು ಭಾಗವತ ಸ್ಪಷ್ಟವಾಗಿ ನಾರಾಯಣನ ಸೃಷ್ಟಿವೈಖರಿಯನ್ನು ಬಣ್ಣಿಸುತ್ತಿದೆ. ಬ್ರಹ್ಮಾಂಡಸೃಷ್ಟಿಗೆ ಮೂಲವಸ್ತುವಾದ ಇಪ್ಪತ್ತನಾಲ್ಕು ಸೂಕ್ಷ್ಮತತ್ವಗಳಿಗೆ ಬ್ರಹ್ಮಾಂಡ ರೂಪದಲ್ಲಿ ಪರಿಣಮಿಸುವ ಶಕ್ತಿ ಸ್ವತಃ ಇಲ್ಲ. ಹರಿ ತಾನು ಒಳಗೆ ಪ್ರವೇಶಿಸಿ ಆ ಶಕ್ತಿಯನ್ನು ಉದ್ಬೋಧಗೊಳಿಸುತ್ತಾನೆ ಹೀಗೆ ಶಕ್ತಿಯಿಂದ ತುಂಬಿದ ಸೂಕ್ಷ್ಮತತ್ವಗಳನ್ನೇ ಹರಿಯ ವೀರ್ಯವೆಂದು ಪುರಾಣಗಳಲ್ಲಿ ವ್ಯವಹಾರ ಮಾಡಲಾಗಿದೆ. ಹೊರತು ಅವನ ಸ್ವರೂಪದಲ್ಲಿ ಅಡಕವಾದ ವೀರ್ಯವನ್ನಲ್ಲ ಎಂದು ವಿಷ್ಣುರಹಸ್ಯ ಹೇಳುತ್ತಿದೆ. ಇದಕ್ಕೆ ಅನುಸಾರವಾಗಿ ಗೀತೆ ಮನುಸ್ಮೃತಿ ಮುಂತಾದುವನ್ನು ಅರ್ಥೈಸಬೇಕು.

— ೩೭ —

**ಏಕತ್ರ ನಿರ್ಣೀತ ಶಾಸ್ತ್ರಾರ್ಥ ಪರತ್ರಾಪಿ**
**ಬೇಕೆಂಬ ನ್ಯಾಯವ ತಿಳಿದುಕೊ ।**
**ಶ್ರೀಕೃಷ್ಣನೊಬ್ಬನೆ ಸರ್ವದೋಷಕ್ಕೆ ಸಿ–**
**ಲುಕ್ಕನೆಂಬೋದು ಸಲಹಲಿಕೆ ॥**

"ಒಂದು ಕಡೆ ಒಂದು ಶಾಸ್ತ್ರಾರ್ಥ ನಿರ್ಣಯವಾಯಿತೆಂದರೆ ಅದನ್ನು ಎಲ್ಲ ಕಡೆ ಒಪ್ಪಬೇಕು" ಎಂಬ ನ್ಯಾಯು ಒಂದಿದೆ ಎಂಬುದನ್ನು ಮೊದಲಿಗೆ ತಿಳಿದುಕೊಳ್ಳು. ಏಕೆಂದರೆ ಶ್ರೀಕೃಷ್ಣನೊಬ್ಬನೆ. ಪ್ರಳಯಕಾಲದಲ್ಲಿ ಬಾಲರೂಪಿಯಾಗಿ ವಟಪತ್ರದಲ್ಲಿ ಶಯನ ಮಾಡಿದವನೂ ನಂದಗೋಕುಲದಲ್ಲಿ ಯಶೋದೆಯ ಮಡಿಲಲ್ಲಿ

ಮಲಗಿದವನೂ ಬೇರೆ ಅಲ್ಲ. ಅವನು ಪ್ರಳಯಕಾಲದಲ್ಲಿ ಹಸಿವು ನೀರಡಿಕೆ ಮುಂತಾದ ಸರ್ವದೋಷಕ್ಕೆ ಸಿಲುಕದವನು ಎಂದು ಶಾಸ್ತ್ರಾರ್ಥ ನಿರ್ಣೀತವಾಗಿದೆ. ಪರತ್ರಾಪಿ ಅದನ್ನೊಪ್ಪಬೇಕು. ಆದ್ದರಿಂದ ಅವನು ನಂದಗೋಕುಲದಲ್ಲಿ ಹಸಿವಿನಿಂದ ಅಳುವುದು ಶಕ್ಯವಿಲ್ಲ. ಈ ಪ್ರಮೇಯವನ್ನು ತಿಳಿದರೆ ಅದು ನಮ್ಮನ್ನು ಸಲಹೀತು.

'ಏಕತ್ರ ನಿರ್ಣೀತಃ ಶಾಸ್ತ್ರಾರ್ಥಃ ಪರತ್ರಾಪಿ' ಎಂಬ ನ್ಯಾಯ ವೇದಾಂತ ಮೀಮಾಂಸಾ ಶಾಸ್ತ್ರಗಳೆರಡರಲ್ಲಿಯೂ ಅಲ್ಲಲ್ಲಿ ಉದಾಹೃತವಾಗಿದೆ– 'ಯವಮಯಶ್ಚರುರ್ಭವತಿ' ಎಂಬ ವಿಧಿವಾಕ್ಯದಲ್ಲಿ 'ಯವ'ವೆಂದರೆ ನವಣೆಯೆ ? ಬಾರ್ಲಿಯೆ ? ಎಂಬ ಸಂದೇಹ ಬಂದರೆ ನಿರ್ಣಾಯಕವಾಗಬಲ್ಲ ಯಾವ ಅಂಶವೂ ಅಲ್ಲಿ ದೊರೆಯದು. ಆದರೆ ಈ ಯವ ಶಬ್ದಕ್ಕೆ ಬೇರೆ ಕಡೆ ಒಂದು ವಿವರಣೆ ಸಿಗುತ್ತದೆ – ವಸಂತಕಾಲದಲ್ಲಿ ಎಲ್ಲ ಸಸ್ಯಗಳೂ ಒಣಗುತ್ತಿದ್ದರೂ ಯವ ಸಸ್ಯ ಮಾತ್ರ ತೆನೆ ಬಿಡುತ್ತಾ ನಲಿಯುತ್ತಿರುವಂತೆ ಕಾಣುತ್ತದೆ ಎಂದು. ಈ ಲಕ್ಷಣದಿಂದ ಯವವೆಂದರೆ ಬಾರ್ಲಿ ಎಂದು ನಿಃಸಂದಿಗ್ಧವಾಗಿ ಹೇಳಬಹುದು. ಇದು ಚಂದ್ರಿಕಾ ಗ್ರಂಥದಲ್ಲಿ ವ್ಯಾಸರಾಜರು ಕೊಟ್ಟ ಉದಾಹರಣೆ. ವಾದಿರಾಜರು ಗುರ್ವರ್ಥದೀಪಿಕೆಯಲ್ಲಿ ಕೊಡುವ ಒಂದು ಉದಾಹರಣೆ ಹೀಗಿದೆ– ಮರ ಕಡಿಯಲು ಸಾಧನವಾದ ಕೊಡಲಿ, ಬಿಸಿಲ ತಾಪ ಕಳೆಯುವ ನೆಳಲು, ತೃಷೆ ಪರಿಹಾರ ಮಾಡುವ ನೀರು ಈ ಎಲ್ಲ ಸಾಧನಗಳೂ ತಮ್ಮ ತಮ್ಮ ಕಾರ್ಯಮಾಡಬೇಕಾದರೆ ಆಯಾ ಯೋಗ್ಯ ಸ್ಥಾನದಲ್ಲಿ ಸಂಪರ್ಕ ಹೊಂದಿರಬೇಕು ಎಂಬುದು ಏಕತ್ರ ಬೌದ್ಧರೂ ಒಪ್ಪಿರುವ ನಿರ್ಣಯ. ಪರತ್ರಾಪಿ ಅದನ್ನೊಪ್ಪಬೇಕು ಚಕ್ಷುರಿಂದ್ರಿಯವು ಒಂದು ಜ್ಞಾನಸಾಧನವೆಂದಮೇಲೆ ಅದು ವಿಷಯ ಸಂಪರ್ಕ ಹೊಂದಿರಬೇಕು. ಇದರಿಂದ ಜ್ಞಾನಬರುವುದಕ್ಕಿಂತ ಮೊದಲೆ ವಿಷಯ ಇತ್ತೆನ್ನುವುದು ಸ್ಪಷ್ಟವಾಗುವುದರಿಂದ ಪ್ರಪಂಚ ಅಜ್ಞಾನ ಕಲ್ಪಿತ, ವಾಸ್ತವವಲ್ಲ ಎಂಬ ಬೌದ್ಧರ ವಾದ ನ್ಯಾಯವಿರುದ್ಧವೆ ಸರಿ.

ಪ್ರಳಯಕಾಲದಲ್ಲಿದ್ದ ಶಿಶುವೂ ಯಶೋದೆಯ ಮಡಿಲಲ್ಲಿದ್ದ ಶಿಶುವೂ ಬೇರೆ ಎನ್ನುವುದು ಸರಿಯಲ್ಲ. ಹಾಗೆನ್ನುವುದು ಮಹಾ ಅನರ್ಥಕರವೆಂದು,

ಮೃತ್ಯೋಃ ಸ ಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ'

ಎಂದು ಮುಂತಾದ ಶ್ರುತಿಗಳು ಸಾರುತ್ತಿವೆ.

ನಾರಾಯಣನ ಕಿರೀಟವನ್ನು ಬಲಿಯು ಕದ್ದೊಯ್ದಾಗ ಗರುಡನು ಅವನನ್ನು ಬೆಂಬತ್ತಿ ಪಾತಾಳದವರೆಗೂ ಹೋಗಿ ಆ ಕಿರಿಟವನ್ನು ಕಸಿದುಕೊಂಡು ಹಿಂತಿರುಗಿದ. ನಡುದಾರಿಯಲ್ಲಿ ಗೋಮಂತಕ ಪರ್ವತದಲ್ಲಿ ಕೃಷ್ಣನನ್ನು ಕಂಡು ಆ ಕಿರೀಟವನ್ನು ಅವನ ತಲೆಯಲ್ಲಿಯೆ ಇರಿಸಿದ. ಅದು ಸರಿಯಾಗೇ ಕುಳಿತಿತು. ಆ ನಾರಾಯಣ

ಈ ಕೃಷ್ಣ ಬೇರೆಯಲ್ಲ ಎನ್ನುವುದು ಸ್ಪಷ್ಟವಾಯಿತು. ಇಂಥ ಅನೇಕ ವೃತ್ತಾಂತಗಳಿಂದ ಶ್ರೀಕೃಷ್ಣನೊಬ್ಬನೇ' ಎಂಬ ಅಂಶವನ್ನು ವಾದಿರಾಜರು ಸುಧಾ ಗುರ್ವರ್ಥದೀಪಿಕೆ ಯಲ್ಲಿ ಸ್ಪಷ್ಟಗೊಳಿಸಿದ್ದಾರೆ.

ಗೊಲ್ಲನೊಬ್ಬ ವಿಕ್ರಮಾದಿತ್ಯನ ಸಿಂಹಾಸನದ ದಿಬ್ಬವೇರಿ ಕುಳಿತಾಗ ಬುದ್ಧಿವಂತ ಇಳಿದಾಗ ದಡ್ಡ. ಹೀಗೇ ಶ್ರೀಹರಿ "ಒಬ್ಬನೇ ಬೇರೆ ಬೇರೆ ಕಡೆಗಳಲ್ಲಿ ಬೇರೆ ಬೇರೆ ಕಾಲಗಳಲ್ಲಿ ಬೇರೆ ಬೇರೆಯಾಗಿರಬಾರದೇಕೆ? ಅಂದರೆ ಪ್ರಳಯಕಾಲದಲ್ಲಿ ವಟಪತ್ರದ ಮೇಲೆ ಹಾಯಾಗಿ ಮಲಗಿದವನು ನಂದಗೋಕುಲದಲ್ಲಿ ಅತ್ತರೆ ತಪ್ಪೆ? ದೇವತಾ ಶರೀರದಲ್ಲಿ ಸರ್ವಶಕ್ತನಾದವನು ಮಾನವ ಶರೀರದಲ್ಲಿ ದೀನನೆನಿಸಬಾರದೇಕೆ?" ಎಂದರೂ 'ಶ್ರೀಕೃಷ್ಣನೊಬ್ಬನೆ' ಅದ್ವಿತೀಯ, ಸ್ವತಂತ್ರ ಎಂದು ಉತ್ತರ. ಅವನನ್ನು ನಿಯಂತ್ರಿಸುವ ಶಕ್ತಿ ಬೇರೊಂದಿಲ್ಲ. ಏಕೆಂದರೆ ಹಿಂದೆ ಹೇಳಿದಂತೆ ಪ್ರಳಯಕಾಲದಲ್ಲಿ ಸರ್ವಸ್ವತಂತ್ರನಾಗಿ ಕ್ರೀಡಿಸಿದವನು ಆತ. 'ಯಾವಾನರ್ಥ ಉದಪಾನೇ' ಎಂಬ ಗೀತಾ ಶ್ಲೋಕಕ್ಕೆ ತಾತ್ಪರ್ಯದಲ್ಲಿ ಶ್ರೀಮದಾಚಾರ್ಯರು ಹೇಳುತ್ತಾರೆ– ಪ್ರಳಯೇಽಪ್ಯುದ ಪಾನೋಽಸೌ! ವಿಕ್ರಮಾದಿತ್ಯನ ಸಿಂಹಾಸನದ ದಿಬ್ಬವನ್ನೇರಿ ಕುಳಿತ ಗೊಲ್ಲನಂತೆ ಅಲ್ಲ ನಮ್ಮ ಗೊಲ್ಲ ಕೃಷ್ಣ.

ಹೀಗೆ ನಿರ್ದೋಷನಾದ ಭಗವಂತನಲ್ಲಿ ದೋಷಾರೋಪಣ ಮಾಡಿದರೆ ಕಲ್ಲಿಗೆ ಹೊಡೆದ ಮರದ ಬಾಣದಂತೆ ಹಿಂದಿರುಗಿ ಬಂದು ಹೊಡೆದವನನ್ನೇ ಬಲಿ ತೆಗೆದುಕೊಳ್ಳುವಂತೆ, ಪ್ರತಿವಾದಿಯ ಯುಕ್ತಿಗಳೆಲ್ಲ ವ್ಯರ್ಥವಾಗಿ, ತಿರುಗಿ ಅವನನ್ನೇ ಘಾಸಿಗೊಳಿಸುತ್ತವೆ ಅವನ ನೀಚ ಸ್ವಭಾವವನ್ನೇ ಎತ್ತಿ ತೋರಿಸುತ್ತವೆ–

ಅಥಾಪಿ ಭಗವದ್ದೋಷಂ ವೃಥಾ ಯೋ ಮನುತೇ ನರಃ ।
ತಂ ದೋಷೇಷುಃ ಶಿಲಾಕ್ಷಿಪ್ತ ದಾರುಪ್ರೋತಶರೋಪಮಃ ॥

ಶ್ರುತ್ವಾಕೃಷ್ಣಗುಣೋತ್ಕೃಷ್ಟೇರ್ಥಾನುಷ್ಮಮನುಧಾವತಿ ॥ –ಯುಕ್ತಿಮಲ್ಲಿಕಾ

ಸರ್ವ ದೋಷಕ್ಕೂ ಸಿಲುಕದವನೆಂದು ಉಪಾಸನೆ ಮಾಡಿದರೆ ಅದು ಸಲಹುತ್ತದೆ. ಸಂಸಾರವನ್ನು ಕಳೆದು ಮೋಕ್ಷಸುಖ ನೀಡುತ್ತದೆ.

– ೩೮ –

**ಎಲ್ಲ ಜಗವ ನುಂಗಿ ದಕ್ಕಿಸಿಕೊಂಡವಗೆ**
**ಸಲ್ಲದು ರೋಗರುಜಿನವು ।**
**ಬಲ್ಲ ವೈದ್ಯರ ಕೇಳಿ ಅಜೀರ್ತಿ ಮೂಲವಲ್ಲ–**
**ದಿಲ್ಲ ಸಮಸ್ತ ರುಜಿನವು ॥**

ಪ್ರಳಯ ಕಾಲದಲ್ಲಿ ಸಮಸ್ತ ಪ್ರಪಂಚವನ್ನೇ ನುಂಗಿ ಅರಗಿಸಿಕೊಂಡ ಶ್ರೀ ಹರಿಗೆ ರೋಗರುಜಿನಗಳ ಪೀಡೆ ಉಂಟಾಗುವುದು ಅಸಂಭಾವಿತ. ಏಕೆಂದರೆ ತಜ್ಞರಾದ ವೈದ್ಯರನ್ನು ಕೇಳಿ. ಅವರು ಹೇಳುತ್ತಾರೆ. ಅಜೀರ್ತಿ ಮೂಲಕವಾಗಿಯೇ ಬರುವಂಥವು ಎಲ್ಲ ರೋಗಗಳು. ಅಜೀರ್ತಿ ಒಂದಿಲ್ಲದಿದ್ದರೆ ಸಮಸ್ತ ರೋಗರುಜಿನವೂ ಇಲ್ಲವಾಗುತ್ತದೆ.

ಆಯುರ್ವೇದ ಹೇಳುತ್ತದೆ–

ಅನ್ನೇನ ಕುಕ್ಷೇರ್ದ್ವಾವಂಶೌ ಪಾನೇನೈಕಂ ಪ್ರಪೂರಯೇತ್ ।
ಆಶ್ರಯಂ ಪವನಾದೀನಾಂ ಚತುರ್ಥಮವಶೇಷಯೇತ್ ॥

ಜಠರದಲ್ಲಿರುವ ಅವಕಾಶದಲ್ಲಿ ಎರಡಂಶ ಅನ್ನದಿಂದಲೂ, ಒಂದು ಅಂಶ ಪಾನದಿಂದಲೂ ತುಂಬಿಸಿ ಉಳಿದ ನಾಲ್ಕನೆ ಒಂದಂಶವನ್ನು ಗಾಳಿ ಸಂಚರಿಸಲೆಂದು ಬಿಡಬೇಕು ಶ್ರೀಹರಿ ಇಂಥ ಯಾವ ನಿಯಮವನ್ನೂ ಪಾಲಿಸುವುದು ಕಂಡು ಬರುವುದಿಲ್ಲ. ಪ್ರಳಯ ಕಾಲದಲ್ಲಿ ಸಮಸ್ತ ಪ್ರಪಂಚವನ್ನೆ ನುಂಗುತ್ತಾನೆ. ಆದರಿಂದಲೆ ಉಪನಿಷತ್ತು ಅವನನ್ನು ಅದಿತಿ ಎಂದು ಕರೆದಿದೆ–

'ಸರ್ವಂ ವಾ ಅತ್ತೀತಿ ತದದಿತೇರದಿತಿತ್ವಂ' –ಬೃಹದಾರಣ್ಯಕ

ಪೂರ್ಣ ಪ್ರಮಾಣದಲ್ಲಿ ಬೆಳೆದು ಬಲಿತಿರುವ ಬ್ರಹ್ಮಾಂಡವನ್ನು ನುಂಗಲೆಂದೇ ಪ್ರಳಯ ಕಾಲದವರೆಗೆ ಕಾಯುತ್ತಾನೆ–

'ಸ ಐಕ್ಷತ ಯದಿ ಹವಾ ಇಮಮಭಿಮಂಸ್ಯೇ ಕನೀಯೋನ್ನಂ ಕರಿಷ್ಯ ಇತಿ'

–ಬೃಹದಾರಣ್ಯಕ.

ಹಿಂದೆ ಬೊಮ್ಮನ ಸೃಜಿಸಿ ಅವನಂಗವಾಗಲೆ
ತಿಂದರೆ ತುತ್ತು ಕುಂದುವುದು ।
ಎಂದುದಾಸೀನ ಮಾಡಿದ ಶ್ರೀ ಕೃಷ್ಣ
ಇಂದು ಭುಂಜಿಸಿ ತೇಗುತಿರ್ದ ॥ –ತತ್ವಸಾರ

ಹೀಗೆ ಉಂಡರೂ ದಕ್ಕಿಸಿಕೊಳ್ಳುತ್ತಾನೆ. ಅರಗಿಸಿಕೊಳ್ಳುತ್ತಾನೆ.

ಜಾಠರಾಗ್ನಿ ತೀಕ್ಷ್ಣ ಮಂದ, ಸಮ, ವಿಷಮ ಎಂದು ನಾಲ್ಕು ವಿಧ. ಎಷ್ಟು ಉಂಡರೂ ಬೇಕೆನ್ನುವುದು ತೀಕ್ಷ್ಣ ಅಗ್ನಿ. ಆಹಾರ ಸಿಗದಿದ್ದಾಗ ಅದು ಪಿತ್ತ ವಿಕಾರ ಉಂಟುಮಾಡುತ್ತದೆ. ಸ್ವಲ್ಪ ಉಂಡರೂ ಅರಗಿಸಿಕೊಳ್ಳದ ಅಗ್ನಿ ಮಂದಾಗ್ನಿ. ಅದು

ಆಹಾರ ಸ್ವಲ್ಪ ಅಧಿಕವಾದರೂ ಕಫವಿಕಾರ ಉಂಟುಮಾಡುತ್ತದೆ. ಆಹಾರಸೇವನೆ ಸರಿಯಾಗಿದ್ದರೆ, ಸರಿಯಾಗಿರುತ್ತದೆ, ಹೆಚ್ಚು ಕಡಿಮೆಯಾದರೆ ಕೆಡುತ್ತದೆ– ಇಂಥ ಅಗ್ನಿ ಸಮ ಎನಿಸುತ್ತದೆ. ಆಹಾರ ಸರಿ ಇದ್ದರೂ ಕೆಲವೊಮ್ಮೆ ಕೆಡುತ್ತ, ಆಹಾರ ಸರಿ ಇಲ್ಲದಾಗಲೂ ಕೆಲವೊಮ್ಮೆ ಸರಿಯಾಗೇ ಇರುವ ಅಗ್ನಿ ವಿಷಮಾಗ್ನಿ. ಇದು ವಾತವಿಕಾರ ಉಂಟುಮಾಡುತ್ತದೆ. ಶ್ರೀಹರಿಯ ಜಾಠರಾಗ್ನಿ ಇವೆಲ್ಲಕ್ಕಿಂತ ವಿಲಕ್ಷಣ. ಅದು ಎಂದೂ ಕೆಡುವುದಿಲ್ಲ. ವಾತಾದಿ ವಿಕಾರ ಉಂಟುಮಾಡುವುದಿಲ್ಲ. ಏಕೆಂದರೆ ಆತನಿಗೆ ಅಜೀರ್ತಿ ಇಲ್ಲ, ಬಲ್ಲ ವೈದ್ಯರನ್ನು ಕೇಳಿ. ಅವರು ಹೇಳುತ್ತಾರೆ–

'ರೋಗಾಃ ಸರ್ವೇऽಪಿ ಮಂದೇऽಗ್ನೌ'

ಅಗ್ನಿ ಮಂದವಾದಾಗಲೆ ಎಲ್ಲ ರೋಗಗಳೂ ಉಂಟಾಗುತ್ತವೆ.

'ಪ್ರಾಯೇಣಾಹಾರವೈಷಮ್ಯಾದ್ ಅಜೀರ್ಣಂ ಜಾಯತೇ ನೃಣಾಂ ।
ತನ್ಮೂಲೋ ರೋಗಸಂಘಾತಃ ತದ್ವಿನಾಶಾತ್ ವಿನಶ್ಯತಿ ॥'

'ಆಹಾರ ವೈಷಮ್ಯದಿಂದಲೆ ಹೆಚ್ಚಾಗಿ ಅಜೀರ್ಣ ಉಂಟಾಗುತ್ತದೆ. ತನ್ಮೂಲಕ ಎಲ್ಲ ರೋಗಗಳೂ ಉಂಟಾಗುತ್ತವೆ. ಅಜೀರ್ತಿ ಪರಿಹಾರವಾದರೆ ಅವೂ ಪರಿಹಾರವಾಗುತ್ತವೆ, ರೋಗಕ್ಕೆ ಇನ್ನೊಂದು ಹೆಸರೇ 'ಆಮಯ'. ಆಮವೆಂದರೆ ಪಕ್ವವಲ್ಲದುದು, ಜಠರದಲ್ಲಿ ಅಗ್ನಿಮಾಂದ್ಯದಿಂದಾಗಿ ಪಚನವಾಗದಿರುವ ಆಹಾರ, ಅದರಿಂದಾಗಿಯೆ ಎಲ್ಲ ರೋಗಗಳುಂಟಾಗುವುದರಿಂದ ಆಮಯ ಎಂದರೆ ರೋಗ.

'ಅಶಿತ ಪೀತ ಲೀಢ ಖಾದಿತ ಪ್ರಭವಾಶ್ಚಾಸ್ಮಿನ್
ಶರೀರೇ ವ್ಯಾಧಯೋ ಭವಂತಿ'
'ಬಲಮಾರೋಗ್ಯಮಾಯುಶ್ಚ ಪ್ರಾಣಶ್ಚಾಗ್ನೌ ಪ್ರತಿಷ್ಠಿತಾಃ'

ಎಂದು ಮುಂತಾಗಿ ಆಹಾರಸೇವನೆಯ ಕ್ರಮ ಹಾಗೂ ಜಾಠರಾಗ್ನಿಬಲಗಳನ್ನು ಮನುಷ್ಯನ ಆರೋಗ್ಯ ಅವಲಂಬಿಸಿರುತ್ತದೆ ಎನ್ನುತ್ತದೆ ಚರಕಸಂಹಿತೆ. ಪಥ್ಯ ಅಪಥ್ಯ ವಿಚಾರ ಬೇಕೆನ್ನುತ್ತದೆ, ಗುರು ಲಘು ವಿಚಾರವೂ ಬೇಕೆನ್ನುತ್ತದೆ. ಆದರೆ

'ಗುರುಲಾಘವಚಿಂತೇಯಂ ಪ್ರಾಯೇಣಾಲ್ಪಬಲಾನ್ ಪ್ರತಿ'

ಅಶಕ್ತರಿಗೇ ಈ ಎಲ್ಲ ವಿಚಾರಗಳು ಎನ್ನುವುದನ್ನು ಮರೆಯಕೂಡದೆಂದೂ ಹೇಳುತ್ತದೆ. ಎಲ್ಲ ಜಗವನುಂಡು ದಕ್ಕಿಸಿಕೊಂಡವಗೆ ಪಥ್ಯ ಅಪಥ್ಯ ಗುರು ಲಘು ವಿಚಾರವೆ ಅರ್ಥವಿಲ್ಲದುದು, ಆದ್ದರಿಂದ ಶ್ರೀಹರಿ ಅಜೀರ್ತಿಯಿಂದ ಬಳಲುವುದಿಲ್ಲ, ರೋಗಗಳಿಗೆ ತುತ್ತಾಗುವುದಿಲ್ಲ.

'ಸಂತಿ ಹ್ಯಾಹಾರಾದನ್ಯಾ ಅಪಿ ರೋಗ ಪ್ರಕೃತಯಃ'

'ಆಹಾರಕ್ಕಿಂತ ಬೇರೆ ಕಾರಣಗಳೂ ರೋಗಕ್ಕೆ ಉಂಟು' ಎನ್ನುತ್ತ ಪ್ರಾಚೀನ ಕರ್ಮ, ಕಾಲ ವಿಪರ್ಯಯ, ಅಸಾತ್ಮ್ಯ ಶಬ್ದಾದಿಸೇವನ, ಆಹಾರವಿಹಾರಗಳಲ್ಲಿ ತೋರುವ ಸ್ವಚ್ಛಂದ ವರ್ತನೆ– ಇದನ್ನು ಪ್ರಜ್ಞಾಪರಾಧ ಎಂದು ಕರೆಯಲಾಗಿದೆ– ಇವೆಲ್ಲ ರೋಗಕಾರಣಗಳಾಗುತ್ತವೆ ಎಂದು ಚರಕಸಂಹಿತೆಯಲ್ಲಿ ಹೇಳಿದೆ. ಆದರೆ ವಾತಾದಿ ಪ್ರಕೋಪ ಉಂಟುಮಾಡಿ ಪ್ರಕುಪಿತವಾದ ವಾತಾದಿಗಳು ಆಮಾಶಯವನ್ನು ಪ್ರವೇಶಿಸಿ ಅಗ್ನಿಯನ್ನು ಕೆಡಿಸಿ ಅಜೀರ್ಣಿಯ ಮೂಲಕವೇ ರೋಗಗಳನ್ನು ಉಂಟುಮಾಡುವವುಗಳು ಮೇಲೆ ಹೇಳಿದ ಎಲ್ಲ ರೋಗಕಾರಣಗಳು ಎಂಬುದನ್ನು ಮರೆಯಬಾರದು. ಶ್ರೀಹರಿಗೆ ರೋಗವನೀವ ವಾತ ಪಿತ್ತ ಕಫಗಳಿಲ್ಲವೆಂದು ಹಿಂದೆಯೇ ಹೇಳಿದೆ ಆದ್ದರಿಂದ ಎಲ್ಲ ಜಗವ ನುಂಗಿದರೂ ದಕ್ಕಿಸಿಕೊಳ್ಳುತ್ತಾನೆ.

ಇದು ನರರಿಗೂ ನಾರಾಯಣನಿಗೂ ಇರುವ ವ್ಯತ್ಯಾಸ –

ಒಂದೊಂದು ನಿಮಿಷದಲಿ ಅಂದದಲುಂಡು ತೇಗಿ
ಎಂದೆಂದು ನಂದಿಪ ನಮ್ಮ ಮುಕುಂದನೆತ್ತ?
ಒಂದಿಷ್ಟು ದುಃಖದಲಿರೆ ಕಾಲ ಸುಡಿಸಿ ಬಲು
ದಂದುಗವನುಂಬ ಜೀವವೃಂದವಿದೆತ್ತ? – ತತ್ವಸಾರ

— ೩೯ —

**ಇಂಥ ಮೂರುತಿಯ ಒಳಕೊಂಬ ನರಕ ಬಹು**
**ಭ್ರಾಂತ ನೀನೆಲ್ಲಿಂದ ತೋರುವೆಲೊ ।**
**ಸಂತೆಯ ಮರುಳ ಹೋಗೆಲೊ ನಿನ್ನ ಮಾತ**
**ಸಂತರು ಕೇಳಿ ಸೊಗಸರು ॥**

"ಎಲೋ, ಬಹುಭ್ರಾಂತಿ ಹೊಂದಿರುವ ಪ್ರತಿವಾದಿಯೆ, ಶ್ರೀಹರಿಯ ಇಂಥ ಶರೀರವನ್ನೂ ತನ್ನೊಳಗೆ ಸೇರಿಸಿಟ್ಟುಕೊಳ್ಳುವ ನರಕವನ್ನು ನೀನು ಎಲ್ಲಿಂದ ತೋರಿಸುವಿ ಹೇಳು ಎಲೋ ಸಂತೆಯ ಹುಚ್ಚನೆ, ಹೋಗು ನಿನ್ನ ಮಾತನ್ನು ಸಜ್ಜನರು ಕೇಳಿ ಆನಂದ ಪಡಲಾರರು".

ಮಹಾಲಕ್ಷ್ಮಿ ಹಿಂದಿನ ಅನೇಕ ನುಡಿಗಳಲ್ಲಿ ವರ್ಣಿಸಿರುವ ಶ್ರೀಹರಿಯ ಶರೀರವನ್ನು 'ಇಂಥ ಮೂರುತಿ' ಎಂದು ನಿರ್ದೇಶಿಸಿ, ಅದನ್ನು ತನ್ನೊಳಗೆ ಇಟ್ಟುಕೊಳ್ಳುವಂಥ ನರಕ ಯಾವುದೆಂಬುದನ್ನು ತೋರಿಸೆಂದು ಪ್ರತಿವಾದಿಗೆ ಅವನ ಸತ್ವಪರೀಕ್ಷೆಯ ಆಹ್ವಾನ ನೀಡುತ್ತಿದ್ದಾಳೆ.

ಹಿಂದೆ ೩೧ ನೇ ನುಡಿಯಲ್ಲಿ 'ಹಸಿವು ತೃಷೆ ಜರೆ ಮರಣ ರೋಗ ರುಜಿನಗಳೆಂಬ ಅಸುರ ಪಿಶಾಚಿಗಳ ಭಯವೆಂಬ ವ್ಯಸನ ತನ್ನ ಭಕ್ತರಿಗೇ ಬರಬಾರದೆಂದು ಆಜ್ಞಾ ಮಾತ್ರದಿಂದ ಪರಿಹರಿಸಬಲ್ಲ ಸರ್ವಶಕ್ತ ಶ್ರೀಹರಿ' ಎನ್ನಲಾಗಿದೆ. ಅವನ ಶಕ್ತಿಯನ್ನೂ ಮೀರಿಸಿ ಅವನ ಶರೀರವನ್ನು ತನ್ನೊಳಗೆ ಹಿಡಿದಿಟ್ಟುಕೊಳ್ಳುವಷ್ಟು ಭದ್ರವಾದ ನರಕ ಎಂಬುದು ಒಂದು ಉಂಟೇ ? ತೋರು, ಎಲ್ಲಿಂದ ತೋರಿಸುವಿ, ಹೇಳು. ಯಾರ ಆಜ್ಞಾಮಾತ್ರದಿಂದ, ಭಕ್ತ ಆಂಜನೇಯನ ಬಾಲದ ಬೆಂಕಿ ಲಂಕೆಯನ್ನೇ ಸುಟ್ಟಿತು ಹೊರತು ಅವನಿಗೇನೂ ಮಾಡದೆ ಇದ್ದಿತೋ, ಹೀಗೆ ದುಃಖಕ್ಕೀಡಾದವರೆಲ್ಲರ ಮೇಲೂ ಅನುಗ್ರಹ ಮಾಡಿ ದುಃಖಪರಿಹಾರ ಮಾಡುವ ಶಕ್ತಿ ಯಾರಲ್ಲಿ ಪೂರ್ಣವಾಗಿದೆಯೋ, ಅಂಥ ಶ್ರೀಹರಿ, ಧೂರ್ತರಾದ ಪ್ರತಿವಾದಿಗಳು ಹೇಳುತ್ತಾರೆ ಎಂಬ ಒಂದೇ ಕಾರಣದಿಂದ, ನರಕ ದುಃಖಕ್ಕೀಡಾಗುವನೆಂದು ನಂಬಲು ಸಾಧ್ಯವಿದೆಯೇ ? ಎನ್ನುತ್ತಾಳೆ ಮಹಾಲಕ್ಷ್ಮಿ

ಇದನ್ನು ವಾದಿರಾಜರು ಕಲ್ಪಲತೆಯಲ್ಲಿ ಹೀಗೆ ಹೇಳಿದ್ದಾರೆ –

ಅಚ್ಛ ಸ್ವಪುಚ್ಛ ಪಿಚ್ಛರಿತ ದಾಹ ಚ್ಛವಿಃ ಕಪಿರಪಿ<br>
ಯಸ್ಯ ಭಜಕೋ ನಾಲಸ್ಯಮಭಜತ, ಪರಪುರಮೇವಾದಹಚ್ಚ<br>
ಸ ಕಥಂ ದಹ್ಯೇತ, ಪ್ರತ್ಯುತ ತ್ವಾಮೇವ ದಹೇತ್ ।<br>
ಆರ್ತಾನುಗ್ರಹಕರ್ತಾ ನ ಕಥಂ ಧೂರ್ತೋಕ್ತವಾರ್ತಯಾರ್ತಃ ಸ್ಯಾತ್ ॥

೩೩ ನೇ ನುಡಿಯಲ್ಲಿ 'ಬೊಮ್ಮನಾಲಯ'ವೆನಿಸಿದ ಬ್ರಹ್ಮಾಂಡದೊಳಗೆ ಹೊರಗೆ ಎಲ್ಲೆಲ್ಲೂ ವ್ಯಾಪಿಸಿದವ ಶ್ರೀಹರಿ ಎನ್ನಲಾಗಿದೆ. ನರಕಲೋಕದೊಳಗೂ ಆತ ಅಸಂಗನಾಗಿ ಮೊದಲೇ ಇದ್ದವನೆಂದಾಯಿತು. ಇಂಥ ಮೂರುತಿ ತಿರುಗಿ ನರಕದೊಳಗೆ ಪ್ರವೇಶಿಸುವುದೆಂದರೇನು ? ತಿರುಗಿ ಆತನನ್ನು ತನ್ನೊಳಗೆ ಸೇರಿಸಿಟ್ಟುಕೊಳ್ಳಬಲ್ಲ ನರಕ ಒಂದನ್ನು ನೀನೆಲ್ಲಿಂದ ತೋರಿಸುವಿ ?

ಇದನ್ನೂ ವಾದಿರಾಜರು ಕಲ್ಪಲತೆಯಲ್ಲಿ ಹೀಗೆ ಹೇಳಿದ್ದಾರೆ–

ವ್ಯಾಪ್ತತಯಾ ನರಕಪ್ರದೇಶೇಽಪ್ಯಸಂಗತಯಾ<br>
ಪ್ರಾಗಪಿ ಸಂಗತಸ್ಯ ಕುತಃ ಪುನಃ ಪ್ರವೇಶಃ ?

೩೪ ನೇ ನುಡಿಯಲ್ಲಿ 'ಆಗ ಭಕ್ಷ್ಯಭೋಜ್ಯವಿತ್ತು ಪೂಜಿಸುವ' ಅಪ್ರತಿಮ ಯೋಗಸಾಮರ್ಥ್ಯ ಉಳ್ಳವ ಶ್ರೀಹರಿ ಎಂದಿದೆ. ಆತ ಜಗದ್ವ್ಯಾಪ್ತನಾಗಿದ್ದು ಜಗತ್ತಿನ ಎಲ್ಲ ಬೆಂಕಿಯ ಜ್ವಾಲೆಗಳನ್ನೂ ಅಪ್ಪಿಕೊಂಡು ಯೋಗಬಲದಿಂದಲೇ ಸುಡದೆ ಇದ್ದಾನೆ. ಎಲ್ಲ ಬೆಂಕಿಗಳ ನಡುವೆ ನರಕದ ಬೆಂಕಿಯನ್ನೂ ಯೋಗಬಲದಿಂದ

ಸ್ತಂಭಿಸಿ ಮೊದಲೇ ಆಲಿಂಗಿಸಿಕೊಂಡಿರುವ ಶ್ರೀಹರಿಯ ಶರೀರವನ್ನು ತನ್ನೊಳಗೆ ಇಟ್ಟುಕೊಂಡು ಸುಡುವ ನರಕದ ಅಗ್ನಿಕುಂಡ ಒಂದು ಉಂಟೆ ?

ಇದನ್ನೂ ವಾದಿರಾಜರು ಕಲ್ಪಲತೆಯಲ್ಲಿ ಹೀಗೆ ಹೇಳಿದ್ದಾರೆ –

ವ್ಯಾಪ್ತತಯಾ ಸದಾ ಸರ್ವತ್ರ ವರ್ತಮಾನಸ್ಯ ವಿಷ್ಣೋಃ
ಅತ ಏವ ಜಾಜ್ವಲ್ಯಮಾನದವದಹನಪ್ರಾಯಾನಲಜ್ವಾಲಯಾ
ಹ್ಯನಲಸಸ್ಯ ಕಥಂ ನ ಪ್ರಾಕ್ ಸ್ತಂಭಿತಕುಂಭೀಪಾಕಾನಲಸ್ತಂಭನಂ ?

೩೫ ನೇ ನುಡಿಯಲ್ಲಿ 'ಎಲ್ಲ ಜಗವ ನುಂಗಿ'ದ ಮೂರ್ತಿಯನ್ನು ಕಂಡಿದ್ದೇವೆ. ಇಪ್ಪತ್ತೆಂಟು ಕೋಟಿ ಸಂಖ್ಯೆಯಲ್ಲಿರುವ ಎಲ್ಲ ನರಕಗಳಿಂದ ಸಹಿತವಾಗಿ ಹದಿನಾಲ್ಕು ಲೋಕಗಳಿಂದ ಕೂಡಿದ ಇಡೀ ಬ್ರಹ್ಮಾಂಡವನ್ನೇ ಕವಳದಂತೆ ನುಂಗಲು ಬಾಯಿ ತೆರೆಯುವ ಶ್ರೀಹರಿಯ ಆ ಬೃಹಚ್ಛರೀರದ ಗಾತ್ರ ಎಷ್ಟಿರಬಹುದು ? ಇಂಥ ಮೂರುತಿಯನ್ನು ತನ್ನೊಳಗೆ ಇಟ್ಟುಕೊಳ್ಳಬಲ್ಲ ನರಕಕೂಪ ಯಾವುದು ? ತೋರಿಸುವಿಯ ? ಎಲ್ಲಿಂದ ತೋರಿಸುವಿ, ಹೇಳು.

ಇದನ್ನೂ ವಾದಿರಾಜರು ಕಲ್ಪಲತೆಯಲ್ಲಿ ಹೀಗೆ ಹೇಳಿದ್ದಾರೆ –

ಜಗದ್ವ್ಯಾಪ್ತ ಬೃಹಚ್ಛರಿರಸ್ಯ ಕಥಮಲ್ಪಪರಿಮಾಣ
ನಾರಕ ಕೂಪೇಷು ಪ್ರವೇಶಃ ?

ಶ್ರೀಹರಿಯ ಆ ವಿರಾಡ್ರೂಪವನ್ನು ಸಣ್ಣ ನರಕಕೂಪ ಒಂದು ತನ್ನಲ್ಲಿ ತುಂಬಿಕೊಳ್ಳದು, ನಿಜ. ಆದರೂ ಅರ್ಜುನನ ರಥದ ಮುಂಭಾಗದಲ್ಲಿ ಕುಳಿತ ಕಪಟನಾಟಕ ಸೂತ್ರಧಾರಿಯಾದ ಶರೀರವನ್ನು ಏಕೆ ತುಂಬಿಕೊಳ್ಳಕೂಡದು ? ಎಂದರೆ, ಇದಕ್ಕೆ ೩೭ನೇ ನುಡಿಯಲ್ಲಿಯೇ ಉತ್ತರ ಬಂದಿದೆ – 'ಏಕತ್ರ ನಿರ್ಣೀತಃ ಶಾಸ್ತ್ರಾರ್ಥಃ ಪರತ್ರಾಪಿ ತಥಾ' ಎಂಬ ನ್ಯಾಯದಂತೆ ಇದು. ಆ ವಿರಾಡ್ರೂಪ ನರಕಕೂಪವನ್ನು ಪ್ರವೇಶಿಸಲಾರದು ಎನ್ನುವುದಾದರೆ ಪಾರ್ಥಸಾರಥಿ ರೂಪವೂ ಅಷ್ಟೇ ಏಕೆಂದರೆ ಶ್ರೀಕೃಷ್ಣನು ಒಬ್ಬನೆ. ವಿರಾಡ್ರೂಪಿ ಬೇರಲ್ಲ. ಪಾರ್ಥಸಾರಥಿ ಬೇರೆ ಅಲ್ಲ. ಅವನು ಬೇರೆ ಅಲ್ಲ. ಅವನ ಶರೀರ ಬೇರೆ ಅಲ್ಲ.'

ಆದ್ದರಿಂದ ಎಲೋ, ಪ್ರತಿವಾದಿಯೆ, ನೀನೊಬ್ಬ ಸಂತೆಯ ಹುಚ್ಚ. ಸಂತೆಯಲ್ಲಿ ನೆರೆದ ಜನರಿಗೆ ಮಾತ್ರ ಅಗ್ಗದ, ಕೀಳಾದ, ಮನೋರಂಜನೆ ಒದಗಿಸಬಲ್ಲ ಮಾತು ನಿನ್ನದು. ವಿದ್ವಾಂಸರ ಗೋಷ್ಠಿಯಲ್ಲಿ ಕುಳಿತ ಸಜ್ಜನರಿಗೆ ವಾದಕೌಶಲದ ಪ್ರದರ್ಶನ ನೀಡಿ ಆನಂದ ಉಂಟುಮಾಡಲಾರೆ. ಮತ ದುರ್ಬಲವಾದರೇನಂತೆ, ಮತಿಯಾದರೂ ಗಟ್ಟಿ ಇರಬೇಡವೇ ? ಗಟ್ಟಿ ಮಾತುಗಳನಾಡದೆ ಬರಿಯ ಟೊಳ್ಳು ಮಾತಾಡಿದರೆ ಅಂಥ ವಾದದಲ್ಲಿ ಏನು

ಸೋಗಸಿದೆ ? ಆದ್ದರಿಂದ ಹೋಗು ಆ ಸಂತೆಗೇ ಹೋಗು'' ಎನ್ನುತ್ತಿದ್ದಾಳೆ ಮಹಾಲಕ್ಷ್ಮಿ.

— ೪೦ —

**ಶ್ರೀನಾರಾಯಣರ ಜನನಿ ಜನಕರ**
**ನಾನೆಂಬ ವಾದಿ ನುಡಿಯೆಲೋ ।**
**ಜಾಣರದರಿಂದರಿಯ ಮೂಲರೂಪವ ತೋರಿ**
**ಶ್ರೀನಾರಸಿಂಹನ ಅವತಾರ ॥**

ಈ ಪದ್ಯದ ಭಾವಾನುವಾದ ಸುಲಭವಿಲ್ಲ. 'ಜಾಣರದರಿಂದರಿಯು' ಎಂಬಲ್ಲಿ 'ಜಾಣರು ಅರಿಯು' ಎಂಬ ಅಂಶ ವ್ಯಾಕರಣ ವಿರುದ್ಧ. 'ಜಾಣರದರಿಂದ್ಧರಿಯು' ಎಂದು ಪಾಠ ಕಲ್ಪಿಸಿ ಕೊಂಡರೂ 'ಜಾಣರು ಹರಿಯು ಮೂಲ ರೂಪವ ತೋರಿ' ಏನು ಮಾಡಿದರು ? 'ಶ್ರೀನಾರಸಿಂಹನ ಅವತಾರ' ಏನಾಯಿತು ? ವಾಕ್ಯಗಳು ಅಪೂರ್ಣ. 'ಜಾಣರದರಿಂದಯುರ್' ಪಾಠ ಇಟ್ಟುಕೊಂಡರೆ 'ಜಾಣರು ಅರಿಯುರು' ಎಂದರೇನು ? ಇನ್ನಾರು ಅರಿಯುಬಲ್ಲರು ? 'ಜಾಣರು ಮೂಲರೂಪವನ್ನು ತೋರಿ ಶ್ರೀನಾರಸಿಂಹನ ಅವತಾರವನ್ನು ಅರಿಯುರು' ಎಂದರೂ ಅರ್ಥವಿಲ್ಲ.

ಈ ಕಾರಣಗಳಿಂದ ಇರಬಹುದು ಶ್ರೀಹರಿದಾಸರತ್ನಂ ಗೋಪಾಲದಾಸರ ಪ್ರಕಾಶನದಲ್ಲಿ 'ಜಾಣರದರಿಂದರಿಯು', 'ಜಾಣರೆಂಬುದನರಿಯು' ಎಂದಾಗಿದೆ. ಹೀಗೆ ವ್ಯಾಖ್ಯಾನವೂ ಬಂದಿದೆ – 'ಎಲೋ ಜಗತ್ತಿನ ಮಾತಾಪಿತೃಗಳಾದ ರಮಾನಾರಾಯಣರನ್ನು ನಾನೇ ಎಂದೆನ್ನುವ ಅದ್ವೈತವಾದಿಯೆ, ನೀನು ನುಡಿ, ಜ್ಞಾನಿಗಳಿಗೆ ಉತ್ತರವನ್ನು ಹೇಳು. ಜಾಣರು ಪರಬ್ರಹ್ಮನ ಮೂಲರೂಪವನ್ನು ನಿರ್ದೇಶಿಸಿ ಆ ರೂಪದಿಂದ ಶ್ರೀನರಸಿಂಹನ ಅವತಾರವಾಯಿತು ಎಂದು ಹೇಳುವುದನ್ನು ನೀನು ಅರಿಯೆಯು ? ನೃಸಿಂಹಾದಿ ಅವತಾರಗಳುಳ್ಳವನು ಮೂಲರೂಪಿಯಾದ ನಾರಾಯಣನೆಂಬುದನ್ನು ತಿಳಿದಿರುವ ನೀನು ನಾನೆ ಆ ನಾರಾಯಣನೆನ್ನುವಿ. ಈ ಅವತಾರಗಳೆಲ್ಲವೂ ನಿನ್ನವೆ ಏನು ? ಉತ್ತರ ಹೇಳು'.

ಆದರೆ ಇಲ್ಲಿ ವಾದಿರಾಜರು ವಾದಿನಿಗ್ರಹಕ್ಕೆ ಬಳಸುವ ಯುಕ್ತಿ ಎಷ್ಟು ಶಿಥಿಲವಾಗಿದೆ ಎಂದು ಆಶ್ಚರ್ಯವಾಗುತ್ತದೆ. 'ನಾನೆ ನಾರಾಯಣ' ಎನ್ನುವ ವಾದಿ, 'ಈ ಅವತಾರಗಳೆಲ್ಲವೂ ನಿನ್ನವೆ ಏನು' ? ಎಂಬ ಪ್ರಶ್ನೆಗೆ 'ಹೌದು' ಎನ್ನಲಾರನೇ ? ಜಾಣರು ಮೂಲರೂಪವನ್ನು ನಿರ್ದೇಶಿಸಿ 'ಶ್ರೀನಾರಸಿಂಹನ ಅವತಾರ' ಎಂದು ಹೇಳಿದರೆ ಮೂಲರೂಪಕ್ಕೆ ಅವತಾರ ರೂಪದಿಂದ ಐಕ್ಯ ಹೇಳಿದಂತಾದೀತೆ ಹೊರತು 'ಮೂಲರೂಪದಿಂದ ಅವತಾರ ಹೊರಟಿತು' ಎಂದಾಗಲಾರದು. 'ಈ

ಅವತಾರಗಳೆಲ್ಲವೂ ನಿನ್ನವೆ ಏನು' ಎಂಬ ಮುಖ್ಯವಾದ ಪ್ರಶ್ನೆಯ ಪದ್ಯದಲ್ಲಿ ಕಾಣುವುದಿಲ್ಲ

ಒಟ್ಟಿನಲ್ಲಿ ಈ ಪದ್ಯ ಒಗಟಿನಂತಿದೆ. ಆದರೂ ಹೀಗೆ ವ್ಯಾಖ್ಯಾನಿಸೋಣ –

ಎಲೋ, ನಾನೆಂಬ ವಾದಿಯೇ! ಅಹಂಕಾರಿಯಾದ ವಾದಿಯೇ! ಶ್ರೀ ನಾರಾಯಣರ– ಬಹುವಚನ ಗೌರವದ್ದು– ಶ್ರೀಹರಿಯ, ಜನನಿ ಜನಕರನ್ನು ನುಡಿ ಯಾರೆಂಬುದನ್ನು ಹೇಳು ಬ್ರಹ್ಮರುದ್ರಾದಿಗಳಿಗೆ ಜನನಿ ಜನಕರು ಪುರಾಣದಲ್ಲಿ ಕಂಡುಬರುತ್ತಾರೆ. ಶ್ರೀಹರಿಗೆ ಇಲ್ಲ. ಆತ 'ಪರದೇಶಿ'! ಜಾಣರ್! ಜಾಣರೆ! ಆದರಿಂದ ಮೂಲರೂಪವ ಅರಿಯು. ಈ ವಾದಿ, ಕೇವಲ ರಾಮ ಕೃಷ್ಣ ಮುಂತಾದ ಅವತಾರಗಳ ಬಗ್ಗೆಯೇ ದಶರಥ ವಸುದೇವ ಮುಂತಾದ ತಂದೆ ತಾಯಿಗಳನ್ನು ತೋರಿಸುತ್ತಾನೆ, ನೀವು ಆತಂಕ ಪಡಬೇಡಿ, ಮೂಲರೂಪಕ್ಕೆ ತಂದೆ ತಾಯಿಗಳು ಯಾರೆಂದು ಅವನನ್ನು ಕೇಳಿ. ಅವನೇನೂ ಹೇಳಲಾರ. ಇನ್ನು, ಶ್ರೀನಾರಸಿಂಹನ ಅವತಾರವನ್ನೂ ತೋರಿ, ಅವನಿಗೆ ತೋರಿಸಿ. ಈ ಅವತಾರದಲ್ಲಿ ತಂದೆತಾಯಿಗಳು ಯಾರೆಂದು ಕೇಳಿ. ಹೀಗೆ ಶ್ರೀ ಹರಿಗೆ ಮೂಲರೂಪದಲ್ಲಿ ತಂದೆತಾಯಿಗಳಿಲ್ಲ. ಅವತಾರಗಳಲ್ಲಿ ಇದ್ದಂತೆ ಕಂಡರೂ ಆವಶ್ಯಕವಲ್ಲ. ಏಕೆಂದರೆ ನರಸಿಂಹಾವತಾರದಲ್ಲಿ ಇಲ್ಲ ಆದ್ದರಿಂದ ಎಲ್ಲ ಅವತಾರಗಳೂ ಸ್ವಯಂ ವ್ಯಕ್ತವಾಗುತ್ತವೆ. ತೋರಿಕೆಗೆ ಮಾತ್ರ ತಂದೆ ತಾಯಿಗಳಷ್ಟೆ ವಸ್ತುತಃ ಜನನ ಮರಣರಹಿತ ಸರ್ವದೋಷ ವಿನಿರ್ಮುಕ್ತ ನಮ್ಮ ಶ್ರೀನಾರಾಯಣ.

ಮತ್ಸ್ಯಃ ಕೂರ್ಮೋ ವರಾಹೋ .. ಕಲ್ಕಿರಹಂ
ನೈವೇತೇ ಜಾಯಂತೇ ಮ್ರಿಯಂತೇ .....
ಸರ್ವ ಏವ ಹ್ಯೇತೇ ಪೂರ್ಣಾ ಅಜರಾ ಅಮೃತಾಃ ಪರಾನಂದಾಃ ।

'ಮತ್ಸ್ಯ ಕೂರ್ಮ ವರಾಹ....... ಕಲ್ಕಿ ಎಲ್ಲವೂ ನಾನೆ, ಈ ರೂಪಗಳು ಹುಟ್ಟುವುದಿಲ್ಲ ಸಾಯುವುದಿಲ್ಲ. ಇವೆಲ್ಲವೂ ಪೂರ್ಣ ಅಜರ ಅಮೃತ ಪರಮಾನಂದ ಸ್ವರೂಪಗಳು' ಎಂದು ಚತುರ್ವೇದಶಿಖಾ ಎಂಬ ಗ್ರಂಥದಲ್ಲಿ ಹೇಳಿದೆ

ಮೂಲರೂಪದಲ್ಲಿ ಬ್ರಹ್ಮಾದಿಗಳಿಗೆ ಜನನ ಮರಣಗಳಿವೆ. ಹರಿಗೆ ಇಲ್ಲ ಎನ್ನುವುದನ್ನು ವಾದಿರಾಜರು ಯುಕ್ತಿಮಲ್ಲಿಕೆಯಲ್ಲಿ ಹೀಗೆ ಹೇಳಿದ್ದಾರೆ –

ನಾಭಿಜನ್ಮಾ ವಿಧಿಸ್ತಸ್ಯ ಕ್ರೋಧಾಜ್ಜಾತಸ್ತ್ರಿಲೋಚನಃ ।
ನಾರಾಯಣೋ ಮೂಲರೂಪೀ ಜಾತಃ ಕಸ್ಮಾದ್ವಿಚಾರ್ಯತಾಂ ॥

'ಮೂಲರೂಪಿ ಬ್ರಹ್ಮ ನಾರಾಯಣನ ನಾಭಿಯಿಂದ ಹುಟ್ಟಿದ. ಮೂಲರೂಪಿ ಮುಕ್ಕಣ್ಣ ನಾರಾಯಣನ ಕ್ರೋಧದಿಂದ ಉದ್ಭವಿಸಿದ. ಮೂಲರೂಪಿ ನಾರಾಯಣ ಹುಟ್ಟಿದನೆ ? ಯಾರಿಂದ ? ವಿಚಾರಿಸಿ ನೋಡಿ'

ನರಸಿಂಹಾವತಾರದಲ್ಲಿ ತಂದೆ ತಾಯಿಗಳು ಯಾರು ಎಂಬ ಪ್ರಶ್ನೆಯನ್ನೂ ವಾದಿರಾಜರು ರುಕ್ಮಿಣೀಶ ವಿಜಯದಲ್ಲಿ ಹೀಗೆ ಕೇಳಿದ್ದಾರೆ –

ಯದಾ ನೃಸಿಂಹಾಕೃತಿರಾವಿರಾಸೀತ್
ಪದಾಹತಸ್ತಂಭವರಾದ್ಧಿ ಪೂರ್ವಂ ।
ತದಾ ನು ಕಾ ಸ್ತ್ರೀ ಸುಷುವೇ ಮುಕುಂದಂ
ಸ ಕಸ್ಯ ವೀರ್ಯಾದಜನಿಷ್ಟ ಕಾಯಃ ।

'ಕಾಲಿಂದ ಒದೆಯಲ್ಪಟ್ಟ ಕಂಬದಿಂದ, ಹಿಂದೆ ನೃಸಿಂಹರೂಪ ಆವಿರ್ಭವಿಸಿದಾಗ ಆ ಹರಿಯನ್ನು ಯಾವ ಹೆಂಗಸು ಹೆತ್ತಳು ? ಅವನ ಆ ದೇಹ ಯಾರ ವೀರ್ಯದಿಂದ ಹುಟ್ಟಿತು ?'

ಹೀಗೆ ವ್ಯಾಖ್ಯಾನ ಮಾಡಿದಾಗ ಇನ್ನು ಮುಂದಿನ ಪದ್ಯದಲ್ಲಿ (೪೩ ನೇ ನುಡಿ) 'ಕೂರ್ಮಾವತಾರದಲ್ಲಿ ಹರಿಗೆ ತಂದೆ ಯಾರು ? ಆದ್ದರಿಂದ ಅವನ ಎಲ್ಲ ಅವತಾರಗಳೂ ಸ್ವಯಂ ವ್ಯಕ್ತವಾದ ನಿತ್ಯರೂಪಗಳು ಎನ್ನುವುದೇ ಯುಕ್ತ' ಎಂದು ಹೇಳುವುದೂ ಸಂಗತವಾಗುತ್ತದೆ. ನರಸಿಂಹ ಕೂರ್ಮ ಈ ಎರಡು ಅವತಾರಗಳಿಗೂ ತಂದೆತಾಯಿಗಳಿಲ್ಲದಿರುವುದರಿಂದ ಹರಿಗೆ ಅವತಾರಗಳಲ್ಲಿ ತಂದೆ ತಾಯಿಗಳಿರುವ ಅವಶ್ಯಕತೆ ಇಲ್ಲವೆಂದಾಗುವುದರಿಂದ ಅವತಾರಗಳೆಲ್ಲ ನಿತ್ಯ ಎಂದು ಉಪಸಂಹಾರ ಮಾಡಲಾಗಿದೆ ಇದನ್ನು ವಾದಿರಾಜರು ಸ್ವಪ್ನಪದದಲ್ಲಿ ಹೀಗೆ ಹೇಳಿದ್ದಾರೆ –

ಮಂದ ಮಾನವ ! ಶ್ರೀನೃಸಿಂಹಗೆ
ತಂದೆ ಯಾವನು ? ತಾಯಿ ಯಾವಳು ?
ಮಂದರವ ಧರಿಸುವರೆ ಕೂರ್ಮನ ಪೆತ್ತವರು ಯಾರು ?
......ಇಂದಿರಾಪತಿ ಎನಿಪ ನಾ ನಿತ್ಯರೊಳು ನಿತ್ಯನಲ್ಲೆ ।

ಅದ್ವೈತವಾದದ ನಿರಾಕರಣೆಯನ್ನೂ ಈ ಪದ್ಯದಲ್ಲಿ ಕಾಣಬಹುದು –

ಜನನಿ ಜನಕರಾದ ಶ್ರೀನಾರಾಯಣರನ್ನು, ರಮಾ ನಾರಾಯಣರನ್ನು ನಾನು ಎಂದು ಹೇಳುವ ಅದ್ವೈತವಾದಿಯೆ ! ನೀನು ನುಡಿ. ಅಥವಾ ಶ್ರೀನಾರಾಯಣರ

ಜನನೀಜನಕರನ್ನೂ ನಾನೆಂಬ ವಾದಿಯೆ ನುಡಿ ಎಂದರ್ಥ. ಶಂಕರಾಚಾರ್ಯರು ಹೇಳಿದ್ದಾರೆ–

ಹರಿರಹಮೊಸ್ಮಿ ಹರೋಽಹಂ
ವಿಧಿರಹಮೇವಾಸ್ಮಿ ಕಾರಣಂ ತೇಷಾಂ । –ಸ್ವಾತ್ಮನಿರೂಪಣ.

ಏಕೆಂದರೆ ಏಕಜೀವವಾದಲ್ಲಿ ಒಬ್ಬನೆ ಜೀವ ಸ್ವಾಪ್ನಪದಾರ್ಥಗಳಂತೆ ಹರಿಹರಾದಿ ಚೇತನರನ್ನು ಕಲ್ಪಿಸಿಕೊಳ್ಳುವುದರಿಂದ ಆತನೆ ಅವರಿಗೆ ಕಾರಣ. ಹೀಗೆ ಹೇಳುವ ವಾದಿಯೆ ನುಡಿ ಇದು ನಿನ್ನ ಸತ್ವ ಪರೀಕ್ಷೆ, ಏಕೆಂದರೆ ನೀನು ನುಡಿಯಲಾರೆ. ಶ್ರೀನಾರಾಯಣರು ಲೋಕಕ್ಕೆ ಜನನಿ ಜನಕರು. ನೀನು ಅವರ ಶಿಶು ಜನಕತ್ವ–ಜನ್ಯತ್ವಗಳು ವಿರುದ್ಧ ಧರ್ಮಗಳು ಇರುವಾಗ ಅಭೇದ ಹೇಗೆ ಸಾಧ್ಯ? ವಿರುದ್ಧ ಧರ್ಮಗಳೆಲ್ಲ ಮಿಥ್ಯಾ ಎಂದಾಗಬೇಕು ಜಗನ್ಮಿಥ್ಯಾತ್ವ ಹೇಳಬೇಕು. ಆಗ ಜಗತ್ತಿನಲ್ಲಿ ಸೇರಿದ ನಿನ್ನ ನಾಲಗೆಯು ಮಿಥ್ಯೆಯಾಗಬೇಕು. ನುಡಿವ ನಾಲಿಗೆ ಇಲ್ಲವೆನ್ನುತ್ತಿ, ನುಡಿಯುತ್ತಿ ಎಂದರೆ ನಾನು ಮೂಕನೆಂದು ನುಡಿದಂತೆಯೇ ಸರಿ. ಸ್ವಕ್ರಿಯಾ ವಿರೋಧ! ಆದ್ದರಿಂದ ನೀನು ನುಡಿಯಲಾರೆ. ತತ್ವಸಾರದಲ್ಲಿ ವಾದಿರಾಜರು ಹೇಳಿದ್ದಾರೆ –

ಎಲ್ಲ ಇಲ್ಲೆಂಬುವನ ನಾಲಿಗೆಯೆ ಇಲ್ಲವಾಯಿ
ತಲ್ಲ! ಇನ್ನೆಂತು ನಮ್ಮ ಕೂಡೆ ನುಡಿವ?

ನ್ಯಾಯಸುಧಾ ಜಿಜ್ಞಾಸಾಧಿಕರಣದ ಕಥಕತಾವಾದದಲ್ಲಿ ಈ ಬಗ್ಗೆ ವಿಸ್ತಾರವಾದ ನಿರೂಪಣೆ ಇದೆ.

ಆದ್ದರಿಂದ ಓ ಜಾಣರ್! ಜಾಣರೆ! ಈ ಅದ್ವೈತವಾದಿ ತನ್ನ ಪರತತ್ವದ ಮೂಲರೂಪವನ್ನು ಅರಿಯ. ಏಕೆಂದರೆ ನುಡಿಯುತ್ತ ತನ್ನ ನಾಲಗೆಯ ಅಸ್ತಿತ್ವ ವನ್ನು ತೋರಿಸಿ ಜಗನ್ಮಿಥ್ಯಾತ್ವವನ್ನು ಹೇಳಲಾರ. ತನ್ನಲ್ಲಿ ಜಗಜ್ಜನಕನಾದ ನಾರಾಯಣನ ಐಕ್ಯ ಸುಳ್ಳಾಗುತ್ತದೆ ಅಖಂಡವಾದ ಚೈತನ್ಯದ ಮೂಲರೂಪ ಮೊಲದ ಕೋಡಿನಂತಾಗಿ ಅವನೆ ಹೇಳುವಂತೆ ಮನೋವಾಚಾಮಗೋಚರವಾಗಿ ಅರಿಯಲಾಗದುದೆಂದೆ ಆಗುತ್ತದೆ, ಎಂದ ಮೇಲೆ, ಅವನೇನು ನುಡಿಯುಬಲ್ಲ?

ಆದರೂ ನರಸಿಂಹಾವತಾರ ಅದ್ವೈತ ತತ್ವದ ಸಂಕೇತವೆನ್ನುವುದುಂಟು

ಯಃ ಪಾಂಚಾನನ ಪಾಂಚಜನ್ಯವಪುಷಾ
ವ್ಯಾದಿಷ್ಟ ವಿಶ್ವಾತ್ಮತಃ...... ।

– ತತ್ವದೀಪಿಕಾ

ಸಿಂಹದ ಆಕೃತಿಯೂ ಇದೆ. ಅದಕ್ಕೆ ವಿರುದ್ಧವಾದ ನರಾಕೃತಿಯೂ ಇದೆ. ಇಂಥ ನರಸಿಂಹಾಕೃತಿ, 'ಪ್ರಪಂಚದ ಎಲ್ಲ ವಿರುದ್ಧ ಆಕೃತಿಗಳೂ ಒಬ್ಬನೆ ವಿಶ್ವಾತ್ಮ ಅಖಂಡ ಬ್ರಹ್ಮನದ್ದು' ಎನ್ನುತ್ತದೆ' – ಹೀಗೆ ವಾದಿ ನುಡಿದರೆ, ಆಗ ಜಾಣರೆ! ನೀವು ಅವನಿಗೆ ಆ ನರಸಿಂಹಾವತಾರವನ್ನೇ ತೋರಿ. ಅದರ ರಹಸ್ಯವನ್ನು ಹೇಳಿ ಬಿಡಿ –

ವಿರುದ್ಧ ಧರ್ಮ ಧರ್ಮಿತ್ವಂ ಸರ್ವಾಂತರ್ಯಾಮಿತಾಂ ತಥಾ ।
ನರಸಿಂಹೋಽದ್ಭುತಃ ಸ್ತಂಭಸಂಭೂತಃ ಸ್ಪಷ್ಟಯತ್ಯಯಂ ॥

'ಅಚಿಂತ್ಯ ಶಕ್ತಿಯಿಂದ ಅಣೋರಣೀಯನೂ ಮಹತೋ ಮಹೀಯನೂ ಆಗುವಂತೆ ಎಲ್ಲ ವಿರುದ್ಧ ಧರ್ಮಗಳನ್ನೂ ತಾನು ಹೊಂದಿರುವೆನೆಂದೂ, ತಾನು ಸರ್ವಾಂತರ್ಯಾಮಿ ಎಂದೂ ಸ್ತಂಭದಿಂದ ಆವಿರ್ಭೂತನಾದ ಈ ಅದ್ಭುತ ನರಸಿಂಹನು ಸ್ಪಷ್ಟಗೊಳಿಸುತ್ತಿದ್ದಾನೆ, ಎಂದು ವಾದಿರಾಜರು ತೀರ್ಥಪ್ರಬಂಧದಲ್ಲಿ ಹೇಳಿದ್ದಾರೆ. ಅಂದರೆ ಸಿಂಹದ ಆಕೃತಿ ಇರುವುದರಿಂದ ನರನಂತೂ ಅಲ್ಲ, ನರಾಕೃತಿ ಇರುವುದರಿಂದ ಸಿಂಹವೂ ಅಲ್ಲ. ವಿರುದ್ಧ ಉಭಯಾಕೃತಿ ಇರುವುದರಿಂದ ಇಡೀ ಪ್ರಪಂಚಕ್ಕಿಂತ ವಿಲಕ್ಷಣ ಆದ್ದರಿಂದ ವಿಶ್ವಾತ್ಮಕನಲ್ಲ ಶ್ರೀಹರಿ ಎನ್ನುತ್ತದೆ, ನರಸಿಂಹಾವತಾರ!

ಓ ಜಾಣರೆ, ನರಸಿಂಹಾವತಾರದ ಹಿನ್ನೆಲೆಯನ್ನೆ ವಾದಿಗೆ ತೋರಿ–

ನ ಭೂಮೌ ನಾಂಬರೇ ಮೃತ್ಯುರ್ನ ನರೈರ್ನ ಮೃಗೈರಪಿ ।

ಭೂಮಿಯಲ್ಲಾಗಲಿ, ಬಾನಿನಲ್ಲಾಗಲಿ, ನರನಿಂದಾಗಲಿ, ಮೃಗದಿಂದಾಗಲಿ ನನಗೆ ಮರಣ ಬರಕೂಡದೆಂದು ತಾನೆ ಹಿರಣ್ಯಕಶಿಪು ಬ್ರಹ್ಮನಿಂದ ವರ ಪಡೆದುದು? ಆದ್ದರಿಂದ ನರನೂ ಅಲ್ಲದ, ಮೃಗವೂ ಅಲ್ಲದವನಿಂದ ಮರಣ ಹೊರತು ನರನೂ ಮೃಗನೂ ಆದವನಿಂದ ಅಲ್ಲ. ಹಾಗಾದರೆ ನರಸಿಂಹ ವಿಶ್ವಾತ್ಮ ಹೇಗಾದಾನು?

ಓ ಜಾಣರೆ, ನರಸಿಂಹಾವತಾರದ ಕಾರ್ಯವೈಖರಿಯನ್ನೇ ವಾದಿಗೆ ತೋರಿ. ನರಸಿಂಹ ಪ್ರಹ್ಲಾದನನ್ನು ರಕ್ಷಿಸಿದ, ಹಿರಣ್ಯಕಶಿಪುವನ್ನು ಸಂಹರಿಸಿದ. ಇಲ್ಲಿ ಅದ್ವೈತವೆಲ್ಲಿದೆ?

ಓ ಜಾಣರೆ, ನರಸಿಂಹಾವತಾರದ ಪ್ರಾದುರ್ಭಾವವನ್ನೆ ವಾದಿಗೆ ತೋರಿ. ಸ್ತಂಭವೆ ನರಸಿಂಹನಾಗಿ ಕಾಣದೆ ಸ್ತಂಭದೊಳಗಿದ್ದ ಶ್ರೀಹರಿ ಸ್ತಂಭವನ್ನೊಡೆದು ಹೊರಗೆ ಬಂದ. ಇದು ಸರ್ವಾಂತರ್ಯಾಮಿತ್ವದ ಸಂಕೇತವಲ್ಲದೆ ಮತ್ತೇನು?

ಆದ್ದರಿಂದ ಪ್ರಪಂಚ ವಿಲಕ್ಷಣನಾದ ಸರ್ವಾಂತರ್ಯಾಮಿ ಶ್ರೀಹರಿ ಜನನ ಮರಣ ರಹಿತನಾಗಿದ್ದು ಸರ್ವದೋಷ ದೂರನೆಂದು ಮಹಾಲಕ್ಷ್ಮಿ ಹೇಳುತ್ತಿದ್ದಾಳೆ.

– ೪೧ –

**ಅಂಬುಧಿಯ ಉದಕದಲಿ ಒಡೆದು ಮೂಡಿದ ಕೂರ್ಮ**
**ಎಂಬ ಶ್ರೀಹರಿಯ ಪಿತನಾರು ।**
**ಎಂಬ ಶ್ರೀಹರಿಯ ಪಿತನಾರು ಆದರಿಂದ ಸ್ವ–**
**ಯಂಭುಗಳೆಲ್ಲ ಅವತಾರ ॥**

ಅಮೃತಮಥನ ಕಾಲದಲ್ಲಿ ಕ್ಷೀರಸಮುದ್ರದ ನೀರಲ್ಲಿ ಒಡಮೂಡಿದ ಕೂರ್ಮರೂಪಿ ಶ್ರೀಹರಿಯು ಜನಕನಾರು ? ಆದ್ದರಿಂದ ಹರಿಯ ಎಲ್ಲ ಅವತಾರವೂ ಸ್ವಯಂ ವ್ಯಕ್ತವಾಗುವಂಥದ್ದು ಹೊರತು ತಂದೆ ತಾಯಿಗಳಿಂದ ಹುಟ್ಟುವಂಥದ್ದಲ್ಲ ಎಂದು ಮಹಾಲಕ್ಷ್ಮಿ ಹೇಳುತ್ತಿದ್ದಾಳೆ.

'ಎಂಬ ಶ್ರೀಹರಿಯ ಪಿತನಾರು' ಎಂದು ಎರಡು ಬಾರಿ ಬಂದಿರುವುದು ಸಾಂಗತ್ಯವೆಂಬ ಹಾಡುಗಬ್ಬದ ಜಾತಿಗೆ ಲಕ್ಷ್ಮೀಶೋಭನ ಪದ ಸೇರಿರುವುದರಿಂದ ಎನ್ನಬೇಕು.

ಹಿಂದಿನ ನುಡಿಯಲ್ಲಿ ನರಸಿಂಹಾವತಾರ ಹಿರಣ್ಯಕನ ಆಸ್ಥಾನದ ಕಂಬದಿಂದ ಎಲ್ಲರೂ ನೋಡುತ್ತಿದ್ದಂತೆ ಮೂಡಿ ಬಂದಿರುವುದರಿಂದ ಅದಕ್ಕೆ ತಂದೆ ತಾಯಿಗಳಿರಬಹುದೆಂದು ಶಂಕಿಸಲು ಅವಕಾಶವೆ ಇಲ್ಲ ಎಂದಿದೆ. ಆದರೆ ಅದೇ ನುಡಿಯಲ್ಲಿ ಹೇಳಿದಂತೆ 'ನಾನು' ಎಂಬ ಅಹಂಕಾರದ ವಾದಿ, ತಿರುಗಿ ಹೀಗೆ ಆಕ್ಷೇಪಿಸಬಹುದು– ಭಾಗವತದಲ್ಲಿ ನರಸಿಂಹ ಕಂಬದಿಂದ ಮೂಡಿ ಬಂದಿದ್ದರೂ ಹರಿವಂಶದಲ್ಲಿ ಹಾಗಿಲ್ಲ. ಅಲ್ಲಿ ನರಸಿಂಹಾವತಾರ ಕಾಡಿಂದ ನಾಡಿಗೆ ನುಗ್ಗಿಬಂದ ಒಂದು ಮೃಗ. ದೇವತೆಗಳು ಹಿರಣ್ಯಕನ ಬಾಧೆ ತಾಳಲಾರದೆ ಹರಿಯನ್ನು ಮೊರೆಹೊಕ್ಕಾಗ ಆತ ಅವರಿಗೆ ಅಭಯನೀಡಿ ಹಿಮಾಲಯದ ತಪ್ಪಲಿನ ಕಾಡಿಗೆ ಹೋಗಿ ಆಲೋಚಿಸುತ್ತಾನೆ. ಯಾವ ರೂಪ ಧರಿಸಲಿ ಎಂದು, ಬಳಿಕ ನರಸಿಂಹರೂಪ ಧರಿಸಿ ಹಿರಣ್ಯಕನ ಊರಿಗೆ ಬಂದು ಅವನ ಆಸ್ಥಾನ ಮಂಡಪವನ್ನು ಪ್ರವೇಶಿಸುತ್ತಾನೆ. ವಿಚಿತ್ರ ಮೃಗ ಎಂದು ಕಟ್ಟಿಹಾಕಲು ಭಟರಿಗೆ ಆದೇಶ ನೀಡುತ್ತಾನೆ ಹಿರಣ್ಯಕ ನರಸಿಂಹ ಯಾರನ್ನೂ ಲೆಕ್ಕಿಸದೆ ಆಸ್ಥಾನ ಮಂಟಪವನ್ನು ಪುಡಿಮಾಡಿ ಹಿರಣ್ಯಕನೊಡನೆ ಯುದ್ಧಮಾಡಿ ಕೊಲ್ಲುತ್ತಾನೆ. ಈ ಕಥೆಯನ್ನು ನೋಡಿದರೆ ನರಸಿಂಹಾವತಾರ ಎಲ್ಲಿ ಹೇಗೆ ನಡೆಯಿತೆಂದು ಹೇಳುವುದು ಕಷ್ಟ. ತಂದೆ ತಾಯಿಗಳಿರಬಹುದೆಂಬ ಶಂಕೆಯನ್ನೂ ತಳ್ಳಿಹಾಕುವಂತಿಲ್ಲ. ಭಾಗವತದಲ್ಲಿ ಮಾತ್ರ

ಎಲ್ಲರೆದುರಿಗೆ ತಂದೆ ತಾಯಿಗಳಿಲ್ಲದೆ ನರಸಿಂಹಾವತಾರ ನಡೆದ ವರ್ಣನೆ ಇದ್ದರೂ ಅದನ್ನು ನಂಬಬೇಕಾಗಿಲ್ಲ. ಏನಿದ್ದರೂ ಅದು ಪುರಾಣ, ಇತಿಹಾಸವಲ್ಲ. ಅದು ಹೇಳುವುದು ಪೌರಾಣಿಕ, ಐತಿಹಾಸಿಕವೇನಲ್ಲ ಹರಿವಂಶ ಇತಿಹಾಸವೆನಿಸಿದ ಭಾರತದ ಖಿಲಭಾಗ ಅದೂ ಇತಿಹಾಸವೆ'

ಮೇಲಿನ ಆಕ್ಷೇಪ ಗಟ್ಟಿಯಲ್ಲ. 'ಪುರಾಣ', 'ಇತಿಹಾಸ' ಶಬ್ದಗಳ ಅವಯವಾರ್ಥ ನೋಡೋಣ–

ಯಸ್ಮಾತ್ ಪುರಾ ಹ್ಯನತೀದಂ ಪುರಾಣಂ ।

ಎಂಬಂತೆ 'ಪುರಾ' ಹಿಂದೆ ನಡೆದುದನ್ನು 'ಅನ' ತನ್ನೊಳಗೆ ಹೊಂದಿರುವ ಗ್ರಂಥ ಪುರಾಣ. ಪುರಾಣದ ಆಖ್ಯಾನಗಳೂ,

ಸ್ವಯಂ ದೃಷ್ಟಾರ್ಥಕಥನಂ ಪ್ರಾಹುರಾಖ್ಯಾನಕಂ ಬುಧಾಃ ।

ತಾವು ನೋಡಿದ ಸಂಗತಿಯನ್ನು ಹೇಳುವ ಮಾತುಗಳು. ಹೀಗೆ ಪುರಾಣ ಆಖ್ಯಾನಗಳೆಂದರೆ ಹಿಂದೆ ನಡೆದ ವಾಸ್ತವ ಘಟನೆಗಳನ್ನು ಕಂಡಂತೆ ಹೇಳುವ ಗ್ರಂಥಗಳು. ಆದರೆ ಇತಿಹಾಸ ಎಂದರೆ 'ಇತಿ ಹ' ಹೀಗಂತೆ, ಪೂರ್ವಿಕರು ಹೀಗೆ ಹೇಳುತ್ತ ಬಂದಿದ್ದಾರೆ ಎಂದು 'ಆಸ' ತನ್ನೊಳಗೆ ಕಥೆಗಳನ್ನು ಹೊಂದಿರುವ ಗ್ರಂಥ.

'ಇತಿಹ' ಶಬ್ದದಿಂದಲೆ ಬಂದ ಐತಿಹ್ಯ ಸುಳ್ಳು, ಇತಿಹಾಸ ಸತ್ಯ ! ಹೇಗೆ ?

'ಪುರಾಣ', 'ಇತಿಹಾಸ' ಶಬ್ದಗಳ ರೂಢಿಯ ಅರ್ಥ ವಿಚಾರಿಸಿದರೂ ಪುರಾಣಕ್ಕಿಂತ ಇತಿಹಾಸವೆ ಕಾಲ್ಪನಿಕ ಕಥೆಗಳಿಗೆ ಹೆಚ್ಚು ಅವಕಾಶ ಕೊಡುವಂಥದ್ದು ಎನ್ನಬಹುದು. ಏಕೆಂದರೆ ಪುರಾಣಲಕ್ಷಣ–

ಸರ್ಗಶ್ಚ ಪ್ರತಿಸರ್ಗಶ್ಚ ವಂಶೋ ಮನ್ವಂತರಾಣಿ ಚ ।
ವಂಶಾನುಚರಿತಂ ಚೈವ ಪುರಾಣಂ ಪಂಚಲಕ್ಷಣಂ ॥

ಸೃಷ್ಟಿ ಪ್ರಳಯ ರಾಜವಂಶಗಳ ವಿವರ ಮುಂತಾದ ಐದು ವಿಷಯಗಳನ್ನೊಳಗೊಂಡ ಗ್ರಂಥವೇ ಪುರಾಣ ಆದರೆ ಇತಿಹಾಸ ಲಕ್ಷಣ –

ಧರ್ಮಾರ್ಥ ಕಾಮ ಮೋಕ್ಷಾಣಾಂ ಉಪದೇಶ ಸಮನ್ವಿತಂ ।
ಪೂರ್ವವೃತ್ತ ಕಥಾಯುಕ್ತಂ ಇತಿಹಾಸಂ ಪ್ರಚಕ್ಷತೇ ॥

ಧರ್ಮಾದಿ ಉಪದೇಶ ಮತ್ತು ಪೂರ್ವದಲ್ಲಿ ನಡೆದ ಕಥೆಗಳಿಂದ ಕೂಡಿದ ಗ್ರಂಥ ಇತಿಹಾಸ. ಧರ್ಮೋಪದೇಶಕ್ಕಾಗಿ ಕಾಲ್ಪನಿಕ ಕತೆ ಇಲ್ಲಿ ಸೇರುವ ಸಂಭವವಿಲ್ಲದಿಲ್ಲ. ಆದ್ದರಿಂದ ಭಾಗವತ ಸುಳ್ಳು, ಹರಿವಂಶವೇ ನಿಜವೆಂಬ ಮಾತು

ತಿರುವುವುರುವಾಯಿತೆನ್ನ ಬಹುದಲ್ಲವೆ? ವಸ್ತುತಃ ಎರಡೂ ನಿಜ. ಸುಳ್ಳೆನ್ನಲು ಪ್ರಮಾಣಬೇಕು. ಆದ್ದರಿಂದ ಭಾಗವತ ಹರಿವಂಶಗಳೊಳಗಿನ ಕಥಾಂಶಗಳ ವಿರೋಧವನ್ನು ಕಲ್ಪಭೇದದಿಂದ ಪರಿಹಾರ ಮಾಡಬೇಕು. ಎರಡೂ ಬೇರೆ ಬೇರೆ ಕಲ್ಪಗಳಲ್ಲಿ ನಡೆದ ಘಟನೆಗಳೆನ್ನಬೇಕು. ಆದ್ದರಿಂದ ಹರಿವಂಶ ಹೇಳುವಂತೆ ಒಂದು ಕಲ್ಪದಲ್ಲಿ ನರಸಿಂಹವತಾರ ಕಾಡಿನಲ್ಲಿ ಯಾರೂ ತಿಳಿಯದಂತೆ ಹೇಗೋ ಆಗಿತ್ತೆಂದರೂ ಇನ್ನೊಂದು ಕಲ್ಪದಲ್ಲಿ ಭಾಗವತ ಹೇಳುವಂತೆ ಎಲ್ಲರ ಸಮಕ್ಷಮದಲ್ಲಿ ಕಂಬದಿಂದಲೇ ಆಗಿತ್ತೆಂಬ ಸಂಗತಿಯನ್ನು ತಳ್ಳಿ ಹಾಕುವಂತಿಲ್ಲ. ಒಂದು ಕಲ್ಪದ ಒಂದು ಅವತಾರದಲ್ಲಿಯಾದರೂ ಶ್ರೀಹರಿ ತಂದೆ ತಾಯಿಗಳಿಲ್ಲದೆ ಅವತರಿಸಿದ್ದಾನೆ ಎಂದರೆ ಅಂಥ ಸಾಮರ್ಥ್ಯ ಉಳ್ಳವ ಇತರ ಅವತಾರಗಳಲ್ಲಿ ಏಕೆ ತಂದೆ ತಾಯಿಗಳನ್ನು ಆಶ್ರಯಿಸುತ್ತಾನೆ? ಏಕತ್ರ ನಿರ್ಣೀತಃ ಶಾಸ್ತ್ರಾರ್ಥಃ! ಆದ್ದರಿಂದ ಎಲ್ಲ ಅವತಾರಗಳೂ ಸ್ವಯಂ ಭು ಅಂದರೆ ಸ್ವಯಂ ವ್ಯಕ್ತ ಎನ್ನಲೇಬೇಕು. ತಂದೆ ತಾಯಿಗಳಿದ್ದರೆ ತೋರಿಕೆಗೆ ಮಾತ್ರ.

ವಸ್ತುತಃ ಹರಿವಂಶದಲ್ಲಿಯೂ ನರಸಿಂಹಾವತಾರ ಸ್ವಯಂ ವ್ಯಕ್ತವೆ.

ಅನುತ್ಪನ್ನಂ ತತಶ್ಚಕ್ರೇ ಸೋಽತ್ಯಂತಂ ರೂಪಮಾಸ್ಥಿತಃ ।
ನಾರಸಿಂಹಮನಾಧೃಷ್ಯಂ ದೈತ್ಯ ದಾನವ ರಕ್ಷಸಾಂ ॥

'ಅನುತ್ಪನ್ನ'ವಾದ ನರಸಿಂಹ ರೂಪವನ್ನು ಮಾಡಿಕೊಂಡನೆಂದರೇನರ್ಥ? ಉತ್ಪನ್ನವಾದುದನ್ನು ಮಾಡಲು ಬರುತ್ತದೆಯೇ? ಆದ್ದರಿಂದ ಎಂದೂ ಉತ್ಪನ್ನವೆ ಆಗದಿದ್ದ ಅನಾದಿನಿತ್ಯವಾದ ನರಸಿಂಹರೂಪವನ್ನು ವ್ಯಕ್ತಮಾಡಿಕೊಂಡ ಎನ್ನಬೇಕು.

ಹೀಗೆ ನರಸಿಂಹಾವತಾರ ಒಂದೇ ಸಾಕು, ಕೂರ್ಮಾವತಾರವನ್ನು ದೃಷ್ಟಾಂತವಾಗಿ ಈಗ ಕೊಡುತ್ತಿದ್ದಾಳೆ ಮಹಾಲಕ್ಷ್ಮಿ ತನ್ನ ವಾದಕ್ಕೆ ಪುಷ್ಟಿಕೊಡುವ ಉದ್ದೇಶದಿಂದ. ಭಾಗವತ ಹೇಳುತ್ತದೆ –

ಕೃತ್ವಾ ವಪುಃ ಕಾಚ್ಛಪಮದ್ಭುತಂ ಮಹತ್
ಪ್ರವಿಶ್ಯ ತೋಯಂ ಗಿರಿಮುಜ್ಜಹಾರ ॥

ದೇವತೆಗಳು ದೈನ್ಯದಿಂದ ಪ್ರಾರ್ಥಿಸುತ್ತಿರುವಂತೆ ·ಅವರೆದುರಿಗೇ ಶ್ರೀಹರಿ ಅದ್ಭುತವಾದ ಮಹಾಕೂರ್ಮರೂಪ ಧರಿಸಿ, ಸಮುದ್ರದೊಳಗೆ ಪ್ರವೇಶಿಸಿ ಮಂದರ ಪರ್ವತವನ್ನು ಎತ್ತಿಕೊಂಡ. ಇಲ್ಲಿ ಕೂರ್ಮರೂಪಕ್ಕೆ ತಂದೆ ತಾಯಿಗಳಿಲ್ಲ ವೆನ್ನುವುದು ಸ್ಪಷ್ಟ. ಎಲ್ಲ ದೇವತೆಗಳೂ ನೋಡುತ್ತಿರುವಂತೆಯೇ ಹರಿ ಕೂರ್ಮರೂಪವನ್ನು ಪ್ರಕಟಗೊಳಿಸಿದ್ದಾನೆ.

ಆದರೆ ಮಹಾಭಾರತ ಹೇಳುತ್ತದೆ –

ಊಚುಶ್ಚ ಕೂರ್ಮರಾಜಾನಂ ಅಕೂಪಾರೇ ಸುರಾಸುರಾಃ ।
ಅಧಿಷ್ಠಾನಂ ಗಿರೇರಸ್ಯ ಭವಾನ್ ಭವಿತು ಮರ್ಹತಿ ॥

'ಸಮುದ್ರದಲ್ಲಿ ಈ ಹಿಂದೆಯೆ ಇದ್ದ ಕೂರ್ಮರಾಜನಲ್ಲಿ ದೇವತೆಗಳು ಪ್ರಾರ್ಥಿಸಿದರು– ಈ ಬೆಟ್ಟವನ್ನು ನೀನು ಹೊರಬೇಕು' ಇಲ್ಲಿ ಕೂರ್ಮಾವತಾರ ಎಂದು ಹೇಗೆ ನಡೆಯಿತೆಂಬುದು ತಿಳಿದಿಲ್ಲ. ತಂದೆ ತಾಯಿಗಳಿರಬಹುದೇನೋ ಎಂಬ ಶಂಕೆಗೆ ಅವಕಾಶ ಉಂಟು

ಈ ಪುರಾಣ ಇತಿಹಾಸಗಳ ವಿರೋಧ ಪರಿಹಾರ ಹೇಗೆ ?

ಭಾಗವತ ತಾತ್ಪರ್ಯದಲ್ಲಿಯೂ ಮಹಾಭಾರತ ತಾತ್ಪರ್ಯ ನಿರ್ಣಯ ವಾದಿರಾಜೀಯ ಟೀಕೆಯಲ್ಲಿಯೂ ಹೇಳಿದಂತೆ ಎರಡು ಬಾರಿ ಕೂರ್ಮಾವತಾರ ನಡೆದಿತ್ತು – ರೈವತ ಮನ್ವಂತರದಲ್ಲಿ ಮತ್ಸ್ಯಾವತಾರದ ಬಳಿಕ ಒಮ್ಮೆ ವೈವಸ್ವತ ಮನ್ವಂತರದಲ್ಲಿ ನರಸಿಂಹಾವತಾರದ ಅನಂತರ ಇನ್ನೊಮ್ಮೆ (ವಿಷ್ಣು ರಹಸ್ಯ ಹೇಳುವಂತೆ ಚಾಕ್ಷುಷ ಮನ್ವಂತರದಲ್ಲಿಯೂ ಒಮ್ಮೆ ಕೂರ್ಮಾವತಾರ ನಡೆದಿರಬಹುದು) ಮಹಾಭಾರತವು ಹೇಳುವುದು ವೈವಸ್ವತ ಮನ್ವಂತರದ ಕಥೆ– ಮೊದಲೆ ರೈವತ ಮನ್ವಂತರದಲ್ಲಿ ಅವತರಿಸಿ ಆಗ ನಡೆದ ಅಮೃತಮಥನ ಕಾಲದಲ್ಲಿ ಮಂದರವನ್ನು ಹೊತ್ತಿದ್ದ ಕೂರ್ಮರಾಜನನ್ನೇ ವೈವಸ್ವತ ಮನ್ವಂತರದಲ್ಲಿ ಆಗಿನ ಅಮೃತ ಮಥನ ಕಾಲದಲ್ಲಿ ಇನ್ನೊಮ್ಮೆ ಮಂದರವನ್ನು ಹೊರಲು ದೇವತೆಗಳು ಪ್ರಾರ್ಥಿಸಿದರು. ಭಾಗವತ ಹೇಳುವುದು ರೈವತ ಮನ್ವಂತರದ ಕಥೆ– ದೇವತೆಗಳು ಶ್ರೀಹರಿಯನ್ನು ಪ್ರಾರ್ಥಿಸಿದರು. ಆಗ ಆತ ಕೂರ್ಮರೂಪ ಧರಿಸಿ ಸಮುದ್ರದ ನೀರನ್ನು ಪ್ರವೇಶಿಸಿದ ಆದ್ದರಿಂದ ಭಾಗವತ ಹೇಳುವಂತೆ ಒಂದು ಮನ್ವಂತರದ ಒಂದು ಅವತಾರದಲ್ಲಾದರೂ ಶ್ರೀಹರಿಯು ಸ್ವಯಂ ವ್ಯಕ್ತನೆಂದರೆ ಉಳಿದ ಅವತಾರಗಳಲ್ಲಿಯೂ ಹಾಗೇ ಎಂದೊಪ್ಪ ಬೇಕು. ದೀಪದಿಂದ ಇನ್ನೊಂದು ದೀಪದಂತೆ ಶ್ರೀಹರಿಯ ಒಂದು ರೂಪದಿಂದ ಇನ್ನೊಂದು ರೂಪದ ಅಭಿವ್ಯಕ್ತಿ. ಆದ್ದರಿಂದ ಅವನಿಗೆ ಜನನ ಮರಣ ದೋಷಗಳಿಲ್ಲ.

— ೪೨ —

**ದೇವಕಿಯ ಗರ್ಭದಲಿ ದೇವನವತರಿಸಿದ**
**ಭಾವವನು ಬಲ್ಲ ವಿವೇಕಿಗಳು ।**
**ಈ ವಸುಧೆಯೊಳಗೆ ಕೃಷ್ಣಗೆ ಜನ್ಮವ**
**ಆವ ಪರಿಯಲ್ಲಿ ನುಡಿವೆಯೊ ॥**

'ದೇವಕಿಯು ಗರ್ಭದಲ್ಲಿ ದೇವನಾದ ಶ್ರೀಹರಿ ಅವತರಿಸಿದುದರ ವಾಸ್ತವ ಅಭಿಪ್ರಾಯವನ್ನು ಬಲ್ಲ ವಿವೇಕಿಗಳುಂಟು. ಎಲೆ ವಾದಿಯೆ, ನೀನು ಮಾತ್ರ ಏನೂ ತಿಳಿಯದೆ ಈ ಭೂಮಿಯಲ್ಲಿ ಕೃಷ್ಣನಿಗೆ ಎಲ್ಲರಂತೆ ಜನ್ಮವಿದೆ ಎಂದು ಯಾವ ರೀತಿ ವಾದಿಸುವಿಯೋ ತಿಳಿಯದಾಗಿದೆ' ಎನ್ನುತ್ತಿದ್ದಾಳೆ ಮಹಾಲಕ್ಷ್ಮಿ.

'ದೇವ ಅಂದರೆ ಲೀಲಾಜಾಲವಾಗಿ ಎಲ್ಲ ಕಾರ್ಯ ನಿರ್ವಹಿಸಬಲ್ಲ ಹರಿ ಅವತಾರ ಕಾರ್ಯವನ್ನೂ ಹಾಗೆ ನಿರ್ವಹಿಸಿದ. ಯಾವ ರೀತಿಯ ದುಃಖಕ್ಕೂ ಆತ ಒಳಗಾಗುವುದಿಲ್ಲ. ಹೊರನೋಟಕ್ಕೆ ಎಲ್ಲರಂತೆ ಕಂಡರೂ ವಿವೇಕದಿಂದ ತಿಳಿಯಬಲ್ಲ ವಿವೇಕಿಗಳಿಗೆ, ಶುಕಾದಿ ಮುನಿಗಳಿಗೆ, ಅವರು ಭಾಗವತಾದಿಗಳಲ್ಲಿ ಹೇಳುವಂತೆ, ಕೃಷ್ಣ ಎಲ್ಲರಂತಲ್ಲ. ಅವನು ಅವತರಿಸಿದುದರ ವಾಸ್ತವ ಅಭಿಪ್ರಾಯ ಬೇರೆಯೇ ಇದೆ

'ತಮದ್ಭುತಂ ಬಾಲಕಮಂಬುಜೇಕ್ಷಣಂ'

ಎಂದು ಮುಂತಾಗಿ ಹೇಳಿದಂತೆ ಚತುರ್ಭುಜ ಪಿತಾಂಬರಧಾರಿ ರೂಪದಿಂದಲೆ ಮೊದಲಿಗೆ ಕೃಷ್ಣ ಅವತರಿಸಿದ ವಸುದೇವ ದೇವಕಿಯರು ಅಚ್ಚರಿಯಿಂದ ನೋಡುತ್ತಿರುವಾಗ ಆತನೆಂದ, 'ನೀವು ಹಿಂದಿನ ಜನ್ಮದಲ್ಲಿ ಸುತಪಾಪೃಶ್ನಿ ದಂಪತಿಗಳಾಗಿದ್ದಾಗ ನಾನು ಈ ರೂಪದಿಂದಲೆ ಮೈದೋರಿ ನಿಮ್ಮ ಮಗನಾಗಿ ಅವತರಿಸುವೆನೆಂದು ವರವಿತ್ತುದನ್ನು ಜ್ಞಾಪಿಸಿಕೊಳ್ಳಿ. ಮಾನವ ಶಿಶುವಾಗಿಯೇ ಅವತರಿಸಿದ್ದರೆ ನೀವು ನನ್ನನ್ನು ಗುರುತು ಹಿಡಿಯಲಾಗುತ್ತಿರಲಿಲ್ಲ. ಅದಕ್ಕೆ ಈ ರೂಪದಿಂದ ಅವತರಿಸಿದೆ.' ಹೀಗೆ ಹೇಳಿ ದೇವಕಿಯ ಪ್ರಾರ್ಥನೆಯಂತೆ ಮಾನವ ಶಿಶುವಾಗಿ ತೋರಿಕೊಂಡ. ಇದು ದೇವನವತರಿಸಿದ ಬಗೆ ಇಲ್ಲಿ ಚತುರ್ಭುಜ ರೂಪವಂತೂ ಹಿಂದಿನ ಜನ್ಮದಲ್ಲಿ ನೋಡಿದುದೆ ಹೊರತು ಹೊಸದಾಗಿ ಹುಟ್ಟಿದುದಲ್ಲ. ಮಾನವ ಶಿಶುರೂಪ ಕಣ್ಣ ಮುಂದೆಯೇ ಪ್ರಕಟವಾದುದು. ಆದ್ದರಿಂದ ಅದೂ ದೇವಕಿಯ ಗರ್ಭದಲ್ಲಿ ಹುಟ್ಟಿದುದಲ್ಲ. ಹಾಗಾದರೆ ಕೃಷ್ಣ ದೇವಕಿಯ ಗರ್ಭದಲ್ಲಿ ಹುಟ್ಟಿದನೆನ್ನುವುದು ಹೇಗೆ ? ಯಾವ ರೂಪದಿಂದ ?

ಕೃಷ್ಣಾವತಾರಕ್ಕೆ ಮುನ್ನ ಅಧರ್ಮ ಪ್ರಾಬಲ್ಯದಿಂದಾಗಿ ಭೂಭಾರ ಹೆಚ್ಚಲು ಅದನ್ನು ತಡೆಯಲಾರದೆ ಭೂದೇವಿ ದುಃಖದಿಂದ ಗೋರೂಪ ತಾಳಿ ಬ್ರಹ್ಮನ ಬಳಿ ಬಂದು ಗೋಳಿಟ್ಟಳು. ಬ್ರಹ್ಮ ಎಲ್ಲ ದೇವತೆಗಳನ್ನು ಕರೆದುಕೊಂಡು ಕ್ಷೀರಸಾಗರದ ಬಳಿ ಬಂದು ಅಲ್ಲಿ ಶೇಷನ ಮೇಲೆ ಮಲಗಿದ್ದ ಶ್ರೀಹರಿಯನ್ನು ಪುರುಷಸೂಕ್ತದಿಂದ ಸ್ತುತಿಸಿ ಭೂಭಾರ ಕಳೆಯಲು ಪ್ರಾರ್ಥಿಸಿದ. ಶ್ರೀಹರಿ ತಥಾಸ್ತು ಎಂದು ಹೇಳಿ ಮೇರುಪರ್ವತದ ಬ್ರಹ್ಮಸದನಕ್ಕೆ ಬಂದು ಕೃಷ್ಣಾವತಾರ ಕಾರ್ಯಕ್ರಮದ ಯೋಜನೆಗಳನ್ನು ಎಲ್ಲ ದೇವತೆಗಳ ಮುಂದೆ ದೈತ್ಯರೆಲ್ಲರೂ ತಿಳಿಯುವಂತೆ

ಸಮಾಲೋಚಿಸಿ ನಿರ್ಣಯಿಸಿದ. ಕ್ಷೀರಸಾಗರದ ಬಳಿ ದೈತ್ಯರು ಬರುವಂತಿಲ್ಲ, ಅಲ್ಲಿ ಈ ಸಮಾಲೋಚನೆ ನಡೆಸಿದರೆ ದೈತ್ಯರು ಅದನ್ನು ತಿಳಿಯಲಾರರು. ದ್ವೇಷಸಾಧನೆಯಲ್ಲಿ ಪೂರ್ಣವಾಗಿ ನಿರತರಾಗಲಾರರೆಂದು ಹರಿ ಮೇರುಪರ್ವತ ಪ್ರದೇಶಕ್ಕೆ ಬಂದಿದ್ದ. ಹೀಗೆ ದೇವತೆಗಳಿಗೆ ಅವರವರ ಪಾಲಿನ ಕಾರ್ಯಭಾರ ವಹಿಸಿ ದೇವಕಿಯ ಗರ್ಭವನ್ನು ಪ್ರವೇಶಿಸಿದ ಶ್ರೀಹರಿ ಇದು ದೇವನವತರಿಸಿದ ಬಗೆ. ಎಲ್ಲರಂತೆ ಕರ್ಮಾನುಸಾರವಾಗಿ ಭೂಮಿಯಲ್ಲಿ ಆತ ಹುಟ್ಟಿಲ್ಲ.

ಶ್ರೀಹರಿ ದೇವಕಿಯ ಗರ್ಭವನ್ನು ಪ್ರವೇಶಿಸಿದಾಗ ಬ್ರಹ್ಮಾದಿ ದೇವತೆಗಳು ಅವನನ್ನು ಸ್ತುತಿಸಿದರು. ಗರ್ಭವಾಸವಿಲ್ಲದ ಶ್ರೀಹರಿ ಗರ್ಭದೊಳಗೆ! ಗರ್ಭವಾಸವಿರುವ ದೇವತೆಗಳು ಗರ್ಭದಿಂದ ಹೊರಗೆ! 'ದೇವ'ನ ಲೀಲೆ! ಗರ್ಭದಲ್ಲಿದ್ದೂ ಆನಂದಮಯನಾದ ದೇವನನ್ನು ಹಾಗೇ ಸ್ತುತಿಸಿದರು. ತಾವೂ ಹಾಗೇ ಆಗಬೇಕೆಂದು ಬಯಸಿದರು

'ತಂ ಯಥಾ ಯಥೋಪಾಸತೇ ತದೇವ ಭವತಿ!'

ಇದು ದೇವನವತರಿಸಿದ ಬಗೆ. ಅವನಿಗೆ ಗರ್ಭವಾಸವಿಲ್ಲ. ಇದನ್ನು ಬಲ್ಲ ವಿವೇಕಿಗಳು ಹೇಳುತ್ತಾರೆ. ದೇವತೆಗಳನ್ನು ಸಾಕ್ಷಿಯಾಗಿ ತೋರಿಸುತ್ತಾರೆ. ದೇವತೆಗಳು ಅಂದರು,

'ನ ತೇಽಭವಸ್ಯೇಶ ಭವಸ್ಯ ಕಾರಣಂ
ವಿನಾ ವಿನೋದಂ ಬತ ತರ್ಕಯಾಮಹೇ।'

'ಜನ್ಮವಿಲ್ಲದ ನೀನು ಜನ್ಮವೆತ್ತಲು ಲೀಲೆಯೊಂದನ್ನು ಬಿಟ್ಟರೆ ಇನ್ನಾವ ಕಾರಣವನ್ನೂ ಊಹಿಸಲಾರೆವು'

'ತ್ವಚ್ಚರಣಾರವಿಂದಯೋರಾವಿಷ್ಟಚೇತಾ ನ ಭವಾಯ ಕಲ್ಪತೇ'

'ಗರ್ಭವಾಸವನ್ನು ನಟಿಸುವ ನಿನ್ನ ಚರಣಾರವಿಂದವನ್ನು ನೆನೆದರೆ ನಮಗೇ ಗರ್ಭವಾಸ ದುಃಖ ಕಳೆಯುತ್ತದೆ'.

ಕಾರಾಗೃಹದ ಅಧಿಕಾರಿ ಕಾರಾಗೃಹದೊಳಗೆ ಬಂದರೆ ಅಲ್ಲಿ ಆತ ಬಂದಿಯಾಗುವನೆ? ಅವನನ್ನು ಮೆಚ್ಚಿಸಿದರೆ ಬಂದಿಗಳಿಗೇ ಬಿಡುಗಡೆ.

'ಕೃಷ್ಣ'ನಿಗೆ ಜನ್ಮ ಎಂಬುದೆ ಪರಸ್ಪರ ವಿರುದ್ಧ.

'ಯತಃ ಕರ್ಷಸಿ ದೇವೇಶ ನಿಯಮ್ಯ ಸಕಲಂ ಜಗತ್।'

ಎಂಬಂತೆ ಸಕಲ ಜಗನ್ನಿಯಾಮಕನಾದ್ದರಿಂದಲೆ 'ಕೃಷ್ಣ'ನೆನಸಿದವ ಗರ್ಭದೊಳಗೆ ಬಂದಿಯಾಗಿ ದುಃಖ ಅನುಭವಿಸುವುದುಂಟೆ? ಆದ್ದರಿಂದ ಯಾವ ರೀತಿ ಕೃಷ್ಣನಿಗೆ ಜನ್ಮ ಉಂಟೆಂದು ವಾದಿ ವಾದಿಸಬಲ್ಲ?

ವಾದಿರಾಜರ ಸ್ವಪ್ನಪದದಲ್ಲಿಯೂ ಈ ಮಾತು ಬಂದಿದೆ –

'ದೇವಕಿಯು ಬಸುರಲ್ಲಿ ನಾನೇ
ದೇವಕಾರ್ಯಕೆ ಬಂದ ಬಗೆಯನು ।
ಭಾವಕೋವಿದರೆಲ್ಲ ನೋಡಿರಿ ಮೂಲರೂಪವನೆ ॥
ಜೀವರಿಗೆ ತೋರಿಸಿದೆ............ ॥

ಭಾಗವತದಲ್ಲಿ ಮಾತ್ರ ಹೀಗೆ ಹೇಳಿದೆ–

ಭಗವಾನಥ ವಿಶ್ವಾತ್ಮಾ ಭಕ್ತನಾಮಭಯಂಕರಃ ।
ಆವಿವೇಶಾಂಶಭಾಗೇನ ಮನ ಆನಕದುಂದುಭೇಃ ॥
ತತೋ ಜಗನ್ಮಂಗಲಮಚ್ಯುತಾಂಶಂ ।
ಸಮಾಹಿತಂ ಶೂರಸುತೇನ ದೇವೀ ದಧಾರ.... ॥

'ವಸುದೇವನ ಮನಸ್ಸನ್ನು ಶ್ರೀಹರಿ ಒಂದು ಅಂಶದಿಂದ ಪ್ರವೇಶಿಸಿದ. ಆ ಅಂಶವನ್ನು ವಸುದೇವ ದೇವಕಿಯು ಗರ್ಭದಲ್ಲಿಟ್ಟ'.

ತಸ್ಯಾಂ ಬಹುತಿಥೇ ಕಾಲೇ ಭಗವಾನ್ ಮಧುಸೂದನಃ ।
ಕಾರ್ದಮಂ ವೀರ್ಯಮಾಪನ್ನೋ ಜಜ್ಞೇಽಗ್ನಿರಿವ ದಾರುಣಿ ॥

'ಕರ್ದಮ ಮುನಿಯ ವೀರ್ಯವನ್ನು ಪ್ರವೇಶಿಸಿದ ಶ್ರೀಹರಿ ದೇವಹೂತಿಯ ಗರ್ಭದಲ್ಲಿ ವ್ಯಕ್ತನಾದ.'

ಸಂಗ್ರಹ ರಾಮಾಯಣದಲ್ಲಿಯೂ ಹೀಗೇ ಹೇಳಿದೆ–

ರಾಘವಾದನಘಾದ್ ಗರ್ಭಂ ಲೇಭಿರೇ ತಾ ವರಸ್ತ್ರಿಯಃ ।

'ದಶರಥನಿಂದ ಆವನ ರಾಣಿಯರು ಗರ್ಭಧರಿಸಿದರು'.

ಮೇಲೆ ಹೇಳಿದ ಮಾತುಗಳಿಂದ, ಶ್ರೀಹರಿ ಎಲ್ಲ ಜೀವರಂತೆ ವೀರ್ಯದ ಮೂಲಕವಾಗಿ ಮಾತೆಯ ಗರ್ಭವನ್ನು ಪ್ರವೇಶಿಸುವಂತೆ ಕಾಣುತ್ತದೆ. ಗರ್ಭವಾಸ ಇರುವಂತೆ ಭಾಸವಾಗುತ್ತದೆ. ಆದರೆ ದೇವನವತರಿಸುವ ಭಾವ ಬೇರೆಯೆ ಇದೆ. ಅದನ್ನು ವಿವೇಕಿಗಳು ಬಲ್ಲರು. ಏಕೆಂದರೆ ಮಹಾವರಾಹ ಪುರಾಣದಲ್ಲಿ ಹೀಗೆ ಹೇಳಿದೆ–

ನಾವತಾರೇಷ್ವಪಿ ಹರೇರ್ದೇಹಃ ಶುಕ್ಲಾದಿಸಂಭವಃ ।
ತಥಾಪಿ ಶುಕ್ಲಸಂಸ್ಥಃ ಸನ್ ಮಾತೃದೇಹಂ ಪ್ರವಿಶ್ಯ ಚ ।
ವಿಲಾಪ್ಯ ಶುಕ್ಲಂ ತತ್ರೈವ ಕೇವಲ ಜ್ಞಾನರೂಪಕಃ ।
ಉದೇತಿ ಭಗವಾನ್ ವಿಷ್ಣುಃ ಕಾಲೇ ಲೋಕಂ ವಿಮೋಹಯನ್ ॥

'ಅವತಾರಗಳಲ್ಲಿಯೂ ಹರಿಯ ದೇಹ ವೀರ್ಯದಿಂದಾದುದಲ್ಲ. ವೀರ್ಯದಲ್ಲಿದ್ದು ಆದರ ಮೂಲಕ ಮಾತೆಯ ಗರ್ಭವನ್ನು ಪ್ರವೇಶಿಸಿದರೂ ಅಲ್ಲಿ ವೀರ್ಯವನ್ನೇ ನಾಶಗೊಳಿಸಿ ಸ್ವತಃ ಚಿನ್ಮಯ ಶರೀರದಿಂದಲೆ ನವಮಾಸ ಪರ್ಯಂತ ಗರ್ಭವಾಸ ದುಃಖ ಅನುಭವಿಸದೆಯೇ ಅಲ್ಲಿ ಇದ್ದು ಯೋಗ್ಯಕಾಲದಲ್ಲಿ ಗರ್ಭದಿಂದ ಜನಿಸಿದವನಂತೆ ಲೋಕಕ್ಕೆ ತೋರ್ಪಡಿಸಿಕೊಳ್ಳುತ್ತಾನೆ ಲೋಕ ಮೋಹನಕ್ಕಾಗಿ'. ವೀರ್ಯವನ್ನು ನಾಶಗೊಳಿಸಿದ್ದರಿಂದ ಭಗವಂತನ ಶರೀರ ವೀರ್ಯದಿಂದಾದುದಲ್ಲ, ಗರ್ಭವಾಸ ಪ್ರಯುಕ್ತ ದುಃಖಾನುಭವ ಆ ಶರೀರದಿಂದಾಗುವುದಿಲ್ಲ ಎಂದು ಸ್ಪಷ್ಟವಾಗಿ ಹೇಳಿದೆ. ಈ ಭಾವವನ್ನು ಬಲ್ಲ ವಿವೇಕಿಗಳು ಶ್ರೀಮದಾಚಾರ್ಯರು ನಮಗೆ ಭಾಗವತ ತಾತ್ಪರ್ಯದಲ್ಲಿ ತಿಳಿಸಿದ್ದಾರೆ.

— ೪೩ —

**ಆವಾಳಿಸುವಾಗ ಯಶೋದಾದೇವಿಗೆ**
**ದೇವ ತನ್ನೊಳಗೆ ಹುದುಗಿದ್ದ ।**
**ಭುವನವೆಲ್ಲವ ತೋರಿದ್ದುದಿಲ್ಲವೆ**
**ಆ ವಿಷ್ಣು ಗರ್ಭದೊಳಡಗುವನೆ ॥**

ಒಂದು ದಿನ ಯಶೋದೆ ಪುಟ್ಟ ಕೃಷ್ಣನನ್ನು ತೊಡೆಯಲ್ಲಿರಿಸಿಕೊಂಡು ಮೊಲೆಯೂಡಿಸುತ್ತಿದ್ದಳು. ಎದೆಹಾಲನ್ನು ಪೂರ್ತಿ ಕುಡಿಸುವಷ್ಟರಲ್ಲಿ ಕೃಷ್ಣನಿಗೆ ನಿದ್ದೆ ಬಂದಿತ್ತು. ತನ್ನ ಮಗುವೆಂಬ ಮೋಹದಿಂದ ಅವನ ಮುಖವನ್ನು ಯಶೋದೆ ಮುದ್ದಿಸಿದಳು. ಆತ ಎಚ್ಚೆತ್ತು ಆಕಳಿಸಿದ. ಆಗ ಆತನ ಪುಟ್ಟ ಬಾಯೊಳಗೆ ಸಮಸ್ತ ಪ್ರಪಂಚವನ್ನು ಕಂಡು ಯಶೋದೆ ಬೆಚ್ಚಿದಳು. ಅಂಥ ವಿಶ್ವಂಭರನಾದ ಹರಿ ತಾಯಿ ದೇವಕಿಯ ಗರ್ಭದಲ್ಲಿ ನವಮಾಸ ಬೆಳೆದನೆನ್ನುವುದು, ಗರ್ಭದಲ್ಲಿ ಆಗ ಸಣ್ಣ ರೂಪದಿಂದಿದ್ದನೆನ್ನುವುದು ಸರಿಯೆ ? ಎನ್ನುತ್ತಿದ್ದಾಳೆ ಮಹಾಲಕ್ಷ್ಮಿ.

ಭಾಗವತದಲ್ಲಿ,

'ಪೀತಪ್ರಾಯಸ್ಯ ಜನನೀ ಸುತಸ್ಯ ರುಚಿರಸ್ಮಿತಂ ।
ಮುಖಂ ಲಾಲಯತೀ ॥',

'ಯಜ್ಜೃಂಭತೋऽಸ್ಯ ವದನೇ ಭುವನಾನಿ ಗೋಪೀ
ಸಂವೀಕ್ಷ್ಯ ಶಂಕಿತಮನಾಃ ಪ್ರತಿಭೋಧಿತಸ್ಯ ।'

ಎಂದು ಇದನ್ನೇ ಹೇಳಿದೆ.

ಕೃಷ್ಣ ನಿದ್ದೆಯು ಆಯಾಸದಿಂದ ಆಕಳಿಸಿದಂತೆ ಕಾಣುತ್ತಿರುವಾಗಲೂ ವಾಸ್ತವದಲ್ಲಿ ತನ್ನೊಳಗೆ ಭುವನಗಳನ್ನೇ ಹುದುಗಿಸಿಟ್ಟುಕೊಂಡ ವಿಶ್ವಂಭರನಾಗಿದ್ದನೆಂದ ಮೇಲೆ ಆಯಾಸ ಹೇಗೆ ನಟನೆಯೋ ಹಾಗೆ ಗರ್ಭವಾಸವೂ ನಟನೆಯೆ ಅನ್ನುವುದು ಮನದಟ್ಟಾಗದಿರದು.

ಕೃಷ್ಣ ತನ್ನ ಮಗನೆಂಬ ಮೋಹ ಯಶೋದೆಗೆ ಕಳೆಯಲಿ ಎಂದೆ 'ತಾನು ಯಶೋದೆಯು ಮಗನಲ್ಲ. ಜಗತ್ತಿಗೇ ತಂದೆ' ಎಂದು ತಿಳಿಸಲು ವಿಶ್ವರೂಪ ತೋರಿದ್ದ. ಆದ್ದರಿಂದ ಆ ವಿಷ್ಣು ಗರ್ಭದೊಳಡಗುವನೆ ?

ಹಿಂದಿನ ಪದ್ಯದಲ್ಲಿ ಕೃಷ್ಣ ಲಯಕಾಲದಲ್ಲಿ ಲೋಕವನ್ನೇ ನುಂಗುವ ಬೃಹತ್ ಕಾಯದವನು ತನ್ನ ಗರ್ಭದಲ್ಲಿ ಹೇಗೆ ಅಡಗಿರಬಲ್ಲನೆಂದು ದೇವಕಿ ಹೇಳಿದಳೆಂದಿದೆ. ಆದರೆ ಜೈನಮತದಲ್ಲಿ ಕೃಷ್ಣನೂ ನಮ್ಮಂತೆ ಒಬ್ಬ ಜೀವ. ಜೀವನಿಗೊಂದು ನಿಶ್ಚಿತ ಆಕಾರ ಗಾತ್ರವಿರುವುದಿಲ್ಲ. ಆಯಾ ಶರೀರ ಬಂದಾಗ ಆಯಾ ಆಕಾರ. ಮುಕ್ತಿಯಲ್ಲಿ ಚರಮ ಶರೀರದ ಆಕಾರ. ಸಂಸಾರದಲ್ಲಿ ಶರೀರ ಪ್ರಯುಕ್ತ ಆತ್ಮನಿಗೆ ಬೇರೆ ಬೇರೆ ಆಕಾರವಿರುವುದರಿಂದ ಕೃಷ್ಣನಿಗೂ ಲಯಮೂರ್ತಿಯ ಆಕಾರ ಲಯಕಾಲದಲ್ಲಿದ್ದರೂ ಸೃಷ್ಟಿ ಕಾಲದಲ್ಲಿ ರಾಮಕೃಷ್ಣಾದಿ ಅವತಾರಗಳಲ್ಲಿ ಸಣ್ಣರೂಪ ಬರಬಹುದು. ಗರ್ಭವಾಸ ಅಸಂಭವವೇನಲ್ಲ.

ಈ ಆಕ್ಷೇಪಕ್ಕೆ ಸಮಾಧಾನ 'ವಿಷ್ಣು' 'ದೇವ' ಪದಗಳಲ್ಲಿ ಸೂಚಿತವಾಗಿದೆ. ವಿಷ್ಣು = ಸರ್ವವ್ಯಾಪ್ತನಾದವ, ದೇವ = ಲೀಲೆಗಳನ್ನು ತೋರುವವ. ದೊಡ್ಡ ಶರೀರ ಬಂದಾಗ ಮಾತ್ರ ವಿಷ್ಣು ದೊಡ್ಡವನಾಗುತ್ತಾನೆ ಎನ್ನುವುದು ಸರಿಯಲ್ಲ. ಪುಟ್ಟದಾದ ಕೃಷ್ಣಶರೀರದಲ್ಲಿಯೂ ಆತ ವಿಶ್ವರೂಪ ದರ್ಶನ ಮಾಡಿಸಿ 'ವಿಷ್ಣು' ತಾನೆಂಬುದನ್ನು ರುಜುವಾತು ಪಡಿಸಿದ್ದಾನೆ. ಪುಟ್ಟ ಬಾಯೊಳಗೆ ವಿಶ್ವವೇ ಇರಬೇಕೆಂದರೆ ವಿಶ್ವ ಚಿಕ್ಕದಾಗಬಲ್ಲುದೆ ? ಬಾಯೇ ದೊಡ್ಡದಾಗಬೇಕು. ಅಣೋರಣೀಯವೇ ಮಹತೋ ಮಹೀಯವೂ ಆಗಬೇಕು. ಇದು ಲೀಲೆ. ಅಚಿಂತ್ಯ ಶಕ್ತಿಯಿಂದ ವಿಶ್ವಂಭರನೆ ಶಿಶುವಿನಂತೆ ಲೀಲೆ ತೋರುತ್ತಿದ್ದಾನೆ. ಜೀವರು ಸಣ್ಣ ಗಾತ್ರದವರೆ ಸಣ್ಣವರಾದ್ದರಿಂದ ಗರ್ಭವಾಸ ಮಾಡುವವರೆ. ಆದರೆ ಹರಿಗೆ ಸಣ್ಣ ಗಾತ್ರ ಗರ್ಭವಾಸಕ್ಕಾಗಿ ಅಲ್ಲ. ಗರ್ಭವಾಸ ಮಾಡುವ ಜೀವರಲ್ಲಿ ಅಂತರ್ಯಾಮಿಯಾಗಿ ಇರುವುದಕ್ಕಾಗಿ. ಆದ್ದರಿಂದ ಆ ವಿಷ್ಣು ಗರ್ಭದೊಳಡಗುವನೆ ?

ಕರ್ಮಬಂಧವಿಲ್ಲದಿರುವುದರಿಂದ ವಿಷ್ಣುವಿಗೆ ಗರ್ಭವಾಸವಿಲ್ಲ. ಕರ್ಮಬಂಧವಿದೆ ಎಂದು ಒಪ್ಪಿದರೆ ಅವನ ಶರೀರ ಕರ್ಮನಿರ್ಮಿತವೆನ್ನಬೇಕು. ಕರ್ಮನಿರ್ಮಿತ ಶರೀರ ಏಕಕಾಲದಲ್ಲಿ ಯಶೋದೆಯ ಮಡಿಲಲ್ಲಿ ಆಡುವ ಶಿಶುರೂಪವಾಗಿಯೂ ಬಾಯೊಳಗೆ ಬ್ರಹ್ಮಾಂಡವನ್ನೇ ತೋರುವ ವಿಶ್ವರೂಪಿಯಾಗಿಯೂ ಇರಲು ಶಕ್ಯವಿಲ್ಲ. ಆದ್ದರಿಂದ ಕೃಷ್ಣನ ಶಿಶುರೂಪ ಸ್ವೇಚ್ಛೆಯಿಂದಲೇ ತೋರಿದುದೆನ್ನಬೇಕು, ವಾದಿರಾಜರು ಕಲ್ಪಲತೆಯಲ್ಲಿ ಹೇಳಿದ್ದಾರೆ–

ಅಣುತರಮಪಿ ಯಶೋದಾದಿಯಶೋದಾಯಕಂ
ತತ್ರೈವ ಸ್ಪಷ್ಟೀಕೃತ ಸ್ವೋದರ ನಿವಿಷ್ಟತ್ರಿವಿಷ್ಟಪಾದ್ಯಖಿಲವಿಷ್ಟಪಂ
ಅತ ಏವ ಬೃಹತ್ತರಂ ಚ ರೂಪಂ ಬಿಭ್ರದ್ .. ।

ಕೃಷ್ಣನನ್ನು ಮಗನೆಂದು ಲಾಲಿಸಿದ ಯಶೋದೆಯಂಥ ಪುಣ್ಯಾತ್ಮಳನ್ನು ಪಡೆದ ಕುಲವೆಂದು ಕುಲಕ್ಕೆ ಯಶಸ್ಸನ್ನು ಕೊಡುವ ಯಶೋದೆಗೆ ಅಂಥ ಯಶಸ್ಸನ್ನು ಕೊಡಲೆಂದೇ 'ದೇವ'ನಾದ ವಿಷ್ಣು ಲೀಲಾ ಶಿಶುರೂಪ ಧರಿಸಿದ್ದಾನೆ. ಶಿಶು ರೂಪವಿದೆ ಎಂದ ಮಾತ್ರಕ್ಕೆ ಗರ್ಭವಾಸ ಉಂಟೆನ್ನಬಹುದೆ ? ದೇವತೆಗಳು ಗರ್ಭಸ್ತುತಿ ಮಾಡುವ ಕಾಲದಲ್ಲಿ ಆತ ಗರ್ಭದಲ್ಲಿದ್ದುದು ನಿಜವೆ. ಆದರೆ ವಿಷ್ಣು ಎಲ್ಲೆಡೆ ಇರುವಂತೆ ಗರ್ಭದಲ್ಲಿಯೂ ಇದ್ದನಷ್ಟೇ. ಆ ವಿಷ್ಣು ಗರ್ಭದೊಳು 'ಅಡಗು'ವನೆ ?

— ೪೪ —

**ಆನೆಯ ಮಾನದಲಿ ಆಡಗಿಸಿದವರುಂಟೆ**
**ಆನೇಕ ಕೋಟ ಅಜಾಂಡವ**
**ಅಣು ರೋಮ ಕೂಪದಲಿ ಆಳ್ದ ಶ್ರೀಹರಿಯ**
**ಜನನಿ ಜಠರವು ಒಳಕೊಂಬುದೆ ॥**

ಒಂದು ಆನೆಯನ್ನು ಚಿಕ್ಕ ಅಳತೆ ಪಾತ್ರೆಯಲ್ಲಿ ಅಡಗಿಸಿದವರೂ ಉಂಟೆ ? ಅನೇಕ ಕೋಟಿ ಬ್ರಹ್ಮಾಂಡವನ್ನೂ ಅಣುವಾದ ರೋಮಕೂಪದಲ್ಲಿಟ್ಟುಕೊಂಡು ಆಳಿದವ ಶ್ರೀಹರಿ. ಅವನನ್ನು ಜನನಿಯು ಜಠರ ಒಳಕೊಳ್ಳುವುದೇ ? ಆದ್ದರಿಂದ ಶ್ರೀಹರಿಗೆ ಗರ್ಭವಾಸ ಶಕ್ಯವಿಲ್ಲ ಎನ್ನುತ್ತಿದ್ದಾಳೆ ಮಹಾಲಕ್ಷ್ಮಿ.

ಹಿಂದಿನ ನುಡಿಯಲ್ಲಿ ಕೃಷ್ಣನೊಮ್ಮೆ ಆಕಳಿಸಿದಾಗ ತಾಯಿ ಯಶೋದೆ ಅವನೊಳಗೆ ಬ್ರಹ್ಮಾಂಡವನ್ನೇ ಕಂಡಳು ಎಂದಿದೆ. 'ಯಕ್ಷಾನುರೂಪೋ ಬಲಿಃ' ಬ್ರಹ್ಮಾಂಡವನ್ನು ನುಂಗುವ ಕೃಷ್ಣನ ಬಾಯಿ ಬ್ರಹ್ಮಾಂಡಕ್ಕಿಂತ ಎಷ್ಟೋ ಪಾಲು

ದೊಡ್ಡದಿರಬೇಕು. ಇಂಥ ಕೃಷ್ಣ ಜನನಿಯು ಗರ್ಭದಲ್ಲಿ ಅಡಗುವನೆ ಎಂದಿದೆ. ಈಗ ಈ ನುಡಿಯಲ್ಲಿ ಕೃಷ್ಣನ ಶರೀರದ ಗಾತ್ರ ಇನ್ನೂ ಕಲ್ಪನಾತೀತವಾಗಿ ಬೆಳೆಯುತ್ತದೆ. ಅವನಲ್ಲಿ ಯಶೋದೆ ಕಂಡಂತೆ ಒಂದೇ ಬ್ರಹ್ಮಾಂಡವಲ್ಲ ಬ್ರಹ್ಮದೇವರು ಕಂಡಂತೆ ಅನಂತ ರೋಮ ಕೂಪಗಳಲ್ಲಿಯೂ ಒಂದೊಂದರಲ್ಲಿ ಅನೇಕ ಕೋಟಿಗಳಂತೆ ಬ್ರಹ್ಮಾಂಡರಾಶಿಗಳೇ ನೆಲೆಸಿವೆ; ಇದನ್ನು ಭಾಗವತ ಹೇಳುತ್ತದೆ. –

ಪರಮಾಣುವತ್ ಲಕ್ಷ್ಯಂತೇಽತರ್ಗತಾಶ್ಚಾನ್ಯೇ
ಕೋಟಿಶೋ ಹ್ಯಂಡರಾಶಯಃ ।

ವಾದಿರಾಜರೂ ರುಕ್ಮಿಣೀಶ ವಿಜಯದಲ್ಲಿ ಇದನ್ನೇ ಹೇಳಿದ್ದಾರೆ –

ಯದ್ರೋಮಕೂಪಮಪಿ ಪೂರಯಿತುಂ ನ ಶೇಕುಃ
ಬ್ರಹ್ಮಾಂಡ ಖರ್ಪರ ಶತಾಯುತ ಕೋಟಯೋಽಪಿ ॥

ಒಂದು ರೋಮಕೂಪದಲ್ಲಿ ನೂರಾರು ಸಾವಿರಾರು ಕೋಟಿ ಬ್ರಹ್ಮಾಂಡಗಳನ್ನು ಇಟ್ಟರೂ ಅದು ಪೂರ್ತಿ ತುಂಬುವುದಿಲ್ಲ.

ಹೀಗೆ ಒಂದು ರೋಮಕೂಪವೇ ಗಾತ್ರದಲ್ಲಿ ಅನಂತಬ್ರಹ್ಮಾಂಡಗಳನ್ನು ಮೀರಿಸಿದೆ ಎಂದ ಮೇಲೆ ಅವನ ಇಡೀ ಶರೀರದ ಗಾತ್ರ ಎಷ್ಟಿರಬಹುದು ? ಅಂಥ ಬೃಹದ್ಗಾತ್ರದವನಾದ ಕೃಷ್ಣನನ್ನು ಜನನಿಯು ಗರ್ಭ ಒಳಗೊಂಡೀತೆ ? ಏಕೆಂದರೆ, ಒಂದು ಆನೆಯನ್ನು ನಮ್ಮ ಅಳತೆ ಪಾತ್ರೆಯಲ್ಲಿ ನಾವಾರೂ ಹಿಡಿದಿಡಲಾರೆವು. ಅನಂತ ಬ್ರಹ್ಮಾಂಡಾಧಾರನಾದ ವಿರಾಡ್ರೂಪಿ ಶ್ರೀಹರಿಯನ್ನು ಯಾವ ಜನನಿಯು ಜಠರ ಒಳಗೊಂಡೀತು ಎನ್ನುತ್ತಿದ್ದಾಳೆ ಮಹಾಲಕ್ಷ್ಮಿ.

ವಸ್ತುತಃ ಒಂದು ಕಾಲದಲ್ಲಿ ಒಂದು ಬ್ರಹ್ಮಾಂಡವನ್ನು ಮಾತ್ರ ಶ್ರೀಹರಿ ಸೃಷ್ಟಿಸುತ್ತಾನೆ, ರಕ್ಷಿಸುತ್ತಾನೆ. ಹೊರತು ಅನೇಕ ಕೋಟಿ ಬ್ರಹ್ಮಾಂಡಗಳನ್ನು ಏಕಕಾಲದಲ್ಲಿ ಎಂದೂ ಸೃಷ್ಟಿಸುವುದಿಲ್ಲ, ರಕ್ಷಿಸುವುದಿಲ್ಲ. ಶಕ್ತಿ ಇದ್ದರೂ ಆತ ಹಾಗೆ ಮಾಡುವುದಿಲ್ಲ. ಅದು ಅವನ ಸಂಕಲ್ಪ. ಪ್ರಕಾಶ ಸಂಹಿತೆ ಹೇಳುತ್ತದೆ–

ಏಕಸ್ಮಿನ್ ಪರಕಾಲೇ ತು ಏಕಮಂಡಂ ಜಗದ್ಗುರುಃ ।
ದಶಾವರಣಸಂಯುಕ್ತಂ ಸೃಜತ್ಯವತಿ ಹಂತ್ಯಜಃ ॥
ನೈಕದಾಜಾಂಡಬಹುಲಂ ಸ್ರಷ್ಟುಮಿಚ್ಛತಿ ಕೇಶವಃ ॥

ಹಾಗಾದರೆ ಭಾಗವತದಲ್ಲಿ 'ಕೋಟಿಗಟ್ಟಲೆ ಬ್ರಹ್ಮಾಂಡರಾಶಿಗಳೇ ಪರಮಾತ್ಮನಲ್ಲಿ ಕಾಣುತ್ತಿವೆ' –

ಲಕ್ಷ್ಯಂತೇಽಂತರ್ಗತಾಶ್ಚಾನ್ಯೇ ಕೋಟಿಶೋ ಹ್ಯಂಡರಾಶಯಃ ।

ಎಂದುದು ಹೇಗೆ ಸಮರ್ಥನೀಯವಾದೀತು ? ಇದು ಬ್ರಹ್ಮದೇವನ ಮಾತು. ಕೋಟಿಗಟ್ಟಲೆ ಬ್ರಹ್ಮಾಂಡ ರಾಶಿಗಳು ಅವನ ಕಣ್ಣಿಗೆ ಕಂಡು ಬಂದುದು ಭ್ರಮೆಯಾಗಲು ಶಕ್ಯವಿಲ್ಲ. ಬ್ರಹ್ಮ ಸರ್ವಜ್ಞ. ಭ್ರಮೆಯೇ ಇಲ್ಲದವ. ಈ ಸಮಸ್ಯೆಯನ್ನು ಶ್ರೀಮದಾಚಾರ್ಯರು ಹೀಗೆ ಪರಿಹರಿಸಿದ್ದಾರೆ –

ಶ್ರೀಹರಿಯ ಅವಯವಗಳಲ್ಲಿ ಪರಸ್ಪರ ಭೇದ ವ್ಯತ್ಯಾಸಗಳಿಲ್ಲ. ಒಂದು ರೋಮಕೂಪ ಬ್ರಹ್ಮಾಂಡಕ್ಕೆ ಆಶ್ರಯವೆನಿಸಿದೆ ಎಂದರೆ ಅನಂತವಾದ ಇತರ ರೋಮಕೂಪಗಳೂ ಬ್ರಹ್ಮಾಂಡಾಧಾರವಾಗಿರಬೇಕು ಆದರೆ ಹೇಗೆ ? ಒಂದು ಬ್ರಹ್ಮಾಂಡ ಇದೆ. ಅದು ಅನಂತ ರೋಮ ಕೂಪಗಳಲ್ಲಿರಬಹುದೆ ? ಅದಕ್ಕೆ ಅಂಥ ಸಾಮರ್ಥ್ಯ ಉಂಟೆ ? ಆದ್ದರಿಂದ ಒಂದು ಬ್ರಹ್ಮಾಂಡವೇ ಹರಿಯ ಅಚಿಂತ್ಯ ಶಕ್ತಿಯಿಂದ ಅನಂತವಾಗುತ್ತದೆ ಎನ್ನಬೇಕು. ರಾವಣ ಸೀತೆಯನ್ನು ಅಪಹರಿಸುವ ಕಾಲದಲ್ಲಿ ಆಕೆಯ ವಸ್ತ್ರಾಭರಣಗಳು ಪ್ರತಿಯೊಂದು ಎರಡಾಗಿ ಒಂದು ನಿಜ ಸೀತೆಯಲ್ಲಿಯೂ ಇನ್ನೊಂದು ಸೀತಾಕೃತಿಯಲ್ಲಿಯೂ ಕಂಡು ಬಂದುದುಂಟು. ಅರ್ಜುನ ಇಂದ್ರಕೀಲ ಪರ್ವತದಲ್ಲಿ ಶಿವಲಿಂಗದ ಮೇಲೇರಿಸಿದ ಹೂಗಳು ಕಿರಾತರೂಪಿ ಶಿವನ ತಲೆಯ ಮೇಲೆಯೂ ಕಂಡು ಬಂದುದುಂಟು. ಅನೇಕ ಕನ್ನಡಿಗಳಲ್ಲಿ ಒಂದು ವಸ್ತು ಅನೇಕವಾಗಿ ಪ್ರತಿಫಲಿಸುವುದನ್ನು ಕಾಣುತ್ತೇವೆ. ಇಲ್ಲಿ ಪ್ರತಿಬಿಂಬ ವಸ್ತುತಃ ಒಂದಲ್ಲ, ಅನೇಕವೆ ಆದರೆ ಅನೇಕ ರೋಮ ಕೂಪಗಳಲ್ಲಿ ಅನೇಕವಾಗಿ ಕಂಡು ಬಂದ ಬ್ರಹ್ಮಾಂಡಗಳು ಮಾತ್ರ ವಸ್ತುತಃ ಒಂದೆ. ಅಂದರೆ, ಅನೇಕವಾಗಿ ಕಂಡು ಬಂದಿದ್ದು ಭ್ರಮೆ ಎಂದಲ್ಲ. ವಿಷ್ಣು ಸಾಮರ್ಥ್ಯದಿಂದ ಒಂದು ಬ್ರಹ್ಮಾಂಡವೆ ಅನೇಕವಾಗಿದೆ. ಶ್ರೀಮದಾಚಾರ್ಯರು ಬ್ರಹ್ಮತರ್ಕದ ಆಧಾರದಿಂದ ಹೀಗೆ ಹೇಳಿದ್ದಾರೆ–

ಅಸ್ಯೈವ ದೇವಕಾಯೇಷು ಪ್ರತಿ ಪ್ರತಿ ಚ ದರ್ಶನಾತ್ ।
ವಿಷ್ಣು ಸಾಮರ್ಥ್ಯತೋಽಂಡಾನಾಂ ಬಹುತ್ವಂ ನಾನ್ಯತೋ ಭವೇತ್ ॥

ಹೀಗೆ ಒಂದು ಬ್ರಹ್ಮಾಂಡವೇ ವಿಷ್ಣುಸಾಮರ್ಥ್ಯದಿಂದ ಅನೇಕವೆನಿಸಿತು ಹೊರತು ಅನೇಕ ಬ್ರಹ್ಮಾಂಡಗಳು ಪ್ರತ್ಯೇಕವಾಗಿ ಇಲ್ಲ. 'ಅನೇಕ ಕೋಟಿ ಅಜಾಂಡವ ಅಣು ರೋಮಕೂಪದಲ್ಲಿ ಆಳ್ದ' ಎನ್ನುವುದು ಉಚಿತವೆ ? 'ಅಜಾಂಡವ' ಎಂದಷ್ಟೇ ಸಾಕಾಗಿತ್ತು. 'ಅನೇಕ ಕೋಟಿ' ಎಂಬ ಶಬ್ದ ವ್ಯರ್ಥವಲ್ಲವೆ ? ಒಂದು ಬ್ರಹ್ಮಾಂಡವನ್ನು ಒಂದು ರೋಮಕೂಪದಲ್ಲಿ ಹೊತ್ತರೂ ಅದನ್ನೇ ಅನೇಕವಾಗಿಸಿ ಎಲ್ಲ ರೋಮಕೂಪಗಳಲ್ಲಿ ಹೊತ್ತರೂ ಶರೀರದ ಗಾತ್ರದಲ್ಲಿ ವ್ಯತ್ಯಾಸ ಉಂಟಾಗಲಾರದು ಎಂದು ಆಕ್ಷೇಪ ಬರಬಹುದು. ಆದರೆ ವಾದಿರಾಜರು ಶ್ರೀ ಹರಿಗೆ

ಗರ್ಭವಾಸವಿಲ್ಲವೆನ್ನಲು ಇನ್ನೂ ಬೇರೆ ಯುಕ್ತಿ ಸೂಚನೆ ಮಾಡುತ್ತಿರುವಂತೆ ಕಾಣುತ್ತದೆ –

ಲೋಕದಲ್ಲಿ ಆನೆಯನ್ನು ಒಂದು ಸಣ್ಣ ಅಳತೆ ಪಾತ್ರೆಯೊಳಗೆ ಹಿಡಿದಿಡಬಲ್ಲವರು ಯಾರೂ ಸಿಗಲಾರರು. ಆದರೆ ಶ್ರೀಹರಿ ತನ್ನ ಅಚಿಂತ್ಯ ಶಕ್ತಿಯಿಂದ ಅಂಥ ಕೆಲಸ ಮಾಡುತ್ತಿದ್ದಾನೆ. ಒಂದು ಬ್ರಹ್ಮಾಂಡವನ್ನೆ ಅದನ್ನು ಅನೇಕ ಕೋಟಿಯನ್ನಾಗಿ ಮಾಡಿ ತನ್ನ ಅಣು ರೋಮಕೂಪದಲ್ಲಿ, ಅಂದರೆ ತನ್ನ ಅತಿ ಮಹತ್ತಾದ ಶರೀರಕ್ಕೆ ಹೋಲಿಸಿದಾಗ ಅಣು ಎನ್ನಬಹುದಾದ, ವಸ್ತುತಃ ನಮ್ಮ ಕಲ್ಪನೆಗೇ ಮೀರಿದ ಬೃಹದ್ಗಾತ್ರದ ಮಹಾ ರೋಮಕೂಪಗಳಲ್ಲೆಲ್ಲ ಧರಿಸುತ್ತಾನೆ. ಇಂಥ ಅಚಿಂತ್ಯ ಶಕ್ತಿ ಉಳ್ಳ ಶ್ರೀ ಹರಿಗೂ ಗರ್ಭವಾಸದ ದುಃಖ ಬಂದೀತೇ ? 'ಅನೇಕ ಕೋಟಿ ಅಜಾಂಡವ' ಎಂಬ ಮಾತಿನಲ್ಲಿ ಈ ಯುಕ್ತಿಯು ಸೂಚನೆ ಇದೆ. ದೊಡ್ಡದಾದ ಆನೆಯನ್ನು ಸಣ್ಣ ಅಳತೆ ಪಾತ್ರೆಯಲ್ಲಿ ಹಿಡಿದಿಡುವುದೂ ಉಂಟೆ ? ರೋಮ ಮಹತ್ತಾದ ಬ್ರಹ್ಮಾಂಡ ಬಾಲಗೋಪಾಲನ ಅಣು ಕೂಪದಲ್ಲಿರಬಹುದೆ ? ಬ್ರಹ್ಮಾಂಡಕ್ಕೆ ಅಂಥ ಸಾಮರ್ಥ್ಯ ಉಂಟೆ ? ಆದುದರಿಂದ,

'ವಿಷ್ಣುಸಾಮರ್ಥ್ಯತೋಽಂಡಾನಾಂ ಬಹುತ್ವಂ'

ಎನ್ನುವಲ್ಲಿ ಬಹುತ್ವದಂತೆ ಅಣುತ್ವವೂ ವಿವಕ್ಷಿತವೆನ್ನಬೇಕು.

'ಪರಮಾಣುವತ್ ಲಕ್ಷ್ಯತೇ'

ಎಂದು ಭಾಗವತ ಹೇಳುವಂತೆ, ಮಹತ್ತಾದ ಬ್ರಹ್ಮಾಂಡವೇ ಬ್ರಹ್ಮದೇವರಿಗೆ ಪರಮಾಣುವಿನಂತೆ ಕಂಡು ಬಂದಿದೆ ಎಂದ ಮೇಲೆ ಹರಿಯ ಅಚಿಂತ್ಯ ಶಕ್ತಿಯಿಂದ ಒಂದು ಬ್ರಹ್ಮಾಂಡ ಅನೇಕವಾದಂತೆ ಮಹತ್ತಾದ ಬ್ರಹ್ಮಾಂಡವೂ ಅಣುವಾಗುತ್ತದೆ ಎನ್ನಬೇಕು. ಹರಿಯ ಬೃಹದ್ಗಾತ್ರಕ್ಕೆ ಹೋಲಿಸಿದಾಗ ಬ್ರಹ್ಮಾಂಡ ಕೇವಲ ಪರಮಾಣುವೆ ಎಂಬ ವಿವರಣೆಯ ಜೊತೆಗೆ ಮಹತ್ತಾದ ಬ್ರಹ್ಮಾಂಡವೂ ಹರಿಯ ಅಚಿಂತ್ಯ ಶಕ್ತಿಯಿಂದ ವಸ್ತುತಃ ಅಣುವೆ ಆಗಿದೆ ಎಂಬ ವಿವರಣೆಯನ್ನೂ ತಳ್ಳಿ ಹಾಕುವಂತಿಲ್ಲ.

ಸೂನೋಸ್ತನೌ ವೀಕ್ಷ್ಯ ವಿದಾರಿತಾಸ್ಯೇ
ವ್ರಜಂ ಸಹಾತ್ಮಾನಮವಾಪ ಶಂಕಾಂ ॥

ಎಂದು ಭಾಗವತದಲ್ಲಿ ಹೇಳಿದಂತೆ ಕೃಷ್ಣನು ಮಣ್ಣು ತಿಂದು ಬಾಯಿತೆರೆದು ತೋರಿಸಿದಾಗ ಯಶೋದೆ ಅಲ್ಲಿ ಬ್ರಹ್ಮಾಂಡವನ್ನು ಕಂಡಳು, ಮಾತ್ರವಲ್ಲ ಆ ಬ್ರಹ್ಮಾಂಡದೊಳಗೆ ಗೋಕುಲ, ಅದರಲ್ಲಿ ತಾನು, ತನ್ನ ಮುಂದೆ ಬಾಯಿ ತೆರೆದು ನಿಂತ ಕೃಷ್ಣ, ಅವನ ಬಾಯಲ್ಲಿ ತಿರುಗಿ ಬ್ರಹ್ಮಾಂಡ, ಅದರೊಳಗೆ ಗೋಕುಲ ಅದರಲ್ಲಿ

ತಾನು .ಹೀಗೆ ಒಂದರೊಳಗೊಂದರಂತೆ ಅನಂತಾನಂತ ಬ್ರಹ್ಮಾಂಡಗಳನ್ನು ಕಂಡಳೆಂದ ಮೇಲೆ ಆ ಬ್ರಹ್ಮಾಂಡಗಳೆಲ್ಲಾ ಒಂದಕ್ಕಿಂತ ಒಂದು ಸೂಕ್ಷ್ಮಾತಿಸೂಕ್ಷ್ಮ ಪರಮಾಣುವಿಗಿಂತ ಸೂಕ್ಷ್ಮವಾಗಿರಬೇಕಲ್ಲವೆ ? ಈ ಯಶೋದೆಯ ಪ್ರತ್ಯಕ್ಷಾನುಭವ ಕೂಡಬೇಕಾದರೆ ಮಹತ್ತಾದ ಏಕಮಾತ್ರ ಬ್ರಹ್ಮಾಂಡವೆ ಹರಿಯ ಅಚಿಂತ್ಯಶಕ್ತಿಯಿಂದ ಸೂಕ್ಷ್ಮಾತಿಸೂಕ್ಷ್ಮ ಅನಂತಾನಂತ ಬ್ರಹ್ಮಾಂಡಗಳಾಗಿವೆ ಎನ್ನಬೇಕಾಗುತ್ತದೆ. ಹೀಗೆ ಮಹತ್ತಾದ ಬ್ರಹ್ಮಾಂಡವನ್ನೇ ಅಣುವಾಗಿಸಬಲ್ಲ ಅಚಿಂತ್ಯ ಶಕ್ತಿಯ ಶ್ರೀ ಹರಿಗೆ ಗರ್ಭವಾಸದ ದುಃಖ ಪರಿಹರಿಸಿಕೊಳ್ಳುವ ಶಕ್ತಿ ಇಲ್ಲವೆ ? 'ಅಣು ರೋಮ ಕೂಪದಲ್ಲಿ ಆಳ್ದ' ಎಂಬ ಮಾತಿನಲ್ಲಿ ಈ ಯುಕ್ತಿಯ ಸೂಚನೆ ಅಡಗಿದೆ.

'ಶ್ರೀಹರಿಯ' ಎಂಬ ಶಬ್ದದಿದಲೂ, ಭಕ್ತರ ಗರ್ಭವಾಸ ದುಃಖ ಪರಿಹರಿಸುವುದರಿಂದ, ಮತ್ತು ಜನನ ಮರಣ ರೂಪ ಸಂಸಾರದಿಂದ ಉದ್ಧರಿಸುವುದರಿಂದ 'ಹರಿ' ಎನಿಸಿದ ತಾನು ಗರ್ಭವಾಸಕ್ಕೊಳಗಾಗುವನೆ, ಜನನ ಮರಣಗಳನ್ನು ಹೊಂದುವನೆ ಎನ್ನುವ ಯುಕ್ತಿ ಸೂಚನೆಗಳಿವೆ

— ೪೫ —

**ಅದರಿಂದ ಕೃಷ್ಣನಿಗೆ ಜನ್ಮವೆಂಬುದು ಸಲ್ಲ**
**ಮದನನಿವನ ಕುಮಾರನು ।**
**ಕದನದಿ ಕಣೆಗಳ ಇವನೆದೆಗೆಸೆವನೆ**
**ಸುದತೇರಿಗಿವನಿಂತು ಸಿಲುಕುವನೆ ॥**

"ವಿಷ್ಣು ಜನನಿಯ ಗರ್ಭದೊಳಡಗುವವನಲ್ಲವಾದುದರಿಂದ ಕೃಷ್ಣನಿಗೆ ಜನ್ಮವೆಂಬುದು ಸಲ್ಲದು. ಅದೂ ಅಲ್ಲದೆ, ಮದನನು ಇವನ ಕುಮಾರನು, ಕೃಷ್ಣನ ಜನನಿ ಜನಕರನ್ನು ಆತ ಕಾಮಪರವಶರನ್ನಾಗಿಸಿ ಕೃಷ್ಣನಿಗೆ ಗರ್ಭಪ್ರವೇಶ ಉಂಟು ಮಾಡುವವನಲ್ಲ. ಮದನನು ಕೃಷ್ಣನ ಕುಮಾರನಾದುದರಿಂದಲೆ ಕೃಷ್ಣನಿಗೆ ಕಾಮಾಸಕ್ತಿಯ ಆರೋಪವೂ ಸುಳ್ಳಾಗುತ್ತದೆ. ಕೃಷ್ಣನ ಕುಮಾರ ತನ್ನ ಪಿತನಾದ ಕೃಷ್ಣನ ಎದೆಗೇ ಬಾಣಗಳನ್ನೆಸೆದಾನೆ ? ಕೃಷ್ಣ ಆ ಬಾಣಗಳಿಗೆ ಬಲಿಯಾಗಿ ಸುದತಿಯರ ಮೋಹದ ಬಲೆಗೆ ಸಿಲುಕುವನೆ ?" ಎನ್ನುತ್ತಿದ್ದಾಳೆ ಮಹಾಲಕ್ಷ್ಮಿ.

ಇಲ್ಲಿ ಒಂದು ಪ್ರಶ್ನೆ ಸಹಜವಾಗಿ ಏಳುತ್ತದೆ – ಮಗನು ಪಿತನ ಎದೆಗೆ ಬಾಣಗಳನ್ನೆಸೆಯಲಾರ ಎನ್ನಲು ಮಗನಿಗೆ ಶಕ್ತಿ ಸಾಲದೆನ್ನುವುದೊಂದು ಕಾರಣ, ಶಕ್ತಿ ಇದ್ದರೂ ತಂದೆ ಪೂಜ್ಯ ಸ್ಥಾನದಲ್ಲಿರುವುದರಿಂದ ಎನ್ನುವುದಿನ್ನೊಂದು ಕಾರಣ,

ಆದರೆ ತಂದೆಯನ್ನು ಮೀರಿಸುವ ಮಕ್ಕಳಿಗೂ, ಗುರುವನ್ನು ಮೀರಿಸಿದ ಶಿಷ್ಯರಿಗೂ ಕೊರತೆ ಇಲ್ಲ. ಹಾಗೇ ಪೂಜ್ಯರಲ್ಲಿ ಅಪರಾಧಗೈಯುವುದೂ ಅಪರೂಪವೇನಲ್ಲ. ಈ ಮದನನೇ ಬ್ರಹ್ಮನಿಗೂ ಮಗನಾಗಿ ಹುಟ್ಟಿದ್ದ. ಶಿವನಿಗೂ ಕುಮಾರಸ್ವಾಮಿ ಎಂಬ ಹೆಸರಿನಿಂದ ಕುಮಾರನಾಗಿ ಹುಟ್ಟಿದ್ದ ಆದರೂ ಆತ ಬ್ರಹ್ಮರುದ್ರರನ್ನೂ ಸುಮ್ಮನೆ ಬಿಟ್ಟಿಲ್ಲ. ಬ್ರಹ್ಮನನ್ನು ತನ್ನ ಮಗಳನ್ನೇ ಮೋಹಿಸುವಂತೆ ಮಾಡಿದ್ದಾನೆ. ರುದ್ರನನ್ನು ಪಾರ್ವತಿಯಲ್ಲಿ ಮೋಹಪರವಶಗೊಳಿಸಿದ್ದಾನೆ, ಆದುದರಿಂದಲೆ ಶಿವನಿಂದ ಕುಮಾರಸ್ವಾಮಿಯ ಜನನ. ಒಮ್ಮೆ ಶಿವನ ಉರಿಗಣ್ಣಿಗೆ ಬೂದಿಯಾಗಿ ಹೋದರೂ ತಿರುಗಿ ಅವನ ಮಗನಾಗಿಯೇ ಷಣ್ಮುಖನಾಗಿ ಹುಟ್ಟಿದ್ದಾನೆ. ಒಂದು ಮುಖದಿಂದಲೆ ಸಾಕಷ್ಟು ಮೆರೆದವ ಆರುಮುಖಗಳಿಂದ ತಿರುಗಿ ಹುಟ್ಟಿ ಮೆರೆದಿದ್ದಾನೆ. ಹೀಗೆ ಮದನ ತನಗಿಂತ ಶಕ್ತಿಯಲ್ಲಿಯೂ ಪೂಜ್ಯತೆಯಲ್ಲಿಯೂ ಹಿರಿಯರಾದ ಬ್ರಹ್ಮ ರುದ್ರರನ್ನೇ ಆಟವಾಡಿಸಿದವ ವಿಷ್ಣುವನ್ನು ಬಿಟ್ಟಾನೆ ? ಈ ಪ್ರಶ್ನೆಗೆ ಉತ್ತರ –

'ಮದನನಿವನ ಕುಮಾರನು' ಮದನ ಮೊದಲ ಬಾರಿಗೆ ಜನಿಸಿದುದು ಕೃಷ್ಣನ ಮೂಲರೂಪದಿಂದ ಬಳಿಕ ಬ್ರಹ್ಮರುದ್ರರಿಂದ ಆತನಿಗೆ ಜನನ. ಕೃಷ್ಣ ಸ್ತ್ರೀಯರಲ್ಲಿ ಮಕ್ಕಳನ್ನು ಹುಟ್ಟಿಸುವುದು ಮದನನ ಪ್ರಭಾವದಿಂದಲೆ ಎನ್ನುವುದಾದರೆ ಈ ಮದನನನ್ನು ಆತ ಹುಟ್ಟಿಸಿದುದು ಯಾರ ಪ್ರಭಾವದಿಂದ ? ಸರಸ ಭಾರತಿಯಲ್ಲಿ ವಾದಿರಾಜರೆ ಹೇಳುತ್ತಾರೆ–

'ಏವಂ ಚ ಕಾಮಿನೀಕಾಮಃ ಕಾಮಾಭಾವೇ ಕಥಂ ವದ ।

ಆದ್ದರಿಂದ ಕೃಷ್ಣ ಮಕ್ಕಳನ್ನು ಹುಟ್ಟಸಿದನೆಂದ ಮಾತ್ರಕ್ಕೆ ಆತ ಮದನನ ಬಾಣಗಳಿಗೆ, ಸುದತಿಯರ ಮೋಹದ ಬಲೆಗೆ ಸಿಲುಕಿದನೆನ್ನುವುದು ತಪ್ಪಾಗುತ್ತದೆ.

ಆದರೆ ಬ್ರಹ್ಮವೈವರ್ತದಲ್ಲಿ ಸ್ಪಷ್ಟವಾಗಿ,

'ಕೃಷ್ಣಸ್ಯ ಕಾಮಬಾಣೇನ ರೇತಃ ಪಾತೋ ಬಭೂವ ಹ ।'

ಎಂದು ಕೃಷ್ಣನಿಗೆ ಕಾಮಬಾಣದ ವೇಗದಿಂದ ವೀರ್ಯ ಚಲನೆ ಆಯಿತೆಂದಿದೆ. ಈ ಹಿಂದೆ ಲಕ್ಷ್ಮೀಶೋಭನ ಪದದಲ್ಲಿ,

ಅಮೋಘ ವೀರ್ಯವು ಚಲಿಸಿದರೆ ಪ್ರಳಯದಲಿ
ಕುಮಾರರು ಯಾಕೆ ಜನಿಸರು ?

ಎನ್ನುತ್ತಾ ಕೃಷ್ಣನಿಗೆ ವೀರ್ಯ ಚಲನೆಯೆ ಇಲ್ಲವೆಂದುದುಂಟು. ಅದೂ ಸರಿಯಲ್ಲ. ಪ್ರಳಯದಲ್ಲಿ ವಸಂತಋತು ಉಂಟೆ ? ಕೋಗಿಲೆಯ ಇಂಚರ ಉಂಟೆ ?

ಮಂದಮಾರುತ ಉಂಟೆ ? ಬೆಳದಿಂಗಳ ರಾತ್ರಿ ಉಂಟೆ ? ಕೃಷ್ಣನಿಗೆ ಬೇಸರವಾಗಿರಬೇಕು. ಕಾಮಾವೇಗಕ್ಕೆ ತಕ್ಕ ಉದ್ದೀಪಕ ವಾತಾವರಣವೆ ಇರಲಿಲ್ಲ. ಅದಕ್ಕಾಗಿಯೆ ಸೃಷ್ಟಿಮಾಡಿದ. ಉಪನಿಷತ್ತಿನಲ್ಲಿ 'ಭೋಗಾರ್ಥಂ ಸೃಷ್ಟಿಃ' ಎನ್ನುವವರ ಒಂದು ಪಕ್ಷವನ್ನೂ ಪ್ರಸ್ತಾಪಿಸಲಾಗಿದೆ. 'ಕ್ರೀಡಾರ್ಥಂ' ಎನ್ನುವ ಪಕ್ಷವನ್ನೂ ಹೇಳಿದೆ. ಯಮುನಾ ನದಿಯ ತೀರದ ಸುಂದರವನಗಳಲ್ಲಿ ನೂರಾರು ಮಂದಿ ಗೋಪಿಕೆಯರೊಡನೆ ಬೆಳದಿಂಗಳಲ್ಲಿ ಸ್ವಚ್ಛಂದವಾಗಿ ವಿಹರಿಸುವ ಇಚ್ಛೆಯಿಂದಲೆ ಪ್ರಳಯಕಾಲದ ಏಕಾಂತಕ್ಕೆ ಬೇಸತ್ತಿದ್ದ ಕೃಷ್ಣ ಸೃಷ್ಟಿಗೆ ತೊಡಗಿದ ಸೃಷ್ಟಿ ಮುಗಿದೊಡನೆಯೆ ನಾನಾ ಅವತಾರ ಮಾಡಿ ಸುಖ ಭೋಗಿಸಿದ. ಕೃಷ್ಣಾವತಾರದಲ್ಲಂತೂ ಸ್ತ್ರೀಸುಖಭೋಗದ ಪರಮಾವಧಿಯನ್ನೇ ನಾವು ಕಾಣುತ್ತೇವೆ. ಆಗಲೂ ಕೃಷ್ಣ ಜಿತೇಂದ್ರಿಯನಾಗೇ ಇದ್ದನೆಂದರೆ ನಂಬಲಾಗದು, ಭಾಗವತ ಹೇಳತ್ತದೆ – 'ಗೋಪಿಯರು ಕೃಷ್ಣನನ್ನು ಮರಳು ಮಾಡಿದರು. ಆತ ಸಣ್ಣ ಮಕ್ಕಳಂತೆ ಒಮ್ಮೆ ಕುಣಿಯುತ್ತಾನೆ, ಇನ್ನೊಮ್ಮೆ ಹಾಡುತ್ತಾನೆ ಅವರು ಹೇಳಿದಂತೆ ನಡೆಯುತ್ತಾನೆ, ಅವರ ಪಾದರಕ್ಷೆಗಳನ್ನೂ ಹೊರುತ್ತಾನೆ. ಅವರಿಗೊಂದು ಸೂತ್ರದ ಬೊಂಬೆಯಂತಾಗುತ್ತಾನೆ. ಆಕಾಶದಲ್ಲಿ ನಿಂತು ನೋಡುವ ದೇವತಾಸ್ತ್ರೀಯರು ಆಶ್ಚರ್ಯಚಕಿತರಾಗುತ್ತಾರೆ. ಮುಂದೆ ದ್ವಾರಕೆಯಲ್ಲಿಯೂ ಹದಿನಾರು ಸಾವಿರ ಸ್ತ್ರೀಯರೊಡನೆ ಪ್ರಣಯದಾಟ –

'ರೇಮೇ ಸ್ತ್ರೀರತ್ನ ಕೂಟಸ್ಥೋ ಭಗವಾನ್ ಪ್ರಾಕೃತೋ ಯಥಾ ।'

ಇಂಥ ಕೃಷ್ಣ ಮದನನ ಬಾಣಕ್ಕೆ, ಸುದತಿಯರ ಮೋಹಕ್ಕೆ ಸಿಲುಕಲೇ ಇಲ್ಲವೆಂದರೆ ನಂಬಬಹುದೆ ?

ಮೇಲಿನ ಆಕ್ಷೇಪಕ್ಕೆ ಸರಿಯಾದ ಅವಕಾಶ ವಸ್ತುತಃ ಇಲ್ಲ. ಬ್ರಹ್ಮವೈವರ್ತದಲ್ಲಿ ಹೇಳಿದ ಕೃಷ್ಣ, ಭಾಗವತದ ಯಶೋದಾ ತನಯನಲ್ಲ. ಅವನ ಮೂಲರೂಪವದು ಭಾಗವತದ ಕೃಷ್ಣ 'ಸ್ತ್ರೀರತ್ನ ಕೂಟಸ್ಥ'ನಾಗಿ ರಮಿಸಿದರೂ 'ಯಾವ ಸ್ತ್ರೀಯರ ಸೌಂದರ್ಯ ಹಾವಭಾವಗಳನ್ನು ಕಂಡು ಮನ್ಮಥನು ಈ ಸ್ತ್ರೀಯರಿರುವಾಗ ನನ್ನ ಬಿಲ್ಲುಬಾಣಗಳಿಗೇನು ಕೆಲಸವಿದ್ದೀತೆಂದು ಅವನ್ನು ಬಿಸುಟನೋ, ಅಂಥ ಸ್ತ್ರೀಯರು ಹದಿನಾರು ಸಾವಿರ ಮಂದಿ ಯತ್ನಿಸಿದರೂ ಕೃಷ್ಣನ ಇಂದ್ರಿಯಗಳನ್ನು ಚಲನೆಗೊಳಿಸಲಾರದಾದರು' ಎಂದು ಭಾಗವತವೆ ಹೇಳುತ್ತದೆ. ಸರಸ ಭಾರತಿಯಲ್ಲಿ ವಾದಿರಾಜರೂ ಇದನ್ನೆ ಹೇಳಿದ್ದಾರೆ –

ನಾರೀಣಾಂ ದಶಸಾಹಸ್ರೀ ಕಾಮಸ್ಯ ಭ್ರಮಕಾರಿಣೀ ।
ನ ಕದಾಪಿ ಮನೋಹರ್ತ್ರೀ ಬಭೂವ ಜಿತಚೇತಸಃ ॥

ಆದರಿಂದ ಕೃಷ್ಣನಿಗೆ

ಆದ್ದರಿಂದ ಕೃಷ್ಣ ಮದನನ ಬಾಣಕ್ಕೆ ಸಿಲುಕಲೇ ಇಲ್ಲ. ಸರ್ವಶಕ್ತನಾದ ಕೃಷ್ಣನ ಮುಂದೆ ಮದನನೆಷ್ಟರವನು ? 'ಮದನನು ಇವನ ಕುಮಾರನು' ಅಂದರೆ, ಅಪ್ರಬುದ್ಧನಾದ ಬಾಲಕ ! ಅವನೇನಾದರೂ ತಾನು ಒಬ್ಬ ಶೂರನಾದ ಬಿಲ್ಲುಗಾರನೆಂದು ಭ್ರಮಿಸಿ ಕೃಷ್ಣನನ್ನು ಇದಿರಿಸಲು ಹೋದರೆ ಅವನ ಭ್ರಮನಿರಸವಾಗಲು ವಿಲಂಬವಿಲ್ಲ. ಭಾಗವತವೆ ಹೇಳಿದೆ –

ತತ್ಸೃಷ್ಟ ಸೃಷ್ಟಿ ಸೃಷ್ಟೇಷು ಕೋ ನ್ವಖಂಡಿತಧೀಃ ಪುಮಾನ್ ।
ಋಷಿಂ ನಾರಾಯಣಮೃತೇ ಯೋಷಿನ್ಮಯ್ಯೇಹ ಮಾಯಯಾ ॥

ಕೃಷ್ಣನದೇ ಇನ್ನೊಂದು ರೂಪವಾದ ಬದರಿಕಾಶ್ರಮದ ನಾರಾಯಣಮುನಿಯ ಬಳಿಗೆ ದೇವಲೋಕದ ಎಲ್ಲ ಅಪ್ಸರೆಯರ ದಂಡಿನೊಂದಿಗೆ ಮನ್ಮಥ ಬಂದು ಹೂ ಬಾಣವೆಸೆದರೆ. ಮುನಿ ಒಂದಿಷ್ಟೂ ವಿಚಲಿತನಾಗದೆ ಒಂದು ಮುಗುಳು ನಗು ನಕ್ಕ. ಆ ನಗುವಿಗೆ ಮನ್ಮಥ ನಡುಗಿಹೋದ. ಮದನ 'ಕುಮಾರ' ಎಳೆಯ ಹುಡುಗನೆನ್ನುವುದು ಸ್ಪಷ್ಟವಾಯಿತು

'ಕುಮಾರ' ಎಂಬ ಶಬ್ದವನ್ನು ವಾದಿರಾಜರು ಈ ವಿಶಿಷ್ಟಾರ್ಥದಲ್ಲಿ ಯುಕ್ತಿಮಲ್ಲಿಕೆಯಲ್ಲಿ ಪ್ರಯೋಗಿಸಿದುದುಂಟು –

ಯದಿ ಬ್ರೂಷೇ ಜಡಂ ಶಕ್ತಂ ಜಿತಂ ಸಾಂಖ್ಯ ಕುಮಾರಕೈಃ ।

'ಪರಬ್ರಹ್ಮನನ್ನು ಅವಿದ್ಯೆಯು ಭಾಗ ಭಾಗವಾಗಿ ಕಿತ್ತು ಭೇದವನ್ನುಂಟು ಮಾಡುತ್ತದೆ ಎಂದರೆ ಜಡವಾದ ಆ ಅವಿದ್ಯೆಗೆ ಅಂಥ ಶಕ್ತಿ ಇದ್ದೀತೆ ? ಇದೆ ಎನ್ನುವದಾದರೆ ಜಡಪ್ರಕೃತಿಗೇ ಸೃಷ್ಟಿಕರ್ತೃತ್ವವನ್ನು ಹೇಳುವ ಸಾಂಖ್ಯರಿಗೆ ಈಗ ಏನೂ ಭಯವಿರಲಾರದು. ಅವರಲ್ಲಿ ಒಬ್ಬ ಅಪ್ರಬುದ್ಧ ಬಾಲಕನೂ ತನ್ನ ವಾದದಲ್ಲಿ ವಿಜಯ ಸಂಪಾದಿಸಿಯಾನು.'

ಕೃಷ್ಣ ಜಿತೇಂದ್ರಿಯನೇ ಆಗಿದ್ದ ಪಕ್ಷದಲ್ಲಿ ಗೋಪಿಕೆಯರಿಗೆ ಮನಸೋತಂತೆ ವರ್ತಿಸಿದುದರ ರಹಸ್ಯವೇನು ? ಎಂದರೆ, ಇದಕ್ಕೂ ಉತ್ತರ –

'ಮದನನಿವನ ಕುಮಾರನು' ತನ್ನ ಪ್ರೀತಿಯ ಮಗ ಮದನ, ಅಪ್ರಬುದ್ಧನೆಂದು ಅವನ ಕೈಯಿಂದ ತನ್ನೆದೆಗೆ ಬಾಣ ಎಸೆದುಕೊಂಡು ತಾನು ಸೋತಂತೆ ನಟಿಸುತ್ತ ಆಟವಾಡಿದನಷ್ಟೆ. ಮಕ್ಕಳ ಆಟದಲ್ಲಿ ಹಿರಿಯರು ಸೋತರೇ ಚೆನ್ನು. ಮಕ್ಕಳಿಗೆ ಖುಷಿ. ಬ್ರಹ್ಮವೈವರ್ತದ ಕೃಷ್ಣನೂ ಹೀಗೇ ಆಟ ಆಡಿದ. ಇದು ಅಲ್ಲಿಯೇ ಸ್ಪಷ್ಟವಿದೆ –

ಬಾಣಾಂಶ್ಚಿಕ್ಷೇಪ ಸರ್ವಾಂಶ್ಚ ಕಾಮೋ ಬಾಣಪರೀಕ್ಷಯಾ ।
ಸದ್ಯಃ ಸರ್ವೇ ಸಕಾಮಾಶ್ಚ ಬಭೂವುರೀಶ್ವರೇಚ್ಛಯಾ ॥

'ಕಾಮ ತನ್ನ ಬಾಣದ ಸಾಮರ್ಥ್ಯವನ್ನು ಪರೀಕ್ಷಿಸಲೆಂದು ಎಲ್ಲ ದೇವತೆಗಳೆದೆಗೂ ಅದನ್ನು ಎಸೆದ. ಎಲ್ಲರೂ ಈಶ್ವರೇಚ್ಛೆಯಿಂದ, ಅಂದರೆ ಪರಮಾತ್ಮನಾದ ಕೃಷ್ಣನ ಇಚ್ಛೆಯಿಂದ ಕಾಮಾವಿಷ್ಟರಾದರು' ಎಲ್ಲರ ನಡುವೆ ಕೃಷ್ಣ ತಾನೂ ಕಾಮಾವಿಷ್ಟನಾದ, ಈಶ್ವರೇಚ್ಛೆಯಿಂದಲೆ, ಇದು ನಟನೆಯೇ ತಾನೆ ? ಇದು, ಮದನ ತನ್ನ ಕುಮಾರನಾದುದರಿಂದ, ಅವನ ಸಂತೋಷಕ್ಕಾಗಿ ಎನ್ನಬೇಕು.

ಹೀಗೆ 'ಅದರಿಂದ ಕೃಷ್ಣನಿಗೆ ಜನ್ಮವೆಂಬುದು ಸಲ್ಲ' ಎಂದು ಕೃಷ್ಣನಿಗೆ ಜನ್ಮವಿಲ್ಲ ಎಂಬ ಅಂಶವನ್ನು ಹೇಳಿ, ಅದೇ ನುಡಿಯಲ್ಲಿ ಕೃಷ್ಣನಿಗೆ ಕಾಮಾಸಕ್ತಿ ಎಂಬುದಿಲ್ಲವೆಂದೂ ಹೇಳಿದುದು 'ಮದನನಿವನ ಕುಮಾರನು' ಎಂಬ ಒಂದೇ ಯುಕ್ತಿಯಿಂದ ಎರಡು ಪ್ರಮೇಯವನ್ನು ಸಾಧಿಸುವ ಕೌಶಲ್ಯವನ್ನು ಮೆರೆಸುವುದಕ್ಕಾಗಿ ಎಂದು ಗ್ರಹಿಸಬಹುದು. ಯುಕ್ತಿ ಶೂರರು ತಾನೆ ವಾದಿರಾಜರು ?

ಅಥವಾ ಪ್ರಾಕೃತ ಶರೀರ ತಳೆದು ಜನ್ಮ ಪಡೆದವರಿಗೆ ಪ್ರಕೃತಿಯ ರಜಸ್ತಮೋ ಗುಣಗಳಿಂದಾಗಿ ಮನಸ್ಸಿನಲ್ಲಿ ಕಾಮಾದಿವಿಕಾರ ಸಹಜ. ಆದ್ದರಿಂದಲೆ 'ಕಾಮನಿರ್ಜಿತನೊಬ್ಬ ಕಾಮಿನಿಗೆ ಸೋತೊಬ್ಬ ...' ಎಂಬಂತೆ ಶ್ರೀಹರಿಯನ್ನು ಬಿಟ್ಟರೆ ಉಳಿದವರೆಲ್ಲ ಕಾಮಾದಿ ವಿಕಾರ ಉಳ್ಳವರೆ. ಆದ್ದರಿಂದ ಶ್ರೀಹರಿಗೆ 'ಜನ್ಮವೆಂಬುದು ಸಲ್ಲ' ಎಂದುದು ಅವನಿಗೆ ಕಾಮಾದಿ ವಿಕಾರವಿಲ್ಲ ಎಂದು ಸಾಧಿಸುವುದಕ್ಕಾಗಿ. ಈಗ 'ಜನ್ಮವೆಂಬುದು ಸಲ್ಲ', 'ಮದನನಿವನ ಕುಮಾರನು' ಎಂದು ಎರಡು ಬೇರೆಬೇರೆ ಯುಕ್ತಿಗಳಿಂದ ಒಂದು ಪ್ರಮೇಯವನ್ನು ಸಾಧಿಸುವ ಬುದ್ಧಿವೈಭವವನ್ನು ವಾದಿರಾಜರು ಮೆರೆದಿದ್ದಾರೆ ಎನ್ನೋಣವೇ ?

— ೪೬ —

**ಅದರಿಂದ ಕೃಷ್ಣನಿಗೆ ಪರನಾರೀಸಂಗವ ಕೋ–**
**ವಿದರಾದ ಬುಧರು ನುಡಿವರೆ ?**
**ಸದರವೆ ಈ ಮಾತು ? ಸರ್ವವೇದಂಗಳು**
**ಮುದದಿಂದ ತಾವು ಸ್ತುತಿಸುವವು ॥**

'ಸುದತಿಯರಿಗೆ ಕೃಷ್ಣ ವಶನಾಗದವನಾಗಿರುವುದರಿಂದ ಕೃಷ್ಣನಿಗೆ ಪರನಾರೀ ಸಂಗವನ್ನು ಕೋವಿದರಾದ ಬುಧರು ನುಡಿಯುವರೆ ? ಇಂಥ ಮಾತನ್ನೂ

ಆಡುವಷ್ಟು ಸಲಿಗೆ ಉಚಿತವೆ ? ಏಕೆಂದರೆ ಎಲ್ಲ ವೇದಗಳೂ ಸಂತೋಷದಿಂದ ತಾವು ಕೃಷ್ಣನ ಲೀಲೆಗಳನ್ನು ಸ್ತುತಿಸುತ್ತಿವೆ'– ಎನ್ನುತ್ತಿದ್ದಾಳೆ ಮಹಾಲಕ್ಷ್ಮಿ.

ಪರೀಕ್ಷಿತನು ಶುಕಮುನಿಗಳಲ್ಲಿ ಹೀಗೆ ಕೇಳಿದ್ದಾನೆ– 'ಅಧರ್ಮವನ್ನು ಅಳಿಸಿ ಧರ್ಮವನ್ನು ಉಳಿಸಲೆಂದೆ ಅವತರಿಸಿ, ಧರ್ಮವನ್ನು ಬೋಧಿಸಿ ತಾನೂ ಮಾಡಿ ತೋರಿಸುವ ಕೃಷ್ಣ ತದ್ವಿರುದ್ಧವಾಗಿ ಪರನಾರೀ ಸಂಗವನ್ನು ಹೇಗೆ ಮಾಡಿದ ? ಆಪ್ತಕಾಮನಾದವನು ಇಂಥ ನೀಚ ಕಾರ್ಯಮಾಡಲು ಕಾರಣವಾದರೂ ಏನು ?'

ಶುಕಮುನಿಗಳು ಹೀಗೆ ಉತ್ತರಿಸಿದ್ದಾರೆ– 'ಪಾಪಕರ್ಮ ಮಾಡಿಯೂ ಅದನ್ನು ಅರಗಿಸಿಕೊಳ್ಳಬಲ್ಲ ಸಾಮರ್ಥ್ಯಶಾಲಿಗಳು ಕೆಲವೊಮ್ಮೆ ಪಾಪಕರ್ಮ ಮಾಡುವುದು ಉಂಟು. ಭಗವಂತನನ್ನು ಕಂಡ ಅಂಥ ಜ್ಞಾನಿಗಳೂ ಪಾಪಕರ್ಮ ಮಾಡಿದರೆ ಅವರಿಗೆ ಏನೂ ಅನಿಷ್ಟವಿಲ್ಲವೆಂದ ಮೇಲೆ ಭಗವಂತನಿಗೆ ಏನು ಅನಿಷ್ಟವಿದ್ದೀತು ? ಬೆಂಕಿ ಎಲ್ಲವನ್ನೂ ಸುಡುತ್ತದೆ ಹಾಗೇ ಶಕ್ತಿ ಇರುವವರು ಎಲ್ಲ ಪಾಪವನ್ನೂ ಅರಗಿಸಿಕೊಳ್ಳುತ್ತಾರೆ. ಉಳಿದವರು ಅದನ್ನು ಮನಸ್ಸಿನಲ್ಲಿಯೂ ಆಲೋಚಿಸಬಾರದು ರುದ್ರದೇವರು ಹಾಲಾಹಲವನ್ನು ಕುಡಿದರೆಂದು ಬೇರೆಯವರು ಕುಡಿದರೆ ನಾಶವಾಗುತ್ತಾರೆ. ಬುದ್ಧಿ ಉಳ್ಳವನು ಮಹಾತ್ಮರು ಮಾಡಿದುದನ್ನೆಲ್ಲ ಮಾಡದೆ ಅವರ ಉಪದೇಶಕ್ಕೆ ಅನುಸಾರಿಯಾದ ಅವರ ಕರ್ಮಗಳನ್ನು ಮಾತ್ರ ಮಾಡಬೇಕು'.

ಹೀಗೆ ಶುಕ ಪರೀಕ್ಷಿತರ ಸಂವಾದವನ್ನು ತಿಳಿದಿರುವ ಯಾವ ವಿದ್ವಾಂಸರೂ ಕೃಷ್ಣನಿಗೆ 'ಪರನಾರೀ ಸಂಗ' ಅಂದರೆ ಅದರಿಂದಾಗಬಹುದಾದ ಪಾಪಲೇಪ ಉಂಟೆಂದು ನುಡಿಯಲಾರರು.

ಶುಕಮುನಿಗಳು ಇನ್ನೊಂದು ಮಾತನ್ನು ಹೇಳಿದ್ದಾರೆ –

ಗೋಪೀನಾಂ ತತ್ಪತೀನಾಂ ಚ ಸರ್ವೇಷಾಮೇವ ದೇಹಿನಾಂ ।
ಯೋಽಂತಶ್ಚರತಿ.... ........ ॥

ಇಲ್ಲಿ 'ಯ' ಅಂದರೆ ಈ + ಅ. 'ಈ' = ಲಕ್ಷ್ಮಿ ಮತ್ತು 'ಅ' = ನಾರಾಯಣ. ಗೋಪಿಯರಲ್ಲೆಲ್ಲ ಲಕ್ಷ್ಮಿಯೂ, ಗೋಪರಲ್ಲೆಲ್ಲ ನಾರಾಯಣನೂ ಅಂತರ್ಯಾಮಿಯಾಗಿದ್ದಾರೆ. ಆದ್ದರಿಂದ ಕೃಷ್ಣನಿಗೆ ಗೋಪಿಯರಲ್ಲಿದ್ದ ಲಕ್ಷ್ಮಿಯಿಂದಲೇ ಸಾಕ್ಷಾತ್ ಸಂಪರ್ಕವಾಗಿದೆ ಎಂದು ಸತ್ಯಧರ್ಮರ ವ್ಯಾಖ್ಯಾನವಿದೆ. ಆದ್ದರಿಂದ ಕೃಷ್ಣನಿಗೆ ಸ್ವನಾರಿಯ ಸಂಗವೇ ಆಗಿದೆ ಹೊರತು ಪರನಾರೀಯ ಸಂಗವಾಗಲೇ ಇಲ್ಲ. ಪರನಾರೀ ಸಂಗದ ಪಾಪಲೇಪವೆಲ್ಲಿಯದು ? ಶುಕಮುನಿಗಳ

ಈ ಉಪದೇಶವನ್ನು ತಿಳಿದಿರುವ ಯಾವ ವಿದ್ವಾಂಸನೂ ಕೃಷ್ಣನಿಗೆ ಪರನಾರೀಸಂಗ ಉಂಟೆಂದು ನುಡಿಯಲಾರನು

ಗೋಪಿಯರಲ್ಲಿಯೂ ಕೃಷ್ಣನಿಗೆ ಸ್ವನಾರೀ ಸಂಗವೆ ಆಗಿದೆ ಎಂದೊಪ್ಪಿದರೂ,

'ಯಥಾರ್ಭಕಃ ಸ್ವಪ್ರತಿಬಿಂಬ ವಿಭ್ರಮಃ'

'ತನ್ನ ಪ್ರತಿಬಿಂಬದ ಮುಂದೆ ಸಣ್ಣ ಮಗು ತನ್ಮಯತೆಯಿಂದ ಆಟಪಾಡುವಂತೆ' ಕೃಷ್ಣನೂ ಗೋಪಿಯರೊಡನೆ ತನ್ಮಯತೆಯಿಂದಲೇ ರಮಿಸಿದನೆಂದರೆ ಇದು ಕೂಡ ಪರಿನಾರೀ ಸಂಗವೆ, ಪರವಾದ ಶ್ರೇಷ್ಠವಾದ, ಅಂದರೆ ಅತ್ಯಂತ ಗಾಢವಾದ ನಾರೀಸಂಗ ಹೆಣ್ಣಿನ ಆಸಕ್ತಿಯೇ ಶುಕಮುನಿಗಳೇ ಮಾಡಿದ ಈ ವರ್ಣನೆಯನ್ನು ತಿಳಿದ ವಿದ್ವಾಂಸರು ಕೃಷ್ಣನಿಗೆ ಈ ಅರ್ಥದಲ್ಲಿ ಪರನಾರೀಸಂಗವನ್ನು ಹೇಳಲಾರರೆ ? ಎಂಬ ಪ್ರಶ್ನೆ ಬರಬಹುದು.

ಆದರೆ, ಶುಕಮುನಿಗಳೇ,

'ರೇಮೇ ಸ ಭಗವಾನ್ ತಾಭಿರಾತ್ಮಾರಾಮೋಽಪಿ ಲೀಲಯಾ'

'ಭಗವಾನ್ ಶ್ರೀಕೃಷ್ಣ ಸ್ವರಮಣ. ಆದರೂ ಲೀಲೆಯಿಂದ ಗೋಪಿಯರೊಡನೆ ರಮಿಸಿದನು' ಎಂದಿದ್ದಾರೆ. ಗೋಪಿಯರಲ್ಲಿರುವ ರಮೆಯಲ್ಲಿಯೂ ಅವನಿಗೆ ಕಾಮಾಸಕ್ತಿ ಇಲ್ಲ ಆಕೆಯೂ ಅವನಿಗೆ ಪರನಾರಿಯೆ, ಅಂದರೆ ಪರಳಾದ ನಾರಿ, ತನ್ನದೇ ಆದ ಸ್ತ್ರೀರೂಪ ರಮೆಯಲ್ಲಿ ಇದೆ. ಅದುವೆ ತನಗೆ ಸ್ವನಾರಿ. ರಮೆ ತನಗಿಂತ ಅನ್ಯಳಾದ ನಾರಿ, ಪರನಾರಿ, ಅವಳಲ್ಲಿ ಅವನಿಗೆ ತನ್ನ ಮಹಾಭಕ್ತಳೆಂದು ಪರಮ ಪ್ರೀತಿಯೆ ಹೊರತು ಕಾಮಾಸಕ್ತಿ ಒಂದಿಷ್ಟೂ ಇಲ್ಲ. ಆದ್ದರಿಂದ ಅವನಿಗೆ ಪರನಾರಿಸಂಗ, ಅದರಲ್ಲಿಯೂ ಗಾಢವಾದ ಸಂಗ ಖಂಡಿತವಾಗಿಯೂ ಇಲ್ಲ. ಆದ್ದರಿಂದಲೇ ಕೃಷ್ಣ ತನ್ನ ವಿವಾಹಿತ ಪತ್ನಿಯರಲ್ಲಿ ರಮಿಸುವಾಗಲೂ ಅನಾಸಕ್ತಿಯಿಂದಲೇ ಇದ್ದ. 'ಮೂಢರು ಮಾತ್ರ ಅವನು ಆಸಕ್ತನಾಗಿದ್ದನೆನ್ನುತ್ತಾರೆ. ತಮ್ಮಂತೆಯೆ ಇತರರೂ ಎಂದು ತಿಳಿಯುವವರು ಅವರು' ಎಂದಿದ್ದಾರೆ, ಶುಕಮುನಿಗಳು–

ಮನ್ಯತೇ ತನ್ಮಯಂ ಲೋಕೋ ಹ್ಯಸಂಗಮಪಿ ಸಂಗಿನಂ ।
ಆತ್ಮೌಪಮ್ಯೇನ ಮನುಜಂ ವ್ಯಾಪೃಣ್ವಾನ ಮತೋಽಬುಧಃ ॥

ಮೇಲಿನ ಮಾತಿನಲ್ಲಿ 'ಅಬುಧಃ' ಎಂದು 'ಕೋವಿದರಾದ ಬುಧರು ನುಡಿವರೇ' ಎಂಬ ಆಕ್ಷೇಪವನ್ನೆ ಮಾಡಲಾಗಿದೆ.

ಆದರಿಂದ ಕೃಷ್ಣನಿಗೆ

ಆದರೆ 'ಕೋವಿದ'ರೆಂದರೂ 'ಬುಧ'ರೆಂದರೂ ತಿಳಿದವರೆಂದೇ ಅರ್ಥ. ಪುನರುಕ್ತಿಯಾಗಲಿಲ್ಲವೆ? ಎಂಬ ಪ್ರಶ್ನೆ ಬರಬಹುದು. ಅದರ ಪರಿಹಾರಕ್ಕೆ 'ಕೋವಿದ' ಶಬ್ದದ ಒಳಹೊಕ್ಕು ನೋಡಬೇಕು. 'ಕೋ' ಅಂದರೆ ವೇದ. 'ವಿದ' ಎಂದರೆ ಬಲ್ಲವ. ಕೋವಿದರಾದ ಬುಧರೆಂದರೆ ವೇದಜ್ಞರಾದ ವಿದ್ವಾಂಸರು. ಕೃಷ್ಣನಿಗೆ ಪರನಾರೀ ಸಂಗ ಉಂಟೆನ್ನುವ ಮಾತು ವೇದಜ್ಞರಾದ ವಿದ್ವಾಂಸರು ನುಡಿಯುವಂಥದ್ದಲ್ಲ. ಏಕೆಂದರೆ ಎಲ್ಲ ವೇದಗಳು ಕೃಷ್ಣನ ಶೃಂಗಾರಲೀಲೆಯನ್ನು ಸಂತೋಷದಿಂದ ಸ್ತುತಿಸುವವು. ವೇದಗಳೆಂದರೆ ವೇದಾಭಿಮಾನಿಗಳು, ವೇದ ಋಷಿಗಳು ಮತ್ತು ವೇದಗಳಿಂದ ಪರಮಾತ್ಮನನ್ನು ಸ್ತುತಿಸುವ ಎಲ್ಲ ಆಸ್ತಿಕರನ್ನೂ ಇಲ್ಲಿ ಇಟ್ಟುಕೊಳ್ಳಬೇಕು. ಎಲ್ಲ ವೇದಗಳೂ ಪರಮಾತ್ಮನಲ್ಲಿ ಯಾವ ದೋಷಗಳೂ ಇಲ್ಲವೆಂದು ಮುಕ್ತಕಂಠದಿಂದ ಹೇಳಿ ಕೊಂಡಾಡುತ್ತಿವೆ. ಜೊತೆಗೆ ಕೃಷ್ಣನ ಶೃಂಗಾರ ಲೀಲೆಯನ್ನೂ ಅಲ್ಲಲ್ಲಿ ಸೂಚ್ಯವಾಗಿ ಹೇಳಿವೆ. ಇದರಿಂದ ಎಲ್ಲ ವೇದಗಳೂ ಈ ಶೃಂಗಾರಲೀಲೆ ದೋಷಪೂರ್ಣವಲ್ಲವೆಂದು ಸ್ತುತಿಸಿದಂತಾಯಿತು.

ವೇದಗಳು ಕೃಷ್ಣಲೀಲೆಯನ್ನು ಹೇಳಿರುವುದಕ್ಕೆ ಕೆಲವು ಉದಾಹರಣೆಗಳು –

ನವ್ಯಾ ನವ್ಯಾ ಯುವತಯೋ ಭವಂತೀ–<br>ರ್ಮಹದ್ದೇವಾನಾಮಸುರತ್ವಮೇಕಂ ॥

ಅಸುಃ– ಪ್ರಾಣರೂಪಿಯಾದ ಶ್ರೀಹರಿ ಮತ್ತು ವಾಯುದೇವ, ಅವರಲ್ಲಿ ಭಕ್ತರಾದ ದೇವತೆಗಳು 'ಅಸುರ'ರು. ಇಂಥ ದೇವತೆಗಳ ಮಹತ್ತಾದ ವಿಲಕ್ಷಣವಾದ ಹರಿವಾಯುಭಕ್ತಿ ಎಂದರೆ ಇದುವೆ – ಅವರು ನವತಾರುಣ್ಯದ ನವಯುವತಿಯರಾದರು !

ಮೇಲಿನ ವೇದವಾಕ್ಯದಲ್ಲಿ 'ಹದಿನಾರು ಸಾವಿರ ಮಂದಿ ಅಗ್ನಿಪುತ್ರರಾದ ದೇವತೆಗಳು ತಾವು ಸ್ತ್ರೀಯರಾಗಿ ಹುಟ್ಟಬೇಕು, ಶ್ರೀಹರಿಯ ಪ್ರೇಯಸಿಯರಾಗಬೇಕೆಂಬ ವಿಲಕ್ಷಣವಾದ ಬಯಕೆಯಿಂದ ವಾಯು ದೇವರನ್ನು ತಪಸ್ಸಿನಿಂದ ಆರಾಧಿಸಿ ಆ ವರವನ್ನು ಪಡೆದರು. ಅದರಂತೆ ಕೃಷ್ಣನ ಹದಿನಾರು ಸಾವಿರ ಮಂದಿ ಪತ್ನಿಯರಾದರು' ಎಂಬ ಅಂಶದ ಉಲ್ಲೇಖವನ್ನು ಕಾಣಬಹುದು.

ತ್ವಂ ಕಾಮ ಸಹಸಾಸಿ ಪ್ರತಿಷ್ಠಿತೋ<br>ವಿಭುರ್ವಿಭಾವಾ ಸಖ ಆ ಸಖೀಯತೇ ॥ –ಅಥರ್ವವೇದ

'ಮನ್ಮಥನಂಥ ಸೊಬಗನೆ, ನೀನು ಸಾಹಸ ಮಾಡುವುದರಲ್ಲಿ ಒಳ್ಳೆಯ ಪ್ರತಿಷ್ಠಿತನಿರುವಿ. ಗೆಳೆಯ, ನೀನು ಎಲ್ಲೆಡೆ ಇರುವಿ, ನಮ್ಮ ಭಾವನೆಗಳನ್ನು ಅರ್ಥಮಾಡಿಕೊಳ್ಳುವಿ ಆದ್ದರಿಂದ ನಮಗೆ ಗೆಳೆಯನಾಗಿರು.'

ತತೋ ವಪೂಂಷಿ ಕೃಣುತೇ ಪುರೂಣಿ । – ಅಥರ್ವವೇದ

'ಅವನು ಬಹುರೂಪಗಳನ್ನು ಧರಿಸುತ್ತಾನೆ', ಅಥವಾ 'ಒಂದು ಶರೀರವನ್ನೆ ಬಹು ಶರೀರಗಳಾಗಿ ಮಾರ್ಪಡಿಸುತ್ತಾನೆ'.

ಮೇಲಿನ ಎರಡು ವೇದವಾಕ್ಯಗಳಲ್ಲಿಯೂ ಗೋಪಿಯರ ಹಾಗೂ ಹದಿನಾರು ಸಾವಿರ ಮಂದಿ ಪತ್ನಿಯರ ವೃತ್ತಾಂತ ಸೂಚ್ಯವಾಗಿ ಬಂದಿದೆ – ಗೋಪಿಯರು ಬೆಳದಿಂಗಳ ರಾತ್ರಿಯಲ್ಲಿ ಬಂದು ಸಾಕ್ಷಾತ್ ಮನ್ಮಥ ಮನ್ಮಥನಾದ ಕೃಷ್ಣನನ್ನು ಸೇರಿ ಸುಖಿಸಿದರು. ಆಗ ಕೃಷ್ಣ ಒಂದು ಅದ್ಭುತವನ್ನೇ ಮಾಡಿದ ಗೋಪಿಯರ ಒಂದೊಂದು ಶರೀರವನ್ನೇ ಎರಡೆರಡಾಗಿ ಮಾಡಿ ಒಂದು ಶರೀರದಲ್ಲಿ ಅವರು ತನ್ನ ಬಳಿ ಇರುವಂತೆಯೂ ಇನ್ನೊಂದು ಶರೀರದಲ್ಲಿ ತಮ್ಮ ತಮ್ಮ ಗಂಡಂದಿರ ಬಳಿ ಇರುವಂತೆಯೂ ಮಾಡಿದ್ದ. ಆದ್ದರಿಂದ ರಾತ್ರಿ ಇಡೀ ಬೆಳದಿಂಗಳ ವಿಹಾರ ಮಾಡಿದ್ದರೂ ಗೋಪಿಯರು ತಮ್ಮ ಗಂಡಂದಿರ ಆಕ್ಷೇಪಕ್ಕೊಳಗಾಗಲಿಲ್ಲ. ವಿಹಾರ ಕಾಲದಲ್ಲಿ ಕೃಷ್ಣ ತಾನೂ ಬಹುರೂಪ ಧರಿಸಿದ್ದ ಎಲ್ಲೆಡೆಯೂ ಅವನೇ ಗೋಪಿಯರಿಗೆ ಕಂಡುಬರುತ್ತಿದ್ದ ಹದಿನಾರು ಸಾವಿರ ಮಂದಿ ಪತ್ನಿಯರನ್ನು ಆಳುವಾಗಲೂ ಕೃಷ್ಣ ತಾನೂ ಹದಿನಾರು ಸಾವಿರ ರೂಪ ಧರಿಸುವ ಅದ್ಭುತ ಮಾಡಿದ. ಎಲ್ಲ ಹದಿನಾರು ಸಾವಿರ ಸ್ತ್ರೀಯರ ಅಂತಃಪುರಗಳಲ್ಲಿಯೂ ಅವನೇ ಇದ್ದ. ಇದಕ್ಕೆ ನಾರದರೇ ಪ್ರತ್ಯಕ್ಷ ಸಾಕ್ಷಿ!

ಹೀಗೆ ವೇದವೇದ್ಯನಾದ ಶ್ರೀಕೃಷ್ಣನ ಶೃಂಗಾರಲೀಲೆಯ ಬಗ್ಗೆ ಸಲಿಗೆಯಿಂದ ಹಗುರವಾಗಿ ಮಾತನಾಡುವುದು ಉಚಿತವಾಗಲಾರದು ಎನ್ನುತ್ತಾಳೆ ಮಹಾಲಕ್ಷ್ಮಿ.

– ೪೭ –

**ಎಂದ ಭಾಗವತದ ಚಂದದ ಮಾತನು**
**ಮಂದ ಮಾನವ ಮನಸಿಗೆ ।**
**ತಂದಕೊ ಜಗಕೆ ಕೈವಲ್ಯ ಈವ ಮು–**
**ಕುಂದಗೆ ಕುಂದು ಕೊರತೆ ಸಲ್ಲದು ॥**

'ಆದರಿಂದ ಕೃಷ್ಣನಿಗೆ ಪರನಾರೀಸಂಗ ಉಂಟೆಂದು ಕೋವಿದರಾದ ಬುಧರು ನುಡಿವರೆ? ಸದರವೇ ಈ ಮಾತು? ಸರ್ವವೇದಗಳೂ ಮುದದಿಂದ ತಾವು ಸ್ತುತಿಸುವುವು!' ಎನ್ನುವ ಅರ್ಥದಲ್ಲಿ ಬರುವ ಭಾಗವತದ ಚಂದದ ಮಾತನ್ನು, ಓ ಮಂದ ಮಾನವನೆ, ಮನಸ್ಸಿಗೆ ತಂದುಕೊಳ್ಳು. ಜಗತ್ತಿಗೆ ಕೈವಲ್ಯ ನೀಡುವುದರಿಂದಲೆ ಮುಕುಂದನೆನಿಸಿದ ಕೃಷ್ಣನಲ್ಲಿ ಯಾವ ಕುಂದು ಕೊರತೆಯೂ ಸಲ್ಲದು ಎನ್ನುತ್ತಿದ್ದಾಳೆ ಮಹಾಲಕ್ಷ್ಮಿ.

ಭಾಗವತದ ಮಾತೆಲ್ಲವು ಚಂದ. ಗರುಡ ಪುರಾಣದಲ್ಲಿ ಹೇಳಿದಂತೆ ಭಾಗವತ ಬ್ರಹ್ಮಸೂತ್ರಕ್ಕೆ ಅನುಗುಣವಾಗಿ ಶ್ರುತ್ಯರ್ಥವನ್ನು ಅನುವಾದ ಮಾಡುವ ಗ್ರಂಥ. ಮಹಾಭಾರತದಲ್ಲಿ ವರ್ಣಿಸಿದ ಭಗವಂತನ ಮಹಿಮೆಯನ್ನೇ ಅದು ಅಪಾರವೆನ್ನುವುದನ್ನು ಖಚಿತಗೊಳಿಸಲು, ಇನ್ನೂ ಅಧಿಕವಾಗಿ ವರ್ಣಿಸಲು ಹೊರಟಿರುವ ಗ್ರಂಥ. ಗಾಯತ್ರೀ ಮಂತ್ರದಲ್ಲಿ ಧೀಮಹಿ ಎಂದು ಹೇಳಿದ ಧ್ಯಾನವನ್ನು ಹೇಗೆ ಮಾಡಬೇಕು ? ಭಗವಂತನ ಯಾವ ಯಾವ ಮಹಿಮೆಯನ್ನು ಹೇಗೆ ಚಿಂತಿಸಬೇಕನ್ನುವುದನ್ನು ವಿಶದಗೊಳಿಸುತ್ತ ಗಾಯತ್ರಿಗೆ ಭಾಷ್ಯದಂತಿರುವ ಗ್ರಂಥ. ಸಕಲ ವೇದಗಳ ಸಾರಭೂತವಾದ ವಿಷ್ಣುಭಕ್ತಿಯನ್ನು ಹೇಳಲು ಹೊರಟ ಗ್ರಂಥ.

ಗರುಡ ಪುರಾಣವು ಹೇಳುವ ಈ ಮಾತಿಗೆ ಭಾಗವತದಲ್ಲಿಯೇ ಸಾಕ್ಷಿ ದೊರೆಯುತ್ತದೆ. ಭಾಗವತ ಬ್ರಹ್ಮಸೂತ್ರಗಳಿಗಿರುವ ನಿಕಟ ಸಂಬಂಧಕ್ಕೆ ಭಾಗವತದ ಮಂಗಲ ಪದ್ಯದಲ್ಲಿಯೇ ಬರುವ 'ಜನ್ಮಾದ್ಯಸ್ಯ ಯತಃ' ಎಂಬ ಒಂದು ಬ್ರಹ್ಮಸೂತ್ರವೇ ಸಾಕ್ಷಿ. ಭಾಗವತ ಮಹಾಭಾರತವು ಹೇಳುವ ವಿಷ್ಣುಮಹಿಮೆಯ ಅಪಾರತೆಯನ್ನು ಖಚಿತಪಡಿಸಲು ಹೊರಟ ಗ್ರಂಥವೆನ್ನುವುದಕ್ಕೆ,

ಯಥಾ ಧರ್ಮಾದಯೋ ಹ್ಯರ್ಥಾ ಮುನಿವರ್ಯಾನುವರ್ಣಿತಾಃ ।
ನ ತಥಾ ವಾಸುದೇವಸ್ಯ ಮಹಿಮಾ ಹ್ಯನುವರ್ಣಿತಃ ॥

'ಮಹಾಭಾರತದಲ್ಲಿ ಧರ್ಮಾದಿ ನಾಲ್ಕು ಪುರುಷಾರ್ಥಗಳನ್ನು ವಿಸ್ತಾರವಾಗಿ ನಿರೂಪಿಸಲಾಗಿದೆ ಅಲ್ಲಿಗೆ ಆ ಕೆಲಸ ಪೂರ್ತಿಯಾಗಿದೆ. ವಾಸುದೇವನ ಮಹಿಮೆಯನ್ನು ಮಾತ್ರ ಅಲ್ಲಿ ವಿಸ್ತಾರವಾಗಿಯೇ ಹೇಳಿದ್ದರೂ ಅವನ ಮಹಿಮೆಗೆ ಪಾರವಿಲ್ಲದುದರಿಂದ ಅದು ಪೂರ್ತಿಯಾಗುವುದಿಲ್ಲ. ಎಷ್ಟು ಹೇಳಿದರೂ ಕಡಿಮೆಯೆ.' ಆದ್ದರಿಂದ ಧರ್ಮಾದಿಗಳ ನಿರೂಪಣೆಯನ್ನು ಬಿಟ್ಟು, ಕೇವಲ ಭಗವಂತನ ಮಹಿಮೆಯನ್ನೇ ಹೇಳುವ ಒಂದು ಗ್ರಂಥವನ್ನು ರಚಿಸೆಂದು ನಾರದರು ವೇದವ್ಯಾಸರಲ್ಲಿ ಪ್ರಾರ್ಥಿಸಿದುದೂ, ಅದಕ್ಕನುಗುಣವಾಗಿ ವ್ಯಾಸರು ಭಾಗವತವನ್ನು ರಚಿಸಿದುದೂ ಸಾಕ್ಷಿ ಎನ್ನಬಹುದು ಭಾಗವತ ಗಾಯತ್ರಿಗೆ ಭಾಷ್ಯದಂತಿದೆ ಎನ್ನಲು ಭಾಗವತ ಮಂಗಲ ಪದ್ಯದಲ್ಲಿಯೇ ಬರುವ 'ಧೀಮಹಿ' ಎಂಬ ಗಾಯತ್ರಿಯ ಒಂದು ಪದವೇ ಸಾಕ್ಷಿ. ಭಾಗವತ ವೇದಸಾರವಾದ ವಿಷ್ಣುಭಕ್ತಿಯನ್ನು ಪ್ರತಿಪಾದಿಸಲು ಹೊರಟಿದೆ ಎನ್ನಲು ಅದರೊಳಗೆ ಹಾಸುಹೊಕ್ಕಾಗಿ ಸಹೃದಯ ವೇದ್ಯವಾಗಿರುವ ಭಕ್ತಿರಸವೇ ಸಾಕ್ಷಿ.

ಭಾಗವತದ ಮಾತು ಎಷ್ಟು ಚಂದವೆಂಬುದನ್ನು ಭಾಗವತವೇ ಹೇಳುತ್ತದೆ– 'ವೇದವೆಂಬ ಕಲ್ಪವೃಕ್ಷದಿಂದ ವೇದವ್ಯಾಸರು ಬೀಳಿಸಿದ ಹಣ್ಣು ಭಾಗವತ.'

ಸಕಲ ಶಾಸ್ತ್ರಗಳ ಸಾರಭೂತವಾದ್ದರಿಂದ ಭಾಗವತ ಬರಿಯ ಪುರಾಣವಲ್ಲ, ಶಾಸ್ತ್ರ ಎಂದು ಪದ್ಮಪುರಾಣ ಪದೇ ಪದೇ ಅನ್ನುತ್ತದೆ–

'ಶ್ರೀಮದ್ಭಾಗವತಂ ಶಾಸ್ತ್ರಂ ಕಲೌ ಕೀರೇಣ ಭಾಷಿತಂ।'
'ಮೇನಿರೇ ಭಗವದ್ರೂಪಂ ಶಾಸ್ತ್ರಂ ಭಾಗವತಂ ಕಲೌ।'
'ಏಕಂ ಭಾಗವತಂ ಶಾಸ್ತ್ರಂ ಮುಕ್ತಿದಾನೇನ ಗರ್ಜತಿ।'... ಇತ್ಯಾದಿ

ಭಾಗವತದ ಶ್ಲೋಕ ಶ್ಲೋಕಗಳಲ್ಲಿ ಪದಪದಗಳಲ್ಲಿ ವೇದಾರ್ಥವೇ ತುಂಬಿದೆ– 'ತತ್ಕಥಾಸು ತು ವೇದಾರ್ಥಃ ಶ್ಲೋಕೇ ಶ್ಲೋಕೇ ಪದೇ ಪದೇ।'

ವೇದಾರ್ಥಗಳಿಂದ ತುಂಬಿದ ದೊಡ್ಡ ಶಾಸ್ತ್ರವೆಂದೊಡನೆ ಭಾಗವತ ಬಹು ಜಟಿಲ ಗ್ರಂಥವೆಂದರ್ಥವಲ್ಲ.

ಧನಂಜಯೋ ಹಾಟಕಸಂಪರೀಕ್ಷಾ ಮಹಾಹವೇ ಯೋಧಸುಸಂಪರೀಕ್ಷಾ।
ವಿಪತ್ತಿಕಾಲೇ ಗೃಹಿಣೀಪರೀಕ್ಷಾ ವಿದ್ಯಾವತಾಂ ಭಾಗವತೇ ಪರೀಕ್ಷಾ॥

'ಬೆಂಕಿಯಲ್ಲಿ ಚಿನ್ನಕ್ಕೆ ಪರೀಕ್ಷೆ, ಹಾಗೆ ಯುದ್ಧದಲ್ಲಿ ಯೋಧನಿಗೆ, ಆಪತ್ತಿನಲ್ಲಿ ಗೃಹಿಣಿಗೆ, ಭಾಗವತದಲ್ಲಿ ವಿದ್ವಾಂಸರಿಗೆ ಪರೀಕ್ಷೆ' ಎನ್ನುವ ಮಾತು ಉಂಟು. ಆದರಿಂದ ವಿದ್ವಾಂಸರ ವಿದ್ವತ್ತೆಯನ್ನೆ ಒರೆಗೆ ಹಚ್ಚುವಂಥ ಕ್ಲಿಷ್ಟವಾದ ಗ್ರಂಥ ಭಾಗವತ ಎಂದು ತಿಳಿಯಬಾರದು. ವೇದಕಲ್ಪವೃಕ್ಷದಿಂದ ಬಿದ್ದ ಭಾಗವತವೆಂಬ ಹಣ್ಣು ಬರಿಯ ರಸಗವಳ. ಈ ಹಣ್ಣಿನಲ್ಲಿ ನೀರಸವಾದ ಸಿಪ್ಪೆ ಗೊರಟೆಯೊಂದೂ ಇಲ್ಲ.

'ಶ್ರೀಮದ್ಭಾಗವತಂ ನಾಮ ಪುರಾಣಂ ರಸ ಏವ ಹಿ'

'ಶ್ರೀಮದ್ಭಾಗವತ ಒಂದು ಪುರಾಣವೆಂದೇ ಪ್ರಸಿದ್ಧವಾದರೂ ಎಲ್ಲ ಪುರಾಣಗಳಂತಲ್ಲ. ಅದು ಬರಿಯ ರಸವೆ'– ಎನ್ನುತ್ತದೆ ಪದ್ಮಪುರಾಣ. 'ಪಿಬತ ಭಾಗವತಂ ರಸಂ', 'ಭಾಗವತವೆಂದರೆ ರಸವೆ, ಅದನ್ನು ಕುಡಿಯಿರಿ' ಎಂದು ಭಾಗವತವೆ ಹೇಳುತ್ತದೆ.

ಉರುಕ್ರಮಸ್ಯಾಖಿಲ ಬಂಧಮುಕ್ತಯೇ
ಸಮಾಧಿನಾನುಸ್ಮರ ಯದ್ವಿಚೇಷ್ಟಿತಂ॥

ಎಂದು ಭಾಗವತವೇ ಹೇಳುವಂತೆ ಭಗವಂತನ ಮಹಿಮೆಯನ್ನು ಸಮಾಧಿ ಭಾಷೆಯಿಂದ ಅಂದರೆ ಸ್ಪಷ್ಟವಾದ ಮಾತಿನಿಂದ ತಿಳಿಸುವ ಗ್ರಂಥ ಭಾಗವತ ವಿದ್ವಾಂಸರು ಕಷ್ಟಪಡಬೇಕಾಗಿಲ್ಲ. ಆದ್ದರಿಂದ ವಿದ್ವಾಂಸರಿಗೆ ಭಾಗವತದಲ್ಲಿ ಪರೀಕ್ಷೆ

ಎಂದರೆ ಭಾಗವತದಲ್ಲಿ ಹೇಳಿದ ಭಗವಂತನ ಮಹಿಮೆಯನ್ನು ತಿಳಿದವರೆ ವಿದ್ವಾಂಸರು. ಉಳಿದವರು ಎಲ್ಲರೂ ಕೇವಲ ವ್ಯರ್ಥಶ್ರಮ ಮಾಡಿದವರು ಎಂದೇ ಅರ್ಥ.

ಆದ್ದರಿಂದ ಭಾಗವತದ ಮಾತೆಲ್ಲವೂ ಚಂದ. ಅದರಲ್ಲಿಯೂ 'ಕೃಷ್ಣನಿಗೆ ಪರನಾರೀ ಸಂಗವ ಕೋವಿದರಾದ ಬುಧರು ನುಡಿವರೆ ? ಸದರವೇ ಈ ಮಾತು ? ಸರ್ವವೇದಂಗಳು ಮುದದಿಂದ ತಾವು ಸ್ತುತಿಸುವವು' ಎಂಬ ಅರ್ಥದ ಭಾಗವತ ವಚನಗಳಂತೂ ಇನ್ನೂ ಚಂದ. ಏಕೆಂದರೆ ಕೃಷ್ಣನು ಗೋಪಿಯರೊಡನೆ ಆಡಿದ ಚೆಲ್ಲಾಟ ಸರಿಯಲ್ಲವೆಂದು ಪರೀಕ್ಷಿತ ಬಲವಾಗಿ ಆಕ್ಷೇಪಿಸಿದಾಗ ಅಷ್ಟೇ ಬಲವಾಗಿ ಶುಕಮುನಿಗಳು ಅದನ್ನು ಪರಿಹಾರ ಮಾಡಿದರು. ಅಬುಧರು ಅಂದರೆ ಅಜ್ಞರು ಮಾತ್ರ ಕೃಷ್ಣನನ್ನು ಸ್ತ್ರೀಲೋಲುಪನೆಂದು ಹೇಳುವರು ಎಂದೂ ಭಾಗವತ ಹೇಳುತ್ತಿದೆ. 'ವಿನಶ್ಯತ್ಯಾಚರನ್ ಮೌಢ್ಯಾತ್', 'ಮೂರ್ಖತನದಿಂದ ಕೃಷ್ಣನನ್ನು ಅನುಕರಿಸುವುದು ವಿನಾಶಕ್ಕೆ ದಾರಿ' ಎಂದು ಹೇಳುತ್ತ ರಾಸಲೀಲೆಯನ್ನು 'ವೇದಗಳು ಮುದದಿಂದ ಸ್ತುತಿಸುತ್ತಿವೆ' ಎಂಬುದನ್ನು ಸುಂದರವಾಗಿ ಹೀಗೆ ಹೇಳುತ್ತಿದೆ–

ತದ್ದರ್ಶನಾಹ್ಲಾದ ವಿಧೂತ ಹೃದ್ರುಜೋ
ಮನೋರಥಾಂತಂ ಶ್ರುತಯೋ ಯಥಾ ಯಯುಃ ॥

'ಶ್ರುತಿಗಳು ಮನಃ ಪೂರ್ತಿಯಾಗಿ ಕೃಷ್ಣನ ಶೃಂಗಾರಲೀಲೆಯನ್ನು ಹೇಗೆ ಹೊಗಳಿವೆಯೋ ಹಾಗೆಯೆ, ಆ ವರ್ಣನೆ ಅಕ್ಷರಶಃ ನಿಜವಾಗುವಂತೆಯೆ, ಗೋಪಿಯರೂ ಕೃಷ್ಣನನ್ನು ಮನಃ ಪೂರ್ತಿಯಾಗಿ ಸೇವಿಸಿದರು.' ಇಲ್ಲಿ ಯಥಾ ಎಂಬ ಉಪಮಾನ ವಾಚಕವನ್ನೇ ಪ್ರಕಾರವಾಚಕವಾಗಿ ಗ್ರಹಿಸಿದಾಗ ವೇದಗಳು ಬಣ್ಣಿಸಿದ ರೀತಿಯಲ್ಲಿ ಗೋಪಿಯರು ರಾಸವಾಡಿದರು ಎಂದು ಅರ್ಥ ಹೊರಡುತ್ತದೆ. ವೇದಗಳಲ್ಲಿ ರಾಸಲೀಲೆಯ ವರ್ಣನೆ ಹಿಂದೆ ಹೇಳಿದಂತೆ ಕೆಲವಡೆ ಸಿಗುತ್ತದೆ. ಇನ್ನೂ ಅನೇಕ ಅಂಥ ವಾಕ್ಯಗಳು ವೇದದಲ್ಲಿ ಹಿಂದೆ ಇದ್ದು ಈಗ ಲುಪ್ತವಾಗಿರಬಹುದು. ಅಂತೂ ವೇದ ತುಲ್ಯವಾದುದು ಭಾಗವತ –

'ಇದಂ ಭಾಗವತಂ ನಾಮ ಪುರಾಣಂ ಬ್ರಹ್ಮಸಂಮ್ಮಿತಂ'

ಆದ್ದರಿಂದ ವೇದೋಕ್ತವಾದ ಕೃಷ್ಣಲೀಲೆಯನ್ನು ಭಾಗವತ ಹೇಳುತ್ತಿರುವುದರಲ್ಲಿ ಸಂಶಯವಿಲ್ಲ. ಮಂದ ಮಾನವ, ನೀನು ನಿನ್ನ ಮಂದಮತಿಯನ್ನೇ ಆಧರಿಸಿಕೊಂಡು ವೇದ ವೇದ್ಯವಾದ ಭಾಗವತ

ಪ್ರತಿಪಾದ್ಯವಾದ ಕೃಷ್ಣನ ಚರಿತ್ರೆಯನ್ನು ಅಳೆಯುವ ಸಾಹಸಕ್ಕೆ ತೊಡಗಬೇಡ. ಭಾಗವತದ ಚಂದದ ಮಾತನ್ನೇ ಮನಸ್ಸಿಗೆ ತಂದು ಕೊಳ್ಳು

ಭಾಗವತದ ಚಂದದ ಮಾತೇ ಶ್ರೀಕೃಷ್ಣನನ್ನು ಮುಕುಂದನೆಂದು ಕರೆದಿದೆ –

ವಾಮ ಬಾಹುಕೃತ ವಾಮ ಕಪೋಲೋ
ವಲ್ಗಿತ ಭ್ರುರಧರಾರ್ಪಿತ ವೇಣುಂ ।
ಕೋಮಲಾಂಗುಲಿಭಿರಾಶ್ರಿತ ಮಾರ್ಗಂ
ಗೋಪ್ಯ ಈರಯತಿ ಯತ್ರ ಮುಕುಂದಃ ॥

ಮುಕುಂದ ಎಂದರೆ, ಮುಕುಂ = ಮುಕ್ತಿಯನ್ನು, ದ = ಕೊಡುವವನು. ಕಾತ್ಯಾಯನೀ ವ್ರತದಲ್ಲಿದ್ದ ಗೋಪಿಯರ ವಸ್ತ್ರಾಪಹಾರ ಮಾಡಿದ ಕೃಷ್ಣ ಅವರಿಗೆ ಹೀಗೆ ಹೇಳುತ್ತಾನೆ–

ನ ಮಯ್ಯಾವೇಶಿತಧಿಯಾಂ ಕಾಮಃ ಕಾಮಾಯ ಕಲ್ಪತೇ ।
ಭರ್ಜಿತಾ ಕ್ವಥಿತಾ ಧಾನಾ ಪ್ರಾಯೋ ಬೀಜಾಯ ನೇಷ್ಯತೇ ॥

'ನನ್ನಲ್ಲಿ ಮನಸ್ಸನ್ನು ನೆಟ್ಟರೆ ಕಾಮ ಕಾಮವಾಗಿ ಉಳಿಯುವುದಿಲ್ಲ. ಅದು ವಿಷಯಾಸಕ್ತಿಯನ್ನು ಉಂಟುಮಾಡುವುದಿಲ್ಲ. ಹುರಿದ ಅಥವಾ ಬೆಂದ ಬೀಜ, ಬೀಜವಾಗಿರುವುದಿಲ್ಲ, ಅಂದರೆ ಅಂಕುರಿಸುವುದಿಲ್ಲ'. ಹೀಗೆ ತನ್ನಲ್ಲಿ ಮನಸ್ಸನ್ನಿಟ್ಟವರಿಗೆ ಅವರ ಸುಪ್ತ ಕಾಮಾದಿ ದೋಷಗಳನ್ನು ಅಲ್ಲಿಯೆ ಹುರಿದು ಹಾಕಿ ಮುಂದೆ ಅದು ಅಂಕುರಿಸಿ ಹೆಮ್ಮರವಾಗದಂತೆ ನೋಡಿಕೊಳ್ಳುತ್ತಾನೆ, ಸಂಸಾರದಿಂದ ಮುಕ್ತಿ ನೀಡುತ್ತಾನೆ ಕೃಷ್ಣ. ಅಂಥ ಕೃಷ್ಣನಲ್ಲಿ ಕಾಮಾದಿ ದೋಷಗಳಿರಬಲ್ಲವೆ ? ಯಾವ ಕುಂದು ಕೊರತೆಯೂ ಮುಕುಂದನಲ್ಲಿ ಸಲ್ಲದು ಎನ್ನುತ್ತಿದ್ದಾಳೆ ಮಹಾಲಕ್ಷ್ಮಿ.

– ೪೮ –

**ಹತ್ತು ವರುಷದ ಕೆಳಗೆ ಮಕ್ಕಳಾಟಿಕೆಯಲ್ಲಿ**
**ಚಿತ್ತ ಸ್ತ್ರೀಯರಿಗೆ ಎರಗುವುದೆ ?**
**ಆರ್ತಿಯಿಂದರ್ಚಿಸಿದ ಗೋಕುಲದ ಕನ್ನೆಯರ**
**ಸತ್ಯ ಸಂಕಲ್ಪ ಬೆರತಿದ್ದ ॥**

ಹತ್ತುವರ್ಷದ ಕೆಳಗಿನ ವಯಸ್ಸಿನಲ್ಲಿ, ಇನ್ನೂ ಮಕ್ಕಳಾಟಿಕೆಯಲ್ಲಿ ಇರುವಾಗ ಮಕ್ಕಳಿಗೆ ಸ್ತ್ರೀಸಂಗದ ಬಯಕೆ ಉಂಟಾಗುವುದೆ ? ಶ್ರೀಕೃಷ್ಣ ಹತ್ತುವರ್ಷದ ಕೆಳಗಿನ

ವಯಸ್ಸಿನಲ್ಲಿ ಮಕ್ಕಳಾಟಿಕೆಯಲ್ಲಿ ಇರುವಾಗಲೆ ಗೋಕುಲದ ಕನ್ನಿಕೆಯರ ಜೊತೆಗೆ ಬೆರೆತಿದ್ದ. ಆದ್ದರಿಂದ ಸ್ತ್ರೀಸಂಗದ ಬಯಕೆ ಇತ್ತೆಂದು ಭಾವಿಸಕೂಡದು. ಆ ಕನ್ನಿಕೆಯರು ಪ್ರೀತಿ ಭಕ್ತಿಗಳಿಂದ ಕೃಷ್ಣನನ್ನು ಅರ್ಚಿಸಿದ್ದರು. ಆದ್ದರಿಂದಲೇ ಸತ್ಯಸಂಕಲ್ಪನಾದ ಕೃಷ್ಣ ಅವರ ಜೊತೆಗೆ ಬೆರೆತಿದ್ದ ಎನ್ನುತ್ತಿದ್ದಾಳೆ ಮಹಾಲಕ್ಷ್ಮಿ.

ಹರೆಯದ ಹೆಣ್ಣುಮಕ್ಕಳು ಗೋಪಿಯರು ನಗ್ನರಾಗಿ ಜಲವಿಹಾರ ಮಾಡುತ್ತಿದ್ದಾಗ ಹದಿ ಹರೆಯದ ಕೃಷ್ಣ ಕದ್ದು ನೋಡಿ ಅವರ ವಸ್ತ್ರಾಪಹಾರ ಮಾಡಿದ ಅವರ ನೋಟವನ್ನು ಕದ್ದ, ಮನವನ್ನೂ ಕದ್ದ ಎಂದೆಲ್ಲ ಆರೋಪಿಸುವುದುಂಟು. 'ಸದರವೇ ಈ ಮಾತು?' ಎನ್ನುತ್ತಿದ್ದಾಳೆ ಮಹಾಲಕ್ಷ್ಮಿ. ಏಕೆಂದರೆ ಇವರು ಹೇಳುವುದು ಭಾಗವತದ ಕಥೆಯಲ್ಲ. ಭಾಗವತದಲ್ಲಿ ಬೇರೆ ಕತೆಯಿದೆ. ಈ ಹೆಣ್ಣುಮಕ್ಕಳು ಲಕ್ಷ್ಮೀಶೋಭನಪದದಲ್ಲಿ ಗೋಕುಲದ 'ಕನ್ನೆಯರು' ಕನ್ನೆಯರೆಂದರೆ ಹತ್ತು ವರ್ಷದ ಹುಡುಗಿಯರು

ಅಷ್ಟವರ್ಷಾ ಭವೇದ್ ಗೌರೀ ದಶವರ್ಷಾ ಚ ಕನ್ಯಕಾ ।
ಸಂಪ್ರಾಪ್ತೇ ದ್ವಾದಶೇ ವರ್ಷೇ ಕುಮಾರೀತ್ಯಭಿಧೀಯತೇ ॥

'ಎಂಟು ವರ್ಷದ ಹುಡುಗಿ ಗೌರಿ ಹತ್ತು ವರ್ಷದವಳು ಕನ್ನಿಕೆ. ಹನ್ನೆರಡು ವರ್ಷದವಳಾದಾಗ ಕುಮಾರಿಯೆನಿಸುವಳು.'

ಭಾಗವತದಲ್ಲಿ ವಸ್ತುತಃ ಈ ಹೆಣ್ಣುಮಕ್ಕಳನ್ನು ಕುಮಾರಿಯರೆನ್ನಲಾಗಿದೆ

'ಹೇಮಂತೇ ಪ್ರಥಮೇ ಮಾಸಿ ನಂದವ್ರಜ ಕುಮಾರಿಕಾಃ'

ಕುಮಾರಿಯರೆಂದರೆ ಹನ್ನೆರಡು ವರ್ಷದ ಹೆಣ್ಣುಮಕ್ಕಳು. ಆದರೆ ಎಲ್ಲರೂ ಹನ್ನೆರಡು ವರ್ಷದವರೆಂಬ ಅಭಿಪ್ರಾಯವಲ್ಲ. ಎಲ್ಲರೂ ಹನ್ನೆರಡೇ ವಯಸ್ಸಿನವರಾಗಿರುವುದು ಸಂಭವನೀಯವೂ ಅಲ್ಲ. ಸುಮಾರು ಹತ್ತು ಹನ್ನೆರಡು ವಯಸ್ಸಿನವರು ಎಂಬುದು ಅಭಿಪ್ರಾಯ. ಇದನ್ನು ಸೂಚಿಸಲು ಭಾಗವತದ 'ಕುಮಾರಿ'ಯರನ್ನು ಲಕ್ಷ್ಮೀಶೋಭನ ಪದ 'ಕನ್ನೆ'ಯರೆಂದು ಕರೆದಿದೆ.

ಹೀಗೆ ಗೋಕುಲದ ಕನ್ನೆಯರು ಹರೆಯದ ಹೆಣ್ಣುಗಳಲ್ಲವೆನ್ನುವುದು ಸ್ಪಷ್ಟ. ಇಂಥ ಹೆಣ್ಣುಗಳ ನೋಟ ಕದಿಯಲು ಕೃಷ್ಣ ಬರುವುದು ಸಂಭವನೀಯವೂ ಅಲ್ಲ. ಈ ಆರೋಪ ನಿಜವಿರುತ್ತಿದ್ದರೆ ಕೃಷ್ಣ ಯಾರಿಗೂ ತಿಳಿಯದಂತೆ ಒಬ್ಬನೆ ಬರುತ್ತಿದ್ದ. ತನ್ನೆಲ್ಲ ಜತೆಯ ಹುಡುಗರನ್ನು ಕರೆದುಕೊಂಡು ಬರುತ್ತಿರಲಿಲ್ಲ. ಭಾಗವತ ಹೇಳುತ್ತದೆ–

ವಯಸ್ಯೈರಾವೃತಸ್ತತ್ರ...... ......... ।

'ಕೃಷ್ಣ ತನ್ನ ಗೆಳೆಯರೊಂದಿಗೆ ಅಲ್ಲಿಗೆ ಹೋಗಿದ್ದ'

ಕೊನೆಯಲ್ಲಿ ಗೋಪಿಯರು ನಗ್ನರಾಗಿಯೇ ನೀರಿಂದ ಮೇಲೆ ಬಂದು ನಿಂತು ಎರಡು ಕೈಗಳನ್ನೆತ್ತಿ ನಮಸ್ಕಾರ ಮಾಡಿ ಕೃಷ್ಣನಿಂದ ಬಟ್ಟೆಗಳನ್ನು ಪಡೆದರಂತೆ, ವಯಸ್ಸಿಗೆ ಬಂದ ಹೆಣ್ಣುಮಕ್ಕಳಾಗಿದ್ದರೆ, ಅವರು ಕೃಷ್ಣನನ್ನು ಪ್ರೀತಿಸಿದ್ದರೂ, ಅವನ ಜೊತೆಯ ಹುಡುಗರ ಮುಂದೆ, ಅವರೆಲ್ಲ ನಗುತ್ತ ನಿಂತಿರುವಾಗ ನಗ್ನರಾಗಿ ಎರಡು ಕೈಗಳನ್ನೆತ್ತಿ ನಮಸ್ಕಾರ ಮಾಡಲು ಒಪ್ಪುವುದು ಸ್ತ್ರೀ ಸ್ವಭಾವಕ್ಕೇ ವಿರುದ್ಧ. ಅವರಿನ್ನೂ ಲಜ್ಜೆಯನ್ನರಿಯಲಾರದ ವಯಸ್ಸಿನವರೆಂದು ಹೇಳಬೇಕು. ಇನ್ನೂ 'ಮಕ್ಕಳಾಟಿಕೆ'ಯಲ್ಲಿ ಇರುವರೆಂದೆ ಹೇಳಬೇಕು

ಇದು ಆ ಹೆಣ್ಣುಮಕ್ಕಳ ಜಲವಿಹಾರವೂ ಅಲ್ಲ ವ್ರತಕ್ಕೆ ಸಂಬಂಧಿಸಿದ ಪವಿತ್ರ ಸ್ನಾನ.

'ಯದ್ ಯೂಯಂ ವ್ರತಕರ್ಶಿತಾಃ'

'ವ್ರತಾಚರಣೆಯಿಂದಾಗಿ ನೀವು ಸೊರಗಿದ್ದೀರಿ' ಎನ್ನುತ್ತಾನೆ ಕೃಷ್ಣ

'ಹೇಮಂತೇ ಪ್ರಥಮೇ ಮಾಸಿ', 'ಉಪಸ್ಪೃತ್ಯಾಥ ದಾರಿಕಾಃ' 'ಶೀತ ವೇಪಿತಾಃ' 'ಶೀತಕರ್ಶಿತಾಃ'

ಹೇಮಂತದ ಮೊದಲ ತಿಂಗಳಲ್ಲಿ ನಸುಕಿನಲ್ಲೆದ್ದು ಚಳಿಯಲ್ಲಿ ನಡುಗುತ್ತ ಪವಿತ್ರ ಸ್ನಾನ ಮಾಡುತ್ತಿದ್ದಾರೆ, 'ದಾರಿಕಾಃ' ಎಳೆ ಹೆಣ್ಣುಮಕ್ಕಳು ಇದು ಹರೆಯದ ಹುಡುಗಿಯರ ನೀರಾಟವಲ್ಲ.

ಕೃಷ್ಣನೂ ವಯಸ್ಸಿಗೆ ಬಂದ ಹುಡುಗನಲ್ಲ. ಬರಿ ಏಳು ವರ್ಷದ ಮಗು,

ಕ್ವ ಸಪ್ತಹಾಯನೋ ಬಾಲಃ ? ಕ್ವ ಮಹಾದ್ರಿ ವಿಧಾರಣಂ ?

'ಏಳು ವರ್ಷದ ಮಗು ಎಲ್ಲಿ? ದೊಡ್ಡ ಪರ್ವತವನ್ನು ಎತ್ತಿಕೊಳ್ಳುವುದೆಲ್ಲಿ?' ಇದು ಗೋಪರು ನಂದನ ಬಳಿ ಮಾಡುವ ಆಶ್ಚರ್ಯದ ಉದ್ಗಾರ. ಗೋವರ್ಧನೋದ್ಧಾರ ಮಾಡಿದಾಗ ಕೃಷ್ಣನಿನ್ನೂ ಏಳು ವರ್ಷದ ಮಗು, ಅದಕ್ಕಿಂತ ಮೊದಲಿಗೇ ಗೋಪಿಯರ ವಸ್ತ್ರಾಪಹರಣ ಮಾಡಿದ್ದನಾತ !

ಏಳು ವರ್ಷದ ಮಗು ಹತ್ತು ಹನ್ನೆರಡು ವಯಸ್ಸಿನ ಹುಡುಗಿಯರೊಡನೆ ಆಟವಾಡಿದರೆ ಅದು ಮಕ್ಕಳಾಟಿಕೆಯಲ್ಲದೆ ಇನ್ನೇನು? ವಾದಿರಾಜರು ಸರಸಭಾರತಿಯಲ್ಲಿ ಇದನ್ನು ಇನ್ನೂ ಹೆಚ್ಚು ಸ್ಪಷ್ಟಮಾಡಿ ಹೇಳಿದ್ದಾರೆ–

ಅನಿರ್ದಶಸ್ಯ ಬಾಲಸ್ಯ ಕೃಷ್ಣಸ್ಯ ವರಯೋಷಿತಾಂ ।
ಸಂಗೇನ ವೀರ್ಯಸ್ಖಲನಂ ಕೋ ಮೇಧಾವೀ ಪ್ರಕಲ್ಪಯೇತ್ ?

ಹತ್ತು ವರ್ಷ ಮೀರದಿದ್ದ ಬಾಲಕ ಕೃಷ್ಣನಿಗೆ ಸ್ತ್ರೀಸಂಗದಿಂದ ವೀರ್ಯಸ್ಖಲನವಾಗುತ್ತಿದ್ದಿರಬಹುದೆಂದು ಯಾವ ಮೇಧಾವಿ, ವಿವೇಕಿ ಕಲ್ಪಿಸಿಯಾನು ?

ಮೊಲೆ ಉಣ್ಣುವ ವಯಸ್ಸಿನ ಮಕ್ಕಳಿಗೂ ಲೈಂಗಿಕ ಭಾವನೆ ಉಂಟೆನ್ನುವ ಫ್ರಾಯ್ಡನಂತ 'ಮೇಧಾವಿ'ಗಳೂ ಇರಬಹುದು. ಆದರೆ, ತಾಯಿ ತನ್ನ ಕಂದನನ್ನೆತ್ತಿ ಅಪ್ಪಿ ಮುದ್ದಿಡುತ್ತಾಳೆ. ಆ ಪವಿತ್ರ ಮಾತೃವಾತ್ಸಲ್ಯದ ಸಂಬಂಧವನ್ನೂ ಲೈಂಗಿಕವೆಂದು ಭಾವಿಸಿದರೆ ಅದು ಅವರ ಮನೋವಿಕಾರಕ್ಕೇ ಕನ್ನಡಿ ಹಿಡಿದಂತಾದೀತು ವಾದಿರಾಜರು ಒಂದು ಕಡೆ ಗೇಲಿ ಮಾಡಿದುದುಂಟು–

ಮುಖಮಸ್ತೀತಿ ಕಿಂ ಬ್ರೂಷೇ ದಶಹಸ್ತಾಂ ಹರೀತಕೀಂ ?

'ಮಾತನಾಡಲು ಬಾಯಿ ಉಂಟೆಂದು ಅಳಲೆಕಾಯಿ ಹತ್ತು ಮೊಳ ಉದ್ದ ಎನ್ನುವಿಯ ?' ಆದ್ದರಿಂದ ಕೃಷ್ಣನಿಗೆ ಗೋಕುಲದ ಕನ್ನೆಯರ ಬಯಕೆ ಇತ್ತೆನ್ನುವುದು ಅರ್ಥಶೂನ್ಯ ಹಾಗಾದರೆ ಭಾಗವತದಲ್ಲಿಯೆ,

ಮಯೇಮಾ ರಂಸ್ಯಥ ಕ್ಷಪಾಃ ।

'ರಾತ್ರಿ ಹೊತ್ತಿನಲ್ಲಿ ಪ್ರತಿದಿನ ನನ್ನೊಡನೆ ಕ್ರೀಡಿಸಿರಿ' ಎಂದು ವಯಸ್ಕರಾದ ಕಾಮುಕರಂತೆ ಹೇಳಿದುದು ಹೇಗೆ ? ಎಂಬ ಪ್ರಶ್ನೆ ಬರಬಹುದು. ಇದಕ್ಕೆ ಸಮಾಧಾನ, ಹತ್ತು ವರ್ಷದ ಕೆಳಗೆ ಮಕ್ಕಳಲ್ಲಿ ಕಾಮಪ್ರವೃತ್ತಿ ಲೋಕದಲ್ಲಂತೂ ಎಲ್ಲಿಯೂ ಕಂಡಿಲ್ಲ. ಕೃಷ್ಣನಲ್ಲಿ ಮಾತ್ರ ಅದು ಇತ್ತೆನ್ನಲು ಭಾಗವತವೆ ಆಧಾರ, ಅದನ್ನು ನಂಬುವುದಾದರೆ ಆ ಭಾಗವತವೆ ಹೇಳಿದ ಇನ್ನೊಂದು ಮಾತನ್ನೂ ಗಮನಿಸಬೇಕು–

ಸಂಕಲ್ಪೋ ವಿದಿತಃ ಸಾಧ್ವ್ಯೋ ಭವತೀನಾಂ ಮದರ್ಚನಂ ।
ಮಯಾನುಮೋದಿತಃ ಸೋಽಸೌ ಸತ್ಯೋ ಭವಿತುಮರ್ಹತಿ ॥

'ನನ್ನೊಡನೆ ಸಂಗ ಮಾಡಬೇಕೆನ್ನುವ ನಿಮ್ಮ ಸಂಕಲ್ಪ ನನಗೆ ತಿಳಿದಿದೆ. ಅರ್ತಿಯಿಂದ ನನ್ನನ್ನು ಹೃದಯ ಸಿಂಹಾಸನದಲ್ಲಿಟ್ಟು ಆರಾಧಿಸುವಿರಿ. ಮುಂದೆಯೂ ನನ್ನೊಡನೆ ಕೂಡಿ ಪ್ರತ್ಯಕ್ಷವಾಗಿ ಆರಾಧಿಸಬೇಕೆಂದಿರುವಿರಿ. ಈ ಕಾಮಪೂರ್ವಕ ಭಕ್ತಿಯಿಂದ ನನ್ನನ್ನು ಆರಾಧಿಸುವ ನಿಮ್ಮ ಸಂಕಲ್ಪ ಸತ್ಯವಾಗಲೇಬೇಕು. ನಾನು ಸತ್ಯಸಂಕಲ್ಪ. ಅಂದರೆ, ಭಕ್ತರ ಸಂಕಲ್ಪವನ್ನು ಸತ್ಯಗೊಳಿಸುವವ, ನಿಮ್ಮ ಈ ಆರಾಧನೆಗೆ ನನ್ನ ಅನುಮತಿ ಇದೆ. ಅಂದರೆ ನಿಮ್ಮ ಸಂಕಲ್ಪವನ್ನು ಸತ್ಯಗೊಳಿಸುವ

ಸಂಕಲ್ಪ ಮಾಡಿದ್ದೇನೆ. ಆ ಸಂಕಲ್ಪವೂ ಸತ್ಯವಾಗಲೇ ಬೇಕು. ಏಕೆಂದರೆ ನಾನು ಸತ್ಯಸಂಕಲ್ಪ ಅಂದರೆ ನನ್ನ ಸಂಕಲ್ಪವೆಲ್ಲವೂ ಸತ್ಯವೆ ಆಗುತ್ತದೆ, ಸುಳ್ಳಾಗುವುದಿಲ್ಲ.' ಎನ್ನುತ್ತಾನೆ ಕೃಷ್ಣ. ಅರ್ತಿಯಿಂದ ಅರ್ಚಿಸಿದ ಗೋಕುಲದ ಕನ್ನೆಯರ ಸತ್ಯಸಂಕಲ್ಪ ಬೆರೆಯುತ್ತಾನೆ.

ಅಥವಾ, ಪೂರ್ವಜನ್ಮದಲ್ಲಿ ಈ ಕನ್ನೆಯರು,

ಸಂಸ್ಕಾರತಃ ಪ್ರಥಮಮೇವ ಸುಸಂಗಮೋ ನೋ ಭೂಯಾತ್ ।

'ಉಪನಯನ ಸಂಸ್ಕಾರವಾಗುವ ಮೊದಲೆ ಕೃಷ್ಣ ನಮಗೆ ಸಂಗವನ್ನು ನೀಡಬೇಕು' ಎಂದೆ ವರವನ್ನು ಬಯಸಿ ಬೇಡಿ ಪಡೆದಿದ್ದಾರೆ. ಅವರ ಬಯಕೆಯನ್ನು ಸಂಕಲ್ಪವನ್ನು ಸತ್ಯಗೊಳಿಸಿದ್ದಾನೆ ಸತ್ಯಸಂಕಲ್ಪನಾದ ಕೃಷ್ಣ ಏಕೆಂದರೆ,

ಭಗವದ್ಭಾರ್ಯತಾಯೋಗ್ಯಾಃ ಕಾಶ್ಚಿದಪ್ಸರಸಃ ಸ್ತ್ರಿಯಃ ।
ರಮಾವೇಶಾತ್ ತಥಾ ಸ್ಯುಃ ।

'ಕೆಲವು ಅಪ್ಸರೆಯರು ಕೆಲವೊಮ್ಮೆ ರಮಾದೇವಿಯ ಆವೇಶದಿಂದಾಗಿ ಶ್ರೀ ಹರಿಯ ಮಡದಿಯರಾಗಲು ಯೋಗ್ಯರಾಗುತ್ತಾರೆ' ಅಂಥ ಅಪ್ಸರೆಯರೆ ಈ ಕನ್ನೆಯರು ಆದ್ದರಿಂದ,

'ಮಯಾನುಮೋದಿತಃ ಸೋಽಸೌ'

'ನಾನು ಅದನ್ನು ಅನುಮತಿಸಿದ್ದೇನೆ'

ಎನ್ನುವಲ್ಲಿ 'ಮಯಾ' ಎಂಬ ಶಬ್ದ ಅರ್ಥಗರ್ಭಿತವಾಗಿದೆ. 'ಮಾ' ಎಂದರೆ ರಮಾದೇವಿ. 'ಮಯಾ' ಎಂದರೆ, ರಮಾದೇವಿಯ ಆವೇಶ ನಿಮ್ಮಲ್ಲಿ ಇರುವ ಪ್ರಯುಕ್ತ, ನಿಮ್ಮ ಸಂಕಲ್ಪಕ್ಕೆ ನನ್ನ ಅನುಮತಿ ಇದೆ ಎನ್ನುತ್ತಿದ್ದಾನೆ, ಕೃಷ್ಣ.

ಹೀಗೆ ಕೃಷ್ಣ ಸಾಮಾನ್ಯ ಮಾನವನೆಂದು ಭಾವಿಸುವವರು ಅವನ ಮತ್ತು ಗೋಪಿಯರ ವಯಸ್ಸನ್ನು ನೋಡಿ ಬಳಿಕ ಆಕ್ಷೇಪಣೆ ಮಾಡಬೇಕು. ಭಾಗವತದ ಆಧಾರದಿಂದ ಕೃಷ್ಣ ಅವತಾರ ಪುರುಷನೆಂದು ನಂಬುವವರು ಗೋಪಿಯರಲ್ಲಿ ರಮಾವೇಶ, ಗೋಪಿಯರು ತಪಸ್ಸು ಮಾಡಿ ವರಪಡೆದುದು ಮುಂತಾದುವನೆಲ್ಲ ಆಲೋಚಿಸಿ ಬಳಿಕ ಆಕ್ಷೇಪಣೆಗೆ ಹೊರಡಬೇಕು. ಸುಮ್ಮನೆ ಆಕ್ಷೇಪ ಮಾಡಲು, ಸದರವೆ ಈ ಮಾತು ? ಎನ್ನುತ್ತಿದ್ದಾಳೆ, ಮಹಾಲಕ್ಷ್ಮಿ.

**ಹತ್ತು ಮತ್ತಾರು ಸಾಸಿರ ಸ್ತ್ರೀಯರಲ್ಲಿ**
**ಹತ್ತು ಹತ್ತೆನಿಪ ಕ್ರಮದಿಂದ ।**
**ಪುತ್ರರ ವೀರ್ಯದಲಿ ಸೃಷ್ಟಿಸಿದವರುಂಟೆ**
**ಅರ್ತಿಯ ಸೃಷ್ಟಿ ಹರಿಗಿದು ॥**

ಹದಿನಾರು ಸಾವಿರಮಂದಿ ಮಡದಿಯರಲ್ಲಿ ಪ್ರತಿಯೊಬ್ಬರಲ್ಲಿ ಹತ್ತು ಹತ್ತು ಎಂಬ ಕ್ರಮದಿಂದ ಯಾರಾದರೂ ವೀರ್ಯದಿಂದ ಮಕ್ಕಳನ್ನು ಹುಟ್ಟಿಸಿದವರುಂಟೆ ? ಪೂರ್ಣಾನಂದನಾದ ಶ್ರೀಹರಿಗೆ ಇದೊಂದು ಆನಂದೋದ್ರೇಕದ ಸೃಷ್ಟಿ ಎನ್ನುತ್ತಿದ್ದಾಳೆ ಮಹಾಲಕ್ಷ್ಮಿ.

ಹಿಂದಿನ ನುಡಿಯಲ್ಲಿ ಶ್ರೀಕೃಷ್ಣ ಗೋಪಿಯರೊಡನೆ ರಮಿಸಿದುದು ಕಾಮ ಭಾವನೆಯಿಂದಲ್ಲ. ಅದು ಹತ್ತು ವರ್ಷದ ಕೆಳಗಿನ ಮಕ್ಕಳಾಟಿಕೆ ಎಂದಿದೆ. ಇದರ ಮೇಲೆ ಹೀಗೆ ಆಕ್ಷೇಪ ಬರಬಹುದು– ಹತ್ತು ವರ್ಷದ ಕೆಳಗೆ ಅಲ್ಲದಿದ್ದರೂ ಮುಂದೆ ದ್ವಾರಕೆಯಲ್ಲಿ ಗೃಹಸ್ಥ ಜೀವನ ನಡೆಸುತ್ತಿದ್ದಾಗ ಕೃಷ್ಣ ಹದಿನಾರು ಸಾವಿರ ಮಂದಿ ಮಡದಿಯರಲ್ಲಿ ಪ್ರತಿಯೊಬ್ಬರಲ್ಲಿಯೂ ಹತ್ತು ಮಂದಿ ಗಂಡು ಮಕ್ಕಳನ್ನು ಹುಟ್ಟಿಸಿದ ಆ ಮಕ್ಕಳೆಲ್ಲರೂ ರೂಪಗುಣಗಳಲ್ಲಿ ತಂದೆಗೆ ಒಂದಿಷ್ಟೂ ಕಡಿಮೆಯುವರಾಗಿರಲಿಲ್ಲವಂತೆ !

ಏಕೈಕಶಸ್ತಾಃ ಕೃಷ್ಣಸ್ಯ ಪುತ್ರಾನ್ ದಶ ದಶಾಬಲಾಃ ।
ಅಜೀಜನನ್ನನವಮಾನ್ ಪಿತುಃ ಸರ್ವಾತ್ಮಸಂಪದಾ ॥ – ಭಾಗವತ

ಈ ಮಕ್ಕಳು ತಂದೆಗೆ ಎಷ್ಟು ಹೋಲುತ್ತಿದ್ದರೆಂದರೆ ರುಕ್ಮಿಣೀದೇವಿಯಲ್ಲಿ ಜನಿಸಿದ ಪ್ರದ್ಯುಮ್ನ ಶೈಶವದಲ್ಲಿಯೆ ಶಂಬರಾಸುರನ ಮನೆ ಸೇರಿ ಅಲ್ಲಿ ರತಿಯ ಆರೈಕೆಯಲ್ಲಿ ಬೆಳೆದು ಅವಳ ಸಹಾಯದಿಂದಲೆ ಶಂಬರನನ್ನು ಕೊಂದು ದ್ವಾರಕೆಗೆ ಹಿಂತಿರುಗಿ ಬಂದಾಗ ಕೃಷ್ಣನ ಮಡದಿಯರೆಲ್ಲರೂ ಅವನನ್ನು ಕೃಷ್ಣನೆಂದೆ ಭ್ರಮಿಸಿದರೆಂದು ಭಾಗವತ ಹೇಳುತ್ತದೆ.

ತಂ ದೃಷ್ಟ್ವಾ ಜಲದಶ್ಯಾಮಂ ಪೀತ ಕೌಶೇಯ ವಾಸಸಂ ।
ಕೃಷ್ಣಂ ಮತ್ವಾ ಸ್ತ್ರಿಯೋ ಭೀತಾ ನಿಲಿಲ್ಯುಸ್ತತ್ರ ತತ್ರ ಹ ॥

ಹೀಗೆ ರೂಪ ಗುಣಗಳಲ್ಲಿ ತಂದೆಯನ್ನೇ ಹೋಲುವ ಮಕ್ಕಳು, ಅವನ ವೀರ್ಯದಿಂದಲೆ ಹುಟ್ಟಿರಬೇಕು. ಆದ್ದರಿಂದ ಅಪಾರ ಸಂಖ್ಯೆಯಲ್ಲಿ ವೀರ್ಯದಿಂದ ಮಕ್ಕಳನ್ನು ಕೃಷ್ಣ ಹುಟ್ಟಿಸಿದನೆಂದರೆ ಆತ ಕಾಮಭಾವನೆಯಿಂದ

ಮುಕ್ತನಾದವನೆನ್ನಲಾಗದು. ಪ್ರಳಯ ಕಾಲದಲ್ಲಿ ನಾರಾಯಣ ರಮೆಯೊಡನೆ ಏಕಾಂತದಲ್ಲಿ ರಮಿಸುತ್ತಿದ್ದಾಗ ಮಕ್ಕಳಾಗದಿದ್ದರೂ ಆಗ ಆತ ದೇವತೆಯಾಗಿದ್ದ ಗೋಕುಲದಲ್ಲಿ ಮಾನವನಾಗಿ ಹುಟ್ಟಿದಾಗ ಮಾನವ ಸಹಜವಾದ ಕಾಮಾದಿ ವಿಕಾರಕ್ಕೊಳಗಾಗಿಯೇ ಮಕ್ಕಳನ್ನು ಹುಟ್ಟಿಸಿದನೆಂದರೆ ಇದರಲ್ಲಿ ತಪ್ಪೇನಿದೆ ?

ಮೇಲಿನ ಆಕ್ಷೇಪಕ್ಕೆ ಈ ನುಡಿ ಉತ್ತರ ಕೊಡುತ್ತಿದೆ.– 'ಹದಿನಾರು ಸಾವಿರದ ನೂರೆಂಟು ಮಂದಿ ಮಡದಿಯರಲ್ಲಿ ಪ್ರತಿಯೊಬ್ಬರಲ್ಲಿಯೂ ಹತ್ತು ಮಂದಿ ಮಕ್ಕಳನ್ನು ವೀರ್ಯದಿಂದ ಹುಟ್ಟಿಸುವುದು ಮಾನವ ಶಕ್ತಿಗೆ ಮೀರಿದುದು. ಆದ್ದರಿಂದ ಕೃಷ್ಣ ಮಾನವನಲ್ಲ. ಮಾನವ ಸಹಜವಾದ ಕಾಮಾದಿ ವಿಕಾರ ಅವನಲ್ಲಿ ಅಸಂಭಾವಿತವೆ'

ಹಿಂದೆ ಸಗರ ಚಕ್ರವರ್ತಿ ಅರವತ್ತುಸಾವಿರ ಮಂದಿ ಮಕ್ಕಳನ್ನು ಪಡೆದಿದ್ದನಂತೆ. ಕೃಷ್ಣ ಮಕ್ಕಳನ್ನು ಪಡೆದುದರಲ್ಲಿ ಏನು ವಿಶೇಷವಿದೆ ? ಎಂಬ ಪ್ರಶ್ನೆಗೆ ಸಗರ ಚಕ್ರವರ್ತಿಗೆ ಶಿವನ ವರ ಬಲವಿತ್ತು. ಕೃಷ್ಣನಿಗೆ ಯಾವ ದೇವರ ವರ ಬಲವೂ ಇರಲಿಲ್ಲ ಎನ್ನುವುದೆ ವಿಶೇಷವೆಂದು ಸಮಾಧಾನ ನೀಡಬಹುದು ಇದಕ್ಕಿಂತಲೂ ತೃಪ್ತಿಕರವಾದ ಇನ್ನೊಂದು ಸಮಾಧಾನ ಈ ನುಡಿಯಲ್ಲಿ ಇದೆ–

'ಸಗರ ಚಕ್ರವರ್ತಿಗೆ ಶಿವನ ವರ ಬಲವಿದ್ದರೂ ಅವನಿಗೆ ಪುತ್ರ ಸಂಪತ್ತನ್ನು ತನ್ನ ಇಬ್ಬರು ಮಡದಿಯರಲ್ಲಿ ಸಮನಾಗಿ ಹಂಚಲು ಸಾಧ್ಯವಾಗಲಿಲ್ಲ. ವೈದರ್ಭಿ ಎಂಬ ಒಬ್ಬಳಲ್ಲಿ ಅರವತ್ತು ಸಾವಿರ ಮಂದಿ ಮಕ್ಕಳು ಶೈಬ್ಯೆ ಎಂಬ ಇನ್ನೊಬ್ಬಳಲ್ಲಿ ಒಬ್ಬನೆ ಮಗ ಶಿವನ ಇಚ್ಛೆ ಹಾಗಿತ್ತು. ಕೃಷ್ಣ ಯಾರ ವರ ಬಲವೂ ಇಲ್ಲದೆ, ಯಾರ ಇಚ್ಛೆಗೂ ಮಣಿಯದೆ, ತನ್ನಿಚ್ಛೆಯಂತೆಯೇ, ಹದಿನಾರು ಸಾವಿರದ ನೂರೆಂಟು ಮಂದಿಯಲ್ಲಿಯೂ ಸಮನಾಗಿ ಒಂದಾದರೂ ಹೆಚ್ಚು ಕಡಿಮೆಯಿಲ್ಲದಂತೆ ಹತ್ತು ಹತ್ತು ಮಕ್ಕಳನ್ನು, ಅವರಲ್ಲಿಯೂ ಎಲ್ಲವೂ ಗಂಡು ಮಕ್ಕಳೆ, ಆ ಗಂಡು ಮಕ್ಕಳು ಆಕಾರ ಬಣ್ಣಗಳಲ್ಲಿ ತನ್ನನ್ನೇ ಹೋಲುತ್ತಿದ್ದರು, ಹೀಗೆ ಅದ್ಭುತ ರೀತಿಯಿಂದ ಸೃಷ್ಟಿ ಮಾಡಿ ತಾನು ಸ್ವತಂತ್ರ, ಕಾಮಾ ವೇಗಕ್ಕೆ ಒಳಗಾಗಿ ಪರವಶತೆಯಿಂದ ಮಕ್ಕಳನ್ನು ಹುಟ್ಟಿಸಿಲ್ಲವೆಂಬುದನ್ನು ಸ್ಪಷ್ಟಗೊಳಿಸಿದ್ದಾನೆ. ವಾದಿರಾಜರು ಸರಸ ಭಾರತಿಯಲ್ಲಿ ಇದನ್ನೇ ಹೇಳಿದ್ದಾರೆ–

ಯದಿ ರೇತೋಮಯೀ ಸೃಷ್ಟಿಃ ಕೃಷ್ಣಸ್ಯ ದ್ವಾರಕಾಪುರೇ ।
ತರ್ಹಿ ಷೋಡಶ ಸಾಹಸ್ರ ಪತ್ನೀಷ್ವೇಕೈಕಶಃ ಪ್ರಭೋಃ ।
ಪುತ್ರಾ ದಶ ದಶೈವಾಸನ್ ನ ನ್ಯೂನಾ ನಾಧಿಕಾಃ ಕುತಃ ?

ಆದ್ದರಿಂದ ಕೃಷ್ಣ ಮಕ್ಕಳನ್ನು ಹುಟ್ಟಿಸಿದುದು 'ಆರ್ತಿ'ಯಿಂದ, ಆನಂದೋದ್ರೇಕದಿಂದ. ನಾವು ಸಂತೋಷದಲ್ಲಿ ನಗುವುದು, ಕುಣಿಯುವುದು ಮುಂತಾದುವನ್ನು ಮಾಡುವಂತೆ ಆತ ಸೃಷ್ಟಿ ಮುಂತಾದುವನ್ನು ಮಾಡುತ್ತಾನೆ ಉಪನಿಷತ್ ಹೀಗೆ ಕೊಂಡಾಡುತ್ತದೆ–

ಕೋ ಹ್ಯೇವಾನ್ಯಾತ್ ? ಕಃ ಪ್ರಾಣ್ಯಾತ್ ?
ಯದೇಷ ಆಕಾಶ ಆನಂದೋ ನ ಸ್ಯಾತ್ ।

ಕೃಷ್ಣ ಆರ್ತಿಯಿಂದ, ಆನಂದದಿಂದ ಸ್ವೇಚ್ಛೆಯಿಂದಲೆ ಮಕ್ಕಳನ್ನು ಸೃಷ್ಟಿ ಮಾಡಿದ್ದಾನೆ ಹೊರತು ಕಾಮಾವೇಗದಿಂದಲ್ಲ ಎನ್ನುವುದನ್ನು ಭಾಗವತವೆ ಹೇಳುತ್ತಿದೆ–

'ಏಕೈಕಶಸ್ತಾಃ ಕೃಷ್ಣಸ್ಯ ಪುತ್ರಾನ್ ದಶ ದಶಾಬಲಾಃ ಅಜೀಜನನ್ ।'

ಎಂದು ಹೇಳಿ ಒಡನೆಯೆ,

ಸ್ಮಾಯಾವಲೋಕಲವ ದರ್ಶಿತ ಭಾವ ಹಾರಿ–
ಭ್ರೂಮಂಡಲ ಪ್ರಹಿತ ಸೌರತ ಮಂತ್ರ ಶೌಂಡೈಃ ।
ಪತ್ನ್ಯಸ್ತು ಷೋಡಶ ಸಹಸ್ರಮನಂಗಬಾಣೈಃ
ಯಸ್ಯೇಂದ್ರಿಯಂ ವಿಮಥಿತುಂ ಕರಣೈರ್ನ ಶೇಕುಃ ॥

'ಉದ್ರೇಕಕಾರಿಯಾದ ಕಡೆಗಣ್ಣ ನೋಟ, ಮಾಟವಾದ ಹುಬ್ಬಿನ ಕುಣಿತಗಳಿಂದ ಎಷ್ಟು ನಿಪುಣತೆಯಿಂದ ಪ್ರಣಯದ ಮಂತ್ರ ಉಸುರಿದರೂ ಹದಿನಾರು ಸಾವಿರ ಮಡದಿಯರು ಯಾರೂ ಕೃಷ್ಣನ ಎದೆಯನ್ನು ಕಲಕಲಾರದಾದರು' ಎಂದಿದೆ. ಕೃಷ್ಣ ತಾನು ಹದಿನಾರು ಸಾವಿರದ ನೂರೆಂಟು ರೂಪ ಧರಿಸಿ ತನ್ನೆಲ್ಲ ಮಡದಿಯರ ಬಳಿ ಒಂದೊಂದು ರೂಪದಿಂದ ಇದ್ದು ರಮಿಸಿ ಪ್ರಣಯ ಸುಖವನ್ನು ಅವರಲ್ಲಿ ಸಮನಾಗಿ ಹಂಚಿದ್ದಾನೆ. ಇದನ್ನು ನಾರದರು ಕಂಡು ಬೆರಗಾಗಿದ್ದಾರೆ. ಆದರೂ ಕೃಷ್ಣನನ್ನು ಮೋಹಪರವಶನನ್ನಾಗಿ ಮಾಡಲು ಅವನ ಮಡದಿಯರಿಂದ ಸಾಧ್ಯವಾಗಲಿಲ್ಲ! ಹಾಗಾದರೆ, ಮಕ್ಕಳೆಲ್ಲ ತಂದೆಯಂತೆಯೇ ಇರಲು ಕಾರಣವೇನು? ಎಂಬ ಪ್ರಶ್ನೆಗೆ ಹಿಂದೆ ಹೇಳಿದಂತೆ ಅವನ ಇಚ್ಛೆಯೇ ಕಾರಣವೆನ್ನಬೇಕು.

ವಸ್ತುತಃ ಕೃಷ್ಣನ ಮಕ್ಕಳು ಆಕಾರ ಬಣ್ಣಗಳಲ್ಲಿ ಮಾತ್ರ ಕೃಷ್ಣನನ್ನು ಹೋಲುತ್ತಿದ್ದರು ಹೊರತು ಶಕ್ತಿ ಸಾಮರ್ಥ್ಯಗಳಲ್ಲಿ ಅಲ್ಲ ಎನ್ನುವುದನ್ನು ಹಿಂದೆಯೆ ೩೬ ನೇ ನುಡಿಯಲ್ಲಿ ಕಂಡಿದ್ದೇವೆ. ಕೃಷ್ಣನ ವೀರ್ಯದಿಂದಲೆ ಅವನ ಮಕ್ಕಳು

ಹುಟ್ಟಿದ್ದರೆ ಅವರು ಅವನಷ್ಟೆ ಶಕ್ತಿ ಶಾಲಿಗಳಾಗಿರುತ್ತಿದ್ದರು. ಲೋಕದಲ್ಲಿ ತಂದೆಯಷ್ಟೇ ಮಕ್ಕಳಿಗೂ ಸಾಮರ್ಥ್ಯಬೇಕೆಂಬ ನಿಯಮವಿಲ್ಲದಿದ್ದರೂ ಭಗವಂತನ ವಿಷಯದಲ್ಲಿ ಆ ನಿಯಮವಿದೆ; ಉಪನಿಷತ್ತುಗಳು 'ನೇಹ ನಾನಾಸ್ತಿ ಕಿಂಚನ !' ಎಂದು ಇದನ್ನೇ ಉದ್ಘೋಷಿಸುತ್ತಿವೆ.

— ೫೦ —

**ರೋಮ ರೋಮ ಕೂಪ ಕೋಟ ವ್ರಕಂಗಳ**
**ನಿರ್ಮಿಸಿ ಗೋಪಾಲರ ತೆರಳಿಸಿದ ।**
**ನಮ್ಮ ಶ್ರೀಕೃಷ್ಣನು ಮಕ್ಕಳ ಸೃಜಿಸುವ ಮ–**
**ಹಿಮ್ಮೆ ಬಲ್ಲವರಿಗೆ ಸಲಹಲಿಕೆ ॥**

ರೋಮ ರೋಮ ಕೂಪಗಳಿಂದ ಕೋಟಿಗಟ್ಟಲೆ ತೋಳಗಳನ್ನು ನಿರ್ಮಿಸಿ ಗೋವಳರನ್ನು ನಂದಗೋಕುಲದಿಂದ ವೃಂದಾವನಕ್ಕೆ ವಲಸೆ ಹೋಗುವಂತೆ ಮಾಡಿದ ನಮ್ಮ ಶ್ರೀಕೃಷ್ಣನು ಮಕ್ಕಳನ್ನು ಸೃಜಿಸುವ ಮಹಿಮೆ ಒಂದೆ ಸರಿಯಾಗಿ ತಿಳಿದವರಿಗೆ ಉದ್ಧಾರಕವಾಗಬಲ್ಲುದು ಎನ್ನುತ್ತಿದ್ದಾಳೆ ಮಹಾಲಕ್ಷ್ಮಿ.

ಕೃಷ್ಣನಿನ್ನೂ ಅಂಬೆಗಾಲಿಕ್ಕುವ ಮಗು ಅಷ್ಟರಲ್ಲೇ ಆತ ಕಂಸನ ಕಡೆಯ ಅನೇಕ ದುಷ್ಟರಾಕ್ಷಸರನ್ನು ಕೊಂದಿದ್ದ. ರಾಕ್ಷಸರಿಗೆ ಈಗ ನಂದಗೋಕುಲವನ್ನು ಪ್ರವೇಶಿಸುವುದೆಂದರೇ ಭಯ. ತಮ್ಮ ಕಡೆಯವರಾರೇ ಇಲ್ಲಿಗೆ ಬಂದರೂ ಕ್ಷೇಮದಿಂದ, ಜೀವಸಹಿತ ಹಿಂತಿರುಗುವುದೇ ಇಲ್ಲ. ಈ ನೆಲದ ಲಕ್ಷಣವೇ ಹಾಗಿರಬಹುದೆ ಎಂದುಕೊಂಡು ಕಂಸನ ಕಡೆಯುವರು ನಂದಗೋಕುಲಕ್ಕೆ ಬರುವುದನ್ನೆ ಕಡಿಮೆ ಮಾಡಿದರು ಕೃಷ್ಣನಿಗೆ ಇದು ಸರಿಕಾಣಲಿಲ್ಲ. ರಾಕ್ಷಸರು ತನ್ನೆಡೆಗೆ ಬರಬೇಕು. ತಾನು ಸಂಹರಿಸಬೇಕು. ಅದಕ್ಕೆ ತಾನೊಂದು ಹೊಸ ಸ್ಥಳಕ್ಕೆ ಹೋದರೆ ಅವರು ಅಲ್ಲಿಗೆ ಬರುವ ಸಂಭವ ಉಂಟೆಂದುಕೊಂಡ. ಆದರೆ ಇದಕ್ಕೆ ಏನು ಉಪಾಯ ? ಗೋಕುಲದ ಜನರೆಲ್ಲ, ತಾನೀಗ ಎಲ್ಲ ರಾಕ್ಷಸರನ್ನು ಕೊಂದಿರುವುದರಿಂದ, ನಿಶ್ಚಿಂತೆಯಿಂದ ಇದ್ದಾರೆ. ಈ ಸ್ಥಳವನ್ನು ಬಿಟ್ಟು ಬೇರೆಡೆಗೆ ಹೋಗುವ ಆಲೋಚನೆ ಮಾಡುತ್ತಿಲ್ಲ. ಅವರಿಗೆ ಏನಾದರೂ ತೊಂದರೆ ಕೊಟ್ಟೇ ಅವರನ್ನು ಇಲ್ಲಿಂದ ಕದಲಿಸಬೇಕು ಎಂದುಕೊಂಡ.

ಒಂದು ದಿನ ಬಲರಾಮನೊಂದಿಗೆ ಆಟವಾಡುತ್ತ ಅವನ ಮುಂದೆ ಈ ವಿಷಯವನ್ನು ಹೇಳಿದ. ಆದರೆ ಆತ ಕೊಟ್ಟ ಕಾರಣ ಬೇರೆ. 'ನಂದಗೋಕಲದಲ್ಲೆ ನಮ್ಮ ಗೋವಳರೆಲ್ಲ ಬಹುಕಾಲದಿಂದ ಇದ್ದಾರೆ. ಇಲ್ಲಿಯೆ ಹೊಲ ಮನೆಗಳನ್ನೆಲ್ಲ ಮಾಡಿಕೊಂಡು ಹಳ್ಳಿಯನ್ನು ಪಟ್ಟಣವನ್ನಾಗಿ ಮಾಡಿಕೊಂಡು, ಸಮೃದ್ಧವಾಗಿ

ಒಳ್ಳೆಯ ನೀರು ಗಾಳಿ, ದನಗಳಿಗೆ ಹುಲ್ಲಿನ ಮೇವು, ಫಲಪುಷ್ಪಭರಿತ ವೃಕ್ಷಗಳು ಒಂದೂ ಇಲ್ಲದಂತೆ ಮಾಡಿಕೊಂಡು ಬದುಕುತ್ತಿದ್ದಾರೆ. ಗೋಪಾಲವೃತ್ತಿಗೆ ಈ ರೀತಿಯ ಬದುಕು ಸರಿಯಲ್ಲ. ನನಗೂ ವಿಹಾರ ಮಾಡಲು ಸುಂದರವಾದ ವನಪ್ರದೇಶ ನದಿತೀರ ಇಲ್ಲಿ ಇಲ್ಲ. ಸಮೀಪದಲ್ಲಿಯೇ ವೃಂದಾವನವಿದೆ. ಅಲ್ಲಿ ಯಮುನಾ ನದಿ ಹರಿಯುತ್ತದೆ. ಒಳ್ಳೆಯ ಕಾಡು, ಹುಲ್ಲುಗಾವಲು ಎಲ್ಲ ಇದೆ. ಭಾಂಡೀರವೆಂಬ ದೊಡ್ಡ ಆಲದಮರ ಒಂದಿದೆ. ನಮ್ಮ ಜನರಿಗೆ ವಾಸಕ್ಕೆ ಇದು ಒಳ್ಳೆಯ ಸ್ಥಳ. ದನಕರುಗಳಿಗೂ ಸ್ವಚ್ಛಂದ ಮೇಯಲು ನಮಗೂ ವಿಹಾರ ಮಾಡಲು ಯೋಗ್ಯವಾದ ಪ್ರದೇಶ. ಆದುದರಿಂದ ನಮ್ಮ ಜನರನ್ನು ಈಗಲೇ ಇಲ್ಲಿಂದ ಹೊರಡಿಸುತ್ತೇನೆ. ನೋಡು, ಎನ್ನುತ್ತ ಕೃಷ್ಣ ತನ್ನ ರೋಮ ರೋಮ ಕೂಪಗಳಿಂದ ಭಯಂಕರ ತೋಳಗಳ ಹಿಂಡುಗಳನ್ನೇ ಕೋಟಿಗಟ್ಟಲೆ ಹುಟ್ಟಿಸಿದ.

ಆ ತೋಳಗಳು ನಂದಗೋಕುಲದ ಎಳೆ ಮಕ್ಕಳನ್ನು ಎಳೆ ಕರುಗಳನ್ನು ಹೊತ್ತುಕೊಂಡು ಹೋಗಲು ತೊಡಗಿದವು. ಗೋಪಾಲಕರು ಏನೂ ಮಾಡುವಂತಿರಲಿಲ್ಲ. ಅಷ್ಟು ಬಲಶಾಲಿಗಳು, ಆ ತೋಳಗಳು. ಹುಲಿಯಂತೆ ಭಯಂಕರ. ಕೃಷ್ಣನ ರೋಮಗಳಿಂದ ಬಂದವುಗಳು ಕೃಷ್ಣನಷ್ಟೆ ಬಲಶಾಲಿಗಳು

ಸ್ವಯಂ ಕೃಷ್ಣನೆ ನಾರಾಯಣನ ಒಂದು ತಲೆಗೂದಲು. ಹಾಗೇ ಈ ತೋಳಗಳೂ ಕೃಷ್ಣನ ರೋಮಗಳು. ಪರಮಾತ್ಮನ ವೃಕಾವತಾರಗಳು. ಏಕೆಂದರೆ ಆ ವೃಕಗಳಲ್ಲಿ ಶ್ರೀವತ್ಸ ಚಿಹ್ನೆ ಇದ್ದಿತೆಂದು ಹರಿವಂಶ ಹೇಳುತ್ತದೆ. ಈ ವೃಕಾವತಾರದ ಕಥೆ ಹರಿವಂಶ ಹೊರತು ಇನ್ನೆಲ್ಲಿಯೂ ಇಲ್ಲ ಆಚಾರ್ಯರು ಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿ ಹೇಳಿದ್ದಾರೆ.

ಹೀಗೆ ಬಲಿಷ್ಠವಾದ ತೋಳಗಳ ಭಯದಿಂದ ಗೋವಳರು ದನಕರುಗಳನ್ನು ಮೇಯಿಸಲು ಹೊರಗೆ ಬಿಡುವಂತಿಲ್ಲ. ಕಾಡಿನಲ್ಲಿದ್ದ ಹೂ ಹಣ್ಣು ತರುವಂತಿಲ್ಲ. ನದಿ ನೀರಿಗೆ ಹೋಗುವಂತಿಲ್ಲ. ಇಡೀ ಹಳ್ಳಿಗೆ ಸುತ್ತಲೂ ಈ ತೋಳಗಳು ಹಾವಳಿ ಮಾಡಿದ್ದವು.

ಈಗ ಗೋವಳರು ಗಂಭೀರವಾಗಿ ವಿಚಾರಕ್ಕೆ ತೊಡಗಿದರು. ಅವರಲ್ಲಿ ಹಿರಿಯನಾದ ಉಪನಂದ ಸಲಹೆ ಮಾಡಿದ, 'ಈ ಸ್ಥಳದಲ್ಲಿ ಏಕೋ ಪೂತನಾ, ಶಕಟ ಮುಂತಾದ ರಾಕ್ಷಸರ ಹಾವಳಿ ಸದಾ ನಡೆಯುತ್ತಲೆ ಇದೆ. ಈಗ ಈ ಭಯಂಕರ ತೋಳಗಳ ಭಯ ಉಂಟಾಗಿದೆ. ನಾವೆಲ್ಲ ಸಮೀಪದ ವೃಂದಾವನಕ್ಕೆ ಹೋಗೋಣ. ಅದು ಒಳ್ಳೆಯ ಶಾಂತವಾದ ಪ್ರದೇಶ'. ಈ ಸಲಹೆಗೆ ನಂದ ಒಪ್ಪಿ ಎಲ್ಲ ಗೋವಳರಿಗೂ ಹೊರಡಲು ಆದೇಶ ನೀಡಿದ. ಎಲ್ಲರೂ ವೃಂದಾವನಕ್ಕೆ ಹೋದರು.

ಈ ಕಥೆಯನ್ನು ಈ ನುಡಿಯಲ್ಲಿ ಉದಾಹರಣೆಯಾಗಿ ಕೊಟ್ಟು, ಶ್ರೀಕೃಷ್ಣ ಹದಿನಾರು ಸಾವಿರ ಮಂದಿ ಹೆಂಡದಿರಲ್ಲಿ ಮಕ್ಕಳನ್ನು ಹುಟ್ಟಿಸಿದುದೂ ಹೀಗೆಯೇ ಇಚ್ಛಾಮಾತ್ರದಿಂದ ಹೊರತು ಸಾಮಾನ್ಯ ಮಾನವನಂತೆ ಕಾಮವಶನಾಗಿ ಸ್ತ್ರೀಯರಲ್ಲಿ ಮಕ್ಕಳನ್ನು ಪಡೆದಿಲ್ಲ. ಅವನಿಗೆ ಕಾಮಾದಿಗಳ ಉಪದ್ರವವಿದೆ ಎನ್ನಲು ಇದು ಉದಾಹರಣೆಯಾಗುವುದಿಲ್ಲ ಎಂದಿದೆ.

ಕೃಷ್ಣ ಮಕ್ಕಳನ್ನು ಪಡೆದಾಗ ಪ್ರಬುದ್ಧ ವಯಸ್ಕನಾಗಿದ್ದ. ಸ್ತ್ರೀಯರೂ ಸುಂದರಿಯರಾಗಿದ್ದರು ಆ ಸ್ತ್ರೀಯರಲ್ಲಿಯೆ ಮಕ್ಕಳನ್ನು ಪಡೆದನೆಂದಮೇಲೆ ಕಾಮಾದ್ಯುಪದ್ರವದ ಶಂಕೆಗೆ ಅವಕಾಶವಾದರೂ ಇತ್ತು, ಆದರೆ ತೋಳಗಳ ಸೃಷ್ಟಿಯಲ್ಲಿ ಈ ಶಂಕೆಗೂ ಅವಕಾಶವಿಲ್ಲ.

ಆದ್ದರಿಂದ ಕೃಷ್ಣ ಯಾವ ಕಾಮಾದಿ ಉಪದ್ರವಕ್ಕೂ ಸಿಲುಕದೆ ಸ್ವೇಚ್ಛೆಯಿಂದಲೆ ಮಕ್ಕಳನ್ನು ಹುಟ್ಟಿಸಿದನೆಂಬ ಈ ಮಹಿಮೆಯನ್ನು ಅಂದರೆ ಕರ್ಮವನ್ನು ಸರಿಯಾಗಿ ತಿಳಿಯಬೇಕು. ಆಗ ಅದೊಂದೇ ಅವರನ್ನು ಕಾಪಾಡಲು ಸಾಕು, ಮುಕ್ತಿ ನೀಡಲು ಸಾಕು ಎನ್ನುತ್ತಿದ್ದಾಳೆ ಮಹಾಲಕ್ಷ್ಮಿ.

ಜನ್ಮ ಕರ್ಮ ಚ ಮೇ ದಿವ್ಯಮೇವಂ ಯೋ ವೇತ್ತಿ ತತ್ತ್ವತಃ ।
ತ್ಯಕ್ತ್ವಾ ದೇಹಂ ಪುನರ್ಜನ್ಮ ನೈತಿ ಮಾಮೇತಿ ಸೋಽರ್ಜುನ ॥

'ನನ್ನ ಲೋಕವಿಲಕ್ಷಣವಾದ ಪ್ರಾದುರ್ಭಾವವನ್ನೂ ಕರ್ಮವನ್ನೂ ಯಾರು ಸರಿಯಾಗಿ ತಿಳಿಯುವನೋ ಅವನು ಪುನರ್ಜನ್ಮ ಹೊಂದುವುದಿಲ್ಲ. ಮುಕ್ತನಾಗುತ್ತಾನೆ' ಎಂದು ಕೃಷ್ಣನೂ ಗೀತೆಯಲ್ಲಿ ಅರ್ಜುನನಿಗೆ ಬೋಧಿಸಿದ್ದಾನೆ.

ಆದರೆ ಒಂದು ಮಹಿಮೆಯನ್ನಾದರೂ ಸರಿಯಾಗಿ ತಿಳಿಯಬೇಕಾದರೆ ಎಲ್ಲ ಮಹಿಮೆಗಳನ್ನೂ ತಿಳಿದಿರಬೇಕಾಗುತ್ತದೆ. ಆದ್ದರಿಂದಲೇ ಅದು ಮುಕ್ತಿಕಾರಣ ಎಂಬುದನ್ನು ಮರೆಯಬಾರದು.

"ಏಕಂ ಚ ತತ್ತ್ವತೋ ಜ್ಞಾತುಂ ವಿನಾ ಸರ್ವಜ್ಞತಾಂ ನರಃ ನ ಸಮರ್ಥಃ" ಎಂದು ಶ್ರೀ ಮಧ್ವಾಚಾರ್ಯರು ಹೇಳಿದ್ದಾರೆ

ಅಥವಾ ಈ ಮಹಿಮೆಯನ್ನೂ ತಿಳಿದರೆ ಮಾತ್ರ ಮುಕ್ತಿಯಾಗುತ್ತದೆ ಎಂದರ್ಥ ಈ ಮಹಿಮೆಯನ್ನು ತಿಳಿದ ಮಾತ್ರಕ್ಕೆ ಎಂದರ್ಥವಲ್ಲ. ಆದ್ದರಿಂದಲೇ ಹಿಂದೆ ೩೭ ನೆ ನುಡಿಯಲ್ಲಿ 'ಶ್ರೀಕೃಷ್ಣನೊಬ್ಬನೆ ಸರ್ವದೋಷಕ್ಕೆ ಸಿಲುಕನೆಂಬೋದು ಸಲಹಲಿಕೆ' ಎಂದು ಶ್ರೀಕೃಷ್ಣನ ನಿರ್ದೋಷತ್ವವನ್ನು ತಿಳಿದವರಿಗೆ ಮುಕ್ತಿ ಸಿಗುತ್ತದೆ

ಎನ್ನಲಾಗಿದೆ. ಈಗ ಶ್ರೀಕೃಷ್ಣನ ಕರ್ಮಗಳು ಲೋಕವಿಲಕ್ಷಣವೆಂದು ತಿಳಿದವರಿಗೆ ಮುಕ್ತಿ ಎಂದಿದೆ.

**– ೫೧ –**

**ಮಣ್ಣನೇಕೆ ಮೆದ್ದೆ ಎಂಬ ಯಶೋದೆಗೆ**
**ಸಣ್ಣ ಬಾಯೊಳಗೆ ಜಗಂಗಳ ।**
**ಕಣ್ಣಾರೆ ತೋರಿದ ನಮ್ಮ ಶ್ರೀಕೃಷ್ಣನ**
**ಘನ್ನತೆ ಬಲ್ಲವರಿಗೆ ಸಲಹಲಿಕೆ ॥**

'ಕೃಷ್ಣ, ಮಣ್ಣನ್ನೇಕೆ ಮೆದ್ದೆ?' ಎಂದು ಕೇಳಿದ ಯಶೋದೆಗೆ ಸಣ್ಣ ಬಾಯೊಳಗೇ ಎಲ್ಲ ಲೋಕಗಳನ್ನೂ ಕಣ್ಣಾರೆ ತೋರಿದ ನಮ್ಮ ಶ್ರೀಕೃಷ್ಣನ ಘನತೆಯೊಂದೆ ಅದನ್ನು ಬಲ್ಲವರಿಗೆ ಸಲಹಲಿಕ್ಕೆ ಸಾಕು ಎನ್ನುತ್ತಿದ್ದಾಳೆ ಮಹಾಲಕ್ಷ್ಮಿ.

'ಕೃಷ್ಣನಿಗೆ ಮಕ್ಕಳನ್ನು ಹುಟ್ಟಿಸಲು ಸ್ತ್ರೀಯರ ಅಪೇಕ್ಷೆ ಇಲ್ಲ. ಆದ್ದರಿಂದ ಅವನೆಂದೂ ಸ್ತ್ರೀಯರಿಗೆ ಮರುಳಾಗುವವನಲ್ಲ, ಕಾಮಾದಿ ದೋಷಗಳಿಗೆ ಪಕ್ಕಾಗುವವನಲ್ಲ' ಎನ್ನಲು ಹಿಂದಿನ ನುಡಿಗಳಲ್ಲಿ ಎರಡು ಉದಾಹರಣೆ ಕೊಡಲಾಗಿದೆ. ಹದಿನಾರು ಸಾವಿರ ಮಂದಿ ಹೆಂಡಂದಿರಲ್ಲಿ ಪ್ರತಿಯೊಬ್ಬರಲ್ಲೂ ಹತ್ತು ಹತ್ತರಂತೆ ಹೆಚ್ಚೂ ಕಡಿಮೆಯೂ ಇಲ್ಲದೆ ಗಂಡುಮಕ್ಕಳನ್ನೆ ಹುಟ್ಟಿಸಿದುದು ಒಂದು ಅದ್ಭುತ ಉದಾಹರಣೆ ರೋಮ ಕೂಪಗಳಿಂದಲೆ ಕೋಟಿಗಟ್ಟಲೆ ತೋಳಗಳನ್ನು ಸೃಷ್ಟಿಸಿದುದು ಇನ್ನೊಂದು ಅದ್ಭುತ ಉದಾಹರಣೆ.

ಈಗ ಇವೆರಡಕ್ಕಿಂತಲೂ ಅದ್ಭುತವೂ ಭವ್ಯವೂ ಆದ ಮೂರನೆ ಉದಾಹರಣೆ ಈ ನುಡಿಯಲ್ಲಿ ಬಂದಿದೆ. ಪುಟ್ಟ ಬಾಲಕೃಷ್ಣ ಪುಟ್ಟ ಕೈಯಿಂದ ಪುಟ್ಟ ಬಾಯೊಳಗೆ ಒಂದಿಷ್ಟು ಮಣ್ಣಿಟ್ಟುಕೊಂಡು, ಆ ಒಂದು ಹಿಡಿ ಮಣ್ಣಿಂದಲೆ ಹದಿನಾಲ್ಕು ಲೋಕಗಳನ್ನು ತತ್ಕಾಲದಲ್ಲಿ ಸೃಷ್ಟಿಸಿ, ತಾಯಿಗೆ ತಲ್ಲಣ ಹಬ್ಬ ಕೊಡುತ್ತ ಕಣ್ಣಾರೆ ತೋರಿ ಒಡನೆ ನಾಶಮಾಡಿದ್ದಾನೆ, ವಾದಿರಾಜರು ಒಂದು ಕೀರ್ತನೆಯಲ್ಲಿ ಹೇಳಿದ್ದಾರೆ–

ಮಣ್ಣ ಮೆದ್ದ ಸಣ್ಣ ಬಾಯೊಳು
ಮಣ್ಣ ತೋರಿದ ನಂದನ ರಾಣಿಗೆ ತ–
ಲ್ಲಣ್ಣ ಹಬ್ಬವ ಕೊಟ್ಟ ಧೀರನ ॥
ಮಾಕಾಂತೆಯುರಸನ ತೋರೆನಗಮ್ಮ ॥

ಮಾರ್ಕಂಡೇಯ ಮುನಿಗೆ ನಾರಾಯಣ ತೋರಿದ ಪ್ರಳಯದಂತೆ ಮನುವಿಗೆ ಮತ್ಸ್ಯ ತೋರಿದ ಪ್ರಳಯದಂತೆ ಇದೂ ಒಂದು ಮಾಯಾಸೃಷ್ಟಿ ಅಥವಾ ಶ್ರೀಹರಿ ಪ್ರತಿನಿತ್ಯ ಜೀವರಿಗೆ ಸ್ವಪ್ನದಲ್ಲಿ ಬಾಹ್ಯ ಜೀವರ ಅಂಶಗಳನ್ನು ಅವರಿಗೆ ಅರಿವಿಲ್ಲದಂತೆಯೆ ತೆಗೆದು ತಂದು ಹುಲಿ ಸಿಂಹ ಮುಂತಾದ ರೂಪಗಳಲ್ಲಿ ಸೃಷ್ಟಿಸಿ ತೋರುವಂತೆ ಇದು ಎನ್ನಬಹುದು. ಏಕೆಂದರೆ ಯಶೋದೆ ಕೃಷ್ಣನ ಬಾಯೊಳಗೆ ತನ್ನನ್ನೆ ತಾನು ಕಂಡು ಅವಾಕ್ಕಾದಳಂತೆ–

ಸೂನೋಸ್ತನೌ ವೀಕ್ಷ್ಯ ವಿದಾರಿತಾಸ್ಯೇ
ವ್ರಜಂ ಸಹಾತ್ಮಾನಮವಾಪ ಶಂಕಾಂ ।

ಇಲ್ಲಿ ಒಂದು ಪ್ರಶ್ನೆ–ಯಶೋದೆ ಕೃಷ್ಣನ ಬಾಯೊಳಗೆ ಕಂಡ ಪ್ರಪಂಚ ಹೊಸತೇನಲ್ಲ, ಈ ಪ್ರಪಂಚವೆ. ಅದು ಮಹತ್ತಾಗಿದ್ದು ಏಕಮಾತ್ರವೆ ಆಗಿದ್ದರೂ ಕೃಷ್ಣ ತನ್ನ ಅಚಿಂತ್ಯ ಶಕ್ತಿಯಿಂದ ಅದಕ್ಕೇ ಸೂಕ್ಷ್ಮಾತಿ ಸೂಕ್ಷ್ಮ ಅಣುತ್ವವನ್ನೂ ಅಪರಿಮಿತ ಬಹುತ್ವವನ್ನೂ ಕೊಟ್ಟು ತನ್ನ ಬಾಯೊಳಗೆ ತೋರಿಸಿದ್ದ. ಇದಕ್ಕೆ ಸೂಚನೆ ಹಿಂದೆ 'ಅಣುರೋಮಕೂಪದಲಿ ಅನೇಕ ಕೋಟಿ ಅಜಾಂಡವ ಆಳ್ದ ಶ್ರೀಹರಿ' (ನುಡಿ ೪೪) ಎಂಬಲ್ಲಿ ಬಂದಿದೆ ಎಂದು ಹೇಳಿದೆ. ಈಗ ಕೃಷ್ಣ ತನ್ನ ಮಾಯಾಶಕ್ತಿಯಿಂದ ಹೊಸ ಪ್ರಪಂಚವನ್ನೆ ಸೃಷ್ಟಿ ಮಾಡಿದನೆಂದರೆ ವಿರುದ್ಧವಾಗುವುದಿಲ್ಲವೆ ?

ಈ ಪ್ರಶ್ನೆಗೆ ಸಮಾಧಾನ ಕೊಡುವ ಮುನ್ನ ಕೃಷ್ಣ ಮಣ್ಣುತಿಂದ ಪ್ರಕರಣ ಭಾಗವತದಲ್ಲಿ ಹೇಗೆ ಬಂದಿದೆ ಎನ್ನುವುದನ್ನು ಆಲೋಚಿಸಬೇಕಾಗುತ್ತದೆ. ಇದಕ್ಕೆ ಎರಡು ಬಗೆಯ ವಿವರಣೆಗಳಿವೆ. ಮೇಲುನೋಟಕ್ಕೇ ಕಾಣುವಂತಿರುವ ವಿವರಣೆ– 'ಕೃಷ್ಣ ಮಣ್ಣು ತಿಂದು, ಅಮ್ಮ ನಾನು ಮಣ್ಣುತಿಂದಿಲ್ಲ. ಈ ಹುಡುಗರೆಲ್ಲ ಸುಳ್ಳು ಹೇಳುವರು. ಬೇಕಾದರೆ ನೋಡು ನನ್ನ ಬಾಯನ್ನು ಎನ್ನುತ್ತ ಬಾಯಿ ತೆರೆದು ವಿಶ್ವರೂಪದರ್ಶನ ಮಾಡಿಸಿದ'. ಈ ವಿವರಣೆಯಲ್ಲಿ ಮಹತ್ತಾದ ಈ ಏಕಮಾತ್ರ ಪ್ರಪಂಚವನ್ನೇ ಅಣುವಾಗಿಯೂ ಬಹುವಾಗಿಯೂ ಮಾಡಿ ತೋರಿಸಿದನೆನ್ನುವುದು ಸರಿಯೆ, ಹೊಸ ಪ್ರಪಂಚದ ಸೃಷ್ಟಿ ಬೇಕಾಗಿಲ್ಲ.

'ಕೃಷ್ಣ ಸುಳ್ಳು ಹೇಳಲೆ ಇಲ್ಲ. ಅವನೆಂದೂ ಸುಳ್ಳು ಹೇಳುವವನೂ ಅಲ್ಲ. ಆದ್ದರಿಂದ ಅವನು ಮಣ್ಣು ತಿಂದಾಗ, ಅಮ್ಮ ನಾನು ಮಣ್ಣು ತಿಂದುದು ನಿಜ. ಈ ಹುಡುಗರು ಎಲ್ಲರೂ ಸತ್ಯ ಹೇಳುವವರೆ, ಸತ್ಯವನ್ನೆ ಹೇಳಿದ್ದಾರೆ. ಒಂದುವೇಳೆ ಅವರು ಹೇಳದಿರುತ್ತಿದ್ದರೂ ನಾನೆ ನನ್ನ ಬಾಯೊಳಗೆ ಪ್ರತ್ಯಕ್ಷ ತೋರಿಸುತ್ತಿದ್ದೆ. ನೋಡು ನನ್ನ ಬಾಯಿಯನ್ನು ಎನ್ನುತ್ತ ಬಾಯಿ ತೆರೆದು ವಿಶ್ವರೂಪ ದರ್ಶನ ಮಾಡಿಸಿದ'. ಈ ವಿವರಣೆಯಲ್ಲಿ ಕೃಷ್ಣ ಹೊಸ ಪ್ರಪಂಚವನ್ನೆ

ತೋರಿದನೆನ್ನಬೇಕಾಗುತ್ತದೆ 'ನಾನು ಮಣ್ಣು ತಿಂದೆನೆನ್ನಲು ಆ ಮಣ್ಣಿಂದಾದ ಹೊಸ ಪ್ರಪಂಚ ನನ್ನ ಬಾಯೊಳಗೆ ಇರುವುದೆ ಸಾಕ್ಷಿ' ಎಂಬುದು ಕೃಷ್ಣನ ಅಭಿಪ್ರಾಯ. ಹಿಂದೊಮ್ಮೆ ಬಾಯಲ್ಲಿ ತೋರಿದ ವಿಶ್ವರೂಪ ಮೊದಲಿಗೇ ಇದ್ದುದು. ಹೊಸ ಸೃಷ್ಟಿಯೇನಲ್ಲ. ಈಗಿನದು ಮಾತ್ರ ಹೊಸಸೃಷ್ಟಿ. ಲಕ್ಷ್ಮೀ ಶೋಭನ ಪದದಲ್ಲಿ ಎರಡನ್ನು ಹೇಳಿದೆ. ಮೊದಲಿನದು ಹರಿಯ ಬೃಹದ್ಗಾತ್ರದ ಕಲ್ಪನೆ ಬರುವುದಕ್ಕಾಗಿ. ಈಗಿನದು ಹರಿಯ ವಿಲಕ್ಷಣ ಸೃಷ್ಟಿ ಸಾಮರ್ಥ್ಯ ತೋರುವುದಕ್ಕಾಗಿ. ಇದನ್ನು ಮನಸ್ಸಿನಲ್ಲಿಟ್ಟುಕೊಂಡೆ ವಾದಿರಾಜರು ರುಕ್ಮಿಣೀಶ ವಿಜಯದಲ್ಲಿ ಹೇಳಿದ್ದಾರೆ–

ಮೃದಂ ಸಮಾಸ್ವಾದ್ಯ ಜಗಂತಿ ಮಾತುಃ
ಪ್ರದರ್ಶಯಾಮಾಸ ಕಿಲಾಸ್ಯದೇಶೇ ।
ಅಹಂ ಸುಪಾತ್ರೇ ರಸಯಾ ಪ್ರದತ್ತಾ
ಸಹಸ್ರಧಾಸೌ ಫಲಿತೇತಿ ಮನ್ಯೇ ॥

'ಕೃಷ್ಣ ಮಣ್ಣು ತಿಂದು ಬಾಯಲ್ಲಿ ಲೋಕಗಳನ್ನು ತಾಯಿಗೆ ತೋರಿದನಂತೆ. ಆದರೆ ಇಲ್ಲಿ ಭೂದೇವಿ ಕೃಷ್ಣನಂಥ ಸತ್ಪಾತ್ರದಲ್ಲಿ ದಾನ ಮಾಡಿದ ಒಂದು ಹಿಡಿ ಮಣ್ಣೂ ಅನಂತವಾಗಿ ಫಲಿಸಿತೆಂದು ನಾನು ಭಾವಿಸುತ್ತೇನೆ'

ಇಲ್ಲಿ ವಾದಿರಾಜರು ಉತ್ಪ್ರೇಕ್ಷೆಯ ನೆವದಿಂದ ಒಂದು ಹೊಸ ಪ್ರಮೇಯವನ್ನು ಹೇಳುತ್ತಿದ್ದಾರೆ, ಕೃಷ್ಣ ತಾನು ತಿಂದ ಒಂದು ಹಿಡಿ ಮಣ್ಣಿಂದ ಹೊಸದಾಗಿ ಅನಂತ ಲೋಕಗಳನ್ನೆ ಸೃಷ್ಟಿಮಾಡಿದ ಎಂದು. ಇದನ್ನು ಸತ್ಯಧರ್ಮತೀರ್ಥರು, ತಮ್ಮ ಭಾಗವತ ವ್ಯಾಖ್ಯಾನದಲ್ಲಿ ಸುಂದರವಾಗಿ ವಿಶದೀಕರಿಸಿದ್ದಾರೆ–

'ಕೃಷ್ಣ ಭೂಭಾರಹರಣಕ್ಕಾಗಿಯೆ ಅವತರಿಸಿದವನಾದ್ದರಿಂದ ಅವನು ಮಾಡಲಿರುವ ಒಂದು ಹೊಸಸೃಷ್ಟಿಯಲ್ಲಿ ತಾನು ಕಿಂಚಿತ್ ಸೇವೆ ಸಲ್ಲಿಸಬೇಕೆಂದು ಭೂಮಿ ದೇವಿ ಒಂದು ಹಿಡಿ ಮಣ್ಣನ್ನು ಅವನಿಗೆ ದಾನಮಾಡಿದಳು.

'ತದ್ಭಾರಾವತಾರಾಯಾಯುಮವತಾರ ಇತಿ ತೆಯಾ ಚ ಧರಯಾ
ಕಿಂಚಿದುಪಯೋಗಿನ್ಯಾ ಭವಾಮೀತಿ ಮತಿತಃ......'

ಕೃಷ್ಣ ಬಾಯೊಳಗೆ ಬೇರೊಂದು ಹೊಸ ಪ್ರಪಂಚವನ್ನೆ ಸೃಷ್ಟಿಸಿ ತಾಯಿಗೆ ತೋರಿಸಬಯಸಿದ, ಆದರೆ ಆ ಸೃಷ್ಟಿಗೆ ಮೂಲವಸ್ತುಬೇಕಲ್ಲ ? 'ನ ನಿರುಪಾದಾನಾ ಸೃಷ್ಟಿಃ ಸಂಭವಾ'- ಮೂಲವಸ್ತುವಿಲ್ಲದೆ ಸೃಷ್ಟಿಕಾರ್ಯ ಕೂಡಲಾರದು. ಆದಕ್ಕೇ ಮಣ್ಣುತಿಂದ. 'ಕೃಷ್ಣ ಏಕೆ ಮಣ್ಣುತಿಂದೆ ? ತಿನ್ನಲೆ ಇಲ್ಲ ಎನ್ನಬೇಡ. ಈ ಹುಡುಗರೆಲ್ಲ ನೀನು ತಿಂದಿರುವಿ ಎಂದೆ ಹೇಳುತ್ತಿದ್ದಾರೆ' ಎಂದು ಯಶೋದೆ

ಗದರಿದಾಗ ಕೃಷ್ಣನೆಂದ, 'ಅಮ್ಮ ನಾನು ಮಣ್ಣು ತಿಂದುದು ನಿಜ ನೋಡು ಬಾಯಿಯನ್ನು. ಆ ಮಣ್ಣಿಂದಾದ ಲೋಕಗಳನ್ನು ನೋಡು. ಆಗ ಸಂಶಯ ಉಳಿಯುವುದಿಲ್ಲ 'ಕಾರ್ಯೇಣ ಕಾರಣಮವಗತಂ ಭವತಿ' ಕಾರ್ಯದಿಂದ ಕಾರಣವನ್ನು ತಿಳಿಯಬಹುದು ತಾನೆ?' 'ಮಣ್ಣೆಂದರೆ ಪಂಚಮಹಾಭೂತಗಳಲ್ಲಿ ಒಂದಾದ ಪೃಥ್ವಿ, ಅದರಿಂದ, ಆಕಾಶಾದಿ ಪಂಚಭೂತಯುಕ್ತವಾದ ಅಂತರಿಕ್ಷಾದಿ ಲೋಕಗಳನ್ನು ಸೃಷ್ಟಿಸುವುದು ಹೇಗೆ ಶಕ್ಯವಾದೀತು' ಎಂದು ಕೇಳಕೂಡದು.

'ಪಂಚೀಕರಣ ಪಕ್ಷೇ ಸರ್ವಭೂತ ಮೇಲನಾದ್ ಏಕಸ್ಯಾಂ ಮೃದಿ
ಭಕ್ಷಿತಾಯಾಂ ಅಂತರಿಕ್ಷಾದ್ಯುಪಾದೇಯ ಪ್ರದರ್ಶನಂ ನಾಸಂಭವಿ'

ಪಂಚೀಕರಣ ಒಪ್ಪುವ ಪಕ್ಷದಲ್ಲಿ ಮಣ್ಣು ಕೇವಲ ಪೃಥ್ವೀಭೂತ ಒಂದೆ ಆಗಿಲ್ಲ. ಅದರಲ್ಲಿ ಆಕಾಶಾದಿ ಪಂಚಭೂತಗಳೂ ಸೇರಿವೆ. ಆದ್ದರಿಂದ ಅಂತರಿಕ್ಷಾದಿ ಲೋಕಗಳನ್ನೂ ಮಣ್ಣಿಂದಲೆ ಮಾಡಿ ತೋರಿಸುವುದು ಅಸಂಭವವೇನಲ್ಲ'.

ಹೀಗೆ ಒಂದು ಹಿಡಿ ಮಣ್ಣಿಂದ ಸಮಸ್ತ ಲೋಕಗಳನ್ನೂ ಸೃಷ್ಟಿಸುವ ಅಂಚಿತ್ಯ ಶಕ್ತಿ ಉಳ್ಳ ಕೃಷ್ಣನಿಗೆ ಮಕ್ಕಳನ್ನು ಹುಟ್ಟಿಸಲು ಸ್ತ್ರೀಯರ ಅಪೇಕ್ಷೆ ಇದ್ದೀತೆ? ಕೃಷ್ಣನ ಇಂಥ ಘನತೆಯೊಂದೆ ಅದನ್ನು ಬಲ್ಲವರಿಗೆ ಸಲಹಲಿಕ್ಕೆ ಸಾಕು ಎನ್ನುತ್ತಿದ್ದಾಳೆ, ಮಹಾಲಕ್ಷ್ಮಿ.

– ೫೨ –

**ನಾರದ ಸನಕಾದಿ ಮೊದಲಾದ ಯೋಗಿಗಳು**
**ನಾರಿಯರಿಗೆ ಮರುಳಾಹರೆ।**
**ಓರಂತೆ ಶ್ರೀಕೃಷ್ಣನಡಿಗಡಿಗೆರಗುವರೆ**
**ಆರಾಧಿಸುತ್ತ ಭಜಿಸುವರೆ॥**

'ನಾರದ ಸನಕಾದಿ ಯೋಗಿಗಳು ನಾರಿಯರಿಗೆ ಮರುಳಾಗುವರೆ?' ಅವರು ಶ್ರೀಕೃಷ್ಣನನ್ನು ನಮಿಸುವರೆ, ಆರಾಧಿಸುತ್ತ ಭಜಿಸುವರೆ?' ಈ ಪ್ರಶ್ನೆಗಳಿಗೆ ಉತ್ತರಿಸುವುದು ಕಷ್ಟವೆ. ಸನಕಾದಿಗಳು ಸದಾ ಐದು ವರ್ಷದ ಬಾಲಕರಂತಿದ್ದು ಬೆತ್ತಲೆಯಾಗಿ ತಿರುಗುವವರು, ಅವರು ನಾರಿಯರಿಗೆ ಮರುಳಾದ ಸಂದರ್ಭ ಎಲ್ಲಿಯೂ ಕಂಡಿಲ್ಲ. ಆದರೆ ನಾರದರು ಕಾಮಾರ್ತರಾದ ಪ್ರಸಂಗ ಭಾರತದಲ್ಲಿ ಇದೆ–

'ನಾರದರು ಯಾವಾಗಲೂ ತಮ್ಮ ಸೋದರಳಿಯ ಪರ್ವತರೊಂದಿಗೇ ಸಂಚರಿಸುತ್ತಿದ್ದರು. ಅವರು ಇಬ್ಬರೂ ತಮ್ಮ ತಮ್ಮ ಮನೋಗತಗಳನ್ನು, ಅವು ಒಳ್ಳೆಯದೆ ಇರಲಿ, ಕೆಟ್ಟದಿರಲಿ, ಪರಸ್ಪರ ಮುಚ್ಚುಮರೆ ಇಲ್ಲದೆ ಹೇಳಿಕೊಳ್ಳಬೇಕೆಂದು ನಿಮಯವಿಟ್ಟುಕೊಂಡಿದ್ದರು. ಒಮ್ಮೆ ನಾರದರೆ ಈ ನಿಯಮ ಉಲ್ಲಂಘಿಸಿದರು. ಇಬ್ಬರೂ ಸೃಂಜಯ ರಾಜನಲ್ಲಿ ಅತಿಥಿಗಳಾಗಿ ವಾಸಮಾಡುತ್ತಿದ್ದಾಗ ಸುಕುಮಾರಿ ಎಂಬ ಹೆಸರಿನ ರಾಜಕುಮಾರಿಯಲ್ಲಿ ನಾರದರು ಅನುರಕ್ತರಾದರು. ಇದನ್ನು ಪರ್ವತರಲ್ಲಿ ಹೇಳದೆ ಬಚ್ಚಿಟ್ಟುಕೊಂಡರು. ಪರ್ವತರು ಹೇಗೋ ತಿಳಿದು 'ನೀವು ಮದುವೆಯಾದೊಡನೆ ನಿಮ್ಮ ಮುಖ ಎಲ್ಲರಿಗೂ ಕಪಿಯಂತೆ ಕಾಣಲಿ' ಎಂದು ಶಪಿಸಿದರು. 'ನಿನಗೆ ಸ್ವರ್ಗಕ್ಕೆ ಹೋಗುವ ಸಾಮರ್ಥ್ಯ ಕುಂಠಿತವಾಗಲಿ' ಎಂದು ನಾರದರೂ ಪ್ರತಿಯಾಗಿ ಶಾಪಕೊಟ್ಟರು. ಸುಕುಮಾರಿಯನ್ನು ಮದುವೆಯಾದರು. ಅವಳಿಗೆ ನಾರದರು ಕಪಿಯಂತೆ ಕಂಡರೂ ಪತಿಭಕ್ತಿಯಿಂದ ಸಹಿಸಿಕೊಂಡು ಪ್ರೀತಿಯಿಂದಲೆ ಅವರನ್ನು ಸೇವಿಸತೊಡಗಿದಳು ಇತ್ತ ಪರ್ವತರು ಸ್ವರ್ಗಕ್ಕೆ ಹೋಗಲಾರದೆ ಭೂಮಿಯಲ್ಲಿಯೆ ಎಲ್ಲೆಡೆ ತಿರು ತಿರುಗಿ ಸೋತು ಕೊನೆಗೊಮ್ಮೆ ನಾರದರನ್ನು ಕಂಡು ಕ್ಷಮೆ ಬೇಡಿದರು. ಆಗ ಇಬ್ಬರೂ ತಾವು ಕೊಟ್ಟ ಶಾಪಗಳನ್ನು ಹಿಂತೆಗೆದುಕೊಂಡರು'.

ಆದ್ದರಿಂದ 'ಎಂದಾದರೂ ನಾರದರು ನಾರಿಯರಿಗೆ ಮರುಳಾಗುವರೆ ?' ಎಂದು ಕೇಳಿದರೆ ಇಲ್ಲವೆಂದು ಉತ್ತರ ಕೊಡುವುದು ಕಷ್ಟ. ಹಿಂದೆ ಹೇಳಿದಂತೆ,

'ತತ್‌ಸೃಷ್ಟ ಸೃಷ್ಟಿ ಸೃಷ್ಟೇಷು ಕೋ ನ್ವಖಂಡಿತಧೀ ಪುಮಾನ್ ?
ಋಷಿಂ ನಾರಾಯಣಾಮೃತೇ।'

'ಸ್ವರಮಣನಾದ ನಾರಾಯಣನನ್ನು ಬಿಟ್ಟರೆ ನಾರಿಯರಿಗೆ ಮರುಳಾಗದವರು ಇನ್ನಾರು ? ' ಎನ್ನುತ್ತಿದೆ ಭಾಗವತ.

'ನಾರದಾದಿಗಳು ಶ್ರೀಕೃಷ್ಣನನ್ನು ನಮಿಸುವರೇ ? ಭಜಿಸುವರೆ ?' ಎಂಬ ಆಕ್ಷೇಪವಂತೂ ಅಸಂಗತವೆ. ನಮಿಸುತ್ತಾರೆ, ಭಜಿಸುತ್ತಾರೆ ಎನ್ನುವುದು ಸರ್ವಸಮ್ಮತವೆ ತಾನೆ ?

ವಸ್ತುತಃ ನಾರದಾದಿಗಳು ನಾರಿಯರಿಗೆ ಮರುಳಾಗುವರೆ ಇಲ್ಲವೆ, ಅವರು ಕೃಷ್ಣನನ್ನು ಭಜಿಸುವರೆ ಇಲ್ಲವೆ ಎನ್ನುವ ವಿಚಾರಗಳೆ ಇಲ್ಲಿ ಅಪ್ರಸ್ತುತ. ಕೃಷ್ಣನಲ್ಲಿ ಇಲ್ಲಿ ಆರೋಪಿಸಲಾಗಿರುವ ಕಾಮಾದಿ ದೋಷಗಳನ್ನು ಯುಕ್ತಿ ಯುಕ್ತವಾಗಿ ವಿಚಾರ ಮಾಡಿ ಅವು ವಸ್ತುತಃ ಇಲ್ಲವೆಂದು ಸಿದ್ಧ ಪಡಿಸುವುದೆ ಇಲ್ಲಿ ಪ್ರಸ್ತುತ. ಇದರ ನಡುವೆ ನಾರದಾದಿಗಳ ಸ್ವಭಾವದ ಬಗ್ಗೆ ತಲೆಕೆಡಿಸಿಕೊಳ್ಳುವ ಆವಶ್ಯಕತೆ ಏನು ?

'ನಾರದಾದಿಗಳು ನಾರಿಯರಿಗೆ ಮರಳಾಗುವರೆ?' ಎಂಬ ಮೊದಲನೆ ಆಕ್ಷೇಪಕ್ಕೆ ಇಲ್ಲ ಎಂದು ಕಣ್ಣುಮುಚ್ಚಿಕೊಂಡು ಉತ್ತರಿಸಿ, ಕೃಷ್ಣನೂ ಮರುಳಾಗುವವನಲ್ಲ. ಮರುಳಾಗುವವನೆ ಆಗಿದ್ದರೆ ಮರುಳಾಗದ ನಾರದಾದಿಗಳು ಅವನನ್ನು ಭಜಿಸುತ್ತಿದ್ದರೆ?' ಎಂದು ಕೆಲವು ಮಾತುಗಳನ್ನು ಸೇರಿಸಿಕೊಂಡು ಎರಡನೆ ಆಕ್ಷೇಪಾಂಶವನ್ನು ಸ್ಪಷ್ಟಪಡಿಸಬೇಕಾಗುತ್ತದೆ. ಕವಿ ಕುಲತಿಲಕ ಶ್ರೀವಾದಿರಾಜರ ಪದ ಪ್ರಯೋಗದಲ್ಲಿ ಇಂಥ ಲೋಪದೋಷಗಳಿರಬಹುದೆ?

ಇದಕ್ಕೆ ಸಮಾಧಾನ– 'ಮರುಳಾಹರೆ' ಎಂಬುದರ ಬದಲಿಗೆ 'ಮರುಳಾದರೆ' ಎಂಬ ಪಾಠಾಂತರವಿದೆ. ಅದನ್ನಿಟ್ಟುಕೊಂಡಾಗ ಎಲ್ಲವೂ ಸಮಂಜಸವಾಗುತ್ತದೆ!

'ನಾರದಾದಿಗಳು ನಾರಿಯರಿಗೆ ಮರುಳಾದರೆ?' ಎಂಬ ಆಕ್ಷೇಪವೂ ವಿವಕ್ಷಿತವಲ್ಲ, ವಿವಕ್ಷಿತವೆಂದಿಟ್ಟುಕೊಂಡರೆ ಹಿಂದೆ ಹೇಳಿದ ಅನುಪಪತ್ತಿ ಇದ್ದೇ ಇದೆ. 'ಶ್ರೀಕೃಷ್ಣ ನಾರಿಯರಿಗೆ ಮರುಳಾದರೆ ಅವನನ್ನು ನಾರದ ಸನಕಾದಿ ಮೊದಲಾದ ಯೋಗಿಗಳು ಭಜಿಸುವರೆ?' ಎಂದು ಅನ್ವಯಿಸಿಕೊಳ್ಳಬೇಕು. 'ಕೃಷ್ಣ ನಾರಿಯರಿಗೆ ಮರುಳಾಗುವವನು, ಕಾಮಾದಿ ದೋಷ ಉಳ್ಳವನು' ಎನ್ನುವ ಪಕ್ಷದಲ್ಲಿ ಯೋಗಿಗಳಾದ ನಾರದಾದಿಗಳು ಅವನನ್ನು ಸರ್ವಥಾ ಭಜಿಸುತ್ತಿದ್ದಿಲ್ಲ. ಆದರೆ ನಿತ್ಯ ಭಜಿಸುತ್ತಿದ್ದಾರೆ–

ಗೋವಿಂದ ಭುಜ ಭುಕ್ತಾಯಾಂ ದ್ವಾರಕಾಯಾಂ ಕುರೂದ್ವಹ ।
ಅವಾತ್ಸೀನ್ನಾರದೋऽಭೀಕ್ಷ್ಣಂ ಕೃಷ್ಣೋಪಾಸನಲಾಲಸಃ ॥

ಶ್ರೀಕೃಷ್ಣ ದ್ವಾರಕೆಯನ್ನಾಳುತ್ತಿದ್ದಾಗ ನಾರದರು ಕೃಷ್ಣನನ್ನು ಉಪಾಸನೆ ಮಾಡುವ ಆಸೆಯಿಂದ ಸದಾ ದ್ವಾರಕೆಯಲ್ಲಿಯೇ ಇರುತ್ತಿದ್ದರು ಎನ್ನುತ್ತದೆ ಭಾಗವತ.

'ಮರುಳಾದರೆ' ಎಂಬುದನ್ನು ನಾರದಾದಿಗಳಿಗೇ ಅನ್ವಯಿಸಿ 'ನಾರದಾದಿಗಳು ನಾರಿಯರಿಗೆ ಮರುಳಾದರೆ ಕೃಷ್ಣನನ್ನು ಭಜಿಸುವರೆ?' ಎಂದು ಅರ್ಥೈಸಿದರೂ ಸರಿಯಾಗುವುದಿಲ್ಲ ನಾರದರು ನಾರಿಗೆ ಮರುಳಾಗಿರುವುದು ಭಾರತದಲ್ಲಿ ಪ್ರಸಿದ್ಧವಾಗಿರುವಾಗ 'ಮರುಳಾದರೆ' ಎನ್ನುವುದು ಹೇಗೆ? ಮತ್ತು ಮರುಳಾದರೆ ಕೃಷ್ಣನನ್ನು ಭಜಿಸಬಾರದೆಂದಿದೆಯೆ? ಸ್ತ್ರೀಸುಖ ಲಾಭಕ್ಕಾಗಿಯೋ ಸ್ತ್ರೀಮೋಹ ಪರಿಹಾರಕ್ಕಾಗಿಯೋ ಕೃಷ್ಣನನ್ನು ಏಕೆ ಭಜಿಸಕೂಡದು? ಭಾಗವತದಲ್ಲಿ ಕುಚೇಲ ಸ್ವಾನುಭವದಿಂದ ಹೇಳುತ್ತಾನೆ–

ಸ್ಮರತಃ ಪಾದಯುಗಲಮಾತ್ಮಾನಮಪಿ ಯಚ್ಛತಿ ।
ಕಿಂ ನ್ವರ್ಥಕಾಮಾನ್ ಭಜತೋ ನಾತ್ಯಭೀಷ್ಟಾನ್ ಜಗದ್ಗುರುಃ ॥

ಸ್ವರ್ಗಾಪವರ್ಗಯೋಃ ಪುಂಸಾಂ ರಸಾಯಾಂ ಭುವಿ ಸಂಪದಾಂ ।
ಸರ್ವಾಸಾಮಪಿ ಸಿದ್ಧೀನಾಂ ಮೂಲಂ ತಚ್ಚರಣಾರ್ಚನಂ ॥

'ಕೃಷ್ಣನ ಪಾದಗಳನ್ನು ಭಜಿಸಿದರೆ ಆತ ತನ್ನನ್ನೇ ಕೊಡಬಲ್ಲ. ಅರ್ಥಕಾಮಗಳನ್ನು ಕೊಡುವುದರಲ್ಲಿ ಸಂಶಯವೇಕೆ ? ಸ್ವರ್ಗ ಮೋಕ್ಷಗಳಿಗೂ, ಎಲ್ಲ ಐಹಿಕ ಸಂಪತ್ತುಗಳಿಗೂ, ಎಲ್ಲ ಸಿದ್ಧಿಗಳಿಗೂ ಅವನ ಪಾದ ಸೇವೆ ಒಂದೆ ಮೂಲ ಕಾರಣ'

ನಾರದಾದಿಗಳು ನಾರಿಯರಿಗೆ ಮರುಳಾಗುವರೆ ಇಲ್ಲವೆ ಎಂಬ ವಿಚಾರವೆ ಇಲ್ಲಿ ಅಸಂಗತವೂ ಹೌದು. 'ಯೋಗಿಗಳು' ಎಂದು ವಿಶೇಷಣವಿದೆ. ಯೋಗಿಗಳು ಸ್ರಕ್ ಚಂದನ ವನಿತಾದಿ ಬಾಹ್ಯ ವಿಷಯ ಪದಾರ್ಥಗಳಲ್ಲಿ ಸುಖವನ್ನು ಅರಸುವುದಿಲ್ಲ. ಸದಾ ಅಂತರ್ಮುಖಿಗಳಾಗಿದ್ದು ಬೇಕೆಂದಾಗ ಸಮಾಧಿಯಲ್ಲಿ ಕುಳಿತು ಜ್ಞಾನಚಕ್ಷುಸ್ಸಿನಿಂದ ಭಗವಂತನನ್ನು ಕಾಣುತ್ತ ಆನಂದ ಪಡುತ್ತಾರೆ. ಕೆಲವೊಮ್ಮೆ ಪ್ರಾರಬ್ಧವಶದಿಂದ ಸ್ತ್ರೀಮೋಹದಲ್ಲಿ ಬೀಳಬಹುದು. ಆದರೆ ಲೌಕಿಕರಂತೆ ಸ್ತ್ರೀಸುಖಾಭಿಲಾಷಿಗಳಲ್ಲ. ಅವರು ಕೃಷ್ಣನನ್ನು ಭಜಿಸುವುದು ಸ್ತ್ರೀಸುಖ ಲಾಭಕ್ಕಾಗಿ ಅಲ್ಲ. ಕಾಮಾದಿ ದೋಷಗಳ ಅನಾದಿ ಸಂಸ್ಕಾರವನ್ನು ಕಳೆದುಕೊಂಡು ಮುಕ್ತರಾಗುವುದಕ್ಕಾಗಿ. ಶ್ರೀ ಕೃಷ್ಣ ಸ್ವಯಂ ಸ್ತ್ರೀಲೋಲನಾಗಿದ್ದು ಕಾಮಾದಿ ದೋಷ ಉಳ್ಳವನಾದರೆ 'ಕೆಸರೊಳು ಮುಳುಗಿದವ ಪರರ ಬಾಧಿಪ ಕೆಸರ ಬಿಡಿಸುವನೆ ? (ನುಡಿ ೩೨) ಎಂದು ಹಿಂದೆ ಹೇಳಿದಂತೆ ಅವನು ನಾರದಾದಿಗಳ ಕಾಮಾದಿ ದೋಷ ಪರಿಹಾರ ಮಾಡಬಲ್ಲನೆ ? ಆದ್ದರಿಂದ ನಾರದ ಸನಕಾದಿ ಯೋಗಿ ವಂದ್ಯನಾದ ಶ್ರೀಕೃಷ್ಣನಲ್ಲಿ ಕಾಮಾದಿ ದೋಷಗಳನ್ನು ಆರೋಪಿಸುವುದು ಯುಕ್ತಿ ಯುಕ್ತವಾಗುವುದಿಲ್ಲ ಎನ್ನುತ್ತಿದ್ದಾಳೆ ಮಹಾಲಕ್ಷ್ಮೀ.

ಇಲ್ಲಿ 'ಅಡಿಗಡಿಗೆ ಎರಗುವುದು' 'ಆರಾಧಿಸುವುದು' 'ಭಜಿಸುವುದು' ಎಲ್ಲವೂ ಒಂದೆ, ಪುನರುಕ್ತಿ ಎಂದು ಭಾಸವಾಗಬಹುದು. ಆದರೆ 'ಭಜಿಸುವುದು' ಪಾದ ಸೇವನ, 'ಆರಾಧಿಸುವುದು' ಅರ್ಚನ, 'ಎರಗುವುದು' ವಂದನ ಎಂದು ಭಕ್ತಿಯ ಕೆಲವು ಲಕ್ಷಣಗಳನ್ನು ಮುಖತಃ ಹೇಳಿ ಆ ಮೂಲಕ ನವವಿಧ ಭಕ್ತಿಲಕ್ಷಣಗಳೂ ನಾರದ ಸನಕಾದಿಗಳಲ್ಲಿ ಕಂಡಿವೆ ಎನ್ನುವುದು ವಿವಕ್ಷಿತವಾಗಿದೆ

ಸನಕಾದಿ ಎಂದು 'ಆದಿ' ಪದವನ್ನು ಹೇಳಿ ಜೊತೆಗೆ 'ಮೊದಲಾದ' ಎಂದು ಹೇಳಿದರೂ ಪುನರುಕ್ತಿ ಇಲ್ಲ. 'ಸನಕಾದಿ' ಎಂಬ ಆದಿ ಪದದಿಂದ ಸನಕ, ಸನಂದನ,

ಸನತ್ಕುಮಾರ, ಸನತ್ಸುಜಾತರೆಂಬ ನಾಲ್ವರು ಬ್ರಹ್ಮನ ಮಾನಸ ಪುತ್ರರು ಮಾತ್ರ ವಿವಕ್ಷಿತರು. ಅಥವಾ ಸನ, ಸನತ್ಸುಜಾತ, ಸನಕ ಸನಂದನ, ಸನತ್ಕುಮಾರ, ಕಪಿಲ, ಸನಾತನ ಎಂಬ ಏಳು ಮಂದಿ ಬ್ರಹ್ಮನ ಮಾನಸ ಪುತ್ರರು ಮಾತ್ರ ವಿವಕ್ಷಿತರು ಉಳಿದ ಚ್ಯವನ, ದೇವಲ, ಅಸಿತ, ವಿಶ್ವಾಮಿತ್ರ ಮುಂತಾದ ಯೋಗಿಗಳು 'ಮೊದಲಾದ' ಎಂಬ ಪದದಿಂದ ವಿವಕ್ಷಿತರು. 'ನಾರದ ಸನಕಾದಿ ಮೇಲಾದ ಯೋಗಿಗಳು' ಎಂಬ ಪಾಠವೂ ಇದೆ. ಆಗ 'ನಾರದ ಸನಕ ಮುಂತಾದ ಶ್ರೇಷ್ಠಯೋಗಿಗಳು' ಎಂದಂತಾಗುವುದರಿಂದ ಪುನರುಕ್ತಿಗೆ ಅವಕಾಶವೇ ಇಲ್ಲ.

— ೫೩ —

**ಅಂಬುಜ ಸಂಭವ ತ್ರಿಯಂಬಕ ಮೊದಲಾದ**
**ನಂಬಿದವರಿಗೆ ವರವಿತ್ತ ।**
**ಸಂಭ್ರಮದ ಸುರರು ಎಳ್ಳಷ್ಟು ಕೋಪಕ್ಕೆ**
**ಇಂಬಿದ್ದರಿವನ ಭಜಿಸುವರೆ ॥**

'ಬ್ರಹ್ಮ ರುದ್ರ ಮೊದಲಾದ, ನಂಬಿದವರಿಗೆ ವರವಿತ್ತ ಸಂಭ್ರಮದ ಸುರರು, ಶ್ರೀಹರಿಯಲ್ಲಿ ಎಳ್ಳಷ್ಟಾದರೂ ಕೋಪಕ್ಕೆ ಅವಕಾಶವಿರುತ್ತಿದ್ದರೆ ಇವನನ್ನು ಭಜಿಸುತ್ತಿದ್ದರೆ ?'

ಈ ಹಿಂದಿನ ನುಡಿಗಳಲ್ಲಿ ಶ್ರೀಹರಿ ಕಾಮವೆಂಬ ದೋಷಕ್ಕೆ ಸಿಲುಕುವವನಲ್ಲವೆಂದಿದೆ ಈಗ ಕ್ರೋಧಕ್ಕೆ ವಶನಾಗುವವನೂ ಅಲ್ಲ ಎನ್ನಲಾಗಿದೆ.

ಆದರೆ 'ಶ್ರೀಹರಿ ಎಂದಾದರೂ ಕೋಪಗೊಳ್ಳುವವನಾಗಿದ್ದರೆ ಬ್ರಹ್ಮರುದ್ರಾದಿ ದೇವತೆಗಳು ಅವನನ್ನು ಆಶ್ರಯಿಸುತ್ತಿದ್ದರೆ'? – ಎಂದು ಆಕ್ಷೇಪಿಸುವುದು ಮೇಲುನೋಟಕ್ಕೆ ಸರಿಯಲ್ಲ ಎನಿಸೀತು ಕೋಪಗೊಳ್ಳುವನೆಂದಾದರೆ ಮಾತ್ರ ಇತರರು ಅವನನ್ನು ಭಯಭಕ್ತಿಗಳಿಂದ ಉಪಚರಿಸುತ್ತಾರೆ. ಹಿಂದೆ ಧರ್ಮರಾಜ ಕ್ಷಮೆಯೆ ಪರಮಧರ್ಮವೆಂದೂ ಕೌರವರೊಡನೆ ಯುದ್ಧಕ್ಕಿಂತ ವನವಾಸವೆ ಲೇಸೆಂದೂ ಹೇಳಿದಾಗ ಭೀಮಸೇನ 'ಕ್ಷಮೆ ಎಲ್ಲ ಕಡೆ ಧರ್ಮವಾಗುವುದಿಲ್ಲ, ದುರ್ಜನರ ವಿಷಯದಲ್ಲಿ ಅದು ಪಾಪಸಾಧನವೆ ಆಗುತ್ತದೆ' ಎಂದು ಪ್ರತಿಭಟಿಸಿದುದರ ಉಲ್ಲೇಖ ಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿ ಬರುತ್ತದೆ. ಭಾರವಿಯ ಕಿರಾತಾರ್ಜುನೀಯದಲ್ಲಿಯೂ ಇದೇ ಸಂದರ್ಭದಲ್ಲಿ ದ್ರೌಪದಿ ಧರ್ಮರಾಯನಿಗೆ ಹೇಳುವ ಮಾತು, 'ಕೋಪವಿಲ್ಲದವ ಒಲಿದರೇನು, ಮುನಿದರೇನು ? ಯಾರಿಗೂ ಅವನ ಬಗ್ಗೆ ಭಯಭಕ್ತಿಗಳಿಲ್ಲ'

ವಸ್ತುತಃ ಶ್ರೀಹರಿಯಲ್ಲಿ ಕೋಪವೇ ಇಲ್ಲವೆನ್ನುವುದು ಸುಳ್ಳು. ಕೋಪವಿದೆ. ಪ್ರಳಯಕಾಲದಲ್ಲಿ ಪ್ರಪಂಚವನ್ನೇ ಸುಡುವ ಉಗ್ರ ನರಸಿಂಹನ ಕೋಪ ಪ್ರಸಿದ್ಧ. ಹಿರಣ್ಯಕಶಿಪುವನ್ನು ಸೀಳುವಾಗಿನ ಅವನ ಕೋಪ ಕಂಡ ಆತಂಕಗೊಂಡ ಶಿವ, 'ಕೋಪಕಾಲೋ ಯುಗಾಂತಸ್ತೇ' ನಿನ್ನ ಕೋಪಕ್ಕೆ ಪ್ರಳಯ ಕಾಲವೇ ಯೋಗ್ಯ. ಈಗ ನೀನು ಕೋಪಿಸಬೇಡ ಎನ್ನುತ್ತಾನೆ ಭಾಗವತದಲ್ಲಿ. ನರಸಿಂಹನ ಕೋಪದ ಹಣೆಗಣ್ಣಿನ ಸಣ್ಣ ಕಿಡಿಯೊಂದೆ ಬ್ರಹ್ಮಾದಿ ಸಕಲ ದೇವತೆಗಳನ್ನೂ ಸುಟ್ಟೀತೆಂದು ಶ್ರೀಮದಾಚಾರ್ಯರು ನಖಸ್ತುತಿಯಲ್ಲಿ ಸ್ತುತಿಸಿದ್ದಾರೆ.

ವಿಷ್ಣುತತ್ತ್ವ ವಿನಿರ್ಣಯದಲ್ಲಿ 'ನ ತಾದೃಶೀ ಪ್ರೀತಿರೀಡ್ಯಸ್ಯ ವಿಷ್ಣೋಃ' 'ನಾನೇ ದೇವರೆ'ಂದೆನ್ನುವವನನ್ನು ದೇವರು ಕ್ಷಮಿಸುವುದಿಲ್ಲ. 'ನಾನು ದಾಸ'ನೆಂದರೆ ಸಕಲಾಭೀಷ್ಟವನ್ನೇ ಕೊಡುತ್ತಾನೆ. 'ನಾನೆ ಈಶ'ನೆಂದರೆ ನಿತ್ಯ ನರಕ ಕೊಡುತ್ತಾನೆ! ಎಂದಿದೆ

ಭಾಗವತದಲ್ಲಿ ಒಂದು ಕಡೆ, 'ಮತಿರ್ವೈಷಮ್ಯಂ ನಿರವದ್ಯಸ್ಯ ನ ಕ್ವಚಿತ್' ಜೀವರಿಗೆ ದೇಹಾತ್ಮವಿವೇಕ ಸ್ಫುಟವಾಗಿ ಇಲ್ಲದಿರುವುದರಿಂದ ಸ್ತುತಿನಿಂದಾದಿಗಳಿಗೆ ಅವುಗಳಿಂದಾಗುವ ಚಿತ್ತಕ್ಷೋಭಕ್ಕೆ ಈಡಾಗುತ್ತಾರೆ. ಪ್ರಾಕೃತ ದೇಹವೇ ಇಲ್ಲದ ಸರ್ವಾಂತರ್ಯಾಮಿ ಸರ್ವಜ್ಞನಾದ ಶ್ರೀಹರಿಗೆ ಸ್ತುತಿನಿಂದಾದಿಗಳಿಂದ ಯಾವ ಚಿತ್ತ ಕ್ಷೋಭವೂ ಇಲ್ಲ ಎಂದುದೇನೋ ನಿಜವೆ. ಅಷ್ಟುಮಾತ್ರಕ್ಕೆ ಶ್ರೀಹರಿ ಎಂದೂ ಕೋಪಿಸಿಕೊಳ್ಳುವವನಲ್ಲವೆಂದು ತೀರ್ಮಾನಿಸಲಾಗದು

'ಅಪರಾಧ ಸಹಸ್ರಾಣಿ ಕ್ರಿಯಂತೇಽಹರ್ನಿಶಂ ಮಯಾ'

ಎಂದು ನಾವು ನಿತ್ಯ ದೇವರಲ್ಲಿ ಅಪರಾಧ ಕ್ಷಮಾಯಾಚನೆ ಮಾಡುವುದೇಕೆ? ಅವನು ಕೋಪಿಸಿಕೊಂಡಾನೆಂದು ತಾನೆ?

ಭಾಗವತದಲ್ಲಿ ಭೃಗುಮುನಿ ತ್ರಿಮೂರ್ತಿಗಳಲ್ಲಿ ಯಾರು ಮೇಲೆಂದು ಪರೀಕ್ಷಿಸಲು ಹೋಗಿ ಬ್ರಹ್ಮರುದ್ರರು ತಿಳಿಯದೆ ಕೋಪ ಮಾಡುತ್ತಾರೆ. ಶ್ರೀಹರಿ ಅವನ ಎದೆಗೆ ಒದ್ದರೂ ಕೋಪಿಸಿಕೊಳ್ಳುವುದಿಲ್ಲ. ಅವನೆ ಸರ್ವೋತ್ತಮನೆಂದು ತೀರ್ಮಾನಿಸಿದರು. ಆದರೆ ಶ್ರೀಹರಿಗೆ ಭೃಗುಮುನಿಯ ಉದ್ದೇಶ ಮೊದಲೇ ಹೇಗೋ ತಿಳಿದಿದ್ದುದರಿಂದ ಕೋಪಿಸಲಿಲ್ಲ. ತಿಳಿಯದಿರುತ್ತಿದ್ದರೆ ಬ್ರಹ್ಮರುದ್ರರಂತೆಯೇ ಹರಿಯೂ ಕೋಪಗೊಳ್ಳುತ್ತಿದ್ದನೆಂದೆನ್ನಬಹುದು. ಒಂದು ವೇಳೆ ಹರಿ ಕೋಪವಿಲ್ಲದವನೆ ಎಂದರೂ ಹಿಂದೆ ಹೇಳಿದಂತೆ ಅವನಲ್ಲಿ ಭಯಭಕ್ತಿ ಯಾರಿಗೂ ಬರುತ್ತಿರಲಿಲ್ಲ.

ಈ ಎಲ್ಲ ಆಕ್ಷೇಪಗಳಿಗೂ ಉತ್ತರ ಈ ನುಡಿಯಲ್ಲಿಯೆ ಇದೆ. 'ನಂಬಿದವರಿಗೆ ವರವಿತ್ತ ಸಂಭ್ರಮದ ಸುರ'ರೆಂದು ಅನ್ವಯಿಸಿಕೊಳ್ಳುವುದರ ಬದಲಿಗೆ ಶ್ರೀಹರಿ ನಂಬಿದವರಿಗೆ ವರವಿತ್ತ. ಅಂಥ ಹರಿಯಲ್ಲಿ ಎಳ್ಳಷ್ಟು ಕೋಪಕ್ಕೆ ಇಂಬಿರುತ್ತಿದ್ದರೆ ಸಂಭ್ರಮದ ಸುರರು ಅವನನ್ನು ಭಜಿಸುತ್ತಿದ್ದರೆ ? ಎಂದು ಎರಡು ವಾಕ್ಯಗಳು ಶ್ರೀಹರಿ ನಂಬಿದವನಿಗೆ ವರನೀಡುವನೆಂದ ಮೇಲೆ ಆತ ಸ್ತುತಿ ನಿಂದೆಗಳಿಗೆ ಕಿವುಡಾಗುವವನಲ್ಲ ಎಂದಂತಾಯಿತು ಹಾಗಾದರೆ 'ಮತಿ ವೈಷಮ್ಯಂ ನಿರವದ್ಯಸ್ಯ ನ ಕ್ವಚಿತ್' ಎಂಬ ಮಾತಿಗೆ ಏನು ಗತಿ ಎಂದರೆ ಇದಕ್ಕೆ ಜಯತೀರ್ಥರು ವಿಷ್ಣುತತ್ವ ವಿನಿರ್ಣಯ ಟೀಕೆಯಲ್ಲಿ ಸಮಾಧಾನ ಕೊಟ್ಟಿದ್ದಾರೆ– 'ಸಜ್ಜನರು ಕಾರಣಾಂತರದಿಂದ ತಿಳಿಯದೆ ಮಾಡಿದ ತಪ್ಪನ್ನು ಹರಿ ಮರೆತು ಬಿಡುತ್ತಾನೆ'. ಇಲ್ಲಿ ವಾದಿರಾಜರೂ 'ನಂಬಿದವರಿಗೆ ವರವಿತ್ತ, ಶ್ರೀಹರಿ. ಹೊರತು, ಅವರೇನಾದರೂ ಪ್ರಮಾದವೆಸಗಿದರೆ ಕೋಪಿಸಿಕೊಳ್ಳಲಿಲ್ಲ' ಎಂದಿದ್ದಾರೆ. 'ಸಂಭ್ರಮ'ದ ಸುರರು ಎಂದಿದ್ದಾರೆ. ಕೆಲವೊಮ್ಮೆ ಸುರರಿಗೂ 'ಸಂ–ಭ್ರಮ' ಪ್ರಮಾದ ಉಂಟಾಗಬಹುದು. ಅದನ್ನು ಹರಿ ಗಂಭೀರವಾಗಿ ಪರಿಗಣಿಸುವುದಿಲ್ಲ. ವಾದಿರಾಜರು ಒಂದು ಕೀರ್ತನೆಯಲ್ಲಿ ಹೇಳುತ್ತಾರೆ–

ಭಕುತರಪರಾಧ ಬಗೆಯನೀ ದೇವ–ಅ
ಭಕುತರು ತಪ್ಪಿದರೆ ಬಲು ಭಯವೀವ ।

ಅಭಕ್ತರಾದ ಅಸುರರು ಹರಿಯನ್ನು ನಂಬಲಿಲ್ಲ ಬ್ರಹ್ಮಾದಿಗಳನ್ನು ನಂಬಿದರು ವಸ್ತುತಃ ಅವರನ್ನೂ ನಂಬಲಿಲ್ಲ. ತಮ್ಮ ತಪೋಬಲವನ್ನು ನಂಬಿ, ಛಲದಿಂದ ರುದ್ರಾದಿಗಳ ವರಪಡೆದು ಅವರನ್ನೇ ನಾಶಪಡಿಸಲು ಭಸ್ಮಾಸುರನಂತೆ ಯತ್ನಿಸಿದರು ಅಂಥವರಿಗೆ ಹರಿ ಎಂದೂ ಒಲಿಯುವುದಿಲ್ಲ. ಸಜ್ಜನರಲ್ಲಿ ಎಂದೂ ಮುನಿಯುವುದೂ ಇಲ್ಲ ಭೃಗುಮುನಿ ಎದೆಗೆ ಒದ್ದರೂ ಸುಮ್ಮನಿದ್ದ ತಾನೆ!

ಭೃಗುಮುನಿಯು ಇಂಗಿತ ಮೊದಲೆ ತಿಳಿಪಿದ್ದುದರಿಂದ ಹರಿ ಕೋಪ ಮಾಡಲಿಲ್ಲ! –ನಿಜ. ಆದರೆ ತಿಳಿಯದಿರುತ್ತಿದ್ದರೂ 'ಬ್ರಹ್ಮಣ್ಯ ದೇವ' 'ಬ್ರಾಹ್ಮಣ ಪ್ರಿಯ' ಎಂದೂ ಕೋಪಿಸಿಕೊಳ್ಳುತ್ತಿರಲಿಲ್ಲ.

ಅಥವಾ ಚಿತ್ತಕ್ಷೋಭದಿಂದ ಪರವಶತೆ ಉಂಟುಮಾಡುವಂಥ ಕೋಪಕ್ಕೆ ಅಜ್ಞಾನ ಮೂಲ. ರಜಸ್ತಮೋಗುಣಗಳ ಪರಿಣಾಮ ಈ ಕೋಪ, ಒಂದು ದೊಡ್ಡ ದುರ್ಗುಣ. ಶ್ರೀಹರಿಯಲ್ಲಿ ಅದಕ್ಕೆ ಅವಕಾಶವಿಲ್ಲವೆನ್ನುವುದು ಈ ನುಡಿಯ ಅಭಿಪ್ರಾಯ.

ಭಾಗವತದಲ್ಲಿ ಗೋವರ್ಧನೋದ್ಧಾರಿ ಶ್ರೀಕೃಷ್ಣನ ಮುಂದೆ ದೇವೇಂದ್ರ ಕ್ಷಮಾಯಾಚನೆ ಮಾಡುತ್ತ ಹೇಳಿದ ಮಾತು–

ಮಾಯಾಮಯೋಽಯಂ ಗುಣಸಂಪ್ರವಾಹೋ
ನ ವಿದ್ಯತೇಽಗ್ರಹಣಾನುಬಂಧಃ ।
ಕುತೋ ನು ತದ್ಧೇತವ ಈಶ ಮನ್ಯು-
ಲೋಭಾದಯೋ ಯೇಽಬುಧಲಿಂಗಭಾವಾಃ ॥

'ಶ್ರೀಕೃಷ್ಣ ನಿನ್ನಲ್ಲಿ ಅಜ್ಞಾನವೆಂಬುದಿಲ್ಲವೆಂದ ಮೇಲೆ ಅದಕ್ಕೆ ಕಾರಣವಾದ ತ್ರಿಗುಣ ಸಂಬಂಧವಿಲ್ಲ. ಕ್ರೋಧಲೋಭಾದಿಗಳೂ ಅಜ್ಞಾನದ ಚಿಹ್ನೆಗಳು, ತ್ರಿಗುಣ ಸಂಬಂಧದಿಂದ ಹುಟ್ಟಿ ತ್ರಿಗುಣಮಯವಾದ ಸಂಸಾರದ ಅಸ್ತಿತ್ವಕ್ಕೆ ಕಾರಣವಾಗುವಂಥವು ಅವು ತ್ರಿಗುಣ ಸಂಬಂಧವಿಲ್ಲದ ನಿನ್ನಲ್ಲಿ ಇರಲು ಶಕ್ಯವಿಲ್ಲ'.

ಅಜ್ಞಾನವಿಲ್ಲದಿದ್ದುದರಿಂದಲೇ ಶ್ರೀಹರಿ ಮೊದಲಿಗೇ ಭೃಗುಮುನಿಯ ಇಂಗಿತವರಿತು ಅವನಲ್ಲಿ ಕೋಪವಮಾಡದೆ ಗೌರವದಿಂದ ನೋಡಿಕೊಂಡ. ಬ್ರಹ್ಮರುದ್ರರು ಅಜ್ಞಾನದಿಂದಾಗಿ ಕೋಪಿಸಿಕೊಂಡರು. ಭ್ರಮೆಯಿಂದಾಗಿ ಕೋಪ ಅವರಿಗೆ ಬಂದಿತ್ತು 'ಸಂ–ಭ್ರಮ'ದ ಸುರರು ತಾನೆ, ಅವರೂ ?

ವಾದಿರಾಜರು ಗುಂಡಕ್ರಿಯೆಯಲ್ಲಿ ಇದನ್ನೇ ಹೇಳಿದ್ದಾರೆ–

ಶೋಧಿಸೆ ಬಂದ ಭೃಗುವನರಿಯದೆ ವೃಥಾ
ಕ್ರೋಧವ ಮಾಡಿದ ಕಾರಣ ವಿಧಿರುದ್ರ
ರಾಧಿಕ್ಯರಾದುದಿಲ್ಲ
ವೇದ ಈಶ ಸರ್ವಜ್ಞ ಎಂದು ಪೇಳ್ದ
ಆದಿ ವಸ್ತುವ ಕಾಣೆಯ ।
ಬೋಧವಿಲ್ಲದೆ ಮಾನವರಂತೆ ಇರುತಿಪ್ಪ
ಆ ದೇವರೆಂತಪ್ಪರೈ ।
ಶ್ರೀಧವನೆದೆಯನೊದ್ದಾಗಲೆ ಸರ್ವ
ವೇದಿ ಹಯವದನನಾದ ಕಾರಣ ಕೋಪಿ
ಸದೆ ಹೆದ್ದೈವನಾದ !

ನರಸಿಂಹನ ಕೋಪವೇನೋ ಪ್ರಸಿದ್ಧವೆ. ಆದರೆ ಅದು ಅಜ್ಞಾನದಿಂದ ತ್ರಿಗುಣ ಸಂಬಂಧದಿಂದ ತಾನಾಗಿಯೇ ಬಂದುದಲ್ಲ. ಸ್ವೇಚ್ಛೆಯಿಂದ ಬಂದುದು. ಪರವಶತೆಯನ್ನುಂಟುಮಾಡದುದು. ಇದನ್ನೂ ದೇವೇಂದ್ರನೇ ಕೃಷ್ಣನಲ್ಲಿ ಹೇಳಿದ್ದಾನೆ–

ಅಥಾಪಿ ದಂಡಂ ಭಗವಾನ್ ಬಿಭರ್ತಿ
ಧರ್ಮಸ್ಯ ಗುಪ್ತ್ಯೈ ಖಲ ನಿಗ್ರಹಾಯ ॥

'ದುಷ್ಟರನ್ನು ದಮನಮಾಡಿ ಧರ್ಮವನ್ನು ಉಳಿಸುವುದಕ್ಕಾಗಿ ಸ್ವೇಚ್ಛೆಯಿಂದಲೆ ನೀನು ಕೋಪ ಮಾಡುವಿ' ಅದೂ ಸಜ್ಜನರ ಮೇಲಿನ ಪ್ರೀತಿಯಿಂದ ಆದ್ದರಿಂದಲೆ ಸಜ್ಜನರಿಗೆ ಉಗ್ರನರಸಿಂಹನೆ 'ಮುದ್ದು ನರಸಿಂಹ'ನೆನಿಸುತ್ತಾನೆ ! ಲಕ್ಷ್ಮೀ ಶೋಭನ ಪದದಲ್ಲಿಯೆ ಮುಂದೆ (ನುಡಿ ೮೫) ಹೆಣ್ಣುಮಕ್ಕಳು–

'ಮುದ್ದು ನರಸಿಂಹ ಹಸೆಗೆ ಬಾ'

ಎಂದು ಹಸೆಗೆ ಕರೆಯುತ್ತಾರೆ. ಪ್ರಳಯಕಾಲದ ನರಸಿಂಹನ ಕೋಪವೂ ಸ್ವೇಚ್ಛೆಯಿಂದಲೆ ತಂದುಕೊಂಡುದುದು–

ಸ್ವಾಪಂ ಪ್ರಾಪಯತಿ ಶ್ರಮಾಪಹೃತಯೇ
ಕಲ್ಪಾವಸಾನೇ ಚ ಯಃ । –ವಿಷ್ಣುತತ್ವವಿನಿರ್ಣಯ ಟೀಕಾ

'ಕಲ್ಪದ ಕೊನೆಯಲ್ಲಿ ಜೀವರಿಗೆ ನಿದ್ದೆಯ ವಿಶ್ರಾಂತಿ ದೊರಕಿಸಲೆಂದೆ ಹರಿ ಲಯ ಮಾಡುತ್ತಾನೆ'. ಹಿರಣ್ಯಕಶಿಪುವನ್ನು ಸೀಳುವಾಗಲೂ ಅಸುರಾವೇಶದಿಂದ ಅಪರಾಧವೆಸಗುತ್ತಿದ್ದ ತನ್ನ ಅರಮನೆಯ ದ್ವಾರಪಾಲಕನನ್ನು ಉದ್ಧರಿಸಲೆಂದೇ ಉಗ್ರರೂಪ ಧರಿಸಿದ್ದ. ಆದ್ದರಿಂದ ಅವನ ಕೋಪ ಕ್ಷಮೆಯ ಇನ್ನೊಂದು ರೂಪ !

'ಕ್ರೋಧಃ ಕ್ಷಮಾತ್ಮಕೋ.ಯಸ್ಯ'

ಹೀಗೆ ಶ್ರೀಹರಿಯ ಕೋಪ ಸದ್ಗುಣವೆ. ದೇವತೆಗಳ ಕೋಪ ಒಂದು ದೋಷ. ಅಜ್ಞಾನದಿಂದ ಬಂದುದು. 'ಸಂ–ಭ್ರಮ'ದ ಈ ಸುರರು ಭ್ರಮರಹಿತನಾದ, ಸರ್ವಜ್ಞನಾದ ಹರಿಯನ್ನು ಭಜಿಸುವುದರಲ್ಲಿ ಏನೂ ಸಂಶಯವಿಲ್ಲ. ಅಜ್ಞಾನ ಮೂಲಕವಾದ ಕೋಪ ಎಳ್ಳಷ್ಟು ಇಲ್ಲದಿರುವುದೆ ಶ್ರೀಹರಿ ಸರ್ವಜ್ಞನೆನ್ನಲು ಸಾಕ್ಷಿ ಎನ್ನುತ್ತಿದ್ದಾಳೆ ಮಹಾಲಕ್ಷ್ಮಿ.

– ೫೪ –

**ಆವನಂಗುಷ್ಠವ ತೊಳೆದ ಗಂಗಾದೇವಿ**
**ಪಾವನಳೆನಿಸಿ ಮೆರೆಯಳೆ ।**
**ಜೀವನ ಸೇರುವ ಪಾಪವ ಕಳೆವಳು**
**ಈ ವಾಸುದೇವಗೆ ಎಣೆಯುಂಟೆ ॥**

ಯಾರ ಅಂಗುಷ್ಠವನ್ನು ತೊಳೆದ ನೀರು ಗಂಗಾದೇವಿ ಎನಿಸಿ ಲೋಕಪಾವನೆಯಾಗಿ ಮೆರೆಯುವಳೊ ಮತ್ತು ಜೀವರನ್ನು ಸೇರುವ ಪಾಪವನ್ನು ಕಳೆಯುವಳೋ ಅಂಥ ವಾಸುದೇವನಿಗೆ ಸಮಾನರಾರಿರುವರು ?

ಶ್ರೀಕೃಷ್ಣ ಬೆಣ್ಣೆ ಕದ್ದಿದ್ದಾನೆ, ಹೆಣ್ಣುಗಳ ಸೀರೆ ಕದ್ದಿದ್ದಾನೆ ಅಸುರರನ್ನು ಕೊಂದಿದ್ದಾನೆ ಹೀಗೆ ಕಳ್ಳತನ ಪರಸ್ತ್ರೀಗಮನ ಹಿಂಸೆ ಎಲ್ಲ ವಿಧದ ಪಾಪ ಅವನಲ್ಲಿ ಇದೆ ಎಂದು ಆಕ್ಷೇಪಿಸುವವರಿಗೆ ಇದು ಉತ್ತರ. ಈ ಎಲ್ಲ ವಿಧವಾದ ಪಾಪ ಮಾಡಿದರೂ ಗಂಗೆಯಲ್ಲಿ ಮಿಂದರೆ ಪಾಪ ಪರಿಹಾರವೆನ್ನುತ್ತಾರೆ. ಅಂಥ ಲೋಕಪಾವನೆಯಾದ ಗಂಗೆ ನಾರಾಯಣನ ಕಾಲುತೊಳೆದ ನೀರು ಎಂದ ಮೇಲೆ ಆ ನಾರಾಯಣ ಎಷ್ಟು ಪಾವನನಿರಬಹುದು ? ಪಾವಿತ್ರ್ಯದಲ್ಲಿ ಆತನಿಗೆ ಸಮಾನರು ಯಾರು ಇರಬಹುದು ? ಏಕೆಂದರೆ ಅವನನ್ನು ಹೊರತು ಉಳಿದವರೆಲ್ಲರೂ ಅವನ ಪಾದತೀರ್ಥವನ್ನು ಸೇವಿಸಿ ತಮ್ಮ ಪಾಪಗಳನ್ನು ಕಳೆದುಕೊಂಡವರು ! ಇಂಥ ನಾರಾಯಣನಲ್ಲಿಯೇ ಪಾಪವಿರುವುದಾದರೆ ಇನ್ನು ಪಾಪರಹಿತನಾದವನು ಲೋಕದಲ್ಲಿ ಯಾರು ? ಎನ್ನುತ್ತಾಳೆ ಮಹಾಲಕ್ಷ್ಮಿ

ಶ್ರೀಹರಿ ವಾಮನಾವತಾರದಲ್ಲಿ ಬಲಿಚಕ್ರವರ್ತಿಯಿಂದ ಮೂರು ಹೆಜ್ಜೆ ಭೂಮಿ ಬೇಡಿ, ಆಳೆಯುವುದಕ್ಕಾಗಿ ಎಡಗಾಲು ಮೇಲೆತ್ತಿದ. ಆಗ ಅಂಗುಷ್ಠದ ಉಗುರು ಬ್ರಹ್ಮಾಂಡದ ಕಟಾಹಕ್ಕೆ ತಗುಲಿ ಬಿರುಕು ಬಿಟ್ಟಿತು. ಹೊರಗಿನ ಜಲಾವರಣದ ಶುದ್ಧ ಜಲ ಒಳಗೆ ಸುರಿಯಿತು. ಬ್ರಹ್ಮದೇವ ಅದನ್ನು ಕಮಂಡಲುವಿನಲ್ಲಿ ಸಂಗ್ರಹಿಸಿ ಆದರಿಂದಲೆ ಆ ವಿಷ್ಣುಪಾದವನ್ನು ತೊಳೆದ. ಆ ನೀರು ಗಂಗೆಯಾಯಿತು ಬ್ರಹ್ಮಲೋಕದಿಂದ ಗಂಗೆ ಬಹು ಸಾವಿರ ಯುಗಗಳ ಬಳಿಕ ಶಿಂಶುಮಾರ ಲೋಕಕ್ಕೆ ಹರಿದಳು ಅಲ್ಲಿ ಭಕ್ತಧ್ರುವನು ಕುಲದೇವತೆಯ ಪಾದೋದಕವೆಂದು ಆ ನೀರನ್ನು ತಲೆಯಲ್ಲಿ ಧರಿಸಿದ. ಅಲ್ಲಿಂದ ನದಿ ಸಪ್ತರ್ಷಿಗಳ ಲೋಕಕ್ಕೆ ಹರಿಯಿತು. ಸಪ್ತ ಋಷಿಗಳೂ ಆ ನೀರನ್ನು ತಲೆಯಲ್ಲಿ ಧರಿಸಿದರು. ಮುಂದೆ ದೇವಯಾನ ಮಾರ್ಗವಾಗಿ ಗಂಗೆ ಹರಿದು ಚಂದ್ರಮಂಡಲವನ್ನು ತಲುಪಿದಳು. ಅಲ್ಲಿ ಸೂರ್ಯ ಕಿರಣಗಳಿಂದ ಇನ್ನಷ್ಟು ಶುದ್ಧಿಯನ್ನು ಪಡೆದು ಮೇರು ಶಿಖರದ ಮೇಲೆ ಹರಿದಳು. ಅಲ್ಲಿಂದ ಪೂರ್ವ ಪಶ್ಚಿಮ ದಕ್ಷಿಣ ಉತ್ತರದ ದಿಕ್ಕುಗಳಿಗೆ ಕ್ರಮವಾಗಿ ಸೀತಾ, ಅಲಕನಂದಾ, ಚಕ್ಷು, ಭದ್ರಾ ಎಂಬ ಹೆಸರುಗಳಿಂದ ನಾಲ್ಕು ಭಾಗಗಳಾಗಿ ಕೆಳಗೆ ಇಳಿದು ನಾಲ್ಕು ಸಮುದ್ರಗಳ ಕಡೆಗೆ ಹರಿದು ಹೋದಳು. ದಕ್ಷಿಣಕ್ಕೆ ಹರಿಯತೊಡಗಿದ ಅಲಕನಂದೆ ಗಂಧಮಾದನ ಪರ್ವತದ ಮಾರ್ಗವಾಗಿ ಮಾನಸ ಸರೋವರವನ್ನು ಸೇರಿ, ತ್ರಿಶಿಖರ ಪರ್ವತವನ್ನೂ ತೋಯಿಸಿ, ಹಿಮಾಲಯವನ್ನು ತಲುಪಿದಳು. ಅಲ್ಲಿಯೇ ಮೇರುವಿನ ಮಗಳಾದ ಮನೋರಮೆಯಲ್ಲಿ ಹಿಮಾಲಯನಿಂದ ಪುನರ್ಜನ್ಮ ಪಡೆದು ಹಿಮಾದ್ರಿಪುತ್ರಿ, ಗಿರಿಸುತೆ, ಪಾರ್ವತಿ ಎಂದೆಲ್ಲ ಕರೆಸಿಕೊಂಡಳು. ಆಗ ದೇವತೆಗಳು ಬಂದು ಅವಳನ್ನು ತಮ್ಮ ಲೋಕಕ್ಕೆ ಬರಮಾಡಿಕೊಂಡರು.

ಮುಂದೆ ಸಗರಪುತ್ರರು ಕಪಿಲ ಮುನಿಯ ಕ್ರೋಧಾಗ್ನಿಗೆ ತುತ್ತಾಗಿ ಬೂದಿಯಾದುದರಿಂದ ಅವರ ಸದ್ಗತಿಗಾಗಿ ಅವರ ವಂಶಜರೆಲ್ಲರೂ ದೇವಲೋಕದಿಂದ ಗಂಗೆಯನ್ನು ತರಿಸುವ ಯತ್ನ ಮಾಡುತ್ತಲೇ ಇದ್ದರು ಕೊನೆಗೆ ಭಗೀರಥನ 'ಭಗೀರಥ ಯತ್ನ'ದಿಂದ ಅದು ಕೈಗೂಡಿತು. ಅವನ ತಪಸ್ಸಿಗೆ ಮೆಚ್ಚಿ ಬ್ರಹ್ಮದೇವ ಗಂಗೆಯನ್ನು ಭೂಮಿಗೆ ಕಳಿಸಿದ, ಆವಳು ಧುಮುಕುವ ವೇಗವನ್ನು ಶಿವ ತಡೆದು ಅವಳನ್ನು ತನ್ನ ಜಟಾಜೂಟದಲ್ಲಿ ಬಂಧಿಸಿಟ್ಟುಕೊಂಡ. ಸಣ್ಣ ಪ್ರವಾಹವನ್ನು ಮಾತ್ರ ಹರಿಯಲು ಬಿಟ್ಟ. ಆ ಪ್ರವಾಹ ಭಗೀರಥನ ಹಿಂದೆ ಹರಿಯುತ್ತಾ ಸಾಗರದ ಕಡೆಗೆ ಹೊರಟಿತು. ದಾರಿಯಲ್ಲಿ ಜಹ್ನುಮುನಿಯ ಆಶ್ರಮವನ್ನು ಕೊಚ್ಚಿಕೊಂಡು ಹೋದಾಗ ಸಿಟ್ಟಾದ ಮುನಿಯು ಒಂದು ಆಪೋಶನಕ್ಕೆ ಇಡೀ ಪ್ರವಾಹ ಅವನ ಹೊಟ್ಟೆಯನ್ನು ಸೇರಿತು ಭಗೀರಥನ ಪ್ರಾರ್ಥನೆಗೆ ಮನಕರಗಿ ಗಂಗೆಯನ್ನು ತನ್ನ ಕಿವಿಯಿಂದ ಹೊರಗೆ ಕಳುಹಿಸಿದ ಜಹ್ನುಮುನಿ, ಈ ಒಂದು ಹೊಸ ಜನ್ಮದಿಂದಾಗಿ ಗಂಗೆ ಜಹ್ನುಕನ್ಯೇ ಜಾಹ್ನವಿ ಎನಿಸಿದಳು. ಮುಂದೆ ಸಮುದ್ರವನ್ನು ಸೇರಿ ಸಮುದ್ರರಾಜನ ಮಡದಿ ಎನಿಸಿದಳು. ಅಲ್ಲಿಂದ ಮುಂದೆ ಪಾತಾಳಕ್ಕೂ ಇಳಿದು ಅಲ್ಲಿ ಸಗರ ಪುತ್ರರ ಬೂದಿಯ ಮೇಲೆ ಹರಿದು ಅವರಿಗೆ ಸದ್ಗತಿ ನೀಡಿದಳು. ಹೀಗೆ ಭಗೀರಥನ ಯತ್ನದಿಂದ ಗಂಗೆ ದೇವಲೋಕದಿಂದ ಭೂಮಿಗೆ ಅವತರಿಸಿ ಪಾತಾಳಕ್ಕೂ ಇಳಿದು ತ್ರಿಪಥಗಾ ಎನಿಸಿದಳು. ದೇವಲೋಕದಲ್ಲಿ ಮಂದಾಕಿನೀ, ಭೂಲೋಕದಲ್ಲಿ ಭಾಗೀರಥೀ ಪಾತಾಳದಲ್ಲಿ ಭೋಗವತಿಯೆಂಬ ಹೆಸರಿನಿಂದ ಹರಿದು ತ್ರಿಲೋಕಪಾವನೆ ಎನಿಸಿದಳು.

ಜ್ಯೇಷ್ಠ ಶುದ್ಧ ದಶಮೀ ದಶಹರಾ. ಅಂದು ಗಂಗೆಯನ್ನು ಪೂಜಿಸಿದರೆ ಹತ್ತು ಜನ್ಮದಲ್ಲಿ ಮಾಡಿರಬಹುದಾದ ಹತ್ತು ವಿಧದ ಪಾಪ ಪರಿಹಾರ. ಪರದ್ರವ್ಯಾಪಹಾರ, ಅವಿಹಿತವಾದ ಹಿಂಸೆ, ಪರಸ್ತ್ರೀಸಂಗ ಇವು ಮೂರು ಕಾಯಿಕ ಪಾಪಗಳು. ಕಠಿನವಾದ ಮಾತು, ಸುಳ್ಳು, ಚಾಡಿಮಾತು ಮತ್ತು ಅಸಂಬದ್ಧ ಪ್ರಲಾಪ ಇವು ನಾಲ್ಕು ವಾಚಿಕ ಪಾಪಗಳು. ಪರದ್ರವ್ಯವನ್ನು ಬಯಸುವುದು, ಪರರಿಗೆ ಕೇಡೆಣಿಸುವುದು ಅಲಭ್ಯವಸ್ತುಗಾಗಿ ತಡೆಯಲಾಗದಂಥ ಬಯಕೆ ಇವು ಮೂರು ಮಾನಸ ಪಾಪಗಳು. ಈ ಹತ್ತು ಪಾಪಗಳನ್ನು ಕಳೆಯುವುದರಿಂದ ಗಂಗೆ, 'ಗಂಗೆ' ಎನಿಸಿದಳು– 'ಗಮಯತಿ ನಿರ್ಗಮಯತಿ ಪಾಪಂ'. 'ಪುಣ್ಯಾ' ಎಂಬುದು ಗಂಗೆಗೇ ಇನ್ನೊಂದು ಹೆಸರು. ಎಂದ ಮೇಲೆ ಅವಳು ಎಷ್ಟು ಪಾವನಳು ಎಂಬುದನ್ನು ಬೇರೆ ಹೇಳಬೇಕಾಗಿಲ್ಲ.

ಸ್ಕಂದಪುರಾಣ ಕಾಶೀಖಂಡದಲ್ಲಿ ಸ್ಕಂದನು ಅಗಸ್ತ್ಯಮುನಿಗೆ ಗಂಗೆಯ ಪಾವಿತ್ರ್ಯವನ್ನು ಬಣ್ಣಿಸುತ್ತಾ ಹೇಳುವ ಮಾತು–

ಸಂತಿ ಪುಣ್ಯಜಲಾನೀಹ ಸರಾಂಸಿ ಸರಿತೋ ಮುನೇ ।
ಪರಂ ಸ್ವರ್ಗತರಂಗಿಣ್ಯಾಃ ಕೋಟ್ಯಂಶೋಽಪಿ ನ ತತ್ರ ವೈ ॥
ಅನೇನೈವಾನುಮಾನೇನ ಬುಧ್ಯಸ್ವ ಕಲಶೋದ್ಭವ ।
ದಧ್ರೇ ಗಂಗೋತ್ತಮಾಂಗೇನ ದೇವದೇವೇನ ಶಂಭುನಾ ॥
ಗಂಗಾಸ್ನಾನಫಲಂ ಬ್ರಹ್ಮನ್ ಗಂಗಾಯಾಮೇವ ಲಭ್ಯತೇ ।
ಯಥಾ ದ್ರಾಕ್ಷಾಫಲಸ್ವಾದೋ ದ್ರಾಕ್ಷಾಯಾಮೇವ ನಾನ್ಯಥಾ ॥

'ಪುಣ್ಯತೀರ್ಥ ಸರೋವರಗಳು ನದಿಗಳು ಲೋಕದಲ್ಲಿ ಬಹಳ ಇವೆ. ಆದರೆ ಗಂಗಾನದಿಯ ಒಂದು ಕೋಟಿಯ ಅಂಶವೂ ಅವುಗಳಲ್ಲಿಲ್ಲ. ಮುನಿಯೆ, ಗಂಗೆ ಎಷ್ಟು ಪವಿತ್ರಳೆಂಬುದನ್ನು ನೀನೇ ಊಹಿಸಿಕೊಳ್ಳಬಹುದು. ಏಕೆಂದರೆ, ದೇವದೇವನಾದ ಶಂಭು ಗಂಗೆಯನ್ನು ತಲೆಯ ಮೇಲೆ ಹೊತ್ತುಕೊಂಡಿದ್ದಾನೆ. ವಿಷ್ಣುಪಾದೋದ್ಭವೆಯಾದ ಗಂಗೆಯನ್ನು ಬಿಟ್ಟರೆ ಪಾಪಪರಿಹಾರಮಾಡಬಲ್ಲ ಇನ್ನೊಂದು ವಸ್ತು ಎಲ್ಲಿ? ಗಂಗಾ ಸ್ನಾನದ ಫಲ ಗಂಗೆಯಲ್ಲಿಯೆ. ಇನ್ನೆಲ್ಲು ಸಿಗದು ದ್ರಾಕ್ಷಿಯ ಸಿಹಿ ದ್ರಾಕ್ಷಿಯಲ್ಲಿಯೇ ಹೊರತು ಬೇರೆ ಎಲ್ಲಿಯೂ ಸಿಗದು'.

ಶಿವನು ಗಂಗೆಯನ್ನು ಧರಿಸಿದ್ದು ಆಕೆ ಪಾವನಳೆಂದೆ? ಭಗೀರಥನ ಪ್ರಾರ್ಥನೆಯಂತೆ ಗಂಗೆಯ ವೇಗವನ್ನು ತಡೆಯಲು ಪ್ರವಾಹಕ್ಕೆ ತಲೆ ಒಡ್ಡಿದನಷ್ಟೇ. ಹಾಗೆ ಹೇಳುತ್ತಿದೆ ರಾಮಾಯಣದ ಕಥೆ. ಸ್ಕಂದ ಪುರಾಣದಲ್ಲಿ ಬ್ರಹ್ಮಾಂಡಾಧಾರಳೂ ಜಗತ್ತಿಗೆ ಪೋಷಕಳೂ ಆದ ಗಂಗೆಯನ್ನು ಲೋಕಹಿತಕ್ಕಾಗಿ ಲೀಲೆಯಿಂದ ಧರಿಸಿದ್ದೇನೆ ಎಂದು ಶಿವ ತಾನೇ ಹೇಳುತ್ತಾನೆ. ಸ್ಕಂದಪುರಾಣೋಕ್ತ ಗಂಗಾಸಹಸ್ರನಾಮವನ್ನು ನೋಡಿದರೆ ಬೇರೆಯೆ ಕಾರಣವಿರುವಂತೆ ಕಾಣುತ್ತದೆ. ಗಂಗೆ ಅಲ್ಲಿ 'ಹರಪ್ರಿಯೆ' 'ಗಿರಿಶಪ್ರಿಯೆ' 'ಪುರಜಿತ್‌ಪರಮಪ್ರಿಯೆ' 'ಮಹಾದೇವಾರ್ಧಹಾರಿಣಿ' 'ಗಣನಾಥಾಂಬಿಕೆ' 'ಗುಹಾಂಬಿಕೆ' ಅರ್ಥಾತ್ ಶಿವನ ಅರ್ಧಾಂಗಿನಿ. ಮಹಾಭಾರತದಲ್ಲಿಯೂ ಗಂಗೆ ಹಿಮಾಲಯನ ಮಗಳು, ಶಿವನ ಭಾರ್ಯೆ–

'ಸುತಾವನಿಧ್ರಸ್ಯ ಹರಸ್ಯ ಭಾರ್ಯಾ'

ನಾರಾಯಣನು ಲಕ್ಷ್ಮಿಯನ್ನು ಎದೆಯಲ್ಲಿ ಧರಿಸಿದಂತೆ, ಬ್ರಹ್ಮನು ಸರಸ್ವತಿಯನ್ನು ಇನ್ನೂ ಮೇಲೆ ನಾಲಿಗೆಯಲ್ಲಿ ಧರಿಸಿದಂತೆ, ಶಿವನು ಇನ್ನೂ ಮೇಲಕ್ಕೆ ತಲೆಯ ಮೇಲೆಯೆ ಮಡದಿಯನ್ನಿರಿಸಿಕೊಂಡಿದ್ದರೆ ಅಚ್ಚರಿ ಏನಿಲ್ಲ.

–ಈ ಸಂದೇಹಕ್ಕೆ ಮೇಲೆ ಹೇಳಿದ ಸ್ಕಂದಪುರಾಣದ ಸ್ಕಂದನ ಮಾತೆ ಸರಿಯಾದ ಸಮಾಧಾನ ಹೇಳಿದೆ. ದೇವದೇವನಾದ ಶಂಭು ಗಂಗೆಯನ್ನು ತಲೆಯ

ಮೇಲೆ ಹೊತ್ತಿರುವನೆಂಬುದರಿಂದ ಆಕೆ ಪಾವನಳೆಂದು ಊಹಿಸಬೇಕೇ ಹೊರತು ಆಕೆ ಮೋಹದ ಮಡದಿ ಎಂದಲ್ಲ ಎಂದು ಅಲ್ಲಿ ಹೇಳಿದಂತಾಗಿದೆ. ಭಗೀರಥನ ಪ್ರಾರ್ಥನೆಯಿಂದಾಗಲೀ, ಲೋಕಹಿತಕ್ಕಾಗಿ ಸ್ವಪ್ರೇರಣೆಯಿಂದಾಗಲಿ ಗಂಗೆಯನ್ನು ಶಿವ ತಲೆಯ ಮೇಲೆ ಧರಿಸ ಬೇಕಾಗಿರಲಿಲ್ಲ. ಒಬ್ಬರ ಕಾಲು ತೊಳೆದ ನೀರನ್ನು ತಲೆಯ ಮೇಲೆ ಧರಿಸಲು ಇಂಥ ಕಾರಣಗಳು ಏನೂ ಸಾಲವು

ಸ್ಕಂದಪುರಾಣದಲ್ಲಿ ಶಿವನೆ ಗಂಗಾವತರಣದ ಬಗ್ಗೆ ಹೇಳುತ್ತ ಆಕೆ ಸಮುದ್ರ ಮಹಿಷಿಯಾಗಿ ಅವನೊಂದಿಗೆ ವಿಹರಿಸಿದಳೆಂದಿದ್ದಾನೆ. ಗಂಗಾಸಹಸ್ರನಾಮ ದಲ್ಲಿಯೂ ಆಕೆ 'ರತ್ನಾಕರ ಪ್ರೇಮಪಾತ್ರಂ' ಸಮುದ್ರರಾಜನ ಪ್ರೇಮಪಾತ್ರಳು. ಸಮುದ್ರ ರಾಜನಿಗೂ 'ಗಂಗಾಧರ' ಎಂಬ ಹೆಸರಿದೆ. ಮೊದಲೆ ಹರನ ಮಡದಿಯಾಗಿದ್ದರೆ ಮುಂದೆ ಸಮುದ್ರರಾಜನ ಮಡದಿಯಾಗಬಲ್ಲಳೆ ? ಹರನೆಲ್ಲಿ ? ಸಮುದ್ರರಾಜನೆಲ್ಲಿ ?

ವಸ್ತುತಃ ಗಂಗೆಯಲ್ಲಿ ಪಾರ್ವತಿಯ ಅಂಶವೂ ಇದೆ ಏಕೆ ? ಮೂಲೋಕದಲ್ಲಿರುವ ಎಲ್ಲ ಪುಣ್ಯ ತೀರ್ಥಕ್ಷೇತ್ರಗಳೂ ನಾಲ್ಕುವೇದಗಳೇ ಮುಂತಾದ ಸಕಲ ಶಾಸ್ತ್ರಗಳೂ ಬ್ರಹ್ಮ ವಿಷ್ಣು ಮಹೇಶ್ವರರೂ ಎಲ್ಲ ದೇವತೆಗಳೂ ಸೂಕ್ಷ್ಮರೂಪದಿಂದ ಗಂಗಾಜಲದಲ್ಲಿ ಸನ್ನಿಹಿತರಾಗಿದ್ದಾರೆ ಸ್ಕಂದಪುರಾಣದಲ್ಲಿ ಶಿವನೆ ಈ ಮಾತು ಹೇಳಿದ್ದಾನೆ

'ಗಂಗಾಯಾಂ ಸರ್ವ ಏವೈತೇ ಸೂಕ್ಷ್ಮರೂಪೇಣ ಸಂಸ್ಥಿತಾಃ'

ಗಂಗೆಯಲ್ಲಿ ಸೂಕ್ಷ್ಮರೂಪದಿಂದ ನೆಲೆಸಿದ ಪಾರ್ವತಿ ಶಿವನ ಮಡದಿ ಎಂದೆ ಗಂಗೆಯನ್ನು ಶಿವನ ಮಡದಿ ಎಂದಿರಬೇಕು. ಆದ್ದರಿಂದಲೇ ಗಂಗಾಸಹಸ್ರನಾಮದಲ್ಲಿ ಅವಳನ್ನು 'ಗೌರಿ' ಪಾರ್ವತಿ ಎಂದು ಮುಂತಾಗಿಯೂ ಕರೆಯಲಾಗಿದೆ. ಇಲ್ಲದಿದ್ದರೆ ಗಂಗೆಯನ್ನು 'ಸರಸ್ವತಿ' 'ಬ್ರಹ್ಮಕಾಂತೆ' ಎಂದೂ ಸಹಸ್ರನಾಮದಲ್ಲಿ ಕೊಂಡಾಡಿರುವುದು ಸಮರ್ಥನೀಯವಾಗಲಾರದು.

ಆದ್ದರಿಂದ ವಾಸುದೇವನ ಅಂಗುಷ್ಠವನ್ನು ತೊಳೆದ ಗಂಗಾದೇವಿ ಪಾವನಳೆನಿಸಿಯೆ ಹರನ ಶಿರದ ಮೇಲೆ ಮೆರೆಯುತ್ತಾಳೆ ಹೊರತು ಮೋಹದ ಮಡದಿ ಎಂದಲ್ಲ ಭಾಗವತದಲ್ಲಿಯೂ ಶಿವನು ಗಂಗೆಯನ್ನು ಧರಿಸಲು ಮೇಲೆ ಹೇಳಿದ ಕಾರಣವನ್ನೇ ಹೇಳಿದೆ–

ಯಚ್ಛೌಚ ನಿಃಸೃತ ಸರಿತ್‌ಪ್ರವರೋದಕೇನ
ತೀರ್ಥೇನ ಮೂರ್ಧ್ನ್ಯಧಿಧೃತೇನ ಶಿವಃ ಶಿವೋಽಭೂತ್ ॥

'ದಿಗಂಬರನಾಗಿ ಭಸ್ಮ ಸರ್ಪ ರುಂಡಮಾಲೆ ಕಪಾಲಗಳನ್ನು ಧರಿಸಿ ಭೂತ ಪ್ರೇತಗಣಗಳೊಂದಿಗೆ ಸ್ಮಶಾನದಲ್ಲಿ ತಿರುಗುವ, ಅಮಂಗಲ ವೇಷ ಆಚಾರಗಳಿಂದ 'ಅಶಿವ'ನಾದ ಶಿವ 'ಶಿವ'ನೆನಿಸಿದುದು ಪರಮ ಮಂಗಳಕರ ಹರಿಪಾದೋದಕವನ್ನು ಶಿರದಲ್ಲಿ ಧರಿಸಿದ್ದರಿಂದ'.

ಶಿವನು ಸದಾ ಹರಿಚರಣಕ್ಕೆ ಶಿರ ಬಾಗುವುದರಿಂದ ಶಿರದಲ್ಲಿರುವ ಗಂಗೆಗೆ ಹರಿಪಾದರಜಃಸಂಗ ಸದಾ ಆಗುತ್ತಿದ್ದು, ಅವಳ ಪಾವಿತ್ರ್ಯ ಇನ್ನೂ ಹೆಚ್ಚುತ್ತಲೇ ಇದೆ ಎಂದು ತ್ರಿವಿಕ್ರಮ ಪಂಡಿತಾಚಾರ್ಯರು ಹೇಳಿದ್ದಾರೆ–

ವಿಷ್ಣೋರಸ್ಮಾನ್ ಪದಾಬ್ಜೇ ಕೃತನಿವಸತಯಃ ಪಾಂಸವಃ ಪಾವಯಂತು....
ಪೌನಃ ಪುನ್ಯೇನ ಶುದ್ಧಿಂ ಹರ ಶಿರಸಿ ನತೇ ಜಾಹ್ನವೀಂ ಜೋಷಯಂತಃ ॥

ಆದ್ದರಿಂದ ಮಹಾಭಾರತ ಹೇಳುವಂತೆ–

ನ ಗಂಗಾಸದೃಶಂ ತೀರ್ಥಂ ನ ದೇವಃ ಕೇಶವಾತ್ ಪರಃ ।

'ಗಂಗೆಗೆ ಸದೃಶವಾದ ಪವಿತ್ರ ವಸ್ತು ಇನ್ನೊಂದಿಲ್ಲ, ಕೇಶವನಿಗಿಂತ ಬೇರೆ ದೈವವಿಲ್ಲ'

ವಾದಿರಾಜರು ಕಲ್ಪಲತೆಯಲ್ಲಿಯೂ ಇದನ್ನೇ ಹೀಗೆ ಹೇಳಿದ್ದಾರೆ–

ಸಮಸ್ತಲೋಕ ಕಲಿಮಲ ಶಮನ ಸಮರ್ಥ ಪಾದತೀರ್ಥಸ್ಯ
ಹರೇರ್ಯೋ ವ್ಯರ್ಥಮನರ್ಥಂ ಪ್ರತ್ಯಪದ್ಯತ
ಸೋಽಪಾರ್ಥೀಕೃತ ಸಕಲ ಪುರುಷಾರ್ಥಃ
ಸ್ವಯಮೇವ ಸಮಸ್ತ ನಾರಕಾದ್ಯನರ್ಥಸಾರ್ಥಪಾತ್ರಂ ॥

'ಯಾರ ಕಾಲು ತೊಳೆದ ನೀರು ಸಕಲ ಲೋಕದ ಕಲಿಮಲವನ್ನು ಕಳೆಯಬಲ್ಲದೋ ಅಂಥ ಹರಿಗೇ ಪಾಪಾದ್ಯನರ್ಥ ಉಂಟೆಂದುಕೊಳ್ಳುವವನು ತಾನೆ ಸಕಲ ಪುರುಷಾರ್ಥಗಳಿಂದ ವಂಚಿತನಾಗಿ ನರಕಾದ್ಯನರ್ಥಗಳಿಗೀಡಾಗುವನು'.

– ೫೫ –

**ಕಿಲ್ಬಿಷವಿದ್ದರೆ ಅಗ್ರಪೂಜೆಯನು**
**ಸರ್ಬರಾಯರ ಸಭೆಯೊಳಗೆ ।**
**ಉಬ್ಬಿದ ಮನದಿಂದ ಧರ್ಮಜ ಮಾಡುವನೆ**
**ಕೊಬ್ಬದಿರೆಲೊ ಪರವಾದಿ ॥**

ಕೃಷ್ಣನಲ್ಲಿ ಹಿಂಸೆ, ಅತ್ಯಾಚಾರಗಳ ಪಾಪವಿರುತ್ತಿದ್ದರೆ ಅಂಥವನಿಗೆ ಸರ್ವರಾಜರ ಸಭೆಯಲ್ಲಿ ಧರ್ಮರಾಜನು ಉಬ್ಬಿದ ಮನದಿಂದ ಅಗ್ರಪೂಜೆ ಮಾಡುತ್ತಿದ್ದನೆ ? ಎಲೊ, ಪ್ರತಿವಾದಿಯೇ, ಕೊಬ್ಬದಿರು.

ಧರ್ಮರಾಜನ ರಾಜಸೂಯ ಯಾಗದ ಸಂದರ್ಭ. 'ರಾಜ' ಅಂದರೆ ಸೋಮಲತೆ ಅದನ್ನು ಈ ಯಾಗದಲ್ಲಿ ಹಿಂಡುವುದರಿಂದ ಇದು 'ರಾಜಸೂಯ', ಇದು ಒಂದು ಯಾಗವಲ್ಲ. ಅನೇಕ ಇಷ್ಟಿಯಾಗಗಳು, ಪಶುಯಾಗಗಳು, ಸೋಮಯಾಗಗಳು ಸೇರಿದ ಒಂದು ಸಮೂಹ. ಒಂದು ವರ್ಷಕ್ಕಿಂತಲೂ ಹೆಚ್ಚು ಕಾಲ ತೆಗೆದುಕೊಳ್ಳುತ್ತದೆ ಕೊನೆಯಲ್ಲಿ ಅಭಿಷೇಚನೀಯವೆಂಬ ಸೋಮಯಾಗ ಬರುತ್ತದೆ. ಅನೇಕ ಸಮುದ್ರ ನದ ನದಿಗಳ ಪುಣ್ಯಜಲದಿಂದ ರಾಜನಿಗೆ ಅಭಿಷೇಕವಿದೆ ಈ ಯಾಗದಲ್ಲಿ. ಆದ್ದರಿಂದ ಅದು ಅಭಿಷೇಚನೀಯವೆನಿಸಿದೆ. ಇದರಲ್ಲಿ ಸೋಮರಸ ಹಿಂಡುವ ದಿನದಲ್ಲಿ ಗಣ್ಯವ್ಯಕ್ತಿಗಳಿಗೆ ಅರ್ಘ್ಯ ನೀಡುವ ಕಾರ್ಯಕ್ರಮವಿದೆ. ಆಚಾರ್ಯ, ಋತ್ವಿಕ್, ಗುರು, ಸ್ನಾತಕ, ಪ್ರಿಯ, ನೃಪ– ಈ ಆರು ವರ್ಗದ ಜನರಲ್ಲಿ ಗಣ್ಯರಾದವರಿಗೆ ಅರ್ಘ್ಯ ಸಲ್ಲುತ್ತದೆ. ಈ ಆರು ವರ್ಗದವರಲ್ಲಿಯೂ ಅತ್ಯಂತ ಶ್ರೇಷ್ಠನಾದ ಒಬ್ಬ ವ್ಯಕ್ತಿಗೆ ಮೊತ್ತ ಮೊದಲ ಅರ್ಘ್ಯದ ಮರ್ಯಾದೆ ಸಲ್ಲಬೇಕು ಇದೇ ಅಗ್ರ ಪೂಜೆ.

ಭೀಷ್ಮರ ಸಲಹೆಯಂತೆ ಧರ್ಮರಾಜ ಕೃಷ್ಣನನ್ನೇ ಅಗ್ರಪೂಜೆಗೆ ಕರೆದ. ಭೀಷ್ಮರು ಹೇಳಿದ್ದರು–

> ಋತ್ವಿಗ್ ಗುರುಸ್ತಥಾಚಾರ್ಯಃ ಸ್ನಾತಕೋ ನೃಪತಿಃ ಪ್ರಿಯಃ ।
> ಸರ್ವಮೇತದ್ ಹೃಷೀಕೇಶಃ....... ॥

ಕೃಷ್ಣ ಅರ್ಘ್ಯೋಪಚಾರಕ್ಕೆ ಯೋಗ್ಯರಾದ ಎಲ್ಲ ವರ್ಗದ ಜನರನ್ನೂ ಪ್ರತಿನಿಧೀಕರಿಸುತ್ತಿದ್ದ ಅವನು ಪ್ರತಿವಾದಿ ಅನ್ನುವಂತೆ ಸ್ತ್ರೀಹತ್ಯೆ, ಗೋಹತ್ಯೆ ಮುಂತಾದ ಪಾತಕ ಮಾಡಿದವನಾಗಿದ್ದರೆ ಧರ್ಮರಾಜ ಈ ಪವಿತ್ರ ಯಾಗದಲ್ಲಿ ಉಬ್ಬಿದ ಮನದಿಂದ ಅವನಿಗೆ ಅಗ್ರಪೂಜೆ ನೀಡುತ್ತಿದ್ದನೆ ?

ಪ್ರಪಂಚದ ಎಲ್ಲೆಡೆಗಳಿಂದ ರಾಜ ಮಹಾರಾಜರು ಬಂದು ಸೇರಿದ್ದ ಬೃಹತ್ ಸಭೆ ಅದು ಅದರಲ್ಲಿ ಒಬ್ಬ ಬ್ರಾಹ್ಮಣನಿಗೆ ಅಗ್ರಪೂಜೆ ಮಾಡಿದ್ದರೆ ಯಾವ ರಾಜರ ವಿರೋಧವು ಇಲ್ಲದೆ ಕಾರ್ಯಕ್ರಮ ಶಾಂತರೀತಿಯಿಂದ ನಡೆಯುತ್ತಿತ್ತು ಒಬ್ಬ ಕ್ಷತ್ರಿಯನಿಗೆ ಅಗ್ರಪೂಜೆ ಎಂದರೆ ಅವನಲ್ಲಿ ಒಂದಿಷ್ಟು ಕುಂದು ಕೊರತೆ ಇದ್ದರೂ ಕೋಲಾಹಲಕ್ಕೆ ಆಸ್ಪದವಿತ್ತು. ಕೃಷ್ಣ ಎಳವೆಯಿಂದಲೂ ವಿಚಿತ್ರ ಕಾರ್ಯಗಳನ್ನು ಮಾಡುತ್ತ ಬಂದಿದ್ದ. ವಿವಾದಾತ್ಮಕ ವ್ಯಕ್ತಿಯಾಗಿದ್ದ ಸಭೆಗೆ ಬಂದಿದ್ದ ರಾಜರಲ್ಲಿ

ಕಿಲ್ಬಿಷವಿದ್ದರೆ

ಹೆಚ್ಚಿನವರು ಕೃಷ್ಣನನ್ನು ತಮ್ಮಂತೇ ಒಬ್ಬ ಮನುಷ್ಯನೆಂದೂ ತಮ್ಮಂತೇ ಸ್ತ್ರೀಹತ್ಯೆ ಗೋಹತ್ಯೆ ಮುಂತಾದ ಪಾಪಮಾಡಿದವನೆಂದೂ ತಿಳಿದಿದ್ದರು. ಹಾಗೆ ಹೇಳಿಕೊಳ್ಳುತ್ತಲೂ ಇದ್ದರು. ಸಜ್ಜನರಿಗೆ ಇದರಿಂದ ಉಂಟಾಗಿದ್ದ ತಪ್ಪು ಗ್ರಹಿಕೆ ದೂರವಾಗಲೆಂದು ಧರ್ಮರಾಜ ಭೀಷ್ಮ ಇಬ್ಬರೂ ಬಯಸಿದ್ದರು. ಆ ಯಾಗಕ್ಕೆ ವೇದವ್ಯಾಸರೂ, ಪರಶುರಾಮರೂ ಬಂದಿದ್ದರು. ಅವರೂ ನಾರಾಯಣನ ಅವತಾರ ಭೂತರೆ. ಅವರನ್ನೂ ಜನ ಮನುಷ್ಯರೆಂದೇ ತಿಳಿದಿದ್ದರು, ಆದರೂ ಬ್ರಾಹ್ಮಣರಾಗಿದ್ದರಿಂದ ಅವರಿಗೆ ಅಗ್ರಪೂಜೆ ಮಾಡಿದರೂ ಬ್ರಾಹ್ಮಣರೆಂದೇ ಅಗ್ರಪೂಜೆ ಹೊರತು ಅವರಲ್ಲಿ ಇನ್ನೇನೂ ವಿಶೇಷವಿಲ್ಲ ಎಂದು ಜನ ತಿಳಿಯುತ್ತಿದ್ದರು. ಆಗಲೇ ವಿವಾದಗ್ರಸ್ತನಾಗಿದ್ದು ಅನೇಕ ರಾಜರ ವೈರಕ್ಕೂ ಪಾತ್ರನಾಗಿದ್ದ ಕೃಷ್ಣನಿಗೆ ಅಗ್ರಪೂಜೆ ಮಾಡಿದರೆ ಕೋಲಾಹಲ ಉಂಟಾಗುತ್ತದೆ ಕೊನೆಯಲ್ಲಿ ಕೃಷ್ಣನ ವ್ಯಕ್ತಿತ್ವದ ಹಿರಿಮೆ ಬೆಳಕಿಗೆ ಬರುತ್ತದೆ ಎಂದು ಧರ್ಮರಾಜ, ಭೀಷ್ಮರು ನಂಬಿದ್ದರು.

ಅವರ ನಂಬಿಕೆ ಸುಳ್ಳಾಗಲಿಲ್ಲ ಶಿಶುಪಾಲ ವಿವಾದವೆಬ್ಬಿಸಿ ಶಿಶುವಿನಂತೆ ಅಸಂಬದ್ಧ ಪ್ರಲಾಪಗೈದ. ಭೀಷ್ಮರು ಹೇಳಿದರು–

"ಅಯಂ ತು ಪುರುಷೋ ಬಾಲಃ ಶಿಶುಪಾಲೋ ನ ಬುಧ್ಯತೇ ।

'ಈ ಶ್ರೀಕೃಷ್ಣ ಪರಮ ಪುರುಷ. ಶಿಶುಪಾಲ ಬಾಲಕ. ಅವನಿಗೇನೂ ತಿಳಿಯದು' ಕೃಷ್ಣ ಸಾಕ್ಷಾತ್ ನಾರಾಯಣಾವತಾರ, ಮನುಷ್ಯನಲ್ಲ. ಮನುಷ್ಯನಂತೆ ಕರ್ಮವಶದಿಂದ ತಾಯಿ ಗರ್ಭವನ್ನು ಪ್ರವೇಶಿಸಿದವನಲ್ಲ. ಮನುಷ್ಯರಂತೆ ನವಮಾಸ ಪರ್ಯಂತ ಗರ್ಭವಾಸ ದುಃಖ ಅನುಭವಿಸಿದವನಲ್ಲ –

'ನೈಷ ಗರ್ಭತ್ವಮಾಪೇದೇ ನ ಯೋನ್ಯಾಮವಸತ್ ಪ್ರಭುಃ ।'

ಅಪ್ರಾಕೃತ ಶರೀರದಿಂದಲೇ ಅವತರಿಸಿದನಾತ. ಎಳವೆಯಲ್ಲಿಯೇ ಶಕಟ, ಯಮಳಾರ್ಜುನ, ಬಕ, ಕಾಲಿಯ ಮುಂತಾದವರನ್ನು ಶಿಕ್ಷಿಸಿದ. ಸಜ್ಜನರನ್ನು ರಕ್ಷಿಸಿದ. ಗೋವುಗಳನ್ನು ಕಾಯ್ದು ಗೋವರ್ಧನ ಪರ್ವತವನ್ನೇ ಎತ್ತಿದ, ಗಿರಿಯಜ್ಞದ ಎಲ್ಲ ಅನ್ನವನ್ನೂ ಉಂಡ, ಒಂದೇ, ಎರಡೆ ? ಲೆಕ್ಕವಿಲ್ಲದಷ್ಟು ಅದ್ಭುತ ಕಾರ್ಯಗಳನ್ನೇ ಮಾಡಿದ ಅಚಿಂತ್ಯ ಮಹಿಮ ಶ್ರೀಕೃಷ್ಣ–

'ನ ಪ್ರಮಾತುಂ ಮಹಾಬಾಹುಃ ಶಕ್ಯೋ ಭಾರತ ಕೇಶವಃ ॥'

ಕೃಷ್ಣನಂಥ ಯೋಗ್ಯವ್ಯಕ್ತಿ ಅಗ್ರಪೂಜೆಗೆ ಇನ್ನೊಬ್ಬನಿಲ್ಲ. ಈ ಸಭೆಯಲ್ಲಿ ಸೇರಿದ ಅಪಾರ ಜನಸಾಗರದಲ್ಲಿ ನಾವು ಒಂದು ಸಣ್ಣ ಮಗುವನ್ನೂ ಕೂಡ ಪರೀಕ್ಷಿಸದೆ ಬಿಟ್ಟಿಲ್ಲ–

ನ ಚ ಕಶ್ಚಿದಿಹಾಸ್ಮಾಭಿಃ ಸುಬಾಲೋऽಪ್ಯಪರೀಕ್ಷಿತಃ ।

"ಎಲ್ಲರನ್ನೂ ಪರೀಕ್ಷಿಸಿ ನೋಡಿ ಕೊನೆಯಲ್ಲಿ ಕೃಷ್ಣನನ್ನು ಆರಿಸಿಕೊಂಡಿದ್ದೇವೆ."

ಇಲ್ಲಿ, ವೇದವ್ಯಾಸರೂ ಪರಶುರಾಮರೂ ಕೃಷ್ಣನಿಗಿಂತ ಬೇರೆ ಅಲ್ಲವೆಂದೇ ಭೀಷ್ಮರ ಆಂತರ್ಯ.

ಶಿಶುಪಾಲ ಇದನ್ನು ಕೇಳಿ ಸಹಿಸದಾದ 'ಕೊಬ್ಬಿದ ಪರವಾದಿ'ಯಂತೆ ವಾದಿಸತೊಡಗಿದ– ಒಣಗಿದ ಮರದ ಒಂದು ಬಂಡಿಯನ್ನೊದ್ದರೆ, ಎಕ್ಕೆ ಗಿಡಗಳಂಥ ಎರಡು ಸಣ್ಣ ಮರಗಳನ್ನು ಬೀಳಿಸಿದರೆ, ಒಂದು ಹಕ್ಕಿಯನ್ನು ಕೊಂದರೆ, ಒಂದು ಹಾವನ್ನು ತುಳಿದರೆ ಏನು ಮಹಾಕಾರ್ಯ ಮಾಡಿದಂತಾಯಿತು ? ಸಣ್ಣ ಹುತ್ತಿನಂಥ ಒಂದು ಮಣ್ಣಿನರಾಶಿಯನ್ನು ಎತ್ತಿದ ಮಾತ್ರಕ್ಕೆ ಗೋವರ್ಧನೋದ್ಧಾರ ಮಾಡಿದನೆಂದು ಹೊಗಳುವಂಥಹುದೇನಿದೆ ? ಗುಡ್ಡದ ಮೇಲೆ ಕುಳಿತು ತುಂಬ ಅನ್ನ ಉಂಡನೆಂದೂ ಹೊಗಳಬಹುದೆ ? ಹೊಗಳಿದರೆ ಹೀಗೂ ಹೊಗಳುವುದುಂಟೆ ಎಂದು ಜನರು ಅಚ್ಚರಿಗೊಂಡಾರು, ಅನ್ನ ಉಂಡನೆಂದಲ್ಲ, ಪೂತನಾ ಹತ್ಯೆಯನ್ನು ಸ್ತ್ರೀ ಹತ್ಯೆ ಎನ್ನಲು ಸಂಕೋಚ ! ಧೇನುಕ ವಧವನ್ನು ಗೋಹತ್ಯೆ ಎನ್ನಲು ಭಯ ! ಏನೂ ತಿಳಿಯದ ಬಾಲಕರೂ ಕೂಡ ಕೃಷ್ಣನನ್ನು ಚೆನ್ನಾಗಿ ನಿಂದಿಸಿಯಾರು. ಜ್ಞಾನದಲ್ಲಿ ಹಿರಿಯನೆನಿಸಿದ ನೀನು ಆ ಗೋವಳನನ್ನು ಹೊಗಳುವಿ ! ಕೇಶವನನ್ನು ಹೊಗಳುವ ನಿನ್ನ ನಾಲಿಗೆ ಏಕೆ ನೂರಾಗಿ ಸೀಳಿ ಹೋಗುತ್ತಿಲ್ಲ ? ' ಎನ್ನುತ್ತಾನೆ ಶಿಶುಪಾಲ.

ಅಹಂಕಾರ, ಅಜ್ಞಾನ, ವಿಪರೀತ ಜ್ಞಾನಗಳ ಪರಮಾವಧಿ ಇದು. ವಿಷ್ಣುವೈಷ್ಣವ ನಿಂದೆಗಳ ಪರಾಕಾಷ್ಠೆ ! ಹೀಗೆ ನಿಂದಿಸಲು ಶಿಶುಪಾಲನಿಗೆ ನೈತಿಕ ಬಲವಾದರೂ ಏನಿದೆ ? ಕೃಷ್ಣನೇ ಹೇಳುವಂತೆ ಅವನೊಮ್ಮೆ ಅಕ್ರೂರನ ಹೆಂಡತಿ ಸೌವೀರ ದೇಶಕ್ಕೆ ಹೋಗಿದ್ದಾಗ ಬಲಾತ್ಕಾರದಿಂದ ಅವಳನ್ನು ಅಪಹರಿಸಿದ್ದ. ಕೃಷ್ಣ ನರಕಾಸುರ ವಧಕ್ಕೆ ದ್ವಾರಕೆಯಿಂದ ಹೊರಗೆ ಹೋಗಿದ್ದಾಗ ಇತ್ತ ಈತ ದ್ವಾರಕೆ ಸುಟ್ಟಿದ್ದ. ವಸುದೇವ ಅವನಿಗೆ ಸೋದರ ಮಾವ. ಆದರೂ ವಸುದೇವನ ಅಶ್ವಮೇಧದ ಕುದುರೆಯನ್ನು ಕದ್ದು ಯಾಗಕ್ಕೆ ವಿಘ್ನಮಾಡಲು ಯತ್ನಿಸಿದ್ದ.

ಈ ಶಿಶುಪಾಲನಂಥ ಕೊಬ್ಬಿದ ದುಷ್ಟ ಪ್ರತಿವಾದಿ ಇನ್ನೊಬ್ಬನಿರಲಿಕ್ಕಿಲ್ಲ. ಆದರೇನು ?

ನೀವೆಲ್ಲ ಸೇರಿ ನನ್ನನ್ನು ದನಕ್ಕೆ ಹೊಡೆದಂತೆ ಹೊಡೆದರೂ ಸರಿಯೆ, ಜೀವಂತವಾಗಿ ದಹನ ಮಾಡಿದರೂ ಸರಿಯೆ, ಏಕೆ, ನೀವೆಲ್ಲ ನನ್ನ ತಲೆಯನ್ನು

ಕಾಲಿಂದ ಮೆಟ್ಟಿದರೂ ಸರಿಯೆ, ನಾವು ಮಾತ್ರ ಗೋವಿಂದನನ್ನು ಪೂಜಿಸದೆ ಬಿಡುವುದಿಲ್ಲ' ಎಂದು ಭೀಷ್ಮನು ಹೇಳುವಂತೆ, ಕೃಷ್ಣನನ್ನೇ ಅಚಲವಾಗಿ ನಂಬಿರುವ 'ಸಜ್ಜನ ವೃಂದದ ಮನಃಕ್ಷೋಭೆಯ ಪರಿಹಾರಕ್ಕಾಗಿ ಯಜ್ಞವಿಘ್ನ ನಿವಾರಣೆಗಾಗಿ ಕೃಷ್ಣ ತನ್ನ ಶಕ್ತಿಯನ್ನು ತೋರಿದ ನೆನೆದ ಮಾತ್ರಕ್ಕೆ ಅವನ ಕೈಗೆ ಚಕ್ರ ಬಂದಿತು. ಶಿಶುಪಾಲನ ಶಿರಚ್ಛೇದವಾಯಿತು.

ದೇವೈರನ್ಯೈಶ್ಚ ಯಕ್ಷೈಶ್ಚ ಉರಗೈರ್ದಿವ್ಯ ಮಾನುಷೈಃ ।
ಸ ರಾಜಸೂಯಃ ಶುಶುಭೇ ಧರ್ಮರಾಜಸ್ಯ ಧೀಮತಃ ।
ಲೋಕೇಽಸ್ಮಿನ್ ಸರ್ವವಿಪ್ರಾಶ್ಚ ವೈಶ್ಯಾಃ ಶೂದ್ರಾಶ್ಚ ಸರ್ವಶಃ ।
ಸರ್ವೇ ಮ್ಲೇಚ್ಛಾಃ ಸರ್ವವರ್ಣಾ ಸಾದಿಮಧ್ಯಾಂತಜಾಸ್ತತಃ..... ॥

ದೇವ ಯಕ್ಷಾದಿಗಳೂ, ಬ್ರಾಹ್ಮಣಾದಿ ಸರ್ವವರ್ಣದವರೂ ಮ್ಲೇಚ್ಛಾದಿಗಳೂ ಸೇರಿದ್ದ ವಿರಾಟ್ ಸಭೆಯಲ್ಲಿ ಪರಮಪುರುಷನ ನಿಂದೆ ! ಇದು ಸದ್ಗುಣ ಸಚ್ಚಾರಿತ್ರ್ಯಗಳಿಗೇ ಆದ ನಿಂದೆ ಆದ್ದರಿಂದ ಎಲ್ಲರೂ ನೋಡುತ್ತಿದಂತೆ, ನಿಂದಕನ ಶಿರ ಉರುಳಿತು. ಕೊಬ್ಬಿದ ಪರವಾದಿಗೂ ಇದೇ ಗತಿಯಾಗುವುದೆಂದು ಮಹಾಲಕ್ಷ್ಮಿ ಹೇಳುತ್ತಿದ್ದಾಳೆ–

ಕೃಷ್ಣನಿಗೆ ಅಗ್ರಪೂಜೆ ದೊರಕಲು ಅವನು ಪಾಂಡವರಿಗೆ ಬಹಳ ಬೇಕಾದವನು. ಬಂಧು, ಉಪಕಾರಿ, ವಿಲಕ್ಷಣ ಶಕ್ತಿ ಸಾಮರ್ಥ್ಯ ಉಳ್ಳವನಾಗಿದ್ದುದೆ ಕಾರಣ ಹೊರತು, ಅವನಲ್ಲಿ ಏನೂ ದೋಷವಿರಲಿಲ್ಲವೆಂದಲ್ಲ ಎನ್ನುವ ಸಂದೇಹಕ್ಕೆ ಭೀಷ್ಮರೆ ಉತ್ತರಿಸಿದ್ದಾರೆ.

ನ ಕೇವಲಂ ವಯಂ ಕಾಮಾಚ್ಚೇದಿರಾಜ ಜನಾರ್ದನಂ ।
ನ ಸಂಬಂಧಂ ಪುರಸ್ಕೃತ್ಯ ಕೃತಾರ್ಥಂ ವಾ ಕಥಂಚನ ।
ಅರ್ಚಾಮಹೇಽರ್ಚಿತಂ ಸದ್ಭಿರ್ಭುವಿ ಭೂತಸುಖಾವಹಂ ।
ಯಶಃ ಶೌರ್ಯಂ ಜಯಂ ಚಾಸ್ಯ ವಿಜ್ಞಾಯಾರ್ಚಾಂ ಪ್ರಯುಂಜ್ಮಹೇ ॥

'ನಾವು ಯಾವ ಪ್ರತಿಫಲಾಪೇಕ್ಷೆಯಿಂದಾಗಲಿ, ಸಂಬಂಧಿಕನೆಂದಾಗಲಿ, ಉಪಕಾರ ಮಾಡಿದ್ದಾನೆ ಎಂದಾಗಲಿ, ಎಷ್ಟು ಮಾತ್ರಕ್ಕೂ ಕೃಷ್ಣನಿಗೆ ಮರ್ಯಾದೆ ಮಾಡುತ್ತಿಲ್ಲ. ಭೂಮಿಯಲ್ಲಿ ಎಲ್ಲರಿಗೂ ಸುಖ ತರುವವನು, ಸಜ್ಜನರ ಪ್ರೀತ್ಯಾದರಗಳಿಗೆ ಪಾತ್ರನಾದವನು ಮತ್ತು ಕೀರ್ತಿ ಶೌರ್ಯ ಪರಾಕ್ರಮ ಎಲ್ಲವೂ ಇವನಲ್ಲಿ ಉಂಟೆಂದು ತಿಳಿದೆ ಆ ಗುಣಗಳಿಗಾಗಿ ಗೌರವಿಸುತ್ತಿದ್ದೇವೆ.'

ಧರ್ಮರಾಜನು ಮಹಾ ಪಾಪಭೀರು. ಮಹಾಭಾರತ ಯುದ್ಧದಲ್ಲಿ 'ಅಶ್ವತ್ಥಾಮಾ ಹತಃ' ಎಂದು ದ್ರೋಣರ ಮುಂದೆ ಹೇಳಲು ಧರ್ಮರಾಜನಿಗೆ ಸಂಕೋಚ ಭೀಮನು ಆಗಲೆ ಅಶ್ವತ್ಥಾಮ ಎಂಬ ಒಂದು ಆನೆಯನ್ನು ಕೊಂದು 'ಅಶ್ವತ್ಥಾಮಾ ಹತಃ' ಎಂದು ದ್ರೋಣರ ಮುಂದೆ ಹೇಳಿಯಾಗಿತ್ತು. ದ್ರೋಣರಿಗೆ ಸಂದೇಹ ಉಂಟಾಯಿತು ಧರ್ಮರಾಜನೂ ಆ ಮಾತೂ ಹೇಳಿದರೆ ಅವರಿಗೆ ನಂಬಿಕೆ. 'ನಿಜವೇನು ಹೇಳು' ಎಂದು ಅವನನ್ನೇ ಕೇಳಿದರು. ಇತ್ತ ಕೃಷ್ಣ ಒತ್ತಾಯಿಸುತ್ತಿದ್ದಾನೆ. 'ಯುದ್ಧದಲ್ಲಿ ಸರ್ವನಾಶ ತಪ್ಪಿಸಲು ಸುಳ್ಳು ಹೇಳಿದರೆ ಅದು ಸುಳ್ಳಾಗುವುದಿಲ್ಲ. 'ಅಶ್ವತ್ಥಾಮಾ ಹತಃ' ಎಂದು ಹೇಳು'. ಧರ್ಮರಾಜ ಇದು ವಂಚನೆ, ಮಹಾಪಾಪ ಎಂದು ಭಯಪಡುತ್ತಾ 'ಅಶ್ವತ್ಥಾಮಾ ಹತಃ' ಎಂದು ಗಟ್ಟಿಯಾಗಿ ಹೇಳಿ, ಜೊತೆಗೆ 'ಕುಂಜರಃ' ಎಂದೂ ಉಸುರಿದ. ದ್ರೋಣರಿಗೆ 'ಕುಂಜರ' ಶಬ್ದ ಕೇಳಿಸಲಿಲ್ಲ, ಅವರು ಶಸ್ತ್ರ ತ್ಯಾಗಮಾಡಿದರು ಆದರೂ ಧರ್ಮರಾಜನಿಗೆ ಪಾಪ ಭಯವೆಷ್ಟು ಎನ್ನುವುದು ಇಲ್ಲಿ ವ್ಯಕ್ತವಾಗುತ್ತದೆ. ಇಂಥ ಧರ್ಮರಾಜ 'ಉಬ್ಬಿದ ಮನದಿಂದ' ಏನೂ ಸಂಕೋಚಪಡದೆ ಕೃಷ್ಣನಿಗೆ ಅಗ್ರಪೂಜೆ ಕೊಟ್ಟನೆಂದರೆ ಕೃಷ್ಣನಲ್ಲಿ ಪಾಪಲೇಶವೂ ಇಲ್ಲವೆಂದು ಧರ್ಮರಾಜ ನಂಬಿದ್ದುದು ಸ್ಪಷ್ಟ

ಹೀಗೆ ಕೃಷ್ಣನ ಸಮಕಾಲೀನರಾದವರು ಸಜ್ಜನರು ಎಲ್ಲರೂ ಕೃಷ್ಣನನ್ನು ಪಾಪರಹಿತನೆಂದೇ ಮನ್ನಿಸಿರುವಾಗ ಇತ್ತೀಚೆಗೆ ಹುಟ್ಟಿಕೊಂಡ ಕೊಬ್ಬಿದ ಪ್ರತಿವಾದಿಗಳು ಅವನಲ್ಲಿ ಪಾಪವಿದೆ ಎಂದರೆ, ಅದು ನಿಜವಾದ 'ವಾದ'ವಾಗಲಾರದು, ಪ್ರಲಾಪವಾದೀತು ಎನ್ನುತ್ತಿದ್ದಾಳೆ, ಮಹಾಲಕ್ಷ್ಮಿ

— ೫೬ —

**ಸಾವಿಲ್ಲದ ಹರಿಗೆ ನರಕಯಾತನೆ ಸಲ್ಲ**
**ಜೀವಂತರಿಗೆ ನರಕದಲಿ ।**
**ನೋವನೀವನೆ ನಿಮ್ಮ ಯಮದೇವನು ?**
**ಗೋವ, ನೀ ಹರಿಯ ಗುಣವರಿಯ !**

'ಸಾವೇ ಇಲ್ಲದ ಹರಿಗೆ ನರಕಯಾತನೆಯೂ ಸಲ್ಲದು. ನಿಮ್ಮ ಯಮದೇವನು ಜೀವಂತರಿಗೂ ನರಕದಲ್ಲಿ ನೋವನ್ನು ಕೊಡುವನೇನು ? ಗೋವ, ದನಮೇಸುವವನೆ, ನೀನು ಹರಿಯ ಗುಣವನ್ನು ಅರಿಯೆಯ ಎನ್ನುತ್ತಿದ್ದಾಳೆ ಮಹಾಲಕ್ಷ್ಮಿ

ಹಿಂದಿನ ನುಡಿಯಲ್ಲಿ, ಕೃಷ್ಣನಲ್ಲಿ ಪಾಪ ಉಂಟೆ ? ಇರುತ್ತಿದ್ದರೆ ರಾಜಸೂಯದಲ್ಲಿ ಧರ್ಮರಾಜ ಕೃಷ್ಣನಿಗೆ ಅಗ್ರಪೂಜೆಯ ಮರ್ಯಾದೆ ಸಲ್ಲಿಸುತ್ತಿದ್ದನೆ ? ಎಂದು ಕೃಷ್ಣನನ್ನು ಪಾಪವಿದೂರನೆಂದು ತೋರಿಸಲಾಗಿದೆ. ಈಗ ಒಂದು ವೇಳೆ ಕೃಷ್ಣ ಸ್ತ್ರೀ ಹತ್ಯೆ, ಗೋಹತ್ಯೆಗಳಂಥ ಪಾಪ ಮಾಡಿ ನರಕಭಾಜನನೆಂದೆ ಒಪ್ಪಿದರೂ ಅವನಿಗೆ ನರಕ ಶಿಕ್ಷೆಯಾಗುವುದಾದರೂ ಹೇಗೆ ? ಎಂದು ಆಕ್ಷೇಪಿಸಲಾಗಿದೆ.

ಮಾನವನಾಗಿ ಜನಿಸಿದ ಕೃಷ್ಣ ಮಾನವಶರೀರವನ್ನು ತ್ಯಜಿಸಿದಾಗಲೆ ನರಕದಲ್ಲಿ ಪ್ರವೇಶ ಸಾಧ್ಯ. ಮಾನವಶರೀರದಲ್ಲಿ ಜೀವಂತರಿರುವಾಗಲೆ ಜೀವರನ್ನು ಯಮನೆಂದೂ ತನ್ನ ಲೋಕಕ್ಕೆ ಸೆಳೆಯುವುದಿಲ್ಲ. ಗರುಡಪುರಾಣ ಪ್ರೇತ ಕಾಂಡದಲ್ಲಿ ಈ ಬಗ್ಗೆ ಅನೇಕ ವಿವರಗಳು ದೊರೆಯುತ್ತವೆ. ಪಾಪಿ ಸತ್ತಾಗ ಹತ್ತು ದಿನಗಳ ಪಿಂಡ ಪ್ರದಾನದಿಂದ ಒಂದು ಮೊಳದಷ್ಟು ಗಾತ್ರದ ಬೇರೆ ಶರೀರ ಉಂಟಾಗುತ್ತದೆ. ಆ ಶರೀರದಲ್ಲಿದ್ದು ಪಾಪಿ ಒಂದು ವರ್ಷಕಾಲ ಯಮಲೋಕಕ್ಕೆ ಪ್ರಯಾಣ ಮಾಡುತ್ತಾನೆ, ಬಳಿಕ ಆ ಶರೀರ ತ್ಯಜಿಸಿ ಅಂಗುಷ್ಠ ಪ್ರಮಾಣದ ಇನ್ನೊಂದು ಯಾತನಾ ಶರೀರವನ್ನು ಹೊಂದುತ್ತಾನೆ. ನರಕ ಶಿಕ್ಷೆಯನ್ನು ಈ ಶರೀರದಿಂದ ಅನುಭವಿಸುತ್ತಾನೆ ದುರ್ಬಲವಾದ ಮಾನವಶರೀರ ನರಕದ ಘೋರಶಿಕ್ಷೆಯನ್ನು ಸಹಿಸಲಾರದು. ಯಾತನಾ ಶರೀರವಾದರೋ ಪಾಪ ತೀರುವವರೆಗೂ, ಯುಗ ಯುಗಗಳ ಕಾಲವಾದರೂ ಸರಿಯೆ, ನಾಶವಾಗದಿರುತ್ತದೆ. ಕಡಿದರೂ, ಗರಗಸದಿಂದ ಸೀಳಿದರೂ ತಿರುಗಿ ಒಂದಾಗುತ್ತದೆ, ಆ ಶರೀರದಿಂದ ಜೀವ ಹೋಗುವುದಿಲ್ಲ.

ನ ಚೈಷಾಂ ಜೀವಿತ ಭ್ರಂಶೋ ಜಾಯತೇ ದ್ವಿಜಸತ್ತಮ ।
ಛಿನ್ನಾನಿ ತೇಷಾಂ ಶತಶಃ ಖಂಡಾನ್ಯೈಕ್ಯಂ ವ್ರಜಂತಿ ಚ ॥

ದೇವ, ಮಾನುಷ, ತಿರ್ಯಕ್, ನಾರಕ ಎಂದು ನಾಲ್ಕು ವಿಧದ ಶರೀರ ಒಪ್ಪುವ ಜೈನ ಸಿದ್ಧಾಂತದಲ್ಲಿಯೂ ಕೂಡ ನರಕಶಿಕ್ಷೆಯನ್ನು ನಾರಕ ಶರೀರದಿಂದಲೇ ಅನುಭವಿಸಬೇಕು. ಮಾನವ ಶರೀರದಿಂದಲ್ಲ. ಆದ್ದರಿಂದ ಪಾಪಿ ಮಾನವ ಆ ಮಾನವ ಶರೀರದಲ್ಲಿ ಜೀವಂತನಿರುವಾಗ ಅವನನ್ನು ಹಾಗೆ ಸೆಳೆದೊಯ್ದು ನರಕದಲ್ಲಿ ಯಮನು ಶಿಕ್ಷಿಸುವುದನ್ನು ಯಾರೂ ಒಪ್ಪಿಲ್ಲ. ಕೃಷ್ಣನಿಗೆ ಸಾವು ಬಂದಿರುತ್ತಿದ್ದರೆ ಅವನನ್ನು ಯಮನು ಸೆಳೆದೊಯ್ದು ನರಕದಲ್ಲಿ ಶಿಕ್ಷಿಸಬಹುದಿತ್ತು. ಆದರೆ ಕೃಷ್ಣನಿಗೆ ಸಾವೇ ಇಲ್ಲ. ಅವನು ಎಂದೂ ಶರೀರತ್ಯಾಗ ಮಾಡಿದುದಿಲ್ಲ.

ದಶಾವತಾರಗಳಲ್ಲಿ ವಾಮನನವರೆಗಿನ ಅವತಾರಗಳು ದೇಹತ್ಯಾಗ ಮಾಡಿದುದರ ಉಲ್ಲೇಖ ಎಲ್ಲಿಯೂ ಇಲ್ಲ. ಪರಶುರಾಮ ವೇದವ್ಯಾಸರು

ಚಿರಂಜೀವಿಗಳೆಂದೇ ಪ್ರಸಿದ್ಧರಾದವರು ಶ್ರೀರಾಮನೂ ಸಶರೀರನಾಗಿ ಪರಂಧಾಮಕ್ಕೆ ಹೋದನೆಂದು ವಾಲ್ಮೀಕಿ ರಾಮಾಯಾಣದಲ್ಲಿ ಹೇಳಿದೆ–

'ವಿವೇಶ ವೈಷ್ಣವಂ ತೇಜಃ ಸಶರೀರಃ'

ಕೃಷ್ಣಾವತಾರದಲ್ಲಿ ಅವತಾರ ಸಮಾಪ್ತಿ ಮಾಡ ಬಯಸಿದ ಕೃಷ್ಣ ಏಕಾಂತದಲ್ಲಿ ಒಂದು ಅರಳಿಮರದ ಬುಡದಲ್ಲಿ ಕುಳಿತು ತನ್ನಂತೆಯೆ ಕಾಣುವ ಒಂದು ಮಾನವ ಶರೀರವನ್ನು ಇಚ್ಛಾಮಾತ್ರದಿಂದ ಸೃಷ್ಟಿಸಿ ಶವದಂತೆ ಮಲಗಿಸಿ, ದೇವತೆಗಳು ಪುಷ್ಪವೃಷ್ಟಿ ಕರೆಯುತ್ತಿದ್ದಂತೆ ಸಶರೀರನಾಗಿ ಪರಂಧಾಮಕ್ಕೆ ತೆರಳಿದನು ಬಲರಾಮಾದಿಗಳು ಯೋಗಾಗ್ನಿಯಿಂದ ಶರೀರವನ್ನು ಸುಟ್ಟುಕೊಂಡು ತಮ್ಮ ಲೋಕಕ್ಕೆ ತೆರಳಿದರೂ ಕೃಷ್ಣ ಹಾಗೆ ಮಾಡಲಿಲ್ಲ ಎನ್ನುತ್ತದೆ ಭಾಗವತ–

ಲೋಕಾಭಿರಾಮಾಂ ಸ್ವತನುಂ ಧಾರಣಾಧ್ಯಾನ ಮಂಗಲಂ ।
ಯೋಗಧಾರಣಯಾಽಽಗ್ನೇಯ್ಯಾಽದಗ್ಧ್ವಾ ಧಾಮಾವಿಶತ್ ಸ್ವಕಂ ॥

ಬಲರಾಮಾದಿಗಳ ಶರೀರ ಪಾರ್ಥಿವ. ಕೃಷ್ಣನದು ಸಚ್ಚಿದಾನಂದಮಯ, ಲೋಕಾಭಿರಾಮ, ಧಾರಣಾಧ್ಯಾನಗಳಿಗೆ ಗೋಚರವಾಗುವ ಮಂಗಳ ಶರೀರ ಅದನ್ನು ಕೃಷ್ಣ ಯೋಗಾಗ್ನಿಯಿಂದ ದಹಿಸದೆ ಸಶರೀರನಾಗಿಯೇ ಪರಂಧಾಮವನ್ನು ಸೇರಿದ ದಗ್ಧ್ವಾ ಎಂದು ಪದ ವಿಭಾಗ ಮಾಡಿ ದಹಿಸಿಕೊಂಡನೆಂದರೆ ಅರ್ಜುನ ಮುಂದೆ ಕೃಷ್ಣನ ಶರೀರ ದಾಹಮಾಡಿದ ಮಾತು ಅಸಂಗತವಾದೀತು.

"ನೈಚ್ಛತ್ ಪ್ರಣೇತುಂ ವಪುರತ್ರ ಶೇಷಿತಂ"

ಎಂದು ಭಾಗವತದಲ್ಲಿ ಹೇಳಿದ್ದರೂ, 'ಬಲರಾಮಾದಿಗಳ ಶರೀರವನ್ನು ಲೋಕಾಂತರಕ್ಕೆ ಒಯ್ಯಲು ಕೃಷ್ಣ ಬಯಸಲಿಲ್ಲ. ಬಲರಾಮಾದಿಗಳು ದೇವತೆಗಳು. ಅವರಿಗೆ ಈ ಮಾನವ ಶರೀರದಿಂದೇನು ಎಂದುಕೊಂಡು ಅದನ್ನು ಒಯ್ಯಲು ಬಯಸಲಿಲ್ಲ, ಬಯಸಿದ್ದರೆ ಸಶರೀರರಾಗಿಯೇ ಬಲರಾಮಾದಿಗಳನ್ನು ಅವರ ಲೋಕಗಳಿಗೆ ಕಳಿಸುತ್ತಿದ್ದ' ಎಂದರ್ಥ. ಶ್ರೀಕೃಷ್ಣ ಶರೀರತ್ಯಾಗ ಮಾಡಲಿಲ್ಲ ಎನ್ನುವ ಸ್ಪಷ್ಟವಾಕ್ಯ ಭಾಗವತದಲ್ಲಿ ಉದ್ಧವನು ವಿದುರನಿಗೆ ಹೇಳುವ ಮಾತು -

'ಪ್ರದರ್ಶ್ಯಾತಪ್ತತಪಸಾಂ ಅವಿತೃಪ್ತದೃಶಾಂ ನೃಣಾಂ ।
ಆದಾಯಾಂತರಧಾದ್ ಯಸ್ತು ಸ್ವಬಿಂಬಂ ಲೋಕ ಲೋಚನಂ ॥

'ಶ್ರೀಕೃಷ್ಣನ ಸುಂದರಶರೀರ ಲೋಕದ ಕಣ್ಮಣಿಯಂತಿತ್ತು, ಎಷ್ಟು ನೋಡಿದರೂ ಕಣ್ಣುಗಳಿಗೆ ತೃಪ್ತಿಯಿಲ್ಲ. ಆದರೂ ಸದಾ ನೋಡುವಷ್ಟು ಲೋಕ

ಪುಣ್ಯಮಾಡಿರಲಿಲ್ಲ. ಆದ್ದರಿಂದ ಅವತಾರ ಸಮಾಪ್ತಿವರೆಗೂ ತೋರಿಸಿ ಕೊನೆಯಲ್ಲಿ ಕೃಷ್ಣ ಅದನ್ನು ತನ್ನೊಡನೇ ಒಯ್ದು ಅದೃಶ್ಯನಾದ.'

ಆದ್ದರಿಂದ ಕೃಷ್ಣನಿಗೆ ಸಾವಿಲ್ಲ, ಸಾವಿಲ್ಲದವನಿಗೆ ನರಕವಿಲ್ಲ.

ನಮ್ಮ ಯಮದೇವ ಮನುಷ್ಯಶರೀರದಲ್ಲಿ ಜೀವಂತರಾಗಿರುವವರಿಗೆ ನರಕದಲ್ಲಿ ಶಿಕ್ಷೆ ಕೊಡುವುದಿಲ್ಲ. ಇನ್ನು ನಿಮ್ಮ ಯಮದೇವ ಜೀವಂತರಿಗೇ ನರಕ ಯಾತನೆ ನೀಡುವನೆ ? ಹೇಳು. ಎಲೋ ಗೋವ ! ನೀನು ಗೋವ, ಗೋಪ. ದನ ಮೇಸಲು ಮಾತ್ರ ಯೋಗ್ಯ. ತತ್ವ ವಿಚಾರಕ್ಕೆ ಅಲ್ಲ. ನೀನು ಹರಿಯ ಗುಣವನ್ನರಿಯೆಯ ? 'ಹರಿ' ಎಂದರೆ ಸಾವನ್ನು ಪರಿಹರಿಸಿಕೊಂಡವ, ಸಾವಿಲ್ಲದವ ಮತ್ತು ನರಕಯಾತನೆ ಪರಿಹರಿಸಿಕೊಂಡವ ಅಥವಾ 'ಹರತಿ ಆಹರತಿ ಇತಿ ಹರಿಃ' ಅವತಾರ ಸಮಾಪ್ತಿಕಾಲದಲ್ಲಿ ತನ್ನ ಶರೀರವನ್ನು ತನ್ನೊಡನೇ ಕೊಂಡೊಯ್ಯುತ್ತಾನೆ, ಮಾನವರಂತೆ ತೊರೆದು ಹೋಗುವವನಲ್ಲ ಶ್ರೀಕೃಷ್ಣ.

'ಹರಿ' ಎಂದರೆ ಶರೀರದಿಂದ ದುಷ್ಟರ ಆತ್ಮವನ್ನು ಸೆಳೆದು ನರಕಕ್ಕೆ ಒಯ್ಯುವವನು, ಯಮನೂ ಹೌದು. ಅವನಿಗೂ ಹರಿ ಎಂದು ಹೆಸರಿದೆ. ಶರೀರ ಸಮೇತವಾಗಿ ಅವನೆಂದೂ ಜೀವಿಗಳನ್ನು ಸೆಳೆದೊಯ್ಯುವುದಿಲ್ಲ. ಉದಾ. ಸಾವಿತ್ರಿಯ ಚರಿತ್ರೆಯಲ್ಲಿ ಸತ್ಯವಾನನ ಆತ್ಮವನ್ನು ಸೆಳೆದೊಯ್ಯುವುದರ ಉಲ್ಲೇಖ ಮಹಾಭಾರತದಲ್ಲಿ ಬಂದಿದೆ.

ತತಃ ಸತ್ಯವತಃ ಕಾಯಾತ್ ಪಾಶಬದ್ಧಂ ವಶಂ ಗತಂ ।
ಅಂಗುಷ್ಠ ಮಾತ್ರಂ ಪುರುಷಂ ನಿಶ್ಚಕರ್ಷ ಯಮೋ ಬಲಾತ್ ॥

ಆದ್ದರಿಂದ ಎಂದೂ ಶರೀರತ್ಯಾಗ ಮಾಡದ, ಸಾವಿಲ್ಲದ, ಆ ಹರಿ ಈ ಹರಿಯ ಕೈಗೆ ಸಿಗುವವನಲ್ಲ. ತನ್ನನ್ನು ಮಾತ್ರವಲ್ಲದೆ ತನ್ನ ಭಕ್ತರನ್ನೂ ಕೈಗೆ ಸಿಗದಂತೆ ಮಾಡುವ ಪಾಪಹಾರಿ, ಯಮಪಾಶಹಾರಿ, ನಮ್ಮ ಹರಿ ಎನ್ನುತ್ತಿದ್ದಾಳೆ, ಮಹಾಲಕ್ಷ್ಮಿ.

ಈ ಪದ್ಯದ ಮೂರನೆ ಸಾಲಿನಲ್ಲಿ 'ನೋವನೆ ಈವನು ನಿಮ್ಮ ಯಮದೇವನು' ಎಂದೂ ಪಾಠಾಂತರ ಕಂಡು ಬರುತ್ತದೆ. ಆದರೆ 'ನಿಮ್ಮ ಯಮದೇವನು ಜೀವಂತರಿಗೆ ನೋವನ್ನೇ ಕೊಡುತ್ತಾನೆ' ಎಂದರೆ 'ನಮ್ಮ ಹರಿ ಸಾವಿಲ್ಲದವ, ಜೀವಂತನೆ ಇರುತ್ತಾನೆ, ಅವನಿಗೆ ನಿಮ್ಮ ಯಮದೇವ ನೋವನ್ನೆ ಕೊಡುತ್ತಾನೆ' ಎಂದಾಗುತ್ತದೆ. ಇದು ಅಸಂಗತ, ಅನುಚಿತ. 'ನರಕಯಾತನೆ ಸಲ್ಲ' ಎನ್ನುವುದಕ್ಕೂ ವಿರುದ್ಧ. ಜೀವಂತರೆಂದರೆ ಪ್ರಾಕೃತ ಶರೀರ ಉಳ್ಳವರೆಂದು ತೆಗೆದುಕೊಂಡು ಶ್ರೀಹರಿ ಜೀವಂತನಲ್ಲ ಎನ್ನುವುದೂ ಅನುಚಿತ. ಶ್ರೀಹರಿ ಅಪ್ರಾಕೃತ ಶರೀರಿ ಎನ್ನುವುದನ್ನು ಪ್ರತಿವಾದಿಗಳು ಒಪ್ಪುವುದೂ ಇಲ್ಲ. 'ಜೀವಂತರಿಗೆ

ನೋವನೀವನೆ ?' ಎನ್ನುವ ಪಾಠದಲ್ಲಿ ಪಾರ್ಥಿವ ಶರೀರದಿಂದ ಜೀವಿಸುತ್ತಿರುವವರಿಗೆ ಯಮನು ನೋವನ್ನು ಕೊಡುವುದಿಲ್ಲ ಎಂದರ್ಥ. ಶ್ರೀಕೃಷ್ಣನ ಶರೀರ ಪಾರ್ಥಿವವೆಂದೆ ಪ್ರತಿವಾದಿಗಳ ಆಗ್ರಹವಿರುವುದರಿಂದ ಅದನ್ನೊಪ್ಪಿದರೂ ಕೃಷ್ಣನಿಗೆ ಸಾವಿಲ್ಲದುದರಿಂದ ನರಕಯಾತನೆ ಸಲ್ಲದೆನ್ನುವುದು ಸರಿಯಾಗುತ್ತದೆ.

— ೫೭ —

**ನರಕವಾಳುವ ಯಮಧರ್ಮರಾಯ ತನ್ನ**
**ನರಜನ್ಮದೊಳಗೆ ಪೊರಳಿಸಿ ।**
**ಮರಳಿ ತನ್ನರಕದಲಿ ಪೊರಳಿಸಿ ಕೊಲುವನು**
**ಕುರು ನಿನ್ನ ಕುಹಕ ಕೊಳದಲ್ಲಿ ॥**

'ನರಕಲೋಕವನ್ನಾಳುವ ಯಮಧರ್ಮರಾಯನು ತನ್ನನ್ನು ನರಜನ್ಮದಲ್ಲಿ ಹೊರಳಿಸಿ ತಿರುಗಿ ಆ ನರಕದಲ್ಲಿಯೂ ಹೊರಳಿಸಿ ಹಿಂಸಿಸಿಕೊಳ್ಳುವನೇನು ? ಇದನ್ನು ನೀನು ಗಮನಿಸು. ನಿನ್ನ ವಂಚನೆಯ ಕುಯುಕ್ತಿ ಏನೂ ಕೃಷ್ಣನಿಗೆ ನರಕವಿದೆ ಎಂದು ಸಾಧಿಸುವಲ್ಲಿ ಕೆಲಸಕ್ಕೆ ಬಾರದು' ಎನ್ನುತ್ತಾಳೆ ಮಹಾಲಕ್ಷ್ಮಿ.

ನಾರಾಯಣನಿಗೂ ನರಕವಿದೆ ಎಂದು ಸಾಧಿಸಲು ಪ್ರತಿವಾದಿ ಏನಾದರೂ ವಂಚನೆಯ ಕುಯುಕ್ತಿಯನ್ನು ಮುಂದೆ ಮಾಡಬಹುದು. ಆದರೆ ಅದು ತನಗೆ ತಾನೇ ವಿರುದ್ಧವೆನಿಸಿ ನಿಷ್ಪ್ರಯೋಜಕವೆ ಆಗುವುದು

ಒಂದು ಕುಯುಕ್ತಿ– ಧರ್ಮಶಾಸ್ತ್ರದಲ್ಲಿ ಕೊಲೆ ಕಳವು ವ್ಯಭಿಚಾರ ಮುಂತಾದುವನ್ನು ಮಹಾ ಪಾತಕವೆನ್ನುತ್ತ ಬಲವಾಗಿ ನಿಷೇಧಿಸಲಾಗಿದೆ. ಧರ್ಮಶಾಸ್ತ್ರದ ವಿಧಿ ನಿಷೇಧಗಳೆಲ್ಲ ಹರಿಯಾಜ್ಞೆ 'ಶ್ರುತಿಸ್ಮೃತೀ ಹರೇರಾಜ್ಞೇ' ಎನ್ನುತ್ತಾರೆ. ಪಾಪಕರ್ಮ ಮಾಡಕೂಡದು, ಮಾಡಿದರೆ ನರಕಾದ್ಯನರ್ಥ ಎಂಬ ಈ ನಿಯಮವನ್ನು ಹರಿಯೆ ಮಾಡಿದವನು. ಈ ನಿಯಮ ಇತರರಿಗೆ ಮಾತ್ರವೆ ಹೊರತು ತನಗೆ ಇಲ್ಲ ಎನ್ನುವುದು ಯಾವ ನ್ಯಾಯ ? ಲೋಕಹಿತಕ್ಕಾಗಿ ತಾನು ಕರ್ಮಾಚರಣೆಯ ನಿಯಮಕ್ಕೆ ಒಳಪಟ್ಟಿದ್ದಾನೆ.–

'ಉತ್ಸೀದೇಯುರಿಮೇ ಲೋಕಾ ನ ಕುರ್ಯಾಂ ಕರ್ಮ ಚೇದಹಂ'

ಎನ್ನುತ್ತಾನೆ ಭಗವದ್ಗೀತೆಯಲ್ಲಿ ಕೃಷ್ಣ. ಆದ್ದರಿಂದ ತಾನು ಆ ನಿಯಮ ಉಲ್ಲಂಘಿಸಿದಾಗೆಲ್ಲ ಅದಕ್ಕೆ ಶಿಕ್ಷೆಯನ್ನೂ ಅನುಭವಿಸಬೇಕು. 'ಇಲ್ಲದಿದ್ದರೆ ಸುಖದುಃಖಗಳಿಗೂ ಪುಣ್ಯಪಾಪಕರ್ಮಗಳಿಗೂ ಸಂಬಂಧ ಇಲ್ಲವೆಂದಾದೀತು. ಕೃಷ್ಣ ತಾನು ಮಾಡಿದ ಪಾಪಕ್ಕೆ ಪ್ರಾಯಶ್ಚಿತ್ತ ಮಾಡಿಕೊಂಡಿದ್ದೂ ಉಂಟು, ಆದ್ದರಿಂದ ನಾರಾಯಣನಿಗೆ ನರಕ ವಿಲ್ಲವೆನ್ನುವುದು ಎಷ್ಟು ಸರಿಯಾದೀತು ?

ಈ ಕುಯುಕ್ತಿ ತನಗೆ ತಾನೆ ವಿರುದ್ಧ ವಾಗುತ್ತದೆ ಪಾಪಕ್ಕೆ ತಕ್ಕ ಶಿಕ್ಷೆಕೊಡುವ ನಿಯಮವಿಟ್ಟುಕೊಂಡವ ನರಕವಾಳುವ ಯಮಧರ್ಮರಾಯ ಆ ನಿಯಮವನ್ನು ತನಗೆ ತಾನೇ ಅನ್ವಯಿಸಿಕೊಳ್ಳುವನೆ? ಧರ್ಮರಾಜನಾಗಿ ಮಾನವ ಜನ್ಮದಲ್ಲಿ ಹುಟ್ಟಿ ಹದಿನೆಂಟು ಅಕ್ಷೋಹಿಣೀ ಸೇನೆಯ ನಾಶ ಮಾಡಿದರೂ ಅದಕ್ಕೆ ತಕ್ಕ ಶಿಕ್ಷೆಯನ್ನು ಅವನೇನೂ ತಾನು ಅನುಭವಿಸಲಿಲ್ಲ. ನರಕಕ್ಕೆ ಹೋಗುವುದಕ್ಕೆ ಬದಲಾಗಿ ಸ್ವರ್ಗಾರೋಹಣ ಮಾಡಿದ ಉಲ್ಲೇಖವೆ ಮಹಾಭಾರತದಲ್ಲಿ ಬರುತ್ತದೆ.

ಇತರರಿಗೆ ಮಾತ್ರ ಅವನು ಪಾಪಕ್ಕೆ ತಕ್ಕ ಶಿಕ್ಷೆಯನ್ನು ತಪ್ಪದೆ ಕೊಡುತ್ತಾನೆ. 'ಅತ್ಯುತ್ಕಟೈಃ ಪುಣ್ಯಪಾಪೈರಿಹೈವ ಫಲಮಶ್ನುತೇ' ಎಂಬಂತೆ ಮಹಾಪಾಪಕ್ಕೆ ಮನುಷ್ಯ ಜನ್ಮದಲ್ಲಿಯೆ ಶಿಕ್ಷೆ ಕೊಡುತ್ತಾನೆ. ನರಜನ್ಮದಲ್ಲಿ ಹೊರಳಿಸುತ್ತಾನೆ. ಅದೂ ಸಾಲದಿದ್ದರೆ ನರಕದಲ್ಲಿಯೂ ಘೋರಶಿಕ್ಷೆ ಕೊಡುತ್ತಾನೆ.

ಆಣಿ ಮಾಂಡವ್ಯ ಮುನಿಯು ಅಯೋಗ್ಯೋಪಾಸನೆಯ ಮಹಾಪಾತಕ ಮಾಡಿದ್ದರಿಂದ ಅವನಿಗೆ ಯಮನು ಶೂಲಾರೋಹಣ ಶಿಕ್ಷೆ ಕೊಡಿಸಿದುದು ಪ್ರಸಿದ್ಧವೆ ಇದೆ. ನಿಷ್ಪಕ್ಷಪಾತ ದೃಷ್ಟಿಯಿಂದ ಪಾಪಕ್ಕೆ ತಕ್ಕ ಶಿಕ್ಷೆ ಕೊಡುವವನೆಂದೆ ಯಮನಿಗೆ 'ಸಮವರ್ತಿ' ಎಂಬ ಬಿರುದು ಬಂದಿದೆ. ಆದರೂ ತನ್ನ ವಿಷಯದಲ್ಲಿ ಅವನು ಈ ಯಾವ ನಿಯಮವನ್ನೂ ಅನುಸರಿಸುವುದಿಲ್ಲ.

ಹೀಗೆ ನರಕವಾಳುವ ಯಮಧರ್ಮನೆ ತನಗೆ ತಾನು ಶಿಕ್ಷೆ ಮಾಡಿಕೊಳ್ಳದಿರುವಾಗ ಹದಿನಾಲ್ಕು ಲೋಕವನ್ನಾಳುವ ನಾರಾಯಣನಲ್ಲಿ ಅದನ್ನು ನಿರೀಕ್ಷಿಸಬಹುದೇ? ಆದ್ದರಿಂದ ಅವನು ಕರ್ಮನಿಯಮಕ್ಕೆ ಒಳಗಾದವನಂತೆ ನಟಿಸಿದ್ದಾನಷ್ಟೆ. ಕರ್ಮನಿಯಮಕ್ಕೆ ಒಳಗಾಗಿಲ್ಲವೆನ್ನಬೇಕು.

ಇಲ್ಲಿ 'ಧರ್ಮರಾಜನು ದ್ರೋಣರಿಗೆ 'ಅಶ್ವತ್ಥಾಮಾ ಹತಃ' ಎಂಬ ಮಾತಿನಿಂದ ವಂಚನೆ ಮಾಡಿದ್ದಕ್ಕೆ ನರಕ ದರ್ಶನ ಶಿಕ್ಷೆ ಅನುಭವಿಸಲಿಲ್ಲವೇ?' ಎಂದು ಆಕ್ಷೇಪ ಬರಬಹುದು. ಆದರೆ ಧರ್ಮರಾಜನಿಗೆ ನರಕದರ್ಶನವಾದುದು ದ್ರೋಣರಿಗೆ ವಂಚನೆ ಮಾಡಿದ್ದಕ್ಕಲ್ಲ ಶ್ರೀಕೃಷ್ಣನ ಆಜ್ಞೆಯನ್ನು ಮೀರಿದುದಕ್ಕಾಗಿ. ಶ್ರೀಕೃಷ್ಣನು ವಂಚನೆ ಮಾಡಲು ಆಜ್ಞಾಪಿಸಿದ್ದರೂ ಅದು ಪಾಪಕರವೆಂದು ಧರ್ಮರಾಜ ಭಾವಿಸಿದುದರ ಫಲವೆ ಅವನಿಗೆ ಈ ನರಕದರ್ಶನ–

ವ್ಯಾಜೇನ ಹಿ ತ್ವಯಾ ದ್ರೋಣ ಉಪಚೀರ್ಣಃ ಸುತಂ ಪ್ರತಿ ।
ವ್ಯಾಜೇನೈವ ತತೋ ರಾಜನ್ ದರ್ಶಿತೋ ನರಕಸ್ತವ ॥ –ಮಹಾಭಾರತ.

'ಅಶ್ವತ್ಥಾಮಾ ಹತಃ' ಎಂದು ಮಾತ್ರ ಹೇಳದೆ 'ಕುಂಜರ' ಎಂದೂ ಹೇಳುವುದರ ಮೂಲಕ ಕೃಷ್ಣನಿಗೇ ಮೋಸ ಮಾಡುತ್ತ ದ್ರೋಣನನ್ನು

ವಂಚಿಸಿದ್ದರಿಂದ ಧರ್ಮರಾಜ ತಾನೆ ನರಕವಲ್ಲದುದನ್ನು ನರಕವೆಂದುಕೊಂಡು ಮೋಸಹೋಗುವಂತಾಯಿತು. ಆದೂ ಹರಿಯ ಮಾಯೆ ಆದ್ದರಿಂದ ಧರ್ಮರಾಜ ತನಗೆ ತಾನೆ ನರಕ ಶಿಕ್ಷೆ ಮಾಡಿಕೊಳ್ಳಲೂ ಇಲ್ಲ. ಅವನು ಕಂಡುದುದು ನರಕವೂ ಅಲ್ಲ. ವಾಸ್ತವ ನರಕದುಃಖಕ್ಕೆ ಅತೀತರು ದೇವತೆಗಳು. ಅವರಿಗೆ ನರಕವಾಸವಿಲ್ಲ. ಎಂದಮೇಲೆ, ಸಕಲ ದುಃಖಾತೀತನಾದ ಹರಿಗೆ ನರಕವಾಸವೆಲ್ಲಿ ?

ಪ್ರತಿವಾದಿ ಇನ್ನೊಂದು ಕುಯುಕ್ತಿಯನ್ನು ಮುಂದೆ ಮಾಡಬಹುದು. ದೇವೇಂದ್ರನೊಮ್ಮೆ ಶಿವನ ಮುಂದೆ ತನ್ನ ಅಹಂಕಾರ ಪ್ರದರ್ಶನ ಮಾಡಿದುದರ ಫಲವಾಗಿ ಅರ್ಜುನನಾಗಿ ಮನುಷ್ಯ ಜನ್ಮವೆತ್ತಬೇಕಾಯಿತು 'ನಿನ್ನಂತೆ ಹಿಂದೆ ಇಂದ್ರ ಪದವಿಯನ್ನಾಳಿದ ಯಮ ವಾಯು ಅಶ್ವಿನೀದೇವತೆಗಳೂ ಹೀಗೆ ಅಹಂಕಾರ ತೋರಿದ್ದರಿಂದ ಅವರೂ ನಿನ್ನಜೊತೆ ಮನುಷ್ಯರಾಗಿ ಜನಿಸುವರು. ನೀವೆಲ್ಲ ಹೋಗಿ, ಭೂಮಿಯಲ್ಲಿ ಹುಟ್ಟಿರಿ' ಎಂದು ಶಿವನು ಹೇಳಿದುದುಂಟು–

ತತ್ರ ಹ್ಯೇವಂ ಭವಿತಾರೋ ನ ಸಂಶಯೋ
ಯೋನಿಂ ಸರ್ವೇ ಮಾನುಷೀಮಾವಿಶಧ್ವಂ । –ಮಹಾಭಾರತ

ಹೀಗೆ ಅಹಂಕಾರ ಪ್ರದರ್ಶನದ ಪಾಪದ ಫಲವಾಗಿ ಇಂದ್ರನಂಥ ದೇವತೆಗಳು ನರಜನ್ಮದಲ್ಲಿ ಹೊರಳಿ ಮುಂದೆ ಧರ್ಮರಾಜನು ಕಂಡ ನರಕದಲ್ಲಿ ಶಿಕ್ಷೆ ಅನುಭವಿಸಿದರೆಂದು ಮಹಾಭಾರತ ಹೇಳುತ್ತಿದೆ–

ಯುಧ್ಯೈವ ತ್ವಂ ತಥಾ ಭೀಮಸ್ತಥಾ ಪಾರ್ಥೋ ಯಮೌ ತಥಾ ।
ದ್ರೌಪದೀ ಚ ತಥಾ ಕೃಷ್ಣ ವ್ಯಾಜೇನ ನರಕಂ ಗತಾಃ ॥

ಆದ್ದರಿಂದ ಇಂದ್ರನಿಗೆ ನರಕವಾಯಿತೆಂದರೆ ಉಪೇಂದ್ರನಿಗೆ ಆಗದಿದ್ದೀತೆ ? ಪಾರ್ಥ ಮಾಡಿದ ಪಾಪದಲ್ಲಿ ಪಾರ್ಥಸಾರಥಿಯದೂ ಪಾಲು ಇಲ್ಲವೆ ?

ಈ ಆಕ್ಷೇಪಕ್ಕೂ ಈ ನುಡಿಯಲ್ಲಿ ಉತ್ತರವಿದೆ. ಇಂದ್ರನಿಗೆ ನರಕವೆ ಆಗಿಲ್ಲ 'ವ್ಯಾಜೇನ ನರಕಂ ಗತಾಃ' ನರಕವಾಯಿತೆಂದು ಧರ್ಮರಾಜ ತಿಳಿದು ಮೋಸಹೋದನಷ್ಟೆ. ಒಂದು ವೇಳೆ ಇಂದ್ರನಿಗೆ ವಾಸ್ತವ ನರಕವಾಯಿತೆಂದೆ ಹೇಳಿದರೂ ಅವನ ಜೊತೆಗೇ ಧರ್ಮರಾಜನಿಗೂ ನರಕವಾಯಿತೆನ್ನಬೇಕು 'ಯುಧ್ಯೈವ ತ್ವಂ' 'ನಿನ್ನಂತೆ ಅರ್ಜುನ ಮುಂತಾದವರೂ ನರಕ ಹೊಂದಿದರೂ' ಎಂದಿದೆ ತಾನೆ ?

ಆದ್ದರಿಂದ ಧರ್ಮರಾಜನಿಗೂ ನರಕವಾಯಿತೆಂದು ಹೇಳಿದರೆ ಅವನು ತನ್ನನ್ನು ನರಜನ್ಮದಲ್ಲಿ ಪೊರಳಿಸಿ ಮರಳಿ ತನ್ನರಕದಲ್ಲಿ ಪೊರಳಿಸಿ ಕೊಳ್ಳುವನೆಂದು ಹೇಳಿದಂತಾಗುವುದು. ಎಲೈ ಪ್ರತಿವಾದಿ, ನೀನು ಹಾಗೆ ಹೇಳುವೆಯೇನು ? ನಿನ್ನ

ಕುಯುಕ್ತಿ ನರಕವಾಳುವ ಯಮಧರ್ಮರಾಯನ ವಿಷಯದಲ್ಲಿ ಸುಳ್ಳಾಗುತ್ತದೆ ತಾನೆ? ತಾನೆ ಆಳುವ ನರಕದಲ್ಲಿ ತನ್ನನ್ನೆ ಶಿಕ್ಷಿಸಿಕೊಳ್ಳುವ ಮೂರ್ಖತನವನ್ನು ಅವನು ತೋರುವನೆ? ಹೀಗೆ ನರಕಲೋಕವಾಳುವ ಯಮಧರ್ಮನಂತೆ ಮೂಲೋಕವಾಳುವ ಇಂದ್ರನೂ ನರಕಾತೀತನೆನ್ನಬೇಕು. ಹದಿನಾಲ್ಕು ಲೋಕವಾಳುವ ಜಗನ್ನಾಥನಾದ ಹರಿಗೆ ಇನ್ನೆಲ್ಲಿ ನರಕ?

'ಸಂಯಮನೀಪತೇರಪಿ ಪತ್ಯುರ್ನಾರಾಯಣಸ್ಯ
ನರಕಯಾತನಾ ನ ಸ್ಯುಃ।' – ಕಲ್ಪಲತಾ

ಎಂದು ವಾದಿರಾಜರು ಇದನ್ನು ಹೇಳಿದ್ದಾರೆ.

'ನರಕವಾಳುವ ಯಮಧರ್ಮರಾಯ ತನ್ನ' ಎಂಬಲ್ಲಿ 'ನಿನ್ನ' ಎಂದು ಪಾಠಾಂತರವಿದೆ. ಈ ಪಾಠದಲ್ಲಿ 'ನಾರಾಯಣನಿಗೆ ನರಕವಾಗುತ್ತದೆ ಎಂದು ನೀನು ಹೇಳುತ್ತಿದ್ದರೂ ಅದರ ಫಲವಾಗಿ ವಾಸ್ತವವಾಗಿ ನಿನಗೇ ನರಕವಾಗುತ್ತದೆ ಹೊರತು ನಾರಾಯಣನಿಗಲ್ಲ ನಿನ್ನ ಕುಯುಕ್ತಿಗಳಾವವೂ ನಾರಾಯಣನ ಭೃತ್ಯನಾದ ಯಮಧರ್ಮರಾಜನ ಮುಂದೆ ನಡೆಯಲಾರವು' ಎಂದು ಹೇಳುವ ಅಭಿಪ್ರಾಯ ಕಾಣುತ್ತದೆ ವಾದಿರಾಜರು ಕಲ್ಪಲತೆಯಲ್ಲಿ ಹಾಗೆ ಹೇಳಿದುದೂ ಉಂಟು–

ಯಾ ಚ ನಾರಾಯಣಸ್ಯ ನರಕಕಥಾ ಸಾಪಿ ವೃಥಾ,
ಅತ್ಯಂತ ಪರಿಹಾಸ್ಯಾ ಚ । ಯತಸ್ತದ್ಭೃತ್ಯ ಧರ್ಮ–
ಪುತ್ರಾತ್ಮಕ ಯಮಸ್ಯ ಸಂಯಮನೀಪತೇರ್ಭಯಂಕರ–
ಕಿಂಕರೈಃ ಕ್ರಿಯಮಾಣಾ ನಾನಾ ನರಕಯಾತನಾಶ್ಚ ತವೈವ ಸ್ಯುಃ ।
ನ ತು ಸಂಯಮನೀಪತೇರಪಿ ಪತ್ಯುರ್ನಾರಾಯಣಸ್ಯ ॥

ಈ ಅಭಿಪ್ರಾಯದಲ್ಲಿ 'ಮರಳಿ ತನ್ನರಕದಲಿ ಪೊರಳಿಸಿ ಕೊಲುವನು' ಎಂಬುದು ವಿಧಿಯೆ ಹೊರತು ಆಕ್ಷೇಪವಲ್ಲವೆಂದಿಟ್ಟುಕೊಳ್ಳಬೇಕು.

'ಕುರು ನಿನ್ನ ಕುಹಕ ಕೊಳದಲ್ಲಿ' ಎಂಬಲ್ಲಿ 'ಕುರಿ' ಎಂದೂ ಪಾಠಾಂತರವಿದೆ. ಆದರೂ 'ಕುರು', ಕುರಿ, ಎಂಬ ಎರಡಕ್ಕೂ 'ಗಮನಿಸು' ಎಂದೇ ಅರ್ಥ. 'ಕುರಿಯಂಥ ಪ್ರತಿವಾದಿಯೆ' ಎಂದು ಸಂಬೋಧಿಸುವ ಅಭಿಪ್ರಾಯದಲ್ಲಿ ಕುಹಕದ ಬಗ್ಗೆ ಹೇಳುವುದು ಯುಕ್ತವಾಗಲಾರದು. ಕುರಿ ಕುಹಕ ಮಾಡದು. ತಾನೇ ಅದಕ್ಕೆ ಒಳಗಾದೀತು.

**ಬೊಮ್ಮನ ನೂರು ವರುಷ ಪರಿಯಂತ ಪ್ರಳಯದಲಿ**
**ಸುಮ್ಮನೆಯಾಗಿ ಮಲಗಿರ್ದ ।**
**ನಮ್ಮ ನಾರಾಯಣಗೆ ಹಸಿ ತೃಷೆ ಜರೆ ಮರಣ ದು–**
**ಷ್ಕರ್ಮ ದುಃಖಂಗಳು ತೊಡಸುವರೆ ॥**

ಬ್ರಹ್ಮಮಾನದ ನೂರುವರ್ಷಗಳಷ್ಟು ದೀರ್ಘವಾದ ಪ್ರಳಯಕಾಲದಲ್ಲಿಯೂ ಸುಮ್ಮನೆ ಮಲಗಿದ್ದ ನಮ್ಮ ನಾರಾಯಣನಿಗೆ ಹಸಿವು ತೃಷೆ ಜರೆ ಮರಣ ದುಷ್ಕರ್ಮ ದುಃಖಗಳು ಉಂಟೆನ್ನುವರೆ ವಿಚಾರವಂತರು ?

ಹಿಂದಿನ ನುಡಿಯಲ್ಲಿ 'ನರಕವಾಳುವ ಯಮಧರ್ಮರಾಯ ತನ್ನ' ಎಂದು ಮುಂತಾಗಿ, ನಾರಾಯಣನಿಗೆ ದುಷ್ಕರ್ಮಲೇಪ ಒಪ್ಪಿದರೂ ಯಮನಿಗೂ ಯಮನಾದ ಆತ ಯಮನು ಆಳುವ ನರಕದಲ್ಲಿ ದುಃಖ ಅನುಭವಿಸುವುದು ಅಸಂಭವ ಎಂದಿದೆ. ಈಗ ನಾರಾಯಣನಿಗೆ ದುಷ್ಕರ್ಮಲೇಪವೆ ಅಸಂಭವ ಎಂದು ಯುಕ್ತಿಯುಕ್ತವಾಗಿ ಪ್ರತಿಪಾದಿಸಲಾಗಿದೆ–

ಬ್ರಹ್ಮಮಾನದ ನೂರುವರ್ಷಗಳಷ್ಟು ಸುದೀರ್ಘವಾದ ಪ್ರಳಯಕಾಲದಲ್ಲಿ ಸುಮ್ಮನೆ ಮಲಗಿದವ ನಾರಾಯಣ. ಆಗ ಅವನನ್ನು ಯಾವ ದುಷ್ಕರ್ಮ ಪೀಡಿಸುತ್ತಿತ್ತು ? ಏಕೆಂದರೆ ಅವನಿಗೆ ಹಸಿವು ತೃಷೆ ಜರೆ ಮರಣಗಳಿರಲಿಲ್ಲ, ಇನ್ನಾವ ದುಃಖವೂ ಇರಲಿಲ್ಲ. ಹೀಗೆ ಸುದೀರ್ಘಪ್ರಳಯಕಾಲದಲ್ಲಿಯೆ ಇಲ್ಲದಿದ್ದ ದುಷ್ಕರ್ಮ ಸೃಷ್ಟಿಕಾಲದಲ್ಲಿ ಹರಿಗೆ ಇದ್ದೀತೆ ? ಅದರ ಹಿಂದೆಯೇ,

ಬೊಮ್ಮನ ಲಯದಲ್ಲಿ ತನ್ನರಸಿಯೊಡಗೂಡಿ
ಸುಮ್ಮನೆಯಾಗಿ ಮಲಗಿಪ್ಪ ।
ನಮ್ಮ ನಾರಾಯಣಗು ಈ ರಮ್ಮೆಗ್ಗಡಿಗಡಿಗು
ಜನ್ಮವೆಂಬುದು ಅವತಾರ ॥

ಎಂಬ ೩ನೆ ನುಡಿಯಲ್ಲಿ 'ಲಕ್ಷ್ಮೀನಾರಾಯಣರಿಬ್ಬರೂ ಬ್ರಹ್ಮಪ್ರಳಯದಲ್ಲಿ ಸುಮ್ಮನೆ ಮಲಗಿದ್ದರು ಯಾವ ದುಷ್ಕರ್ಮದ ಬಾಧೆಯೂ ಅವರಿಗಿರಲಿಲ್ಲ. ಆದ್ದರಿಂದ ಸೃಷ್ಟಿಕಾಲದಲ್ಲಿಯೂ ಇರಲು ಸಾಧ್ಯವಿಲ್ಲ. ಅವರ ಜನ್ಮ ದುಷ್ಕರ್ಮ ಪ್ರಯುಕ್ತವಲ್ಲ, ಸ್ವೇಚ್ಛಾಪ್ರಯುಕ್ತ, ಅವತಾರ' ಎಂದು ಹೇಳಿಯಾಗಿದೆ. ಆದ್ದರಿಂದ ಪುನರುಕ್ತಿ.

ಇದಕ್ಕೆ ಸಮಾಧಾನ– ೩ ನೆ ನುಡಿ ಕವಿ ಸ್ವತಃ ಹೇಳಿದುದು. ಪ್ರಕೃತದ ೫೮ನೆ ನುಡಿ ಕಾವ್ಯನಾಯಿಕೆ ಮಹಾಲಕ್ಷ್ಮಿ ಆಡಿದ ಮಾತು. ಅಲ್ಲಿ ದುಷ್ಕರ್ಮ ಪ್ರಯುಕ್ತ ಜನ್ಮವಿಲ್ಲವೆಂದಿದೆ. ಇಲ್ಲಿ ದುಷ್ಕರ್ಮ ಪ್ರಯುಕ್ತ ನರಕಾದಿ ದುಃಖವಿಲ್ಲವೆಂದಿದೆ. ಆದ್ದರಿಂದ ಎರಡು ನುಡಿಗಳಿಗೂ ಸಂದರ್ಭ ಬೇರೆ, ಹೇಳಿದ ವ್ಯಕ್ತಿಗಳೂ ಬೇರೆ ಬೇರೆ.

ಅಥವಾ–ಮೂರನೆ ನುಡಿಯಲ್ಲಿ ದುಷ್ಕರ್ಮ ಪ್ರಯುಕ್ತ ಜನ್ಮವಿಲ್ಲ ಎಂದಿದ್ದರೆ ಈ ೫೮ನೆ ನುಡಿಯಲ್ಲಿ ದುಷ್ಕರ್ಮಪ್ರಯುಕ್ತ ನರಕದುಃಖವಿಲ್ಲವೆಂದೂ ಜೊತೆಗೆ, ಹಸಿವು ತೃಷೆ ಜರೆ ಮರಣಗಳಿಲ್ಲವೆಂದೂ ಸಾಧಿಸಲಾಗಿದೆ. ಆದ್ದರಿಂದ ಪುನರುಕ್ತಿಗೆ ಅವಕಾಶವೆ ಇಲ್ಲ

ಪ್ರಳಯದಲ್ಲಿ ನಾರಾಯಣ ಸುಮ್ಮನೆ ಮಲಗಿದ್ದನೆಂಬ ಒಂದು ಕಾರಣದಿಂದ ಅವನಿಗೆ ಜನ್ಮವಿಲ್ಲ, ಮಾತ್ರವಲ್ಲ, ಹಸಿವು ತೃಷೆ ಮುಂತಾದುವೂ ಯಾವುದೂ ಇಲ್ಲವೆಂದು ಸಾಧಿಸಬಹುದು ಆದರೆ,

ಆಗ ಭಕ್ಷ್ಯಭೋಜ್ಯವಿತ್ತು ಪೂಜಿಸುವ
ಯೋಗಿಗಳುಂಟೆ ..... ?

ಎಂಬ ೩೪ನೆ ನುಡಿಯಲ್ಲಿ 'ಪ್ರಳಯಕಾಲದಲ್ಲಿ ಹರಿಗೆ ಹಸಿವು ತೃಷೆ ಇರುತ್ತಿದ್ದರೆ ಆಗ ಅವನಿಗೆ ಅನ್ನಪಾನ ನೀಡುವವರು ಯಾರಿದ್ದರು ?' ಆದ್ದರಿಂದ ಹಸಿವು ತೃಷೆ ಆಗ ಇರಲಿಲ್ಲ ಎನ್ನುವುದು ಸಿದ್ಧವಾಗುತ್ತದೆ. ಹೀಗೆ ಪ್ರಳಯದಲ್ಲಿ ಇಲ್ಲದಿದ್ದ ಹಸಿವು ತೃಷೆ ಸೃಷ್ಟಿಯಲ್ಲಿ ಇರಲಾರದು' ಎಂದು ಹೇಳಿಯಾಗಿದೆ. ಈಗ ೫೮ನೆ ನುಡಿಯಲ್ಲಿ ತಿರುಗಿ ಅದನ್ನು ಹೇಳಿದರೆ ಪುನರುಕ್ತಿಯಾಗದೆ ? ಎರಡೂ ಮಹಾಲಕ್ಷ್ಮಿಯ ಮಾತುಗಳೆ.

ಇದಕ್ಕೆ ಸಮಾಧಾನ– ಇಲ್ಲಿ ಪುನರುಕ್ತಿಯಾಗಿಲ್ಲ. ಏಕೆಂದರೆ ಪ್ರಳಯದಲ್ಲಿ ಇಲ್ಲದಿದ್ದ ಹಸಿವು ತೃಷೆ ಸೃಷ್ಟಿಯಲ್ಲಿಯೂ ಇರಲಾರದು ಎನ್ನುವುದು ಸರಿಯಲ್ಲ. ಒಂದು ಕಾಲದಲ್ಲಿ ಇಲ್ಲದುದು ಇನ್ನೊಂದು ಕಾಲದಲ್ಲಿ ಇರಬಾರದೇಕೆ ? ಹಾಗೆ ನಿಯಮವಿರುವುದಾದರೆ ನಾರಾಯಣನಿಗೆ ಮಾತ್ರವಲ್ಲ, ನರರಿಗೂ ಪ್ರಳಯಕಾಲದಲ್ಲಿ ಹಸಿವು ತೃಷೆ ಇರಲಿಲ್ಲ ಏಕೆಂದರೆ ಅವರು ಆಗ ಸುಪ್ತಿಯಲ್ಲಿದ್ದರು–

ದೃಷ್ಟ್ವಾ ಸ ಚೇತನಗಣಾನ್ ಜಠರೇ ಶಯಾನಾನ್.....'

ಸುಷ್ಪ್ತಿಯಲ್ಲಿರುವವರಿಗೆ ಹಸಿವು ತೃಷೆಗಳಿಲ್ಲದಿರುವುದು ಅನುಭವ ಸಿದ್ಧ. ನಿರ್ದುಃಖಾನಂದ ಮಾತ್ರ ಆಗ ಅನುಭವಕ್ಕೆ ಬರುತ್ತದೆ. ಉಪನಿಷತ್ತು ಹಾಗೇ ಹೇಳುತ್ತದೆ–

'ತೀರ್ಣೋ ಹಿ ತದಾ ಸರ್ವಾನ್ ಶೋಕಾನ್'
ಸುಪ್ತನಾದವನು ಸಕಲದುಃಖಗಳಿಂದ ಅತೀತನಾಗಿರುತ್ತಾನೆ.
'ಯತ್ರ ದೇವ ಇವ ರಾಜೇವ, ಅಹಮೇವೇದಂ
ಸರ್ವೋऽಸ್ಮೀತಿ ಮನ್ಯತೇ'

'ನಾನು ದೇವನಂತೆ ರಾಜನಂತೆ ಇದ್ದೇನೆ. ಪೂರ್ಣ ಸುಖಿಯಾಗಿದ್ದೇನೆ ಎಂದು ಸುಪ್ತನು ತಿಳಿಯುತ್ತಾನೆ'.

ಹೀಗೆ ನರರಿಗೂ, ಪ್ರಳಯದಲ್ಲಿ ಹಸಿವು ತೃಷೆಗಳ ಪೀಡೆ ಇಲ್ಲದುದರಿಂದ ಸೃಷ್ಟಿಯಲ್ಲಿ ಆ ಪೀಡೆ ಇರಬಾರದು. ನಾರಾಯಣನಿಗೆ ಮಾತ್ರವೆ ಏನು ? ಆದ್ದರಿಂದ ಪ್ರಳಯದಲ್ಲಿ ನಾರಾಯಣನಿಗೆ ಹಸಿವು ತೃಷೆ ಇರಲಿಲ್ಲವೆಂಬ ಕಾರಣದಿಂದಲೆ ಸೃಷ್ಟಿಯಲ್ಲಿಯೂ ಇಲ್ಲವೆನ್ನುವುದು ಸಮಂಜಸವಾಗಲಾರದು ಎಂದು 'ಆಗ ಭಕ್ಷ್ಯ ಭೋಜ್ಯವಿತ್ತು ಪೂಜಿಸುವ' ಎಂಬ ನುಡಿಯ ಮೇಲೆ ಆಕ್ಷೇಪ ಬರುವ ಸಾಧ್ಯತೆ ಇದೆ. ಆ ಆಕ್ಷೇಪಕ್ಕೂ ಈ ನುಡಿಯಲ್ಲಿ ಪರಿಹಾರವಿದೆ–

'ಬೊಮ್ಮನ ನೂರು ವರುಷ ಪರ್ಯಂತ ಪ್ರಳಯದಲಿ
ಸುಮ್ಮನೆಯಾಗಿ ಮಲಗಿದ್ದ'

ಇಲ್ಲಿ 'ಸುಮ್ಮನೆಯಾಗಿ' ಎಂಬ ಶಬ್ದಕ್ಕೆ 'ಹಸಿವು ತೃಷೆ ಮುಂತಾದ ಯಾವುದರ ಪೀಡೆಯೂ ಇಲ್ಲದೆ' ಎಂದಿಷ್ಟೆ ಅರ್ಥವಲ್ಲ. 'ನಿದ್ದೆ ಬಾರದಿದ್ದರೂ ಸುಮ್ಮನೆ ಲೀಲೆಗಾಗಿ ಮಲಗಿದ್ದಾನೆ' ಎಂದರ್ಥ. ಪ್ರಳಯದಲ್ಲಿ ನಿದ್ದೆ ಒಂದಿಷ್ಟೂ ಇಲ್ಲದೆ ಎಚ್ಚರದಿಂದಿದ್ದೂ ಹಸಿವು ತೃಷೆ ಮುಂತಾದ ಯಾವ ಪೀಡೆಯೂ ಇಲ್ಲದವನಾಗಿರಬೇಕಾದರೆ ಸೃಷ್ಟಿಯಲ್ಲಿಯೂ ಅವನು ಹಾಗೆಯೇ ಇರಬೇಕು. ಜೀವರು ಪ್ರಳಯದಲ್ಲಿ ಪೂರ್ತಿ ನಿದ್ದೆ ಮಾಡುತ್ತಿದ್ದುದರಿಂದ ಹಸಿವೆ ಮುಂತಾದುವಿರಲಿಲ್ಲ. ನಿರ್ದುಃಖ ಆನಂದವೆ ಇತ್ತು. ಸೃಷ್ಟಿಯಲ್ಲಿ ಅವರು ಎಚ್ಚರದಿಂದಿರುವಾಗ ಆ ಪೀಡೆಗಳು ಬರಲೇಬೇಕು ಆದ್ದರಿಂದ ನಾರಾಯಣನು ಮಾತ್ರ ಸಕಲ ದುಃಖರಹಿತನೆನ್ನುವುದು ಯುಕ್ತವೆ.

'ಸುಮ್ಮನೆಯಾಗಿ' ಎಂಬುದಕ್ಕೆ 'ನಿದ್ದೆ ಇಲ್ಲದಿದ್ದರೂ ಲೀಲೆಗಾಗಿ' ಎಂದು ಅರ್ಥವಿಟ್ಟುಕೊಂಡಾಗ ಮಾತ್ರವೆ ನಾರಾಯಣನಿಗೆ ಜರೆ ಮರಣ ದುಷ್ಕರ್ಮ ದುಃಖಗಳೂ ಇಲ್ಲವೆಂದು ಸಿದ್ಧವಾಗುತ್ತದೆ. ಇಲ್ಲದಿದ್ದರೆ ಪ್ರಳಯದಲ್ಲಿ ನಿದ್ದೆ

ಮಾಡುತ್ತಿದ್ದ ಜೀವರಿಗೂ ಆ ಕಾಲದಲ್ಲಿ ಜರೆ ಮರಣ ದುಷ್ಕರ್ಮ ದುಃಖಗಳಿರಲಿಲ್ಲ. ಅವೆಲ್ಲಕ್ಕೂ ನಿದ್ದೆ ಒಂದೇ ಪರಿಹಾರ. ಮುಚುಕುಂದ ಮಹಾರಾಜ ದೇವತೆಗಳಿಂದ ದೀರ್ಘನಿದ್ರೆಯ ವರಕೇಳಿ ಪಡೆದುದರಿಂದ ಜರೆ ಮರಣ ದುಷ್ಕರ್ಮ ದುಃಖರಹಿತನಾಗಿಯೇ ಗುಹೆಯಲ್ಲಿ ಮಲಗಿದ್ದನಂತೆ! ಸುಪ್ತಿಯಲ್ಲಿರುವವರಿಗೆ ದುಷ್ಕರ್ಮಲೇಪವಿಲ್ಲವೆಂದು ಉಪನಿಷತ್ತು ಹೇಳುತ್ತಿದೆ–

'ಅತ್ರ ಸ್ತೇನೋಽಸ್ತೇನೋ ಭವತಿ ಭ್ರೂಣಹಾಽಭ್ರೂಣಹಾ'

'ಕಳ್ಳನೂ ನಿದ್ದೆಯಲ್ಲಿ ಸಂಭಾವಿತನಾಗುತ್ತಾನೆ. ಭ್ರೂಣಹತ್ಯಾಪಾತಕಿಯೂ ನಿದ್ದೆಯಲ್ಲಿ ಸಜ್ಜನನಿರುತ್ತಾನೆ' ಎನ್ನುತ್ತದೆ ಬೃಹದಾರಣ್ಯಕೋಪನಿಷತ್ತು. ಆದ್ದರಿಂದ ಸುಪ್ತಿ ಇಲ್ಲದಿದ್ದರೂ ನಾರಾಯಣ ಬ್ರಹ್ಮಮಾನದ ನೂರುವರ್ಷಗಳಷ್ಟು ಸುದೀರ್ಘವಾದ ಪ್ರಳಯಕಾಲದಲ್ಲಿ ಜರಾ ಮರಣಾದಿವರ್ಜಿತನಾಗಿರಬೇಕೆಂದರೆ ಅವನು ಸದಾಕಾಲಕ್ಕೂ ಸಕಲದುಃಖ ದೂರನೆನ್ನುವುದು ಸುಸ್ಪಷ್ಟವಾಗುತ್ತದೆ

ಯದಸುಪ್ತಿಗತೋಽಪಿ ಹರಿಃ ಸುಖವಾನ್
ಸುಖರೂಪಿಣಮಾಹುರತೋ ನಿಗಮಾಃ ।

ಎಂದು ಶ್ರೀ ಮಧ್ವಾಚಾರ್ಯರು ದ್ವಾದಶಸ್ತೋತ್ರದಲ್ಲಿ ಈ ಯುಕ್ತಿಯನ್ನು ಹೇಳಿದ್ದಾರೆ.

ಇಲ್ಲಿ ಒಂದು ಪ್ರಶ್ನೆ ಬರಬಹುದು. ಮಹಾಲಕ್ಷ್ಮಿ ನಾರಾಯಣನಿಗೆ ಪ್ರಳಯದಲ್ಲಿ ನಿದ್ದೆ ಇಲ್ಲವೆಂದು ಇಲ್ಲಿ ಹೇಳುತ್ತಿದ್ದರೂ ಅವಳೆ ಅವನನ್ನು ನಿದ್ದೆಯಿಂದ ಎಚ್ಚರಿಸಿದವಳು ಎಂದು ಭಾಗವತ ಹೇಳಿದೆ–

ಸ್ವಸೃಷ್ಟಮಿದಮಾಪೀಯ ಶಯಾನಂ ಸಹ ಶಕ್ತಿಭಿಃ ।
ತದಂತೇ ಬೋಧಯಾಂಚಕ್ರುಸ್ತಲ್ಲಿಂಗೈಃ ಶ್ರುತಯಃ ಪರಂ ॥

ಯಥಾ ಶಯಾನಂ ಸಮ್ರಾಜಂ ವಂದಿನಸ್ತತ್ಪರಾಕ್ರಮೈಃ ।
ಪ್ರತ್ಯೂಷೇಽಭ್ಯೇತ್ಯ ಸುಶ್ಲೋಕೈರ್ಬೋಧಯಂತ್ಯನುಜೀವಿನಃ ॥

'ತಾನು ಸೃಜಿಸಿದ ಜಗತ್ತನ್ನು ತಾನೆ ನುಂಗಿ ತನ್ನ ಶಕ್ತಿಗಳೊಡನೆ ಸುಪ್ತಿಯಲ್ಲಿದ್ದ ಪರಮಾತ್ಮನನ್ನು ಪ್ರಳಯದ ಕೊನೆಯಲ್ಲಿ ವೇದಾಭಿಮಾನಿನಿ ರಮೆ ಹೊಗಳಿ ಎಬ್ಬಿಸಿದಳು. ನಿದ್ರಿಸುತ್ತಿರುವ ಸಮ್ರಾಟನನ್ನು ಪ್ರಾತಃಕಾಲದಲ್ಲಿ ಸ್ತುತಿಪಾಠಕರು ಅವನ ಪರಾಕ್ರಮಗಳನ್ನು ಬಣ್ಣಿಸುತ್ತಾ ಹೊಗಳಿ ಎಬ್ಬಿಸುವಂತೆ ಇದು.' ಹೀಗೆ

ನಾರಾಯಣನೂ ನಿದ್ದೆ ಮಾಡುತ್ತಿದ್ದುದರಿಂದಲೆ ಹಸಿವು ತೃಷೆ ಮುಂತಾದುವುಗಳ ಪೀಡೆ ಅವನಿಗಿರಲಿಲ್ಲವೆನ್ನಬಹುದಲ್ಲವೆ ?

ಇದಕ್ಕೆ ಸಮಾಧಾನ– ಶ್ರೀಹರಿ ಪ್ರಳಯದಲ್ಲಿ ಮಲಗಿದ್ದುದು ನಿದ್ದೆಗಾಗಿ ಅಲ್ಲ. ಅದು ಕೇವಲ ಲೀಲೆ–

ಆನೀದವಾತಂ ಸ್ವಧಯಾ ತದೇಕಂ –ಋಗ್ವೇದ

'ಪ್ರಳಯದಲ್ಲಿ ಶ್ರೀಹರಿಯೊಬ್ಬನೆ ಸ್ವಶಕ್ತಿಯಿಂದ ಎಚ್ಚೆತ್ತು ಸಕ್ರಿಯನಾಗಿದ್ದ.'

'ಅಜಮನಿದ್ರಮಸ್ವಪ್ನಂ' –ಮಾಂಡೂಕ ಉಪನಿಷತ್

'ಶ್ರೀ ಹರಿಗೆ ಜನನವಿಲ್ಲ, ನಿದ್ದೆಯಿಲ್ಲ, ಕನಸೂ ಇಲ್ಲ'.

ಸ್ವಪ್ನೇನ ಶಾರೀರಮಭಿಪ್ರಹತ್ಯ
ಅಸುಪ್ತಃ ಸುಪ್ತಾನಭಿಚಾಕಶೀತಿ ॥ –ಬೃಹದಾರಣ್ಯಕ.

'ಜೀವರಿಗೆ ಸುಪ್ತಿ ಇತ್ತು ತಾನು ಎಚ್ಚರದಿಂದಿದ್ದು ಸುಪ್ತರನ್ನು ನೋಡಿಕೊಳ್ಳುತ್ತಾನೆ.'

ಹೀಗೆ ನಿತ್ಯ ಪ್ರಬುದ್ಧನಾದ ಹರಿಗೆ ನಿದ್ದೆ ಇಲ್ಲ. ಅವನಿಗೆ ಸೃಷ್ಟಿ ಪ್ರಳಯಗಳೊಂದೆ. ಎರಡರಲ್ಲೂ ಎಚ್ಚತ್ತಿರುತ್ತಾನೆ ವಟಪತ್ರಶಾಯಿಯಾದ ಹರಿಯನ್ನು ವೇದಾಭಿಮಾನಿನಿ ರಮೆ ಎಬ್ಬಿಸಿದಳೆನ್ನುವುದು ಆಲಂಕಾರಿಕ ವರ್ಣನೆ ಮಾತ್ರ. 'ಸುಮ್ಮನೆಯಾಗಿ' ಸೃಷ್ಟಿ ವ್ಯಾಪಾರ ನಿಲ್ಲಿಸಿ ಶೂನ್ಯ ನಾಮಕನಾಗಿದ್ದ ಹರಿಯನ್ನು ಸೃಷ್ಟಿ ವ್ಯಾಪಾರೋನ್ಮುಖನಾಗೆಂದು ಮಹಾಲಕ್ಷ್ಮಿ ಪ್ರಾರ್ಥಿಸಿದಳಷ್ಟೆ. ಆದ್ದರಿಂದ ನಿದ್ರಾದೋಷವೂ ಹರಿಯಲ್ಲಿ ಇಲ್ಲ. ಹಸಿವು ತೃಷೆ ಮುಂತಾದುವೂ ಇಲ್ಲ. ಜೀವರಿಗೆ ನಿದ್ರಾದೋಷವಿದೆ. ನಿದ್ದೆಯ ಕಾಲದಲ್ಲಿ ಹಸಿವು ಮುಂತಾದುವುಗಳಿಂದ ಮುಕ್ತಿಯೂ ಇದೆ. ಆದರೆ ಅದು ತಾತ್ಕಾಲಿಕ, ಶ್ರೀಹರಿಯೊಬ್ಬನೆ ಸದಾ ದುಃಖದೂರ ಎನ್ನುತ್ತಿದ್ದಾಳೆ ಮಹಾಲಕ್ಷ್ಮಿ.

– ೫೯ –

**ರಕ್ಕಸರಸ್ತ್ರಗಳಿಂದ ಗಾಯವಡೆಯದ**
**ಅಕ್ಷಯಕಾಯದ ಸಿರಿಕೃಷ್ಣ ।**
**ತುಚ್ಛ ಯಮಭಟರ ಶಸ್ತ್ರಕಳುಕುವನಲ್ಲ**
**ಹುಚ್ಚ ನೀ ಹರಿಯ ಗುಣವರಿಯ ॥**

'ರಕ್ಕಸರ ಅಸ್ತ್ರಗಳಿಂದಲೂ ಗಾಯ ಹೊಂದದ ಅವಿನಾಶಿಯಾದ ಶರೀರ ಉಳ್ಳ ಶ್ರೀಕೃಷ್ಣ ಅಲ್ಪಶಕ್ತಿಯ ಯಮಭಟರ ಶಸ್ತ್ರಕ್ಕೆ ಅಳುಕುವನಲ್ಲವೆ? ಹೀಗೆ ಹೇಳುವ ಹುಚ್ಚ, ನೀನು ಹರಿಯ ಗುಣವನ್ನು ಅರಿಯ? ' ಎನ್ನುತ್ತಿದ್ದಾಳೆ ಮಹಾಲಕ್ಷ್ಮಿ.

ಕಾಲನೇಮಿಯಂಥ ಮಹಾ ಅಸುರರ ಅಸ್ತ್ರಗಳಿಂದಲೂ ನಾರಾಯಣ ಎಂದೂ ಗಾಯಗೊಂಡವನಲ್ಲ. ಹರಿವಂಶದಲ್ಲಿ ಕಾಲನೇಮಿಯನ್ನು ಕಾಲಯಮನಿಗೂ ಯಮನೆಂಬಂತೆ ವರ್ಣಿಸಿದುದುಂಟು–

ಯಮಃ ಸರ್ವಹರಸ್ತೇನ ದಂಡಪ್ರಹರಣೋ ರಣೇ ।
ಯಾಮ್ಯಾಮವಸ್ಥಾಂ ಸಮರೇ ನೀತಃ ಸ್ವಾಂ ದಿಶಮಾವಿಶತ್ ॥

ಎಲ್ಲರಿಗೂ 'ಯಮ'ನಾದ ಯಮನು ಯಮದಂಡವನ್ನು ಹಿಡಿದು ಯುದ್ಧಕ್ಕೆ ನಿಂತರೂ ಕಾಲನೇಮಿ ಅವನನ್ನು ಯಾಮ್ಯಾವಸ್ಥೆಗೆ ಮರಣಾವಸ್ಥೆಗೊಯ್ದುದರಿಂದ ಬೇಗನೆ ದಕ್ಷಿಣ ದಿಕ್ಕಿನಲ್ಲಿ ಎಲ್ಲೋ ಅಡಗಿ ಕುಳಿತನಂತೆ! ಹಿರಣ್ಯಕಶಿಪು ರಾವಣಾದಿಗಳೂ ಇದೇ ರೀತಿ ದೇವತೆಗಳಿಗೆ ಸಿಂಹಸ್ವಪ್ನದಂತಿದ್ದರು. ಹಿರಣ್ಯಕಶಿಪು ಲೋಕಸಂಚಾರ ಮಾಡುತ್ತ ಯಾವ ದಿಕ್ಕಿಗೆ ಹೋಗುವನೋ ಆ ದಿಕ್ಕಿಗೇ ತ್ರಿಸಂಧ್ಯೆಗಳಲ್ಲಿಯೂ ದೇವತೆಗಳು ಕೈ ಮುಗಿಯುತ್ತಿದ್ದರೆಂದು ಮಾಘಕವಿ ವರ್ಣಿಸಿದ್ದಾನೆ–

ಸ ಸಂಚರಿಷ್ಣುರ್ಭುವನಾಂತರೇಷು ಯಾಂ
ಯದೃಚ್ಛಯಾಽಶಿಶ್ರಿಯದಾಶ್ರಯಃ ಶ್ರಿಯಃ ।
ಅಕಾರಿ ತಸ್ಯೈ ಮುಕುಟೋಪಲ ಸ್ಖಲತ್–
ಕರೈಸ್ತ್ರಿಸಂಧ್ಯಂ ತ್ರಿದಶೈರ್ದಿಶೇ ನಮಃ ॥

ಇಂಥ ರಕ್ಕಸರನ್ನು ಲೀಲಾಜಾಲವಾಗಿ ಒರೆಸಿ ಹಾಕಿ ದೇವತೆಗಳಿಗೆ ಅವರ ಲೋಕಗಳನ್ನು ತಿರುಗಿ ಕೊಟ್ಟವ ನಾರಾಯಣ. ಅವನು ನರಕದಲ್ಲಿ ಯಮದೂತರ ಶಸ್ತ್ರಗಳಿಗೆ ಅಳುಕುವನೆ? ಕಾಲನೇಮಿಯೊಡನೆ ನಾರಾಯಣ ಯುದ್ಧಮಾಡಿದ ಸಂದರ್ಭವನ್ನು ಹರಿವಂಶ ವರ್ಣಿಸುತ್ತ ಹೀಗೆ ಹೇಳಿದೆ–

ಸ ಬಾಹುಶತಮುದ್ಯಮ್ಯ ಸರ್ವಾಸ್ತ್ರಗ್ರಹಣಂ ರಣೇ ।
ಕ್ರೋಧಾದ್ ದ್ವಿಗುಣರಕ್ತಾಕ್ಷೋ ವಿಷ್ಣುಂ ವಕ್ಷಸ್ಯತಾಡಯತ್ ॥

ದಾನವಾಶ್ಚಾಪಿ ಸಮರೇ ಮಯ ತಾರ ಪುರೋಗಮಾಃ ।
ಉದ್ಯತಾಯುಧನಿಸ್ತ್ರಿಂಶಾ ದೃಷ್ಟ್ವಾ ವಿಷ್ಣುಮಧಾದ್ರವನ್ ।

ಸ ತಾಡ್ಯಮಾನೋಽತಿಬಲೈರ್ದೈತ್ಯೈಃ ಸರ್ವಾಯುಧೋದ್ಯತೈಃ ।
ನ ಚಚಾಲ ಹರಿರ್ಯುದ್ಧೇಽಕಂಪ್ಯಮಾನ ಇವಾಚಲಃ ॥

'ನೂರಾರು ಕೈಗಳಿಂದ ಎಲ್ಲ ಬಗೆಯ ಆಯುಧಗಳನ್ನು ಹಿಡಿದು ಕೋಪದಿಂದ ದುಪ್ಪಟ್ಟು ಕೆಂಪಾಗಿದ್ದ ಕಣ್ಣಿಂದ ನೋಡುತ್ತ ನಾರಾಯಣನ ಎದೆಗೆ ಹೊಡೆದ, ಕಾಲನೇಮಿ. ಮಯ ತಾರಕ ಮುಂತಾದ ಇತರ ದಾನವರೂ ನಾರಾಯಣನ ಮೇಲೆ ದಾಳಿ ಮಾಡಿದರು. ಅತಿ ಬಲಿಷ್ಠರಾದ ದೈತ್ಯರು ಎಲ್ಲ ಆಯುಧಗಳಿಂದ ಹೀಗೆ ಹೊಡೆಯುತ್ತಿದ್ದರೂ ನಾರಾಯಣ ಬೆಟ್ಟದಂತೆ ವಿಚಲಿತನಾಗದೇ ನಿಂತಿದ್ದ!'

ಈ ರಕ್ಕಸರ ಅಸ್ತ್ರಗಳ ಮುಂದೆ ಯಮದೂತರ ಶಸ್ತ್ರಗಳೂ ಏನೂ ಅಲ್ಲ, ತುಚ್ಛ. ಅವುಗಳಿಗೆ ನಾರಾಯಣ ಬೆದರುವನೆ ?

ನಾರಾಯಣನ ಶರೀರ ಶುದ್ಧಸಚ್ಚಿದಾನಂದಮಯ. ಅಪ್ರಾಕೃತ. ಅಪ್ರಾಕೃತ ಶರೀರವನ್ನು ಯಾವ ಶಸ್ತ್ರವೂ ಛೇದಿಸಲಾರದು.

ನೈನಂ ಛಿಂದಂತಿ ಶಸ್ತ್ರಾಣಿ! –ಭಗವದ್ಗೀತಾ

ಇಂಥ ಅಪ್ರಾಕೃತ ಶರೀರದ ಮುಂದೆ ಪ್ರಾಕೃತ ಶಸ್ತ್ರವೆಲ್ಲವೂ ತುಚ್ಛ! ತುಚ್ಛ ಯಮಭಟರ ತುಚ್ಛ ಶಸ್ತ್ರಗಳಿಗೆ ಸರ್ವೋಚ್ಚನಾದ ನಾರಾಯಣ ಬೆದರುವನೆ? ಅವನ ಚರ್ಮದಲ್ಲಿ ಕೂಡ ಒಂದೇ ಒಂದು ಗಾಯವಾಗಲಾರದು.

ಅವ್ರಣಮಸ್ನಾವಿರಂ ಶುದ್ಧಮಪಾಪವಿದ್ಧಂ! –ಈಶೋಪನಿಷತ್

ವಾದಿರಾಜರು ಸರಸ ಭಾರತಿಯಲ್ಲಿ ಹೇಳಿದ್ದಾರೆ–

ಅಗಣ್ಯರಕ್ಷಃಶಸ್ತ್ರೇಭ್ಯೋಽಪ್ಯನಿರ್ಭಿಣ್ಣತ್ವಚೋ ಹರೇಃ ।
ಖಲ ಹೃಚ್ಛಲ್ಯ ಕೌಶಲ್ಯಮಕುತೋಭಯತಾಂ ತಥಾ । ಕಿಂ ಬ್ರೂಮಃ ?

ಆದ್ದರಿಂದಲೇ ಯಜ್ಞನಾಮಕನಾಗಿ ಇಂದ್ರಪದವಿಯನ್ನಾಳಿದ ನಾರಾಯಣ ಋಗ್ವೇದ ದಶಮ ಮಂಡಲದಲ್ಲಿ ತಾನು ಅಜೇಯನೆಂಬುದನ್ನು ಸ್ಪಷ್ಟ ಹೇಳಿದ್ದಾನೆ–

ಅಭೀದಮೇಕಮೇಕೋ ಅಸ್ಮಿ
ನಿಷ್ಷಾಳಭೀದ್ವಾ ಕಿಮು ತ್ರಯಃ ಕರಂತಿ ।
ಖಲೇ ನ ಪರ್ಷಾನ್ ಪ್ರತಿ ಹನ್ಮಿ ಭೂರಿ
ಕಿಂ ಮಾಂ ನಿಂದಂತಿ ಶತ್ರವೋಽನಿಂದ್ರಾಃ ॥

ಹರಿಕಥಾಮೃತಸಾರದಲ್ಲಿ ಇದರ ಭಾವಾನುವಾದ ಹೀಗೆ ಬಂದಿದೆ–

ದನುಜ ರಕ್ಕಸರೆಲ್ಲರಿವನೊಳು
ಮುನಿದು ಮಾಡುವುದೇನುಲೂಖಲ
ವನಿಕೆಗಳು ಧಾನ್ಯಗಳ ಹಣಿವಂದದಲಿ ಸಂಹರಿಪ ॥

'ಅಕ್ಷಯಕಾಯದ ಶ್ರೀಕೃಷ್ಣ' ಎಂದುದು ಅವತಾರದಲ್ಲಿಯೂ ನಾರಾಯಣ ಅಚ್ಛೇದ್ಯಾಭೇದ್ಯ ಅಪ್ರಾಕೃತ ಶರೀರಿ ಎನ್ನುವುದನ್ನು ಸೂಚಿಸುವುದಕ್ಕಾಗಿ.

ಶ್ರೀಕೃಷ್ಣ ನರಕಾಸುರನನ್ನು ವಧಿಸುವಾಗ ಆ ಅಸುರ ಶತಘ್ನೀ ಎಂಬ ಭಯಂಕರ ಶಸ್ತ್ರವನ್ನು ಪ್ರಯೋಗಿಸಿದ್ದ. ಚತುರ್ಮುಖ ಬ್ರಹ್ಮನು ಕೊಟ್ಟಿದ್ದ ಆ ಮಹಾಶಸ್ತ್ರವನ್ನೂ ಕೃಷ್ಣ ನುಂಗಿ ತಾನು ಅಚ್ಛೇದ್ಯ ಅಭೇದ್ಯನೆನ್ನುವುದನ್ನು ತೋರಿಸಿಕೊಟ್ಟ. ನರಕಾಸುರನ ಮಗ ಭಗದತ್ತನೂ ಮಹಾಭಾರತ ಯುದ್ಧದಲ್ಲಿ ಅರ್ಜುನನ ಮೇಲೆ ಅಮೋಘವಾದ ವೈಷ್ಣವಾಸ್ತ್ರವನ್ನು ಪ್ರಯೋಗಿಸಿದಾಗ ಕೃಷ್ಣನೆ ಎದೆಗೊಟ್ಟು ವೈಜಯಂತೀ ಮಾಲೆಯಂತೆ ಅದನ್ನು ಧರಿಸಿದ. ತಾನೆಂದೂ ಶತ್ರುಗಳಿಗೆ ವಶನಾಗುವವನಲ್ಲವೆಂದು ಧೃತರಾಷ್ಟ್ರನನ್ನು ಕೃಷ್ಣನೊಮ್ಮೆ ಎಚ್ಚರಿಸಿದ್ದ–

ರಾಜನ್ನೇತೇ ಯದಿ ಕ್ರುದ್ಧಾ ಮಾಂ ನಿಗೃಹ್ಣೀಯುರೋಜಸಾ ।
ಏತಾನ್ ಹಿ ಸರ್ವಾನ್ ಸಂರಬ್ಧಾನ್ ನಿಯಂತುಮಹಮುತ್ಸಹೇ ॥

ಧೃತರಾಷ್ಟ್ರನೂ ದುರ್ಯೋಧನನನ್ನು ಹೀಗೆ ಬೋಧಿಸಿದ–

ದುರ್ಗ್ರಾಹ್ಯಃ ಪಾಣಿನಾ ವಾಯುರ್ದುಃಸ್ಪರ್ಶಃ ಪಾಣಿನಾ ಶಶೀ ।
ದುರ್ಧರಾ ಪೃಥಿವೀ ಮೂರ್ಧ್ನಾ ದುರ್ಗ್ರಾಹ್ಯಃ ಕೇಶವೋ ಬಲಾತ್ ॥

ಬುದ್ಧಾವತಾರದಲ್ಲಿ ಆಗ ತಾನೇ ಹುಟ್ಟಿದ ಶಿಶು ರುದ್ರಾದಿ ಎಲ್ಲ ದೇವತೆಗಳ ಶಸ್ತ್ರಗಳನ್ನೂ ಲೀಲಾಜಾಲವಾಗಿ ನುಂಗಿತಂತೆ! ಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿ ಹೀಗೆ ಹೇಳಿದೆ–

ಸ ಜಾತಮಾತ್ರಃ ಶಿವಪೂರ್ವಕಾಣಾಂ
ಶೂಲಾದಿ ಹೇತೀರಖಿಲಾ ನಿಗೀರ್ಯ ।

ಇಂಥ ಮಹಾಬಲಿಷ್ಠನಾದ ಶ್ರೀಹರಿ ತುಚ್ಛ ಯಮಭಟರ ತುಚ್ಛ ಶಸ್ತ್ರಗಳಿಗೆ ಅಳುಕುವನಲ್ಲ? ಇದು ಮಹಾ ಆಶ್ಚರ್ಯ. ಹೀಗೆ ಹೇಳುವ ನೀನು ಹುಚ್ಚನೇ ಸರಿ. ಹುಚ್ಚ, ನೀ ಹರಿಯ ಗುಣವರಿಯೆಯ? ವಸ್ತುತಃ ಹುಚ್ಚನು ಈ ಹರಿಯ ಗುಣವರಿಯ. ಇದರಲ್ಲೇನು ಆಶ್ಚರ್ಯ? ಏಕೆಂದರೆ, 'ಹರಿ' ಎಂದರೆ ಯಮನೂ

ಸೇರಿದಂತೆ ಬ್ರಹ್ಮಾದಿ ಸಕಲ ದೇವತೆಗಳನ್ನೂ ಪ್ರಳಯಕಾಲದಲ್ಲಿ ಸಂಹರಿಸುವವನು, ನಾರಾಯಣ–

ಬ್ರಹ್ಮಾಣಮಿಂದ್ರಂ ರುದ್ರಂ ಚ ಯಮಂ ವರುಣಮೇವ ಚ ।
ನಿಹತ್ಯ ಹರತೇ ಯಸ್ಮಾತ್ ತಸ್ಮಾದ್ ಹರಿರಿಹೋಚ್ಯತೇ ॥

ಇಂಥ ನಾರಾಯಣ ಯಮನ ಭಟರ ಕೈಗೆ ವಶವಾಗುವನೆ ? ಈ 'ಹರಿ'ಯು ಎಂದರೆ ಯಮನ ಗುಣವನ್ನೂ ಈ ಹುಚ್ಚನು ಅರಿಯ !

ಭೀಷಾಸ್ಮಾದ್ ವಾತಃ ಪವತೇ ಭೀಷೋದೇತಿ ಸೂರ್ಯಃ ।
ಭೀಷಾಸ್ಮಾದ್ ಅಗ್ನಿಶ್ಚೇಂದ್ರಶ್ಚ ಮೃತ್ಯುರ್ಧಾವತಿ ಪಂಚಮಃ ॥

ವಾಯು, ಸೂರ್ಯ, ಅಗ್ನಿ, ಯಮ, ಇಂದ್ರ ಇವರೆಲ್ಲರೂ ನಾರಾಯಣನನ್ನು ಭಯಭಕ್ತಿಗಳಿಂದ ಸೇವಿಸುವವರು ಎಂದು ಉಪನಿಷತ್ತು ಹೇಳುತ್ತಿದೆ. ಇಂಥ ಯಮನ ಭಟರಿಗೆ ನಾರಾಯಣ ಸಿಕ್ಕುವನೆ ?

ಇಲ್ಲಿ ಒಂದು ಪ್ರಶ್ನೆ ಬರಬಹುದು, ಎಷ್ಟೇ ಬಲಿಷ್ಠನಾದ ವ್ಯಕ್ತಿಯೂ ಆಯುಷ್ಯ ತೀರಿದಾಗ ಸತ್ತು ಪಾಪದ ಫಲವನ್ನು ಅನುಭವಿಸಲು ಯಾತನಾ ಶರೀರದಿಂದ ನರಕವನ್ನು ಪ್ರವೇಶಿಸುತ್ತಾನೆ. ಅಲ್ಲಿ ಆ ಶರೀರವು ವೇದನೆಯನ್ನು ಅನುಭವಿಸಲೆಂದೆ ಇರುವುದರಿದ ತುಚ್ಛರಾದ ಯಮಭಟರು ಕೂಡ ತುಚ್ಛವಾದ ಶಸ್ತ್ರಗಳಿಂದಲೇ ಅಸಹನೀಯ ದುಃಖ ನೀಡಬಹುದು. ನರಕದಿಂದ ಹೊರಗೆ ದೇವ ಮಾನವ ದಾನವಾದಿ ಶರೀರಗಳು ಯಮಭಟರ ಶಸ್ತ್ರಗಳಿಗೆ ಬಲಿಯಾಗದಿದ್ದರೂ ನರಕದಲ್ಲಿ ಯಾತನಾ ಶರೀರ ನಾರಾಯಣನಿಗೆ ಬಂದರೆ ಯಮಭಟರ ಶಸ್ತ್ರಗಳನ್ನು ಇದಿರಿಸುವುದು ಅವನಿಗೆ ಶಕ್ಯವಾಗಲಾರದು

ಇದಕ್ಕೆ ಸಮಾಧಾನವೂ ಈ ನುಡಿಯಲ್ಲಿ ಬಂದಿದೆ– ರಕ್ಕಸರ ಅಸ್ತ್ರಗಳಿಂದಲೂ ಅತ್ಯಲ್ಪವಾದ ಗಾಯ ಹೊಂದದ ದೃಢಕಾಯದ ಕೃಷ್ಣನನ್ನು ಯಮಭಟರು ಪಾಶಗಳಿಂದ ಬಿಗಿದು ಒಯ್ಯುವುದು ಅಸಂಭಾವಿತ. ಏಕೆಂದರೆ ಶರೀರವು ರೋಗಾದಿಗಳಿಂದ ಜರ್ಜರಿತವಾದಾಗಲೆ ಮೃತ್ಯು ಜೀವನನ್ನು ಸೆಳೆಯುತ್ತಾನೆ. ಆರೋಗ್ಯವಂತನೂ ದೃಢಕಾಯನೂ ಆದ ವ್ಯಕ್ತಿಯನ್ನು ಮೃತ್ಯು ಸೆಳೆಯುವುದಿಲ್ಲ. ಸೆಳೆಯಲಾರ, ಅಂಥ ಕ್ರೂರ ಕಾರ್ಯವನ್ನು ಒಲ್ಲೆ ಎಂದು ಮೃತ್ಯು ಬ್ರಹ್ಮನಲ್ಲಿ ಬೇಡಿ ಕೋಟಿ ಗಟ್ಟಲೆ ವರ್ಷಗಳ ಕಾಲ ದೀರ್ಘತಪಸ್ಸು ಮಾಡಿ ಒಲಿಸಿಕೊಂಡು ಅನುಮತಿ ಪಡೆದುದು ಮಹಾಭಾರತದಲ್ಲಿ ಕಂಡುಬರುತ್ತದೆ–

'ತೇ ವ್ಯಾಧಯಃ ಪ್ರಾಣಿನಾಮಾತ್ಮಜಾತಾಃ
ತೇ ಮಾರಯಿಷ್ಯಂತಿ ನರಾನ್ ಗತಾಸೂನ್' ।
'ಲೋಕಪಾಲೋ ಯಮಶ್ಚೈವ ಸಹಾಯಾ ವ್ಯಾಧಯಶ್ಚ ತೇ' ॥

ವ್ಯಾಧಿಗಳು ಶರೀರವನ್ನು ಜರ್ಜರಿತಗೊಳಿಸಿದ ಬಳಿಕವೆ ಮೃತ್ಯು ಜೀವನನ್ನು ಸೆಳೆಯುವುದರಿಂದ ಅವನಿಗೆ ಇದು ಅಧರ್ಮಕಾರ್ಯವೆನಿಸುವುದಿಲ್ಲ. ಪ್ರಕೃತ ನಾರಾಯಣನಿಗೆ 'ರೋಗವನೀವ ವಾತಪಿತ್ತಶ್ಲೇಷ್ಮ' ಎಂದು ಮುಂತಾಗಿ ಹಿಂದೆ ಹೇಳಿದಂತೆ ವಾತಾದಿ ಪ್ರಕೋಪಜನ್ಯವಾದ ಯಾವ ನಿಜವ್ಯಾಧಿಯೂ ಇಲ್ಲ. ಆದರೂ ಆಗಂತು ವ್ಯಾಧಿ ಬರಬಾರದೆ ಎಂಬ ಸಂದೇಹಕ್ಕೂ ಅವಕಾಶವಿಲ್ಲ. ಆಗಂತು ವ್ಯಾಧಿಯ ಕಾರಣಗಳು ಚರಕ ಸಂಹಿತೆಯಲ್ಲಿ ಹೀಗೆ ಉಕ್ತವಾಗಿವೆ–

ಮುಖಾನಿ ತು ಖಲ್ವಾಗಂತೋರ್ನಖದಶನ
ಪತನಾಭಿಚಾರಾಭಿಶಾಪಾಭಿಷಂಗಾಭಿಘಾತ
ವಧ ಬಂಧ ಪೀಡನ ರಜ್ಜು ದಹನ
ಶಸ್ತ್ರಾಶನಿ ಭೂತೋಪಸರ್ಗಾದೀನಿ ॥

ಆದ್ದರಿಂದ ಶಸ್ತ್ರದಿಂದ ಶರೀರಚ್ಛೇದವಾಗುವುದೂ ಒಂದು ಆಗಂತು ವ್ಯಾಧಿಯೆ ಅದೂ ಬಾರದಿದ್ದರೆ ಆರೋಗ್ಯವಂತನನ್ನು ಮೃತ್ಯು ಸೆಳೆಯಲಾರ. ಯಾತನಾ ಶರೀರವನ್ನು ಕೊಡಲಾರ. ನಾರಾಯಣನಿಗೆ ಶಸ್ತ್ರಗಳು ಏನೂ ಮಾಡಲಾರವು ಎಂದ ಮೇಲೆ ಯಮಭಟರಿಗೆ ಆತ ಅಂಜುವನೇನು ? ಎನ್ನುತ್ತಿದ್ದಾಳೆ ಮಹಾಲಕ್ಷ್ಮಿ.

— ೬೦ —

**ಕಿಚ್ಚ ನುಂಗಿದನು ನಮ್ಮ ಶ್ರೀಕೃಷ್ಣನು**
**ತುಚ್ಛ ನರಕದೊಳು ಅನಲನಿಗೆ ।**
**ಬೆಚ್ಚುವನಲ್ಲ ಆದರಿಂದಿವಗೆ ನರಕ**
**ಮೆಚ್ಚುವರಲ್ಲ ಬುಧರೆಲ್ಲ ॥**

ನಮ್ಮ ಶ್ರೀಕೃಷ್ಣನು ಕಾಳ್ಗಿಚ್ಚನ್ನು ನುಂಗಿದನು. ತುಚ್ಛನಾದ ವಾದಿಯೆ, ನಿನ್ನ ತುಚ್ಛವಾದ ನರಕದಲ್ಲಿ ಕಿಚ್ಚಿಗೆ ಬೆಚ್ಚುವವನಲ್ಲ ನಮ್ಮ ಕೃಷ್ಣ. ಆದ್ದರಿಂದ ಅವನಿಗೆ ನರಕ ಒಪ್ಪದವರೇ ಎಲ್ಲ ಬುಧರೂ ಆಗಿದ್ದಾರೆ ಎನ್ನುತ್ತಿದ್ದಾಳೆ ಮಹಾಲಕ್ಷ್ಮಿ.

ಶ್ರೀಕೃಷ್ಣ ಕಾಳಿಯಮರ್ದನ ಮಾಡಿ ಸುರಕ್ಷಿತವಾಗಿ ಹಿಂತಿರುಗಿ ಬಂದಾಗ ತಾಯಿತಂದೆಗಳೂ ಎಲ್ಲ ಗೋಪಗೋಪಿಯರೂ ಆನಂದದಿಂದ ಅವನನ್ನು

ತಬ್ಬಿಕೊಂಡರು. ಆಗಲೆ ಸಂಜೆಯಾಗಿತ್ತು. ಆ ರಾತ್ರಿಯನ್ನು ಯಮುನಾ ತೀರದಲ್ಲಿಯೆ ಕಳೆಯುವುದೆಂದು ನಿಶ್ಚಯಿಸಿ ಎಲ್ಲರೂ ಅಲ್ಲಿಯೆ ಮಲಗಿದರು. ಕೃಷ್ಣನಿಗೇನೂ ಅಪಾಯವಾಗಲಿಲ್ಲವಲ್ಲ ಎಂದು ಆನಂದದಿಂದ ನಿಶ್ಚಿಂತರಾಗಿ ಅವರೆಲ್ಲ ನಿದ್ರಿಸುತ್ತಿದ್ದಾಗ ನಡುರಾತ್ರಿ ಕಾಳ್ಗಿಚ್ಚು ಸುತ್ತುವರಿಯಿತು. ಒಡನೆ ಎಚ್ಚರಗೊಂಡ ಎಲ್ಲ ಗೋಪ ಗೋಪಿಯರೂ ಗೋವುಗಳೂ ಕೃಷ್ಣನ ಬಳಿಗೆ ಧಾವಿಸಿ 'ಕೃಷ್ಣ, ಬೆಂಕಿ, ಬೆಂಕಿ!' ಎಂದರು. 'ಎಲ್ಲಿ ಬೆಂಕಿ?' ಎನ್ನುತ್ತಾನೆ ಕೃಷ್ಣ. ಕ್ಷಣದಲ್ಲಿ ಬೆಂಕಿ ಮಾಯವಾಗಿತ್ತು. ಎಲ್ಲರೂ ಎವೆಯಿಕ್ಕುವಷ್ಟರಲ್ಲಿ ಆ ಕಾಳ್ಗಿಚ್ಚನ್ನು ಕೃಷ್ಣ ನುಂಗಿದ್ದ.

ಪ್ರಲಂಬಾಸುರನೊಡನೆ ಬಲರಾಮ ದೀರ್ಘಕಾಲ ಹೋರಾಡಿದ. ಕೊನೆಗೆ ಅವನನ್ನು ಸಂಹರಿಸಿದ. ಈ ಹೋರಾಟವನ್ನು ವೀಕ್ಷಿಸುತ್ತಿದ್ದ ಗೊಲ್ಲರಿಗೆ ಗೋವುಗಳು ಕಾಡಿನಲ್ಲಿ ಮೇಯುತ್ತ ಬಲುದೂರ ಹೋದುದು ತಿಳಿಯಲಿಲ್ಲ. ಕೃಷ್ಣ ಎತ್ತರವಾದ ಮರವನ್ನೇರಿ ಎಲ್ಲ ಗೋವುಗಳನ್ನು ಹೆಸರು ಹಿಡಿದು ಕೂಗಿ ಕರೆದ. ಗೋವುಗಳು ಪ್ರತಿಧ್ವನಿ ಮಾಡಿದವು. ಎಲ್ಲ ಗೋವಳರು ಭಾಂಡೀರವನದಿಂದ ಮುಂಜಾಟವಿಗೆ ಹೋಗಿ ಆ ಗೋವುಗಳನ್ನು ಕಂಡು ಸಂತಸಗೊಂಡರು. ಅಷ್ಟರಲ್ಲಿ ಸುತ್ತಲೂ ಕಾಳ್ಗಿಚ್ಚು ಹಬ್ಬಿತ್ತು 'ಕೃಷ್ಣ ಕಾಪಾಡು' ಎಂದರು ಗೋವಳರು. ಮೃತ್ಯುಭಯದಿಂದ ಕಂಗಾಲಾದ ಸಜ್ಜನರು ಮುಕುಂದನನ್ನು ಬೇಡುವಂತೆ ಬೇಡಿದರು. ಆಗ ಕೃಷ್ಣ 'ಭಯಪಡಬೇಡಿ, ಒಂದು ಕ್ಷಣ ಎಲ್ಲರೂ ಕಣ್ಣು ಮುಚ್ಚಿ' ಎಂದು ಹೇಳಿ, ಒಡನೆ, 'ಈಗ ಕಣ್ಣು ತೆರೆದು ನೋಡಿ' ಎಂದನು. ಅಷ್ಟರಲ್ಲಿ ಎಲ್ಲಬೆಂಕಿಯನ್ನೂ ಕೃಷ್ಣ ನುಂಗಿದ್ದ.

'ದ್ವಿಧಾ ವನಾಗ್ನಿಪಾನೇನಾಪ್ಯದಗ್ಧರಸನಸ್ಯ'

ಎಂದು ಕೃಷ್ಣನ 'ಅಕುತೋಭಯತ್ವವನ್ನು' ವಾದಿರಾಜರು ಸರಸಭಾರತಿಯಲ್ಲಿ ವರ್ಣಿಸಿದ್ದಾರೆ. ಕಲ್ಪಲತೆಯಲ್ಲಿಯೂ,

'ನಿಪೀತಸ್ಫೀತವನವಹ್ನಿಶಿಖಯಾಪಿ ಸುಖಮನುಭವತಃ'

'ದೊಡ್ಡ ಕಾಳ್ಗಿಚ್ಚನ್ನು ಕುಡಿದೂ ಸುಖವನ್ನು ಅನುಭವಿಸುವವ ಶ್ರೀಕೃಷ್ಣ'

ಎಂದಿದ್ದಾರೆ. ಇಂಥ ಕೃಷ್ಣನಿಗೆ ನರಕ ಭಯವೆ? ನರಕದ ಅತಿ ದೊಡ್ಡ ಶಿಕ್ಷೆ ಅಗ್ನಿ ಶಿಕ್ಷೆ. ಆದರೆ ಅದಕ್ಕೆ ಕೃಷ್ಣ ಬೆಚ್ಚುವನೆ?

ನಾರಾಯಣನ ಶರೀರ ಶುದ್ಧ ಸಚ್ಚಿದಾನಂದಮಯ ಅಪ್ರಾಕೃತ. ಇಂಥ ಶರೀರವನ್ನು ಯಾವ ಬೆಂಕಿಯೂ ಸುಡಲಾರದು.

'ನೈನಂ ದಹತಿ ಪಾವಕಃ!' –ಭಗವದ್ಗೀತಾ

ಇಂಥ ಅಪ್ರಾಕೃತ ಶರೀರಿಗೆ ನರಕ ಶಿಕ್ಷೆ ಬಲು ತುಚ್ಛ. ಅದರ ಭಯವನ್ನು ಆರೋಪಿಸುವ ಪ್ರತಿವಾದಿ ಇನ್ನೂ ತುಚ್ಛ.

ಇಲ್ಲಿ ಹಿಂದಿನಂತೆಯೆ ಪ್ರಶ್ನೆ ಬರಬಹುದು– ಎಷ್ಟೆ ಬಲಿಷ್ಠನಾದ ವ್ಯಕ್ತಿಯೂ· ಆಯುಷ್ಯ ತೀರಿದಾಗ ಸತ್ತು ಪಾಪದ ಫಲವನ್ನು ಅನುಭವಿಸಲು ನರಕದಲ್ಲಿ ಯಾತನಾ ಶರೀರ ಹೊಂದುತ್ತಾನೆ. ಆ ಶರೀರ ವೇದನೆಯನ್ನು ಅನುಭವಿಸಲೆಂದೆ ಇರುವುದರಿಂದ ತುಚ್ಛವಾದ ನರಕದ ಬೆಂಕಿಯೂ ಅಸಹ್ಯ ದುಃಖ ಉಂಟು ಮಾಡಬಹುದು

ಇದಕ್ಕೆ ಸಮಾಧಾನವೂ ಹಿಂದಿನಂತೆಯೆ. ಕಾಳ್ಗಿಚ್ಚನ್ನೆ ನುಂಗುವ ದೃಢಕಾಯದ ಕೃಷ್ಣನನ್ನು ಮೃತ್ಯು ಸೆಳೆಯುವುದಾದರೂ ಎಂತು ? ಸಹಜ ಇಲ್ಲವೆ ಆಗುಂತಕ ವ್ಯಾಧಿಗಳಿಂದ ಶರೀರ ಜರ್ಜರಿತವಾಗಬೇಕು ತಾನೆ ? ಸಹಜವ್ಯಾಧಿ 'ರೋಗವನೀವ ವಾತಪಿತ್ತಶ್ಲೇಷ್ಮ' ಎಂದು ಹಿಂದೆ ಹೇಳಿದಂತೆ ಕೃಷ್ಣನಿಗೆ ಅಸಂಭಾವಿತ. ಆಗಂತುಕ ವ್ಯಾಧಿಯೂ 'ದಹನ ಶಸ್ತ್ರ ಅಶನಿ ಭೂತೋಪಸರ್ಗಾದೀನಿ' ಎಂಬಂತೆ ಶಸ್ತ್ರದಿಂದಲೊ ಅಗ್ನಿಯಿಂದಲೊ ಬರಬಹುದು. ಶಸ್ತ್ರವು ಕೃಷ್ಣನ ಶರೀರಕ್ಕೆ ತಾಕದೆಂದು ಹಿಂದೆಯೆ ಹೇಳಿದೆ. ಅಗ್ನಿಯನ್ನು ನುಂಗುವವನೆ ಕೃಷ್ಣನೆಂದ ಮೇಲೆ ಆ ವ್ಯಾಧಿಯೂ ಬರಲು ಶಕ್ಯವಿಲ್ಲ. ಆದ್ದರಿಂದ ಮೃತ್ಯು ಕೃಷ್ಣನನ್ನು ಸೆಳೆಯಲಾರ. ಯಾತನಾಶರೀರವನ್ನೂ ಕೊಡಲಾರ.

'ಅನಲನಿಗೆ ಬೆಚ್ಚುವನಲ್ಲ' ಎಂಬ ಮಾತಿನಿಂದ ಕೃಷ್ಣನಿಗೆ ಅಗ್ನಿಭಯ ಎಂದೂ ಇಲ್ಲ ಎನ್ನುತ್ತ ಅದಕ್ಕೆ 'ಕಿಚ್ಚ ನುಂಗಿದನು' ಎಂದು ಕಾರಣ ಕೊಡಲಾಗಿದೆ. ಕೃಷ್ಣ ಬೇರೆ ರೀತಿಯಿಂದ ಬೆಂಕಿಯನ್ನಾರಿಸದೆ ಎರಡು ಬಾರಿಯೂ ಅದನ್ನು ನುಂಗಿದನೇಕೆ ? ಇದು, 'ಬೆಂಕಿ ಎರಡು ಬಾರಿಯೂ ಸ್ವಜನ್ಮಸ್ಥಾನವಾದ ಕೃಷ್ಣನ ಬಾಯೊಳಗೇ ಹೋಗಿ ಸೇರಿತು' ಎಂಬುದನ್ನು ಸೂಚಿಸುತ್ತದೆ.

'ಸ್ವಜನ್ಮಭೂಮಿಂ ಶಿಖಿನಿ ಪ್ರವಿಷ್ಟೇ'

ಎಂದು ವಾದಿರಾಜರು ರುಕ್ಮಿಣೀಶ ವಿಜಯದಲ್ಲಿ ಇದನ್ನು ಸ್ಪಷ್ಟಗೊಳಿಸಿದ್ದಾರೆ. ಬೆಂಕಿಗೆ ಜನ್ಮ ಕೊಟ್ಟವ, ಆ ಬೆಂಕಿಗೇ ಬೆಚ್ಚುವನೆ ?

'ಬುಧರು ಕೃಷ್ಣನಿಗೆ ನರಕ ಮೆಚ್ಚುವವರಲ್ಲ' ಎಂಬ ಮಾತಿನಿಂದ ಭಾಗವತದಲ್ಲಿ ಹೇಳಿದ.

'ಯಥಾ ಹರಿಂ ಮೃತ್ಯುಭಯಾರ್ದಿತಾ ಜನಾಃ'

'ಮೃತ್ಯುಭೀತರಾದ ಸಜ್ಜನರು ಹರಿಯನ್ನು ಬೇಡುವಂತೆ ಕಾಳ್ಗಿಚ್ಚಿನಿಂದ ಭೀತರಾದ ಗೊಲ್ಲರು ಕೃಷ್ಣನನ್ನು ಮೊರೆಹೊಕ್ಕರು' ಎಂಬ ಮಾತಿನ ಇಂಗಿತವನ್ನು

ತೋರಿಸಲಾಗಿದೆ. ಕೃಷ್ಣ ಬೆಂಕಿಯನ್ನು ಲೀಲಾಜಾಲವಾಗಿ ನುಂಗಿ ಗೊಲ್ಲರನ್ನು ಕಾಪಾಡುವ ಕಾರ್ಯಮಾಡಿ ತಾನು ಇದೇ ರೀತಿ ಸಜ್ಜನರನ್ನು ಭಯಪಡಿಸುವ ಸಂಸಾರದ ಕಾಳ್ಗಿಚ್ಚನ್ನೂ ನುಂಗಿ ಅವರನ್ನು ಕಾಪಾಡುವವನೆಂಬುದನ್ನು ಸೂಚಿಸಿದ್ದಾನೆ. ನಾಶರಹಿತನಾದ ತಾನು ನಾಶದ ಅಂಚಿನಲ್ಲಿರುವ ಭಕ್ತರನ್ನು ಪಾರುಮಾಡುವೆನೆಂಬುದನ್ನು ಸೂಚಿಸಲು ಈ ಅಗ್ನಿಪಾನದಂಥ ಅಸಾಧ್ಯ ಕಾರ್ಯಮಾಡಿ ತೋರಿದ್ದಾನೆ. ಇದನ್ನು ರುಕ್ಮಿಣೀಶವಿಜಯದಲ್ಲಿ ವಾದಿರಾಜರು ಹೇಳುತ್ತಾರೆ–

ವಿನಾಶಶೂನ್ಯಸ್ಯ ಹಿ ಕಿಂ ನ ಕಾರ್ಯಂ ?
'ನಾಶರಹಿತನಿಗೆ ಅಸಾಧ್ಯ ಕಾರ್ಯವೇನಿದೆ ?'

ಹೀಗೆ 'ಬುಧರು' ಶ್ರೀಕೃಷ್ಣನ ಸಾಮರ್ಥ್ಯ ತಿಳಿಯಬಲ್ಲರು. ಅವರು ಅವನಿಗೆ ನರಕವನ್ನೆಂದೂ ಮೆಚ್ಚರು.

ಬಾಯಲ್ಲಿ ಬೆಂಕಿಗೆ ಜನ್ಮನೀಡಬೇಕೆಂದರೆ ಕೃಷ್ಣ ಅಸಂಗನಾಗಿರಲೆಬೇಕು. ಇಲ್ಲದಿದ್ದರೆ ಬಾಯಿ ಸುಟ್ಟು ಹೋದೀತು. ಇಂಥ ಅಸಂಗನಿಗೆ ಸಂಸಾರದ ಸಂಗವೆಲ್ಲಿ. ಇದನ್ನೂ ಕಲ್ಪಲತೆಯಲ್ಲಿ ವಾದಿರಾಜರು ಹೇಳುತ್ತಾರೆ–

ಯಸ್ಯ ಮುಖಾದಗ್ನಿರಭೂತ್ ತಸ್ಯ ಕುತೋ ಭವಭೀತಿರಸಂಗಸ್ಯ ?

ಆದ್ದರಿಂದ ಕೃಷ್ಣನಿಗೆ ನರಕವೆನ್ನುವ ಪ್ರತಿವಾದಿ ಬಲು ತುಚ್ಛ ಎನ್ನುತ್ತಿದ್ದಾಳೆ ಮಹಾಲಕ್ಷ್ಮಿ.

— ೬೧ —

**ಮನೆಯಲ್ಲಿ ಕ್ಷಮೆಯ ತಾಳ್ದ ವೀರ ಭಟ**
**ರಣರಂಗದಲ್ಲಿ ಕ್ಷಮಿಸುವನೆ ?**
**ಅಣುವಾಗಿ ನಮ್ಮ ಹಿತಕೆ ಮನದೊಳಗಿನ ಕೃಷ್ಣ**
**ಮುನಿವ ಕಾಲಕ್ಕೆ ಮಹತ್ತಾಹ ॥**

ಮನೆಯಲ್ಲಿ ಬಂಧುಗಳೊಡನೆ ವಾಸಮಾಡುವಾಗ ಸಹಜವಾಗಿ ಕ್ಷಮಾಶೀಲನಾಗಿ ವರ್ತಿಸುವ ವೀರಭಟನೆ ರಣರಂಗದಲ್ಲಿ ಶಸ್ತ್ರಹಿಡಿದು ಇದಿರಿಸಿದಾಗ ಕ್ಷಮೆ ತೋರುವನೇ ? ಹಾಗೆಯೆ ನಮ್ಮ ಹಿತಕ್ಕಾಗಿ ಅಣುವಾಗಿಯೆ ನಮ್ಮ ಮನಸ್ಸಿನಲ್ಲಿ ಇರುವ ಕೃಷ್ಣ ಮುನಿದುಕೊಳ್ಳುವ ಕಾಲ ಬಂದಾಗ ಮಹಾನ್ ಆಗುತ್ತಾನೆ ಎನ್ನುತ್ತಾಳೆ ಮಹಾಲಕ್ಷ್ಮಿ.

ಹಿಂದಿನ ನುಡಿಯಲ್ಲಿ ಕೃಷ್ಣನಿಗೆ ನರಕಯಾತನೆ ಅಸಂಭಾವಿತವೆನ್ನುತ್ತ, ಅವನಿಗೆ ನರಕದ ಯಾತನಾಶರೀರ ಬಂದರೆ ತಾನೆ ನರಕ ಯಾತನೆ ? ನರಕದ ಯಾತನಾ ಶರೀರವೂ ಈ ಲೋಕದಲ್ಲಿ ಮರಣ ಹೊಂದಿದವನಿಗೆ ತಾನೇ ? ಮರಣವೂ, ಶರೀರಕ್ಕೆ ಯಾವುದಾದರೊಂದು ನಿಜ ಅಥವಾ ಆಗಂತುಕ ರೋಗ ಬಂದರೆ ತಾನೆ ? ಕೃಷ್ಣನಿಗೆ ಯಾವ ರೋಗವೂ ಇಲ್ಲ, ತನ್ಮೂಲಕ ಮರಣವೂ ಇಲ್ಲ, ಮರಣಾನಂತರ ಬರಬಹುದಾದ ಯಾತನಾಶರೀರವೂ ಇಲ್ಲ, ಎಂದಮೇಲೆ ನರಕ ಯಾತನೆ ಹೇಗೆ ಸಂಭವಿಸೀತು ? ಎಂದು ಯುಕ್ತಿಯುಕ್ತವಾಗಿ ವಿಚಾರಮಾಡಲಾಗಿದೆ. ಈಗ ಈ ನುಡಿಯಲ್ಲಿ ಮಾನವನಾಗಿ ಜನಿಸಿದ ಕೃಷ್ಣನಿಗೆ ಮಾನವ ಸಹಜವಾದ ದೌರ್ಬಲ್ಯದಿಂದ ರೋಗಾದಿ ಸಂಭಾವಿತವೆ. ಏಕೆಂದರೆ ನರಕಾಸುರನೊಡನೆ ಹೋರಾಡುವಾಗ ಕೃಷ್ಣ ಅವನ ಶತಘ್ನೀ ಎಂಬ ಶಕ್ತ್ಯಾಯುಧವನ್ನು ನುಂಗಿ ಸ್ವಲ್ಪ ಕಾಲ ಅಸ್ವಸ್ಥನಾಗಿ ರಥದಲ್ಲಿ ಕುಳಿತುಬಿಟ್ಟ. ಆಗ ಸತ್ಯಭಾಮಾದೇವಿ ತಾನು ಕೃಷ್ಣನ ಶಾಂರ್ಗಧನುಸ್ಸನ್ನು ಕೈಗೆ ತೆಗೆದುಕೊಂಡು ನರಕಾಸುರನೊಡನೆ ಯುದ್ಧ ಮಾಡಿದ್ದಳು. ಆ ಶಕ್ತ್ಯಾಯುಧ ನರಕನಿಗೆ ಬ್ರಹ್ಮದೇವ ಕೊಟ್ಟಿದುದು. ಆದ್ದರಿಂದ ಶಸ್ತ್ರಭಯವೆಂದರೇನೆಂಬುದನ್ನೇ ಅರಿಯದಿದ್ದ ಪರಾಕ್ರಮಿಯಾದ ಕೃಷ್ಣನಿಗೂ ಅದು ಆಯಾಸ ಉಂಟುಮಾಡಿತು. ಆದ್ದರಿಂದ ವಾರ್ಧಕ್ಯ ಬಂದು ಮೈಯ ಶಕ್ತಿ ಕುಂದಿದಾಗ ಆಗಂತುಕ ರೋಗಾದಿಗಳಿಂದ ಕೃಷ್ಣ ಅಸು ನೀಗಿರಬಹುದು. ಆದ್ದರಿಂದಲೇ ಜರಾ ವ್ಯಾಧನ ಬಾಣಕ್ಕೆ ತುತ್ತಾಗಿ ಶರೀರತ್ಯಾಗ ಮಾಡಿದುದರ ವರ್ಣನೆ ಭಾಗವತದಲ್ಲಿ ಬರುತ್ತದೆ. ಇಂಥ ಕೃಷ್ಣನಿಗೆ ನರಕ ಹೇಗೆ ಅಸಂಭಾವಿತ ಎಂಬ ಪ್ರಶ್ನೆಗೆ ಸಮಾಧಾನ ಬಂದಿದೆ–

ಕೃಷ್ಣನಿಗೆ ಮಾನವ ಶರೀರದಿಂದ ಜನನ ಉಂಟಾಗಲೆ ಇಲ್ಲ, ಮಾನವನಂತೆ ಕಾಣುವ ಸಚ್ಚಿದಾನಂದಮಯ ಶರೀರದಿಂದ ಆತ ಪ್ರಾದುರ್ಭೂತನಾಗಿದ್ದನಷ್ಟೆ. ಕೃಷ್ಣ ತಾನೆ ಇದನ್ನು ಭಗವದ್ಗೀತೆಯಲ್ಲಿ ಹೇಳಿದ್ದಾನೆ–

ಅವಜಾನಂತಿ ಮಾಂ ಮೂಢಾ ಮಾನುಷೀಂ ತನುಮಾಶ್ರಿತಂ ।
ಪರಂ ಭಾವಮಜಾನಂತೋ ಮಮ ಭೂತಮಹೇಶ್ವರಂ ॥

'ಮನುಷ್ಯ ಶರೀರದಂತೆಯೆ ಕಾಣುವ ಶರೀರವನ್ನು ಧರಿಸಿದ ನನ್ನನ್ನು ಕಂಡು ತಾಮಸ ಪ್ರಕೃತಿಯ ಜನರು ಭ್ರಮಿಸಿ ನಿತ್ಯಗುಣಪರಿಪೂರ್ಣ ಉತ್ತಮ ಸಚ್ಚಿದಾನಂದಮಯವಾದ ನನ್ನ ಸ್ವರೂಪವನ್ನು ಅರಿಯಲಾರದೆ ನನ್ನನ್ನು ಸಾಮಾನ್ಯ ಮಾನವನೆಂದು ಅನಾದರಿಸುವರು'

ಶ್ರೀಕೃಷ್ಣ ಮನುಷ್ಯ ಶರೀರದಂತೆಯೇ ಕಾಣುವ ಶರೀರ ಧರಿಸಿ ಅಣುವಾಗಿ ಅಂದರೆ ಅಲ್ಪಶಕ್ತಿಉಳ್ಳ ಮಾನವನಾಗಿ, ಕಂಡುಬಂದುದು ನಮ್ಮ ಹಿತಕ್ಕಾಗಿ ಅಂದರೆ

ಉಪಾಸಕರ ಉಪಾಸನಾ ಸೌಲಭ್ಯಕ್ಕಾಗಿ, ಮಹತೋಮಹೀಯನಾದ ಅವನ ಅಪಾರ ಮಹಿಮೆಯನ್ನು ಅಲ್ಪಶಕ್ತಿಯುಳ್ಳ ಉಪಾಸಕರು ಮನಸ್ಸಿನಲ್ಲಿ ಚಿಂತಿಸಲಾರರು.

'ಸ್ಮೃತಿಕೀರ್ತನ ಪ್ರಣತಿಭಿರ್ವಿಮುಕ್ತಯೇ
ಸ್ವಜನಸ್ಯ ಯಾತ್ಯಯಮನೇಕರೂಪತಾಂ'

ಎಂಬಂತೆ ಶ್ರೀಹರಿಯ ಪ್ರಾದುರ್ಭಾವಗಳೆಲ್ಲ ಭಕ್ತರ ಮುಕ್ತಿಸಾಧನೆಗಾಗಿ ದಯೆಯಿಂದ ತೋರಿದ ಚಿನ್ಮಯರೂಪಗಳು. ಮಾನವನೆಂದು ತಿಳಿದು ತಾಮಸ ಜನರು ನರಕದುಃಖಾದಿ ದೋಷಗಳನ್ನಾರೋಪಿಸಿದರೆ ಅವನು ಕ್ಷಮಿಸಲಾರ.

ಭೀಷ್ಮದ್ರೋಣಾದಿಗಳು ದಿನ ಬೆಳಗಾದರೆ 'ಜಯೋಽಸ್ತು ಪಾಂಡುಪುತ್ರಾಣಾಂ' ಎಂದು ಮನೆಯಲ್ಲಿ ಪ್ರಾರ್ಥಿಸುತ್ತಿದ್ದವರು. ರಣರಂಗದಲ್ಲಿ ಮಾತ್ರ ಪಾಂಡವರಿಗೆ ಕಳವಳವನ್ನೆ ಉಂಟು ಮಾಡಿದರು. ಏಕೆಂದರೆ ಮನೆಯಲ್ಲಿ ಕ್ಷಮೆಯನ್ನು ತಾಳುವ ವೀರಭಟರೂ ರಣರಂಗದಲ್ಲಿ ಕ್ಷಮೆ ತೋರುವುದಿಲ್ಲ. ಅಲ್ಲಿ ಕ್ಷಮೆಗೆ ಅವಕಾಶವಿಲ್ಲ. ಪಾಂಡವರು, ಕೊನೆಗೆ, ಮನೆಯಲ್ಲಿ ಭೀಷ್ಮದ್ರೋಣರನ್ನು ಭೆಟ್ಟಿಮಾಡಿ ಅವರನ್ನು ಗೆಲ್ಲುವ ಉಪಾಯವನ್ನು ಅವರಿಂದಲೆ ತಿಳಿದು, ರಣರಂಗದಲ್ಲಿ ಅವರನ್ನು ಬೀಳಿಸಿದರು.

ವನವಾಸದಲ್ಲಿ ರಾಮಲಕ್ಷ್ಮಣರನ್ನು ವಿರಾಧನು ಅನಾಯಾಸವಾಗಿ ಎತ್ತಿಕೊಂಡು ತನ್ನ ಎರಡು ಹೆಗಲುಗಳ ಮೇಲಿರಿಸಿಕೊಂಡು ಓಡಿದ್ದನು. ಆದರೆ ಲಂಕೆಯ ಯುದ್ಧದಲ್ಲಿ ಲಕ್ಷ್ಮಣ ರಾವಣನ ಶಕ್ತ್ಯಾಯುಧದ ಏಟನ್ನು ತಾಳಲಾರದೆ ಮೂರ್ಛೆಬಿದ್ದಾಗ ಅವನನ್ನು ಸೆರೆಹಿಡಿದೊಯ್ಯಲು ಯತ್ನಿಸಿದ ರಾವಣನಿಗೆ ಸ್ವಲ್ಪವೂ ಅಲಾಡಿಸಲೂ ಆಗಲಿಲ್ಲವಂತೆ ! ಕೈಲಾಸ ಪರ್ವತವನ್ನೆತ್ತಿದ್ದ ಭುಜಪರಾಕ್ರಮಿ ರಾವಣ. ಆದರೂ ಮೂರ್ಛಿತನಾಗಿ ಬಿದ್ದಿದ್ದ ಲಕ್ಷ್ಮಣನನ್ನೆತ್ತಲು ಅವನಿಂದಾಗಲಿಲ್ಲ ! ಏಕೆಂದರೆ ಲಕ್ಷ್ಮಣನಾಗ ತನ್ನ ಮೂಲರೂಪವಾದ ಆದಿಶೇಷನನ್ನು ನೆನೆದು ಅವನ ಶಕ್ತಿಯನ್ನು ತನ್ನ ಶರೀರದಲ್ಲಿ ತಂದುಕೊಂಡಿದ್ದ. ಆದಿಶೇಷನ ಶಕ್ತಿ ಸಾಮಾನ್ಯವಲ್ಲ. ತನ್ನ ಸಾವಿರ ಹೆಡೆಗಳ ಮಧ್ಯದಲ್ಲಿ ಒಂದು ಹೆಡೆಯ ಮೇಲೆ ಎಲ್ಲ ಲೋಕಗಳನ್ನು ಸಾಸಿವೆ ಕಾಳಿನಂತೆ ಹೊರುವವನು ಆತ ಆದ್ದರಿಂದ ಲಕ್ಷ್ಮಣ ಮೇರು ಪರ್ವತದಂತೆ ಅಚಲನಾಗಿದ್ದ. ಹೀಗೆ ರಾವಣ ತನ್ನ ಪ್ರಯತ್ನದಲ್ಲಿ ಸೋತಾಗ ಹನುಮಂತನು ಎಳೆ ಮಗುವನ್ನು ತಾಯಿ ಎತ್ತಿಕೊಳ್ಳುವಂತೆ ಲಕ್ಷ್ಮಣನನ್ನೆತ್ತಿಕೊಂಡು ರಾಮನ ಬಳಿಗೆ ಬಂದ. ಆದ್ದರಿಂದ ಮನೆಯಲ್ಲಿ ಕ್ಷಮೆಯ ತಾಳುವ ವೀರಭಟ ರಣರಂಗದಲ್ಲಿ ಕ್ಷಮಿಸಲಾರ.

ಕೃಷ್ಣನು ನರಕಾಸುರನೊಡನೆ ಯುದ್ಧ ಮಾಡುತ್ತ ರಣರಂಗದಲ್ಲಿಯೇ ಆಯಾಸ ಗೊಂಡನಲ್ಲವೆ ? ಎಂಬ ಪ್ರಶ್ನೆ ಬರಬಹುದು. ಆದರೆ ಕೃಷ್ಣನಿಗೆ ರಣರಂಗ ರಣರಂಗವೇನಲ್ಲ. ಅವನಿಗೆ 'ಬ್ರಹ್ಮಾಂಡಂ ವರ ಮಂದಿರಂ' ಇಡಿ ಬ್ರಹ್ಮಾಂಡವೆ ಮನೆ.

'ಲಕ್ಷ್ಮೀರ್ಯಸ್ಯ ಪರಿಗ್ರಹಃ ಕಮಲಭೂಃ ಸೂನುಃ'

ಎಂಬಂತೆ ತನ್ನ ಮಗನಾದ ಬ್ರಹ್ಮದೇವನ ಶಕ್ತ್ಯಾಯುಧವನ್ನು ತನ್ನ ಇನ್ನೊಬ್ಬ ಮಗನಾದ ನರಕಾಸುರ ಎಸೆದನೆಂದು ಕೃಷ್ಣ ಕದನಕ್ಕೆ ಪುರಸ್ಕಾರ ಮಾಡಿದ. ಆಯಾಸಗೊಂಡವನಂತೆ ನಟಿಸಿದ. ವರಾಹರೂಪಿಯಾದ ಹರಿ ಹಿರಣ್ಯಾಕ್ಷನನ್ನು ಮಡುಹಿ ಭೂದೇವಿಯನ್ನು ಕೋರೆದಾಡೆಗಳಲ್ಲಿ ಎತ್ತಿಕೊಂಡು ಬಂದಾಗ ಅವಳ ಅಂಗ ಸ್ಪರ್ಶದ ಆನಂದೋದ್ರೇಕದಲ್ಲಿ ಹುಟ್ಟಿದ ಮಗನೆ ಈ ನರಕಾಸುರ. ಆದ್ದರಿಂದ ಈ ಯುದ್ಧ ಕೃಷ್ಣನಿಗೊಂದು ಮನೆ ಜಗಳ.

ಯಶೋದೆ ಕರುಗಳನ್ನು ಕಟ್ಟುವ ಹಗ್ಗದಿಂದಲೆ ಕೃಷ್ಣನನ್ನು ಒರಳಿಗೆ ಕಟ್ಟಿ ಹಾಕಿದ್ದಳು. ಆದರೆ ಸಂಧಾನಕ್ಕಾಗಿ ಬಂದ ಕೃಷ್ಣನನ್ನು ಕಟ್ಟಿಹಾಕಲು ದುರ್ಯೋಧನ ಯತ್ನಿಸಿದಾಗ ಕೃಷ್ಣ ವಿಶ್ವರೂಪ ತೋರಿ ಎಲ್ಲರನ್ನೂ ದಂಗುಬಡಿಸಿದ !

ಇಂಥ ಕೃಷ್ಣನನ್ನು ಯಮದೂತರು ಕಟ್ಟಿಕೊಂಡೊಯ್ಯಲು ಪ್ರಯತ್ನಿಸಿದರೆ ಅದು ಸಾಧ್ಯವಾದೀತೇ ? ನರಕಯಾತನೆಯನ್ನು ಅವನಿಗೆ ಅವರು ಕೊಡಬಲ್ಲರೆ ? ಮುನಿವ ಕಾಲ ಬಂದರೆ ಆಗಲೂ ಅವನು ಅಣುವಾಗಿರಲಾರ. ಮಹತ್ತಾಗುತ್ತಾನೆ.

ವಾದಿರಾಜರು ಕಲ್ಪಲತೆಯಲ್ಲಿ ಹೇಳಿದ್ದಾರೆ–

ಕ್ವಚಿತ್ ಸ್ವಮಹಿಮ್ನಾ ಸ್ವಕಾರ್ಯಾರ್ಥಮಣುತರಮಪಿ
ಯಶೋದಾದಿ ಯಶೋದಾಯಕಂ ರೂಪಂ ಬಿಭ್ರದಸೌ
ಕಥಮದಭ್ರದುಃಖಾನುಭವಾಯ ತದ್ ಬಿಭ್ಯಯಾತ್ ?
ಪ್ರತ್ಯುತ ರಾವಣೇನಾಕೃಷ್ಯಮಾಣೋ ಲಕ್ಷ್ಮಣಃ ಸ್ವಶರೀರ
ಗೌರವಮಿವ ಮಹತ್ವಮೇವಾವಹೇತ್ । ಕಥಮನ್ಯಥಾ
ಸದುಷ್ಟಚತುಷ್ಟಯೋ ಧೃತರಾಷ್ಟ್ರಸುತೋ
ಬಂಧನೇಚ್ಛುರಪಿ ತಂ ನ ಬಬಂಧ ?

'ಕೆಲವೆಡೆ ಕೃಷ್ಣ ತನ್ನ ಅಚಿಂತ್ಯ ಶಕ್ತಿಯಿಂದ, ತನ್ನ ಕಾರ್ಯ ನೆರವೇರಿಸುವ ಉದ್ದೇಶದಿಂದ ಯಶೋದೆ ಮುಂತಾದವರಿಗೆ 'ಶ್ರೀಕೃಷ್ಣನನ್ನು ಕಟ್ಟಿಹಾಕಿದ ಧೀರೆ' ಎಂದು ಮುಂತಾಗಿ ಕೀರ್ತಿ ತರುವಂಥ ಅಲ್ಪ ಮಾನವ ರೂಪವನ್ನು ಧರಿಸಿದರೂ ನರಕ ದುಃಖದಂಥ ಮಹಾದುಃಖ ಅನುಭವಿಸುವ ಸಂದರ್ಭ ಒದಗುವಂತಿದ್ದರೆ

ಆಗಲೂ ಅವನೇಕೆ ಅಂಥ ರೂಪ ಧರಿಸಿಯಾನು ? ರಾವಣನೆಳೆವಾಗ ಲಕ್ಷ್ಮಣ ತನ್ನ ಶರೀರದಲ್ಲಿ ಬೆಟ್ಟದಷ್ಟು ಭಾರ ತಂದುಕೊಂಡಂತೆ ಕೃಷ್ಣನೂ ಶತ್ರುಗಳ ಮುಂದೆ ಅಪಾರ ಸಾಮರ್ಥ್ಯವನ್ನೆ ತೋರಿಯಾನು. ಇಲ್ಲದಿದ್ದರೆ ಕರ್ಣ ದುಃಶಾಸನ ಶಕುನಿ ಜಯದ್ರಥರೆಂಬ ದುಷ್ಟಚತುಷ್ಟಯರಿಂದೊಡಗೂಡಿದ್ದ ದುರ್ಯೋಧನ ಕೃಷ್ಣನನ್ನು ಕಟ್ಟಲು ಬಯಸಿದರೂ ಅವನೇಕೆ ಅದರಲ್ಲಿ ಯಶಸ್ವಿಯಾಗಲಿಲ್ಲ ?'

ಯಶೋದಾದಿಗಳ ಭಕ್ತಿಗೆ ವಶನಾಗುವವ ಕೃಷ್ಣ ಹಾಗೇ ಭಕ್ತಿಪಾಶದಿಂದ ಕಟ್ಟಿದವರನ್ನು ಸಂಸಾರಪಾಶದಿಂದ ಬಿಡಿಸುತ್ತಾನೆ. ಬಿಟ್ಟವರನ್ನು ಕಟ್ಟಿಹಾಕುತ್ತಾನೆ. ಇದು ಅವನ ಸ್ವಭಾವ

'ಮನೆಯಲ್ಲಿ ಕ್ಷಮೆಯ ತಾಳದ ವೀರಭಟ' ಎಂದೂ ಒಂದು ಪಾಠವಿದೆ. ಆಗ, ವೀರಭಟನನ್ನು ಮನೆಯಲ್ಲಿ ಅವನ ಪ್ರೀತಿಯ ಬಂಧುವರ್ಗದವರು ಎಷ್ಟು ಹಿಂಸೆ ಮಾಡಿದರೂ ಆ ಎಲ್ಲ ದುಃಖವನ್ನೂ ಅವನು ನುಂಗಿಕೊಂಡು ಸಹನೆಯಿಂದಿರುತ್ತಾನೆ. ಅಂಥವನೆ ರಣರಂಗದಲ್ಲಿ ಒಂದಿಷ್ಟೂ ಕ್ಷಮೆ ತೋರುವುದಿಲ್ಲ ಎಂದಮೇಲೆ ಮನೆಯಲ್ಲಿಯೂ ಕ್ಷಮೆತಾಳದ ವೀರಭಟ ರಣರಂಗದಲ್ಲಿ ಕ್ಷಮಿಸಿಯಾನೆ ? ಕೃಷ್ಣ ಯಾವ ಕಾಲದಲ್ಲಿಯೂ ದುಃಖ ಲೇಶವನ್ನೂ ಅನುಭವಿಸದವನು, ನರಕಾಸುರನ ಶಕ್ತ್ಯಾಯುಧವನ್ನು ನುಂಗಿದಾಗಲೂ ಆಯಾಸವನ್ನು ನಟಿಸಿದನೆ ಹೊರತು ವಾಸ್ತವವಾಗಿ ಒಂದಿಷ್ಟೂ ದುಃಖ ಅನುಭವಿಸಲಿಲ್ಲ. ಅಂಥವನು ನರಕ ದುಃಖ ಅನುಭವಿಸಲು ಬೇಕೆಂದೆ ಅಲ್ಪ ಜೀವನಂತೆ ಯಾತನಾ ಶರೀರ ಧರಿಸಿ ದುಃಖ ಅನುಭವಿಸುವನೇ ? ಅವನು ಅಣುವಾಗಿ,

'ಸ್ಮೇರಾನನಂ ಸ್ಮರತಿ ಗೋಪವಧೂ ಕಿಶೋರಂ'

ಎಂಬಂತೆ ಬಾಲಗೋಪಾಲನಾಗಿ ಲೀಲೆ ತೋರಿದುದು,

'ಮಹಾಂತೋ ಹಿ ಕಥಾಂ ಕರ್ತುಂ ಸಂಚರಂತಿ ತಥಾ ತಥಾ'

—ಯುಕ್ತಿ ಮಲ್ಲಿಕಾ

'ಮಹಾತ್ಮರು ತಮ್ಮ ಬಗ್ಗೆ ರಮ್ಯವಾದ ಚರಿತ್ರೆ ನಿರ್ಮಾಣ ಮಾಡುವುದಕ್ಕೆಂದೆ ಹೇಗೆ ಹೇಗೋ ವರ್ತಿಸುತ್ತಾರೆ' ಎಂಬಂತೆಯೆ ಎಂದು ತಿಳಿಯಬೇಕು

ಕೃಷ್ಣನು ಮಹತೋ ಮಹೀಯನಾದರೂ ಅಣುವಾಗಿ ನಮ್ಮ ಹೃದಯದಲ್ಲಿ ಕುಳಿತಿರುವುದು ಅಂತರ್ಯಾಮಿಯಾಗಿ ಬುದ್ಧಿ ಪ್ರೇರಕನಾಗಿ ನಮ್ಮನ್ನು ಸನ್ಮಾರ್ಗದಲ್ಲಿ ಮುನ್ನಡೆಸುವುದಕ್ಕಾಗಿ, ನಮ್ಮ ಹಿತಕ್ಕಾಗಿ. ಅವನಲ್ಲಿ ದುಃಖಾದಿ ದೋಷಾರೋಪಣ ಮಾಡಿ ಅನಾದರ ಮಾಡಿದರೆ ಕಾಲಕ್ಕೆ ಅಂದರೆ ಆ ದ್ವೇಷಸಾಧನೆ

ಪೂರ್ತಿಯಾಗುವ ಕಾಲ ಬಂದಾಗ ಅವನು ಮುನಿವ ಮುನಿವ ಕಾಲಕ್ಕೆ ಮಹತ್ವಾಗಿ ತನ್ನ ಸಾಮರ್ಥ್ಯ ತೋರುವ, ಇಹಪರಗಳೆರಡರಲ್ಲಿಯೂ ಶಿಕ್ಷೆ ನೀಡುವ. ಆದ್ದರಿಂದಲೇ ಆತ 'ಕೃಷ್ಣ' ನೆನಿಸಿದ್ದಾನೆ–

ಕೃಷಿರ್ಭೂರ್ವಾಚಕಃ ಶಬ್ದೋ ಣಶ್ಚ ನಿರ್ವೃತಿ ವಾಚಕಃ ।

ಕೃಷ್–ಭೂ, ಅಂದರೆ ಪೂರ್ಣನಾದವನು. ಣ–ಸುಖ. ಪೂರ್ಣನೂ ಸುಖ ರೂಪನೂ ಆದವನು ಅಂದರೆ ಪೂರ್ಣಾನಂದ ಸ್ವರೂಪನು. ಅಂಥವನಲ್ಲಿ ದ್ವೇಷಿಗಳು ದುಃಖವನ್ನಾರೋಪಿಸಿದರೆ ತಾನು ಮಹತ್ವಾಗಿ ಅವರನ್ನು ನಿರ್ದಯವಾಗಿ ತಮಸ್ಸಿಗೆ ಕರ್ಷಣ ಮಾಡುತ್ತಾನೆ. 'ಕೃಷ್ಣ' ನೆನಿಸುತ್ತಾನೆ. ಅಣುವಾಗಿ ಭಕ್ತರನ್ನು ದಯೆಯಿಂದ ತನ್ನೆಡೆಗೆ ಆಕರ್ಷಣ ಮಾಡಿಯೂ 'ಕೃಷ್ಣ' ನೆನಿಸುತ್ತಾನೆ, ಎನ್ನುತ್ತಾಳೆ ಮಹಾಲಕ್ಷ್ಮಿ.

– ೬೨ –

**ತಾಯ ಪೊಟ್ಟೆಯಿಂದ ಮೂಲರೂಪವ ತೋರಿ**
**ಆಯುಧ ಸಹಿತ ಪೊರವಂಟ ।**
**ನ್ಯಾಯ ಕೋವಿದರು ಪುಟ್ಟಿದನೆಂಬರೆ**
**ಬಾಯಿಗೆ ಬಂದಂತೆ ಬೊಗಳದಿರು ॥**

ಶ್ರೀಕೃಷ್ಣ ತಾಯ ಹೊಟ್ಟೆಯಿಂದ ಹುಟ್ಟಿಬರಲಿಲ್ಲ. ನವಮಾಸ ಹೊಟ್ಟೆಯಲ್ಲಿ ಕುಳಿತಿದ್ದು ಕೊನೆಗೆ ಹೊರಗೆ ಹೊರಟುಬಂದನಷ್ಟೇ. ಏಕೆಂದರೆ ಬರುವಾಗ ಮೂಲರೂಪವನ್ನು ತಾಯಿತಂದೆಗಳಿಗೆ ತೋರಿ ಆಯುಧ ಸಹಿತನಾಗಿಯೇ ಹೊರಟು ಬಂದ. ನ್ಯಾಯಬಲ್ಲವರು ಇಂಥ ಕೃಷ್ಣನನ್ನು ಹುಟ್ಟಿದನೆನ್ನುವರೆ ? ಆದ್ದರಿಂದ ಎಲೆ ವಾದಿಯೇ, ವ್ಯರ್ಥವಾಗಿ ಬಾಯಿಗೆ ಬಂದಂತೆ ಬೊಗಳದಿರು' ಎನ್ನುತ್ತಿದ್ದಾಳೆ ಮಹಾಲಕ್ಷ್ಮಿ.

ಶ್ರೀಕೃಷ್ಣ ಮೂಲರೂಪ ತೋರಿ ಆಯುಧ ಸಹಿತ ಹೊರಟು ಬಂದುದನ್ನು 'ದೇವಕಿಯ ಗರ್ಭದಲಿ ದೇವನವತರಿಸಿದ ಭಾವವನು(ನುಡಿ೪೨)' ಎಂಬಲ್ಲಿ ಹೇಳಿಯಾಗಿದೆ, ನಿಜ. ಆದರೂ ಪುನರುಕ್ತಿ ಇಲ್ಲ. ಏಕೆಂದರೆ ಅಲ್ಲಿ ಹಸಿವು, ತೃಷೆ, ಜರೆ, ಮರಣ, ರೋಗ ರುಜಿನಗಳು ನಾರಾಯಣನಿಗೆ ಇಲ್ಲವೆನ್ನುವ ಸಂದರ್ಭ. ಆ ಎಲ್ಲ ದುಃಖಗಳಿಗೆ ಮೂಲಕಾರಣವಾಗುವಂಥ ಪ್ರಾಕೃತ ಶರೀರದಿಂದ ಜನನ ಇಲ್ಲ ಎಂದು ಮಾತ್ರ ಹೇಳಿದೆ. ಇಲ್ಲಿ ಜನನಕ್ಕೆ ಪೂರ್ವಭಾವಿಯಾಗಿ ಅವಶ್ಯ ಉಂಟಾಗುವ ಗರ್ಭವಾಸದುಃಖ ಇಲ್ಲ ಎನ್ನಲಾಗುತ್ತಿದೆ. ಕೃಷ್ಣನಿಗೆ ನರಕವಾಸ ದುಃಖವಿಲ್ಲ ಎಂದು ಇಷ್ಟರವರೆಗೆ ಯುಕ್ತಿ ಯುಕ್ತವಾಗಿ ಸಾಧಿಸಿರುವುದರಿಂದ ಈಗ ನರಕವಾಸಕ್ಕೆ

ಸದೃಶವಾದ ಗರ್ಭವಾಸ ದುಃಖವೂ ಇಲ್ಲ ಎನ್ನಲು ಇದು ತಕ್ಕ ಸಂದರ್ಭ. ಆ ವಿಷ್ಣು ಗರ್ಭದೊಳಗಡಗುವನೆ(ನುಡಿ ೪೩), ಜನನಿ ಜಠರವು ಒಳಗೊಂಬುದೆ (ನುಡಿ ೪೪) ಎಂದು ಹಿಂದೆ ಬ್ರಹ್ಮಾಂಡಕ್ಕಿಂತ ದೊಡ್ಡ ಗಾತ್ರದ ವಿಷ್ಣುವನ್ನು ಒಳಗೊಳ್ಳುವಂಥ ಗರ್ಭ ಒಂದಿಲ್ಲವೆಂಬ ಯುಕ್ತಿಯಿಂದ ಗರ್ಭವಾಸ ಶಕ್ಯವಿಲ್ಲ ಎಂದಿದ್ದರೆ ಈಗ ಬೇರೆ ಯುಕ್ತಿಗಳಿಂದ ಅದನ್ನು ಸಾಧಿಸಲಾಗುತ್ತಿದೆ.

ಕೃಷ್ಣನಿಗೆ ಗರ್ಭವಾಸ ದುಃಖವಿದೆ ಎಂದು ನ್ಯಾಯಕೋವಿದರು ಹೇಳಲಾರರು. ಹೇಳಿದರೆ ಪೂರ್ವೋಕ್ತ ನ್ಯಾಯವಿರೋಧ ಅಪರಿಹಾರ್ಯ. ಏಕೆಂದರೆ ಹಿಂದೆ 'ಜೀವಂತರಿಗೆ ನರಕದಲಿ ನೋವನೀವನೆ'(ನುಡಿ೫೬) ಎಂಬಲ್ಲಿ ನರಕವಾಸ ದುಃಖಾನುಭವಕ್ಕೆ ಒಂದು ಯಾತನಾಶರೀರ ಬರಲೇಬೇಕಾಗುತ್ತದೆ ಎಂದಿದೆ. ಅದೇ ನ್ಯಾಯದಿಂದ ಇಲ್ಲಿ ಗರ್ಭವಾಸ ದುಃಖಾನುಭವಕ್ಕೂ ಒಂದು ಪ್ರಾಕೃತ ಶಿಶುಶರೀರ ಬರಲೇಬೇಕಾಗುತ್ತದೆ. ಕೃಷ್ಣನಿಗೆ ಅದು ಬರಲಿಲ್ಲ. ಆತ ಆಯುಧ ಸಹಿತ ಮೂಲರೂಪದಿಂದಲೇ ಗರ್ಭದಿಂದ ಹೊರಬಂದುದು ಇದಕ್ಕೆ ಸಾಕ್ಷಿ.

ಹಿಂದೆ 'ಅಣುವಾಗಿ ನಮ್ಮ ಹಿತಕೆ' ಎಂಬಲ್ಲಿ ಕೃಷ್ಣ ಸಣ್ಣ ಮಾನವಶಿಶುವಿನ ಆಕಾರ ತಳೆದುದು ಯಶೋದಾದಿಗಳಿಗೆ ಯಶೋದಾಯಕವಾದ ಲೀಲೆ ಎಂದು ಹೇಳಿದಂತೆ ಅದೇ ನ್ಯಾಯದಿಂದ ಕೃಷ್ಣ ದೇವಕಿಯು ಗರ್ಭದಲ್ಲಿದ್ದುದೂ ದೇವಕೀ ವಸುದೇವರಿಗೆ ಯಶೋದಾಯಕವೆನ್ನಬೇಕು. ಏಕೆಂದರೆ ಗರ್ಭದಿಂದ ಆಯುಧ ಸಹಿತನಾಗಿ ಮೂಲರೂಪದಿಂದಲೇ ಹೊರಬಂದ !

'ಮನೆಯಲ್ಲಿ ಕ್ಷಮೆ ತಾಳ್ದ' ಎಂಬಲ್ಲಿ ವೀರಭಟನು ಮನೆಯಲ್ಲಿರುವಾಗ ಎಷ್ಟು ಲಘುವಾಗಿ ಅವನೆದುರಿಗೆ ಮಾತನಾಡಿದರೂ ಕ್ಷಮಿಸಿಯಾನು. ಆಯುಧ ಹಿಡಿದು ರಣರಂಗಕ್ಕೆ ಅಡಿಯಿಟ್ಟಾಗಲೂ 'ನೀನು ಎಳೆಗೂಸು' ಎಂದು ಹೇಳಿದರೆ ಆತ ಕ್ಷಮಿಸುವನೆ ? ಎಂದು ಹೇಳುವ ಅಭಿಪ್ರಾಯವಿದೆ. ಈ ನುಡಿಯಲ್ಲಿ ಅದನ್ನೇ ಸ್ಪಷ್ಟವಾಗಿ 'ಆಯುಧ ಹಿಡಿದು ಗರ್ಭದಿಂದ ಹೊರಗ ಬಂದಿರುವ ಕೃಷ್ಣನನ್ನು' ಗರ್ಭದಲ್ಲಿ ಹುಟ್ಟಿಬಂದ ಎಳೆಗೂಸು ಎಂದರೆ ಆತ ಕ್ಷಮಿಸುವನೆ ?' ಎನ್ನುತ್ತ ಪೂರ್ವೋಕ್ತ ನ್ಯಾಯವಿರೋಧವನ್ನೇ ತೋರಿಸಲಾಗಿದೆ.

'ಕೃಷ್ಣನ ಶರೀರ ದೇವಕಿಯು ಗರ್ಭದಲ್ಲಿ ಹುಟ್ಟಿದ್ದರೆ ಆಯುಧವೂ ಹುಟ್ಟಿತೆನ್ನಬೇಕು. ಎರಡೂ ಜೊತೆಯಾಗಿ ಗರ್ಭದಿಂದ ಹೊರಗೆ ಬಂದಿರುವಾಗ ಶರೀರ ಮಾತ್ರವೇ ಹುಟ್ಟಿತು ಎನ್ನುವುದು ಅರ್ಧಜರತೀಯ ನ್ಯಾಯವಾಗುವುದು. ಅಂದರೆ ಒಂದು ಹೆಣ್ಣು ಕೋಳಿಯನ್ನು ತಂದು ಅರ್ಧಭಾಗ ಕೊಯ್ದು ಅಡಿಗೆ

ಮನೆಗೆ ಕಳಿಸುವುದು ಇನ್ನೊಂದು ಅರ್ಧಭಾಗವನ್ನು ಮೊಟ್ಟೆ ಇಡಲೆಂದು ಹಾಗೇ ಇಟ್ಟಿರುವುದು–

'ಅರ್ಧಂ ಪಾಕಾಯ, ಅರ್ಧಂ ಪ್ರಸವಾಯ'

ಎನ್ನುವುದು ಹಾಸ್ಯಾಸ್ಪದವಾಗುವುದಿಲ್ಲವೆ ? ಹಾಗೇ ಇದು. ನ್ಯಾಯಕೋವಿದರು ಒಪ್ಪಲಾರರು. ಇದನ್ನು ವಾದಿರಾಜರು ರುಕ್ಮಿಣೀಶ ವಿಜಯದಲ್ಲಿಯೂ ಹೇಳಿದ್ದಾರೆ–

ಯದೀಹ ಜಾತೋ ವಸುದೇವವೀರ್ಯಾತ್
ತದಾ ಕುತಸ್ತಸ್ಯ ವಿಭೂಷಣಾನಿ ।
ವರಾಂಬರಂ ಕೌಸ್ತುಭ ರತ್ನಮುದ್ಯತ್
ಸುದರ್ಶನಂ ಶಂಖಗದಾದಿಜಾತಂ ॥

ಸರಸಭಾರತಿಯಲ್ಲಿಯೂ 'ಗರ್ಭಾದ್ ಬಹಿರ್ನಿರ್ಗಮೋಽಪಿ ಶಂಖಚಕ್ರಾಂಕಧಾರಿಣಃ' ಎಂದಿದ್ದಾರೆ.

ಪ್ರತಿವಾದಿ ಇಲ್ಲಿ ಹೀಗೆ ಆಕ್ಷೇಪಿಸಬಹುದು– 'ತಾಯಿ ಮಹಾಲಕ್ಷ್ಮಿ ನೀನು ಕ್ಷೀರಸಮುದ್ರದಿಂದ ಉದಿಸಿಬಂದೆ. ನಿನ್ನ ಜೊತೆಗೆ ಅಪ್ಸರೆಯರು, ಕಾಮಧೇನು, ಐರಾವತ ಮುಂತಾದ ಜೀವಂತ ಶರೀರಗಳೂ ಕೌಸ್ತುಭ ಆಭರಣಗಳಂತಹ ನಿರ್ಜೀವ ವಸ್ತುಗಳೂ ನೀರಿನಿಂದ ಹುಟ್ಟಿಬರಲಿಲ್ಲವೆ ? ನೀರಿನಲ್ಲಿ ನಿರ್ಜೀವ, ಸಜೀವ ಪದಾರ್ಥಗಳೆರಡೂ ಹುಟ್ಟಿ ಬರುವುದಾದರೆ ಗರ್ಭದಲ್ಲಿಯೂ ಅವೆರಡೂ ಏಕೆ ಹುಟ್ಟಬಾರದು ? ನೀರಿನಲ್ಲಿ ಹುಟ್ಟಬಹುದು. ಗರ್ಭದಲ್ಲಿ ಹುಟ್ಟದು ಎಂದರೆ ಇದೂ ಹಿಂದೆ ಹೇಳಿದ ಅರ್ಧಜರತೀಯ ನ್ಯಾಯವಾಗುವುದಿಲ್ಲವೆ ?

ಈ ಆಕ್ಷೇಪಕ್ಕೆ ಸಮಾಧಾನ– 'ಮೂಲರೂಪವ ತೋರಿ' ಎಂಬಲ್ಲಿ ಇದೆ. ಗರ್ಭದಲ್ಲಿ ಶರೀರ ಹುಟ್ಟಿದ್ದರೆ ಜೊತೆಗೆ ಆಯುಧಗಳೂ ಹುಟ್ಟಿವೆ ಎನ್ನೋಣ. ಶರೀರ ಹುಟ್ಟಿದ್ದಲ್ಲ. ಅದು ತನ್ನ ಮೂಲರೂಪವೆ. ವಸುದೇವ ದೇವಕಿಯರು ಹಿಂದಿನ ಜನ್ಮದಲ್ಲಿ ತಪಸ್ಸಿನಿಂದ ಸಾಕ್ಷಾತ್ಕರಿಸಿಕೊಂಡ ರೂಪವೆ ಅದು ಎಂದು ಶ್ರೀಕೃಷ್ಣ ಅವರಿಗೆ ಹೇಳುತ್ತಾನೆ, ಭಾಗವತದಲ್ಲಿ.

'ಜೀವಿಗಳು ಹುಟ್ಟುವಾಗಲೆಲ್ಲ ಜೊತಗೆ ಭಗವಂತನೂ ಹುಟ್ಟುತ್ತಾನೆ' ಎನ್ನುತ್ತದೆ,

'ತದಸ್ಯ ಪ್ರಥಮಂ ಜನ್ಮ ತದಸ್ಯ ದ್ವಿತೀಯಂ ಜನ್ಮ'

ಎಂದು ಮುಂತಾಗಿ ಹೇಳುವ ಐತರೇಯೋಪನಿಷತ್ತು. ಋಗ್ವೇದದ ಋಷಿ ವಾಮದೇವನೂ ಹೇಳುತ್ತಾನೆ–

ಗರ್ಭೇ ನು ಸನ್ನನ್ವೇಷಾಮವೇದಂ
ಅಹಂ ದೇವಾನಾಂ ಜನಿಮಾನಿ ವಿಶ್ವಾ ।

ನನ್ನ ಜೊತೆಗೇ ಭಗವಂತ ಗರ್ಭವಾಸ ಮಾಡಿದುದನ್ನೂ ಪ್ರತ್ಯಕ್ಷ ಕಂಡಿದ್ದೇನೆ ಎನ್ನುತ್ತಾನೆ ಆತ. ಹೀಗೆ ವೇದೋಪನಿಷತ್ತುಗಳೇ ಕೃಷ್ಣನಿಗೆ ಗರ್ಭವಾಸ ಜನ್ಮಗಳನ್ನು ಹೇಳುತ್ತಿರುವಾಗ ಅದನ್ನು ಅಪಲಾಪ ಮಾಡುವುದು ಯುಕ್ತವಾಗಲಾರದು– ಎನ್ನುವ ಆಕ್ಷೇಪ ಬಂದರೆ ಅದಕ್ಕೆ ಆಯುಧ ಸಹಿತ ಎಂಬಲ್ಲಿ ಸಮಾಧಾನ ಗರ್ಭದಲ್ಲಿ ಜೀವಿಗಳ ಜೊತೆಗೆ ಕೃಷ್ಣನಿದ್ದರೂ ಆಯುಧ ಸಹಿತವಾಗಿಯೇ ಇರುತ್ತಾನೆ. ಗರ್ಭದಲ್ಲಿ ಆ ಜೀವಿಗಳ ರಕ್ಷಣೆಗಾಗಿ. ಮೇಲಿನ ಮಂತ್ರದಲ್ಲಿಯೇ ಕೊನೆಯಲ್ಲಿ

'ಶತಂ ಮಾ ಪುರ ಆಯಸೀರರಕ್ಷನ್',

'ಜ್ಞಾನಿಗಳಾದ ನೂರು ದೇವತೆಗಳು ನನ್ನನ್ನು ಗರ್ಭದಲ್ಲಿ ರಕ್ಷಿಸಿದರು' ಎನ್ನುತ್ತಾನೆ ಋಷಿ ಭಾಗವತದಲ್ಲಿ ಬರುವ ಪರೀಕ್ಷಿತನೂ ಇದಕ್ಕೆ ಸಾಕ್ಷಿ–

ದ್ರೌಣ್ಯಸ್ತ್ರ ವಿಪ್ಲುಷ್ಟಮಿದಂ ಮದಂಗಂ
ಸಂತಾನ ಬೀಜಂ ಕುರುಪಾಂಡವಾನಾಂ ।
ಜುಗೋಪ ಕುಕ್ಷಿಂಗತ ಆತ್ತಚಕ್ರೋ
ಮಾತುಶ್ಚ ಮೇ ಯಃ ಶರಣಂ ಗತಾಯಾಃ ॥

ಅಶ್ವತ್ಥಾಮನ ಬ್ರಹ್ಮಾಸ್ತ್ರ ಉತ್ತರೆಯ ಗರ್ಭದಲ್ಲಿ ಬೆಳೆಯುತ್ತಿದ್ದ ಪರೀಕ್ಷಿತನನ್ನು ದಹಿಸದಂತೆ ಚಕ್ರಧಾರಿ ಕೃಷ್ಣ ಗರ್ಭದಲ್ಲಿ ಕಾಯುತ್ತಿದ್ದುದನ್ನು ಪರೀಕ್ಷಿತ ತಾನೆ ಕಣ್ಣಾರೆ ಕಂಡಿದ್ದ. 'ಪರಿತಃ ಈಕ್ಷಣಾತ್ ಪರೀಕ್ಷಿತ್' ತನ್ನ ಸುತ್ತಲೂ ಚಕ್ರಧಾರಿಯಾಗಿ ತಿರುಗುತ್ತ ರಕ್ಷಣೆ ನೀಡುತ್ತಿದ್ದ ಕೃಷ್ಣನನ್ನು ಈಕ್ಷಿಸುತ್ತಿದ್ದುದರಿಂದ ಪರೀಕ್ಷಿತ್ ಎಂಬ ಹೆಸರು ಅವನಿಗೆ ಅನ್ವರ್ಥಕವಾಯಿತೆನ್ನುವುದುಂಟು. ಹೀಗೆ ಜೀವಿಗಳ ರಕ್ಷಣೆಗಾಗಿ ಗರ್ಭದಲ್ಲಿರುವವ ಕೃಷ್ಣ. ಗರ್ಭವಾಸ ದುಃಖ ಅವನಿಗೆ ಆಗುತ್ತಿದ್ದರೆ ಅವನೆಂತು ಜೀವಿಗಳ ರಕ್ಷಣೆ ಮಾಡಿಯಾನು ?

ಋಷಿ ವಾಮದೇವನು ಅಪರೋಕ್ಷ ಜ್ಞಾನಿ. ಪ್ರಾರಬ್ಧಕರ್ಮದಿಂದ ಗರ್ಭವಾಸ ಮಾಡಿದ್ದ. ತನ್ನನ್ನು ಆಯುಧಧಾರಿಯಾಗಿ ಗರ್ಭದಲ್ಲಿ ರಕ್ಷಿಸುತ್ತಿದ್ದ ಸರ್ವಶಕ್ತನಾದ ಕೃಷ್ಣ ಆಯುಧ ಸಹಿತ ಮೂಲರೂಪವನ್ನು ತನಗೆ ತೋರಿ ತನ್ನೊಂದಿಗೆ ತಾಯ

ಹೊಟ್ಟೆಯಿಂದ ಹೊರಟು ಬಂದುದನ್ನು ಪ್ರತ್ಯಕ್ಷ ಕಂಡಿದ್ದಾನೆ ಅವನೇ ಸಾಕ್ಷಿಯಾಗಿರುವಾಗ ಕೃಷ್ಣನಿಗೆ ಗರ್ಭವಾಸದ ದುಃಖವಿದೆ ಎಂದಾಗಲಿ, ಅವನ ಶರೀರವೂ ಆಯುಧವೂ ಗರ್ಭದಲ್ಲಿಯೆ ಹುಟ್ಟಿತೆಂದಾಗಲೀ ಹೇಳಿದರೆ ಅದು ನ್ಯಾಯವಾಗಲಾರದು. ನ್ಯಾಯ ಕೋವಿದರು ಅದನ್ನೊಪ್ಪಲಾರರು.

ಪ್ರತಿವಾದಿ ಅನ್ಯಾಯದ ಮಾತನ್ನಾಡಿದರೆ ಏನೂ ಫಲವಿಲ್ಲ. ನಾಯಿ ಬೊಗಳಿದರೆ ದೇವಲೋಕ ಹಾಳಾಗದು. ಅವನಿಗೆ ಒಂದು ಕಿವಿಮಾತು– 'ವ್ಯರ್ಥವಾಗಿ ಬಾಯಿಗೆ ಬಂದಂತೆ ಬೊಗಳದಿರು'.

— ೬೩ —

**ಉಟ್ಟ ಪೀತಾಂಬರ ತೊಟ್ಟ ಭೂಷಣಂಗಳು**
**ಇಟ್ಟ ನವರತ್ನದ ಮಕುಟವು ।**
**ಮೆಟ್ಟಿದ ಕುರುಹ ಎದೆಯಲ್ಲಿ ತೋರಿದ ಶ್ರೀ**
**ವಿಟ್ಠಲ ಪುಟ್ಟಿದನೆನಬಹುದೆ ॥**

ಶ್ರೀಕೃಷ್ಣನು ದೇವಕಿಯ ಉದರದಿಂದ ಅವತರಿಸುವಾಗ ತನ್ನ ಮೂಲ ರೂಪದಲ್ಲಿ ಉಟ್ಟ ಪೀತಾಂಬರವನ್ನು, ತೊಟ್ಟ ಭೂಷಣಗಳನ್ನು, ತಲೆಯ ಮೇಲೆ ಇಟ್ಟ ನವರತ್ನದ ಕಿರೀಟವನ್ನೂ, ಎದೆಯಲ್ಲಿ ಕಾಣುವ ಮೆಟ್ಟಿದ ಕುರುಹನ್ನೂ ಹಾಗೇ ತೋರಿದ ! ಇಂಥ ವಿಟ್ಠಲ ಪ್ರಾಕೃತ ಶರೀರದಿಂದ ಹುಟ್ಟಿದನೆನ್ನಬಹುದೆ ? ಎನ್ನುತ್ತಿದ್ದಾಳೆ ಮಹಾಲಕ್ಷ್ಮಿ.

ಶ್ರೀಕೃಷ್ಣ ದೇವಕಿಯ ಉದರದಿಂದ ಹೊರಟುಬರುವಾಗ ಏನೂ ತಿಳಿಯದ ತಂದೆ ತಾಯಿಗಳಿಗೆ ಪೀತಾಂಬರಧಾರಿ ಸರ್ವಾಲಂಕಾರ ಭೂಷಿತವಾದ ತನ್ನ ಮೂಲರೂಪ ತೋರಿ ಅವರ ಅಜ್ಞಾನವನ್ನು ಕಳೆದ–

ಏತದ್ ವಾಂ ದರ್ಶಿತಂ ರೂಪಂ ಪ್ರಾಗ್‌ಜನ್ಮ ಸ್ಮರಣಾಯ ಮೇ ।

'ನಿಮಗೆ ನಿಮ್ಮ ಪೂರ್ವಜನ್ಮ ಸ್ಮರಣೆ ನೀಡಿ, 'ನಾನು ಪ್ರಾಕೃತ ಶರೀರದಿಂದ ಹುಟ್ಟಲಿಲ್ಲ, ಚಿನ್ಮಯ ಶರೀರದಿಂದ ಅವತರಿಸಿದೆನಷ್ಟೇ' ಎಂದು ತಿಳಿಸಲು ಈ ಮೂಲರೂಪವನ್ನು ತೋರಿದನೆ'ಂದು ಬೋಧಿಸಿದ. ಏಕೆಂದರೆ ಆತ ವಿಟ್ಠಲ. 'ವಿಟ್ಠಲ' ಎಂದರೆ ಜ್ಞಾನಶೂನ್ಯರಾದ ಸಜ್ಜನರಿಗೆ ಜ್ಞಾನ ನೀಡಿ ಅವರನ್ನು ಪರಿಗ್ರಹಿಸುವವ–

ವಿದಾ ಜ್ಞಾನೇನ ಠಾನ್ ಶೂನ್ಯಾನ್ ಲಾತಿ ಗೃಹ್ಣಾತಿ ವಿಠ್ಠಲಃ ।

ವಿತ್ - ಜ್ಞಾನದಿಂದ, ರ - ಶೂನ್ಯರಾದ ಸಜ್ಜನರನ್ನು, ಲ - ಪರಿಗ್ರಹಿಸುವವನು ವಿಟ್ಠಲ.

ತಮದ್ಭುತಂ ಬಾಲಕಮಂಬುಜೇಕ್ಷಣಂ
ಚತುರ್ಭುಜಂ ಶಂಖಗದಾದ್ಯುದಾಯುಧಂ ।
ಶ್ರೀವತ್ಸಲಕ್ಷ್ಮಂಗಲಶೋಭಿಕೌಸ್ತುಭಂ
ಪೀತಾಂಬರಂ ಸಾಂದ್ರಪಯೋದಸೌಭಗಂ ॥

ಎಂದು ಭಾಗವತ ಹೇಳುವಂತೆ ವಸುದೇವ ದೇವಕಿಯರಿಗೆ ತನ್ನ ಮೂಲರೂಪ ತೋರಿ ಅವರ ಅಜ್ಞಾನ ಕಳೆವ ಮೂಲಕ ಲೋಕದ ಅಜ್ಞಾನವನ್ನು ಕಳೆದಿದ್ದಾನೆ. ಅವತಾರ ಮಾಡುವ ಕಾಲದಲ್ಲಿಯೇ ಮೂಲರೂಪವನ್ನು ನೋಡಿದ ವಸುದೇವ ದೇವಕಿಯರೇ ಶ್ರೀಕೃಷ್ಣ ಎಲ್ಲರಂತೆ ಗರ್ಭವಾಸ ದುಃಖ ಅನುಭವಿಸಿ ಅಳುತ್ತ ಭೂಮಿಗೆ ಬಂದವನಲ್ಲ ಎನ್ನಲು ಸಾಕ್ಷಿ.

ಶ್ರೀಕೃಷ್ಣ ಗರ್ಭವಾಸ ದುಃಖ ಅನುಭವಿಸದಿರಬಹುದು. ನಾರಾಯಣ ಎಂದೂ ಅನುಭವಿಸಲಿಲ್ಲವೆನ್ನಲು ಏನು ಆಧಾರ? ಈ ಪ್ರಶ್ನೆಗೆ ಲಕ್ಷ್ಮೀನಾರಾಯಣರನ್ನು ಹೊರತು ಇನ್ನಾವ ದೇವತೆಗಳನ್ನೂ ಈ ರೀತಿ ಚಿನ್ಮಯ ಶರೀರದಿಂದ ಅವತರಿಸುವವರೆಂದು ಯಾವ ಮತದವರೂ ಒಪ್ಪಿಲ್ಲವೆಂದ ಮೇಲೆ ಈ ಕೃಷ್ಣ ನಾರಾಯಣನೆ ಎನ್ನುವುದು ಸ್ವತಃ ಸಿದ್ಧವಾಗುತ್ತದೆ. ನಾರಾಯಣನ ಲಕ್ಷಣಗಳೆ ಕೃಷ್ಣನಲ್ಲಿ ಕಂಡುಬರುವುದರಿಂದ ಕೃಷ್ಣ ನಾರಾಯಣನೆ. 'ಪೀತಾಂಬರೋಽಚ್ಯುತಃ ಶಾರ್ಙ್ಗೀ' 'ವನಮಾಲೀ' 'ಬಲಿಧ್ವಂಸೀ' 'ವಿಧುಃ ಶ್ರೀವತ್ಸಲಾಂಛನಃ' ನಾರಾಯಣನ ಲಕ್ಷಣಗಳೇ ಆಗಿದ್ದು ಅವನಿಗೆ– ಪೀತಾಂಬರಾದಿಗಳು ಪೀತಾಂಬರ, ವನಮಾಲಿ, ಶ್ರೀವತ್ಸಲಾಂಛನ ಎಂದು ಮುಂತಾಗಿ ನಾಮ ಪ್ರಸಿದ್ಧವಾಗಲು ಕಾರಣವಾಗಿವೆ ಎಂದು ತೋರಿಸಿಕೊಟ್ಟಿದ್ದಾನೆ. ವಿಷ್ಣು ಸಹಸ್ರನಾಮ ಸ್ತೋತ್ರದಲ್ಲಿಯೂ ವನಮಾಲೀ ಶ್ರೀವತ್ಸವಕ್ಷಾಃ ಎಂದು ಮುಂತಾಗಿ ನಾಮಗಳಿವೆ.

ಶ್ರೀವತ್ಸ ನಾರಾಯಣನಲ್ಲಿಯೇ ಸ್ವಾಭಾವಿಕವಾಗಿ ಇರುವಂತಹುದು. ಇನ್ನಾರಲ್ಲಿಯೂ ಅಲ್ಲ. 'ಶ್ರೀವತ್ಸಲಕ್ಷ್ಮಂಗಲಶೋಭಿಕೌಸ್ತುಭಂ' ಎಂಬುದು ಒಂದೇ ಪದವೆಂದೂ 'ಲಕ್ಷ್ಮಂ' ಎಂಬಲ್ಲಿರುವ ಅನುಸ್ವಾರವು ಶ್ರೀವತ್ಸ ನಾರಾಯಣನ ಅಸಾಧಾರಣ ಲಕ್ಷಣವೆಂಬುದನ್ನು ಸೂಚಿಸುತ್ತದೆ ಎಂದೂ ಭಾಗವತ ಸತ್ಯಧರ್ಮ ಟೀಕೆಯಲ್ಲಿ ಹೇಳಿದೆ. ಸಾರೂಪ್ಯ ಮುಕ್ತಿ ಹೊಂದುವ ಚೇತನರಿಗೂ ಕೂಡ ಚತುರ್ಭುಜ ಪೀತಾಂಬರ ಶಂಖಚಕ್ರಾದಿ ಬಂದರೂ ಶ್ರೀವತ್ಸಕೌಸ್ತುಭಗಳು

ಬರಲಾರವು. ವಾದಿರಾಜರು ವೈಕುಂಠ ವರ್ಣನೆಯಲ್ಲಿ ಹಾಗೇ ಹೇಳಿದ್ದಾರೆ–

ಶ್ರೀವತ್ಸಕೌಸ್ತುಭ ಹೊರತಾಗಿ ಹರಿಯಂತೆ
ಆವಾಗ ಕರಚತುಷ್ಟಯದಿ ।
ಪಾವನ ಶಂಖಚಕ್ರಾದಿಗಳ ಧರಿಸಿಹ
ಜೀವರ್ಗೆ ಸಾರೂಪ್ಯ ಮುಕ್ತಿ ॥

ಆದ್ದರಿಂದ ಶ್ರೀವತ್ಸ ಒಂದರ ಬಲದಿಂದಲೆ ಕೃಷ್ಣನ ಶರೀರ ವೈಕುಂಠದಲ್ಲಿರುವ ನಾರಾಯಣನ ಶರೀರವೆ ಹೊರತು ಬೇರೆ ಅಲ್ಲ ಎಂದು ಸುಲಭವಾಗಿ ತೀರ್ಮಾನಿಸಬಹುದು. ವಾದಿರಾಜರು ಸ್ವಪ್ನಪದದಲ್ಲಿ ಇದನ್ನೇ ಹೇಳಿದ್ದಾರೆ–

ವೈಕುಂಠದಲ್ಲಿ ಇದ್ದಾ ಶ್ರೀವತ್ಸವನೆ ನೋಡು
ಪೊಟ್ಟೆಯು ಬಿಟ್ಟು ಪೊರವಂಟೆ ।

ಇಲ್ಲಿ 'ಶ್ರೀವತ್ಸವನು ಎದೆಯಲ್ಲಿ ತೋರಿದ' ಎಂದು ಸ್ಪಷ್ಟ ಹೇಳದೆ 'ಮೆಟ್ಟಿದ ಕುರುಹ ಎದೆಯಲ್ಲಿ ತೋರಿದ' ಎಂದು ಹೇಳಿದುದು ಅರ್ಥಗರ್ಭಿತವಾಗಿದೆ. ಶ್ರೀವತ್ಸವನ್ನು ಶ್ರೀವತ್ಸ ಎಂದೇ ಹೇಳಿದ್ದರೆ ಯಾವ ಶ್ರೀವತ್ಸ ? ಎನ್ನುವ ಪ್ರಶ್ನೆಗೆ ಅವಕಾಶವಿತ್ತು. ಏಕೆಂದರೆ ಎದೆಯಲ್ಲಿ ಬಲಕ್ಕೆ ಸುತ್ತಿದ ಬಿಳಿ ರೋಮಗಳ ಸುಳಿಯೆ ಶ್ರೀವತ್ಸವೆಂದು ಹರಿವಂಶದ ಅಭಿಪ್ರಾಯವಿದ್ದಂತಿದೆ–

ಶ್ರೀವತ್ಸೇನೋರಸಿ ಶ್ರೀಮಾನ್ ರೋಮಜಾತೇನ ರಾಜತಾ ।
ಶುಶುಭೇ ಭಗವಾನ್ ಕೃಷ್ಣಃ ॥

ವಿಷ್ಣು ಸಹಸ್ರನಾಮ ಸ್ತೋತ್ರದ ಸತ್ಯಸಂಧರ ಭಾಷ್ಯದಲ್ಲಿಯೂ ಇದೇ ಅಭಿಪ್ರಾಯ ಕಾಣುತ್ತದೆ. ಆದರೆ ರೋಮಗಳ ಸುಳಿ ಗರ್ಭದಲ್ಲಿಯೆ ಪ್ರಾಕೃತ ಶರೀರದಲ್ಲಿ ಮೂಡಿಬರುವುದು ಅಸಂಭಾವಿತವೇನಲ್ಲ. ಆದ್ದರಿಂದ ಕೃಷ್ಣನ ಎದೆಯಲ್ಲಿ ಇಂಥ ಶ್ರೀವತ್ಸವಿದ್ದ ಮಾತ್ರಕ್ಕೆ ಅವನ ಶರೀರ ಅಪ್ರಾಕೃತವೆಂದಾಗಲಿ ಕೃಷ್ಣನೇ ನಾರಾಯಣ ಎಂದಾಗಲಿ ಪ್ರತಿವಾದಿ ಒಪ್ಪುವುದು ಕಷ್ಟ.

ಪದ್ಯಮಾಲಾ ಪೂಜಾಕಲ್ಪಲತಾ ಟೀಕೆಯಲ್ಲಿ ಷೋಡಶೋಪಚಾರಗಳ, ನಡುವೆ ಶ್ರೀವತ್ಸಸಮರ್ಪಣೆಯೂ ಇದೆ. ಹರಿಯ ಶರೀರದಲ್ಲಿಯೆ ಅದರ ಒಂದು ಭಾಗವಾಗಿರುವ ರೋಮಗಳ ಸುಳಿಯೆ ಶ್ರೀವತ್ಸವೆನ್ನುವುದಾದರೆ ಅದನ್ನು ಸಮರ್ಪಿಸುವುದಾಗದು. ಕೃಷ್ಣದಾಸನೆಂಬ ಒಬ್ಬ ಅಮರಕೋಶ ಟೀಕಾಕಾರನು ಶ್ರೀವತ್ಸವೆಂದರೆ ಹರಿಯ ಎದೆಯಲ್ಲಿ ಕೌಸ್ತುಭದಂತಯೇ ಇರುವ ಇನ್ನೊಂದು ಮಣಿಯೆಂದಿದ್ದಾನೆ. ಅದನ್ನು ಒಪ್ಪಬಹುದು. ಆದರೆ ಪೀತಾಂಬರ ಕಿರೀಟ

ಮುಂತಾದವುಗಳಂತೆ ಶ್ರೀವತ್ಸವೂ ಜೊತೆಗೆ ಬಂದಿತ್ತೆಂದ ಮಾತ್ರಕ್ಕೆ ಕೃಷ್ಣನ ಶರೀರ ಅಪ್ರಾಕೃತವೆಂದಾಗದು.

ವಾಲ್ಮೀಕಿ ರಾಮಾಯಣದ ಗೋವಿಂದರಾಜೀಯ ಟೀಕೆಯಲ್ಲಿ ಶ್ರೀವತ್ಸವೆಂದರೆ ಸಂಪತ್ಕರವಾದ ಕೆಂಬಣ್ಣದ ಮಚ್ಚೆ ಎಂದಿದೆ ಇಂಥ ಶ್ರೀವತ್ಸವೂ ಪ್ರಾಕೃತ ಶರೀರದಲ್ಲಿ ಮೂಡಿಬರಬಹುದು.

ಮಹಾಭಾರತ ಪ್ರಕಾರ ದಕ್ಷಯಜ್ಞ ಧ್ವಂಸಮಾಡಿ ಈಶ್ವರ ತನ್ನ ತ್ರಿಶೂಲವನ್ನು ಗಂಧಮಾದನದಲ್ಲಿ ತಪಸ್ಸುಮಾಡುತ್ತಿದ್ದ ನಾರಾಯಣ ಋಷಿಯ ಎದೆಗೆ ಪ್ರಯೋಗಿಸಿಧ. ನಾರಾಯಣ ಅದನ್ನು ಹುಂಕಾರದಿಂದ ಹಿಮ್ಮೆಟ್ಟಿಸಿದ. ಆದರೆ ಅದರ ಕಲೆ ಎದೆಯಲ್ಲಿ ಉಳಿದು ಶ್ರೀವತ್ಸವೆನಿಸಿತು ಗರ್ಭದಲ್ಲಿರುವ ಶಿಶುವಿನ ಎದೆಯಲ್ಲಿ ಆ ಕಲೆ ತಾನಾಗಿ ಮೂಡಿ ಬರುವುದಿಲ್ಲವಾದರೂ ಪರೀಕ್ಷಿತನಿಗೆ ತಾಯ ಗರ್ಭದಲ್ಲಿಯೆ ಅಶ್ವತ್ಥಾಮನ ಬ್ರಹ್ಮಾಸ್ತ್ರ ಬಂದೆರಗಿದಂತೆ ತ್ರಿಶೂಲವೋ ಇನ್ನಾವ ಆಯುಧವೋ ದೇವಕಿಯ ಗರ್ಭವನ್ನು ಸೂಕ್ಷ್ಮ ರೂಪದಿಂದ ಪ್ರವೇಶಿಸಿರಬಾರದೇಕೆ ಎಂಬ ಆಕ್ಷೇಪಕ್ಕೆ ಅವಕಾಶವಿದೆ.

ಮೇಲಿನ ಯಾವ ಆಕ್ಷೇಪಕ್ಕೂ ಎಡೆ ಇಲ್ಲದಂತೆ ವಾದಿರಾಜರು 'ಮೆಟ್ಟಿದ ಕುರುಹು', ಭೃಗುಮುನಿ ಕಾಲಿಂದ ಮೆಟ್ಟಿದ್ದರ ಕುರುಹು ಎಂದಿದ್ದಾರೆ ಇದು ಗಾಯ ಮಾಸಿದಾಗ ಉಂಟಾಗುವ ಕಲೆ ಬಣ್ಣದಲ್ಲಿ ಕಪ್ಪು, ಆದ್ದರಿಂದ ಪೌಂಡ್ರಕ ವಾಸುದೇವ ತಾನೆ ಪರ ವಾಸುದೇವನೆಂದು ಹೇಳಿಕೊಳ್ಳಲು ಶ್ರೀವತ್ಸ ಪ್ರದರ್ಶನಕ್ಕಾಗಿ ಎದೆಯನ್ನು ಸುಟ್ಟುಕೊಂಡಿದ್ದನಂತೆ ! ನಿರ್ಣಯದಲ್ಲಿ ಹೇಳಿದೆ–

ಶ್ರೀವತ್ಸಾರ್ಥೇ ದಗ್ಧವಕ್ಷಃಸ್ಥಲಂ ಚ
ದೃಷ್ಟ್ವಾ ಕೃಷ್ಣಃ ಪ್ರಾಹಸತ್ ಪಾಪಬುದ್ಧಿಂ ॥

ಇಂಥ ಶ್ರೀವತ್ಸದಿಂದ ನಾರಾಯಣನನ್ನು ಅವನು ಎಲ್ಲಿಯೆ ಇರಲಿ, ಯಾವ ಆಕಾರದಲ್ಲಿಯೇ ಇರಲಿ ಅವನನ್ನು ಸುಲಭವಾಗಿ ಗುರುತಿಸಬಹುದು. ಯೋಧರನ್ನು ಅವರು ತಮ್ಮವರೆ ಅಥವಾ ಶತ್ರು ಪಕ್ಷದವರೆ ಎಂದು ಅವರ ಮೈಯ ಕಲೆಗಳಿಂದ ಪತ್ತೆ ಹಚ್ಚುವುದಿಲ್ಲವೆ ಹಾಗೆ. ವಾದಿರಾಜರು ಯುಕ್ತಿಮಲ್ಲಿಕೆಯಲ್ಲಿ ಹೇಳಿದ್ದಾರೆ–

ಯದ್ವಿಪ್ರಾಂಘ್ರ್ಯಂಕನಂ ವೈಕುಂಠಸ್ಥಮೂರ್ತೇರ್ಹಿ ವಕ್ಷಸಿ ।
ತದೇವ ದೇವಕೀಗರ್ಭಜಾತಸ್ಯ ಕಿಲ ವಕ್ಷಸಿ ॥
ಅತಸ್ತದೇವ ಹಿ ಭವೇದಿದಂ ರೂಪಂ ನ ಚಾಪರಂ ।
ನ ಚೇತ್ ಕುಪ್ಯಂತಿ ಯೋಧಾನಾಂ ಕಲಾಕುಶಲ ಮಂತ್ರಿಣಃ ॥

ವೈಕುಂಠದಲ್ಲಿ ಭೃಗುಮುನಿ ಮೆಟ್ಟಿದ ಕುರುಹು ದೇವಕಿಯು ಗರ್ಭದಲ್ಲಿ ಕೃಷ್ಣನ ಎದೆಯ ಮೇಲೆ ಮೂಡಿ ಬರುವುದೆಂತು? ಗರ್ಭವನ್ನೂ ಭೃಗುಮುನಿ ಪ್ರವೇಶಿಸಿದ್ದನೆ? ಆದ್ದರಿಂದ ಗರ್ಭದಲ್ಲಿದ್ದ ಕೃಷ್ಣನ ಶರೀರ ಬೇರೆಯಲ್ಲ, ವೈಕುಂಠದಲ್ಲಿದ್ದ ನಾರಾಯಣನ ಶರೀರ ಬೇರೆಯಲ್ಲ ಎನ್ನುವುದು ಸ್ಪಷ್ಟ.

ಶ್ರೀವತ್ಸ ದೂರ್ವಾಸಮುನಿ ಮೆಟ್ಟಿದ ಕುರುಹು ಎನ್ನುತ್ತಾನೆ ಒಬ್ಬ ಅಮರಕೋಶ ಟೀಕಾಕಾರ. ಕ್ಷುಪನೆಂಬ ರಾಜನ ಪಕ್ಷದಿಂದ ಹೋರಾಡಿದ ವಿಷ್ಣುವಿನ ಎದೆಗೆ ದಧೀಚಿಮುನಿ ಮೆಟ್ಟಿದಾಗ ಉಂಟಾದ ಕುರುಹು ಶ್ರೀವತ್ಸವೆಂದೂ ಕೆಲವರು ಹೇಳುತ್ತಾರೆ. ಮೆಟ್ಟಿದವರು ಯಾರೇ ಇರಲಿ ಅವರು ದೇವಕಿಯು ಗರ್ಭವನ್ನೂ ಪ್ರವೇಶಿಸಿದ್ದರೆನಲು ಶಕ್ಯವಿಲ್ಲ ತಾನೆ?

ಭೃಗುಮುನಿ ಮೆಟ್ಟಿದ ಕುರುಹೆನ್ನುವುದು ವಾದಿರಾಜರ ಪಕ್ಷ.

'ಶೋಧಿಸೆ ಬಂದ ಭೃಗು.....
ಶ್ರೀಧವನೆದೆಯನೊದ್ದಾಗಲೆ ಸರ್ವ
ವೇದಿ ಹಯವದನನಾದ ಕಾರಣ ।'
ಕೋಪಿಸದೆ ಹೆದ್ದೈವನಾದ — ಗುಂಡಕ್ರಿಯೆ

ಆ ಕುರುಹು ಕೃಷ್ಣನ ಎದೆಯಲ್ಲಿ ಇದ್ದು, ಅವನು ಸರ್ವೋತ್ತಮ, ದೋಷಲೇಶದೂರ, ಚಿನ್ಮಯ ಶರೀರಿ ಎಂದೂ, ಅವನು ಗರ್ಭವಾಸ ಮಾಡಲಿಲ್ಲ ಎಂದೂ ಸ್ಪಷ್ಟವಾಗಿ ಸಾರುತ್ತದೆ.

ವಾಸ್ತವವಾಗಿ ಶ್ರೀವತ್ಸದ ಸ್ವರೂಪವೇನು? ಅದೊಂದು ಕೌಸ್ತುಭದಂಥ ಮಣಿಯೋ? ಶ್ವೇತರೋಮಾವಳಿಯೋ? ಕಪ್ಪು ಕಲೆಯೋ? ಕೆಂಪು ಮಚ್ಚೆಯೋ? ಕಪ್ಪು ಕಲೆಯಾಗಿದ್ದಲ್ಲಿ ತ್ರಿಶೂಲದ ಗಾಯದಿಂದಾದುದೇ? ಮೆಟ್ಟಿದ್ದರಿಂದಾದುದೇ? ಮೆಟ್ಟಿದವರು ಯಾರು? ಭೃಗುಮುನಿಯೋ? ಇತ್ಯಾದಿ ಎಲ್ಲ ಪ್ರಶ್ನೆಗಳಿಗೂ ಹೌದು ಎಂದು ಒಂದೇ ಉತ್ತರ ಕೊಡಬಹುದು. ಶ್ರೀವತ್ಸ ಎಂದರೆ ಶ್ರೀದೇವಿ ವಾಸಮಾಡುವ ಸ್ಥಳ–

'ಶ್ರೀಃ ವಸತ್ಯಸ್ಮಿನ್ ಇತಿ ಶ್ರೀವತ್ಸಃ ।'
ಮತ್ತು ಮಹಾಪುರುಷನೆಂದು ಸಾರುವ ಚಿಹ್ನೆ–
'ಮಹತ್ವಂ ವದತೀತಿ ವತ್ಸಃ, ಶ್ರೀಕರಃ ವತ್ಸಃ ಶ್ರೀವತ್ಸಃ ।'

ಇಂಥ ಶ್ರೀವತ್ಸ ಹರಿಯ ಚಿನ್ಮಯವಾದ ಶರೀರದ ಒಂದು ಭಾಗ. ಅದು ಅವನ ನಾನಾ ರೂಪಗಳಲ್ಲಿ ನಾನಾ ಬಗೆಯಿಂದ ನಾನಾ ನಿಮಿತ್ತಗಳಿಂದ ಆವಿರ್ಭಾವ ಹೊಂದಬಹುದು. ಇಲ್ಲದಿದ್ದರೆ ಚಿನ್ಮಯ ಶರೀರದಲ್ಲಿ ಶೂಲದ ಗಾಯವಾಗಲಿ,

ಮೆಟ್ಟಿದ ಕಲೆಯಾಗಲಿ ಉಂಟಾಗುವುದು ಹೇಗೆ ಶಕ್ಯ ? ಆದ್ದರಿಂದ ಮೆಟ್ಟಿದ್ದರಿಂದ ಉಂಟಾಗಿಲ್ಲ ವ್ಯಕ್ತವಾಗಿದೆ ಶ್ರೀವತ್ಸ.

ಪ್ರತಿವಾದಿ ಹರಿಯು ಶರೀರವನ್ನು ಚಿನ್ಮಯವೆಂದು ಒಪ್ಪದಿರುವುದರಿಂದ ಅದರಲ್ಲಿ ಮೆಟ್ಟಿದ್ದ ಕುರುಹು ಉಂಟಾಯಿತೆಂದು ಇಟ್ಟುಕೊಂಡು, ಆ ಕಲೆ ಗರ್ಭದ ಶಿಶುವಿನ ಮೈಯಲ್ಲಿ ಹೇಗೆ ಮೂಡಿತು ಹೇಳು ಎನ್ನುತ್ತ ಪ್ರತಿವಾದಿಯನ್ನು ನಿರುತ್ತರಗೊಳಿಸುತ್ತಿದ್ದಾಳೆ ಮಹಾಲಕ್ಷ್ಮಿ.

ಶ್ರೀವಿಟ್ಠಲ ಪುಟ್ಟಿದನೆನಬಹುದೇ ಎಂಬಲ್ಲಿ ವಾದಿರಾಜರ ಸ್ವಾನುಭವ ಘಟನೆಯೊಂದು ಪರ್ಯಾಯವಾಗಿ ಉಕ್ತವಾದಂತಿದೆ ಅವರನ್ನು ಒಮ್ಮೆ ಜೈನ ಮತಾವಲಂಬಿಯಾದ ಮೂಡಬಿದರೆಯ ರಾಜ ತನ್ನ ಬಸದಿಗೆ ಬರಲು ಆಹ್ವಾನಿಸಿದ. ವಾದಿರಾಜರು ಹೇಳಿದರು 'ನಿಮ್ಮಲ್ಲಿ ನಮ್ಮ ದೇವರು ಕಂಡುಬಂದರೆ ನಮಗೇ ಕೊಡಬೇಕು. ಹಾಗಿದ್ದರೆ ಮಾತ್ರ ಬರುವೆವು, ರಾಜ ಒಪ್ಪಿದ ವಾದಿರಾಜರು ಬಸದಿಯಲ್ಲಿ ಒಂದು ಅಮೂಲ್ಯವಾದ ಪಚ್ಚೆಕಲ್ಲಿನ ಸುಂದರ ಜಿನಮೂರ್ತಿಯ ಕಡೆಗೆ ದೃಷ್ಟಿ ಹಾಯಿಸಿದರು ಅದು ಒಡನೆ ವಿಟ್ಠಲಮೂರ್ತಿಯಾಗಿ ಕಂಗೊಳಿಸಿತು. ರಾಜನು ಈ ಚಮತ್ಕಾರ ಕಂಡು ಭಯಭಕ್ತಿಯಿಂದ ವಾದಿರಾಜರಿಗೆ ಅರ್ಪಿಸಿದ. ಇಂದಿಗೂ ಅದು ಶ್ರೀಮಠದಲ್ಲಿ ಪೂಜೆಗೊಳ್ಳುತ್ತಿದೆ. ಇಲ್ಲಿ ಪೀತಾಂಬರ ಆಭರಣಗಳಿಂದ ಹಾಗೂ ಶ್ರೀವತ್ಸ ಚಿಹ್ನೆಯಿಂದ ಒಪ್ಪುವ ಸುಂದರವಾದ ವಿಟ್ಠಲಮೂರ್ತಿ ಸ್ವಯಂ ಆವಿರ್ಭಾವಗೊಂಡಿತು ಹೊರತು ಯಾವ ಶಿಲ್ಪಿಯೂ ಅದನ್ನು ಮಾಡಲಿಲ್ಲ. ಹಾಗೇ ಶ್ರೀಕೃಷ್ಣನ ಶರೀರವೂ ದೇವಕಿಯ ಗರ್ಭದಲ್ಲಿ ಸ್ವಯಂ ಆವಿರ್ಭಾವಗೊಂಡಿತು ಹೊರತು ತಂದೆ ತಾಯಿಗಳಿಂದ ಹುಟ್ಟಲಿಲ್ಲ. ಇದರಿಂದ ಕೃಷ್ಣನಿಗೆ ಗರ್ಭವಾಸದುಃಖವೂ ಇಲ್ಲವೆಂದು ಸಿದ್ಧವಾಗುತ್ತದೆ.

— ೬೪ —

**ಋಷ ಹಂಸ ಮಹಿಷ ಮೂಷಕವಾಹನವೇರಿ ಮಾ—**
**ನಿಸರಂತೆ ಸುಳಿವ ಸುರರೆಲ್ಲ ।**
**ಎಸೆವ ದೇವೇಶಾನರ ಸಹಸಕ್ಕೆ ಮಣಿದರು**
**ಕುಸುಮನಾಭನಿಗೆ ಸರಿಯುಂಟೆ ॥**

ನಂದಿವಾಹನನಾಗಿ ಶಿವ, ಮಹಿಷವಾಹನನಾಗಿ ಯಮ, ಮೂಷಕವಾಹನನಾಗಿ ಗಣಪತಿ – ಹೀಗೆ ಎಲ್ಲ ದೇವತೆಗಳೂ ತಮ್ಮ ವಾಹನವನ್ನೇರಿ ದೇವೇಶರಾದ ಕೃಷ್ಣ ಸತ್ಯಭಾಮೆಯರ ಮುಂದೆ ಅಜ್ಞಾನಿ ಮಾನವರಂತೆ ಸುಳಿದರು. ಅಪ್ರತಿಮ ಸಾಮರ್ಥ್ಯದಿಂದ ಶೋಭಿಸುವ ಅವರ

ಸಾಮರ್ಥ್ಯಕ್ಕೆ ಮಣಿದರು. ಪದ್ಮನಾಭನಾದ ಹರಿಗೆ ಸಮಾನರುಂಟೆ ? ಎನ್ನುತ್ತಿದ್ದಾಳೆ ಮಹಾಲಕ್ಷ್ಮಿ.

ಇಷ್ಟರವರೆಗೆ ಶ್ರೀಹರಿಗೆ ಹಸಿವು, ತೃಷೆ, ಜರೆ, ಮರಣ, ರೋಗ ರುಜಿನಗಳು, ಕಾಮಾದಿ ಅರಿಷಡ್ವರ್ಗಗಳು, ಪಾಪಲೇಪ ಮತ್ತು ಅದರಿಂದಾಗುವ ನರಕವಾಸ, ಗರ್ಭವಾಸ ಮುಂತಾದ ದುಃಖಗಳು ಇಲ್ಲವೆಂದು ಯುಕ್ತಿಯುಕ್ತವಾಗಿ ಸಮರ್ಥಿಸಲಾಗಿದೆ. ಈಗ ಶ್ರೀಹರಿಗೆ ಅಲ್ಪಶಕ್ತಿತ್ವ ಪಾರತಂತ್ರ್ಯಾದಿ ದೋಷಗಳೂ ಇಲ್ಲವೆಂದು ದೃಷ್ಟಾಂತ ಸಹಿತವಾಗಿ ಸಮರ್ಥಿಸಲಾಗುತ್ತಿದೆ.

ಕೃಷ್ಣನು ಪಾರಿಜಾತಾಪಹರಣಗೈದ ಸಂದರ್ಭ. ಸತ್ಯಭಾಮಾದೇವಿ ತಾನೇ ಶಾರ್ಙ್ಗ ಧನುಸ್ಸನ್ನೆತ್ತಿಕೊಂಡಳು. ಕುಬೇರನನ್ನು ಯುದ್ಧದಲ್ಲಿ ಸೋಲಿಸಿದಳು. ಅವನು ಕೊನೆಯಲ್ಲಿ ಮುದ್ಗರವನ್ನೆಸೆದಾಗ ಕೃಷ್ಣ ಅದನ್ನು ಎಡಗೈಯಿಂದ ಹಿಡಿದು ನಕ್ಕ. ಕುಬೇರ ನಾಚಿ ಓಡಿಹೋದ.

ವರುಣ ತನ್ನ ಪಾಶವನ್ನು ಗರುಡನ ಕುತ್ತಿಗೆಗೆ ಹಾಕಿ ಸೆಳೆದ. ಆದರೆ ಗರುಡ ವರುಣನ ವಾಹನವಾದ ಮೊಸಳೆಯನ್ನು ಎತ್ತಿ ಸಮುದ್ರಕ್ಕೆಸೆದ. ವರುಣನೂ ನಾಚಿ ಓಡಿದ.

ಅಗ್ನಿವಾಯುಗಳೂ ಕೃಷ್ಣನ ಬಾಣಗಳನ್ನು ಇದಿರಿಸಲಾಗದೆ ಹಿಂತಿರುಗಿದರು.

ಯಮನ ದಂಡವೂ ಕೃಷ್ಣನ ಗದೆಯ ಏಟಿಗೆ ಉರುಳಿಬಿದ್ದಿತು. ಯಮ ಭಯದಿಂದ ಓಡಿದ. ಅದನ್ನು ಕಂಡೇ ನಿಋುತಿಯೂ ಪಲಾಯನಗೈದ.

ಶಿವನ ತ್ರಿಶೂಲಕ್ಕೂ, ಕೃಷ್ಣನ ಗದೆಗೂ ಬಹುಕಾಲ ಘರ್ಷಣೆ ನಡೆಯಿತು. ಕೊನೆಯಲ್ಲಿ ತ್ರಿಶೂಲ ಶಿವನ ಬಳಿಗೆ ಹಿಂತಿರುಗಿತು. ಗದೆಯೂ ಕೃಷ್ಣನ ಬಳಿಗೆ ಬಂದಿತು. ಶಿವ ಖಡ್ಗ ಹಿರಿದು ನಿಂತ. ಗರುಡ ಶಿವನ ಸಮೇತವಾಗಿ ನಂದಿಯನ್ನು ಎತ್ತಿ ಬಲು ದೂರಕ್ಕೆ ಎಸೆದ ಒಡನೆ ಎಲ್ಲ ಪ್ರಮಥಗಣಗಳೊಂದಿಗೆ ಶಿವ ಹಿಂತಿರುಗಿದ.

ದೇವೇಂದ್ರನ ವಜ್ರಾಯುಧವನ್ನು ಕೃಷ್ಣ ಎಡಗೈಯಿಂದ ಹಿಡಿದು ನಕ್ಕ. ಸತ್ಯಭಾಮೆಯೂ ನಕ್ಕಳು. ದೇವೇಂದ್ರನಿಗೆ ಜ್ಞಾನೋದಯವಾಯಿತು. 'ಜಗತ್ತಿನ ಜನನೀ ಜನಕರು ನೀವೆ ನನಗೆ ಸ್ವರ್ಗಲೋಕಾಧಿಪತ್ಯ ನೀಡಿದವರು. ನೀವು ಏನು ಬೇಕಾದರೂ ಒಯ್ಯಬಹುದು, ಎಲ್ಲವೂ ನಿಮ್ಮದೆ' ಎಂದು ಕೈಮುಗಿದು ನಿಂತ.

ಮೂಷಕವಾಹನವನ್ನೇರಿ ಗಣಪತಿಯು ಬಂದು ಕೃಷ್ಣನೊಡನೆ ಯುದ್ಧ ಮಾಡಿದುದರ ಉಲ್ಲೇಖ ಭಾಗವತ ಹರಿವಂಶಗಳಲ್ಲಿ ಕಾಣುವುದಿಲ್ಲ. ಆದರೂ ಪ್ರಮಥ ಗಣಗಳೊಂದಿಗೆ ಗಣಪತಿಯೂ ಬಂದಿದ್ದನೆಂದು ಇಟ್ಟುಕೊಳ್ಳಬೇಕು.

'ಋಷ ಹಂಸ ಮಹಿಷ' ಎಂಬಲ್ಲಿ ಹಂಸವಾಹನನಾಗಿ ಚತುರ್ಮುಖ ಬ್ರಹ್ಮನೂ ಯುದ್ಧಕ್ಕೆ ಬಂದಿದ್ದನೆಂದಿಟ್ಟುಕೊಂಡರೆ ತಪ್ಪಾದೀತು. ಆವನೆಂದೂ ಹರಿಯಲ್ಲಿ ಕಾದುವವನಲ್ಲ. ಎಲ್ಲಿಯೂ ಇತರ ದೇವತೆಗಳಂತೆ ಚತುರ್ಮುಖನು ಯುದ್ಧ ಮಾಡಿದುದರ ಉಲ್ಲೇಖವಿಲ್ಲ. ಆಯುಧ ಹಿಡಿದುದೂ ಇಲ್ಲ. ಆದ್ದರಿಂದ ಇಲ್ಲಿ ಹಂಸ ಬ್ರಹ್ಮನ ವಾಹನವಾದ ಹಂಸಪಕ್ಷಿಯಲ್ಲ. 'ಋಷಹಂಸ' ಎಂದು ಒಂದೇ ಪದ. ವೃಷಗಳಲ್ಲಿ ಶ್ರೇಷ್ಠ ಎಂದರ್ಥ. ಶ್ರೇಷ್ಠ ವೃಷಭವಾದ ನಂದಿಯನ್ನೇರಿ ಶಿವ ಬಂದುದು ಭಾಗವತ ವಿಜಯಧ್ವಜೀಯ ಪಾಠದಲ್ಲಿ ವರ್ಣಿತವಾಗಿದೆ. ಬೃಹತ್ಸಂಹಿತೆಯ ಪ್ರಕಾರ ಹಂಸ ಶಬ್ದಕ್ಕೆ ಶ್ರೇಷ್ಠಜಾತಿಯ ಎತ್ತು ಎಂಬ ಅರ್ಥವೂ ಇದೆ–

ಸಿತವರ್ಣಃ ಪಿಂಗಾಕ್ಷಸ್ತಾಮ್ರವಿಷಾಣೇಕ್ಷಣೋ ಮಹಾವಕ್ತ್ರಃ ।
ಹಂಸೋ ನಾಮ ಶುಭಫಲೋ ಯೂಥಸ್ಯ ವಿವರ್ಧನಃ ಪ್ರೋಕ್ತಃ ॥

'ಬಿಳಿ ಮೈ, ಕಂದು ಕಣ್ಣು, ಕೆಂಬಣ್ಣದ ಕೊಂಬು ಮತ್ತು ನೋಟಗಳು, ದೊಡ್ಡಮುಖ ಇಂಥ ಲಕ್ಷಣದ ಎತ್ತು ಗೋವುಗಳ ಹಿಂಡನ್ನು ವೃದ್ಧಿಗೊಳಿಸುವಂತಹುದು ಮತ್ತು ಶುಭಫಲ ನೀಡುವಂತಹುದು ಇಂಥ ಎತ್ತಿಗೆ ಹಂಸ ಎಂದು ಹೆಸರು'.

ಹೀಗೆ ರುದ್ರಾದಿ ದೇವತೆಗಳೆಲ್ಲರೂ ತಮ್ಮ ತಮ್ಮ ವಾಹನವೇರಿ ಯುದ್ಧಸನ್ನದ್ಧರಾಗಿ ಬಂದು ಕೃಷ್ಣನ ಸಾಮರ್ಥ್ಯಕ್ಕೆ ಮಣಿದರು. ವಾದಿರಾಜರು ಸ್ವಪ್ನಪದದಲ್ಲಿಯೂ ಇದನ್ನು ಹೇಳಿದ್ದಾರೆ–

ಅಮರ ತರು ಕಿತ್ತರಲು ದಿವಿಜರ ।
ಹೆಮ್ಮೆಗಳ ನಾನೊರ್ವನೆ ಬೆಡಿಸಿದೆನೋ ಕೇಳ್ಮನುಜ ॥

ವೇದವಚನಗಳೂ ಇದಕ್ಕೆ ಸಂವಾದಿಯಾಗಿವೆ–

ನ ಯಸ್ಯೇಂದ್ರೋ ವರುಣೋ ನ ಮಿತ್ರೋ
ವ್ರತಮರ್ಯಮಾ ನ ಮಿನಂತಿ ರುದ್ರಃ ॥

'ಮಾನಿಸರಂತೆ ಸುಳಿವ ಸುರರೆಲ್ಲ' ಎನ್ನಲು ಕಾರಣವಿದೆ. ದೇವತೆಗಳು ಜ್ಞಾನಿಗಳು. 'ಕೃಷ್ಣ ಸಾಮಾನ್ಯನಲ್ಲ, ಜಗದೊಡೆಯನೆ ಆತ' ಎಂಬುದು ಅವರಿಗೆ ನಿಶ್ಚಯವಾಗಿ ಗೊತ್ತು. ಮಾನವರಾದರೋ ಅಜ್ಞಾನಿಗಳು. ಆದರೆ ದೇವತೆಗಳೂ ಕೃಷ್ಣನೊಡನೆ ಕಾದಲು ಬಂದಾಗ ಕಲಿ ಪ್ರಭಾವದಿಂದ ಮಾನವರಂತೆಯೇ ಅಜ್ಞಾನಿಗಳಾಗಿದ್ದರು. ದುರಹಂಕಾರದಿಂದ ಕೃಷ್ಣನನ್ನು ಸೋಲಿಸಲೆಂದೇ ಬಂದಿದ್ದರು.

ಕೊನೆಯಲ್ಲಿ ಸೋತು ಶರಣಾದರು 'ಕುಸುಮನಾಭನಿಗೆ ಸರಿಯುಂಟೆ?' ಎನ್ನುವುದೂ ಅರ್ಥಗರ್ಭಿತ ಕೃಷ್ಣ ತನ್ನ ನಾಭಿಕಮಲದಿಂದ ಲೋಕಪಿತಾಮಹನಾದ ಬ್ರಹ್ಮನನ್ನು ಹುಟ್ಟಿಸಿದವ. ಬ್ರಹ್ಮನ ಸೃಷ್ಟಿಯಲ್ಲಿ ಕೃಷ್ಣನಿಗೆ ಸಾಮರ್ಥ್ಯದಲ್ಲಿ ಸರಿದೂಗುವವರುಂಟೆ? ಆದ್ದರಿಂದ ಕೃಷ್ಣನಿಗೆ ಪರಾಜಯವಿಲ್ಲ. ಅಲ್ಪಶಕ್ತಿತ್ವ ಪಾರತಂತ್ರ್ಯಗಳಾವುವೂ ಇಲ್ಲ.

ಅಥವಾ ಹಸಿವು, ಜರೆ, ತೃಷೆ, ಮರಣ, ನರಕವಾಸ, ಗರ್ಭವಾಸಾದಿ ದುಃಖರೂಪವಾದ ಶಿಕ್ಷೆಗಳನ್ನು ಪಾಪಿಗಳಿಗೆ ನೀಡುವ ಅಧಿಕಾರಿಗಳು ಲೋಕಪಾಲಕರಾದ ರುದ್ರಾದಿ ದೇವತೆಗಳು. ಅವರೆಲ್ಲ ಕೃಷ್ಣನಿಗೆ ಮಣಿದರು ಮಾತ್ರವಲ್ಲ, ಅವರೆಲ್ಲರನ್ನೂ ಸೃಷ್ಟಿಸಿದ ಬ್ರಹ್ಮನನ್ನು ತನ್ನ ಹೊಕ್ಕುಳಲ್ಲಿ ಸೃಷ್ಟಿಸಿದವ ಕೃಷ್ಣ ಇಂಥ ಕೃಷ್ಣನಿಗೆ ಈ ದೇವತೆಗಳು ಏನು ಶಿಕ್ಷೆ ಕೊಡಬಲ್ಲರು? ಆದ್ದರಿಂದ ಕೃಷ್ಣ ಸ್ವತಂತ್ರ, ಯಾರಿಗೂ ಅಧೀನನಲ್ಲ.

'ಮೂಷಕ ವಾಹನವೇರಿ' ಎಂಬಲ್ಲಿ 'ಮೂಷಕವಹ' ಎಂದೂ ಒಂದು ಪಾಠಾಂತರವಿದೆ ಈ ಪಾಠದಲ್ಲಿಯೂ ಹರಿಯ ನಿರ್ದೋಷತ್ವ ಸಮರ್ಥನೆ ಇರುವುದು ಗಮನಾರ್ಹ. ದೇವತೆಗಳು ಶಾಪಾದಿವಶದಿಂದ ಭೂಮಿಯಲ್ಲಿ ಎತ್ತು, ಹಂಸ, ಕುರಿ, ಕೋಣ, ಇಲಿ ಮುಂತಾದ ಪ್ರಾಣಿಗಳಾಗಿ ಹುಟ್ಟುತ್ತಾರೆ ಮನುಷ್ಯರಂತೆಯೂ ಸುಳಿಯುತ್ತಾರೆ ಆಗ ಅವರಲ್ಲಿ ಮೂಲರೂಪದ ಜ್ಞಾನ ಆನಂದ ಬಲ ಮುಂತಾದ ಗುಣಗಳು ಪೂರ್ತಿ ವ್ಯಕ್ತವಿರುವುದಿಲ್ಲ ಆದ್ದರಿಂದ ಅನೇಕ ಕಡೆ ಅಪಜಯವಾಗುವುದುಂಟು. ಲಕ್ಷ್ಮೀನಾರಾಯಣರು ಮಾತ್ರ ಹಾಗಲ್ಲ. ಅವರು ಎಲ್ಲ ಅವತಾರಗಳಲ್ಲಿಯೂ ಮೂಲರೂಪದ ಎಲ್ಲ ಶಕ್ತಿಸಾಮರ್ಥ್ಯಗಳಿಂದ ಶೋಭಿಸುವರು ಉದಾಹರಣೆಗೆ, ದೇವೇಂದ್ರ ಅರ್ಜುನನಾಗಿ ಅವತರಿಸಿದಾಗ ಕೃಷ್ಣನಿರುವಷ್ಟು ಕಾಲ ಲೋಕೈಕ ವೀರನಾಗಿ ಧನುರ್ಧರನಾಗಿ ಮೆರೆದ. ಕೃಷ್ಣ ಪರಂಧಾಮಕ್ಕೆ ತೆರಳಿದಾಗ ಅವನ ಹದಿನಾರುಸಾವಿರ ಮಂದಿ ಮಡದಿಯರ ರಕ್ಷಣೆಯ ಹೊಣೆ ಅರ್ಜುನನ ಮೇಲೆ ಬಿದ್ದಿತು ಆದರೆ ಮ್ಲೇಚ್ಛರ ದಾಳಿಯನ್ನು ಇದಿರಿಸಲಾಗಲಿಲ್ಲ. ತನ್ನ ಗಾಂಡೀವವನ್ನು ಹೆದೆ ಏರಿಸುವುದೂ ಅವನಿಗೆ ಶಕ್ಯವಾಗಲಿಲ್ಲ ಅವನೆ ವೃಷಭಾವತಾರದಲ್ಲಿ ಮಧ್ವಾಚಾರ್ಯರ ಗ್ರಂಥಗಳನ್ನು ಬೆನ್ನ ಮೇಲೆ ಹೊರುತ್ತಿದ್ದ. ಆದರೆ ಒಮ್ಮೆ ಸರ್ಪಕಚ್ಚಿ ಅಸುನೀಗಿದ. ಶ್ರೀಮದಾಚಾರ್ಯರ ಅನುಗ್ರಹದಿಂದ ತಿರುಗಿ ಬದುಕಿದ ಶ್ರೀಹರಿ ಮತ್ಸ್ಯಕೂರ್ಮಾದಿ ಪ್ರಾಣಿ ರೂಪದಿಂದಾಗಲಿ, ರಾಮಕೃಷ್ಣಾದಿ ಮಾನವ ರೂಪದಿಂದಾಗಲಿ ಅವತರಿಸಿದಾಗ ಎಂದೂ ಅಶಕ್ತಿ ಪರಾಜಯಗಳನ್ನು ಅನುಭವಿಸಿದುದಿಲ್ಲ.

'ಕುಸುಮನಾಭ' ರೂಪವೆ ಹರಿಯು ಮತ್ಸ್ಯಾದಿ ಸರ್ವಾವತಾರಗಳಿಗೆ ಮೂಲ–

ಏತನ್ನಾನಾವತಾರಾಣಾಂ ನಿಧಾನಂ ಬೀಜಮವ್ಯಯಂ । —ಭಾಗವತ.

ಈ ರೂಪದ ಕೃಷ್ಣಕೇಶ ಒಂದೇ ಕೃಷ್ಣನಾಗಿ ಅವತರಿಸಿ ಸಕಲ ದೇವತೆಗಳನ್ನೂ ಲೀಲಾಜಾಲವಾಗಿ ಮಣಿಸಿತೆಂದರೆ ಇಂಥ ಹರಿಗೆ ಸಮಾನರುಂಟೆ? ಆದ್ದರಿಂದ ಅವನಲ್ಲಿ ಅಲ್ಪಶಕ್ತಿ, ಪಾರತಂತ್ರ್ಯಾದಿ ಯಾವ ದೋಷಗಳೂ ಇರಲು ಆಸ್ಪದವಿಲ್ಲ ಎನ್ನುತ್ತಿದ್ದಾಳೆ ಮಹಾಲಕ್ಷ್ಮಿ.

— ೬೫ —

**ಒಂದೊಂದು ಗುಣಗಳು ಇದ್ದವು ಇವರಲ್ಲಿ**
**ಸಂದಣಿಸಿವೆ ಬಹು ದೋಷ ।**
**ಕುಂದೆಳ್ಳಷ್ಟಿಲ್ಲದ ಮುಕುಂದನೆ ತನಗೆಂದು**
**ಇಂದಿರೆ ಪತಿಯ ನೆನೆದಳು ॥**

ಈ ನುಡಿ ಹಿಂದೆಯೇ ಒಮ್ಮೆ ೨೯ನೇ ನುಡಿಯಾಗಿ ಬಂದಿತ್ತು. ಆಗ ಅದು ಹರಿಯ ನಿರ್ದೋಷತ್ವ ವಿಚಾರಕ್ಕೆ ಉಪಕ್ರಮವಾಗಿತ್ತು. ಇದೀಗ ಉಪಸಂಹಾರ. ಪುನರುಕ್ತಿಯಿಲ್ಲ.

— ೬೬ —

**ಇಂತು ಚಿಂತಿಸಿ ರಮೆ ಸಂತ ರಾಮನ ಪದವ**
**ಸಂತೋಷಮನದಿ ನೆನೆವುತ ।**
**ಸಂತೋಷಮನದಿ ನೆನೆವುತ ತನ್ನ**
**ಕಾಂತನಿದ್ದೆಡೆಗೆ ನಡೆದಳು ॥**

ಹೀಗೆ ರಮೆ ಶಾಂತವಾಗಿ ಆಲೋಚಿಸಿ, ರಾಮನ ಪಾದವನ್ನು ಸಂತೋಷ ತುಂಬಿದ ಮನಸ್ಸಿನಲ್ಲಿ ನೆನೆಯುತ್ತ, ತನ್ನ ಪ್ರಿಯಕರನಾದ ಹರಿ ಇದ್ದೆಡೆಗೆ ನಡೆದಳು.

ರಮೆ ಶಾಂತವಾಗಿ ಆಲೋಚಿಸಿದಳು ಯಾವ ಉದ್ವೇಗ, ಆತುರ, ಸಂಭ್ರಮಗಳಿಗೊಳಗಾಗದೆ ಎಲ್ಲ ದೇವತೆಗಳ ಗುಣದೋಷಗಳನ್ನು ಆಲೋಚಿಸಿದಳು. ಸ್ವಯಂವರದ ಕನ್ಯೆ ಬಾಳಸಂಗಾತಿಯನ್ನು ಆರಿಸಿಕೊಳ್ಳುವಲ್ಲಿ ಯಾವ ಆತುರ ಸಂಭ್ರಮಕ್ಕೊಳಗಾಗಬಾರದು. ಸ್ವಲ್ಪ ಪ್ರಮಾದವಾದರೂ ಮುಂದೆ ಅದನ್ನೆಂದೂ ಸರಿಪಡಿಸಿಕೊಳ್ಳಲಾಗದು. ಇದನ್ನು ಲೋಕಕ್ಕೆ ತೋರಿಸಲೆಂದೇ ಶಾಂತವಾಗಿ ಆಲೋಚಿಸುವುದನ್ನು ರಮೆ ಅಭಿನಯಿಸಿ ತೋರಿಸಿದಳು.

ಸಂತೋಷ ತುಂಬಿದ ಮನಸ್ಸಿನಲ್ಲಿ ರಾಮನ ಪಾದವನ್ನು ನೆನೆದಳು, ಅಂದರೆ ರಾಮ ಎಂಬ ನಾಮವೆ ಹೇಳುವಂತೆ ಸಕಲಲೋಕ ಮನೋಹಾರಿ ರೂಪಸೌಂದರ್ಯ ಗುಣ ಸೌಂದರ್ಯಗಳಿಂದೊಪ್ಪಿ ಕಣ್ಣಮುಂದೆ ನಿಂತಿರುವ ಶ್ರೀ ಹರಿ ಎಂಬ ಆಲಂಬನ ವಿಭಾವ ಒಂದರಿಂದಲೇ ಬೇರಾವ ಉದ್ದೀಪನ ವಿಭಾವದ ಅಪೇಕ್ಷೆಯೇ ಇಲ್ಲದೆ ರಮೆಯ ಹೃದಯದಲ್ಲಿರುವ ರತಿ ಎಂಬ ಸ್ಥಾಯಿಭಾವ ಶೃಂಗಾರರಸವಾಗಿ ಪರಿಣಮಿಸಿದೆ. ಅಭಿನಯದಿಂದ ರಮೆ ರಸಾನುಭವ ಪಡೆದಿದ್ದಾಳೆ. ಅದರಿಂದಲೇ ಸಂತೋಷ ತುಂಬಿದ ಮನದಲ್ಲಿ ರಾಮನ ಪಾದವನ್ನು ನೆನೆಯುವ ಅಭಿನಯ ಮಾಡಿ ತೋರಿಸುತ್ತಿದ್ದಾಳೆ. ಇಲ್ಲದಿದ್ದರೆ ಅವಳು ಏಕೆ ನೆನೆಯುತ್ತಾಳೆ ? ಪ್ರತಿಕ್ಷಣವೂ ಪ್ರತ್ಯಕ್ಷ ಕಂಡು ರೋಮಾಂಚಗೊಳ್ಳುವವಳು ಅವಳು

ಪ್ರೇಕ್ಷಕರಿಗೇ ರಸಾನುಭವ ಹೊರತು ನಟರಿಗುಂಟೆ ? ಎಂಬ ಪ್ರಶ್ನೆಗೆ

ಕಾವ್ಯಾರ್ಥ ಭಾವನಾಸ್ವಾದೋ ನಟಸ್ಯಾಪಿ ನ ವಾರ್ಯತೇ !

'ನಟರು ಸಹೃದಯರಾಗಿದ್ದಲ್ಲಿ ಅವರಿಗೂ ರಸಾನುಭವವಿಲ್ಲದಿಲ್ಲ' ಎನ್ನುತ್ತಾರೆ ಆಲಂಕಾರಿಕರು. ಕಾಳಿದಾಸನ ಮಾಳವಿಕೆ ನಾಟ್ಯವಾಡುವಾಗ ರಸಗಳಲ್ಲಿ ತನ್ಮಯಳಾಗುತ್ತಿದ್ದಳಂತೆ. ಸಹೃದಯರಾಗಿರದೆ ಕೇವಲ ಜೀವನಕ್ಕಾಗಿ ನಾಟ್ಯ ಕಲೆಯನ್ನು ಆಶ್ರಯಿಸಿದವರಿಗೆ ರಸಾನುಭವವಿಲ್ಲ.

ಧನಮಾಕಾಂಕ್ಷತಸ್ತಸ್ಯ ಭಾವಶೂನ್ಯಂ ಮನೋ ಧ್ರುವಂ ।

'ತನ್ನ ಅಭಿನಯದಿಂದ ಪ್ರೇಕ್ಷಕರು ಖುಷಿಪಟ್ಟು ಹಣ ನೀಡಲೆಂದೇ ಬಯಸುವ ನಟನಿಗೆ ಹೃದಯ ಸರ್ವಥಾ ರಸಾನುಭವ ಶೂನ್ಯವಾಗಿರುತ್ತದೆ' ಪ್ರಕೃತ ಐಶ್ವರ್ಯದ ಅಧಿದೇವತೆಯಾದ ಮಹಾಲಕ್ಷ್ಮಿ ಸಹೃದಯ ಶಿರೋಮಣಿಯೂ ಆಗಿದ್ದು ಗಾಢವಾದ ಶೃಂಗಾರರಸವನ್ನು ಅನುಭವಿಸುತ್ತ ಸಂತೋಷ ತುಂಬಿದ ಮನಸ್ಸಿನಲ್ಲಿ ರಾಮನ ಪಾದವನ್ನು ಅಂದರೆ ಸ್ವರೂಪವನ್ನು ನೆನೆದಳು.

ಉತ್ತಮಾನಾಂ ತು ಪಾದೇನ ಸರ್ವಂ ರೂಪಂ ತು ಭಣ್ಯತೇ ।

ಶ್ರೇಷ್ಠ ವ್ಯಕ್ತಿಗಳ ಸಮಗ್ರರೂಪವನ್ನು ಪಾದ ಎನ್ನಬೇಕಂತೆ, ಗೌರವ ತೋರಿಸುವುದಕ್ಕಾಗಿ, ಆನಂದತೀರ್ಥ ಭಗವತ್ಪಾದರು, ಟೀಕಾಕೃತ್ಪಾದರು... ... ... ಇತ್ಯಾದಿ

ರಮೆಯೇ ರಾಮನ ಸ್ವರೂಪವನ್ನು ಸರಿಯಾಗಿ ಅರ್ಥಮಾಡಿಕೊಳ್ಳಬಲ್ಲಳು. ಏಕೆಂದರೆ ರಾಮ ರಮೆಯ ಹೃದಯೇಶ್ವರನಾದ್ದರಿಂದಲೇ ರಾಮನೆನಿಸಿದ್ದಾನೆ.

ಪ್ರತಿವಾದಿಗಳು ಆಗ್ರಹದಿಂದ ಕೃಷ್ಣನೆಡೆಗೆ ಬೆಟ್ಟುಮಾಡಿ ಹರಿಯನ್ನು ನಿಂದಿಸಿದರೆ ರಮೆ ರಾಮನ ಪಾದವನ್ನು ತೋರುತ್ತಾಳೆ. ಆ ಮರ್ಯಾದಾ ಪುರುಷೋತ್ತಮನಲ್ಲಿ ಮೇಲುನೋಟಕ್ಕೂ ಯಾವುದೇ ದೋಷ ಕಂಡುಬರಲಾರದು. ಆದ್ದರಿಂದ ಕೃಷ್ಣನಲ್ಲಿ ಕಂಡುಬಂದರೆ ಅದು ವಾಸ್ತವವಲ್ಲವೆಂದು ಸುಲಭವಾಗಿ ಸಿದ್ಧವಾಗುವುದು

'ರಾಮ' ಶಬ್ದದ ಅರ್ಥಪ್ರಪಂಚದ ಒಳಹೊಕ್ಕು ನೋಡಿದರೂ ಹರಿಯ ನಿರ್ದೋಷತ್ವಕ್ಕೆ ಸಾಕ್ಷಿಯಾಗಬಲ್ಲ ಯುಕ್ತಿಗಳು ಹೇರಳ ದೊರಕುವುವು.

'ರಾಮೋ ವಿರಾಮೋ ವಿರಜೋ ಮಾರ್ಗೋ ನೇಯೋ ನಯೋऽನಯಃ'

ಎಂದು ವಿಷ್ಣು ಸಹಸ್ರನಾಮಗಳಲ್ಲಿ ಒಂದು ಈ ರಾಮನಾಮ ಸಹಸ್ರನಾಮಗಳಲ್ಲಿ ಪ್ರತಿಯೊಂದಕ್ಕೂ ನೂರು ಅರ್ಥವೆಂಬುದು ಪ್ರಸಿದ್ಧ. ರಾಮನಾಮದ ಮಟ್ಟಿಗೆ ಹೇಳುವುದಾದರೆ ಬರಿ ನೂರು ಅರ್ಥವೇ ಅಲ್ಲ, ಅದಕ್ಕೆ ಸಾವಿರಪಟ್ಟು, ಅಂದರೆ ಒಂದು ಲಕ್ಷ!

ಸಹಸ್ರನಾಮ ತತ್ತುಲ್ಯಂ ರಾಮನಾಮ ವರಾನನೇ ।

ಎಂದು ಶಿವ ಪಾರ್ವತಿಗೆ ಉಪದೇಶಿಸಿದಂತೆ, ಸಾವಿರ ನಾಮಗಳಿಗೆಲ್ಲ ಇಂದೊಂದೇ ರಾಮನಾಮ ಸಮಾನ ತಾನೇ! ಆದ್ದರಿಂದ ಲಕ್ಷ್ಮೀಶೋಭನ ಪದದ ೩ನೇ ನುಡಿಯಿಂದ ೬೪ನೇ ನುಡಿಯವರೆಗಿನ ಎಲ್ಲ ೩೫ ನುಡಿಗಳ ಅರ್ಥವೂ ರಾಮನಾಮದಲ್ಲಿ ಅಡಕವಾಗಿದೆ ಎಂದರೆ ಆಶ್ಚರ್ಯವೇನಿಲ್ಲ. ಇದನ್ನು ತೋರುವ ದಿಸೆಯಲ್ಲಿ ಒಂದು ಸಣ್ಣ ಯತ್ನ–

೩೦ನೇ ನುಡಿ– ಅಗ್ನಿಯಂತೆ ದೇವರ್ಷಿ ವಿಪ್ರಹತ್ಯಾದಿ ಸಕಲ ಪಾಪಗಳನ್ನು ದಹಿಸಿಕೊಂಡು ಕಾಲಪರಿಮಿತಿ ಇಲ್ಲದವನಾಗಿ ವಟಪತ್ರಶಾಯಿಯಾದವ. (ರಃ ಅಗ್ನಿತುಲ್ಯಃ ಅಮಃ ಕಾಲಪರಿಮಿತಿ ಶೂನ್ಯಶ್ಚ)

೩೧ನೇ ನುಡಿ – ಲೋಕಕ್ಷಯಕಾರಕವಾದ ಹಸಿವು, ತೃಷೆ ಮುಂತಾದ ಸಕಲ ಭಯಗಳನ್ನೂ ಕಳೆವವನು. (ರಿಣಂತಿ ಲೋಕಕ್ಷಯಕಾರೀಣಿ ಭಯಾನಿ ಆ ಸಮ್ಯಕ್ ಮೀನಾತಿ ನಾಶಯತಿ)

೩೨ನೇ ನುಡಿ– ಭೂಮಿಯಲ್ಲಿ ಅವತರಿಸಿ ಸಕಲ ಸಜ್ಜನರಿಗೆ ಸುಖ ಉಂಟುಮಾಡುವವ. (ರಂ ಸುಖಂ ಆ ಸಮಂತಾತ್ ನಿರ್ಮಾತಿ)

೩೩ನೇ ನುಡಿ– ಲಯದಲ್ಲಿಯೂ ಇದ್ದು ಕಾಲಪರಿಮಿತಿ ಇಲ್ಲದವ. ಜನ್ಮಲಯವಿಲ್ಲದವ (ಲಯೇऽಪಿ ರಮತೇ ಅಮಃ ಕಾಲಪರಿಮಿತಿ ಶೂನ್ಯಶ್ಚ)

೩೪ನೇ ನುಡಿ– ಜಠರಾಗ್ನಿಯಿಂದ ಹಿಂಸೆ ಪಡುವವನಲ್ಲ. (ರೇಣ ಜಾಠರಾಗ್ನಿನಾ ಅಮಃ ನ ಮೀಯತೇ)

೩೫ನೇ ನುಡಿ– ರಮೆಯೊಡನೆಯೇ ಭೋಗಿಸುವವನು. (ರಮಾಯಾ ಅಯಂ)

೩೬ನೇ ನುಡಿ– ವೀರ್ಯಚಲನೆ ಇಲ್ಲದವ. (ರಂ ಅಗ್ನಿತುಲ್ಯಂ ನಿಜವೀರ್ಯಂ ನ ಮುಯತೇ ಗಚ್ಛತಿ ಅಪಗಚ್ಛತಿ ಯಸ್ಮಾತ್ ಸಃ)

೩೭ನೇ ನುಡಿ– ಎಲ್ಲ ರೂಪಗಳಲ್ಲಿಯೂ ಸುಖಸ್ವರೂಪಿ ಮತ್ತು ಪೂರ್ಣನಾದ್ದರಿಂದ ಸಕಲದೋಷ ರಹಿತ. (ರಃ ಸುಖರೂಪಃ ಅಮಃ ಪರಿಮಿತಿ ಶೂನ್ಯಃ ಪೂರ್ಣಶ್ಚ)

೩೮ನೇ ನುಡಿ– ಎಲ್ಲ ಜಗವ ನುಂಗಿ ದಕ್ಕಿಸಿಕೊಳ್ಳುತ್ತಾನೆ, ಸುಖವಾಗಿರುತ್ತಾನೆ. (ರಃ ರಮತೇ ಆ ಸಮಂತಾತ್ ಜಗತ್ ಲಯಕಾಲೇ ಮೀನಾತಿ ಹಿನಸ್ತಿ ಭಕ್ಷಣೇನ)

೩೯ನೇ ನುಡಿ– ನರಕ ದುಃಖವಿಲ್ಲದೆ, ಸದಾ ಸುಖಿಸುವವ. ಏಕೆಂದರೆ ನರಕದಲ್ಲಿ ಹಿಡಿಸದಷ್ಟು ದೊಡ್ಡ ಪರಿಮಾಣ ಉಳ್ಳವ (ರಮತೇ. ಅಥ ಚ ಆ ಸಮಂತಾತ್ ವ್ಯಾಪ್ತಂ ಮಾ ಮಾನಂ ಯಸ್ಯ)

೪೦ನೇ ನುಡಿ– ಬೆಂಕಿಯಂತೆ ಉರಿವ ನೃಸಿಂಹ, ತಂದೆ ತಾಯಿ ಇಲ್ಲದವ. (ರಃ ಅಗ್ನಿರಿವ, ಅಮಃ ಸ್ವಶರೀರ ನಿರ್ಮಾತೃ ಪಿತ್ರಾದಿ ಶೂನ್ಯಶ್ಚ)

೪೧ನೇ ನುಡಿ– ನೀರಿನಲ್ಲಿರುವ ಕೂರ್ಮ, ತಂದೆತಾಯಿ ಇಲ್ಲದವ (ಜಲೇ ರಮತೇ, ಸ್ವಶರೀರ ನಿರ್ಮಾತೃ ಪಿತ್ರಾದಿ ರಹಿತಶ್ಚ)

೪೨ನೇ ನುಡಿ– ದೇವಕಿಯ ಗರ್ಭದಲ್ಲಿ ಸುಖಿಸುವವ, ಜನ್ಮವಿಲ್ಲದವ (ಗರ್ಭೇ ರಮತೇ ಅಮಃ ಸ್ವಶರೀರ ನಿರ್ಮಾಣ ರಹಿತಶ್ಚ)

೪೩ನೇ ನುಡಿ– ನಿದ್ರಾಲಸ್ಯದ ಕ್ರೀಡೆಯಾಡುತ್ತ ಬಾಯೊಳಗೆ ಅಪರಿಮಿತ ಜಗತ್ತು ತೋರಿದವ. (ನಿದ್ರಾಲಸ್ಯ ನಾಟ್ಯೇನ ರಮಮಾಣಃ ವದನೇ ಅಮಂ ಅಪರಿಮಿತಂ ಜಗದ್ ದರ್ಶಯತಿ)

೪೪ನೇ ನುಡಿ– ಲೀಲೆಯಿಂದ ರೋಮಕೂಪದಲ್ಲಿ ಬ್ರಹ್ಮಾಂಡ ಧರಿಸಿದವ. (ರಮಮಾಣಃ ರೋಮಕೂಪೇಷು ಅಪರಿಮಿತ ಬ್ರಹ್ಮಾಂಡ ಧಾರಕಶ್ಚ)

೪೫ನೇ ನುಡಿ– ಸುದತಿಯರಿಗೆ ಸಿಲುಕುವವನಲ್ಲ (ರಾಭೀ ರಮಣೀಯಾಭಿಃ ಸ್ತ್ರೀಭಿರಪಿ ಅಮೋಯಂ ಸ್ಥೈರ್ಯಮಸ್ಯ)

೪೬ನೇ ನುಡಿ– ಪರನಾರೀ ಸಂಗರಹಿತನೆಂದು ವೇದ ವೇದ್ಯನಾದವ. (ರಮಣೀಯ ವೇದವಾಗ್ಭಿಃ ಆ ಸಮ್ಯಕ್ ಪರನಾರೀ ಸಂಗದೋಷ ರಹಿತತ್ವೇನ ಮೇಯಃ)

೪೭ನೇ ನುಡಿ– ಜಗಕೆ ಕೈವಲ್ಯವೀವ ಮುಕುಂದ. (ರಂ ಜೀವಸ್ವರೂಪಸುಖಂ ಮುಕ್ತೌ ಆ ಸಮ್ಯಕ್ ಮಾಪಯತಿ ಅನುಭಾವಯತಿ)

೪೮ನೇ ನುಡಿ– ತನ್ನೊಂದಿಗೆ ರಮಿಸಲು ರಮಾವೇಶ ಪಡೆದ ಗೋಪಿಕೆಯರನ್ನು ಕೂಡಿದವ (ಸ್ವೇನ ರಮಣಾರ್ಥಂ ಆ ಈಷತ್ ಮಾಃ ರಮಾವೇಶಯುಕ್ತ ಗೋಪಲಲನಾಃ ಯಸ್ಯ ಸಃ)

೪೯ನೇ ನುಡಿ– ಲೀಲೆಯಿಂದ ಎಲ್ಲ ಹದಿನಾರುಸಾವಿರ ಸತಿಯರಲ್ಲಿಯೂ ಹತ್ತು ಹತ್ತು ಪುತ್ರಸಂಪತ್ತುಳ್ಳವ. (ರಮತೇ ಚಾಸೌ ಆ ಸಮಂತಾತ್ ಷೋಡಷ ಸಹಸ್ರ ಸ್ತ್ರೀಷ್ವಪಿ ಮಾಃ ದಶ ದಶ ಪುತ್ರ ಸಂಪದಃ ಜನಯತಿ ಚ)

೫೦ನೇ ನುಡಿ– ಲೀಲೆಯಿಂದ ಗೋಕುಲದಲ್ಲಿ ಎಲ್ಲೆಡೆ ಭಯಂಕರ ತೋಳಗಳನ್ನು ಉಂಟುಮಾಡಿದವ. (ರಮತೇ ಚಾಸೌ ಆ ಸಮಂತಾತ್ ಗೋಕುಲೇ ಮಾನ್ ಹಿಂಸ್ರವೃಕಾನ್ ಜನಯತಿ ಚ)

೫೧ನೇ ನುಡಿ– ಮಣ್ಣು ತಿನ್ನುವ ಲೀಲೆಯಿಂದ ಬಾಯೊಳಗೆ ಅಪರಿಮಿತ ಜಗತ್ತನ್ನು ತೋರಿದವ. (ಮೃದ್ಭಕ್ಷಣೇನ ರಮಮಾಣಶ್ಚಾಸೌ ವದನೇ ಆಮಂ ಅಪರಿಮಿತಂ ಜಗತ್ ಯಸ್ಯ ಸ ಚ)

೫೨ನೇ ನುಡಿ– ನಾರದಾದಿ ಮುನಿಜನ ಸೇವಿತ (ರಮಂತೇ ಯೋಗಿನೋ ನಾರದಾದಯೋಽಸ್ಮಿನ್)

೫೩ನೇ ನುಡಿ– ನಂಬಿದವರಿಗೆ ವರವೀವ ಬ್ರಹ್ಮಾದಿಗಳಿಗೂ ವರದಾತ. (ರಾಣಾಂ ಭಕ್ತೇಭ್ಯೋ ವರದಾಯಕಾನಾಂ ಬ್ರಹ್ಮಾದೀನಾಮಪಿ ಆ ಸಮಂತಾತ್ ಮಾ ಅಭೀಷ್ಟಸಂಪತ್ ಯಸ್ಮಾತ್ ಸಃ)

೫೪ನೇ ನುಡಿ– ಅಗ್ನಿಯಂತೆ ಪಾಪಗಳನ್ನು ದಹಿಸಬಲ್ಲ, ಎಲ್ಲೆಡೆ ಹರಿವ ಗಂಗೆಯ ಜನಕ. (ರಂ ಪಾಪದಾಹೇ ಅಗ್ನಿತುಲ್ಯಾ ಆ ಸಮಂತಾತ್ ಲೋಕೇಷು ಮಾ ಪ್ರವಹಂತೀ ಗಂಗಾ ಯಸ್ಮಾತ್ ಸಃ)

೫೫ನೇ ನುಡಿ– ರಾಜಸೂಯ ಸಭೆಯಲ್ಲಿ ಅಗ್ರಪೂಜೆಯಿಂದ ಮಾನಿತನಾದವ. (ರಮಣೀಯ ರಾಜಸೂಯ ಸಭಾಯಾಂ ಆ ಸಮ್ಯಕ್ ಸರ್ವೋತ್ತಮತ್ವಖ್ಯಾಪಕತಯಾ ಮಾನಿತಃ ಅಗ್ರಪೂಜಾವಿಧಿನಾ)

೫೬ನೇ ನುಡಿ– ಮರಣ ರಹಿತನಾದ್ದರಿಂದ ನರಕವಿಲ್ಲದವ. (ನರಕಾಭಾವಾತ್ ಸದಾ ರಮತೇ, ಅಮಃ ನ ಪ್ರಮೀಯತೇ ಚ)

೫೭ನೇ ನುಡಿ– ವಿಶ್ವಕ್ಕೆ ಪ್ರಭುವಾದ್ದರಿಂದ ತನ್ನನ್ನು ತಾನೇ ಶಿಕ್ಷಿಸಿಕೊಳ್ಳದವ. (ರಾ ಶಬ್ದೋ ವಿಶ್ವವಚನೋ ಮಶ್ಚಾಪೀಶ್ವರ ವಾಚಕಃ । ವಿಶ್ವಾನಾಮೀಶ್ವರೋ ಯೋ ಹಿ ತೇನ ರಾಮಃ ಪ್ರಕೀರ್ತಿತಃ)

೫೮ನೇ ನುಡಿ– ಬ್ರಹ್ಮಾಂಡ ಲಯವಾದಾಗಲೂ ಸುಖವಾಗಿರುವವನು (ರಮಮಾಣಶ್ಚಾಸೌ ಆ ಸಮಂತಾತ್ ಮಾ ಜಗದ್ಧಿಂಸಾರೂಪ ಪ್ರಳಯಃ ಯಸ್ಯ ಸ ಚ)

೫೯ನೇ ನುಡಿ– ಅಕ್ಷಯ ಕಾಯದಿಂದ ಸುಖವಾಗಿರುವವ, ರಕ್ಕಸರಾಸ್ತ್ರಗಳಿಂದ ಗಾಯವಡೆಯದವ. (ರಮತೇ ಅಕ್ಷಯ ಕಾಯೇನ, ನ ಮೀಯತೇ ಹಿಂಸ್ಯತೇ ಚ ರಾಕ್ಷಸಾಸ್ತ್ರೈಃ)

೬೦ನೇ ನುಡಿ– ನರಕದ ಅಗ್ನಿಯಿಂದ ಹಿಂಸೆಗೊಳಗಾಗದವ. (ರೇಣ ನಾರಕಾಗ್ನಿನಾ ಅಮಃ ನ ಮೀಯತೇ ನ ಹಿಂಸ್ಯತೇ)

೬೧ನೇ ನುಡಿ– ಅಣುವಾಗಿ ನಮ್ಮ ಮನದೊಳಗಿನ ಕೃಷ್ಣ ಮುನಿವ ಕಾಲಕ್ಕೆ ಮಹತ್ತಾಹ (ರಮತೇ ಚಾಸೌ ಅಂತರ್ಮನಸಿ ಆ ಈಷತ್ ಮಾ ಮಾನಂ ಯಸ್ಯ ಸ ಚ । ತಥಾ ರಃ ಅಗ್ನಿರಿವ ಕುಪಿತಶ್ಚಾಸೌ ಆ ಸಮಂತಾತ್ ಮಾ ಮಾನಂ ಯಸ್ಯ ಸ ಚ)

೬೨ನೇ ನುಡಿ– ತಾಯ ಹೊಟ್ಟೆಯಿಂದ ಮೂಲರೂಪ ತೋರಿ ಪೊರವಂಟ (ರಮತೇ ಗರ್ಭೇಽಪಿ, ಆ ಸಮ್ಯಕ್ ಮೂಲರೂಪೇಣೈವ ಮೇಯಃ ಪ್ರಕಟೋ ಭವತಿ ಬಹಿಃ ನಿರ್ಗಮಕಾಲೇ)

೬೩ನೇ ನುಡಿ– ಭೃಗುಮುನಿ ಮೆಟ್ಟಿದ ಕುರುಹುಳ್ಳವ. (ರಂ ರಮಣೀಯಂ ಆ ಅಲ್ಪಪರಿಮಾಣಂ ಚ ಮಂ ಭೃಗುಪಾದಾಘಾತಾನುಮಾಪಕ ಚಿಹ್ನಂ ಯಸ್ಯ ಸಃ)

೬೪ನೇ ನುಡಿ– ರುದ್ರಾದಿ ದೇವತೆಗಳಿಗೂ ಅಳೆಯಲಾಗದಂಥ ಪರಾಕ್ರಮ ಉಳ್ಳವ. (ರಾಶಬ್ದವಾಚ್ಯರುದ್ರಾದಿವಿಶ್ವೇನ ಅಮಃ ಅಪರಿಮೇಯಃ ಪರಾಕ್ರಮೋ ಯಸ್ಯ ಸಃ)

ಈ ಎಲ್ಲ ಅರ್ಥಗಳ ಹಿನ್ನೆಲೆಯಲ್ಲಿ ರಾಮನ ಪಾದವನ್ನು ನೆನೆದು, ನೆನೆಯುವ ಅಭಿನಯ ಮಾಡಿ, ಅಲೌಕಿಕ ರಸಾನುಭವದ ಸಂತೋಷ ತುಂಬಿದ ಮನದಿಂದ ಹರಿಯೇ ತನ್ನ ಕಾಂತ, ಅವನೇ ಸರ್ವೋತ್ತಮ ಎಂಬ ನಿರ್ಣಯವನ್ನು ಲೋಕಕ್ಕೆ ತೋರಿ, ಆ ಹರಿಯ ಬಳಿಗೇ ನಡೆದಳು ಮಹಾಲಕ್ಷ್ಮಿ

– ೬೭ –

**ಕಂದರ್ಪಕೋಟಿಗಳ ಗೆಲುವ ಸೌಂದರ್ಯದ**
**ಚಂದವಾಗಿದ್ದ ಚೆಲುವನ ।**
**ಇಂದಿರೆ ಕಂಡು ಇವನೆ ತನಗೆ ಪತಿ**
**ಯೆಂದವನ ಬಳಿಗೆ ನಡೆದಳು ॥**

ಕೋಟಿ ಮನ್ಮಥರನ್ನು ಗೆಲ್ಲುವಂಥ ಸೌಂದರ್ಯದಿಂದ ಚಂದವಾಗಿದ್ದವ ಶ್ರೀಹರಿ. ಅವನನ್ನು ಕಂಡು ಇಂದಿರೆ 'ಇವನೇ ತನಗೆ ಪತಿ' ಎಂದು ಅವನ ಬಳಿಗೆ ಹೋದಳು.

ಕನ್ಯಾ ವರಯತೇ ರೂಪಂ ಮಾತಾ ವಿತ್ತಂ ಪಿತಾ ಶ್ರುತಂ ।
ಬಾಂಧವಾಃ ಕುಲಮಿಚ್ಛಂತಿ ಮೃಷ್ಟಾನ್ನಮಿತರೇ ಜನಾಃ ॥

'ಕನ್ಯೆ ವರನಲ್ಲಿ ರೂಪಸೌಂದರ್ಯಬೇಕೆಂದು ಬಯಸುತ್ತಾಳೆ. ಅವಳ ತಾಯಿ ಧನಸಂಪತ್ತನ್ನು ಬಯಸುತ್ತಾಳೆ. ತಂದೆ ವಿದ್ಯೆಗೆ ಪ್ರಾಶಸ್ತ್ಯ ನೀಡುತ್ತಾನೆ. ಬಂಧುಗಳು ಕುಲಗೋತ್ರ ವಿಚಾರಿಸುತ್ತಾರೆ. ಇನ್ನಿತರರು ಮೃಷ್ಟಾನ್ನ ಭೋಜನ ಬಯಸುತ್ತಾರೆ.' ಆದ್ದರಿಂದ ಸ್ವಯಂವರ ಕನ್ಯೆಯಾದ ಮಹಾಲಕ್ಷ್ಮಿ ಸ್ವಾಭಾವಿಕವಾಗಿ ಶ್ರೀ ಹರಿಯಲ್ಲಿ ರೂಪಸೌಂದರ್ಯವನ್ನು ಕಂಡಳು, ಮೆಚ್ಚಿಕೊಂಡಳು. ದೋಷಲೇಶ ದೂರನಾಗಿದ್ದು ಮಹಾ ಪರಾಕ್ರಮಿಯೂ ಆದ ಹರಿಯಲ್ಲಿ ಅಪಾರ ರೂಪಸೌಂದರ್ಯವೂ ಕೂಡಿರುವುದು ಬಂಗಾರದ ಹೂವಿಗೆ ಪರಿಮಳ ಬಂದಂತಾಗಿದೆ.

ಇಲ್ಲಿ ಮನ್ಮಥನನ್ನು ಕಂದರ್ಪನೆಂದಿರುವುದು ಅರ್ಥಪೂರ್ಣ. ರೂಪಸೌಂದರ್ಯದಲ್ಲಿ ತನಗೆ ಸಮಾನರು ಮೂಲೋಕದಲ್ಲಿಯೇ ಯಾರೂ ಇಲ್ಲ. ಲೋಕದಲ್ಲಿ ಸುಂದರನೆಂದರೆ ನಾನೆ. ಆದ್ದರಿಂದಲೆ 'ಸುಂದರ' ಎಂದು ಇನ್ನೊಂದು ಹೆಸರೂ ರೂಢಿಯಲ್ಲಿ ತನಗೆ ಲಭಿಸಿದೆ ! ಎಂಬ ದರ್ಪ ಮನ್ಮಥನದು. ಆದ್ದರಿಂದ 'ಕಂ–ದರ್ಪ' ನೆನಿಸಿದ್ದಾನೆ. ಅಂಥ ಕೋಟಿ ಕಂದರ್ಪರ ದರ್ಪವನ್ನು ಮುರಿಯಬಲ್ಲ ಸೌಂದರ್ಯ ಶ್ರೀಹರಿಯದು ಎಂದಾಗ ಹರಿಯ ಸೌಂದರ್ಯ ಎಷ್ಟಿರಬಹುದೆಂಬ ಕಲ್ಪನೆ ಕಲ್ಪನಾತೀತವಾಗಿ ಬೆಳೆಯುತ್ತದೆ.

ಅಲಂಕಾರ ಶಾಸ್ತ್ರದ ಪ್ರಕಾರ ಇದು ಪ್ರತೀಪಾಲಂಕಾರ. ಏಕೆಂದರೆ ಸೌಂದರ್ಯ ವರ್ಣನೆಯಲ್ಲಿ ಮನ್ಮಥನನ್ನು ಉಪಮಾನವಾಗಿ ಬಳಸುವುದು ಸಂಪ್ರದಾಯ – 'ಮನ್ಮಥನಂತೆ ಸುಂದರ' ಎಂದು. ಹೀಗೆ ಹೇಳಿದರೆ ಉಪಮಾಲಂಕಾರ. ಮನ್ಮಥನಂತೆ ಅಲ್ಲ, ಮನ್ಮಥನನ್ನೂ ಮೀರಿಸುತ್ತಾನೆ ಎಂದು ಉಪಮೇಯದಲ್ಲಿ ಉಪಮಾನಕ್ಕಿಂತ ಅಧಿಕ ಸೌಂದರ್ಯವನ್ನು ಹೇಳಿದರೆ ಅದು ಪ್ರತೀಪಾಲಂಕಾರ.

ಆದರೆ ವಸ್ತುತಃ ಪ್ರತೀಪಾಲಂಕಾರದಲ್ಲಿ ಉಪಮೇಯದಲ್ಲಿ ಇಲ್ಲದ ಅಧಿಕ ಸೌಂದರ್ಯವನ್ನಾರೋಪಿಸಿ ಉಪಮಾನವನ್ನು ಮೀರಿಸುತ್ತಿದೆ ಎಂದು ವರ್ಣಿಸುವುದರಿಂದ ಕಾವ್ಯದಲ್ಲಿ ಅಲಂಕಾರ ಚಮತ್ಕಾರ ಹೆಚ್ಚಿದರೂ ಕಾವ್ಯನಾಯಕನ ರೂಪಸೌಂದರ್ಯ ಕಡಿಮೆಯಾಗುತ್ತದೆ. ಇದು ಅನುಚಿತ, ಅಲಂಕೃತ್ಯ ಶಿರಶ್ಛೇದವೆ ಸರಿ.

ಈ ಆಕ್ಷೇಪಕ್ಕೆ ಉತ್ತರ 'ಕಂದರ್ಪ' ಎಂಬಲ್ಲಿ 'ಕಂ' ಶಬ್ದದಿಂದ ಬಂದಿದೆ. ಕುತ್ಸಿತಃ ದರ್ಪಃ ಯಸ್ಯಾಸೌ 'ಕೆಟ್ಟ ದರ್ಪ ಉಳ್ಳವ' ಎಂಬ ಅರ್ಥದಲ್ಲಿ ಕಂದರ್ಪ ಶಬ್ದವನ್ನು ಇಲ್ಲಿ ಗ್ರಹಿಸಬೇಕು. ಕಂದರ್ಪನ ದರ್ಪ ಒಳ್ಳೆಯ ದರ್ಪವಲ್ಲ. ಕೆಟ್ಟ ದರ್ಪ ಏಕೆಂದರೆ ಸಾತ್ವಿಕ, ರಾಜಸ, ತಾಮಸರೆಂದು ಮೂರು ಬಗೆಯ ಕಂದರ್ಪರಿದ್ದಾರೆಂದು ಸ್ಕಾಂದ ಪುರಾಣ ಹೇಳಿದೆ–

ಸತ್ಯಂ ಚಾಪಿ ಶ್ರುತೇರ್ವಾಕ್ಯಂ ತವ ರೂಪಂ ತ್ರಿಧಾ ಗತಂ ।
ತಾಮಸಂ ರಾಜಸಂ ಚೈವ ಸಾತ್ವಿಕಂ ಚಾಪಿ ಮನ್ಮಥ ॥
ಅಮುಕ್ತಿತಃ ಕಾಮನಾ ಯಾ ರೂಪಂ ತತ್ತಾಮಸಂ ತವ ।
ಸುಖಬುದ್ಧ್ಯಾ ಸ್ಪೃಹಾ ಯಾ ಚ ರೂಪಂ ತದ್ರಾಜಸಂ ತವ ।
ಕೇವಲಂ ಯಾಪದರ್ಥಾರ್ಥಂ ತದ್ರೂಪಂ ಸಾತ್ವಿಕಂ ತವ ॥

'ಮನ್ಮಥ, ಶ್ರುತಿಸ್ಮೃತಿಗಳಲ್ಲಿ ಮಹಾಶನ 'ಮಹಾಪಾಪ್ಮಾ ನಿತ್ಯವೈರಿ ದುಷ್ಪೂರ ಅನಲ' ಎಂದು ಮುಂತಾಗಿ ಕಾಮನನ್ನು ನಿಂದಿಸಿರುವುದು ನಿಜವೆ. ಆದರೆ ನಿನ್ನ ರೂಪವು ತಾಮಸ, ರಾಜಸ, ಸಾತ್ವಿಕ ಎಂದು ಮೂರು ಬಗೆ. ಮುಕ್ತಿಗೆ ವಿರೋಧಿಯಾದ ವಿಷಯದಲ್ಲಿ ಮಾಡುವ ಕಾಮನೆ ನಿನ್ನ ತಾಮಸ ರೂಪ. ವಿಷಯ ಪದಾರ್ಥಗಳಲ್ಲಿ ಸುಖಕರವೆಂಬ ಭಾವನೆಯಿಂದ ಮಾಡುವ ಬಯಕೆ ನಿನ್ನ ರಾಜಸ ರೂಪ. ಕೇವಲ ಅರ್ಥಕ್ಕಾಗಿ, ಅಂದರೆ ಪರಮಪುರುಷಾರ್ಥವಾದ ಮೋಕ್ಷಕ್ಕಾಗಿ ಮತ್ತು ಅನರ್ಥವಲ್ಲದ ಅಂದರೆ ಮೋಕ್ಷ ವಿರೋಧಿಯಲ್ಲದ ಸುಖಭೋಗದಲ್ಲಿ ಯಾವಾಗ ಕಾಮನೆ ಉಂಟಾಗುವುದೋ ಆಗ ಅದು ನಿನ್ನ ಸಾತ್ವಿಕ ರೂಪವೆನಿಸುತ್ತದೆ'. ಈ ವಿವರಣೆಯಂತೆ ಅಯೋಗ್ಯ ಕಾಮನೆಗೆ ಅಭಿಮಾನಿಯಾದ

ಕಾಲನೇಮಿ ಎಂಬ ಅಸುರ ತಾಮಸ ಮನ್ಮಥನೆನಿಸುತ್ತಾನೆ. ವಿಷಯಾಸಕ್ತಿಗೆ ಅಭಿಮಾನಿಯಾದ ನಿತ್ಯಸಂಸಾರಿ ಚೇತನ ರಾಜಸ ಮನ್ಮಥ. ಇವರಿಬ್ಬರಲ್ಲಿಯೂ ಸ್ವಾಭಾವಿಕ ಸೌಂದರ್ಯವಿಲ್ಲ. ಸ್ವಾಭಾವಿಕ ಸೌಂದರ್ಯ ಸದ್ಗುಣಗಳೆಲ್ಲ ದೇವತೆಗಳದು. ದೇವತೆಗಳ ಆವೇಶದಿಂದ ಅಸುರಾದಿಗಳಲ್ಲಿ ಕೆಲವೊಮ್ಮೆ ಆ ಗುಣಗಳು ಕಂಡು ಬರುತ್ತವೆ. ಆದ್ದರಿಂದ ರಾಜಸ, ತಾಮಸ ಕಂದರ್ಪರು ತಾವು ಸುಂದರರೆಂದು ದರ್ಪ ತೋರಿದರೆ ಅದು ಅನುಚಿತ ಕೆಟ್ಟ ದರ್ಪವಾಗುತ್ತದೆ. ಮೋಕ್ಷದಲ್ಲಿಯೂ ಅದಕ್ಕೆ ಅವಿರೋಧಿಯಾದ ವಿಷಯ ಭೋಗಗಳಲ್ಲಿಯೂ ಉಂಟಾಗುವ ಸಾತ್ವಿಕ ಕಾಮನೆಗೆ ಅಭಿಮಾನಿ ಸಾತ್ವಿಕಮನ್ಮಥ. ಅವನಲ್ಲಿ ಸ್ವಾಭಾವಿಕ ಸೌಂದರ್ಯವಿದೆ. ಆದರೆ ಎಷ್ಟು ?

> ದ್ವಾತ್ರಿಂಶಲ್ಲಕ್ಷಣೈಃ ಸಮ್ಯಗ್ ಯುಕ್ತಾ ವಾಯುತ್ವಯೋಗ್ಯಕಾಃ ।
> ಅಷ್ಟಾವಿಂಶಲ್ಲಕ್ಷಣಾಶ್ಚ ಗಿರೀಶ ಪದಯೋಗಿನಃ ।
> ಚತುರ್ವಿಂಶತಿಮಾರಭ್ಯ ಷೋಡಶಾದಾ ಸುರಾಃ ಸ್ಮೃತಾಃ ।
> ಆSಷ್ಟಕಾದೃಷಯಶ್ಚೋಕ್ತಾಸ್ತದೂನಾಶ್ಚಕ್ರವರ್ತಿನಃ ॥

ಎಂದು ಬೃಹದಾರಣ್ಯಕ ಭಾಷ್ಯೋಕ್ತ ಮಹಾಸಂಹಿತಾವಚನ ಹೇಳುವಂತೆ ವಾಯುಪದವಿಗೆ ಯೋಗ್ಯರಾದವರಲ್ಲಿ ಮೂವತ್ತೆರಡು ಸೌಂದರ್ಯ ಲಕ್ಷಣಗಳಿರುತ್ತವೆ. ರುದ್ರಪದವಿಗೆ ಯೋಗ್ಯರಾದವರಲ್ಲಿ ಇಪ್ಪತ್ತೆಂಟು. ಉಳಿದ ದೇವತೆಗಳಲ್ಲಿ ಇಪ್ಪತ್ತನಾಲ್ಕರಿಂದ ಹದಿನಾರರ ಒಳಗೆ ಋಷಿಗಳಲ್ಲಿ ಹದಿನಾರರಿಂದ ಎಂಟರ ಒಳಗೆ, ಅದಕ್ಕಿಂತಲೂ ಕಡಿಮೆ ಚಕ್ರವರ್ತಿಗಳಲ್ಲಿ. ಈ ನಿಯಮದಂತೆ ಸಾತ್ವಿಕ ಮನ್ಮಥನಲ್ಲಿ ಹೆಚ್ಚೆಂದರೆ ಇಪ್ಪತ್ನಾಲ್ಕು ಲಕ್ಷಣಗಳಿರಬಹುದು. ಅವನನ್ನೂ ಮೀರಿಸುವ ಇಪ್ಪತ್ತೆಂಟು ಲಕ್ಷಣಗಳಿಂದೊಪ್ಪುವ, 'ಕಾಂತ್ಯಾ ವಿಶ್ವವಿಮೋಹನಂ ಪಶುಪತಿಂ' ಎನ್ನುವ ಕೀರ್ತಿಯ ಶಿವನಿದ್ದಾನೆ. ಅವನನ್ನೂ ಮೀರಿಸುವ ಮೂವತ್ತೆರಡು ಲಕ್ಷಣಗಳಿಂದೊಪ್ಪುವ ಸೌಂದರ್ಯರೂಪ ಶ್ರೀಮದಾನಂದ ಎಂದು ಪ್ರಶಂಸಿಸಲ್ಪಡುವ ವಾಯುದೇವನಿದ್ದಾನೆ. ಇನ್ನು ಶ್ರೀಹರಿಯಲ್ಲಿ ಸೌಂದರ್ಯ ಲಕ್ಷಣಗಳಂತೂ ಅಪರಿಮಿತ. ಅವನಿಗೆ ಉಪನಿಷತ್ತಿನಲ್ಲಿ 'ಭೂಮ' ಎಂದೇ ಹೆಸರಿದೆ. ಎಲ್ಲ ಸದ್ಗುಣಗಳೂ ಅವನಲ್ಲಿ ಅಪರಿಮಿತ, ಪೂರ್ಣ ಎಂದರ್ಥ. ವಸ್ತುಸ್ಥಿತಿ ಹೀಗಿರುವಾಗ ಸಾತ್ವಿಕ ಮನ್ಮಥನಾದರೂ ತಾನೆ ಸುಂದರನೆಂದು ದರ್ಪತೋರಿದರೆ ಅದು ಉಚಿತವಾಗಲಾರದು. ಆದ್ದರಿಂದ ಮನ್ಮಥನ ದರ್ಪ ಕೆಟ್ಟದು, ಅವನಿಗೆ ಕೋಟಿಪಾಲು ಮಿಗಿಲು ಶ್ರೀಹರಿ ಎಂಬ ನಿಜಾಂಶವನ್ನು ಕಂದರ್ಪ ಶಬ್ದದಲ್ಲಿ 'ಕಂ' ಶಬ್ದ ಧ್ವನಿಸುತ್ತದೆ.

ಹೀಗೆ ಧ್ವನಿಯನ್ನು ಕಂಡುಕೊಳ್ಳುವ ಪಕ್ಷದಲ್ಲಿ ಹಿಂದೆ ಹೇಳಿದ ಅಲಂಕಾರ ಬಿದ್ದು ಹೋಗುತ್ತದೆ. ನಿಜ. ಆದರೆ ಮೇಲುನೋಟಕ್ಕೆ ಅಲಂಕಾರವಿದ್ದೇ ಇದೆ. ಆಳಕ್ಕಿಳಿದು ನೋಡಿದಾಗ ಕಾವ್ಯ ಸೌಂದರ್ಯಕ್ಕಿಂತ ಕಾವ್ಯನಾಯಕನ ಸೌಂದರ್ಯಕ್ಕೇ ಪ್ರಾಶಸ್ತ್ಯ ತಾನೆ ? ವಸ್ತುತಃ ಕಾವ್ಯಕ್ಕೆ ಬಾಹ್ಯ ಅಲಂಕಾರಕ್ಕಿಂತ ಆತ್ಮಭೂತವಾದ ಧ್ವನಿಗೇ ಪ್ರಾಶಸ್ತ್ಯ ಎಂದು ಆಲಂಕಾರಿಕರೆ ಒಪ್ಪಿದ್ದಾರೆ. ಆದ್ದರಿಂದ ಅಲಂಕಾರಕ್ಕಾಗಿ ಅಳಬೇಕಾಗಿಲ್ಲ.

ಕಂದರ್ಪ ಕೋಟಿಗಳನ್ನು ಗೆಲ್ಲುವ ಬಗೆ ಇನ್ನೊಂದು ಇದೆ. ಅನಂತವಾದ ಭೂತ ಭವಿಷ್ಯತ್ ವರ್ತಮಾನ ಕಲ್ಪಗಳಲ್ಲಿ ಹಿಂದೆ ಆಗಿಹೋದ, ಈಗ ಇರುವ, ಮುಂದೆ ಬರಲಿರುವ ಎಲ್ಲ ಕೋಟಿಮನ್ಮಥರ ಸೌಂದರ್ಯ ಅಭಿವ್ಯಕ್ತವಾಗುವುದು ಅದರೊಳಗೆ ಹುದುಗಿರುವ ಶ್ರೀಹರಿಯ ಸೌಂದರ್ಯದ ಬಲದಿಂದ, ವಿದ್ಯುಚ್ಚಾಲಿತ ಯಂತ್ರದ ಶಕ್ತಿ ಅಭಿವ್ಯಕ್ತವಾಗುವುದು ಅದರೊಳಗೆ ಹರಿಯುವ ವಿದ್ಯುತ್ತಿನಿಂದ ತಾನೆ ? ಕೋಟಿ ಮನ್ಮಥರ ಸೌಂದರ್ಯವನ್ನೂ ಹೀಗೆ ಹರಿಯ ಸೌಂದರ್ಯ ಅಭಿವ್ಯಕ್ತಗೊಳಿಸದಿದ್ದಲ್ಲಿ ಅದು ಇದ್ದೂ ಇಲ್ಲದಂತಾಗುತ್ತದೆ. ಆದ್ದರಿಂದ ಕೋಟಿ ಮನ್ಮಥರ ಸೌಂದರ್ಯವನ್ನೂ ಮೀರಿರುವ ಅಪರಿಮಿತ ಸೌಂದರ್ಯದ ಚೆಲುವ ಸಾಕ್ಷಾತ್ ಮನ್ಮಥ ಮನ್ಮಥನೆನಿಸಿದ ಶ್ರೀಹರಿ. ಅವನ ಸೌಂದರ್ಯವನ್ನು ಹೇಳಲು ಒಂದೆರಡೇ ಶಬ್ದ ಸಾಲದು. 'ಸೌಂದರ್ಯ'ದ 'ಚೆಂದ'ವಾಗಿದ್ದ 'ಚೆಲುವ'ನೆನ್ನಬೇಕು.

ಅಥವಾ ಚಂದ ಎಂದರೆ ಅನುರೂಪ, ಒಪ್ಪುವಂತಹುದು ಎಂದರ್ಥ ಇಂದಿರೆ ಎಂದರೆ 'ಇದಿ ಪರಮೈಶ್ವರ್ಯೇ' – ಸೌಂದರ್ಯಾದಿ ಸಕಲ ಸದ್ಗುಣ ಸಂಪತ್ತಿಗೇ ಇನ್ನೊಂದು ಹೆಸರು ಆದ್ದರಿಂದ ಭಾಮಿನೀ ವಿಲಾಸದಲ್ಲಿ ಸೌಂದರ್ಯ ಎಂಬ ಅರ್ಥದಲ್ಲಿ ಇಂದಿರಾ ಶಬ್ದ ಪ್ರಯೋಗವಿದೆ–

ನಿಶಿ ನಿಃಸರದಿಂದಿರಂ ಕಥಂ ಕಲಯಾಮಃ ಕಲಯಾಪಿ ಪಂಕಜಂ ।

ಹೀಗೆ ಅಪಾರ ಸೌಂದರ್ಯ ಸಂಪತ್ತೇ ಮೂರ್ತಿಮತ್ತಾಗಿ ಬಂದಂತಿರುವ ಮಹಾಲಕ್ಷ್ಮಿಗೆ ಕೋಟಿ ಮನ್ಮಥರನ್ನು ಮೀರಿಸುವ ಸೌಂದರ್ಯದ ಚೆಲುವನಾದ ಶ್ರೀಹರಿ ಚಂದವಾಗಿರುತ್ತಾನೆ, ಯೋಗ್ಯನಾಗಿರುತ್ತಾನೆ, ಅನುರೂಪನಾಗಿರುತ್ತಾನೆ ಎಂದರ್ಥ.

– ೬೮ –

**ಇತ್ತರದ ಸುರರ ಸುತ್ತ ನೋಡುತ ಲಕ್ಷ್ಮಿ**
**ಚಿತ್ತವ ಕೊಡದೆ ನಸುನಗುತ ।**

ಚಿತ್ತವ ಕೊಡದೆ ನಸುನಗುತ ಬಂದು ಪುರು-
ಷೋತ್ತಮನ ಕಂಡು ನಮಿಸಿದಳು ॥

ಮಹಾಲಕ್ಷ್ಮಿ ತನ್ನ ಸುತ್ತಲೂ ಇತ್ತರದ ಸುರರನ್ನು ಅಂದರೆ ಎರಡು ಸಾಲಾಗಿ ಸ್ವಯಂವರ ಮಂಟಪದಲ್ಲಿ ಕುಳಿತಿದ್ದ ದೇವತೆಗಳನ್ನು ನೋಡುತ್ತ ಅವರಾರಿಗೂ ಚಿತ್ತವನ್ನು ಕೊಡದೆ, ವರಿಸದೆ ನಸುನಕ್ಕಳು ನಸುನಗುತ್ತಲೆ ಬಂದು ಪುರುಷೋತ್ತಮನನ್ನು ಕಂಡು ನಮಿಸಿದಳು

ಮಹಾಲಕ್ಷ್ಮಿ ದೇವತೆಗಳ ಕಡೆಗೆ ಮಂದಹಾಸದ ದೃಷ್ಟಿ ಬೀರಿದಳು. ಶ್ರೀ ಹರಿಯು ಕಡೆಗೂ ಮಂದಹಾಸದ ದೃಷ್ಟಿ ಬೀರಿದಳು ಆದರೆ ಅಭಿಪ್ರಾಯ ಬೇರೆ ಬೇರೆ ಆಗಿತ್ತು.

ದೇವತೆಗಳೆಡೆಗೆ ಮಂದಹಾಸ ಬೀರಲು ಕಾರಣವಿದು- ಅವರು ಇತ್ತರದ ಸುರರು ಎರಡು ಬಗೆಯ ಸ್ವಭಾವ ಅವರದು 'ಧರ್ಮ ಉಂಟೊಬ್ಬನಲಿ ಹೆಮ್ಮೆಯು ಹೆಸರಿಗೆ, ಅಮ್ಮಮ್ಮ! ತಕ್ಕ ಗುಣವಿಲ್ಲ', 'ಧರ್ಮಃ ಕ್ವಚಿತ್ ತತ್ರ ನ ಭೂತಸೌಹೃದಂ' ಎಂದು ಮುಂತಾಗಿ ಹಿಂದೆ ಹೇಳಿದಂತೆ ಈ ದೇವತೆಗಳಲ್ಲಿ ಒಂದು ಒಳ್ಳೆಯ ಗುಣವಿದ್ದರೆ ಅದರ ಜೊತೆಗೆ ಒಂದು ನ್ಯೂನತೆ ಇದ್ದೇ ಇರುತ್ತದೆ. ಶ್ರೀಹರಿಯಲ್ಲಿ ಹಾಗಲ್ಲ ಎಲ್ಲ ಗುಣವೂ ಇದೆ ಒಂದು ನ್ಯೂನತೆಯೂ ಇಲ್ಲ. ಏಕೆಂದರೆ ಇತರರಲ್ಲಿ ದೋಷವೆನಿಸಬಹುದಾದ ಸ್ವಭಾವವೂ ಅವನಲ್ಲಿ ಗುಣವೇ ಆಗಿರುತ್ತದೆ-

ಯೇ ದೋಷಾ ಇತರತ್ರಾಪಿ ತೇ ಗುಣಾಃ ಪರಮೇ ಮತಾಃ ॥

ಬಡವನ ಸಿಟ್ಟು ದವಡೆಗೇ ಕುತ್ತು ಎಂಬಂತೆ ಅಲ್ಪಶಕ್ತರಾದ ಇತರರಲ್ಲಿ ಹಸಿವು, ಹಿಂಸೆ, ಕ್ರೌರ್ಯ ಮುಂತಾದವು ದೋಷಗಳೇ ಆಗುವವು. ಸರ್ವಶಕ್ತನಾದ ಶ್ರೀಹರಿಯಲ್ಲಿ ಅವೂ ಗುಣಗಳೇ ಆಗುತ್ತವೆ. ಬ್ರಹ್ಮಾಂಡವನ್ನೇ ಪ್ರಳಯಕಾಲದಲ್ಲಿ ಸುಟ್ಟು ತಿನ್ನುವಂಥ ಹಸಿವು ಇದ್ದರೂ ಹರಿಗೆ ಅದರಿಂದ ಏನೂ ಪೀಡೆ ಆಗಿಲ್ಲ. ಹಿಂಸೆ ಮಾಡಿದರೂ ಪಾಪಲೇಪವಿಲ್ಲ. ವಿಪ್ರರ ಕೊಂದು ತನ್ನುದರದೊಳಗೆ ತೀವಿರ್ದ ಹರಿಗೆ ದುರಿತವ ಭಾವಜ್ಞರೆಂಬರೆ ? ಇತರರಲ್ಲಿ ಹೊಟ್ಟೆಬಾಕತನ ದೋಷ. ಹರಿ ಭಕ್ತರನ್ನು ಅನುಗ್ರಹಿಸಲೆಂದು ಎಷ್ಟುಕೊಟ್ಟರೂ ಉಣ್ಣುತ್ತಾನೆ. ಇತರರು ಪ್ರಶಂಸೆಯಿಂದ ಉಬ್ಬಿದರೆ ದೋಷ. ಹರಿ ಉಬ್ಬಿದರೆ ಅನುಗ್ರಹ. ಇತರಲ್ಲಿ ಲೋಭ ದೋಷ ಹರಿ ಕಾಸು ಬಿಡದ ತಿಮ್ಮಪ್ಪನಾಗಿ ಅನುಗ್ರಹಿಸುವ. ಇತರರಲ್ಲಿ ಕಪ್ಪು ಬಣ್ಣ ದೋಷ ಹರಿಯಲ್ಲಿ ನೀಲಮೇಘ ಶ್ಯಾಮಲವರ್ಣಗುಣ ಎಂದು ಮುಂತಾಗಿ ಹಿಂದೆ ಹೇಳಿದೆ ಆದ್ದರಿಂದ ದೇವತೆಗಳೇ ನೀವು ಯಾರೂ ನನ್ನ ಪತಿಗಳಾಗಲು ಯೋಗ್ಯರಲ್ಲ. ನೀವು ನನ್ನನ್ನು ಹೊಂದುವ ಆಸೆಯನ್ನು ಕನಸಿನಲ್ಲಿಯೂ ಮಾಡದಿರಿ

ಎನ್ನುವಳೋ ಎಂಬಂತೆ ನಸುನಕ್ಕಳು ಮಹಾಲಕ್ಷ್ಮಿ

ಅಹಂ ರುದ್ರೇಭಿರ್ವಸುಭಿಶ್ಚರಾ–
ಮ್ಯಹಮಾದಿತ್ಯೈರುತ ವಿಶ್ವದೇವೈಃ ॥

ಎನ್ನುವಂತೆ ನಾನು ಸಂಚಾರಕ್ಕೆ ಹೊರಟಾಗೆಲ್ಲ ನನ್ನ ಪರಿವಾರದವರಾಗಿ ಎಡಬಲಗಳಲ್ಲಿ ಜೊತೆಗೇ ಬರುವವರು, ಇತ್ತರದವರು, ನೀವು ಎಲ್ಲ ಸುರರು. ಅಂಥ ನಿಮ್ಮನ್ನು ನಾನು ವರಿಸುವ ಸಂಭವವೇ ಇಲ್ಲ.

'ನೀವು ಸುರರು', 'ಸುಷ್ಠು ರಾಂತಿ' ಭಜಿಸುವವರಿಗೆ ಇಷ್ಟಾರ್ಥ ಕೊಡುವವರೆಂದು ಪ್ರಸಿದ್ಧರಾಗಿರುವಿರಿ. ಆದರೆ ನಿಮಗೇ ನಿಮ್ಮ ಅಭೀಷ್ಟಗಳನ್ನು ಕೊಡುವವಳು ನಾನು. ನೀವು ಯಾಗಾದಿ ಸತ್ಕರ್ಮಗಳಿಂದ ನನ್ನನ್ನಾರಾಧಿಸಿ ಸಕಲ ಸಂಪತ್ತುಗಳನ್ನು ಪಡೆದಿರುವಿರಿ–

ಅಹಂ ದಧಾಮಿ ದ್ರವಿಣಂ ಹವಿಷ್ಮತೇ
ಸುಪ್ರಾವ್ಯೇ ಯಜಮಾನಾಯ ಸುನ್ವತೇ ॥

ಬೇರೆಲ್ಲ ಸಂಪತ್ತುಗಳು ಹಾಗಿರಲಿ, ನಿಮಗೆ ನಿಮ್ಮ ನಿಮ್ಮ ಪದವಿ ಅಧಿಕಾರಗಳೂ ನನ್ನಿಂದಲೇ ಬಂದಿವೆ–

ಯಂ ಕಾಮಯೇ ತಂ ತಮುಗ್ರಂ ಕೃಣೋಮಿ
ತಂ ಬ್ರಹ್ಮಾಣಂ ತಮೃಷಿಂ ತಂ ಸುಮೇಧಾಂ ॥

ಆದ್ದರಿಂದ ನಾನು ನಿಮ್ಮನ್ನು ವರಿಸುವ ಪ್ರಶ್ನೆಯೇ ಇಲ್ಲ. ಹರಿಯನ್ನು ವರಿಸುತ್ತೇನೆ ಏಕೆಂದರೆ ನೀವು ಸುರರು, ಭಜಿಸಿದವರಿಗೆ ಸ್ವರ್ಗಾದ್ಯಭೀಷ್ಟಗಳನ್ನು ನೀಡಬಲ್ಲಿರಿ. ನಿಜ. ಆದರೆ ಮೋಕ್ಷವನ್ನು ಕೊಡಲಾರಿರಿ.

ತ್ಯಾಗಃ ಕ್ವಚಿತ್ ತಚ್ಚ ನ ಮುಕ್ತಿಕಾರಣಂ ।

ಎನ್ನುತ್ತದೆ ಭಾಗವತ. ಮೋಕ್ಷಾದಿ ಸಕಲ ಪುರುಷಾರ್ಥಗಳನ್ನೂ ಕೊಡಬಲ್ಲವನು ಶ್ರೀಹರಿಯೊಬ್ಬನೇ, ಮುಚುಕುಂದ ಮಹಾರಾಜನಿಗೆ ನೀವೆ ಹೇಳಿದ ಮಾತು ಇದು–

ವರಂ ವರಯ ಭದ್ರಂ ತೇ ಋತೇ ಕೈವಲ್ಯಮಾತ್ಮನಃ ।
ಏಕ ಏವೇಶ್ವರಸ್ತಸ್ಯ ಭಗವಾನ್ ವಿಷ್ಣುರವ್ಯಯಃ ॥

'ನಾವೆ ಶಾಶ್ವತರಲ್ಲ, ಇತರರಿಗೆ ಶಾಶ್ವತವಾದ ಮೋಕ್ಷವನ್ನು ನಾವೆಂತು ಕೊಡಬಲ್ಲೆವು ? ಶಾಶ್ವತನಾದ ಹರಿಯೊಬ್ಬನೆ ಮೋಕ್ಷ ಕೊಡಬಲ್ಲ. ಆದ್ದರಿಂದ ಮೋಕ್ಷವನ್ನು ಹೊರತು ಬೇರೇನನ್ನಾದರೂ ಕೇಳು, ಕೊಡುವೆವು.' ಶ್ರೀಹರಿ ಪುರುಷೋತ್ತಮನೆಂದೇ ಪ್ರಸಿದ್ಧನಾದವನು–

ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ ॥

'ಪುರು ಸನೋತಿ' ಮೋಕ್ಷರೂಪವಾದ ಮಹಾಫಲವನ್ನು ಕೂಡ ಕೊಡುವುದರಿಂದ ಪುರುಷನೆಂದೆನಿಸಿದ್ದಾನೆ. ಆದ್ದರಿಂದಲೆ ಸರ್ವೋತ್ತಮನೂ ಆಗಿದ್ದಾನೆ ಹೀಗೆ ಪುರುಷೋತ್ತಮನೆನಿಸಿದ ಶ್ರೀಹರಿಯನ್ನು ಬಿಟ್ಟು ನಿಮ್ಮನ್ನು ವರಿಸುವುದುಂಟೆ ?

ನೀವೆಲ್ಲರೂ ಪುರುಷರು, ನಿಜ, 'ಪುರಿ ಶೇತೇ' ಪ್ರಾಕೃತ ಶರೀರಧಾರಿಗಳಾಗಿರುವಿರಿ ಎಂಬ ಅರ್ಥದಲ್ಲಿ ಆದ್ದರಿಂದ ನೀವು ಕ್ಷರ ಪುರುಷರು, ಅಂದರೆ, ಎಂದಾದರೂ ನಾವನ್ನಪ್ಪುವವರು. ನಾನು ಅಕ್ಷರ ಪುರುಷ ಎನಿಸಿದವಳು, ನಿತ್ಯಮುಕ್ತಳಾಗಿದ್ದೇನೆ, ಪುರುಷನಂತೆ ಶಕ್ತಿಶಾಲಿಯಾಗಿದ್ದೇನೆ ಎಂಬ ಅರ್ಥದಲ್ಲಿ ಕ್ಷರ ಅಕ್ಷರ ಪುರುಷರಿಗಿಂತ ಬೇರೆಯಾಗಿದ್ದು ಉತ್ತಮನಾದ್ದರಿಂದ ಪುರುಷೋತ್ತಮನೆನಿಸಿದವ ಶ್ರೀಹರಿ. ಅವನನ್ನಲ್ಲದೆ ನಿಮ್ಮನ್ನೆಂತು ನಾನು ವರಿಸಲಿ ?

ನೀವು 'ಸುರರು', 'ಸುಷ್ಠು ರಮಂತೇ' ಹರಿಧ್ಯಾನದಲ್ಲಿಯೇ ಮಹಾಸುಖ ಕಂಡುಕೊಳ್ಳುವವರು ಎಂದ ಮೇಲೆ ಆ ಹರಿಯನ್ನು ಬಿಟ್ಟು ನಿಮ್ಮನ್ನು ನಾನೇಕೆ ವರಿಸಬೇಕು ಎನ್ನುವ ಅಭಿಪ್ರಾಯದಿಂದಲೂ ನಸುನಗುತ್ತಿದ್ದಾಳೆ ಮಹಾಲಕ್ಷ್ಮಿ.

ಈ ಅಭಿಪ್ರಾಯದ ನಸುನಗು ತೋರಿಕೆಯದು, ನಟನೆಯದು. ವಾಸ್ತವದಲ್ಲಿ ಬೇರೆಯೇ ಅಭಿಪ್ರಾಯವಿದೆ. ಮಹಾಲಕ್ಷ್ಮಿ ಹೇಳುತ್ತಾಳೆ, 'ದೇವತೆಗಳೆ, ನೀವೇಕೆ ಇಲ್ಲಿಗೆ ಬಂದಿರುವಿರಿ ಎಂಬುದು ನನಗೆ ಗೊತ್ತು ನೀವು ಸುರರು. 'ಸುಷ್ಠು ರಮಂತೇ' ನಿಮ್ಮೆಲ್ಲರ ಮಾತಾಪಿತೃಗಳಾದ ನಮ್ಮ ವಿವಾಹೋತ್ಸವವನ್ನು ಕಣ್ತುಂಬ ನೋಡಿ ಸುಖಿಸಬೇಕೆನ್ನುವವರು. ಅದಕ್ಕಾಗಿಯೇ ಇತ್ತರದಲ್ಲಿ ಎರಡು ಪಾರ್ಶ್ವಗಳಲ್ಲಿ ಸಾಲಾಗಿ ಕಾದು ಕುಳಿತಿರುವಿರಿ, ನಿಮಗೆ ಆ ರಸನಿಮಿಷ ಇದೀಗ ಲಭ್ಯವಾಗಲಿದೆ.

ನಮ್ಮ ವಿವಾಹೋತ್ಸವದ ಸಂಭ್ರಮ ಕಾಲದಲ್ಲಿ ಪ್ರಸನ್ನರಾದ ನಮ್ಮ ಕಟಾಕ್ಷಕ್ಕೆ ಪಾತ್ರರಾಗಿ ಸಕಲ ಸಂಪತ್ತುಗಳನ್ನು ಹೊಂದಿ ಸುಖಿಸುವವರು, ಸುರರು ನೀವು. ನಿಮಗೆ ಅಂಥ ಸುಖ ಇನ್ನು ಹೆಚ್ಚು ದೂರವಿಲ್ಲ. ನಿತ್ಯ ದಂಪತಿಗಳಾದ ನಾವು

ವಿವಾಹ ಮಾಡಿಕೊಳ್ಳುತ್ತಿದ್ದೇವೆ, ನಿಮ್ಮ ಸುಖ ಸಂತೋಷಕ್ಕಾಗಿ.' ಹೀಗೆ ಇದು ಮಹಾಲಕ್ಷ್ಮಿಗೆ ದೇವತೆಗಳ ಮೇಲಿರುವ ವಾತ್ಸಲ್ಯದ ಮಂದಹಾಸ.

ಸ್ಕಂದ ಪುರಾಣದಲ್ಲಿ ಸಮುದ್ರರಾಜನು ಬ್ರಹ್ಮನಲ್ಲಿ ಕನ್ಯೆಯಾದ ಮಹಾಲಕ್ಷ್ಮಿಯನ್ನು ಯಾರಿಗೆ ಕೊಡಲಿ ಎಂದು ಹೇಳಿದಾಗ,

ನಾರಾಯಣಂ ವಾಸುದೇವಂ ಪರಂ ಬ್ರಹ್ಮಾಖಿಲೇಶ್ವರಂ ।
ಪುರುಷೋತ್ತಮಮೇವೈಕಂ ವಿನಾಸ್ಯಾ ನಾಪರಃ ಪತಿಃ ॥

ಪುರುಷೋತ್ತಮನೂ, ಸರ್ವೇಶ್ವರನೂ ಆದ ವಾಸುದೇವ ಪರಬ್ರಹ್ಮರೂಪಿ ನಾರಾಯಣನನ್ನು ಒಬ್ಬನನ್ನು ಹೊರತು ಇನ್ನಾರೂ ಈ ಮಹಾಲಕ್ಷ್ಮಿಗೆ ಪತಿಯಾಗಲು ಅರ್ಹರಿಲ್ಲ ಎನ್ನುತ್ತಾನೆ ಬ್ರಹ್ಮದೇವ ಸ್ವಯಂವರವೇ ಇಲ್ಲದೆ ಲಕ್ಷ್ಮೀ ನಾರಾಯಣರಿಗೆ ವಿವಾಹವೇರ್ಪಡುವುದು ಕಲ್ಪಾಂತರದ ಕಥೆ ಎನ್ನಬಹುದು. ಅಥವಾ ಸ್ವಯಂವರದಿಂದ ಸಿದ್ಧವಾದುದನ್ನೆ ಹೇಳಿರಬಹುದು ಅಂತೂ ಮಹಾಲಕ್ಷ್ಮಿಯು ನಾರಾಯಣನ ವಧು, ತಮಗೆ ಯೋಗ್ಯಳಲ್ಲ ಎಂಬುದು ದೇವತೆಗಳಿಗೆ ತಿಳಿದಿದೆ ಎನ್ನಲು ಈ ಬ್ರಹ್ಮದೇವನ ವಚನವೆ ಉದಾಹರಣೆಯಾಗಬಲ್ಲದು. ಇದು ಜ್ಞಾನಿಗಳಾದ ದೇವತೆಗಳಿಗೆ ಒಪ್ಪುತಕ್ಕದ್ದು ಆದ್ದರಿಂದ ಅವರು ಶೋಭಿಸುತ್ತಾರೆ. ' ಸುರಂತೀತಿ ಸುರಾಃ' ಸಭ್ಯ ವರ್ತನೆಯಿಂದ ಶೋಭಿಸುವುದರಿಂದ ಸುರರೆನಿಸುತ್ತಾರೆ. ಅಸುರರು ಜಗನ್ಮಾತೆಯನ್ನು ಬಯಸಿ ಅಸಭ್ಯವಾಗಿ ವರ್ತಿಸುತ್ತಾರೆ. ಅ–ಸುರರೆನಿಸುತ್ತಾರೆ. ಮಹಾಲಕ್ಷ್ಮಿ ಅಂಥ ಅಸುರರ ಕಡೆಗೆ ದೃಷ್ಟಿಯನ್ನೂ ಹಾಕದೆ, ಸುರರ ಕಡೆಗೆ ವಾತ್ಸಲ್ಯದ ಮಂದಹಾಸಯುಕ್ತವಾದ ಕಟಾಕ್ಷ ಬೀರಿ, ಬ್ರಹ್ಮದೇವನು ಹೇಳಿದಂತೆ 'ಪುರುಷೋತ್ತಮ'ನಾದ ಶ್ರೀಹರಿಯನ್ನೇ ಕಂಡು ನಮಿಸಿದಳು.

ಶ್ರೀಹರಿಯ ಕಡೆಗೆ ಮಹಾಲಕ್ಷ್ಮಿ ನಸುನಗು ಬೀರುವಾಗ ತಾನು ಪುರುಷೋತ್ತಮನಾದ ಪತಿಯನ್ನೇ ಆರಿಸಿಕೊಂಡಿದ್ದೇನೆ ಎಂದು ಹೆಮ್ಮೆ ಪಡುತ್ತಾಳೆ. ಏಕೆಂದರೆ,

ದೇವಿ ತ್ವಂ ಲಲನಾರತ್ನಂ ದೇವೋಽಸೌ ಪುರುಷೋತ್ತಮಃ ।

ಎಂಬಂತೆ ಸ್ತ್ರೀಯರಲ್ಲೆಲ್ಲ ರತ್ನ ತಾನು, ತನಗೆ ಪುರುಷರಲ್ಲೆಲ್ಲ ಉತ್ತಮನಾದ ಹರಿಯೆ ಯೋಗ್ಯ ಪತಿ ತಾನೆ ? ಈ ಹೆಮ್ಮೆಯ ನಗುವೂ ನಟನೆಯದು ವಾಸ್ತವದಲ್ಲಿ ಹರಿಯ ಇಚ್ಛೆಯಂತೆ ತಾನು ಸ್ವಯಂವರ ನಾಟಕದಲ್ಲಿ ಯಶಸ್ವಿಯಾಗಿ ಪಾತ್ರ ವಹಿಸಿದ್ದೇನೆ ಎಂಬ ತೃಪ್ತಿಯ ಮಂದಹಾಸವಿದು.

ಸಾಮಾನ್ಯಳಾದ ಓರ್ವ ನವವಧು ತನ್ನ ಪ್ರಿಯಕರನ ಬಳಿಗೆ ಬರುವಾಗ ಬೀರುವ ನಸುನಗುವಿನಲ್ಲಿಯೆ ಅಪಾರವಾದ ಭಾವಪ್ರಪಂಚ ಅಡಗಿರುತ್ತದೆ

ಆದ್ದರಿಂದ ಜಗನ್ಮಾತೆಯಾದ ಮಹಾಲಕ್ಷ್ಮಿಯು ಮಂದಹಾಸಕ್ಕೆ ನಾವೆಷ್ಟು ಅಭಿಪ್ರಾಯ ಊಹಿಸಿಕೊಂಡರೂ ಕಡಿಮೆಯೆ ಎನ್ನುವುದನ್ನು ಸೂಚಿಸುವುದಕ್ಕಾಗಿ, ನಸು ನಗುವಿಗೆ ಕಾರಣವೇನೆಂದು ಹೇಳದೆ, ಮೌನ ವಹಿಸಲಾಗಿದೆ. ಇಂಥ ಕಡೆಗಳಲ್ಲಿ ಮೌನವೆ ಶಬ್ದಕ್ಕಿಂತ ಹೆಚ್ಚು ಸ್ಪಷ್ಟವಿರುತ್ತದೆ!

— ೭೯ —

**ನಾನಾ ಕುಸುಮಗಳಿಂದ ಮಾಡಿದ ಮಾಲೆಯ**
**ಶ್ರೀನಾರಿ ತನ್ನ ಕರದಲಿ ।**
**ಪೀನ ಕಂಧರದ ತ್ರಿವಿಕ್ರಮರಾಯನ ಕೊರ–**
**ಳೀನ ಮೇಲಿಟ್ಟು ನಮಿಸಿದಳು ॥**

ಮಹಾಲಕ್ಷ್ಮಿ ತನ್ನ ಕೈಯಲ್ಲಿದ್ದ, ನಾನಾ ಬಗೆಯ ಹೂಗಳಿಂದ ಮಾಡಿದ ಮಾಲೆಯನ್ನು ಪುಷ್ಟವಾದ ಕುತ್ತಿಗೆ ಉಳ್ಳ ತ್ರಿವಿಕ್ರಮರಾಯನ ಕೊರಳಿನ ಮೇಲೆ ಇಟ್ಟು ನಮಿಸಿದಳು

ಹಿಂದಿನ ನುಡಿಯಲ್ಲಿ ದೇವಿ ಇತ್ತರದ ಸುರರನ್ನು ನೋಡುತ್ತ ಚಿತ್ತವ ಕೊಡದೆ ನಸುನಕ್ಕಳು ಎಂದಿದೆ. ಈಗ ತ್ರಿವಿಕ್ರಮರಾಯನ ಕೊರಳಿಗೆ ಮಾಲೆ ತೊಡಿಸಿದಳೆಂದಿದೆ.

ಕಂಠೇ ಸಸರ್ಜ ಪುರುಷಸ್ಯ ಪರಸ್ಯ ವಿಷ್ಣೋ–
ರ್ಮಾಲಾಂ ಶ್ರಿಯಾ ವಿರಚಿತಾಂ ಭ್ರಮರೈರುಪೇತಾಂ ॥

ಎಂದು ಸ್ಕಂದಪುರಾಣ ಹೇಳಿದೆ.

ಸುರರು, ಎಂದರೆ 'ಸುಷ್ಠು ರಮಂತೇ' ಹರಿ ಪ್ರಸಾದವನ್ನು ಸ್ವೀಕರಿಸುವುದರಲ್ಲಿಯೆ ಮಹಾಸುಖ ಕಂಡುಕೊಳ್ಳುವವರು, ದೇವತೆಗಳು. ಆದ್ದರಿಂದ ದೇವಿ ಮಾಲೆಯನ್ನು ಅವರ ಕೊರಳಿಗೆ ಇಡಲು ಒಲ್ಲದೆ, ಚಿತ್ತವ ಕೊಡದೆ, ನಸುನಕ್ಕಳು. ಹರಿಗೇ ಅರ್ಪಿಸಿದಳು. ವಾದಿರಾಜರು ರುಕ್ಮಿಣೀಶ ವಿಜಯದಲ್ಲಿಯೂ ಹೀಗೆ ಹೇಳಿದ್ದಾರೆ–

ಹರೇಃ ಪ್ರಸಾದ್ಯೈಕಭುಜಾಂ ಸುರಾಣಾಂ
ಇಮಾಂ ಪ್ರದಾಸ್ಯಾಮಿ ಕಥಂ ತ್ವಿತೀವ ।
ರಮಾ ಪ್ರಮೋದೋತ್ಥಿತರೋಮರಾಜಿಃ
ಸಮರ್ಪಯಾಮಾಸ ಮುಕುಂದ ಕಂಠೇ ॥

'ಶ್ರೀ ಹರಿಯ ಪ್ರಸಾದವನ್ನು ಮಾತ್ರವೇ ಸ್ವೀಕರಿಸುವ ದೇವತೆಗಳಿಗೆ ಹರಿಗೆ ಅನರ್ಪಿತವಾದ ಈ ಮಾಲೆಯುನ್ನು ಹೇಗೆ ಕೊಡಲಿ ಎನ್ನುವ ಭಾವನೆಯಿಂದಲೋ ಎಂಬಂತೆ, ಆನಂದದ ರೋಮಾಂಚ ತಳೆದ ರಮೆ ಮುಕುಂದನ ಕೊರಳಲ್ಲಿಯೇ ಮಾಲೆಯನ್ನಿರಿಸಿದಳು'.

ಇಲ್ಲಿ 'ಮುಕುಂದನ ಕೊರಳಲ್ಲಿ' ಎಂಬುದು ಅರ್ಥಪೂರ್ಣವಾಗಿದೆ. ಶ್ರೀಹರಿ ಮುಕುಂದನೆಂದು ಪ್ರಸಿದ್ಧ. ಮುಕುಂದ ಎಂದರೆ ಮೋಕ್ಷಪ್ರದ. ಸಕಲ ವೇದಗಳನ್ನು ಉಪದೇಶಿಸಿ ತತ್ವಜ್ಞಾನವಿತ್ತು ಮೋಕ್ಷ ನೀಡುವವ ಆದ್ದರಿಂದಲೇ ಮುಮುಕ್ಷುಗಳಾದ ದೇವತೆಗಳೆಲ್ಲರೂ ಅವನ ಪ್ರಸಾದವನ್ನು ಬಯಸುವವರೆ. ಲಕ್ಷ್ಮೀಶೋಭನ ಪದದಲ್ಲಿಯೂ 'ಪೀನಕಂಧರ'ದವನೆಂದು ತ್ರಿವಿಕ್ರಮರಾಯನನ್ನು ಪ್ರಶಂಸಿಸಲಾಗಿದೆ. ಪೀನಕಂಧರ ಎಂದರೆ ಪುಷ್ಟವಾಗಿ ತುಂಬಿಕೊಂಡಿರುವ ಕಂಠ ಸಕಲ ವೇದಗಳೂ ಸದಾ ಆ ಕಂಠದಿಂದಲೆ ಹೊರಟುಬರುವುದರಿಂದ ಅದು ತುಂಬಿಕೊಂಡಂತಿರುತ್ತದೆ–

'ಅಖಿಲಾ ವೇದಾ ಉದ್ಗೀರ್ಯಂತೇಽನಿಶಂ ಯತಃ ।'

'ನಾನಾ ಕುಸುಮಗಳಿಂದ ಮಾಡಿದ ಮಾಲೆ' ಎನ್ನುವಲ್ಲಿಯೂ ಈ ಮಾಲೆ ಹರಿಗೆ ಹೊರತು ಬೇರೆ ದೇವತೆಗಳಿಗೆ ಯೋಗ್ಯವಿರಲಿಲ್ಲ ಎನ್ನುವ ಸೂಚನೆ ಇದೆ ನಾನಾ ಕುಸುಮಗಳೆಂದರೆ ಎಲ್ಲ ಬಗೆಯ ಹೂಗಳು ಅವುಗಳಲ್ಲಿ ಬೇರೆ ದೇವತೆಗಳ ಪೂಜೆಗೆ ನಿಷಿದ್ಧವಾದ ತುಲಸಿ, ಕೇದಗೆ ಮುಂತಾದ ಹೂಗಳು ಸೇರಿವೆ ಆದ್ದರಿಂದ ಇತರ ದೇವತೆಗಳಾರಿಗೂ ಈ ಮಾಲೆ ಯೋಗ್ಯವಲ್ಲ. ಹರಿಗೆ ಯೋಗ್ಯ. ಅವನ ಕೊರಳಿಗೇ ದೇವಿ ಅದನ್ನು ತೊಡಿಸಿದಳು ಇದನ್ನೂ ವಾದಿರಾಜರು ರುಕ್ಮಿಣೀಶವಿಜಯದಲ್ಲಿ ಹೇಳಿದ್ದಾರೆ–

ಯಾ ವೈ ಚಂಪಕ ಸಂಪದಾಬ್ಜವಸತೇ ದೂರ್ವಾಶ್ರಿಯಾ ಸ್ವಾತ್ಮನಃ
ಕೇತಕ್ಯಾ ವಿಭವೇನ ಕೃತ್ತಿವಸನಸ್ಯಾಂಭೋಜ ಕಾಂತ್ಯಾ ವಿಧೋಃ ।
ಸನ್ನೀಲೋತ್ಪಲ ಶೋಭಯಾ ದಿನಮಣೇಃ ಶ್ರೀಮತ್ತುಲಸ್ಯಾಮತಾ
ಹೇರಂಬಸ್ಯ ಹರೇಃ ಪರಂ ಸಮುಚಿತಾ ಸಾ ಮಾಲಿಕಾ ಶೋಭತೇ ॥

'ಮಾಲೆಯಲ್ಲಿ ಸಂಪಿಗೆ ಇದ್ದುದರಿಂದ ಬ್ರಹ್ಮನಿಗೆ ಅದು ಪ್ರಿಯವಲ್ಲ. ಗರಿಕೆ ಇದ್ದುದರಿಂದ ದುರ್ಗೆಗೆ ಪ್ರಿಯವಲ್ಲ. ಕೇದಿಗೆ ಇದ್ದುದರಿಂದ ಶಿವನಿಗೆ ಪ್ರಿಯವಲ್ಲ. ಕಮಲವಿದ್ದುದರಿಂದ ಚಂದ್ರನಿಗೆ ಪ್ರಿಯವಲ್ಲ. ನೈದಿಲೆ ಇದ್ದುದರಿಂದ ಸೂರ್ಯನಿಗೂ ಇಷ್ಟವಿಲ್ಲ. ತುಲಸಿ ಇದ್ದುದರಿಂದ ಗಣೇಶನೂ ಅದನ್ನು ಒಲ್ಲ. ಹರಿಗೆ ಮಾತ್ರ ಅದು ಪ್ರಿಯವೆನಿಸಿ ಅವನಿಗೇ ಯೋಗ್ಯವೆನಿಸಿ ಶೋಭಿಸಿತು.'

ಹರಿಗೆ ಮಾತ್ರ ಮಾಲೆ ಪ್ರಿಯವೆನಿಸಿತೇಕೆ ? ಅವನಿಗೆ ಅಪ್ರಿಯವಾದ ಯಾವ ಹೂವೂ ಅದರಲ್ಲಿ ಇರಲಿಲ್ಲ ಎಂದೆ ? ಯಾವ ಹೂವೂ ಅವನಿಗೆ ಅಪ್ರಿಯವಲ್ಲ, ಎಲ್ಲ ಹೂವೂ ಪ್ರಿಯವೆ ಎಂಬ ಅಭಿಪ್ರಾಯ ಗ್ರಹಿಸಿದರೆ ತಪ್ಪಾದೀತು.

'ಸರ್ವಪುಷ್ಪೈರಪಿ ಹರಿ ಪೂಜಾಯಾಃ ಕರ್ತುಂ ಶಕ್ಯತ್ವಾತ್'

'ಎಲ್ಲ ಹೂಗಳಿಂದಲೂ ಹರಿ ಪೂಜೆ ಶಕ್ಯ' ಎಂದು ಈ ಶ್ಲೋಕದಲ್ಲಿ ವ್ಯಾಖ್ಯಾನಕಾರರು ಹೇಳಿದ್ದಾರೆ, ನಿಜ. ಆದರೆ ಮೂವತ್ತೆರಡು ಮಹಾ ಅಪರಾಧಗಳ ಸಾಲಿನಲ್ಲಿ 'ಅಕರ್ಮಣ್ಯ ಪ್ರಸೂನಾರ್ಚಾ' 'ನಿಷಿದ್ಧ ಹೂಗಳಿಂದ ಹರಿಪೂಜೆ ಮಾಡುವುದು' ಎಂದೂ ಒಂದು ಮಹಾಪರಾಧ ಉಕ್ತವಾಗಿದೆ. ಸೌತೆ ಹೂ ಮತ್ತು ಮುತ್ತುಗದ ಹೂಗಳಿಂದ ತನ್ನನ್ನು ಪೂಜಿಸುವುದು ಮಹಾಪರಾಧವೆಂದು ವರಾಹಪುರಾಣದಲ್ಲಿ ಹರಿಯ ವಚನವೆ ಇದೆ–

ಉರ್ವಾರುಕ ಪಲಾಶೋತ್ಥೈಃ ಪುಷ್ಪೈಃ ಕುರ್ಯಾನ್ಮಮಾರ್ಚನಂ... ।
ಮಹಾಪರಾಧಾನ್ ಜಾನೀಹಿ ...... ॥

ಬಾಗೆ, ಉಮ್ಮತ್ತಿ, ಬೆಟ್ಟಮಲ್ಲಿಗೆ, ಕೆಂಪು ಬೂರುಗ, ಎಕ್ಕ, ಬೆಟ್ಟ ಕಣಗಿಲೆ ಮತ್ತು ಅಕ್ಷತೆಗಳಿಂದ ವಿಷ್ಣುವನ್ನು ಪೂಜಿಸಲಾಗದೆಂದು ಪದ್ಮಪುರಾಣ ಉತ್ತರಖಂಡದಲ್ಲಿ ಹೇಳಿದೆ–

ಶಿರೀಷೋನ್ಮತ್ತ ಗಿರಿಜಮಲ್ಲಿಕಾ ಶಾಲ್ಮಲೀಭವೈಃ ।
ಅರ್ಕಜೈಃ ಕರ್ಣಿಕಾರೈಶ್ಚ ವಿಷ್ಣುರ್ನಾರ್ಚ್ಯಸ್ತಥಾಕ್ಷತೈಃ ॥

ಬೆಟ್ಟಮಲ್ಲಿಗೆ, ಕೆಂಪು ಬೂರುಗ, ಬಾಗೆ ಹೂಗಳನ್ನರ್ಪಿಸಿದರೆ ವಿಷ್ಣು ಭಯ ರೋಗ ದಾರಿದ್ರ್ಯಗಳುಂಟು ಮಾಡುತ್ತಾನೆ. ಕೆಂಪು ದಾಸವಾಳ ಮತ್ತು ಇತರ ಅವಿಹಿತವಾದ ಕೆಂಪು ಹೂಗಳನ್ನರ್ಪಿಸಿದರೆ ದೌರ್ಭಾಗ್ಯ ಉಂಟುಮಾಡುತ್ತಾನೆ ಎಂದು ವಿಷ್ಣುಧರ್ಮೋತ್ತರ ವಚನವಿದೆ–

ಕುಟಜಂ ಶಾಲ್ಮಲೀಪುಷ್ಪಂ ಶಿರೀಷಂ ಚ ಜನಾರ್ದನೇ ।
ನಿವೇದಿತಂ ಭಯಂ ರೋಗಂ ನಿಃಸ್ವತ್ವಂ ಚ ಪ್ರಯಚ್ಛತಿ ।
ಬಂಧು ಜೀವಕ ಪುಷ್ಪಾಣಿ ರಕ್ತಾನ್ಯಪಿ ಚ ದಾಪಯೇತ್ ।
ಅನುಕ್ತ ರಕ್ತ ಕುಸುಮದಾನಾತ್ ದೌರ್ಭಾಗ್ಯಮಾಪ್ನುಯಾತ್ ॥

ನಿಷಿದ್ಧ ಪುಷ್ಪಗಳಿಂದ ನನ್ನನ್ನು ಪೂಜಿಸಿದರೆ ಆ ಪೂಜೆಯನ್ನು ನಾನು ಸ್ವೀಕರಿಸುವುದಿಲ್ಲ ಮತ್ತು ಅಂಥ ಪೂಜೆಮಾಡುವವರು ನನಗೆ ಪ್ರಿಯರೆನಿಸುವುದೂ ಇಲ್ಲ ಎಂದು ವರಾಹ ಪುರಾಣದಲ್ಲಿ ಶ್ರೀಹರಿಯ ವಚನವಿದೆ–

ಅಕರ್ಮಣ್ಯೇನ ಪುಷ್ಪೇಣ ಯೋ ಮಾಮರ್ಚಯತೇ ಭುವಿ ।
ನಾಹಂ ತತ್ ಪ್ರತಿಗೃಹ್ಣಾಮಿ ನ ಚ ತೇ ವೈ ಮಮ ಪ್ರಿಯಾಃ ॥

ಅನಿಷಿದ್ಧ ಪುಷ್ಪಗಳನ್ನೇ ಆದರೂ ಸಂಪಾದಿಸಿ ತರುವಲ್ಲಿ ಅನೇಕ ಸಂಗತಿಗಳನ್ನು ಗಮನಿಸಬೇಕಾಗಿದೆ. ದೇವಾಲಯಗಳ ಉದ್ಯಾನಗಳಿಂದ ಮನೆ ದೇವರಿಗೆ ಹೂ ತರಕೂಡದು. ಕೈಯ ಬೊಗಸೆಯಲ್ಲಿ ತಂದುದು, ಬಟ್ಟೆಯಲ್ಲಿ ಕಟ್ಟಿ ತಂದುದು, ಗಿಡದಿಂದ ತಾನೇ ಉದುರಿ ಬಿದ್ದುದು, ಪರರಿಂದ ಬೇಡಿ ತಂದುದು, ಇನ್ನೂ ಅರಳದೆ ಮೊಗ್ಗಾಗಿರುವುದು, ಬಣ್ಣಗೆಟ್ಟಿರುವುದು, ದುರ್ಜನರು ಮುಟ್ಟಿರುವುದು ಮೂಸಿ ನೋಡಿರುವುದು, ಕಾಲಿಂದ ತುಳಿದುದು, ಸುವಾಸನೆ ಇಲ್ಲದುದು, ಅರಳಿ ಅತ್ಯಂತ ಪಕ್ವವಾಗಿರುವುದು, ಅಪಕ್ವವಾಗಿರುವುದು, ಸ್ತ್ರೀ ಶೂದ್ರಾದಿಗಳು ತಂದುದು– ಇಂಥ ಹೂಗಳು ನಿಷಿದ್ಧ.

ತಮ್ಮ ತೋಟದಲ್ಲಿ ಬೆಳೆದ ಹೂ ಪ್ರಶಸ್ತ. ಪರರ ತೋಟದಲ್ಲಿ ಬೆಳೆದ ಹೂಗಳನ್ನು ದ್ವಿಜರು ದೇವಪೂಜೆಗಾಗಿ ತಂದರೂ ದೋಷವಿಲ್ಲ. ಆಕಳಿಗಾಗಿ ಹುಲ್ಲನ್ನೂ ಅಗ್ನಿಹೋತ್ರಕ್ಕಾಗಿ ಸಮಿತ್ತುಗಳನ್ನೂ, ದೇವಪೂಜೆಗಾಗಿ ಹೂ ಹಣ್ಣುಗಳನ್ನೂ ಪರರ ತೋಟದಿಂದ ತಮ್ಮ ತೋಟದಂತೆಯೆ ದ್ವಿಜರು ತರಬಹುದೆಂದು ಗೋತಮ ವಚನ ಹೇಳುತ್ತದೆ—

ಗೋಽಗ್ನ್ಯರ್ಥೇ ತೃಣಮೇಧಾಂಸಿ ವೀರುದ್ವನಸ್ಪತೀನಾಂ ಪುಷ್ಪಾಣಿ ।
ಸ್ವವದಾದದೀತ ಫಲಾನಿ ಚಾಪರಿಬ್ಬಂಹಿತಾನಿ ॥
ಯಾಜ್ಞವಲ್ಕ್ಯ ವಚನವೂ ಹೀಗೆ ಹೇಳುತ್ತದೆ–
ದ್ವಿಜಸ್ತೃಣೈಧಃ ಪುಷ್ಪಾಣಿ ಸರ್ವತಃ ಸ್ವವದಾಹರೇತ್ ॥

ಮನುವೂ ಹೇಳುತ್ತಾನೆ–

ದೇವಾದ್ಯರ್ಥಂ ತು ಕುಸುಮಮಸ್ತೇಯಂ ಮನುರಬ್ರವೀತ್ ॥

ಕ್ರಯಕ್ಕೆ ಕೊಂಡು ತಂದ ಪುಷ್ಪಗಳೂ ಯೋಗ್ಯವೆ. ಆದರೆ ಮಾರಾಟಗಾರ ಹೇಳುವ ಬೆಲೆಯನ್ನು ಪೂರ್ತಿಯಾಗಿ ಸಂಕೋಚವಿಲ್ಲದೆ ತೆತ್ತು ತಂದಿರಬೇಕು. ಇದು 'ವೀರಕ್ರಯ'ವೆನಿಸುತ್ತದೆ ಎಂದು ಬ್ರಹ್ಮಪುರಾಣದಲ್ಲಿ ಹೇಳಿದೆ.

ಸ್ನಾನಮಾಡಿದ ಬಳಿಕ ಹೂ ಬಿಡಿಸಬಾರದೆಂದು ಹೇಳುವುದುಂಟು. ಆದರೆ ಈ ನಿಷೇಧ ಮಧ್ಯಾಹ್ನ ಸ್ನಾನಕ್ಕೆ ಸಂಬಂಧಿಸಿದುದು. ಪ್ರಾತಃಸ್ನಾನಕ್ಕಲ್ಲ–

ಸ್ನಾತ್ವಾ ಮಧ್ಯಾಹ್ನ ಸಮಯೇ ನ ಛಿಂದ್ಯಾತ್ ಕುಸುಮಂ ನರಃ ।

ಅರುಣೋದಯ ಕಾಲದಲ್ಲಿಯೇ ಪ್ರಾತಃಸ್ನಾನ ಮಾಡಬೇಕಾಗಿರುವುದರಿಂದ ಅದಕ್ಕಿಂತಲೂ ಮುಂಚೆ ಹೂ ಬಿಡಿಸಿಕೊಂಡಿರುವುದು ಕಷ್ಟಸಾಧ್ಯವೂ ಹೌದು.

ಹೀಗೆ ಹೂಗಳ ಬಗ್ಗೆ ಅನೇಕ ನಿಯಮಗಳಿರುವಾಗ ಎಲ್ಲ ಪುಷ್ಪಗಳಿಂದಲೂ ಹರಿಪೂಜೆ ಮಾಡುವುದು ಶಕ್ಯವೆನ್ನುವುದು ಕಷ್ಟ. 'ಪತ್ರಂ ಪುಷ್ಪಂ ಫಲಂ ತೋಯಂ' ಎಂಬ ಗೀತಾಶ್ಲೋಕದ ಭಾಷ್ಯದಲ್ಲಿ

'ನ ತ್ವವಿಹಿತಪತ್ರಾದಿ, ತಸ್ಯಾಪರಾಧತ್ವೋಕ್ತೇರ್ವಾರಾಹಾದೌ'

'ನಿಷಿದ್ಧ ಪತ್ರಪುಷ್ಪಾದಿಗಳನ್ನು ಹರಿಗೆ ಸಮರ್ಪಿಸಕೂಡದು. ಏಕೆಂದರೆ ವರಾಹ ಪುರಾಣಾದಿಗಳಲ್ಲಿ ಅದನ್ನು ಅಪರಾಧವೆಂದು ಪರಿಗಣಿಸಲಾಗಿದೆ' ಎಂದು ಎಚ್ಚರಿಸಿದೆ.

ಹಾಗಾದರೆ ಮಾಲೆ ಹರಿಗೆ ಮಾತ್ರ ಯೋಗ್ಯವೆನಿಸಿದುದು ಹೇಗೆ? ಎಲ್ಲ ಪುಷ್ಪಗಳಿಂದಲೂ ಹರಿಪೂಜೆ ಮಾಡುವುದು ಶಕ್ಯವೆಂದು ರುಕ್ಮಿಣೀಶ ವಿಜಯ ವ್ಯಾಖ್ಯಾನಕಾರರು ಹೇಳುವುದಾದರೂ ಹೇಗೆ? ಎಂದರೆ, 'ಈ ಮಾಲೆಯಲ್ಲಿ ಸೇರಿದ ಎಲ್ಲ ಹೂಗಳೂ ಹರಿಪೂಜೆಗೆ ಯೋಗ್ಯವಾಗಿದ್ದವು. ಅವನ ಪೂಜೆಗೆ ನಿಷಿದ್ಧವಾದ ಪುಷ್ಪಗಳಾವುವೂ ಅದರಲ್ಲಿ ಸೇರಿರಲಿಲ್ಲ. ಬೇರೆ ದೇವತೆಗಳ ಪೂಜೆಗೆ ನಿಷಿದ್ಧವಾದ ಹೂಗಳು ಸೇರಿದ್ದವು ಆದ್ದರಿಂದ ಮಾಲೆ ಹರಿಗೆ ಮಾತ್ರವೇ ಯೋಗ್ಯವೆನಿಸಿತ್ತು' ಎಂಬ ಅಭಿಪ್ರಾಯವಿಟ್ಟುಕೊಳ್ಳಬೇಕು. ಆದ್ದರಿಂದಲೇ ಅಲ್ಲಿಯೇ ಮುಂದೆ,

'ನಾಕ್ಷತೈರರ್ಚಯೇದ್ ವಿಷ್ಣು' ಮಿತ್ಯುಕ್ತಾಕ್ಷತಾಯಾ<br>ಮಾಲಾಯಾಮಪ್ರವೇಶಾಚ್ಚ ।

'ಅಕ್ಷತೆಗಳಿಂದ ವಿಷ್ಣುಪೂಜೆ ಮಾಡಬಾರದೆಂದು ನಿಷಿದ್ಧವಾದ ಅಕ್ಷತೆ ಮಾಲೆಯಲ್ಲಿ ಸೇರದಿದ್ದುದರಿಂದಲೂ ಮಾಲೆ ಹರಿಗೆ ಯೋಗ್ಯವೆನಿಸಿತ್ತು' ಎನ್ನಲಾಗಿದೆ. ಇದು ಉಪಲಕ್ಷಣ. ಬಾಗೆ ಹೂ, ಬೆಟ್ಟಮಲ್ಲಿಗೆ ಮುಂತಾದ ನಿಷಿದ್ಧ ಹೂಗಳೂ ಮಾಲೆಯಲ್ಲಿ ಸೇರಿರಲಿಲ್ಲ ಎಂದು ಅಭಿಪ್ರಾಯ.

ಇಲ್ಲಿ ಒಂದು ವಿಚಾರ ಗಮನಿಸಬೇಕು. ಅಕ್ಷತೆ ಎಂದರೆ ಇಲ್ಲಿ ಅಕ್ಷತೆ ಕಾಳಲ್ಲ ಅಕ್ಷತೆ ಕಾಳುಗಳಿಂದ ಹರಿಪೂಜೆ ಮಾಡಕೂಡದೆನ್ನಲು ಆಧಾರ ಸಾಲದು. 'ನಾಕ್ಷತೈರರ್ಚತಯೇದ್ ವಿಷ್ಣುಂ' 'ವಿಷ್ಣುರ್ನಾರ್ಚ್ಯಸ್ತಥಾಕ್ಷತೈಃ' ಎಂದು ಮುಂತಾದ

ವಚನಗಳಲ್ಲಿ ಅಕ್ಷತೆ ಕಾಳನ್ನೇ ನಿಷೇಧಿಸಿದೆ ಎನ್ನಲು ಶಕ್ಯವಿಲ್ಲ. ಏಕೆಂದರೆ ರುಕ್ಮಿಣೀಶ ವಿಜಯ ವ್ಯಾಖ್ಯಾನಕಾರರ ಮೇಲಿನ ವಾಕ್ಯಕ್ಕೆ 'ಅಕ್ಷತೆಕಾಳು ಮಾಲೆಯಲ್ಲಿ ಸೇರಿದಿದ್ದುದರಿಂದ ಎಂದು ಅರ್ಥಗ್ರಹಿಸಿದರೆ ಅಕ್ಷತೆ ಕಾಳು ಮಾಲೆಯಲ್ಲಿ ನೇರುವುದುಂಟೇ ? ಎಂಬ ಪ್ರಶ್ನೆ ಬರುತ್ತದೆ. ಅಪ್ರಸಕ್ತ ನಿಷೇಧ ಮಾಡಕೂಡದು ಆದ್ದರಿಂದ ಅಕ್ಷತೆ ಒಂದು ಜಾತಿಯ ಹೂವೇ ಇರಬೇಕು ಅದಕ್ಕೆ ಮಾಲೆಯಲ್ಲಿ ನೇರುವ ಪ್ರಸಕ್ತಿ ಉಂಟು

ಮೇಲೆ ಹೇಳಿದ ಸ್ಮೃತಿ ವಚನಗಳಲ್ಲಿ 'ನಾಕ್ಷತೈಃ' ಎಂದು ನಪುಂಸಕ ಲಿಂಗವೋ, ಪುಲ್ಲಿಂಗವೋ ಇರುವಾಗ ವ್ಯಾಖ್ಯಾನಕಾರರು 'ಅಕ್ಷತಾಯಾಃ' ಎಂದು ಸ್ತ್ರೀಲಿಂಗ ಪ್ರಯೋಗ ಮಾಡಿರುವುದೂ ಈ ಊಹೆಗೆ ಪುಷ್ಟಿ ನೀಡುತ್ತದೆ 'ನ ಆಕ್ಷತೈಃ', 'ತಥಾ ಆಕ್ಷತೈಃ' ಎಂದು ಪದ ವಿಭಾಗ ಶಕ್ಯವಿರುವುದರಿಂದ 'ಅಕ್ಷತಾಯಾಂ ಭವಂ ಆಕ್ಷತಂ' ಎಂಬ ವಿವರಣೆಯಂತೆ ಅಕ್ಷತಾ ಎಂಬ ಗಿಡದಲ್ಲಿ ಹುಟ್ಟಿದ ಹೂವೆಂದೇ ಸ್ವರಸವಾಗಿ ಅರ್ಥ ಸಿಗುತ್ತದೆ. ಜೊತೆಯಲ್ಲಿಯೆ 'ಪಲಾಶೋತ್ಥೈಃ' 'ಅರ್ಕಜೈಃ' ಎಂದು ಮುಂತಾಗಿ ಬೇರೆ ಹೂಗಳನ್ನು ಆಯಾ ಹೆಸರಿನ ಗಿಡಗಳಲ್ಲಿ ಹುಟ್ಟಿದ ಹೂಗಳೆಂದು ನಿರ್ದೇಶ ಮಾಡಿದುದುಂಟು. ಪ್ರಕೃತದಲ್ಲಿ ಅಕ್ಷತಾ ಎಂದರೆ ಕರ್ಕಟಶೃಂಗೀ ಎಂಬ ಗಿಡ ಮತ್ತು ಅದರ ಹೂ. ಗರ್ಭಸ್ರಾವ ಚಿಕಿತ್ಸೆಯಲ್ಲಿ ಇದರ ಉಪಯೋಗವಿದೆ ಎನ್ನಲಾಗಿದೆ ಅದರ ಹೂ ವಿಷ್ಣುಪೂಜೆಗೆ ನಿಷಿದ್ಧ ಎಂದು ಅರ್ಥ ಗ್ರಹಿಸುವುದರಲ್ಲಿ ಬಾಧಕವೇನಿಲ್ಲ ವೇದವ್ಯಾಸಪೂಜೆ ಸತ್ಯನಾರಾಯಣಪೂಜೆ ಮುಂತಾದವುಗಳಲ್ಲಿ ಅಕ್ಷತೆ ಕಾಳನ್ನು ಉಪಯೋಗಿಸುವುದರಿಂದ ಈ ರೀತಿ ಅರ್ಥಾಂತರ ಗ್ರಹಿಸುವುದು ಉಚಿತವೂ ಆಗಿದೆ ಎನ್ನಬಹುದು

ಈ ಮಾಲೆಯಲ್ಲಿ ಹರಿಗೆ ಅಪ್ರಿಯವಾದ ಯಾವ ಹೂವೂ ಇಲ್ಲ, ಇತರ ದೇವತೆಗಳಿಗೆ ಅಪ್ರಿಯವಾದ ಯಾವುದಾದರೊಂದು ಹೂ ಇದ್ದೇ ಇರುತ್ತದೆ ಎಂದರೆ ಇದು ಯಾರ ಕೈವಾಡ ? ಸಮುದ್ರರಾಜ ಮಗಳನ್ನು ಸ್ವಯಂವರಕ್ಕೆ ಕಳಿಸಿದ್ದಾನೆ ಎಂದ ಮೇಲೆ ತನಗೆ ವಿಷ್ಣುವೇ ಅಳಿಯನಾಗುತ್ತಾನೆ, ಅವನಿಗೆ ಪ್ರಿಯವಾದ ಹೂಗಳನ್ನೇ ಮಾಲೆಯಲ್ಲಿ ಸೇರಿಸಬೇಕೆಂದುಕೊಂಡಿರಲಾರ. ಹಾಗೇ ಅಂದುಕೊಂಡಿದ್ದರೆ ಸ್ವಯಂವರವೇಕೆ ? – ಈ ಪ್ರಶ್ನೆಗೆ ಹಿಂದೆಯೇ ಸಮಾಧಾನ ಬಂದಿದೆ. ಸಮುದ್ರರಾಜನಿಗೂ ಮಹಾಲಕ್ಷ್ಮಿಗೂ ವಿಷ್ಣುವೇ ವರನೆಂಬುದು ಮೊದಲೇ ತಿಳಿದಿತ್ತು. ಸ್ವಯಂವರ ಒಂದು ನಾಟಕ ಮಾತ್ರ. ಎಲ್ಲರ ಮುಂದೆ ಶ್ರೀಹರಿಯ ಸರ್ವೋತ್ತಮತ್ವ ಬೆಳಕಿಗೆ ಬರಬೇಕಾಗಿದೆ ಮತ್ತು ಕ್ಷತ್ರಿಯ ಧರ್ಮಾನುಸಾರ ಸ್ವಯಂವರದ ಶಾಸ್ತ್ರವೂ ನಡೆಯಬೇಕಾಗಿದೆ. ಅದಕ್ಕಾಗಿ ಈ ನಾಟಕ.

ವಸ್ತುತಃ ನಾಟಕದಲ್ಲಾದರೂ ಸ್ವಯಂವರ ಪದ್ಧತಿಗೆ ಅನನುಗುಣವಾದ ಇಂಥ ವರ್ತನೆ ಸರಿಯಲ್ಲ. ವರನು ವಿಷ್ಣುವೇ ಎಂದು ಸಮುದ್ರರಾಜನೂ ಮಹಾಲಕ್ಷ್ಮಿಯೂ ಮೊದಲೇ ತಿಳಿದಿದ್ದರೂ, ನಾಟಕದಲ್ಲಿ, ತಿಳಿಯದವರಂತಿರಬೇಕು. ಆದ್ದರಿಂದ ಮಾಲೆಯಲ್ಲಿ ಹರಿಗೆ ಪ್ರಿಯವಾದ ಪುಷ್ಪಗಳೇ ಸೇರಿರುವುದು ದೈವವಶಾತ್ ಎನ್ನಬೇಕು ಶಕುನಗಳಂತೆ ಆಕಸ್ಮಿಕವೆನ್ನಬೇಕು. ಶಕುನಗಳು ಶುಭ ಅಶುಭಗಳನ್ನು ಸೂಚಿಸುವಂತೆ ಈ ಮಾಲೆಯಲ್ಲಿ ಕೇವಲ ಹರಿಪ್ರಿಯವಾದ ಪುಷ್ಪಗಳೇ ಸೇರಿರುವುದು ದೇವಿಗೆ ಹರಿಯೇ ಯೋಗ್ಯನಾದ ವರನೆಂಬುದನ್ನು ಸೂಚಿಸುತ್ತದೆ.

ತ್ರಿವಿಕ್ರಮರಾಯನೆಂದರೆ ಇಲ್ಲಿ ಕಶ್ಯಪ ಅದಿತಿ ದಂಪತಿಗಳಲ್ಲಿ ಅವತರಿಸಿದ ವಾಮನನಲ್ಲ ವೈರಾಜ, ಸಂಭೂತಿ ದಂಪತಿಗಳಲ್ಲಿ ಅವತರಿಸಿದ ಅಜಿತ ಭಗವಂತನ ಅವತಾರಗಳಲ್ಲಿ ಭೇಧವಿಲ್ಲವೆಂದು ಸೂಚಿಸುವುದಕ್ಕಾಗಿ ಅಜಿತನನ್ನೇ ತ್ರಿವಿಕ್ರಮನೆಂದು ನಿರ್ದೇಶಿಸಲಾಗಿದೆ. ಇಷ್ಟೇ ಅಲ್ಲ, ಇನ್ನೊಂದು ಉದ್ದೇಶವೂ ಇಲ್ಲಿ ಅಡಗಿದೆ–

ವೇದಾನ್ ಕಾಲಾನ್ ಗುಣಾನ್ ಲೋಕಾನ್ ದೇವಮಾನುಷದಾನವಾನ್ ।
ಚೇತನಾಚೇತನಾನ್ ಮಿಶ್ರಾನ್ ತ್ರೀಣಿ ಪದಾ ವಿಚಕ್ರಮೇ ॥

'ಮೂರು ವೇದಗಳನ್ನೂ, ಮೂರು ಕಾಲಗಳನ್ನೂ, ಮೂರು ಗುಣಗಳನ್ನೂ, ಮೂರು ಲೋಕಗಳನ್ನೂ, ದೇವ, ಮಾನವ, ದಾನವರನ್ನೂ, ಮುಕ್ತಜೀವ, ಜಡವಸ್ತು ಸಂಸಾರಿಜೀವರನ್ನೂ ಹರಿಯು ಮೀರಿರುವನು' ಎಂದು ಋಗ್ಭಾಷ್ಯದಲ್ಲಿ ಹೇಳಿದಂತೆ ದೇವ ಮಾನವ ದಾನವರೆಂಬ ಮೂರು ವರ್ಗದ ಜನರನ್ನೂ ಮೀರಿ ಸರ್ವಶ್ರೇಷ್ಠನೆನಿಸಿ ತ್ರಿವಿಕ್ರಮನೆಂದೇ ಪ್ರಸಿದ್ಧನಾದ ಈ ಅಜಿತ ನಾಮಕನಾದ ಶ್ರೀಹರಿ ಮಹಾಲಕ್ಷ್ಮಿಗೆ ಯೋಗ್ಯನಾದ ವರ. ಏಕೆಂದರೆ ಹಿಂದಿನ ನುಡಿಯಲ್ಲಿ ಹೇಳಿದಂತೆ ಸುರರೆಲ್ಲ ಮಹಾಲಕ್ಷ್ಮಿಯನ್ನು ಆಶ್ರಯಿಸಿದವರೆ.

'ಯಂ ಕಾಮಯೇ ತಂ ತಮುಗ್ರಂ ಕೃಣೋಮಿ ತಂ ಬ್ರಹ್ಮಾಣಂ'

ಎಂದು ಅಂಭೃಣೀ ಸೂಕ್ತದಲ್ಲಿ ದೇವಿಯೇ ಹೇಳುವಂತೆ ಬ್ರಹ್ಮರುದ್ರಾದಿ ಸಕಲ ದೇವತೆಗಳೂ ದೇವಿಯ ಅಧೀನ. ಅಂಥ ದೇವಿಗೆ ದೇವ ದಾನವ ಮಾನವರೆಲ್ಲರಿಗಿಂತ ಶ್ರೇಷ್ಠನಾದ ಹರಿಯಲ್ಲದೆ ಇನ್ನಾರು ವರನಾದಾನು ?

ದೇವಿ ತ್ರಿವಿಕ್ರಮನ ಕೊರಳಿಗೆ ಮಾಲೆ ಹಾಕಬೇಕೆಂದರೆ ಅವನ ಎತ್ತರಕ್ಕೆ ಏರಬಲ್ಲ ಉನ್ನತ ವ್ಯಕ್ತಿತ್ವ ಅವಳದಾಗಿರಬೇಕು ಎಂದು ದೇವಿಯ ಉನ್ನತ ವ್ಯಕ್ತಿತ್ವದ ಕಲ್ಪನೆಯೂ ತ್ರಿವಿಕ್ರಮ ಪದದಿಂದ ಸಾಧ್ಯವಾಗಿದೆ.

ಮಾಲೆಯನ್ನು ಕೊರಳಿನ ಮೇಲಿಟ್ಟು ನಮಿಸಿದಳು ಎಂಬುದರಿಂದ ದೇವಿ ಬ್ರಹ್ಮರುದ್ರಾದಿಗಳಿಗಿಂತ ಕೋಟಿಪಾಲು ಮಿಗಿಲೆನಿಸಿದರೂ ಹರಿಯ ಮುಂದೆ ಅವಳು ತಲೆ ಬಾಗಬೇಕು ಎಂಬುದು ಸೂಚಿತವಾಗುತ್ತದೆ. ಇದೂ ಅಂಭೃಣೀ ಸೂಕ್ತದಲ್ಲಿ ಬರುವ–

ಪರೋ ದಿವಾ ಪರ ಏನಾ ಪೃಧಿವ್ಯಾ
ಏತಾವತೀ ಮಹಿನಾ ಸಂಬಭೂವ ॥

'ನಾನು ಭೂಮ್ಯಂತರಿಕ್ಷಗಳನ್ನು ಮೀರಿ ಎಷ್ಟೇ ಎತ್ತರಕ್ಕೆ ಏರಿದ್ದರೂ ನನ್ನ ಮಹಿಮೆಗೆ ಮಿತಿಯುಂಟು. ಹರಿಯ ಮಹಿಮೆಗೆ ಮಾತ್ರ ಮಿತಿಯಿಲ್ಲ' ಎಂಬ ಮಾತಿಗೆ ಭಾಷ್ಯರೂಪವಾಗಿದೆ.

ಮಾಲೆಯಲ್ಲಿರುವ ಹೂಗಳೆಲ್ಲ ದೇವಿಯದೆ ಬೇರೆ ಬೇರೆ ರೂಪಗಳು. ಹರಿಯ ವಿಹಾರೋದ್ಯಾನವೆಲ್ಲವೂ ದೇವಿಯ ರೂಪಗಳೆ. ಅಲ್ಲಿರುವ ಹೂ ಹಣ್ಣುಗಳೆಲ್ಲ ಅವಳೆ.

ಸರ್ವಂ ಭಾಗ್ಯಂ ಮಮೈವ ಸ್ಯಾದಿತಿ ವಕ್ಷಃಸ್ಥಿತಾಪಿ ಸಾ ।
ಕ್ರೀಡಾವನಮಭೂನ್ಮಂದ ವಾಯು ಗಂಧಾದಿ ರಂಜಿತಂ ।
ಮಲ್ಲಿಕಾ ಕೇತಕೀ ಜಾತೀ ಚಂಪಕಾ ಕುಸುಮಾನ್ವಿತಂ ॥

ಎಂದು ಆದಿತ್ಯಪುರಾಣ, ವೆಂಕಟೇಶ ಮಹಾತ್ಮೆ ಇದನ್ನೇ ಹೇಳುತ್ತದೆ. ಆದ್ದರಿಂದ ದೇವಿ ಹೂಮಾಲೆಯ ರೂಪದಿಂದ ತನ್ನನ್ನೇ ತಾನು ಹರಿಯ ಕೊರಳಿಗೆ ಅರ್ಪಿಸಿಕೊಂಡಿದ್ದಾಳೆ. ಇಂದಿಗೂ ಮದುವೆಯಾಗುವ ವಧು ಶ್ರೀರೂಪಳೆಂದೂ ವರನು ಶ್ರೀಧರ ರೂಪನೆಂದೂ ಭಾವನೆಯಿಂದ ವಧು ವರನಿಗೆ ತನ್ನನ್ನು ತಾನೆ ಅರ್ಪಿಸಿಕೊಳ್ಳುವ ಸಂಕೇತವಾಗಿ ಮಾಲೆಹಾಕುವ ಸಂಪ್ರದಾಯ ಬಂದಿದೆ ಎನ್ನಬಹುದು.

– ೭೦ –

**ಉಟ್ಟ ಪೊಂಬಟ್ಟೆಯು ತೊಟ್ಟಾಭರಣಗಳು**
**ಇಟ್ಟ ನವರತ್ನದ ಮುಕುಟವು ।**
**ದುಷ್ಟ ಮರ್ದನನೆಂಬ ಕಡೆಯ ಪೆಂಡೆಗಳ**
**ವಟ್ಟಿದ್ದ ಹರಿಗೆ ವಧುವಾದಳು ॥**

ಶ್ರೀಹರಿ ಜರತಾರಿ ಪೀತಾಬರವನ್ನು ಉಟ್ಟು, ರತ್ನಾಭರಣಗಳನ್ನು ತೊಟ್ಟು, ನವರತ್ನದ ಕಿರೀಟವನ್ನೂ ತಲೆಯ ಮೇಲಿಟ್ಟು ದುಷ್ಟಮರ್ದನನೆಂಬ ಬಿರುದಿನ ಕಡೆಯ ಪೆಂಡೆಗಳನ್ನು ಅಂದರೆ ಕಡಗಗಳ ರಾಶಿಯನ್ನು ಧರಿಸಿದ ಆ ಹರಿಗೆ ಮಹಾಲಕ್ಷ್ಮಿ ವಧುವಾದಳು.

ವಧು ಈಗಾಗಲೇ ವರನನ್ನು ಚೆನ್ನಾಗಿ ಪರೀಕ್ಷಿಸಿ ಅರಿತುಕೊಂಡಿದ್ದಾಳೆ. ಆದರೆ ಮಾವ ಅಳಿಯನನ್ನು ಅರಿತನೆ? ಅವನು ಕೇವಲ ಜರತಾರಿ ಪೀತಾಂಬರ ಆಭರಣಗಳ ಆಡಂಬರದಿಂದಲೇ ಅಳಿಯನ ಯೋಗ್ಯತೆಯನ್ನಳೆದನೆ? ಒಂದು ಸುಭಾಷಿತ ಹೇಳುತ್ತದೆ–

ಕಿಂ ವಾಸಸೇತ್ಯತ್ರ ವಿಚಾರಣೀಯಂ
ವಾಸಃ ಪ್ರಧಾನಂ ಖಲು ಯೋಗ್ಯತಾಯಾಃ ।
ಪೀತಾಬರಂ ವೀಕ್ಷ್ಯ ದದೌ ಸ್ವಕನ್ಯಾಂ
ದಿಗಂಬರಂ ವೀಕ್ಷ್ಯ ವಿಷಂ ಸಮುದ್ರಃ ॥

'ವಸ್ತ್ರಭೂಷಣ ಮುಂತಾದ ಬಾಹ್ಯಾಡಂಬರದಿಂದೇನು ಎನ್ನುವ ವಿಷಯದಲ್ಲಿ ವಿಚಾರ ಮಾಡಬೇಕಾಗುತ್ತದೆ. ಏಕೆಂದರೆ ಯೋಗ್ಯತೆಗಿಂತ ವೇಷಕ್ಕೆ ಆದ್ಯತೆ ಎಲ್ಲ ಕಡೆ ಕಂಡುಬರುತ್ತದೆ. ಉದಾಹರಣೆಗೆ ಜರತಾರಿ ಪೀತಾಂಬರ ಉಟ್ಟವನೆಂದು ಹರಿಯನ್ನು ಸಮುದ್ರರಾಜ, ಆದರಿಸಿ ತನ್ನ ಮಗಳನ್ನು ಮದುವೆ ಮಾಡಿಕೊಟ್ಟ, ದಿಗಂಬರನಾದ ಶಿವನನ್ನು ನೋಡಿ ಹಾಲಾಹಲ ವಿಷವನ್ನು ಕುಡಿಯಲು ಕೊಟ್ಟ!'

'ಕನ್ಯಾ ವರಯತೇ ರೂಪಂ, ಮಾತಾ ವಿತ್ತಂ, ಪಿತಾ ಶ್ರುತಂ!

ಎಂಬಂತೆ ಕನ್ಯೆಯ ತಾಯಿ ವರನಲ್ಲಿ ಸಂಪತ್ತನ್ನು ಬಯಸುವುದು ಸಹಜ, ಆದರೆ ತಂದೆ ಶ್ರುತ ಅಂದರೆ ವಿದ್ಯೆಯನ್ನು ಮುಖ್ಯವಾಗಿ ಆದರಿಸಬೇಕು.

ಮೇಲಿನ ಆಕ್ಷೇಪಕ್ಕೆ ಸಮಾಧಾನವಾಗಿ ದುಷ್ಟಮರ್ದನನೆಂಬ ಎನ್ನಲಾಗಿದೆ. ವಿದ್ಯೆ ಎಂದರೆ ಕ್ಷತ್ರಿಯರಲ್ಲಿ ಶಸ್ತ್ರಾಸ್ತ್ರ ವಿದ್ಯೆ, ಶೌರ್ಯ ಪರಾಕ್ರಮಗಳನ್ನೇ ಸಮುದ್ರರಾಜ ಹರಿಯಲ್ಲಿ ಮುಖ್ಯವಾಗಿ ಗಮನಿಸಿದ್ದಾನೆ. ಹರಿ ದುಷ್ಟಮರ್ದನನೆಂಬ ಬಿರುದುಳ್ಳವನು.

ಈ ಬಿರುದನ್ನು ಹರಿಗೆ ಯಾರು ಕೊಟ್ಟರು ಎಂದರೆ ಕಾಡಿನಲ್ಲಿ ಪರಾಕ್ರಮದಿಂದ ಮೆರೆವ ಸಿಂಹಕ್ಕೆ ಮೃಗರಾಜನೆಂಬ ಬಿರುದನ್ನು ಯಾರು ಕೊಟ್ಟರು?

ವಿಕ್ರಮಾರ್ಜಿತ ಸತ್ವಸ್ಯ ಸ್ವಯಮೇವ ಮೃಗೇಂದ್ರತಾ!

ಆದ್ದರಿಂದ ವಾದಿರಾಜರು ತಮ್ಮ ಕನ್ನಡ ಕೀರ್ತನೆಗಳಲ್ಲಿ ಅನೇಕ ಕಡೆ,

'ಹಯವದನ ಬಲವಂತ ಖಲ ಕುಠಾರನೆಂಬ ಬಿರುದು ಮೆರೆದನು,
'ಕದನಕರ್ಕಶನೆಂಬ ಬಿರುದು ತೋರಿದ ಜಗಕೆ'

ಎಂದು ಮುಂತಾಗಿ ಹಾಡಿದ್ದಾರೆ. ಮಹಾಭಾರತವು ಹರಿಯ ಜನಾರ್ದನ ಎಂಬ ಬಿರುದನ್ನು ಹೀಗೆ ಅರ್ಥೈಸಿದೆ–

'ದಸ್ಯುತ್ರಾಸಾದ್ ಜನಾರ್ದನಃ'
ದುರ್ಜನಭಂಜನ ಮಾಡುವುದರಿಂದ ಜನಾರ್ದನ'.

ಈ ಅಸುರಾರಿಯ ಹೆಸರು ಕೇಳಿದರೇ ಸಾಕು. ಅಸುರರು ಬೆದರಿ ಅಸು ನೀಗುತ್ತಾರೆ. ಅವನ ಪಾಂಚಜನ್ಯದ ಧ್ವನಿಗೆ ಅಸುರ ಸ್ತ್ರೀಯರ ಗರ್ಭಪಾತವಾಗುತ್ತದೆ, ಆದ್ದರಿಂದ ಜನಾರ್ದನ, ಅಂದರೆ ದುರ್ಜನ ಮರ್ದನನೆಂಬ ಬಿರುದು ಅವನಿಗೆ ಸಾರ್ಥಕ

ಕಿಂ ಮಾಂ ನಿಂದಂತಿ ಶತ್ರವೋ ಅನಿಂದ್ರಾಃ ।

'ಈ ಶತ್ರುಗಳು ನನ್ನನ್ನು ನಿಂದಿಸಿ ಏನು ಮಾಡಬಲ್ಲರು ? ಅವರು ಏನೂ ಕೈಲಾಗದವರು' ಎಂದು ಒಂದು ಋಗ್ವೇದದ ಮಂತ್ರದಲ್ಲಿ ಹರಿ ತಾನೆ ಹೇಳುತ್ತಾನೆ.

ಹರಿ ಎರಡು ಬಗೆಯಿಂದ ದುಷ್ಟಮರ್ದನನೆನಿಸುತ್ತಾನೆ. ದುಷ್ಟರ ಮರ್ದನ ಮಾಡುತ್ತಾನೆ ಮಾತ್ರವಲ್ಲ, ದುಷ್ಟಮರ್ದನ ಮಾಡುವವರಲ್ಲಿ ಒಳಗೆ ಅಂತರ್ಯಾಮಿಯಾಗಿ ನಿಂತು ಅವರಿಂದ ಹಾಗೆ ಮಾಡಿಸುತ್ತಾನೆ, ತೇನ ವಿನಾ ತೃಣಮಪಿ ನ ಚಲತಿ.

ತಲವಕಾರೋಪನಿಷತ್ತು ಈ ವಿಷಯದಲ್ಲಿ ಯಕ್ಷನ ಕಥೆಯನ್ನು ಉದಾಹರಿಸುತ್ತದೆ. ಪ್ರಪಂಚವನ್ನೇ ಸುಡಬಲ್ಲೆನೆಂದು ಅಹಂಕಾರಪಡುತ್ತಿದ್ದ ಅಗ್ನಿಗೆ ಯಕ್ಷರೂಪದ ಹರಿ ಮುಂದಿಟ್ಟ ಒಂದು ತೃಣವನ್ನು ಸುಡಲಾಗಲಿಲ್ಲ. ಒಂದು ತೃಣದಿಂದಲೇ ಎಲ್ಲರನ್ನೂ ತೃಣೀಕರಿಸುವ ಸಾಮರ್ಥ್ಯ ಹರಿಯದು. ಆದ್ದರಿಂದಲೆ ಶಿವ ಹರಿಗೆ 'ಕೇಶವ'ನೆಂಬ ಬಿರುದುಕೊಟ್ಟ–

ಹಿರಣ್ಯಗರ್ಭಃ ಕಃ ಪ್ರೋಕ್ತಃ ಈಶಃ ಶಂಕರ ಏವ ಚ ।
ಸೃಷ್ಟ್ಯಾದಿನಾ ವರ್ತಯತಿ ತೌ ಯತಃ ಕೇಶವೋ ಭವಾನ್ ॥

ಕ ಅಂದರೆ ಬ್ರಹ್ಮ ಈಶನೆಂದರೆ ಶಿವ, ಈ 'ಕೇಶ'ರನ್ನು ಬ್ರಹ್ಮಶಿವರನ್ನು ನಿಯಂತ್ರಿಸುವವನಾದ್ದರಿಂದ ನೀನು 'ಕೇಶವ'– ಕೈಲಾಸಕ್ಕೆ ಕೃಷ್ಣನು ಹೋದಾಗ ಶಿವ

ಅವನಿಗೆ ಹೇಳಿದ ಮಾತು ಇದು. ಆದ್ದರಿಂದ 'ದುಷ್ಟಮರ್ದನ' ಎಂಬಲ್ಲಿ 'ದುಷ್ಟಮರ್ದ' ಎಂದರೆ ದುಷ್ಟರನ್ನು ಮರ್ದಿಸುವ ಬ್ರಹ್ಮರುದ್ರಾದಿ ದೇವತೆಗಳು, ಅವರಿಗೆ 'ನ' ಅಂದರೆ ನಾಯಕ, ಪ್ರೇರಕ, ಅಂತರ್ನಿಯಾಮಕ ಶ್ರೀಹರಿ. ಆದ್ದರಿಂದಲೂ ಆತ ದುಷ್ಟಮರ್ದನ.

ಹರಿ ದುಷ್ಟಮರ್ದನ ಎಂಬ ಬಿರುದು ಪಡೆದುದು ಮಾತ್ರವಲ್ಲ, ಬಿರುದಿನ ಬಳೆಯನ್ನೂ ತೊಟ್ಟಿದ್ದಾನೆ ರಾಶಿರಾಶಿಯಾಗಿ. 'ದುಷ್ಟಮರ್ದನ'ನೆಂಬ ಕಡೆಯ ಪೆಂಡೆಗಳನ್ನು ಹರಿ ಧರಿಸಿದ್ದನಂತೆ !

ಕಡಗಗಳು ಎಂದೇನು ? ಎಲ್ಲ ಆಭರಣಗಳೂ ಅವನು ಗಳಿಸಿದ ದಿಗ್ವಿಜಯಕ್ಕೆ ಅಭಿಮಾನಿಗಳು ಬಹುಮಾನವಾಗಿ ಕೊಟ್ಟವುಗಳೆ ಉದಾಹರಣೆಗೆ ಅವನ ಎದೆಯಲ್ಲಿ ಒಪ್ಪುವ ಕೌಸ್ತುಭಮಣಿ–

ಅಸಮೋಽನಧಿಕೇ ಸುಸಾಧಿತೇ ನಿಜತಾತೇ ರವಿರಾಶಿದೀಧಿತಿ ।
ಪ್ರದದೌ ತ್ರಿಜಗಜ್ಜಯಧ್ವಜಂ ವಿಧಿರೇತದ್ ಗಲಸಂಗಿ ಭೂಷಣಂ ॥

'ಕೌಸ್ತುಭಕ್ಕೆ ಅಭಿಮಾನಿ ಬ್ರಹ್ಮ ಅದನ್ನು ಅವನೆ ಬಾದರಾಯಣರಿಗೆ ಬಹುಮಾನವಾಗಿ ಕೊಟ್ಟ. ಏಕೆಂದರೆ ಅವರು ಅವನ ತಂದೆಯಾದ ಹರಿಯ ಸರ್ವೋತ್ತಮತ್ವವನ್ನು ಘೋಷಿಸಿ ಸಾಧಿಸಿಕೊಟ್ಟರು, ದಿಗ್ವಿಜಯ ಸಂಪಾದಿಸಿದರು'.

ಹೀಗೆ ಸಮುದ್ರರಾಜ ತನ್ನ ಮಗಳನ್ನು ಅಜಿತರೂಪಿ ಹರಿಗೆ ಕೊಡುವಾಗ ಅವನ ಯೋಗ್ಯತೆಯನ್ನೇ ಆದರಿಸಿದ್ದ ಹೊರತು ಕೇವಲ ಬಾಹ್ಯಾಡಂಬರವನ್ನಲ್ಲ. ಹಾಗೆ ನೋಡಿದರೆ ಅಜಿತನಲ್ಲಿ ಅಂಥ ಆಡಂಬರವೇನಿತ್ತು ? ಅವನೇನೂ ಯಾವ ಲೋಕಕ್ಕೂ ಅಧಿಪತಿಯಾಗಿ ಮೆರೆದವನಲ್ಲ. ವೈರಾಜ ಸಂಭೂತಿ ದಂಪತಿಗಳಲ್ಲಿ ಜನಿಸಿದ್ದು ಒಬ್ಬ ಸಾಮಾನ್ಯ ದೇವತೆಯಂತೆಯೇ ಇದ್ದ. ಆದರೆ ಅವನು ಮಾಡಿದ ಕಾರ್ಯ ಅತ್ಯದ್ಭುತ. ಆಜನ್ಮ ವೈರಿಗಳಾದ ಮೂವತ್ತಮೂರು ಕೋಟಿ ದೇವತೆಗಳನ್ನೂ, ದುಪ್ಪಟ್ಟು ದೈತ್ಯರನ್ನೂ ಒಂದೆಡೆ ಸೇರಿಸಿ ಬೆಟ್ಟವನ್ನು ಸಾಗರಕ್ಕಿಳಿಸಿ ಮಥಿಸಿ ಮಹಾಲಕ್ಷ್ಮಿ, ಅಮೃತ, ಚಂದ್ರ, ಐರಾವತ, ಕಲ್ಪವೃಕ್ಷ, ಕಾಮಧೇನು ಮುಂತಾದ ಅಮೂಲ್ಯ ರತ್ನಗಳನ್ನು ಹೊರತರುವ ಕಾರ್ಯ ಈ ಅಜಿತನಿಗೆ ಹೊರತು ಇನ್ನಾರಿಗೆ ಸಾಧ್ಯವಿತ್ತು ? ಅವನು 'ಅಜಿತ'ನಾದ್ದರಿಂದ ಅಜೇಯನಾಗಿ ನಿಂತು ಎಲ್ಲ ಕಾರ್ಯ ನಡೆಸಿಕೊಟ್ಟ. ಆದ್ದರಿಂದ ಸಮುದ್ರರಾಜ ಮಗಳನ್ನಿತ್ತ. ಇದನ್ನೇ ಒಂದು ಸುಭಾಷಿತ ಹೀಗೆ ಹೇಳುತ್ತದೆ–

ಮಧುಭಿನ್ಮಥನಾಯಸ್ವೈರಾಶ್ಲಿಷ್ಯತಿ ಬಾಹುಭಿರ್ಲಕ್ಷ್ಮೀಂ ॥

'ಸಮುದ್ರ ಮಥನದಂಥ ಕಷ್ಟಸಾಧ್ಯವಾದ ಕಾರ್ಯವನ್ನು ನಡೆಸಿಕೊಟ್ಟ ಬಾಹುಗಳಿಂದಲೆ ಹರಿ ಲಕ್ಷ್ಮಿಯನ್ನು ಆಲಿಂಗಿಸಿದ'.

'ಹರಿ ಪೊಂಬಟ್ಟೆಯನ್ನು ಉಟ್ಟ. ಆಭರಣಗಳನ್ನು ತೊಟ್ಟ. ನವರತ್ನದ ಮಕುಟವನ್ನಿಟ್ಟ' ಎಂದು ಹೇಳಿ 'ಕಡೆಯ ಪೆಂಡೆ'ಗಳ ಬಗ್ಗೆ ಹೇಳುವಾಗ ಮಾತ್ರ ಅವುಗಳನ್ನು 'ವಟ್ಟಿದ್ದ ಹರಿಗೆ' ಎನ್ನಲಾಗಿದೆ ಹರಿ ಈಗ ಪೀತಾಂಬರ ಉಟ್ಟ, ಆಭರಣಗಳನ್ನು ತೊಟ್ಟ. ಆದರೆ ಕಡೆಯ ಪೆಂಡೆಗಳನ್ನು ಹಿಂದೆಯೇ ವಟ್ಟಿದ್ದ ಎಂದಂತಾಯಿತು. ಇದರಿಂದ ಪೀತಾಂಬರ ಆಭರಣಗಳು ಮಾವ ಅಳಿಯನಿಗೆ ಕೊಟ್ಟವುಗಳು. ಕಡೆಯ ಪೆಂಡೆಗಳು ಮಾತ್ರ ಬಿರುದಿನವುಗಳಾದ್ದರಿಂದ ಮೊದಲಿನವೇ ಎಂಬುದು ಸ್ಪಷ್ಟವಾಗುತ್ತದೆ.

ಮಾವ ಅಳಿಯನಿಗೆ ಪೀತಾಂಬರ ರತ್ನಾಭರಣಗಳನ್ನು ನೀಡುವುದು ವರದಕ್ಷಿಣೆಯ ಒಂದು ರೂಪ. ಈ ವರದಕ್ಷಿಣೆ ಪದ್ಧತಿ ವೇದಗಳಷ್ಟು ಪ್ರಾಚೀನ.

ಉಪ ಮಾ ಶ್ಯಾವಾಃ ಸ್ವನಯೇನ ದತ್ತಾಃ  
ವಧೂಮಂತೋ ದಶ ರಥಾಸೋ ಅಸ್ಥುಃ ||  
ಷಷ್ಟಿಃ ಸಹಸ್ರಮನು ಗವ್ಯಮಾಗಾತ್  
ಸನತ್ ಕಕ್ಷೀವಾನ್ ಅಭಿಪಿತ್ವೇ ಅಹ್ನಾಂ ||

ಋಗ್ವೇದದ ಈ ಮಂತ್ರದಲ್ಲಿ 'ಸ್ವನಯನೆಂಬ ರಾಜನು ನನಗೆ ವಧುಗಳೊಂದಿಗೆ ಶ್ಯಾಮವರ್ಣದ ಕುದುರೆಗಳನ್ನು ಕಟ್ಟಿದ್ದ ಹತ್ತು ರಥಗಳನ್ನೂ, ಅರವತ್ತು ಸಾವಿರ ಗೋವುಗಳನ್ನೂ ಕೊಟ್ಟ' ಎಂದು ಹೇಳುತ್ತಿದ್ದಾನೆ ಕಕ್ಷೀವಾನ್ ಎಂಬ ಒಬ್ಬ ರಾಜಕುಮಾರ.

ಪುರಾಣಗಳಲ್ಲಿಯೂ ವರದಕ್ಷಿಣೆಯ ಉಲ್ಲೇಖ ಉಂಟು. ಭವಿಷ್ಯೋತ್ತರದ ವೆಂಕಟೇಶ ಮಹಾತ್ಮೆಯಲ್ಲಿ ಶ್ರೀನಿವಾಸ ತನ್ನ ಮಾವನಾದ ಆಕಾಶರಾಜನಲ್ಲಿ ರತ್ನಾಭರಣಗಳನ್ನು ಕೇಳಿ ಪಡೆಯುತ್ತಾನೆ. ರಾಜ ರತ್ನಾಭರ್ಣಗಳಿಂದ ವರನನ್ನು ಚೆನ್ನಾಗಿ ಅಲಂಕರಿಸಿ ಚೆನ್ನಾಗಿ ಅಲಂಕೃತಳಾದ ಕನ್ಯೆಯನ್ನು ದಾನಮಾಡಿದ ಆಗ ವರದಕ್ಷಿಣೆ ಎಂದು ಕೋಟಿ ಚಿನ್ನದ ನಾಣ್ಯ ಕೊಡುವುದು ಬೇರೆಯೇ ಇತ್ತು. ಅನುದಾನದ ಹೆಸರಿನಲ್ಲಿ ಗೃಹ, ಗೋ, ಭೂಮಿ, ದಾಸಿ, ಯಾನ, ಶಯ್ಯಾ, ಆಸನ ಎಂದು ಮುಂತಾಗಿ ಇನ್ನೂ ಬೇರೆ ವರದಕ್ಷಿಣೆಗಳು ಬಳುವಳಿಯಾಗಿ ರತ್ನಪರ್ಯಂಕ, ದಾಸದಾಸಿಯರು, ಗೋವುಗಳು, ಆನೆ, ಕುದುರೆಗಳು ಮುಂತಾದವು ಇಂಥ ಒಂದು ಮದುವೆ ಎಂದರೆ ಬಡ ಕನ್ಯಾಪಿತೃಗಳಿಗೆ ಎದೆಯೇ ಒಡೆದುಹೋದೀತು. ವರದಕ್ಷಿಣೆ ಒಂದು ದೊಡ್ಡ ಸಾಮಾಜಿಕ ಪಿಡುಗು ಎನಿಸಿದೆ.

ವಾದಿರಾಜರು ವರದಕ್ಷಿಣೆಯ ವಿರೋಧಿಗಳೆನ್ನಬಹುದು. ರುಕ್ಮಿಣೀಶವಿಜಯದಲ್ಲಿ ರುಕ್ಮಿಣಿಯ ಕಡೆಯವರು ಹೇಳುತ್ತಾರೆ–

ನ ಪಾರಿಬರ್ಹಂ ಬಹು ದಾತುಮೀಶಾ
ರಥಾಶ್ವಹಸ್ತ್ಯಾದಿಬಲಾನಿ ಚಾಸ್ಮೈ
ಇಮಾಂ ಪರಂ ಪದ್ಮಮುಖೀಂ ದಿಶಾಮಃ ॥

'ನಾವು ಬಹಳ ವರದಕ್ಷಿಣೆ ಕೊಡಲು ಶಕ್ತರಲ್ಲ. ರಥ, ಕುದುರೆ, ಆನೆ ಮುಂತಾದ ದೊಡ್ಡ ಸೈನ್ಯಗಳನ್ನೂ ಕೊಡಲಾರೆವು. ಈ ಕಮಲಮುಖಿಯಾದ ವಧುವನ್ನು ಮಾತ್ರ ಕೊಡುತ್ತೇವೆ'.

ಇದಕ್ಕೆ ಕೃಷ್ಣನ ಕಡೆಯವರು ಹೇಳುವ ಮಾತು ಗಮನಾರ್ಹ–

ನ ಪಾರಿಬರ್ಹಂ ಸ ವೃಣೋತಿ ಪೂರ್ಣ
ಸುಖಃ ಪರಂ ಕಾಂಕ್ಷತಿ ತತ್ಕಟಾಕ್ಷಂ ॥

'ನಮ್ಮ ಕೃಷ್ಣ ವರದಕ್ಷಿಣೆ ಏನೂ ಕೇಳುವುದಿಲ್ಲ. ವಧುವಿನ ಕಡೆಗಣ್ಣ ನೋಟದಲ್ಲಿಯೇ ಪೂರ್ಣಸುಖ ಕಂಡುಕೊಳ್ಳುವವನಾತ, ಅದೊಂದನ್ನೇ ಬಯಸುವ.'

ಕೃಷ್ಣನ ಮಾತಂತಿರಲಿ. ಕಾಸು ಬಿಡದ ತಿಮ್ಮಪ್ಪನೆಂಬ ಬಿರುದಿನ ಶ್ರೀನಿವಾಸನೂ ವರದಕ್ಷಿಣೆಯ ಕಾಲದಲ್ಲಿ ವರದಕ್ಷಿಣೆಬೇಡವೆನ್ನುತ್ತಾನೆ. ಬಳುವಳಿ ಏಕೆ ಎನ್ನುತ್ತಾನೆ ಭವಿಷ್ಯೋತ್ತರದಲ್ಲಿಯೆ ವರದಕ್ಷಿಣೆಯ ಕಾಲದಲ್ಲಿ ಅವನು ಹೇಳುವ ಮಾತು–

'ದಾತವ್ಯಂ ಕಿಂ ತ್ವಯಾ ರಾಜನ್ ಪುತ್ರಸ್ಯ ತವ ಭೂಪತೇ ?'

'ರಾಜನೆ, ನಾನು ನಿನಗೆ ಮಗನಂತೆ, ನನಗೆ ಏಕೆ ವರದಕ್ಷಿಣೆ ಕೊಡುತ್ತಿ? ಬಳುವಳಿ ಕೊಡುವಾಗಲೂ ಇದೇ ಮಾತನ್ನಾಡುತ್ತಾನೆ–

'ದಾತವ್ಯಂ ಕಿಂ ನೃಪಶ್ರೇಷ್ಠ ತವ ಪುತ್ರಸ್ಯ ಮೇಽನಘ ?'

ಹೀಗೆ ವರದಕ್ಷಿಣೆ ಬಳುವಳಿಗಳನ್ನು ಬೇಡವೆಂದ ಶ್ರೀನಿವಾಸನೆ ಅಲಂಕಾರದ ರತ್ನಾಭರಣಗಳನ್ನು ಕೇಳಿ ಪಡೆದುಕೊಳ್ಳುತ್ತಾನೆ. ಏಕೆಂದರೆ ಕನ್ಯಾದಾನ ಶಾಸ್ತ್ರೀಯವೆನಿಸಬೇಕಾದರೆ ಅದು ಬೇಕು.

'ಅಲಂಕೃತ್ಯ ಕನ್ಯಾಮುದಕಪೂರ್ವಂ ದದ್ಯಾತ್'

'ವಧೂವರರನ್ನು ಇಬ್ಬರನ್ನೂ ಅಲಂಕರಿಸಿ, ಬಳಿಕ ಕನ್ಯೆಯನ್ನು ಧಾರೆ ಎರೆದು ಕೊಡಬೇಕು' ಎಂದು ಹೇಳುತ್ತದೆ ಗೃಹ್ಯಸೂತ್ರ.

ಪೂರ್ವಿಕರಿಗೆ ಈ ಸಾಲಂಕೃತ ಕನ್ಯಾದಾನವೆಂದರೆ ಅಶ್ವಮೇಧ ಯಾಗಕ್ಕೆ ಸಮಾನ, ಯಾಗಕ್ಕೆ ತೊಡಗುವವನು ಧನದ ಲೋಭವಿಟ್ಟುಕೊಳ್ಳಬಾರದು ಸರ್ವಸ್ವ ದಾನ ಮಾಡಲು ಸಿದ್ಧನಿರಬೇಕು. ರಘುಮಹಾರಾಜ ಯಾಗದಲ್ಲಿ ಸರ್ವಸ್ವ ದಾನ ಮಾಡಿ ತನ್ನ ಉಪಯೋಗಕ್ಕೆ ಕೇವಲ ಮಣ್ಣಿನ ಮಡಿಕೆಗಳನ್ನಿಟ್ಟು ಕೊಂಡಿದ್ದನಂತೆ. ಹಾಗೆಯೇ ಕನ್ಯಾದಾನ ಮಾಡಲು ಹೊರಟವನು ತನ್ನ ಸಂಪತ್ತೆಲ್ಲ ಅಳಿಯನ ಪಾಲಾಗುವುದೆಂದು ಪರಿತಪಿಸಕೂಡದು. ಅಳಿಯನೂ ಬಲಾತ್ಕಾರವಾಗಿ ವರದಕ್ಷಿಣೆ ಸುಲಿಗೆ ಮಾಡಬಾರದು. ವರದಕ್ಷಿಣೆ ಬೇಡವೆಂದ ಶ್ರೀನಿವಾಸ ಅದನ್ನು ಸ್ವೀಕರಿಸದೆ ಬಿಟ್ಟಿಲ್ಲ. ಏಕೆಂದರೆ ಮಾವ ಅಳಿಯಂದಿರೊಳಗೆ ತಂದೆ ಮಕ್ಕಳ ಬಾಂಧವ್ಯ ಪ್ರೀತಿಗಳಿರಬೇಕು. ಅದಕ್ಕೇ ಶ್ರೀನಿವಾಸ ರಾಜನಲ್ಲಿ 'ನಾನು ನಿನಗೆ ಮಗನಂತೆ' ಎಂದಿದ್ದಾನೆ. ಹೀಗೆ ಪ್ರೀತಿಯಿಂದ ಸ್ವಸಂತೋಷದಿಂದ ಮಾವ ಕೊಡುವ ವರದಕ್ಷಿಣೆ ಅಳಿಯನಿಗೆ ವರದಾನವಾಗುತ್ತದೆ ಬಲಾತ್ಕಾರಕ್ಕೊಳಗಾಗಿ ಸಂಕಟದಿಂದ ಕೊಡುವ ಹಣ ಶಾಪವಾಗಿ ಪರಿಣಮಿಸುತ್ತದೆ. ದಂಪತಿಗಳೊಳಗೆ ಮನಸ್ತಾಪಕ್ಕೆ ಅದುವೆ ಕಾರಣವಾಗುತ್ತದೆ ಒಮ್ಮೆ ಒಡೆದು ಹೋದ ಮನಸ್ಸನ್ನು ತಿರುಗಿ ಒಂದು ಮಾಡುವುದು ಯಾವ ಸರಕಾರದ ಕಾನೂನಿಗೂ ಆಗದ ಮಾತು.

ಕನ್ಯಾದಾನದ ಮಹತ್ವ ಮತ್ತು ದಾಂಪತ್ಯ ಜೀವನದ ಪವಿತ್ರ ಉದ್ದೇಶಗಳನ್ನು ಅರಿತು ಧಾರ್ಮಿಕ ಪ್ರಜ್ಞೆಯಿಂದ ನಡೆಸುವ ವಿವಾಹ ಯಶಸ್ವಿಯಾಗುತ್ತದೆ. ಕೇವಲ ವ್ಯಾವಹಾರಿಕ ದೃಷ್ಟಿಯಿಂದ ಮದುವೆ ಮಾಡುವಾಗ ದುಡ್ಡಿನ ವ್ಯವಹಾರ ನಡುವೆ ತಲೆ ಹಾಕುತ್ತದೆ.

ಗಂಡುಹೆಣ್ಣುಗಳು ಪರಸ್ಪರ ಮೆಚ್ಚಿ ಹಿರಿಯರ ಸಮ್ಮತಿಗಾಗಿ ಕಾಯದೆ ತಾವೇ ಮದುವೆಯಾಗುವಾಗ ಹಿರಿಯರು ಮಾಡುವ ವರದಕ್ಷಿಣೆ ಬಳುವಳಿಗಳ ರಾದ್ಧಾಂತ ಇಲ್ಲವಾಗುವುದು ಸಹಜ ಆದರೆ ಅಂಥ ಮದುವೆ ವಿಫಲವಾಗುವುದೆ ಹೆಚ್ಚು. ಗಂಡು ಹೆಣ್ಣು ಪರಸ್ಪರ ಸಂಧಿಸಿದಾಗ ಹುಟ್ಟುವ ಮೊದಲ ನೋಟದ 'ಪ್ರೇಮ' ವಾಸ್ತವಪ್ರೇಮವಲ್ಲ. ತಾವಿಬ್ಬರೂ ಒಂದಾದರೆ ಸಾಕು, ಕುಟುಂಬದಲ್ಲಿ ಎಷ್ಟು ತೊಂದರೆಗಳಿದ್ದರೂ ಅವೆಲ್ಲ ಮಾಯವಾಗುತ್ತವೆ ಎಂಬ ಭ್ರಮೆಯನ್ನೇ ನಂಬಿ ಮದುವೆಯಾದವರು ಮುಂದೆ ವಿವಾಹ ಜೀವನದ ಯಥಾರ್ಥತೆ ಅನುಭವಕ್ಕೆ ಬಂದಾಗ ನಿರಾಶರಾಗುತ್ತಾರೆ. ಸಿನಿಮಾ ನಾಟಕಗಳ ಪ್ರೇಮಸನ್ನಿವೇಶಗಳನ್ನೇ ನಿಜವೆಂದು ನಂಬಿದವರಿಗೆ ಇಂಥ ನಿರಾಶೆ ಅಸಹನೀಯವಾಗಿ ಬಿಡುತ್ತದೆ ಆದ್ದರಿಂದ ಪೂರ್ವಿಕರು ಪ್ರೇಮವಿವಾಹಕ್ಕೆ ಎಂದೂ ಆದ್ಯತೆ ಕೊಡಲಿಲ್ಲ. ಗಂಡುಹೆಣ್ಣುಗಳು

ವಿವಾಹ ಜೀವನದಲ್ಲಿ ಕಾಲಿರಿಸಿದ ಬಳಿಕ ಅನುಭವದಿಂದ ಒಬ್ಬರನ್ನೊಬ್ಬರು ಅರಿತಾಗಲೆ ನಿಜವಾದ ಪ್ರೇಮದ ಉದಯ ಹೊರತು ಬಯಲಲ್ಲಿ ಪರಸ್ಪರ ಸಂಧಿಸಿದ ಮಾತ್ರಕ್ಕಲ್ಲ. ಆದ್ದರಿಂದ ಕಾಳಿದಾಸನು ಶಾಕುಂತಲ ನಾಟಕದಲ್ಲಿ ಹೀಗೆ ಹೇಳುತ್ತಾನೆ–

ಅತಃ ಪರೀಕ್ಷ್ಯ ಕರ್ತವ್ಯಂ ವಿಶೇಷಾತ್ ಸಂಗತಂ ರಹಃ ।
ಅಜ್ಞಾತ ಹೃದಯೇಷ್ವೇವಂ ವೈರೀಭವತಿ ಸೌಹೃದಂ ॥

'ರಹಸ್ಯ ಪ್ರಣಯವನ್ನು ವಿಶೇಷವಾಗಿ ಪರೀಕ್ಷೆ ಮಾಡಿಯೇ ಮಾಡಬೇಕು. ಪರಸ್ಪರರ ಹೃದಯವನ್ನರಿಯದಿದ್ದರೆ ಪ್ರೇಮವೇ ದ್ವೇಷವಾಗಿ ತಿರುಗೀತು'.

ಹಿರಿಯರ ಆಶೀರ್ವಾದದೊಂದಿಗೆ ಶಾಸ್ತ್ರಾನುಸಾರ ವಿವಾಹ ನಡೆಯಬೇಕು. ವರದಕ್ಷಿಣೆಗೆ ಬಲಾತ್ಕರಿಸುವುದು ಶಾಸ್ತ್ರಸಮ್ಮತವಲ್ಲ. ಕನ್ಯಾಪಿತೃ ಕನ್ಯೆಯನ್ನು ಸಂತೋಷದಿಂದ ದಾನ ಮಾಡುವಂತಾಗಬೇಕು ಇದನ್ನು ಮುಂದೆ ಲಕ್ಷ್ಮೀಶೋಭನ ಪದದಲ್ಲಿಯೇ ವಾದಿರಾಜರು ಸ್ಪಷ್ಟಪಡಿಸಿದ್ದಾರೆ–

'ಒಗ್ಗಿದ ಮನದಿಂದ ಧಾರೆಯೆರೆದನೆ ಸಿಂಧು'

– ೭೧ –

**ಕೊಂಬು ಚೆಂಗಹಳೆಗಳು ತಾಳ ಮದ್ದಳೆಗಳು**
**ತಂಬಟೆ ಭೇರಿ ಪಟಹಗಳು ।**
**ಭೊಂ ಭೊಂ ಎಂಬ ಶಂಖ ಡೊಳ್ಳು ಮೌರಿಗಳು**
**ಅಂಬುಧಿಯ ಮನೆಯಲೆಸೆದವು ॥**

ಲಕ್ಷ್ಮೀನಾರಾಯಣರ ವಿವಾಹೋತ್ಸವ ಪ್ರಾರಂಭವಾಯಿತೆಂಬುದರ ಸೂಚನೆಯಾಗಿ ಕೊಂಬುಗಳು, ಚೆಂಗಹಳೆಗಳು, ತಾಳಗಳು, ಮದ್ದಳೆಗಳು, ತಮ್ಮಟೆಗಳು, ಭೇರಿಗಳು, ಪಟಹಗಳು, ಭೊಂ ಭೊಂ ಎಂದು ಧ್ವನಿಗೈವ ಶಂಖಗಳು, ಡೊಳ್ಳುಗಳು, ಮೌರಿಗಳು ಹೀಗೆ ಅನೇಕ ಬಗೆಯ ಎಲ್ಲ ವಾದ್ಯಗಳು ಸಮುದ್ರರಾಜನ ಮನೆಯಲ್ಲಿ ಮೊಳಗಿದವು.

ಮೂಲತಃ ಮೇಲೆ ಹೇಳಿದ ಎಲ್ಲ ವಾದ್ಯಗಳೂ ರಣವಾದ್ಯಗಳು. ಯೋಧರಲ್ಲಿ ಉತ್ಸಾಹ ತುಂಬುವುದಕ್ಕಾಗಿ ಅವುಗಳನ್ನು ಬಾರಿಸಲಾಗುತಿತ್ತು. ಮಹಾಭಾರತ ಯುದ್ಧದಲ್ಲಿ ದುರ್ಯೋಧನನಿಗೂ ಅವನ ಪಕ್ಷದ ಸೇನೆಗೂ ಉತ್ಸಾಹ ತುಂಬಲು ಸೇನಾಧಿಪತಿ ಭೀಷ್ಮರು ಸಿಂಹನಾದ ಪೂರ್ವಕವಾಗಿ ಶಂಖನಾದ

ಮಾಡಿದರು ಮತ್ತು ಭೇರಿ ಪಟಹ ಮುಂತಾದ ಎಲ್ಲ ವಾದ್ಯಗಳನ್ನೂ ಏಕಕಾಲದಲ್ಲಿ ಮೊಳಗಿಸಿದರು ಎನ್ನುತ್ತದೆ ಭಗವದ್ಗೀತೆ–

ತಸ್ಯ ಸಂಜಯನ್ ಹರ್ಷಂ ಕುರುವೃದ್ಧಃ ಪಿತಾಮಹಃ ।
ಸಿಂಹನಾದಂ ವಿನದ್ಯೋಚ್ಚೈಃ ಶಂಖಂ ದಧ್ಮೌ ಪ್ರತಾಪವಾನ್ ॥
ತತಃ ಶಂಖಾಶ್ಚ ಭೇರ್ಯಶ್ಚ ಪಣವಾನಕ ಗೋಮುಖಾಃ ।
ಸಹಸೈವಾಭ್ಯಹನ್ಯಂತ ಸ ಶಬ್ದಸ್ತುಮುಲೋಽಭವತ್ ॥

ರಾಮರಾವಣರ ಯುದ್ಧದಲ್ಲಿ ರಣವಾದ್ಯಗಳು ಎಷ್ಟಿದ್ದವು ಎಂಬುದರ ಕಲ್ಪನೆಗೆ ಈ ಮಾತನ್ನು ಗಮನಿಸಬೇಕು–

ಯಾವಂತಿ ವಾದ್ಯ ಭಾಂಡಾನಿ ರಾಮರಾವಣಯೋರ್ಯುಧಿ ।
ತಾವತ್ಯೋ ನಾಭವನ್ ಸೇನಾಃ ಕುರುಪಾಂಡವ ಸಂಗರೇ ॥

ರಾಮರಾವಣರ ಯುದ್ಧದಲ್ಲಿ ಎಷ್ಟು ವಾದ್ಯಗಳಿದ್ದವೋ ಅಷ್ಟು ಸೈನ್ಯ ಕೌರವ ಪಾಂಡವರ ಯುದ್ಧದಲ್ಲಿ ಇರಲಿಲ್ಲ !

ಆದ್ದರಿಂದ ಮದುವೆ ಮನೆಯಲ್ಲಿ ರಣವಾದ್ಯಗಳ ಔಚಿತ್ಯವೇನೆಂಬ ಪ್ರಶ್ನೆ ಬರಬಹುದು. ಆದರೆ ಕ್ಷತ್ರಿಯರಿಗೆ ಯುದ್ಧವೆಂಬುದೊಂದು ಮಂಗಳಕಾರ್ಯ ಬ್ರಾಹ್ಮಣರಿಗೆ ಯಜ್ಞದಂತೆ ಇದು. ದಂಡಯಾತ್ರೆ, ತೀರ್ಥಯಾತ್ರೆಗೆ ಸಮಾನ. ಬಾಹ್ಯ ಶತ್ರುಗಳ ನಾಶಕ್ಕಾಗಿ ದಂಡಯಾತ್ರೆ ಇರುವಂತೆ ಅಂತಃಶತ್ರುಗಳಾದ ಕಾಮಕ್ರೋಧಾದಿಗಳ ನಾಶಕ್ಕಾಗಿ ತೀರ್ಥಯಾತ್ರೆ ಇದೆ. ಎರಡೂ ಅಶುಭ ಪರಿಹಾರಕ. ಮಂಗಳಕರ.

ಆಯುರ್ವೇದದ ಸುಶ್ರುತ ಸಂಹಿತೆಯಲ್ಲಿ ಭೇರೀಪಟಹ ವಾದನವನ್ನು ವಿಷ ಚಿಕಿತ್ಸೆಯಲ್ಲಿ ವಿಧಿಸಲಾಗಿದೆ–

ಏತೇನ ಭೇರ್ಯಃ ಪಟಹಾಶ್ಚ ದಿಗ್ಧಾ ನಾನದ್ಯಮಾನಾ ವಿಷಮಾಶು ಹನ್ಯುಃ ।

ಆದ್ದರಿಂದಲೇ ಮಂಗಳಕರವಾದ ಶ್ರೀಹರಿಯು ಪಾಂಚಜನ್ಯ ಶಂಖಧ್ವನಿಗೆ ಪಾತಾಳದಲ್ಲಿರುವ ದುಷ್ಟ ರಾಕ್ಷಸ ಸ್ತ್ರೀಯರ ಗರ್ಭಪಾತವಾಗುತ್ತದೆ ಮತ್ತು ಯಾವುದೇ ಶಂಖದ ದರ್ಶನ ಮಾತ್ರದಿಂದಲೆ ಸಕಲ ಪಾಪಪರಿಹಾರ, ಇನ್ನು ಅದರ ಸ್ಪರ್ಶದ ಬಗ್ಗೆ ಬೇರೆ ಹೇಳಬೇಕಾಗಿಯೆ ಇಲ್ಲ–

ಗರ್ಭಾ ದೇವಾರಿ ನಾರೀಣಾಂ ವಿಶೀರ್ಯಂತೇ ಸಹಸ್ರಧಾ ।
ತವ ನಾದೇನ ಪಾತಾಲೇ ಪಾಂಚಜನ್ಯ ನಮೋಽಸ್ತುತೇ ॥

ದರ್ಶನಾದೇವ ಶಂಖಸ್ಯ ಕಿಂ ಪುನಃ ಸ್ಪರ್ಶನೇ ಕೃತೇ ।
ವಿಲಯಂ ಯಾಂತಿ ಪಾಪಾನಿ ತಮಃ ಸೂರ್ಯೋದಯೇ ಯಥಾ ॥

'ಶಂಖ' ಎಂಬ ಶಬ್ದಕ್ಕೇ 'ಶಾಮ್ಯತಿ ಅಶುಭಂ ಅಸ್ಮಾದ್' ಸಮಸ್ತ ಅಶುಭ ಶಾಮಕವಾದ ವಾದ್ಯ ಎಂದರ್ಥ. ಅಶುಭ ಶಾಮಕವಾದ್ದರಿಂದಲೆ ಅದು ಹರಿಗೆ ಪ್ರಿಯ, ಅಥವಾ ಹರಿಗೆ ಪ್ರಿಯವಾದ್ದರಿಂದಲೇ ಅದು ಅಶುಭ ಶಾಮಕ. ಅಂತೂ, ಶಂಖವಿದ್ದಲ್ಲಿ ಹರಿ ಇದ್ದಾನೆ–

ಯತಃ ಶಂಖಸ್ತತೋ ಹರಿಃ ।

ಶಂಖವಿಲ್ಲದ ಪೂಜೆಯನ್ನು ಹರಿ ಒಲ್ಲೆನೆನ್ನುತ್ತಾನೆ.

ಕೊಂಬು ಸಂಸ್ಕೃತದಲ್ಲಿ 'ಶೃಂಗ', 'ಶೃಣಾತಿ ಶತ್ರೂನ್' ಶತ್ರುಗಳನ್ನು ಹಿಂಸಿಸುತ್ತದೆ. ಅಶುಭ ಪರಿಹಾರ ಮಾಡುತ್ತದೆ. ಅದೂ ಶ್ರೀಕೃಷ್ಣನಿಗೆ ಪ್ರಿಯ. ಬೆಳಿಗ್ಗೆ ಎದ್ದು ದನ ಮೇಯಿಸಲು ಹೊರಡುವಾಗ ಕೊಂಬಿನ ಮಧುರ ಧ್ವನಿ ಮಾಡಿ ಗೆಳೆಯರಿಗೆ ತಾನು ಹೊರಟೆನೆಂದು ಸೂಚಿಸುತ್ತಾನೆ ಆತ–

ಕ್ವಚಿದ್ ವನಾಶಾಯ ಮನೋ ದಧದ್ ವ್ರಜಾತ್
ಪ್ರಾತಃ ಸಮುತ್ಥಾಯ ವಯಸ್ಯ ವತ್ಸಪಾನ್ ।
ಪ್ರಬೋಧಯನ್ ಶೃಂಗರವೇಣ ಚಾರುಣಾ
ವಿನಿರ್ಗತೋ ವತ್ಸಪುರಃಸ್ಸರೋ ಹರಿಃ ॥

ಚೆಂಗಹಳೆ ಎಂದರೆ ಕೆಂಪು ಕಹಳೆ. ತಾಮ್ರದಿಂದ ಮಾಡಿದುದು. ಸಂಸ್ಕೃತದಲ್ಲಿ ಕಾಹಲೆ. 'ಕಂ ಸುಖಂ ಆಹಲತಿ ದದಾತಿ' ಸುಖದಾಯಕವಾದ ವಾದ್ಯ ಎಂದರ್ಥ. 'ಕೊಂಬು ಚೊಂಬು ಕಹಳೆಗಳು' ಎಂಬ ಪಾಠದಲ್ಲಿ ಚೊಂಬು ಎಂದರೆ ಘಟವಾದ್ಯವೆಂದು ಗ್ರಹಿಸಬಹುದು.

ತಾಳ ಸಂಸ್ಕೃತದಲ್ಲಿ 'ತಾಲ', 'ತಾಂಡವ'ದ ಮೊದಲಕ್ಷರವಾದ 'ತಾ' ಮತ್ತು 'ಲಾಸ್ಯ' ದ ಮೊದಲಕ್ಷರವಾದ 'ಲ' ಸೇರಿ 'ತಾಲ' ವಾಯಿತಂತೆ. ಪುರುಷರ ವೀರ ನೃತ್ಯವಾದ ತಾಂಡವವೂ ಸ್ತ್ರೀಯರ ಮೃದುಲಾಸ್ಯವೂ ತಾಳಬದ್ಧವಾಗಿಯೇ ಇರುತ್ತದೆ.

ಪ್ರಚಂಡ ತಾಂಡವಾಟೋಪೇ ಪ್ರಕ್ಷಿಪ್ತಾ ಯೇನ ದಿಗ್ಗಜಾಃ ।
ಭವಂತು ವಿಘ್ನಭಂಗಾಯ ಭವಸ್ಯ ಚರಣಾಂಬುಜಾಃ ॥

'ಭಯಂಕರ ತಾಂಡವ ನೃತ್ಯದ ಆಟೋಪದಲ್ಲಿ ರುದ್ರನಿಡುವ ಹೆಜ್ಜೆಗಳು ದಿಗ್ಗಜಗಳನ್ನು ಬೆದರಿಸಿ ಚೆಲ್ಲಾಪಿಲ್ಲಿ ಮಾಡುತ್ತವೆ. ಅವು ನಮ್ಮೆಲ್ಲರ ವಿಘ್ನಗಳನ್ನು ಕಳೆಯಲಿ' ಎನ್ನುತ್ತದೆ ಮತ್ಸ್ಯಪುರಾಣ. ಹೀಗೆ ಸಕಲ ವಿಘ್ನನಿವಾರಕ ಮಂಗಳಕರ ರುದ್ರತಾಂಡವದ ಒಂದಂಶ 'ತಾಳ'ದಲ್ಲಿರುವುದರಿಂದ ಅದು ಅಶುಭ ಪರಿಹಾರಕ. ಎಲ್ಲ ವಾದ್ಯಗಳೂ ತಾಳಬದ್ಧವಾಗಿಯೆ ಮೊಳಗಿದರೂ ಕಂಚಿನ ತಾಳಕ್ಕೇ ತಾಳ ಎಂಬ ಹೆಸರು ರೂಢಿಯಲ್ಲಿದೆ. ಆದ್ದರಿಂದ ಅದು ವಿಶೇಷವಾಗಿ ಅಶುಭ ಪರಿಹಾರಕ. 'ಪ್ರಹ್ಲಾದಸ್ತಾಲಧಾರೀ' ತಾಳವಾದ್ಯ ಪಟು ಪ್ರಹ್ಲಾದನೆಂದು ಪ್ರಸಿದ್ಧ.

'ಅದರ್ಶಯತ್ ತಾಲಗತೀ ಕಪರ್ದೀ।'

ಎಂಬಂತೆ ರುದ್ರದೇವರೂ ತಾಳವಾದ್ಯ ಪ್ರಿಯರು.

ಮದ್ದಳೆ ಸಂಸ್ಕೃತದಲ್ಲಿ ಮರ್ದಲ ಅಶುಭವನ್ನು ಮರ್ದನ ಮಾಡುತ್ತದೆ. ಚರ್ಮವಾದ್ಯಗಳಲ್ಲೆಲ್ಲ ಮದ್ದಳೆ ಶ್ರೇಷ್ಠವೆಂದು ಭರತಮುನಿ ಮುಂತಾದವರ ಮತವಿದೆ–

ಆನದ್ಧೇ ಮರ್ದಲಃ ಶ್ರೇಯಾನ್ ಇತ್ಯುಕ್ತಂ ಭರತಾದಿಭಿಃ।

ಮದ್ದಳೆ ರಣವಾದ್ಯವಾಗುವಂತೆ ಸಂಗೀತವಾದ್ಯವೂ ಆಗುವುದರಿಂದ ಅದಕ್ಕೆ ಹೆಚ್ಚಿನ ಗೌರವ ಬಂದಿರಬಹುದು. ಮೃದಂಗವೆಂದೂ ಅದನ್ನು ಕರೆಯುವುದುಂಟು.

ತಂಬಟೆ ಅಂದರೆ ತಮ್ಮಟೆ, ಸಂಸ್ಕೃತದಲ್ಲಿ ಢಕ್ಕೆ, ಯಶಃಪಟಹ ಎಂದೂ ಹೇಳುತ್ತಾರೆ. ಯೋಧರಿಗೆ ಉತ್ಸಾಹ ಉಂಟುಮಾಡುವ ಈ ವಾದ್ಯ ಜಾಡ್ಯ ಆಲಸ್ಯಾದಿ ಅನಿಷ್ಟಗಳನ್ನು ಓಡಿಸಿ ಯುದ್ಧದಲ್ಲಿ ಜಯ ತಂದುಕೊಡುವುದರಿಂದ ಇದು ಮಂಗಳಕರ,

ಭೇರಿ ಅಂದರೆ 'ಬಿಭ್ಯತಿ ಶತ್ರವಃ ಅಸ್ಯಾ' ಶತ್ರುಗಳಿಗೆ ಭಯಂಕರವಾದ ವಾದ್ಯ, ನಗಾರಿ. ಅದರ ಧ್ವನಿ ಪರಮ ಮಂಗಳಕರ. ಶ್ರೀಹರಿಗೆ ಬಹಳ ಪ್ರಿಯ. ಅದಿಲ್ಲದೆ ಅವನನ್ನು ಶಯನದಿಂದ ಎಬ್ಬಿಸಬಾರದಂತೆ ಎಬ್ಬಿಸಿದರೆ ಮುಂದಿನ ಜನ್ಮದಲ್ಲಿ ಕಿವುಡನಾಗುತ್ತಾನಂತೆ–

ಭೇರೀಶಬ್ದ ಮಕೃತ್ವಾ ಯಸ್ತು ಮಾಂ ಪ್ರತಿಬೋಧಯೇತ್।
ಬಧಿರೋ ಜಾಯತೇ ಭೂಮೌ ಜನ್ಮೈಕಂ ಚ ನ ಸಂಶಯಃ॥

ಪಟಹ ಎಂದರೆ 'ಪಾಟಯತಿ ಗಮಯತಿ ಯೋಧಾನ್ ಯುದ್ಧಾಯ, ಉತ್ಸಾಹ ವರ್ಧಕತ್ವಾತ್' ಯೋಧರಿಗೆ ಉತ್ಸಾಹ ಉಂಟುಮಾಡಿ ರಣರಂಗಕ್ಕೆ ಹೋಗಲು ಪ್ರೇರಿಸುವ ಯಶಃಪಟಹ ಅಂದರೆ ಢಕ್ಕಾವಾದ್ಯವೂ ಆಗಬಹುದು,

'ಪಾಟಯತಿ ಗಮಯತಿ ರಸಿಕಾನ್ ಗಾನ ಪ್ರಪಂಚಾಯ' ರಸಿಕರನ್ನು ಗಾನಲೋಕಕ್ಕೊಯ್ಯುವ ಗಾಯನ ಪಟಹ ಅಂದರೆ ಮೃದಂಗವೂ ಆಗಬಹುದು. ಇಲ್ಲಿ ತಂಬಟೆ ಎಂದು ಢಕ್ಕೆಯನ್ನು ಹೇಳಿರುವುದರಿಂದ ಪಟಹ ಎಂದರೆ ಮೃದಂಗವೆ ಎಂದಿಟ್ಟುಕೊಳ್ಳಬಹುದು. ಅಂತೂ ಪ್ರಾಪಂಚಿಕ ದುಃಖ ಮರೆಸಿ ಅಲೌಕಿಕ ಗಂಧರ್ವ ಲೋಕದ ಗಾನಾನಂದಕ್ಕೊಯ್ಯುವುದರಿಂದ ಪಟಹವೂ ಶುಭಕರವೆ. 'ಇಂದ್ರೋಽವಾದೀನ್ಮೃದಂಗಂ' ಇಂದ್ರದೇವ ಮೃದಂಗವಾದನ ಪಟು ಎಂದು ಪ್ರಸಿದ್ಧಿ. ಹಾಗೆ 'ಅನೀನದತ್ ಪದ್ಮಭವೊ ಮೃದಂಗಂ' ಎಂದು ಬ್ರಹ್ಮದೇವರು ಮೃದಂಗ ವಾದನ ಪ್ರಿಯರೆಂದಿದೆ.

ಡೊಳ್ಳುವಾದ್ಯ ಡೊಳ್ಳುಕುಣಿತದಲ್ಲಿ ಉಪಯೋಗಿಸುವಂಥದ್ದು. ಸಂಸ್ಕೃತವಲ್ಲಿ ಡೋಲವಾದ್ಯ, 'ಡೊಳ್ಳಿನ ಮೇಲ್ ಕೈಯ ಭರಮಪ್ಪ ಹಾಕ್ಯಾನು' ಎಂದು ಕನಕದಾಸರು ಹಾಡುವಂತೆ ಹರಿನಾಮಸಂಕೀರ್ತನೆಯಲ್ಲಿ ಬ್ರಹ್ಮದೇವರು ಬಳಸುವ ವಾದ್ಯ ಡೊಳ್ಳು ಎಂದ ಮೇಲೆ ಅದು ಶ್ರೀಹರಿಗೆ ಪ್ರಿಯವೆಂದು ಬೇರೆ ಹೇಳಬೇಕಾಗಿಲ್ಲ. ಮೌರಿಯೂ ಇಂಥದೇ ಒಂದು ವಾದ್ಯ.

ಮೇಲೆ ಹೇಳಿದ ವಾದ್ಯಗಳಲ್ಲಿ ಕೊಂಬು ಚೆಂಗಹಳೆ ಶಂಖಗಳು ಬಾಯಿಂದ ಊದುವಂಥ ಮುಖವಾದ್ಯಗಳು. ಶುಷಿರವಾದ್ಯಗಳೆನ್ನುತ್ತಾರೆ. ತಾಳವು ಕಂಚಿನದು. ಘನವಾದ್ಯವೆನಿಸುತ್ತದೆ. ಮದ್ದಳೆ, ತಂಬಟೆ, ಭೇರಿ, ಪಟಹ, ಡೊಳ್ಳು ಮೌರಿಗಳು ಚರ್ಮವಾದ್ಯಗಳು, ಆನದ್ಧ ಅಥವಾ ಅನುವಿದ್ಧ ವಾದ್ಯಗಳೆನ್ನುತ್ತಾರೆ. ಈ ಮೂರು ವರ್ಗದ ವಾದ್ಯಗಳೆ ಅಲ್ಲದೆ ನಾಲ್ಕನೆಯದು ವೀಣೆ ಮುಂತಾದ ತಂತಿ ವಾದ್ಯಗಳ ಒಂದು ವರ್ಗವೂ ಇದೆ. ಇದಕ್ಕೆ ತತವಾದ್ಯಗಳೆನ್ನುತ್ತಾರೆ. ವೀರಯೋಧರು ರಣರಂಗದಲ್ಲಿ ಮಾಡುವ ಸಿಂಹನಾದವನ್ನೂ ಐದನೆ ವರ್ಗದ ವಾದ್ಯವೆನ್ನುವುದೂ ಉಂಟು

ಮೂಲತಃ ತತ ವಾದ್ಯ ದೇವತೆಗಳದು. ಶುಷಿರ ವಾದ್ಯ ಗಂಧರ್ವರದು ಆನದ್ಧ ವಾದ್ಯ ದೇವಭೃತ್ಯರಾದ ರಾಕ್ಷಸರದು. ಘನವಾದ್ಯ ಕಿನ್ನರರದು–

ತತಂ ವಾದ್ಯಂ ತು ದೇವಾನಾಂ ಗಂಧರ್ವಾಣಾಂ ಚ ಶೌಷಿರಂ ।
ಆನದ್ಧಂ ರಾಕ್ಷಸಾನಾಂ ತು ಕಿನ್ನರಾಣಾಂ ಘನಂ ವಿದುಃ ॥

ಎಲ್ಲ ವಾದ್ಯಗಳನ್ನೂ ಭೂಮಿಗೆ ತಂದವ ಶ್ರೀಹರಿಯೆ, ತನ್ನ ಅವತಾರಗಳಲ್ಲಿ–

ನಿಜಾವತಾರೇ ಗೋವಿಂದಃ ಸರ್ವಮೇವಾನಯತ್ ಕ್ಷಿತೌ ॥

ಆದ್ದರಿಂದ ಶ್ರೀಹರಿಗೆ ಷೋಡಶೋಪಚಾರ ಪೂಜೆಯು ಕೊನೆಯಲ್ಲಿ ರಾಜೋಪಚಾರಗಳ ನಡುವೆ ಸರ್ವವಾದ್ಯಸಮರ್ಪಣೆಯೂ ಸೇರಿದೆ. ಎಲ್ಲ ವಾದ್ಯ ಸಮರ್ಪಣೆ ಮಾಡಲಾರದ ಅಶಕ್ತರಿಗಾಗಿ ಸರ್ವವಾದ್ಯಮಯವಾದ ಘಂಟಾವಾದನವ್ನೂ ವಿಹಿತವಾಗಿದೆ. ಘಂಟೆ ಇಲ್ಲದ ಪೂಜೆಯನ್ನು ಹರಿ ಒಲ್ಲನು.

ಘಂಟಾ ಭವೇದಶಕ್ತಸ್ಯ ಸರ್ವವಾದ್ಯಮಯೋ ಯತಃ ॥

ಎಲ್ಲ ವಾದ್ಯಗಳೂ ಮಂಗಳಕರವಾಗಿರಲು ಕಾರಣವೇನೆಂದರ ಅವು ಶ್ರೀಹರಿಯ ಗುಣಗಾನವನ್ನೇ ಮಾಡುತ್ತವೆ. ಅಚೇತನಗಳಾದುದರಿಂದ ಗುಣಗಾನದ ಉದ್ದೇಶ ಅವುಗಳಿಗಿಲ್ಲದಿರಬಹುದು. ಆದರೆ ಅವು ತಮಗರಿವಿಲ್ಲದಂತೆಯೆ ಆ ಕಾರ್ಯ ಮಾಡುತ್ತಿವೆ. ಬೆಂಕಿಗೆ ತಾನು ಸುಡುತ್ತಿರುವುದು ಅದಕ್ಕೆ ತಿಳಿಯದು. ಆದರೆ ಸುಡುತ್ತಿರುವುದು ನಿಜ ಐತರೇಯ ಭಾಷ್ಯದಲ್ಲಿ ಶ್ರೀಮಧ್ವಾಚಾರ್ಯರು ಹೇಳಿದ್ದಾರೆ–

ಭೇರೀಧ್ವನಿಃ ಪ್ರಭೋಃ ಅನುದಾತ್ತಸರೂಪತ್ವಾದ್
ಔದಾರ್ಯಂ ವದತೀಶಿತುಃ ।
ತದಪೇಕ್ಷಯಾಽನ್ಯನೀಚತ್ವಂ ಘಂಟಾದ್ಯಾಃ ಸ್ವರಿತಾತ್ಮಕಾಃ ।
ಉಚ್ಚಸ್ಥಿತಿಮುದಾತ್ತಸ್ತು ಸ್ವರ್ಣಚಂಚ್ವಾದಿಕಃ ಸ್ವರಃ ॥

ಮೃದು ಗಂಭೀರ ನಾದ ಉಳ್ಳ ಭೇರಿ ಢಕ್ಕೆ ಡೊಳ್ಳು ಮುಂತಾದ ಆನದ್ಧ ವಾದ್ಯಗಳು ಅನುದಾತ್ತ ಸ್ವರದಿಂದ ಸಕಲಾಭೀಷ್ಟಪ್ರದಾನಸಮರ್ಥನಾದ ಹರಿಯು ಔದಾರ್ಯ ಗುಣವನ್ನು ಕೊಂಡಾಡುತ್ತವೆ. ಘಂಟೆ ತಾಳ ಮುಂತಾದ ಘನವಾದ್ಯಗಳು ಸ್ವರಿತಸ್ವರದಿಂದ ಹರಿಯು ಮಹತ್ವವನ್ನೂ, ಅವನಿಗೆ ಹೋಲಿಸಿದಾಗ ಅನ್ಯರ ಅಲ್ಪತ್ವವನ್ನೂ ಸ್ಪಷ್ಟಗೊಳಿಸುತ್ತವೆ. ನಾಗಸ್ವರ ಮುಂತಾದ ಶುಷಿರ ವಾದ್ಯಗಳು ಉದಾತ್ತ ಸ್ವರದಿಂದ ಹರಿಯು ಸಾರ್ವಭೌಮ ವ್ಯಕ್ತಿತ್ವವನ್ನು ಪ್ರಶಂಸಿಸುತ್ತವೆ.

'ವಾದ್ಯ' ಶಬ್ದ 'ವದ ವ್ಯಕ್ತಾಯಾಂ ವಾಚಿ' ಎಂಬ ಧಾತುನಿಷ್ಪನ್ನವಾಗಿದ್ದು ವಾದ್ಯಗಳು ವ್ಯಕ್ತವಾಗಿ ನುಡಿಯುತ್ತವೆ ಪರಮಾತ್ಮನ ಗುಣವನ್ನು. ವೀಣೆ ಮುಂತಾದ ತತವಾದ್ಯಗಳೂ ಸಪ್ತಸ್ವರಗಳಿಂದ ಭಗವಂತನನ್ನೆ ಕೊಂಡಾಡುತ್ತವೆ ಎಂದು ಬೇರೆ ಹೇಳಬೇಕಾಗಿಲ್ಲ.

ಲಕ್ಷ್ಮೀಶೋಭನ ಪದದ ಈ ನುಡಿಯಲ್ಲಿ ಸಂಗೀತವಾದ್ಯಗಳನ್ನು ಎತ್ತಿ ಹೇಳದೆ ರಣವಾದ್ಯಗಳನ್ನೆ ಹೇಳಿರುವುದು ತಪ್ಪೇನಲ್ಲ. ವಿವಾಹ ಪ್ರಾರಂಭ ಸೂಚಕವಿದು. ಪೂಜೆಯು ಪ್ರಾರಂಭದಲ್ಲಿ,

ಆಗಮಾರ್ಥಂತು ದೇವಾನಾಂ ಗಮನಾರ್ಥಂ ತು ರಕ್ಷಸಾಂ ।

'ದೇವತೆಗಳು ಆಗಮಿಸಲಿ, ರಾಕ್ಷಸರು ನಿರ್ಗಮಿಸಲಿ' ಎಂಬ ಉದ್ದೇಶದಿಂದ ಘಂಟಾವಾದನ ಮಾಡುವಂತೆ ಇದು. ಇನ್ನುಮುಂದೆ ವಿವಾಹದಲ್ಲಿ ನೃತ್ಯಗೀತ ವಾದ್ಯಗಳೆಲ್ಲವೂ ನಡೆಯಲಿವೆ

– ೭೨ –

**ಅರ್ಘ್ಯ ಪಾದ್ಯಾಚಮನ ಮೊದಲಾದ ಷೋಡಶ–**
**ನರ್ಘ್ಯ ಪೂಜೆಯಿತ್ತನಳಿಯಗೆ ।**
**ಒಗ್ಗಿದ ಮನದಿಂದ ಧಾರೆಯೆರೆದನೆ ಸಿಂಧು**
**ಸದ್ಗತಿಯಿತ್ತು ಸಲಹೆಂದ ॥**

ಸಮುದ್ರರಾಜನು ಅಳಿಯನಾದ ಶ್ರೀಹರಿಗೆ ಮಧುಪರ್ಕದ ಅಂಗವಾಗಿ ಅರ್ಘ್ಯ ಪಾದ್ಯ ಆಚಮನ ಮುಂತಾದ ಷೋಡಶ ಉಪಚಾರಗಳನ್ನಿತ್ತ. ಬಳಿಕ ತುಂಬು ಹೃದಯದಿಂದ ಕನ್ಯೆ ಮಹಾಲಕ್ಷ್ಮಿಯನ್ನು ಧಾರೆಯೆರೆದು ಕೊಟ್ಟ. ಸದ್ಗತಿಯಿತ್ತು ಸಲಹು ಎಂದು ಬೇಡಿದ.

ಸಮುದ್ರರಾಜ ಕನ್ಯಾದಾನ ಮಾಡಿದ. ಇಲ್ಲಿ ಒಂದು ಪ್ರಶ್ನೆ ಬರುತ್ತದೆ. ಕನ್ಯೆ ದಾನ ಮಾಡುವ ವಸ್ತುವೆ? ಅವಳು ಒಬ್ಬ ವ್ಯಕ್ತಿಯಲ್ಲವೆ? ವಸ್ತುಗಳನ್ನು ದನಕರುಗಳನ್ನು ದಾನ ಮಾಡಬಹುದು, ಮಾರಾಟ ಮಾಡಬಹುದು. ವ್ಯಕ್ತಿಗಳನ್ನೂ ಹಾಗೆ ಮಾಡಬಹುದೆ ?

ಆದರೆ ಈ ಪ್ರಶ್ನೆ ಪ್ರಾಚೀನರನ್ನು ಎಂದೂ ಕಾಡಿದಂತಿಲ್ಲ. ವಸ್ತುಗಳ ಮೇಲೆ ಹೇಗೋ ಹಾಗೆ ಆಶ್ರಯದಲ್ಲಿರುವ ವ್ಯಕ್ತಿಗಳ ಮೇಲೂ ಸ್ವಾಮ್ಯ ಪ್ರಶ್ನಾತೀತವಾಗಿದ್ದು ದಾನ ಮಾರಾಟ ಪರಿತ್ಯಾಗ ಯಾವುದನ್ನೂ ಮಾಡಬಹುದಿತ್ತು. ಅಂದು ರಾಜಸಿಂಹಾಸನಕ್ಕೆ ಅರ್ಹನಾಗಿದ್ದ ರಾಮನನ್ನು ದಶರಥ ವನವಾಸಕ್ಕೆ ಅಟ್ಟಿದ! ಅಸಮಾಧಾನಗೊಂಡಿದ್ದ ಭರತನಿಗೆ ರಾಮನೆ ಹೇಳಿದ ಮಾತಿದು–

ಕಾಮಕಾರೋ ಮಹಾಪ್ರಾಜ್ಞ ಗುರೂಣಾಂ ಸರ್ವದಾನಘ ।
ಉಪಪನ್ನೇಷು ದಾರೇಷು ಪುತ್ರೇಷು ಚ ವಿಧೀಯತೇ ॥

'ರಾಜರು ಗುರುಗಳು ತಂದೆತಾಯಿಗಳು ಹಿರಿಯರಾದ ಬಂಧುಗಳು ಮುಂತಾದವರಿಗೆ ದಾಸದಾಸಿಯರು ಶಿಷ್ಯರು ಮಕ್ಕಳು ಹೆಂಡಿರು ಮುಂತಾದವರ ವಿಷಯದಲ್ಲಿ ತಮ್ಮ ಮನಸ್ಸಿಗೆ ಸರಿದೋರಿದಂತೆ ವರ್ತಿಸುವ ಅಧಿಕಾರ ಸರ್ವದಾ ಉಂಟು'

ಆದ್ದರಿಂದ ವಸಿಷ್ಠಸ್ಮೃತಿ ಹೀಗೆ ಹೇಳುತ್ತದೆ–

'ತಸ್ಯ ಪ್ರದಾನ ವಿಕ್ರಯ ಪರಿತ್ಯಾಗೇಷು ಮಾತಾಪಿತರೌ ಪ್ರಭವತಃ।'

'ತಮ್ಮ ಪುತ್ರರನ್ನು ಪರರಿಗೆ ದಾನ ಮಾಡಲು ಮಾರಾಟ ಮಾಡಲು ಇಲ್ಲವೆ ಪರಿತ್ಯಾಗ ಮಾಡಲೂ ಕೂಡ ತಂದೆತಾಯಿಗಳಿಗೆ ಅಧಿಕಾರ ಉಂಟು'.

ಮನುಸ್ಮೃತಿಯ ಪ್ರಕಾರ ತಂದೆ ತಾಯಿಗಳಿಂದ ಪರಿತ್ಯಕ್ತನಾದ ಮಗ ತನ್ನನ್ನು ತಾನೆ ಪರರಿಗೆ ದಾನ ಮಾಡಬಹುದು. ಅವನು ಸ್ವಯಂದತ್ತ ಪುತ್ರನೆನಿಸುತ್ತಾನೆ. ದಾನಮಾಡದಿದ್ದರೂ ಹಾಗೇ ಮಗನೆಂದು ಸ್ವೀಕರಿಸಿದರೆ ಅಪವಿದ್ಧ ಪುತ್ರನೆನಿಸುತ್ತಾನೆ ತಂದೆ ತಾಯಿಗಳೆ ಮಗನನ್ನು ಪರರಿಗೆ ಧಾರೆ ಎರೆದು ದಾನ ಮಾಡಿದರೆ ದತ್ತಪುತ್ರನೆನಿಸುತ್ತಾನೆ. ಮಾರಿದರೆ ಕ್ರೀತ ಪುತ್ರನೆನಿಸುತ್ತಾನೆ

ಈ ದಾನ ಮಾರಾಟ ಪರಿತ್ಯಾಗಗಳಿಗೆ ರಾಮಾಯಣ ಮಹಾಭಾರತ ಪುರಾಣಗಳಲ್ಲಿ ಹೇರಳ ಉದಾಹರಣೆಗಳಿವೆ ಭರತಚಕ್ರವರ್ತಿಗೆ ಮರುದ್ದೇವತೆಗಳು ಭರದ್ವಾಜನನ್ನು ದಾನ ಮಾಡಿದರು. ಆ ಭರದ್ವಾಜನೆ ಮುಂದೆ ಭುಮನ್ಯು ಎಂಬ ಹೆಸರಿನಿಂದ ಭರತವಂಶವನ್ನು ಬೆಳಗಿದ ಋಚೀಕ ಮುನಿ ತನ್ನ ಮಗನಾದ ಶುನಃಶೇಪನನ್ನು ಯಜ್ಞಪಶುವಾಗಿ ಹರಿಶ್ಚಂದ್ರನಿಗೆ ಮಾರಿದ. ಸಗರ ಚಕ್ರವರ್ತಿ ತನ್ನ ಮಗನಾದ ಅಸಮಂಜಸನನ್ನು ಪರಿತ್ಯಾಗ ಮಾಡಿದ ಹರಿಶ್ಚಂದ್ರ ಹೆಂಡತಿ ಮಕ್ಕಳನ್ನು ಮಾರಿ ತನ್ನನ್ನೂ ಮಾರಿಕೊಂಡ. ಆದ್ದರಿಂದ ಪುರುಷಪ್ರಧಾನವಾದ ಹಿಂದಿನ ಸಮಾಜ ಹೆಣ್ಣನ್ನು ಭೋಗವಸ್ತುವೆಂದು ಬಗೆದು ದಾನ ಮಾಡುತ್ತ ಸ್ತ್ರೀ ಜಾತಿಗೆ ಅಪಮಾನ ಮಾಡಿತು ಎನ್ನುವುದು ಉಚಿತವಲ್ಲ. ಪುತ್ರನ ಮಾರಾಟಕ್ಕೆ ಪೂರ್ಣಅನುಮತಿ ನೀಡಿರುವ ಶಾಸ್ತ್ರ ಕನ್ಯೆಯ ಮಾರಾಟವನ್ನು ಮಾತ್ರ ಬಲವಾಗಿ ಖಂಡಿಸಿದೆ–

ನಾನುಶುಶ್ರುಮ ಜಾತ್ವೇತತ್ ಪೂರ್ವೇಷ್ವಪಿ ಚ ಜನ್ಮಸು ।
ಶುಲ್ಕ ಸಂಜ್ಞೇನ ಮೂಲ್ಯೇನ ಛನ್ನಂ ದುಹಿತೃವಿಕ್ರಯಂ ॥

'ಕನ್ಯಾಶುಲ್ಕ ಪಡೆದು ಕನ್ಯೆಯನ್ನು ಮದುವೆ ಮಾಡಿಕೊಡುವುದು ಪ್ರಾಚೀನರಲ್ಲಿ ಎಂದೂ ನಾವು ಕೇಳಿಲ್ಲ ಅದು ಒಂದು ರೀತಿಯಿಂದ ಕನ್ಯೆಯ ಮಾರಾಟವೆ ಆಗುತ್ತದೆ'.

ಕನ್ಯಾದಾನವನ್ನು ಬಹಳವಾಗಿ ಪ್ರೋತ್ಸಾಹಿಸಿದರೂ ಅದರಲ್ಲಿ ಅನೇಕ ಉತ್ತಮ ನಿಯಮಗಳನ್ನು ವಿಧಿಸಿ ಹೆಣ್ಣಿನ ಹಿತ ಸಂರಕ್ಷಣೆಯಾಗುವಂತೆ ಪ್ರಾಚೀನರು ಎಚ್ಚರವಹಿಸಿದ್ದಾರೆ–

ಕನ್ಯೆ ಅಪ್ರಾಪ್ತ ವಯಸ್ಕಳಾಗಿರುವಾಗ ತಂದೆ ತಾಯಿಗಳು ಯೋಗ್ಯನಾದ ವರನನ್ನೇ ಹುಡುಕಿ ಅವನಿಗೆ ದಾನ ಮಾಡಿಕೊಡಬೇಕು. ಜೊತೆಗೆ, ಅಗ್ನಿಸಾಕ್ಷಿಯಾಗಿ 'ಧರ್ಮೇ ಚ ಅರ್ಥೇ ಚ ಕಾಮೇ ಚ ನಾತಿಚರಾಮಿ' ಎಂದು ವರನಿಂದ ಪ್ರತಿಜ್ಞೆ ಮಾಡಿಸಬೇಕು. 'ದಂಪತ್ಯೋಃ ಸಹಾಧಿಕಾರಃ' ಎಂಬಂತೆ ಎಲ್ಲ ಧರ್ಮಕಾರ್ಯಗಳಲ್ಲಿಯೂ ಪತಿ ತನ್ನೊಂದಿಗೆ ಸಮಾನ ಅಧಿಕಾರ ಸತಿಗೆ ನೀಡಬೇಕು. ಮನೆಯಲ್ಲಿ ಅವಳನ್ನು ಎಲ್ಲರೂ ಪ್ರೀತ್ಯಾದರಗಳಿಂದ ನೋಡಿಕೊಳ್ಳಬೇಕು. ಮನು ಹೇಳುತ್ತಾನೆ–

ಪಿತೃಭಿರ್ಭ್ರಾತೃಭಿಶ್ಚೈತಾಃ ಪತಿಭಿರ್ದೇವರೈಸ್ತಥಾ ।
ಪೂಜ್ಯಾ ಭೂಷಯಿತವ್ಯಾಶ್ಚ ಬಹುಕಲ್ಯಾಣಮೀಪ್ಸುಭಿಃ ॥

'ಗೃಹದೀಪ್ತಿ' ಮನೆ ಬೆಳಕು ಎನಿಸಿರುವ ಹೆಣ್ಣು ಮನೆಯಲ್ಲಿ ಕಣ್ಣೀರು ಹಾಕಿದರೆ ಮನೆ ಬೇಗನೆ ಸರ್ವನಾಶ ಹೊಂದುತ್ತದೆ ಎಂದು ಎಚ್ಚರಿಸುತ್ತಾನೆ ಮನು–

ಶೋಚಂತಿ ಜಾಮಯೋ ಯತ್ರ ವಿನಶ್ಯತ್ಯಾಶು ತತ್ ಕುಲಂ ।
ಜಾಮಯೋ ಯಾನಿ ಗೇಹಾನಿ ಶಪಂತ್ಯಪ್ರತಿಪೂಜಿತಾಃ ।
ತಾನಿ ಕೃತ್ಯಾಹತಾನೀವ ವಿನಶ್ಯಂತಿ ಸಮಂತತಃ ॥

ಕನ್ಯೆಗೆ ಪ್ರಾಯ ಬರುವವರೆಗೂ ಯೋಗ್ಯವರ ಸಿಗದೆ ಇದ್ದರೆ ಮುಂದೆ ತನಗೆ ಬೇಕಾದ ವರನನ್ನು ಆರಿಸಿಕೊಳ್ಳುವ ಅಧಿಕಾರ ಅವಳಿಗೇ ಬರುತ್ತದೆ. ಅವಳಿಗೂ ಸರಿಯಾದ ವರನು ಸಿಗದಿದ್ದಲ್ಲಿ ಮರಣ ಪರ್ಯಂತವೂ ಅವಳು ತಂದೆಯ ಮನೆಯಲ್ಲಿಯೆ ಇರಬೇಕು. ಹೇಗಾದರೂ ಮದುವೆಯಾಗಬೇಕೆಂದು ಅಯೋಗ್ಯನಿಗೆ ಮದುವೆ ಮಾಡಿ ಕೊಡಕೂಡದು ಎನ್ನುತ್ತಾನೆ ಮನು–

ಕಾಮಮಾಮರಣಾತ್ ತಿಷ್ಠೇತ್ ಗೃಹೇ ಕನ್ಯರ್ತುಮತ್ಯಪಿ ।
ನ ಚೈವೈನಾಂ ಪ್ರಯಚ್ಛೇತ್ತು ಗುಣಹೀನಾಯ ಕರ್ಹಿಚಿತ್ ॥

ಆದ್ದರಿಂದ ಮಹಾಭಾರತದಲ್ಲಿ ಕುಣಿಗರ್ಗನ ಮಗಳು, ತಂದೆ ಕನ್ಯಾ ದಾನ ಮಾಡ ಹೊರಟರೂ ಯೋಗ್ಯ ವರರು ಸಿಗಲಿಲ್ಲವೆಂದು ಕನ್ಯೆ ತಾನೆ ನಿರಾಕರಿಸಿ ಮುದಿತನವನ್ನಪ್ಪಿ ವೃದ್ಧಕನ್ಯೆ ಎನಿಸಿದಳು.

ಪ್ರಾಯ ಪ್ರಬುದ್ಧಳಾದ ಕನ್ಯೆ ಬಲಾತ್ಕಾರಕ್ಕೊಳಗಾಗಿ ಕೆಟ್ಟರೂ ಶಾಸ್ತ್ರದೃಷ್ಟಿಯಲ್ಲಿ ಅವಳು ಕೆಟ್ಟೇ ಇಲ್ಲ. ಅವಳು ಬಯಸಿದ ಇನ್ನೊಬ್ಬನಿಗೆ ವಿಧಿವತ್ತಾಗಿ ಅವಳನ್ನು ದಾನ ಮಾಡಬೇಕು ಎನ್ನುತ್ತದೆ ವಸಿಷ್ಠಸ್ಮೃತಿ–

ಬಲಾಚ್ಚೇತ್ ಪ್ರಹೃತಾ ಕನ್ಯಾ ಮಂತ್ರೈರ್ಯದಿ ನ ಸಂಸ್ಕೃತಾ ।
ಅನ್ಯಸ್ಮೈ ವಿಧಿವದ್ದೇಯಾ ಯಥಾ ಕನ್ಯಾ ತಥೈವ ಸಾ ॥

ಹೆಣ್ಣು ಗಂಡುಗಳೀರ್ವರೂ ಪರಸ್ಪರ ಮೆಚ್ಚಿ ರಹಸ್ಯವಾಗಿ ಕೂಡಿದರೂ ಅದು ಅತಿಕ್ರಮವಾಗುವುದಿಲ್ಲ, ಆದರಿಂದ ಇಬ್ಬರಿಗೂ ಪಾಪವಿಲ್ಲ. ಆದರೆ ಗಂಡು ತಾನೆ ಆ ಹೆಣ್ಣನ್ನು ಅಲಂಕರಿಸಿ ವಿವಾಹ ಮಾಡಿಕೊಳ್ಳಬೇಕು. ನಾರದಸ್ಮೃತಿ ಹೇಳುತ್ತದೆ–

ಸಕಾಮಾಯಾಂ ತು ಕನ್ಯಾಯಾಂ ಸಂಗಮೇ ನಾಸ್ತ್ಯತಿಕ್ರಮಃ ।
ಕಿಂ ತ್ವಲಂಕೃತ್ಯ ಸತ್ಕೃತ್ಯ ಸ ಏವೈನಾಂ ಸಮುದ್ವಹೇತ್ ॥

ಮನುವೂ ಹೇಳುತ್ತಾನೆ–

ಅದೀಯಮಾನಾ ಭರ್ತಾರಮಧಿಗಚ್ಛೇದ್ ಯದಿ ಸ್ವಯಂ ।
ನೈನಃ ಕಿಂಚಿದವಾಪ್ನೋತಿ ನ ಚ ಯಂ ಸಾಧಿಗಚ್ಛತಿ ॥

ಆದರೆ ಇಂಥ 'ಸ್ವಯಂವರ'ಕನ್ಯೆ ತಂದೆತಾಯಿಗಳಿಂದ ಸೋದರರಿಂದ ಒಡವೆಗಳನ್ನೇನೂ ಸ್ವೀಕರಿಸಕೂಡದು, ಮಾತ್ರವಲ್ಲ, ಅವರು ಮೊದಲಿಗೆ ಕೊಟ್ಟಿರಬಹುದಾದ ಒಡವೆ ಮುಂತಾದುವನ್ನೂ ಅವರಿಗೇ ಹಿಂತಿರುಗಿಸಬೇಕು. ಇಲ್ಲದಿದ್ದರೆ ಅದು ಕಳವಿಗೆ ಸಮಾನವಾದ ಅಪರಾಧವಾಗುತ್ತದೆ. ಮನು ಹೇಳುತ್ತಾನೆ–

ಅಲಂಕಾರಂ ನಾದದೀತ ಪಿತ್ರ್ಯಂ ಕನ್ಯಾ ಸ್ವಯಂವರಾ ।
ಮಾತೃಕಂ ಭ್ರಾತೃದತ್ತಂ ವಾ ಸ್ತೇನಾ ಸ್ಯಾದ್ ಯದಿ ತಂ ಹರೇತ್ ॥

ಇದರಿಂದ ಪ್ರೌಢವಿವಾಹವೂ ಶಾಸ್ತ್ರಸಮ್ಮತವೆ ಆಗಿದ್ದು ಅದರಲ್ಲಿ ವರದಕ್ಷಿಣೆ ಮಾತ್ರ ಅತ್ಯಂತ ನಿಷಿದ್ಧವೆನ್ನುವುದು ಸ್ಪಷ್ಟ.

ವಧು ವರರು ಪರಸ್ಪರ ಮೆಚ್ಚಿಕೊಂಡರೆ ಕನ್ಯಾವರರಲ್ಲಿರುವ ದೋಷಗಳು ದೋಷವಾಗುವುದಿಲ್ಲ, ವಿವಾಹಕ್ಕೆ ಅಡ್ಡಿಯಾಗುವುದಿಲ್ಲ ನಾರದಸ್ಮೃತಿ ಹೇಳುತ್ತದೆ–

ದೋಷೇಽಪ್ಯತ್ರ ನ ದೋಷಃ ಸ್ಯಾದನ್ಯೋನ್ಯಂ ಭಜ್ಯತೇ ದ್ವಯೋಃ ।

ವರನು ಏನೂ ದೋಷವಿಲ್ಲದ ಕನ್ಯೆಯನ್ನು ನೋಡಿ ಒಮ್ಮೆ ಒಪ್ಪಿ ನಿಶ್ಚಿತಾರ್ಥ ಮಾಡಿಕೊಂಡನೆಂದರೆ ಮುಂದೆ ವರದಕ್ಷಿಣೆ ಮುಂತಾದ ಯಾವುದೇ ಕಾರಣದಿಂದ ಕನ್ಯೆಯನ್ನು ನಿರಾಕರಿಸುವಂತಿಲ್ಲ. ನಿರಾಕರಿಸಿದರೆ ದೊಡ್ಡ ಮೊತ್ತದ ದಂಡ ಶುಲ್ಕ ತೆತ್ತು ಆ ಕನ್ಯೆಯನ್ನೆ ತನಗೆ ಇಷ್ಟವಿಲ್ಲದಿದ್ದರೂ ವಿವಾಹವಾಗಬೇಕು ಎನ್ನುತ್ತದೆ ನಾರದಸ್ಮೃತಿ–

ಪ್ರತಿಗೃಹ್ಯ ತು ಯಃ ಕನ್ಯಾಂ ಅದುಷ್ಟಾಮುತ್ಸೃಜೇನ್ನರಃ ।
ವಿನೇಯಃ ಸೋಽಪ್ಯಕಾಮೋಽಪಿ ಕನ್ಯಾಂ ತಾಮೇವ ಚೋದ್ವಹೇತ್ ॥

ವಿವಾಹಕ್ಕೆ ಮೊದಲೇ ಕನ್ಯೆ ಗರ್ಭಿಣಿಯಾದರೂ ಅವಳಿಗೆ ವಿವಾಹಸಂಸ್ಕಾರವಿದೆ ಎನ್ನುತ್ತಾನೆ ಮನು–

ಯಾ ಗರ್ಭಿಣೀ ಸಂಸ್ಕ್ರಿಯತೇ ಜ್ಞಾತ್ವಾಽಜ್ಞಾತ್ವಾಽಪಿ ವಾ ಸತೀ ।

ಹೀಗೆ ವಿವಾಹವಾದರೆ ಆ ಗರ್ಭದಿಂದ ಜನಿಸಿದ ಶಿಶು ಪತಿಗೆ ಸಹೋಢ ಪುತ್ರನೆನಿಸುತ್ತಾನೆ. ಕನ್ಯೆ ತಂದೆಯ ಮನೆಯಲ್ಲಿರುವಾಗಲೇ ಒಂದು ಮಗುವನ್ನು ಹೆತ್ತಿದ್ದರೂ ಅನಂತರ ವಿವಾಹಕ್ಕೆ ಅವಕಾಶ ಉಂಟು. ಆಗ ಮೊದಲಿಗೆ ಹುಟ್ಟಿದ ಮಗು ಪತಿಗೆ ಕಾನೀನ ಪುತ್ರನೆನಿಸುತ್ತಾನೆ ಮನು ಹೇಳುತ್ತಾನೆ–

ಪಿತೃವೇಶ್ಮನಿ ಕನ್ಯಾ ತು ಯಂ ಪುತ್ರಂ ಜನಯೇದ್ ರಹಃ ।
ತಂ ಕಾನೀನಂ ವದೇನ್ನಾಮ್ನಾ ವೋಢುಃ ಕನ್ಯಾಸಮುದ್ಭವಂ ॥

ಅಂತೂ ಹೆಣ್ಣಿಗೆ ಯಾವ ವಯಸ್ಸಿನಲ್ಲಾದರೂ ಸರಿಯೆ ವಿವಾಹ ಸಂಸ್ಕಾರವಾಗಲೇ ಬೇಕು ಮಹಾಭಾರತದ ವೃದ್ಧಕನ್ಯೆ ಸಾಯುವುದಕ್ಕೆ ಮುನ್ನ ಮದುವೆ ಮಾಡಿಕೊಂಡೇ ಸತ್ತಳು.

ಒಮ್ಮೆ ವಿವಾಹವಾದ ಬಳಿಕ ತಿರುಗಿ ವಿವಾಹ ಮಾತ್ರ ಶಾಸ್ತ್ರದಲ್ಲಿ ಬಹಳ ನಿಷಿದ್ಧ ವಿವಾಹವಾಗಿರದಿದ್ದಲ್ಲಿ ಗರ್ಭಿಣಿಯಾಗಿರಲಿ ಮಗುವಿನ ತಾಯಿಯೆ ಆಗಿರಲಿ ಅವಳು ಬಯಸಿದ ವರನೊಂದಿಗೆ ವಿವಾಹವಾಗಲೇ ಬೇಕು. ಹೀಗೆ ಪ್ರಬುದ್ಧಳಾದ ಹೆಣ್ಣಿಗೆ ಪೂರ್ಣ ಸ್ವಾತಂತ್ರ್ಯ ನೀಡಲಾಗಿದೆ.

ಪ್ರಾಯಕ್ಕೆ ಬರುವ ಮೊದಲಿಗೇ ಕನ್ಯೆಯನ್ನು ದಾನ ಮಾಡಿದರೆ ಅವಳು ಗಂಡನೊಡನೆ ಅನ್ಯೋನ್ಯವಾಗಿ ಬಾಳಲು ಕಲಿತುಕೊಳ್ಳುವಳು ಇಬ್ಬರೂ ಪರಸ್ಪರರ ಸ್ವಭಾವ ಅರಿತುಕೊಳ್ಳುವರು. ಆದರೆ ಪ್ರಾಯಕ್ಕೆ ಬಂದ ವಧೂವರರು ತಮ್ಮದೆ ಆದ ಆಸೆ ಆಕಾಂಕ್ಷೆಗಳ ನೂರಾರು ಕನಸುಗಳನ್ನು ಕಂಡಿದ್ದು ಅವರು ಪರಸ್ಪರ ಒಂದಾಗುವುದು ಅಷ್ಟು ಸುಲಭವಾಗಿರುವುದಿಲ್ಲ ಎಂಬ ಅಭಿಪ್ರಾಯದಿಂದ ಪ್ರಾಚೀನರು ಬಾಲ್ಯ ವಿವಾಹವನ್ನು ಪ್ರೋತ್ಸಾಹಿಸಿರಬೇಕು. ಆದ್ದರಿಂದ ಒಂದು ಕನ್ಯಾದಾನ ಹತ್ತು ಅಶ್ವಮೇಧ ಯಾಗಗಳಿಗೆ ಸಮಾನವೆಂದಿದ್ದಾರೆ ಅವರು.

ಸಮುದ್ರರಾಜ ಮಹಾ ಅದೃಷ್ಟಶಾಲಿ. ಬೇರೆ ಎಲ್ಲರೂ ಸಾಮಾನ್ಯ ವಧೂ ವರರಲ್ಲಿ ಲಕ್ಷ್ಮೀನಾರಾಯಣರನ್ನು ಚಿಂತಿಸಿ ಕನ್ಯಾದಾನ ಮಾಡಿದರೆ ಈತ ಸಾಕ್ಷಾತ್

ಮಹಾಲಕ್ಷ್ಮಿಯನ್ನು ಮಹಾವಿಷ್ಣುವಿಗೆ ದಾನ ಮಾಡುತ್ತಿದ್ದಾನೆ. ಆದ್ದರಿಂದ ಒಗ್ಗಿದ ಮನದಿಂದ, ತುಂಬು ಹೃದಯದಿಂದ ಧಾರೆಯೆರೆಯುತ್ತಿದ್ದಾನೆ.

ಆದಕ್ಕೆ, ಮೊದಲು ಅಳಿಯನಿಗೆ ಮಧುಪರ್ಕ ನೀಡುತ್ತಿದ್ದಾನೆ. ಮಧುಪರ್ಕಕ್ಕೆ ಅಂಗವಾಗಿ ಮೊದಲಿಗೆ ಅಳಿಯನಿಗೆ ಆಸನವಿತ್ತು ಪುರುಷಸೂಕ್ತದಿಂದ ಅವನ ಕಾಲು ತೊಳೆದು, ಅರ್ಘ್ಯ ನೀಡುತ್ತಿದ್ದಾನೆ. ಬಳಿಕ ಆಚಮಾನ ಮಧುಪರ್ಕ ಪುನರಾಚಮನಗಳು. 'ಅಮೃತೋಪಸ್ತರಣಮಸಿ' ಎಂದು ಆಚಮನ ಮಾಡಿ ಮಂತ್ರಪೂರ್ವಕವಾಗಿ ಜೇನು ಮೊಸರು ತುಪ್ಪಗಳ ಮಿಶ್ರಣರೂಪವಾದ ಮಧುಪರ್ಕವನ್ನು ಪ್ರಾಶನ ಮಾಡಿ 'ಅಮೃತಾಪಿಧಾನಮಸಿ' ಎಂದು ಪುನರಾಚಮನ ಮಾಡಿ ಗವ್ಯೋತ್ಸರ್ಜನ ಮಾಡುತ್ತಾನೆ ಅಳಿಯ. ಅನಂತರ ಅವನಿಗೆ ಮಾವ ವಸ್ತ್ರಾಭರಣ ಉಪವೀತ ಗಂಧಮಾಲ್ಯಾದಿಗಳನ್ನಿತ್ತು ಆರತಿ ಎತ್ತುತ್ತಾನೆ.

ಹೀಗೆ ವೈಭವದ ಷೋಡಶೋಪಚಾರದ ವರಪೂಜೆಯಾದ ಬಳಿಕ ವರನ ಕೈಗಳಲ್ಲಿ ಹಿರಣ್ಯವಿಟ್ಟು ವಧುವಿನ ಕೈಗಳನ್ನು ಇರಿಸಿ ಸಾಕ್ಷತ ಕಲಶೋದಕ ಧಾರೆ ಎರೆಯುತ್ತಾನೆ.

'ಶ್ರೀಹರಿ, ನಿನ್ನ ಅನಾದಿ ರಮಣಿಯಾದ ಕನ್ಯೆಯನ್ನು ನಿನಗೆ ಕೊಡುತ್ತಿದ್ದೇನೆ. ಇದರಿಂದ ನನಗೆ ಪರಬ್ರಹ್ಮಲೋಕವಾದ ವೈಕುಂಠ ಲಭಿಸಲಿ'–

ದಾಸ್ಯಾಮಿ ವಿಷ್ಣವೇ ತುಭ್ಯಂ ಬ್ರಹ್ಮಲೋಕ ಜಿಗೀಷಯಾ ।

ಎಂದು ಬೇಡುತ್ತಾನೆ, ಕನ್ಯೆಯನ್ನೂ 'ನೀನು ನನಗೆ ಎಲ್ಲೆಡೆ ಇದ್ದು ರಕ್ಷಣೆ ನೀಡು. ನಿನ್ನ ದಾನದಿಂದ ನಾನು ಮೋಕ್ಷಭಾಗಿಯಾಗುವೆನು'–

ಕನ್ಯೇ ಮಮಾಗ್ರತೋ ಭೂಯಾಃ ಕನ್ಯೇ ಮೇ ದೇವಿ ಪಾರ್ಶ್ವಯೋಃ ।
ಕನ್ಯೇ ಮೇ ಸರ್ವತೋ ಭೂಯಾಸ್ತ್ವದ್ದಾನಾನ್ಮೋಕ್ಷಮಾಪ್ನುಯಾಂ ॥

ಎಂದು ಬೇಡುತ್ತಾನೆ. ಧನ್ಯನಾಗುತ್ತಾನೆ. ತಾನು ಮಾತ್ರವಲ್ಲದೆ ತನ್ನ ಕುಲವೇ ಅಂದರೆ ಎಲ್ಲ ದೇವತೆಗಳೂ ಮೋಕ್ಷದಲ್ಲಿ ಅತಿಶಯಾನಂದ ಹೊಂದುವಂತೆ ಮಾಡಿದ್ದಾನೆ. ಅವನಿಗೆ ಬ್ರಹ್ಮನ ಆಜ್ಞೆಯೆ ಹಾಗಿತ್ತು–

ಕುರುಷ್ವ ಜನ್ಮಸಾಫಲ್ಯಂ ಪಾವಯಿತ್ವಾ ನಿಜಂ ಕುಲಂ ।
ಸಮುದ್ಧರ ಭವಾಂಭೋಧೇರ್ದತ್ವೇಮಾಂ ಪರಮಾತ್ಮನೇ ॥

—ಸ್ಕಂದಪುರಾಣ.

**ವೇದೋಕ್ತ ಮಂತ್ರ ಪೇಳಿ ವಸಿಷ್ಠ ನಾರದ ಮೊದ-**
**ಲಾದ ಮುನೀಂದ್ರರು ಮುದದಿಂದ ।**
**ವಧುವರರ ಮೇಲೆ ಶೋಭನದಕ್ಷತೆಯನು**
**ಮೋದವೀಯುತ್ತ ತಳಿದರು ॥**

ವೇದೋಕ್ತ ಮಂತ್ರಗಳನ್ನು ಹೇಳಿ ವಸಿಷ್ಠ ನಾರದ ಮೊದಲಾದ ಮುನೀಶ್ವರರು ಸಂತೋಷದಿಂದ ವಧುವರರ ಮೇಲೆ ಮಂಗಳಕರವಾದ ಅಕ್ಷತೆಕಾಳುಗಳನ್ನು ಆಶೀರ್ವಾದಪೂರ್ವಕವಾಗಿ ಎರಚಿದರು

ಕನ್ಯಾದಾನವಾದ ಬಳಿಕ ವರನು ಅಗ್ನಿಸಾಕ್ಷಿಯಾಗಿ ವಧುವನ್ನು ವಿವಾಹವಾಗುವುದಕ್ಕೆ ಮೊದಲು ವಧೂ ವರರು ಪರಸ್ಪರರನ್ನು ನಿರೀಕ್ಷಣೆ ಮಾಡಬೇಕೆಂದು ಗೃಹ್ಯ ಪರಿಶಿಷ್ಟದಲ್ಲಿ ಹೇಳಿದೆ. ಅದರಂತೆ ವರನು ಒಂದು ಅಕ್ಕಿರಾಶಿಯ ಮೇಲೆ ಪೂರ್ವಾಭಿಮುಖವಾಗಿಯೂ ವಧುವು ಅವನೆದುರಿಗೆ ಇನ್ನೊಂದು ಅಕ್ಕಿರಾಶಿಯ ಮೇಲೆ ಪಶ್ಚಿಮಾಭಿಮುಖವಾಗಿಯೂ ನಿಲ್ಲುತ್ತಾರೆ, ನಡುವೆ ಸ್ವಸ್ತಿಕ ಚಿಹ್ನೆಉಳ್ಳ ಅಂತಃಪಟವೆಂಬ ಪರದೆಯನ್ನು ಬ್ರಾಹ್ಮಣರು ಹಿಡಿದಿರುತ್ತಾರೆ. ಜ್ಯೋತಿಷಿಯು,

'ಸುಮುಹೂರ್ತಾ ಸಾವಧಾನಾಃ ! ಸುಲಗ್ನಾ ಸಾವಧಾನಾಃ !'

'ವಧೂವರರ ಪರಸ್ಪರ ನಿರೀಕ್ಷಣೆಗೆ ಇದೋ ಒಳ್ಳೆಯ ಮುಹೂರ್ತ ಲಗ್ನಗಳಿಂದಕೂಡಿದ ಗಳಿಗೆ ಬರುತ್ತಿದೆ, ಸಿದ್ಧರಾಗಿರಿ' ಎನ್ನುತ್ತಾನೆ. ಒಡನೆ ಕನ್ಯಾಪಿತನು ಆ ಜ್ಯೋತಿಷಿಯು ಬಳಿಯಲ್ಲಿರುವ ಗಳಿಗೆ ಬಟ್ಟಲಲ್ಲಿ ಗಣೇಶ ವರುಣರನ್ನು ಪೂಜಿಸಿ 'ಸುಮುಹೂರ್ತಾಯ ನಮಃ' ಎಂದು ನಮಿಸುತ್ತಾನೆ.

ಇಲ್ಲಿ ವರುಣನೆ ಕನ್ಯಾಪಿತನಾಗಿರುವುದರಿಂದ ಅವನು ಗಣೇಶಾಂತರ್ಯಾಮಿ ಭಗವದ್ರೂಪವನ್ನೂ ತನ್ನ ಅಂತರ್ಯಾಮಿ ಭಗವದ್ರೂಪವನ್ನೂ ಪೂಜಿಸುತ್ತಾನೆ ಎಂದು ಗ್ರಹಿಸಬೇಕು. ವಸ್ತುತಃ ಎಲ್ಲರೂ ಆಯಾ ದೇವತೆಗಳ ಅಂತರ್ಯಾಮಿಯಾದ ಭಗವಂತನನ್ನೆ ಪೂಜಿಸುವುದು ವಿಹಿತ.

ಬಳಿಕ ಕನ್ಯಾಪಿತನು ಜ್ಯೋತಿಷಿಯನ್ನು ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸಿ ಪಾರಿತೋಷಕಗಳನ್ನಿತ್ತು 'ಭವಾನ್ ಸುಮುಹೂರ್ತಂ ದದಾತು' 'ನೀನು ಸುಮುಹೂರ್ತವನ್ನು ತಿಳಿಸಿಕೊಡು' ಎಂದು ಪ್ರಾರ್ಥಿಸಿ ಅವನ ಕೈಯಿಂದ ಮಂತ್ರಾಕ್ಷತೆ ಪಡೆದು ಅದನ್ನು ವಧೂವರರಿಗೆ ಹಾಕಲು ಅಂತಃಪಟ ಹಿಡಿದ ಬ್ರಾಹ್ಮಣರ ಕೈಗೆ ಕೊಡುತ್ತಾನೆ. ಬ್ರಾಹ್ಮಣರು ಆ ಅಕ್ಷತೆಕಾಳನ್ನು ವಧೂವರರಿಗೆ ಹಾಕಿ

ಮಾಲೆ ತೊಡಿಸುತ್ತಾರೆ. ಸೂರ್ಯಾಸೂಕ್ತ ಮಂತ್ರಗಳನ್ನೂ ಮಂಗಳಾಷ್ಟಕವನ್ನೂ ಪಠಿಸುತ್ತಾರೆ. ಇದು ಮುಹೂರ್ತ ಸಮೀಪಿಸುವವರೆಗೆ ನಡೆಯುತ್ತದೆ. ಆಗ,

'ಸುಮುಹೂರ್ತೋಽಯಂ ಸುಲಗ್ನಮಿದಂ ।
ತದೇವಲಗ್ನಂ ಸುದಿನಂ ತದೇವ...
ಲಕ್ಷ್ಮೀಪತೇ ತೇಂಘ್ರಿಯುಗಂ ಸ್ಮರಾಮಿ ।'

'ಇದೀಗ ಸುಮುಹೂರ್ತ ಶುಭಲಗ್ನಕಾಲ ಲಕ್ಷ್ಮೀಪತಿಯೇ, ನಿನ್ನ ಪಾದಗಳನ್ನು ಸ್ಮರಿಸುತ್ತೇನೆ. ನಿನ್ನನ್ನು ಸ್ಮರಿಸುವ ಕಾಲವೆ ಸುಮುಹೂರ್ತ ಸುಲಗ್ನಕಾಲ' ಎಂದು ಜ್ಯೋತಿಷಿ ಘಂಟಾವಾದನ ಪೂರ್ವಕವಾಗಿ ಘೋಷಿಸುತ್ತಾನೆ ಮಂಗಳ ವಾದ್ಯಗಳು ಮೊಳಗುತ್ತವೆ, ಅಂತಃಪಟ ಸರಿಯುತ್ತದೆ. ವಧೂವರರು ಪರಸ್ಪರ ಜೀರಿಗೆ ಬೆಲ್ಲ ಅಥವಾ ಅಕ್ಷತೆಕಾಳುಗಳನ್ನೆರಚುತ್ತಾರೆ. ಪರಸ್ಪರ ಮಂತ್ರಪೂರ್ವಕ ನಿರೀಕ್ಷಣ ಮಾಡುತ್ತಾರೆ. ವರನು ದರ್ಭೆಯ ತುದಿಯಿಂದ ವಧುವಿನ ಹಣೆಯನ್ನು ಒರೆಸಿ ಅದನ್ನು ಎಸೆಯುತ್ತಾನೆ ಆಗ ಬ್ರಾಹ್ಮಣರು ಸೂರ್ಯಾಸೂಕ್ತದ ಕೆಲವು ಮಂತ್ರಗಳಿಂದ ವಧೂವರರನ್ನು ಆಶೀರ್ವದಿಸಿ ಅಕ್ಷತೆಕಾಳು ಹಾಕುತ್ತಾರೆ.

ಶೌನಕರ ಕಾರಿಕೆಯಲ್ಲಿ ಕನ್ಯಾದಾನಕ್ಕೆ ಮೊದಲೇ ಈ ನಿರೀಕ್ಷಣೆ ಮಾಡಬೇಕೆಂದಿದೆ. ಆದರೆ ಲಕ್ಷ್ಮೀಶೋಭನ ಪದದಲ್ಲಿ ಈ ಹಿಂದಿನ ನುಡಿಯಲ್ಲಿ ಕನ್ಯಾದಾನವನ್ನು ಹೇಳಿಯಾಗಿದೆ, ಆದ್ದರಿಂದ ಗೃಹ್ಯಪರಿಶಿಷ್ಟವಚನಾನುಸಾರ ಕನ್ಯಾದಾನದ ಅನಂತರದ ನೀರಿಕ್ಷಣಕಾಲದಲ್ಲಿ ಬ್ರಾಹ್ಮಣರ ಆಶೀರ್ವಾದವನ್ನು ಈ ನುಡಿ ಹೇಳುತ್ತಿದೆ ಎಂದಿಟ್ಟುಕೊಳ್ಳಬೇಕು ಈಗ ಹೆಚ್ಚಾಗಿ ಶೌನಕರ ಮತವನ್ನೇ ಅನುಸರಿಸುವುದು ಪದ್ಧತಿ. ಆದರೆ ಪ್ರಯೋಗ ಪಾರಿಜಾತಾದಿ ಗ್ರಂಥಗಳಲ್ಲಿ ಗೃಹ್ಯಪರಿಶಿಷ್ಟಕ್ಕೇ ಹೆಚ್ಚಿನ ಆದ್ಯತೆ ನೀಡಲಾಗಿದೆ.

ಶೌನಕರು ಹೇಳುವಂತೆ ನಿರೀಕ್ಷಣಾನಂತರ ಕನ್ಯಾದಾನವೆಂದಿಟ್ಟುಕೊಳ್ಳುವದಾದರೆ ಕನ್ಯಾದಾನವಾದ ಬಳಿಕ ಸ್ವರ್ಣಾಭಿಷೇಕ, ಅಕ್ಷತಾರೋಪಣ, ತಿಲಕಧಾರಣ, ಮಾಲಾರೋಪಣಗಳ ಅನಂತರದ ಬ್ರಾಹ್ಮಣಾಶೀರ್ವಾದವನ್ನು ಲಕ್ಷ್ಮೀಶೋಭನದ ಈ ನುಡಿ ಹೇಳುತ್ತದೆ ಎಂದಿಟ್ಟುಕೊಳ್ಳಬಹುದು. ಏಕೆಂದರೆ ಕನ್ಯಾದಾನವಾದೊಡನೆ ವಧೂವರರನ್ನು ಪೂರ್ವಾಭಿಮುಖವಾಗಿ ಕುಳ್ಳಿರಿಸಿ ಚಿನ್ನದ ಪವಿತ್ರ ಮುತ್ತುಗದೆಲೆ ದರ್ಭೆಗರಿಕೆ ಅತ್ತಿಕುಡಿಗಳಿಂದ ಸ್ವರ್ಣಕಲಶೋದಕ ಪ್ರೋಕ್ಷಣೆ ಮಾಡುತ್ತಾರೆ, ಇದು ಸ್ವರ್ಣಾಭಿಷೇಕ ಬಳಿಕ ಬೆಳ್ಳಿಯ ಪಾತ್ರೆಯಲ್ಲಿರುವ ಹಾಲು ತುಪ್ಪವನ್ನು ವರನು ಒಂದು ಹೂವಿನಿಂದ ವಧುವಿನ ಕೈಗೆ ಲೇಪಿಸಿ ಎರಡು ಮುಷ್ಟಿ ಅಕ್ಕಿಕಾಳುಗಳನ್ನಿರಿಸಿ ಹಾಲು ತುಪ್ಪದಿಂದ ಅಭಿಘಾರ ಮಾಡುತ್ತಾನೆ. ವರನ ಬೊಗಸೆಯಲ್ಲೂ ಹೀಗೆ

ಅಕ್ಕಿಕಾಳುಗಳನ್ನು ಬೇರೆ ಯಾರಾದರೂ ತುಂಬಿಸುತ್ತಾರೆ ಬಳಿಕ ಕನ್ಯಾಪಿತನು ಇಬ್ಬರ ಬೊಗಸೆಗಳಲ್ಲಿಯೂ ಚಿನ್ನದ ನಾಣ್ಯವಿರಿಸುತ್ತಾನೆ. ಕನ್ಯೆಯುಸ್ನೆತ್ತಿ ಹಿಡಿದು ಅವಳಿಂದ ವರನ ತಲೆಗೆ ಅಕ್ಕಿಕಾಳುಗಳನ್ನು ಹಾಕಿಸುತ್ತಾನೆ ವರನೂ ವಧುವಿನ ತಲೆಗೆ ಅಕ್ಕಿಕಾಳುಗಳನ್ನು ಹಾಕುತ್ತಾನೆ. ಹೀಗೆ ಮೂರುಬಾರಿ ಅಕ್ಷತಾರೋಪಣವಾದ ಬಳಿಕ ವರನು ತನ್ನ ತಲೆಯ ಮೇಲಿಂದ ಒಂದು ಹೂವನ್ನೆತ್ತಿ ಹಾಲು ತುಪ್ಪಗಳಲ್ಲಿ ಅದ್ದಿ ಅದರಿಂದ ಕನ್ನೆಯ ಹಣೆಯಲ್ಲಿ ತಿಲಕವಿಡುತ್ತಾನೆ ಕನ್ಯೆಯೂ ಹಾಗೆಯೇ ವರನ ಹಣೆಗೆ ತಿಲಕವಿಡುತ್ತಾಳೆ. ತನ್ನ ಕೊರಳಿನ ಹೂವಮಾಲೆಯನ್ನು ವರನ ಕೊರಳಲ್ಲಿಡುತ್ತಾಳೆ ವರನೂ ತನ್ನ ಕೊರಳಿನ ಹೂವಮಾಲೆಯನ್ನು ವಧುವಿನ ಕೊರಳಲ್ಲಿಡುತ್ತಾನೆ. ಆಗ ಬ್ರಾಹ್ಮಣರು ಸೂರ್ಯಾ ಸೂಕ್ತದ ಮಂತ್ರಗಳಿಂದ ಆಶೀರ್ವದಿಸಿ ಅಕ್ಷತೆಕಾಳುಗಳನ್ನೆರಚುತ್ತಾರೆ.

ಆ ಮಂತ್ರಗಳ ಭಾವ ಹೀಗಿದೆ-

'ಕನ್ಯೆಯೆ, ಮೊದಲಿಗೆ ಸೋಮನು ನಿನ್ನನ್ನು ಪಡೆದನು ಎರಡನೆಯವ ಗಂಧರ್ವ. ಮೂರನೆಯವನು ಅಗ್ನಿ. ಈಗ ನಾಲ್ಕನೆಯವನಾಗಿ ಈ ಮಾನವನೊಬ್ಬ ನಿನಗೆ ಪತಿಯೆನಿಸುತ್ತಿದ್ದಾನೆ.

ಮೊದಲಿಗೆ ಈ ನಿನ್ನನ್ನು ಸೋಮನು ಗಂಧರ್ವನಿಗೆ ಕೊಟ್ಟಿದ್ದನು. ಗಂಧರ್ವನು ಅಗ್ನಿಗೆ. ಅಗ್ನಿ ಈಗ ಈ ನಿನ್ನನ್ನೂ, ಜೊತೆಗೆ ಧನ ಪುತ್ರಾದಿ ಸಂಪತ್ತನ್ನೂ ನನಗೆ ಕೊಡುತ್ತಿದ್ದಾನೆ.

ವಧೂವರರೆ, ನೀವು ಈ ಲೋಕದಲ್ಲಿ ಒಂದಾಗಿ ಬಾಳಿರಿ ನಿಮಗೆ ವಿಯೋಗ ಉಂಟಾಗದಿರಲಿ. ಪೂರ್ಣಾಯುಷ್ಯ ಹೊಂದಿ ಮಕ್ಕಳು ಮೊಮ್ಮಕ್ಕಳೊಂದಿಗೆ ನಿಮ್ಮ ಮನೆಯಲ್ಲಿ ನಲಿಯುತ್ತಿರಿ.

ಪ್ರಜಾಪತಿಯು ನಮಗೆ ಪತಿ ಪತ್ನಿಗಳಿಗೆ ಸಂತಾನ ನೀಡಲಿ, ನಾವು ವೃದ್ಧಾಪ್ಯದವರೆಗೂ ಜೊತೆಯಾಗಿರುವಂತೆ ಅರ್ಯಮನು ಅನುಗ್ರಹಿಸಲಿ

ಕನ್ಯೆಯೆ, ನೀನು ಒಳ್ಳೆಯ ಆಚಾರಗಳನ್ನು ಎಂದೂ ವಿರೋಧಿಸದೆ ನನ್ನೊಂದಿಗೆ ಮನೆಯಲ್ಲಿ ಬಾಳು. ಮನೆ ಮಂದಿಗೂ, ಮನೆಯ ಸಾಕುಪ್ರಾಣಿಗಳಿಗೂ ಹಿತಕರಳೆನಿಸು ಎಂದೂ ನನ್ನೆಡೆಗೆ ಕ್ರೂರದೃಷ್ಟಿ ಹಾಕದಿರು. ನನಗೆ ಕೇಡು ಬಯಸದಿರು. ಒಳ್ಳೆಯ ಮನಸ್ಸು ಒಳ್ಳೆಯ ವರ್ಚಸ್ಸುಗಳಿಂದ ಕೂಡಿದ್ದು ಗಂಡು ಮಕ್ಕಳನ್ನು ಹಡೆದು ದೈವಭಕ್ತಿ ಹೊಂದಿ ನಮಗೆಲ್ಲ ಸುಖಕರಳಾಗು.

ಇಂದ್ರನೆ, ನೀನು ಆ ವಧುವನ್ನು ಸುಪುತ್ರವತಿ ಸುಮಂಗಲಿಯಾಗಿರುವಂತೆ ಅನುಗ್ರಹಿಸು ಅವಳಲ್ಲಿ ನನಗೆ ಹತ್ತುಮಂದಿ ಗಂಡು ಮಕ್ಕಳನ್ನು ಅನುಗ್ರಹಿಸು. ಪತಿಯಾದ ನಾನು ಅವಳಿಗೆ ಹನ್ನೊಂದನೆಯವನಾಗುವಂತೆ ಮಾಡು.

ಕನ್ಯೆಯೆ, ನೀನು ಮಾವ, ಅತ್ತೆ, ನಾದಿನಿ, ಭಾವ, ಮೈದುನ ಮುಂತಾದವರೆಲ್ಲರಿಗೂ ಇಷ್ಟಳಾಗಿರು. ವಿಶ್ವೇದೇವತೆಗಳು ನಮ್ಮ ಹೃದಯವನ್ನು ಸದಾಚಾರ ವಿಷಯದಲ್ಲಿ ಬೆಳಗಿಸಲಿ. ಜಲಾಭಿಮಾನಿಗಳೂ ವಾಯುವೂ ಧಾತನೂ ಅಭೀಷ್ಟದಾಯಕಳಾದ ಸರಸ್ವತಿಯೂ ನಮ್ಮಿಬ್ಬರ ಹೃದಯಗಳನ್ನು ಸದಾ ಒಂದುಗೂಡಿಸಲಿ.'

ಈ ಮಂತ್ರಗಳನ್ನು ದಿವ್ಯದೃಷ್ಟಿಯಿಂದ ಕಂಡುಕೊಂಡ ಋಷಿ ಸೂರ್ಯಾದೇವಿ. ಅವಳ ವಿವಾಹದ ಸಂದರ್ಭವೇ ಈ ಮಂತ್ರಗಳಲ್ಲಿ ವರ್ಣಿತವಾಗಿದೆ. ಬ್ರಾಹ್ಮಣಗ್ರಂಥಗಳ ಪ್ರಕಾರ ಈಕೆ ಸವಿತನ ಮಗಳು, ಸೋಮನ ಮಡದಿ. ಸವಿತೃ ಸೋಮರು ಸೂರ್ಯ ಚಂದ್ರರೆಂದಿಟ್ಟು ಕೊಂಡರೆ, ಸೂರ್ಯನ ಮಗಳು ಚಂದ್ರನ ಮಡದಿ ಎನ್ನುವುದು ಪುರಾಣಗಳಲ್ಲಿ ಕಂಡುಬರುವುದಿಲ್ಲ. ಶೌನಕರ ಬೃಹದ್ದೇವತೆಯಲ್ಲಿ ಸೂರ್ಯೆ ಸೂರ್ಯನ ಮಡದಿ ಎನ್ನಲಾಗಿದೆ–

'ವೃಷಾಕಪಾಯೀ ಸೂರ್ಯೋಷಾಃ ಸೂರ್ಯಸ್ಯೈವ ತು ಪತ್ನಯಃ'

ಬೃಹದ್ದೇವತೆಯಲ್ಲಿಯೇ ಇನ್ನೊಂದೆಡೆ ಸೂರ್ಯೆ ಎಂದರೆ ಸರಸ್ವತಿ ಎಂದುದೂ ಉಂಟು–

'ಸೂರ್ಯಾಮೇವ ಸತೀಮೇತಾಂ ಗೌರೀಂ ವಾಚಂ ಸರಸ್ವತೀಂ ।
ಪಶ್ಯಾಮೋ ವೈಶ್ವದೇವೇಷು' ॥

ಆದ್ದರಿಂದ ಸೋಮನ ಮಡದಿಯಾದ ಸೂರ್ಯೆ ಯಾರೆನ್ನುವುದು ಸಂದಿಗ್ಧವಾಗುತ್ತದೆ.

ಆದ್ದರಿಂದ ಎಲ್ಲ ವಿವಾಹಗಳಲ್ಲಿಯೂ ಲೋಕದಲ್ಲಿ ಬ್ರಾಹ್ಮಣರು ಈ ಸೂರ್ಯಾ ಸೂಕ್ತದಿಂದ ವಧೂವರರನ್ನು ಆಶೀರ್ವದಿಸುವ ಸಂಪ್ರದಾಯ–ವಿರುವುದರಿಂದ ಎಲ್ಲ ವಧೂವರರೊಳಗಿರುವ ಲಕ್ಷ್ಮೀನಾರಾಯಣರೆ ಈ ಸೂರ್ಯಾ ಸೋಮರು ಎನ್ನುವುದು ಉಚಿತ. ಅವರ ನರ ನಟನೆಯೆ ಈ ಮಂತ್ರಗಳಲ್ಲಿ ವರ್ಣಿತವಾಗಿದೆ. ಸೋಮ ಎಂದರೆ 'ಸೂತೇ ಅಮೃತಂ' ಅಮೃತ ನೀಡುವವ, ನಾರಾಯಣ, ಅಮೃತವೆಂದರೆ ಮೋಕ್ಷ. ಅದಕ್ಕೆ ಪೂರ್ವಭಾವಿಯಾಗಿ ದೇವಲೋಕದ ಅಮೃತವನ್ನೂ ತಂದುಕೊಟ್ಟವ ಅಜಿತರೂಪದಿಂದ ಕ್ಷೀರಸಮುದ್ರ ಮಥನ ಮಾಡಿಸಿದ, ಧನ್ವಂತರಿ ರೂಪದಿಂದ ಅಮೃತಕಲಶ ತಂದ, ನಾರಾಯಣೀ

ರೂಪದಿಂದ ಉಣಬಡಿಸಿದ ನಾರಾಯಣನೆ ಸೂರ್ಯಾ ಎಂದರೆ 'ಸೂರಿಭಿಃ ಪ್ರಾಪ್ಯಾ' ಸೂರಿಗಳಿಂದ ಜ್ಞಾನಿಗಳಿಂದ ಗಮ್ಯಳಾದ ಮಹಾಲಕ್ಷ್ಮಿ, ಪ್ರಕೃತದಲ್ಲಿ ವಸಿಷ್ಠ ನಾರದರಂಥ ಜ್ಞಾನಿಗಳು ಸೂರ್ಯಾಸೂಕ್ತದಿಂದ ಮಹಾಲಕ್ಷ್ಮಿಯನ್ನು ಆಶೀರ್ವಾದದ ಸೋಗಿನಿಂದ ಸ್ತುತಿಸಿ ಅವಳ ಅನುಗ್ರಹಕ್ಕೆ ಪಾತ್ರರಾಗುತ್ತಿದ್ದಾರೆ. ಸೂರ್ಯಾದೇವಿಯ ಜನಕನಾದ ಸವಿತೃ ಎಂದರೆ ಪ್ರಕೃತ ಲಕ್ಷ್ಮೀ ಸ್ವಯಂವರದಲ್ಲಿ ವರುಣ, ಸೀತಾ ಸ್ವಯಂವರದಲ್ಲಿ ಜನಕರಾಜ, ರುಕ್ಮಿಣೀ ಸ್ವಯಂವರದಲ್ಲಿ ಭೀಷ್ಮಕರಾಜ, ಇತ್ಯಾದಿ. ಹೀಗೆ ಎಲ್ಲರಿಗೂ ಅನ್ವಯಿಸುವಂತೆ 'ಕನ್ಯಾಪಿತೃ' ಎಂಬ ಅರ್ಥದಲ್ಲಿ 'ಸವಿತೃ' ಎಂಬ ಶಬ್ದವಿಟ್ಟುಕೊಳ್ಳಬೇಕು.

ಮಂತ್ರದಲ್ಲಿ ಕನ್ಯೆಯನ್ನು ಮೊದಲಿಗೆ ಸೋಮನು ಪಡೆದ, ಅನಂತರ ಗಂಧರ್ವ ಅಗ್ನಿಗಳು ಪಡೆದರು ಎನ್ನುವುದರ ಅಭಿಪ್ರಾಯ ಹೀಗಿದೆ–

ತಾಸಾಂ ಸೋಮೋಽದದತ್ ಶೌಚಂ ಗಂಧರ್ವಃ ಶಿಕ್ಷಿತಾಂ ಗಿರಂ ।
ಅಗ್ನಿಶ್ಚ ಸರ್ವಭಕ್ಷತ್ವಂ ತಸ್ಮಾನ್ನಿಷ್ಕಲ್ಮಷಾಃ ಸ್ತ್ರಿಯಃ ॥

ಕನ್ನೆಯರಿಗೆ ಮೊದಲು ಸೋಮ ಅಂದರೆ ಚಂದ್ರನು ಮನಸ್ಸಿನ ನಿರ್ಮಲತೆ ನೀಡಿದನು. ಬಳಿಕ ವಿಶ್ವಾವಸು ಗಂಧರ್ವನು 'ಗಾಂ ಸುಶಿಕ್ಷಿತಾಂ ವಾಚಂ ಧರತೀತಿ ಗಂಧರ್ವಃ' ಎಂಬಂತೆ ಸುಶಿಕ್ಷಿತರಾಡುವಂಥ ಒಳ್ಳೆಯ ಮಾತುಗಾರಿಕೆಯನ್ನಿತ್ತನು. ಸರ್ವಭಕ್ಷಕನಾದ ಅಗ್ನಿ ಅವರು ಏನು ತಿಂದರೂ ಶರೀರದಲ್ಲಿ ಶುದ್ಧರಾಗಿರುವಂತೆ ಅನುಗ್ರಹಿಸಿದನು. 'ಅಗ್ನಿಶ್ಚ ಸರ್ವಮೇಧ್ಯತ್ವಂ' ಎಂದು ಇನ್ನೊಂದು ಪಾಠವೂ ಇದೆ. ಸರ್ವಾಂಗಗಳಲ್ಲಿ ಶುದ್ಧಿ ಎಂದರ್ಥ. ಹೀಗೆ ಕನ್ನೆಯರು ಕಾಯ ವಾಕ್ ಮನಸ್ಸುಗಳೆಂಬ ತ್ರಿಕರಣಗಳಲ್ಲಿಯೂ ಶುದ್ಧರಾಗಿರುವಂತೆ ಅನುಗ್ರಹಿಸಲು ಈ ಮೂರು ದೇವತೆಗಳು ಅವರ ತ್ರಿಕರಣಗಳಲ್ಲಿದ್ದು ಪಾಲನೆ ಮಾಡಿ ಪತಿ ಎನಿಸಿದರು. ಕೊನೆಯಲ್ಲಿ ನಾಲ್ಕನೆಯ ಪತಿಯೇ ಮಾನವನಾದ ವರ.

ಲೌಕಿಕ ವಧುಗಳ ವಿಷಯದಲ್ಲಿ ಈ ವಿವರಣೆ ಸರಿಯಾದರೂ ಮಹಾಲಕ್ಷ್ಮಿಯ ಅವತಾರಗಳ ವಿಷಯದಲ್ಲಿ ಬೇರೆ ರೀತಿ ವಿವರಣೆ ನೀಡಬೇಕಾಗುತ್ತದೆ– ಸೋಮ ಗಂಧರ್ವ ಅಗ್ನಿಗಳು ಮಹಾಲಕ್ಷ್ಮಿಯ ತ್ರಿಕರಣಗಳಲ್ಲಿ ಜನಿಸಿ ಅವುಗಳಲ್ಲಿಯೇ ಇದ್ದು ತ್ರಿಕರಣ ಶುದ್ಧಿ ಸಾಮರ್ಥ್ಯ ಪಡೆದು ಲೌಕಿಕ ವಧುಗಳಿಗೆ ಅದನ್ನು ಅನುಗ್ರಹಿಸುತ್ತಾರೆ ಎಂದು. ಈ ಅಭಿಪ್ರಾಯದಿಂದಲೇ ವಸಿಷ್ಠ ನಾರದರಂಥ ಜ್ಞಾನಿಗಳು ಸೂರ್ಯಾಸೂಕ್ತದಿಂದ ಲಕ್ಷ್ಮೀನಾರಾಯಣರನ್ನು ಸ್ತುತಿಸಿ 'ಮೋದವೀಯುತ್ತ' ಅವರನ್ನು ಸಂತೋಷಗೊಳಿಸುತ್ತ ಮುತ್ತು ಮಾಣಿಕ್ಯ ಮುಂತಾದ ನವರತ್ನ ಮಿಶ್ರಿತ ಘೃತಕುಂಕುಮಲಿಪ್ತ ಮಂಗಳಕರ ಅಕ್ಷತೆಕಾಳುಗಳಿಂದ ಅವರನ್ನರ್ಚಿಸಿ ಲೋಕಕ್ಕೂ ಮೋದವೀಯುತ್ತಾರೆ.

**ಸಂಭ್ರಮದಿಂದಂಬರದಿ ದುಂದುಭಿ ಮೊಳಗಲು**
**ತುಂಬುರು ನಾರದರು ತುತಿಸುತ್ತ ।**
**ತುಂಬುರು ನಾರದರು ತುತಿಸುತ್ತ ಪಾಡಿದರು ಪೀ-**
**ತಾಂಬರ ಧರನ ಮಹಿಮೆಯ ॥**

ಲಕ್ಷ್ಮೀನಾರಾಯಣರ ವಿವಾಹೋತ್ಸವದ ಸಂಭ್ರಮ ದ್ಯೋತಕವಾಗಿ ಆಕಾಶದಲ್ಲಿ ದೇವ ದುಂದುಭಿ ಮೊಳಗಿತು. ತುಂಬುರು ನಾರದರು ಪೀತಾಂಬರಧಾರಿಯಾದ ಶ್ರೀಹರಿಯ ಮಹಿಮೆಯನ್ನು ಹೊಗಳುತ್ತ ಹಾಡಿದರು.

ಹಿಂದಿನ ನುಡಿಯಲ್ಲಿ ಹೇಳಿದಂತೆ ಕನ್ಯಾದಾನವಾದ ಬಳಿಕ ವಧೂವರರು ಸುಮುಹೂರ್ತದಲ್ಲಿ ಮಂತ್ರಪೂರ್ವಕ ಪರಸ್ಪರ ನಿರೀಕ್ಷಣ ಮಾಡಿ ತಿಲಕಾರೋಪಣ ಮಾಲಾರೋಪಣಗಳನ್ನು ಮಾಡಿದಾಗ ವಸಿಷ್ಠ ನಾರದ ಮೊದಲಾದ ಮುನೀಶ್ವರರು ವೇದ ಮಂತ್ರಗಳಿಂದ ಆಶೀರ್ವದಿಸಿ ಅಕ್ಷತೆಕಾಳುಗಳನ್ನು ತಳಿದರು. ಆ ಸಮಯದಲ್ಲಿ ಆಕಾಶದಲ್ಲಿ ಸಂಭ್ರಮದ ದೇವದುಂದುಭಿ ಧ್ವನಿ ಪಸರಿತು.

ಸಂಭ್ರಮ ಏಕೆಂದರೆ ಇದು ಪ್ರಪಂಚದ ಮಾತಾಪಿತೃಗಳಾದ ಲಕ್ಷ್ಮೀನಾರಾಯಣರ ವಿವಾಹ. ಎಲ್ಲ ಮಕ್ಕಳೂ ಈ ತಂದೆ ತಾಯಿಗಳ ಮದುವೆಯನ್ನು ಕಣ್ತುಂಬ ನೋಡಿ ನಲಿಯುತ್ತಿದ್ದಾರೆ! ನಾರಾಯಣನ ಅನಾದಿ ಪತ್ನಿಯಾದ ಮಹಾಲಕ್ಷ್ಮಿಯನ್ನೇ ನಾರಾಯಣನಿಗೆ ದಾನಮಾಡಿದ್ದಾನೆ ಸಮುದ್ರರಾಜ!

ಸ್ವಯಂವರದಲ್ಲಿ ಕನ್ಯಾದಾನವೇ ಬೇಕಾಗಿಲ್ಲ. ಏಕೆಂದರೆ ಸ್ವಯಂವರ ಒಂದು ಬಗೆಯ ಗಾಂಧರ್ವ ವಿವಾಹ. ಅದರಲ್ಲಿ ವಧೂ-ವರರು ಪರಸ್ಪರ ಮೆಚ್ಚಿಕೊಂಡರೆ ಸಾಕು. ಬ್ರಾಹ್ಮ ದೈವ ಆರ್ಷ ಪ್ರಾಜಾಪತ್ಯಗಳೆಂಬ ನಾಲ್ಕು ಬಗೆಯ ವಿವಾಹಗಳಲ್ಲಿ ಕನ್ಯಾದಾನ ಅವಿಭಾಜ್ಯ ಅಂಗವಾಗಿರುತ್ತದೆ. ಗಾಂಧರ್ವ ಆಸುರ ರಾಕ್ಷಸ ಪೈಶಾಚಗಳೆಂಬ ನಾಲ್ಕು ಬಗೆಯ ವಿವಾಹಗಳಲ್ಲಿ ಅದು ಬೇಕಾಗಿಲ್ಲ. ದುಷ್ಯಂತನು ಶಕುಂತಲೆಯನ್ನು ಗಾಂಧರ್ವವಿಧಿಯಿಂದ ವಿವಾಹವಾದ. ಶಕುಂತಲೆಯ ಸಾಕು ತಂದೆ ಕಣ್ವರು ಆಗ ಆಶ್ರಮದಲ್ಲಿಯೇ ಇರಲಿಲ್ಲ. ಕನ್ಯಾಶುಲ್ಕ ತೆಗೆದುಕೊಂಡು ತಂದೆ ಮಗಳನ್ನು ಮಾರುವುದು ಆಸುರ ವಿವಾಹ. ಇದರಲ್ಲಿ ಕನ್ಯಾದಾನದ ಪ್ರಶ್ನೆಯೆ ಬರುವುದಿಲ್ಲ. ಬಲಾತ್ಕಾರದಿಂದ ಹೆಣ್ಣನ್ನು ಕೊಂಡೊಯ್ಯುವುದು ರಾಕ್ಷಸ ವಿವಾಹ. ಮೋಸದಿಂದ ಹೆಣ್ಣನ್ನೆತ್ತಿಕೊಂಡು ಹೋಗುವುದು ಪೈಶಾಚ ವಿವಾಹ, ಇವುಗಳಲ್ಲಿಯೂ ಕನ್ಯಾದಾನ ಅಸಾಧ್ಯ. ಆದ್ದರಿಂದಲೇ ಶ್ರೀಕೃಷ್ಣ

ರುಕ್ಮಿಣೀದೇವಿಯನ್ನು ಬಲಾತ್ಕಾರದಿಂದ ಒಯ್ದು ತಂದುದರಿಂದ ಕನ್ಯಾದಾನ ನಡೆಯಲಿಲ್ಲ, ಹಾಗೇ ವಿವಾಹವಾಯಿತು. ಪ್ರಕೃತದಲ್ಲಿಯೂ ವಧು ವರನನ್ನು ವರಿಸಿದ ಬಳಿಕ ಸಮುದ್ರರಾಜ ಕನ್ಯಾದಾನ ಮಾಡಬೇಕಾಗಿರಲಿಲ್ಲ. ಆದರೂ ಮಾಡಿದ್ದಾನೆ. ಇದೊಂದು ವಿಶೇಷ.

ವವ್ರೇ ವರಂ ಸರ್ವಗುಣೈರಪೇಕ್ಷಿತಂ
ರಮಾ ಮುಕುಂದಂ ನಿರಪೇಕ್ಷಮೀಪ್ಸಿತಮ್ ।

ಎಂದು ಭಾಗವತದಲ್ಲಿ ಹೇಳಿದಂತೆ ಶ್ರೀಹರಿಯನ್ನು ಮಹಾಲಕ್ಷ್ಮಿ ಅಪೇಕ್ಷಿಸಿ ವರಿಸಿದ್ದರೂ ಶ್ರೀಹರಿ ನಿರಪೇಕ್ಷ. ಆತ ವಧುವನ್ನು ಸ್ವೀಕರಿಸಬೇಕಾಗಿರಲಿಲ್ಲ. ಸ್ವೀಕರಿಸಿದ್ದಾನೆ, ಇದು ಇನ್ನೊಂದು ವಿಶೇಷ

ಸ್ವಯಂವರದಲ್ಲಿ ಕನ್ಯಾದಾನ ನಿಷಿದ್ಧವೇನಲ್ಲ. ಸೀತಾಸ್ವಯಂವರದಲ್ಲಿ ಜನಕ ಮಹಾರಾಜ ಧಾರಾಪೂರ್ವಕವಾಗಿ ಕನ್ಯಾದಾನ ಮಾಡಿದ. ಧಾರೆ ಎರೆದು ಕನ್ಯಾದಾನ ಮಾಡಬೇಕೆನ್ನುವ ನಿಯಮ ವಿಪ್ರರಲ್ಲಿ ಮಾತ್ರ ಕಡ್ಡಾಯವಾಗಿದ್ದರೂ ಇತರರಲ್ಲಿ ಅವರು ಬಯಸಿದರೆ ಅದಕ್ಕೆ ಶಾಸ್ತ್ರ ಸಮ್ಮತಿ ಇದೆ ಎಂದು ಬ್ರಹ್ಮಪುರಾಣ ಹೇಳಿದೆ–

ಜಲಪೂರ್ವಂ ತು ವಿಪ್ರಾಣಾಂ
ಅನ್ಯೇಷಾಮಪಿ ಕಾಮ್ಯಯಾ ॥

ಸಮುದ್ರರಾಜನಿದನ್ನರಿತು ಕನ್ಯಾದಾನ ಮಾಡಿದ್ದರಿಂದ ಉತ್ಸವಕ್ಕೆ ಹೆಚ್ಚು ಕಳೆಯೇರಿತು. ಈ ಸದವಕಾಶಕ್ಕಾಗಿ ಆತನೆಷ್ಟು ತಪಸ್ಸು ಮಾಡಿದ್ದನೋ!

ಕನ್ಯಾದಾನವಾದ ಬಳಿಕ ಮುಂದೆ ನಡೆಯಲಿರುವ ವಿವಾಹ ಹೋಮಾದಿಗಳು ಮಾತ್ರ ಎಂಟು ಬಗೆಯ ವಿವಾಹಗಳಲ್ಲಿಯೂ ಕಡ್ಡಾಯವಾಗಿ ನಡೆಯಬೇಕು. ದೇವ ಸ್ಮೃತಿ ಹೇಳುತ್ತದೆ–

ಗಾಂಧರ್ವಾದಿ ವಿವಾಹೇಷು ಪುನರ್ವೈವಾಹಿಕೋ ವಿಧಿಃ ।
ಕರ್ತವ್ಯಶ್ಚ ತ್ರಿಭಿರ್ವರ್ಣೈಃ ಸಮರ್ಥೇನ ತು ಸಾಗ್ನಿಕಃ ॥

ದುಷ್ಯಂತನೂ ಭರತ ಹುಟ್ಟಿದ ಬಳಿಕ ಶಕುಂತಲೆಯನ್ನು ವಿಧಿವತ್ತಾಗಿ ಪಾಣಿಗ್ರಹಣ ಮಾಡಿದನೆಂದು ಮಹಾಭಾರತ ಹೇಳುತ್ತದೆ–

ಜಗ್ರಾಹ ವಿಧಿವತ್ ಪಾಣೌ ।

ರುಕ್ಮಿಣೀ ಸ್ವಯಂವರದಲ್ಲಿಯೂ ಅಗ್ನಿಸಾಕ್ಷಿಯಾಗಿ ಪಾಣಿಗ್ರಹಣ ಸಪ್ತಪದಿ ಮುಂತಾದುವು ನಡೆದುವು. ಆದ್ದರಿಂದ ಲಕ್ಷ್ಮೀ ಸ್ವಯಂವರದಲ್ಲಿ ಮುಂದೆ

ಹೇಳಲಿರುವ ವಿವಾಹ ಹೋಮಾದಿಗಳು ವಿಶೇಷವೇನಲ್ಲ. ಸಮುದ್ರರಾಜ ಕನ್ಯಾದಾನ ಮಾಡಿದುದು ವಿಶೇಷ, ನಿರಪೇಕ್ಷನಾದ ನಾರಾಯಣ ಸ್ವೀಕರಿಸಿದುದೂ ವಿಶೇಷ. ಆದ್ದರಿಂದ ಸಂಭ್ರಮ !

ಭಾಗವತದಲ್ಲಿ ಈ ಸಂಭ್ರಮದ ದುಂದುಭಿಯೊಂದಿಗೆ ಇತರ ಎಲ್ಲ ವಾದ್ಯಗಳೂ ಮೊಳಗಿದುದರ ಉಲ್ಲೇಖವಿದೆ–

ಶಂಖ ತೂರ್ಯ ಮೃದಂಗಾನಾಂ ವಾದಿತ್ರಾಣಾಂ ಪೃಥುಃ ಸ್ವನಃ ।
ದೇವಾನುಗಾನಾಂ ಸಸ್ತ್ರೀಣಾಂ ನೃತ್ಯತಾಂ ಗಾಯತಾಮಭೂತ್ ॥

ಸ್ಕಾಂದ ಪುರಾಣದಲ್ಲಿಯೂ ನಾಲ್ಕೂ ಬಗೆಯ ವಾದ್ಯಗಳು ಮೊಳಗಿದುದರ ಉಲ್ಲೇಖವಿದೆ–

ತತಾನಿ ವಿತತಾನ್ಯೇವ ಘನಾನಿ ಶುಷಿರಾಣಿ ಚ ।
ಏವಂ ವಾದ್ಯ ಪ್ರಭೇದೈಶ್ಚ ವಿಷ್ಣುಂ ಸರ್ವಾತ್ಮನಾ ಹರಿಮ್ ।
ಅತೋಷಯನ್ ಸುಗೀತಜ್ಞಾ ಗಂಧರ್ವಾಪ್ಸರಸಾಂ ಗಣಾಃ ॥

ತುಂಬುರು, ನಾರದರು ಈರ್ವರೂ ದೇವಗಂಧರ್ವರು. ವಿಶೇಷವಾಗಿ ಗಾನದಿಂದಲೆ ದೇವತೆಗಳನ್ನೂ ಅವರೊಳಗಿರುವ ಶ್ರೀಹರಿಯನ್ನೂ ಒಲಿಸಿಕೊಳ್ಳುವ ತಪಸ್ವಿಗಳು.

ಜಪಕೋಟಿಗುಣಂ ಧ್ಯಾನಂ ಧ್ಯಾನಕೋಟಿ ಗುಣೋ ಲಯಃ ।
ಲಯಕೋಟಿಗುಣಂ ಗಾನಂ ಗಾನಾತ್ ಪರತರಂ ನ ಹಿ ॥

'ಜಪಕ್ಕಿಂತ ಧ್ಯಾನ, ಧ್ಯಾನಕ್ಕಿಂತ ಲಯ, ಲಯಕ್ಕಿಂತಲೂ ಗಾನ ಕೋಟಿ ಪಾಲು ಶ್ರೇಷ್ಠ, ಗಾನಕ್ಕಿಂತ ಮಿಗಿಲಾದ ತಪಸ್ಸು ಇನ್ನೊಂದಿಲ್ಲ.' ಆದ್ದರಿಂದ ಗಂಧಮಾದನ ಪರ್ವತದ ಕುಬೇರ ಭವನದಲ್ಲಿ ಪ್ರತಿ ಪರ್ವ ಸಂಧಿಗಳಲ್ಲಿ ತಪ್ಪದೆ ತುಂಬುರುವಿನ ಸಾಮಗಾನ ಧ್ವನಿ ಕೇಳಿಬರುತ್ತದೆ ಎನ್ನುತ್ತದೆ ಮಹಾಭಾರತ–

ಉಪಾಸೀನಸ್ಯ ಧನದಂ ತುಂಬುರೋಃ ಪರ್ವಸಂಧಿಷು ।
ಗೀತ ಸಾಮಸ್ವನಸ್ತಾತ ಶ್ರೂಯತೇ ಗಂಧಮಾದನೇ ॥

ತುಂಬುರು ಪ್ರಾಧಾದೇವಿಯಲ್ಲಿ ಕಶ್ಯಪಮುನಿಯಿಂದ ಜನಿಸಿದ ವಿಶ್ವಾವಸು ಹಾಹಾ ಹೂಹೂ ಮುಂತಾದ ಹತ್ತು ಮಂದಿ ದೇವಗಂಧರ್ವರಲ್ಲಿ ಒಬ್ಬ. ಕುಬೇರನ ಆಸ್ಥಾನ ಗಾಯಕ.

ನಾರದನೂ ಮಹಾಭಾರತ ಹೇಳುವಂತೆ, ಕಶ್ಯಪ ಮುನಿಯಿಂದ ಮುನಿದೇವಿಯಲ್ಲಿ ಜನಿಸಿದ ಚಿತ್ರರಥ ಮುಂತಾದ ಹದಿನಾರು ಮಂದಿ ದೇವಗಂಧರ್ವರಲ್ಲಿ ಒಬ್ಬ. ಹರಿವಂಶವೂ 'ನಾರದ ಪ್ರಮುಖಾಶ್ಚೈವ ಗಂಧರ್ವಾಃ' ಎಂದು ನಾರದರನ್ನು ಗಂಧರ್ವ ಜಾತಿಯಲ್ಲಿ ಸೇರಿಸುತ್ತದೆ–

'ನಾರದ ತುಂಬುರಾದಯೋ ಗಂಧರ್ವಯಕ್ಷಾಃ।'
ಎಂದು ಸ್ಕಾಂದ ಪುರಾಣವೂ ಹೇಳುತ್ತದೆ
ಮಹಾಭಾರತವೇ ಇನ್ನೊಂದೆಡೆ–
'ವಿಶ್ವಾವಸುರ್ನಾರದ ಪರ್ವತೌ ಚ ಗಂಧರ್ವಮುಖ್ಯಾಃ।'

ಎಂದು ಹೇಳಿದುದುಂಟು ಇದರಿಂದ ತುಂಬರು ನಾರದರು ಅಣ್ಣತಮ್ಮಂದಿರು

'ವೇದೋಕ್ತ ಮಂತ್ರ ಹೇಳಿ ವ[illegible] [illegible]ರದ ಮೊದಲಾದ ಮುನೀಂದ್ರರು' ಎಂದು ಹಿಂದೆ ಹೇಳಿದ ನಾರದರು ಜ[illegible] [illegible]ರು 'ಉತ್ಸಂಗಾನ್ನಾರದೋ ಜಜ್ಞೇ' ಎಂದು ಭಾಗವತದಲ್ಲಿ ಹೇಳಿದಂತೆ ಬ್ರ[illegible]ದೇವರ ತೊಡೆಯಿಂದ ಜನಿಸಿದ ದೇವರ್ಷಿಗಳು ಹರಿವಂಶದಲ್ಲಿ 'ಲ[illegible] ದಸ್ರಜನ್ನಾರದಂ ಪ್ರಿಯವಿಗ್ರಹಂ' ಎಂಬಂತೆ ಬ್ರಹ್ಮದೇವರ ಹಣೆಯಿಂದ ಜ[illegible] ನಾರದರು ಭಾಗವತದಲ್ಲಿ 'ಸಿದ್ಧ ಲೋಕಂ ತತೋಽಗಮತ್' ಎಂಬ ವಾಕ್ಯ [illegible]ಜಾತಿಷು ನಾರದಸ್ಯ ಪ್ರಾಧಾನ್ಯ ದ್ಯೋತನಾಯ' ಎಂದು ಟೀಕಾಕಾರರು ಹೇಳುವುದನ್ನು ನೋಡಿದರೆ ಸಿದ್ಧಜಾತಿಯಲ್ಲಿಯೂ ಒಬ್ಬ ನಾರದರು ಬರುತ್ತಾರೆ ನಾರದ ಎಂಬ ಪರ್ವತದಲ್ಲಿ ಬ್ರಹ್ಮದೇವರಿಂದ ನಾರದ ಪರ್ವತರೆಂಬ ಅಣ್ಣತಮ್ಮಂದಿರು ಹುಟ್ಟಿದರೆಂದೂ ಅವರಿಗೆ ಅರುಂಧತಿಯು ತಂಗಿ ಎಂದೂ ವಾಯು ಪುರಾಣ ಹೇಳಿದೆ ವಿಶ್ವಾಮಿತ್ರರ ಮಕ್ಕಳಲ್ಲಿಯೂ ಒಬ್ಬ ನಾರದರು ಬರುತ್ತಾರೆ

ಈ ಎಲ್ಲ ನಾರದರುಗಳಲ್ಲಿ ವೀಣೆ ನುಡಿಸುತ್ತ ಹಾಡುವವರು ಗಂಧರ್ವ ನಾರದರೆನ್ನಬಹುದು ತುಂಬುರು ಕಲಾವತಿ ಎಂಬ ವೀಣೆ ನುಡಿಸುವಂತೆ ನಾರದರು ಮಹತೀ ಎಂಬ ವೀಣೆ ನುಡಿಸುತ್ತಾರೆ ಆದರೆ ದೇವರ್ಷಿ ನಾರದರೂ ವೀಣೆ ನುಡಿಸುವುದು ಭಾಗವತದಲ್ಲಿ ಕಂಡುಬರುತ್ತದೆ–

ದೇವದತ್ತಾಮಿಮಾಂ ವೀಣಾಂ ಸ್ವರಬ್ರಹ್ಮ ವಿಭೂಷಿತಾಮ್ ।
ಮೂರ್ಛಯಿತ್ವಾ ಹರಿಕಥಾಂ ಗಾಯಮಾನಶ್ಚರಾಮ್ಯಹಮ್ ॥

ಈ ಅನೇಕ ನಾರದರು ವಸ್ತುತಃ ಬೇರೆ ಬೇರೆಯೋ? ಅಥವಾ, ಒಬ್ಬರೇ ಬೇರೆ ಬೇರೆ ಅಂಶಗಳಿಂದ ಜನಿಸಿದವರೆ? ಎಂಬುದನ್ನು ನಿರ್ಧರಿಸುವುದು ಕಷ್ಟ. ದೇವರ್ಷಿ ನಾರದರೆ ದಕ್ಷಶಾಪ ಭಯದಿಂದ ತಿರುಗಿ ಕಶ್ಯಪರ ಮಗನಾಗಿ ಹುಟ್ಟಿದರೆಂದು ಹರಿವಂಶದಲ್ಲಿ ಹೇಳಿದುದುಂಟು–

ತತೋ ದಕ್ಷಸ್ತು ತಾಂ ಪ್ರಾದಾತ್ ಕನ್ಯಾಂ ವೈ ಪರಮೇಷ್ಠಿನೇ ।
ಸ ತಸ್ಯಾಂ ನಾರದೋ ಜಜ್ಞೇ ದಕ್ಷಶಾಪಭಯಾದ್ ಋಷಿಃ ॥

ಆದ್ದರಿಂದ 'ತುಂಬುರು ನಾರದರು ತುತಿಸುತ್ತ ಪಾಡಿದರು' ಎಂಬಲ್ಲಿ ನಾರದರು ಎಂದರೆ ಗಂಧರ್ವ ನಾರದರೇ ಎಂದೂ ಹೇಳುವಂತಿಲ್ಲ. ಬೇರೆ ಬೇರೆ ನಾರದರನ್ನು ಅಥವಾ ಬೇರೆ ಬೇರೆ ಅಂಶಗಳಿಂದ ಜನಿಸಿದ ಒಬ್ಬರೇ ನಾರದರನ್ನೂ ಇಟ್ಟುಕೊಳ್ಳಬಹುದು

— ೭೫ —

**ದೇವ ನಾರಿಯರೆಲ್ಲ ಬಂದೊದಗಿ ಪಾಠಕರು**
**ಓವಿ ಪಾಡುತ್ತ ಕುಣಿದರು ।**
**ದೇವ ತರುವಿನ ಹೂವಿನ ಮಳೆಗಳ**
**ಶ್ರೀವರನ ಮೇಲೆ ಕರೆದರು ॥**

ದೇವ ನಾರಿಯರು ಮತ್ತು ಎಲ್ಲ ಬಂದೊದಗಿದ ಸ್ತುತಿಪಾಠಕರು ಪ್ರೀತಿ ಪೂರ್ವಕವಾಗಿ ಹಾಡುತ್ತ ಕುಣಿದರು. ಶ್ರೀರಮಣನ ಮೇಲೆ ದೇವತರುವಿನ ಹೂವಿನ ಮಳೆಗಳನ್ನು ಕರೆದರು

ಇಲ್ಲಿ ಹಾಡುತ್ತ ಕುಣಿವ ದೇವನಾರಿಯರೆಂದರೆ ಮುಖ್ಯವಾಗಿ ಅಪ್ಸರೆಯರು. ಅಪ್ಸರೆಯರೆಂದರೆ ಅಪ್–ನೀರಿನಿಂದ, ಸರ–ಹುಟ್ಟಿಬಂದವರು, ಸಮುದ್ರಮಥನ ಕಾಲದಲ್ಲಿ ಎಂದಿಟ್ಟುಕೊಂಡರೆ ಕೇವಲ ಒಂದು ಕುಲ ಮಾತ್ರವಾಯಿತು. ವಸ್ತುತಃ ಬೇರೆ ಬೇರೆ ಕಡೆ ಹುಟ್ಟಿದ ಒಟ್ಟು ಹದಿನಾಲ್ಕು ಕುಲಗಳಿವೆ–

ಆಹೂತಾ–ಬ್ರಹ್ಮನ ಮಾನಸ ಪುತ್ರಿಯರು, ಊರ್ಜಾ–ಅಗ್ನಿಕನ್ಯೆಯರು, ಆಯುಷ್ಮತೀ–ಸೂರ್ಯಕಿರಣ ಜಾತೆಯರು, ಕುರು–ಚಂದ್ರಕಿರಣಗಳಿಂದ ಉದಿಸಿದವರು, ಸುಧಾ–ವಾಯು ಪುತ್ರಿಯರು, ಭೂ–ಭೂಮಿಜಾತೆಯರು, ರುಚಿ–ವಿದ್ಯುತ್ತಿನಿಂದ ಹುಟ್ಟಿದವರು, ವಹ್ನಿ–ವೇದಗಳಿಂದ ಜನಿಸಿದವರು, ಶುಭಾ–ಯಜ್ಞದಿಂದ ಉದ್ಭೂತರಾದವರು ಭೈರವಾ–ಯಮಕನ್ಯೆಯರು, ಶೋಭಯಂತೀ–ಮನ್ಮಥನ ಮಕ್ಕಳು. ಕಶ್ಯಪಮುನಿಗೆ ಮುನಿದೇವಿಯಲ್ಲಿ ಜನಿಸಿದ

ಒಂದು ಕುಲವೂ ಶೋಭಯಂತೀ ಎನಿಸಿದೆ ಕಶ್ಯಪಮುನಿಗೆ ಸ್ವಾರೋಚಿಷ ಮನ್ವಂತರದಲ್ಲಿ ಅರಿಷ್ಟಾದೇವಿಯಲ್ಲಿ ಹುಟ್ಟಿದ ಕುಲವೂ ಬೇರೆ ಮನ್ವಂತರಗಳಲ್ಲಿ ಪ್ರಾಧಾದೇವಿಯಲ್ಲಿ ಜನಿಸಿದ ಕುಲವೂ ವೇಗವತೀ ಎನಿಸಿದೆ. ಕ್ಷೀರಸಾಗರದಿಂದ ಅಮೃತದೊಂದಿಗೆ ಉದಿಸಿ ಬಂದ ಅಪ್ಸರೆಯರು ಅಮೃತಾ ಎನಿಸಿರುವರು.

ಬಾಣನು ತನ್ನ "ಕಾದಂಬರಿ" ಎಂಬ ಗದ್ಯಕಾವ್ಯದಲ್ಲಿ ಈ ಹದಿನಾಲ್ಕು ಕುಲಗಳ ಮೂಲಗಳನ್ನು ನಿರ್ದೇಶಿಸಿದ್ದಾನೆ. ಕುಲಗಳ ನಾಮಗಳನ್ನು ನಿರ್ದೇಶಿಸಿಲ್ಲ. ಅವು ವಾಯು ಪುರಾಣದಲ್ಲಿ ಕಂಡುಬರುತ್ತವೆ.

ಇನ್ನು ನಾರಾಯಣನ ತೊಡೆಯಿಂದ ಬ್ರಹ್ಮನ ಯಜ್ಞವೇದಿಕೆಯಿಂದ ಎಂದು ಮುಂತಾಗಿ ಬೇರೆ ಬೇರೆ ಕಡೆಗಳಲ್ಲಿಯೂ ಅಪ್ಸರೆಯರು ಹುಟ್ಟಿಬಂದುದರ ಉಲ್ಲೇಖಗಳಿವೆ

ಈ ಎಲ್ಲ ಅಪ್ಸರೆಯರು ನೀರಿನಿಂದಲೇ ಹುಟ್ಟಿಬಂದವರಲ್ಲ ಎಂದ ಮೇಲೆ ಅಪ್–ನೀರಿನಿಂದ ಸರ–ಹುಟ್ಟಿಬಂದವರು ಎಂಬ ವಿವರಣೆ ಎಲ್ಲರಿಗೂ ಅನ್ವಯಿಸಲಾರದು. ಅಪ್–ರೂಪ ಸೌಂದರ್ಯವನ್ನು ಸರಾ–ಹೊಂದಿದವರು ಎನ್ನಬೇಕು.

ಆದಿಸೃಷ್ಟಿಯಲ್ಲಿ ಅಪ್ಸರೆಯರು ಭಗವಂತನ ಕಣ್ಣಿಂದ ಹುಟ್ಟಿದವರು–

ಚಕ್ಷುಷೋ ರೂಪಸಂಪನ್ನಾ ಹ್ಯಪ್ಸರಾಃ ಸೃಜತೇ ಪ್ರಭುಃ । —ಹರಿವಂಶ.

ಕಣ್ಣಿಂದ ಹುಟ್ಟಿಬಂದುದರಿಂದಲೆ ಕಣ್ಣಿಗೆ ಹಬ್ಬ ಇವರ ರೂಪ. ಅಥರ್ವವೇದ ಹೇಳುತ್ತದೆ—

ಯಾಃ ಕ್ಲಂದಾಸ್ತಮೀಷೀಚಯೋಽಕ್ಷಕಾಮಾ ಮನೋಮುಹಃ ।

ರಸಿಕರನ್ನು ಆಹ್ವಾನಿಸುವಂಥ, ಮನೋಗ್ಲಾನಿಯನ್ನು ದೂರ ಓಡಿಸುವ, ಕಣ್ಣಿಗೆ ಪುನಃ ಪುನಃ ನೋಡುವ ಬಯಕೆ ತರುವ, ಮನಮೋಹಕ ರೂಪ ಅಪ್ಸರೆಯರದು.

ಸಂಪಿಗೆ ಹೂವಿನಂಥ ಮೈಬಣ್ಣ, ಮಾದಕ ಮೈಗಂಪು ಇವು ಎಲ್ಲ ಅಪ್ಸರೆಯರ ಸಾಮಾನ್ಯ ಲಕ್ಷಣ. ಇನಿಯನು ಜೊತೆಗಿದ್ದರೆ ಸಾಕು, ಮಧುಪಾನವಿಲ್ಲದೆಯೇ ಮದಿಸುತ್ತಾರೆ ಅವರ ಸ್ಪರ್ಶ ಮಾತ್ರದಿಂದಲೆ ಆನಂದ ಉಕ್ಕಿಬರುತ್ತದೆ–

ಸುಗಂಧಾಶ್ಚಂಪವರ್ಣಾಶ್ಚ ಸರ್ವಾಶ್ಚಾಪ್ಸರಸಃ ಸಮಾಃ ।
ಸಂಪ್ರಯೋಗೇ ತು ಮಾದ್ಯಂತಿ ಕಾಂತೇನ ಮದಿರಾಂ ವಿನಾ ।
ತಾಸಾಮಾಪ್ಯಾಯತೇ ಸ್ಪರ್ಶಾದಾನಂದಶ್ಚ ವಿವರ್ಧತೇ ॥

–ವಾಯು ಪುರಾಣ

ಆದರೆ ಅಪ್ಸರೆಯರು ತಮ್ಮ ವೈಯಕ್ತಿಕ ಜೀವನದಲ್ಲಿ ಬ್ರಹ್ಮವಾದಿನಿಯರು, ಮಹಾಯೋಗಿನಿಯರು. ವೇಶ್ಯೆಯರೆಂದು ಪ್ರಸಿದ್ಧರಾದರೂ ದೇವತೆಗಳಿಗೂ ಋಷಿಗಳಿಗೂ ಅವರು ಮಾತೆಯ ಸ್ಥಾನದಲ್ಲಿಯೂ, ಪತ್ನೀಸ್ಥಾನದಲ್ಲಿಯೂ ಇರುತ್ತಾರೆ: ಅವರಲ್ಲಿ ಜನಿಸಿದ ಮಕ್ಕಳನ್ನು ಔರಸ ಪುತ್ರರೆಂದೇ ಸ್ವೀಕರಿಸುತ್ತಾರೆ–

ಸರ್ವಾಶ್ಚ ಬ್ರಹ್ಮವಾದಿನ್ಯೋ ಮಹಾಯೋಗಾಶ್ಚ ತಾಃ ಸ್ಮೃತಾಃ ।
ದೇವತಾನಾಂ ಋಷೀಣಾಂ ಚ ಪತ್ನ್ಯಸ್ತಾ ಮಾತರಶ್ಚ ಹ ॥

ಬ್ರಹ್ಮವಾದಿನಿಯರೂ, ಯೋಗಿನಿಯರೂ ಆಗಿದ್ದರೂ ವೇಶ್ಯೆಯರಾಗಿರುವುದು ಏಕೆಂದರೆ ಕಾಮಯುಕ್ತವಾದ ಭಕ್ತಿಯಿಂದಲೆ ಅಪ್ಸರೆಯರಿಗೆ ಮೋಕ್ಷ ಅವರು ಎಲ್ಲರಲ್ಲಿಯೂ ಭಗವಂತನನ್ನು ಕಂಡು ಜಾರನೆಂದು ಉಪಾಸನೆ ಮಾಡುತ್ತಾರೆ. ಮುಕ್ತಿಯಲ್ಲಿಯೂ ಇವರು ಕಾಮಿನಿಯರಾಗೇ ಹರಿಯನ್ನು ಕಾಮಿಸುತ್ತಾರೆ.

ಊರ್ವಶೀ, ಪೂರ್ವಚಿತ್ತಿ, ಸಹಜನ್ಯಾ, ಮೇನಕಾ, ವಿಶ್ವಾಚೀ, ಘೃತಾಚೀ ಎಂಬ ಆರು ಮಂದಿ ಅಪ್ಸರೆಯರು ಪ್ರಧಾನರೆಂದು ಮಹಾಭಾರತ ಹೇಳುತ್ತದೆ. ಇವರು ಸನಕಾದಿ ಮುನಿಗಳಿಗೂ, ಪ್ರಹ್ಲಾದಾದಿ ಕರ್ಮಜ ದೇವತೆಗಳಿಗೂ ಸಮಾನರು. ಗಂಗಾ ಪರ್ಜನ್ಯಾದಿ ದೇವತೆಗಳಿಗಿಂತ ಉತ್ತಮರು. ವೇದಾಧಿಕಾರ ಉಳ್ಳ ಉತ್ತಮ ಸ್ತ್ರೀಯರ ಸಾಲಿನಲ್ಲಿ 'ಯಥೋರ್ವಶೀ ಯಮೀ ಚೈವ' ಎಂದು ಊರ್ವಶಿ ಮೊದಲಿಗೆ ಬರುತ್ತಾಳೆ. ಇನ್ನು ನೂರು ಮಂದಿ ಬೇರೆ ಅಪ್ಸರೆಯರೂ ಆಜಾನಜ ದೇವತೆಗಳಿಗೆ ಸಮಾನರು. ಉಳಿದ ಎಲ್ಲ ಕೋಟಿಗಟ್ಟಲೆ ಅಪ್ಸರೆಯರೂ ಶತಕೋಟಿ ಸಂಖ್ಯೆಯಲ್ಲಿರುವ ಅಂತಃಪ್ರಕಾಶರೆನಿಸಿದ ಋಷಿಗಳಿಗಿಂತ ಶ್ರೇಷ್ಠರು. ಈ ತಾರತಮ್ಯ ಮೋಕ್ಷದಲ್ಲಿಯೂ ಇರುತ್ತದೆ. 'ಅಪ್ಸರಾಭ್ಯೋಽಕರಂ ನಮಃ' ಎಂಬ ಅಥರ್ವವೇದದ ಮಂತ್ರವು ಅಪ್ಸರೆಯರಿಗೆ ನಮೋ ಎನ್ನುತ್ತದೆ.

ಈ ದೇವನಾರಿಯರೊಡನೆ ಬಂದೊದಗಿದ ಸ್ತುತಿಪಾಠಕರು ಗಂಧರ್ವರು ಗಾಃ–ಮಾತುಗಳನ್ನು, ಧಾರಯಂತಿ–ಧರಿಸುತ್ತಾರೆ ಅರ್ಥಾತ್ ಸ್ತುತಿಪಾಠ ರೂಪದ ಮಾತುಗಳನ್ನು ಸದಾ ಉಚ್ಚರಿಸುತ್ತಾರೆ. ಆದ್ದರಿಂದ ಗಂಧರ್ವರು ಆದರೆ ಎಲ್ಲ ಗಂಧರ್ವರೂ ಸ್ತುತಿಪಾಠಕರಲ್ಲ. ಅವರು ಮುಖ್ಯವಾಗಿ ವೀರಯೋಧರು.

ದೇವತೆಗಳಿಗಾಗಿ ಅಸುರರೊಡನೆ ಸದಾ ಹೋರಾಡುವವರು, ಅಶ್ವವಿದ್ಯಾನಿಪುಣರು. ಅವರ ಕುದುರೆಗಳು ಒಳ್ಳೆಯ ಜಾತಿಯವುಗಳು. ಅರ್ಜುನನು ಯುದ್ಧದಲ್ಲಿ ಚಿತ್ರರಥನೆಂಬ ಗಂಧರ್ವರಾಜನನ್ನು ಸೋಲಿಸಿದಾಗ ಅವನು ಅರ್ಜುನನ ಪರಾಕ್ರಮಕ್ಕೆ ಮೆಚ್ಚಿ ಪಾಂಡವರಿಗೆ ಒಬ್ಬೊಬ್ಬರಿಗೂ ನೂರು ದಿವ್ಯಾಶ್ವಗಳನ್ನು ಕೊಟ್ಟನಂತೆ. ಲೋಕದ ಎಲ್ಲ ಕುದುರೆಗಳಿಗೂ 'ವಾಜಿ' ಎಂಬುದು ಸಾಮಾನ್ಯ ಶಬ್ದವೆ ಆದರೂ ವಿಶೇಷವಾಗಿ ಗಂಧರ್ವರ ಕುದುರೆಗಳಿಗೇ ಆ ಹೆಸರು ಸಲ್ಲುತ್ತದೆ ಎಂದು ಬೃಹದಾರಣ್ಯಕ ಭಾಷ್ಯದಲ್ಲಿ ಉಕ್ತವಾಗಿದೆ. ಅದಕ್ಕೆ ಕಾರಣವನ್ನೂ ಅಲ್ಲಿಯೇ ಹೇಳಿದೆ–

ಸರ್ವದಾ ಯುದ್ಧ ಕರ್ತೃತ್ವಾದ್ ವಾಜೀ ।

'ಸದಾ ಯುದ್ಧ ಮಾಡುವುದರಿಂದ ಗಂಧರ್ವರ ಕುದುರೆಗಳು ವಾಜಿ ಎನಿಸುತ್ತವೆ' ಎಂದು ಹೀಗೆ ಸದಾ ಯುದ್ಧ ನಿರತರು ಗಂ[illegible]ರು ಸೋತಾಗಲೆ ದೇವತೆಗಳು ಸ್ವತಃ ರಣರಂಗಕ್ಕೆ ಬರುತ್ತಾರೆ.

ರಾಜನೀತಿಜ್ಞರಾಗಿದ್ದು ದೇವತೆಗಳಿಗೆ ದೂತರಾಗಿಯೂ ಗುಪ್ತಚಾರಕರಾಗಿಯೂ ಕಾರ್ಯನಿರ್ವಹಿಸುವವರೂ ಗಂಧರ್ವರೆ. ಧೃತರಾಷ್ಟ್ರನೆಂಬ ಗಂಧರ್ವನು ಇಂದ್ರನ ದೂತನಾಗಿ ಮರುತ್ತರಾಜನ ಬಳಿಗೆ ಬಂದುದರ ಉಲ್ಲೇಖ ಮಹಾಭಾರತದಲ್ಲಿದೆ.

ಗಂಧರ್ವರು ಮಾಯಾವಿದ್ಯಾವಿಶಾರದರು. ಆ ವಿದ್ಯೆಯ ಬಲದಿಂದ ಮಾಯಾವಿಗಳಾದ ಅಸುರರನ್ನು ಇದಿರಿಸಬಲ್ಲರು. ಚಾಕ್ಷುಷೀ ವಿದ್ಯೆಯ ಬಲದಿಂದ ಮೂರುಲೋಕದಲ್ಲಿರುವ ಯಾವುದೇ ವಸ್ತುವನ್ನು ಕುಳಿತಲ್ಲಿಂದಲೆ ಕಣ್ಣಿಂದ ಸ್ಪಷ್ಟವಾಗಿ ಕಾಣಬಲ್ಲರು. ವಿಶ್ವಾವಸು ಎಂಬ ಗಂಧರ್ವನು ಈವಿದ್ಯೆಯಲ್ಲಿ ನಿಪುಣನೆಂದೂ ಅವನಿಂದ ಇದನ್ನು ಕಲಿತಿದ್ದ ಚಿತ್ರರಥನು ಅರ್ಜುನನಿಗೆ ಉಪದೇಶಿಸಿದನೆಂದೂ ಮಹಾಭಾರತ ಹೇಳಿದೆ.

ವಿಶ್ವಾವಸು ಸಂಗೀತದಲ್ಲಿಯೂ ಅದ್ವಿತೀಯನೆಂದು ಪ್ರಸಿದ್ಧನಾಗಿದ್ದಾನೆ. ಈ ಸಂಗೀತ ವಿದ್ಯೆಗೆ ಗಂಧರ್ವವಿದ್ಯೆ ಎಂಬುದು ಇನ್ನೊಂದು ಹೆಸರು. ಏಕೆಂದರೆ ಗಂಧರ್ವಗಾನ ಗಾನಗಳಲ್ಲೆಲ್ಲ ಶ್ರೇಷ್ಠ. ಅದು ಗಂಧರ್ವರಿಗೆ ಮಾತ್ರ ಸಾಧ್ಯ. ಅವರು ಗಾಂಧಾರ ಗ್ರಾಮದಲ್ಲಿಯೂ ಹಾಡುತ್ತಾರೆ. ಮನುಷ್ಯರು ಕೇವಲ ಷಡ್ಜ ಮಧ್ಯಮ ಗ್ರಾಮಗಳಲ್ಲಿ ಮಾತ್ರ ಹಾಡಬಲ್ಲರು. ನಾಟ್ಯ ವಾದ್ಯ ಕಲೆಗಳಲ್ಲಿಯೂ ಗಂಧರ್ವರೆ ಮೇಲು.

ಯುದ್ಧ, ಸಂಗೀತ, ನಾಟ್ಯ, ವಾದ್ಯ ಮುಂತಾದ ಕಲೆಗಳಲ್ಲಿ ಪರಿಣತರಾದ ಗಂಧರ್ವರ ಬೇರೆ ಬೇರೆ ಪಂಗಡಗಳೆ ಇವೆ ಎಂದು ಬೃಹದಾರಣ್ಯಕ ಭಾಷ್ಯದಲ್ಲಿ ಹೇಳಿದೆ–

ಗಂಧರ್ವಾಸ್ತು ಸದಾ ಯುದ್ಧರತಾ ದೇವಾನುಗಾ ಯತಃ ।
ಕೇಚಿದ್ ಗಾನರತಾ ನಿತ್ಯಂ ಗಂಧರ್ವಾ ನರ್ತಕಾಃ ಪರೇ ।
ಕೇಚಿದ್ ವಾದ್ಯರತಾ ನಿತ್ಯಂ ಚಾರಣಾ ಗುಪ್ತಚಾರಕಾಃ ॥

ಹೀಗೆ ಯುದ್ಧವಿದ್ಯೆ, ಅಶ್ವವಿದ್ಯೆ, ರಾಜನೀತಿ, ಚಾಕ್ಷುಷೀವಿದ್ಯೆ, ಮಾಯಾ ವಿದ್ಯೆ, ಸಂಗೀತ, ನಾಟ್ಯ, ವಾದ್ಯ ಮುಂತಾದ ಸಕಲ ಕಲೆಗಳಲ್ಲಿ ನಿಪುಣರಾಗಿದ್ದು ಆ ಕಲೆಗಳಲ್ಲಿ ಆನಂದಪಡುವವರಾದ್ದರಿಂದ ಗಂಧ–ಆನಂದವನ್ನು, ಅರ್ವಂತಿ–ಹೊಂದುವವರು ಎಂಬ ಅರ್ಥದಲ್ಲಿ ಎಲ್ಲ ಗಂಧರ್ವರೂ ಗಂಧರ್ವರೆನಿಸಿದ್ದಾರೆ.

ಗಂಧರ್ವರೆಲ್ಲರೂ ಸ್ಫುರದ್ರೂಪಿಗಳು, ವಿಲಾಸಿಗಳು. ಸುಗಂಧದ್ರವ್ಯಗಳನ್ನೂ ವಿಚಿತ್ರ ದಿವ್ಯ ವಸ್ತ್ರಾಭರಣಗಳನ್ನೂ ಬಯಸುವವರು.

ನಾಸಿಕಾಗ್ರಾಚ್ಚ ಗಂಧರ್ವಾನ್ ಸುಚಿತ್ರಾಂಬರ ವಾಸಸಃ ।

ಎಂದು ಹರಿವಂಶ ಹೇಳುವಂತೆ ಆದಿ ಸೃಷ್ಟಿಯಲ್ಲಿ ಭಗವಂತನ ನಾಸಿಕೆಯಿಂದ ಉದಿಸಿ ಬಂದವರಾದುದರಿಂದ ಗಂಧ-ಸುಗಂಧದ್ರವ್ಯಗಳನ್ನು, ಅರ್ವಂತಿ-ಹೊಂದುತ್ತಾರೆ ಎಂಬ ಅರ್ಥದಲ್ಲಿಯೂ ಎಲ್ಲ ಗಂಧರ್ವರೂ 'ಗಂಧರ್ವ'ರು. ಗಂಧರ್ವರ ಸ್ವಭಾವವನ್ನು ಗಂಧರ್ವಾವೇಶ ಹೊಂದಿದ ಮನುಷ್ಯರನ್ನು ಕಂಡು ಊಹಿಸಬಹುದು. ಸುಶ್ರುತನು ಹೇಳುತ್ತಾನೆ–

ಹೃಷ್ಟಾತ್ಮಾ ಪುಲಿನವನಾಂತರೋಪಸೇವೀ
ಸ್ವಾಚಾರಃ ಪ್ರಿಯ ಪರಿಗೀತ ಗಂಧಮಾಲ್ಯಃ ।
ನೃತ್ಯನ್ವಾ ಪ್ರಹಸತಿ ಚಾರು ಚಾಲ್ಪಶಬ್ದಂ
ಗಂಧರ್ವ ಗ್ರಹ ಪರಿಪೀಡಿತೋ ಮನುಷ್ಯಃ ॥

'ಗಂಧರ್ವಾವೇಶ ಹೊಂದಿದ ಮನುಷ್ಯನು ಸದಾ ಹರ್ಷಚಿತ್ತ, ಮರಳು ಪ್ರದೇಶದಲ್ಲಿಯೋ ಉಪವನಗಳಲ್ಲಿಯೋ ವಿಹರಿಸುವವ, ಸದಾಚಾರಿ, ಸಂಗೀತ ಗಂಧಮಾಲ್ಯಾದಿಗಳನ್ನು ಬಯಸುತ್ತಾನೆ ಕೆಲವೊಮ್ಮೆ ನರ್ತನ ಮಾಡುತ್ತಾನೆ. ಸಣ್ಣ ಧ್ವನಿಯಲ್ಲಿ ಸುಂದರವಾದ ನಗು ನಗುತ್ತಾನೆ'.

ಗಂಧರ್ವರಲ್ಲಿ ಕುಲಗಳು ಎರಡೇ. ಕಶ್ಯಪಮುನಿಗೆ ಪ್ರಾಧಾದೇವಿಯಲ್ಲಿ ಜನಿಸಿದವರು ಪ್ರಾಧೇಯರು ಮತ್ತು ಆ ಮುನಿಗೇ ಮುನಿದೇವಿಯಲ್ಲಿ ಜನಿಸಿದವರು ಮೌನೇಯರು ಎಂದು.

ಗಂಧರ್ವರಲ್ಲಿ ಜಾತಿಗಳು ಎರಡು, ದೇವಗಂಧರ್ವರು ಮತ್ತು ಮನುಷ್ಯ ಗಂಧರ್ವರು ಎಂದು. ನೇರವಾಗಿ ದೇವತೆಗಳಿಂದಲೇ ಆಜ್ಞೆ ಪಡೆಯುವವರು ದೇವ ಗಂಧರ್ವರು. ಆ ದೇವಗಂಧರ್ವರ ಮೂಲಕ ದೇವತೆಗಳ ಆಜ್ಞೆ ಪಡೆವವರು ಮನುಷ್ಯ ಗಂಧರ್ವರು. ದೇವಗಂಧರ್ವರು ಹುಟ್ಟಿನಿಂದಲೇ ಗಂಧರ್ವರು, ಮನುಷ್ಯ ಗಂಧರ್ವರು ಮನುಷ್ಯರಾಗಿದ್ದು ಪುಣ್ಯಕರ್ಮದಿಂದ ಅಂದರೆ, ಸಂಗೀತ ನಾಟ್ಯಕಲೆಗಳಿಂದ ಸಂಪಾದಿಸಿದ ಧನವನ್ನು ಸತ್ಪಾತ್ರರಿಗೆ ದಾನಮಾಡಿ ಗಂಧರ್ವ ಪದವಿಯನ್ನು ಗಳಿಸಿಕೊಂಡವರು.

ದೇವ ಗಂಧರ್ವರಲ್ಲಿ ತುಂಬುರು, ಚಿತ್ರರಥ, ಧೃತರಾಷ್ಟ್ರ, ಹಾಹಾ, ಹೂಹೂ ಎಂದು ಮುಂತಾಗಿ ಎಂಟು ಮಂದಿ ಪ್ರಧಾನರು. ಇವರು ಹಿಂದೆ ಹೇಳಿದ ಆರು ಮಂದಿ ಅಪ್ಸರೆಯರಿಗೆ ಸಮಾನರು. ಇನ್ನು ನೂರುಮಂದಿ ದೇವಗಂಧರ್ವರು ಹಿಂದೆ ಹೇಳಿದ ನೂರುಮಂದಿ ಅಪ್ಸರೆಯರಿಗೆ ಸಮಾನರು. ಬೇರೆ ಎಲ್ಲ ಗಂಧರ್ವರೂ ಉಳಿದ ಅಪ್ಸರೆಯರಿಗೆ ಸಮಾನರು ಮನುಷ್ಯ ಗಂಧರ್ವರೂ ಅಂಬರೀಷ ಪರೀಕ್ಷಿತ್ ಮುಂತಾದ ಚಕ್ರವರ್ತಿಗಳಿಗಿಂತ ಉತ್ತಮರು. ಈ ತಾರತಮ್ಯ ಮೋಕ್ಷದಲ್ಲಿಯೂ ಉಂಟು.

ಇಂಥ ಗಂಧರ್ವರೊಡನೆ ಅಪ್ಸರೆಯರು ಹಾಡುತ್ತ ಕುಣಿದರು. ಶ್ರೀಹರಿಯ ಮೇಲೆ ದೇವತರುವಿನ ಹೂಮಳೆಗರೆದರು. ದೇವತರುವೆಂದರೆ ಕಲ್ಪವೃಕ್ಷವೆ ಎಂದಲ್ಲ. ದೇವತರುಗಳು ಐದು– ಮಂದಾರ, ಪಾರಿಜಾತ, ಸಂತಾನ, ಕಲ್ಪವೃಕ್ಷ ಮತ್ತು ಹರಿಚಂದನ ಎಂದು. ಇವುಗಳಲ್ಲಿ ಪಾರಿಜಾತ ಕ್ಷೀರಸಮುದ್ರದಿಂದ ಉದಿಸಿತು. ಎಲ್ಲ ಐದು ವೃಕ್ಷಗಳೂ ಕರ್ಮಜದೇವತೆಗಳು.

ನಮಸ್ತೇ ಕಲ್ಪವೃಕ್ಷಾಯ ಚಿಂತಿತಾರ್ಥ ಪ್ರದಾಯ ಚ ।
ವಿಶ್ವಂಭರಾಯ ದೇವಾಯ ನಮಸ್ತೇ ವಿಶ್ವಮೂರ್ತಯೇ ॥

'ಲೋಕಕ್ಕೆ ಪೋಷಣೆ ನೀಡುವ, ಲೋಕದಲ್ಲೆಲ್ಲ ವ್ಯಾಪಿಸಿ ನಿಂತ, ಬಯಸಿದ್ದನ್ನೆಲ್ಲ ನೀಡುವ ಕಲ್ಪವೃಕ್ಷವೆ, ನಿನಗಿದೋ ನಮಸ್ಕಾರ' ಎಂದು ದಾನಸಾಗರ ಗ್ರಂಥದಲ್ಲಿ ಮಂತ್ರವಿದೆ. 'ನಮೋ ವೃಕ್ಷೇಭ್ಯಃ' ಎಂದು ವೇದಮಂತ್ರವೂ ಹೇಳುತ್ತದೆ.

**ಮುತ್ತು ರತ್ನಗಳಿಂದ ತೆತ್ತಿಸಿದ ಹಸೆಯ ನವ**
**ರತ್ನ ಮಂಟಪದಿ ಪಸರಿಸಿ ।**
**ರತ್ನ ಮಂಟಪದಿ ಪಸರಿಸಿ ಕೃಷ್ಣನ**
**ಮುತ್ತೈದೆಯರೆಲ್ಲ ಕರೆದರು ॥**

ಮುತ್ತು ರತ್ನಗಳಿಂದ ಖಚಿತವಾದ ಹಸೆಯನ್ನು ನವರತ್ನ ಖಚಿತ ಮಂಟಪದಲ್ಲಿ ಹಾಸಿ ಕೃಷ್ಣನನ್ನು ಮುತ್ತೈದೆಯರೆಲ್ಲರೂ ಕರೆದರು.

ನವರತ್ನ ಮಂಟಪವೆಂದರೆ ಹೀಗಿರುತ್ತದೆ–

ಉತ್ತಪ್ತೋಜ್ವಲ ಕಾಂಚನೇನ ರಚಿತಂ ತುಂಗಾಂಗ ರಂಗಸ್ಥಲಂ
ಶುದ್ಧ ಸ್ಫಾಟಿಕ ಭಿತ್ತಿಕಾವಿಲಸಿತೈಃ ಸ್ತಂಭೈಶ್ಚ ಹೈಮೈಃ ಶುಭೈಃ ।
ದ್ವಾರೈಶ್ಚಾಮರ ರತ್ನರಾಜಖಚಿತೈಃ ಶೋಭಾವಹಂ ಮಂಡಿತೈಃ
ತತ್ರಾನ್ಯೈರಪಿ ಶಂಖ ಪದ್ಮಧವಲೈಃ ಪ್ರಭ್ರಾಜಿತಂ ಸ್ವಸ್ತಿಕೈಃ ॥

ಮುಕ್ತಾಜಾಲವಿಲಂಬಿ ಮಂಟಪಯುತಂ ವಜ್ರೈಶ್ಚ ಸೋಪಾನಕೈಃ
ನಾನಾ ರತ್ನ ವಿನಿರ್ಮಿತೈಶ್ಚ ಕಲಶೈರತ್ಯಂತ ಶೋಭಾವಹಮ್ ।
ಮಾಣಿಕ್ಯೋಜ್ಜ್ವಲ ದೀಪದೀಪ್ತ ವಿಲಸಲ್ಲಕ್ಷ್ಮೀ ವಿಲಾಸಾಸ್ಪದಂ
ಧ್ಯಾಯೇನ್ಮಂಟಪಮರ್ಚನೇಷು ಸಕಲೈರೇವಂವಿಧೈಃ ಸಾಧಕೈಃ ॥

ಸಮ್ಮಾರ್ಜನ್ಯೈ ರಂಗವಲ್ಲೀ ಧ್ವಜಕೇತಕ ತೋರಣೈಃ ।
ವಿತಾನೈರಿಕ್ಷುಕದಲೀ ಪೂರ್ಣಕುಂಭಾಂಕುರಾದಿಭಿಃ ॥
ಗೀತವಾದಿತ್ರ ನೃತ್ಯೈಶ್ಚ ಪುರಾಣಪಠನೈಃ ಶುಭೈಃ ।
ಶೋಭಮಾನಂ ಮಹಾಪುಣ್ಯಂ ವರ್ಧಮಾನಂ ಮನೋಹರಮ್ ॥

ಪುಟಕ್ಕಿಟ್ಟು ಹೊಳೆವ ಚಿನ್ನದಿಂದ ಮಾಡಿದ ಎತ್ತರದ ಪೀಠವಿರುವ ಮಂಟಪ. ನಿರ್ಮಲಸ್ಫಟಿಕದ ಗೋಡೆಗಳು, ಚಿನ್ನದ ಕಂಬಗಳು, ಚಾಮರ ಭೂಷಿತ ರತ್ನಖಚಿತ ದ್ವಾರಗಳು. ಶಂಖ ಪದ್ಮಗಳಿಂದ ಯುಕ್ತವಾದ ಬಿಳಿಯಾದ ಸ್ವಸ್ತಿಕಗಳು, ಮೇಲಿಂದ ಕೆಳಗೆ ಇಳಿ ಬಿಟ್ಟಿರುವ ಮುತ್ತಿನ ಸರಗಳು. ವಜ್ರದ ಪಾವಟಿಕೆಗಳು, ನಾನಾ ರತ್ನನಿರ್ಮಿತ ಕಲಶಗಳು, ಇವುಗಳಿಂದ ಕೂಡಿದ್ದು ಮಾಣಿಕ್ಯದ ಉಜ್ವಲ ದೀಪ ಪ್ರಕಾಶದಿಂದ ಹೊಳೆವ ಸೌಂದರ್ಯಲಕ್ಷ್ಮಿಯ ವಿಲಾಸ ಸ್ಥಾನವಾಗಿರುತ್ತದೆ. ನೆಲ ಸಾರಿಸಿ ರಂಗೋಲಿ ಹಾಕಿದೆ. ಧ್ವಜ ಪತಾಕೆ ತೋರಣ ಮೇಲುಕಟ್ಟು ಬಾಳೆಗಿಡ

ಪೂರ್ಣಕಲಶ ಅಂಕುರ ಮುಂತಾದ ಮಂಗಳ ವಸ್ತುಗಳನ್ನಿರಿಸಿದೆ. ಮಂಗಳ ಗೀತವಾದ್ಯ ನೃತ್ಯ ಪುರಾಣಪಠನಗಳಿಂದ ಶೋಭಿಸುತ್ತ ಮಹಾಪುಣ್ಯಕರವಾಗಿದ್ದು ಮನೋಹರವಾಗಿರುತ್ತದೆ. ಭಗವಂತನ ಆರಾಧನೆಯ ಕಾಲದಲ್ಲಿ ಹೀಗೆ ಮಂಟಪವನ್ನು ಧ್ಯಾನಿಸಿ ಭಗವಂತನಿಗೆ ಅರ್ಪಿಸಬೇಕು.

ವಿವಾಹ ಕಲ್ಯಾಣೋತ್ಸವರೂಪವಾದ ಆರಾಧನೆಯಾದುದುದರಿಂದ ಇದೀಗ ಲಕ್ಷ್ಮೀನಾರಾಯಣರಿಗೆ ನವರತ್ನ ಮಂಟಪವನ್ನು ಸಮುದ್ರರಾಜ ಅರ್ಪಿಸಿದ್ದಾನೆ. ಆ ಮಂಟಪದಲ್ಲಿ ಚಿನ್ನದ ಹಸೆಮಣೆಯ ಮೇಲೆ ರತ್ನಪೀತಾಂಬರದ ಮೇಲು ಹಾಸು ಹಾಸಿ ಅದರ ಮೇಲೆ ಕುಳಿತುಕೊಳ್ಳಲು ನವದಂಪತಿಗಳನ್ನು ಮುತ್ತೈದೆಯರು ಕರೆಯುತ್ತಿದ್ದಾರೆ. ಆರಾಧ್ಯ ದೇವತೆಗೆ ಆಸನ ಕೊಡುವುದರಿಂದ ಭುಕ್ತಿ ಮುಕ್ತಿ ಫಲ ಎಂಥ ಆಸನವೆಂದರೆ–

ಶಿಲಾಮಯಂ ಮಣಿಮಯಂ ತಥಾ ರತ್ನಮಯಂ ಮತಮ್ ।
ಆಸನಂ ದೇವತಾಭ್ಯಸ್ತು ಭುಕ್ತ್ಯೈ ಮುಕ್ತ್ಯೈ ಸಮುತ್ಸೃಜೇತ್ ॥

"ಸ್ಫಟಿಕಾದಿ ಶಿಲಾಮಯ ಮಣಿಮಯ ರತ್ನಮಯವಾದ ತನ್ನ ಮನಸ್ಸಿಗೊಪ್ಪುವ ರೀತಿಯ ಆಸನವನ್ನು ದೇವತೆಗಳಿಗಿತ್ತರೆ ಭುಕ್ತಿ ಮುಕ್ತಿಗಳೆರಡೂ ಕರಗತವಾಗುವುವು".

ಆರಾಧ್ಯ ದೇವತೆಗೆ ಮಾತ್ರವಲ್ಲ ಆರಾಧಕನಿಗೂ ಕುಳಿತುಕೊಳ್ಳಲು ಬರಿನೆಲ ಮಣೆ ಮುಂತಾದುವು ನಿಷಿದ್ಧ–

ವಂಶಾಸನೇ ದರಿದ್ರಃ ಸ್ಯಾತ್ ಪಾಷಾಣೇ ವ್ಯಾಧಿಸಂಭವಃ ।
ಧರಣ್ಯಾಂ ದುಃಖಮಾಪ್ನೋತಿ ದೌರ್ಭಾಗ್ಯಂ ದಾರುಕಾಸನೇ ॥
ತೃಣಾಸನೇ ಯಶೋಹಾನಿಃ ಪಲ್ಲವೇ ಚಿತ್ತವಿಭ್ರಮಃ ।
ಕುಶಾಸನೇ ಸರ್ವಸಿದ್ಧಿಃ ಕಂಬಲೇ ದುಃಖಮೇವ ಚ ॥
ಕೃಷ್ಣಾಜಿನೇ ಜ್ಞಾನಸಿದ್ಧಿಃ ಮೋಕ್ಷಃ ಸ್ಯಾದ್ ವ್ಯಾಘ್ರಚರ್ಮಣಿ ॥

ಬಿದಿರಿನ ಆಸನದಲ್ಲಿ ದಾರಿದ್ರ್ಯ. ಕಲ್ಲಿನ ಮೇಲೆ ವ್ಯಾಧಿ, ಬರಿನೆಲದ ಮೇಲೆ ದುಃಖ, ಬರಿ ಮಣೆಯಲ್ಲಿ ದೌರ್ಭಾಗ್ಯ, ಹುಲ್ಲಿನ ಚಾಪೆಯಲ್ಲಿ ಯಶೋಹಾನಿ, ಚಿಗುರೆಲೆ ಮೇಲೆ ಚಿತ್ತವಿಭ್ರಮ, ದರ್ಭಾಸನದಲ್ಲಿ ಸರ್ವ ಸಿದ್ಧಿ, ಕಂಬಳಿಯಲ್ಲಿ ದುಃಖ, ಕೃಷ್ಣಾಜಿನದಲ್ಲಿ ಜ್ಞಾನಸಿದ್ಧಿ, ವ್ಯಾಘ್ರಾಜಿನದಲ್ಲಿ ಮೋಕ್ಷ ಪ್ರಾಪ್ತಿ.

ಭಗವದ್ಗೀತೆಯಲ್ಲಿ 'ಚೈಲಾಜಿನ ಕುಶೋತ್ತರಂ' ದರ್ಭೆಯ ಮೇಲೆ ಕೃಷ್ಣಾಜಿನ, ಅದರ ಮೇಲೆ ಬಟ್ಟೆ ಹಾಸಿರಬೇಕೆನ್ನಲಾಗಿದೆ.

ಆರಾಧ್ಯ ದೇವತೆಗೆ ನೀಡುವಂಥ ಆಸನವೆಲ್ಲ ಆರಾಧಕನಿಗೂ ಯೋಗ್ಯವೆ-

ಪೂರ್ವೋಕ್ತಂ ಯಚ್ಚ ದೇವೇಭ್ಯ ಆಸನಂ ಪರಿಕೀರ್ತಿತಮ್ ।
ತತ್ ಸರ್ವಮಾಸನಂ ಶಸ್ತಂ ಪೂಜಾಕರ್ಮಣಿ ಸಾಧಕೇ ॥

ವಸ್ತುತಃ 'ಅನಂತ ವೈಭವದಿ ಕುಳಿತ ಕೃಷ್ಣನ ನಾಲ್ಕು ದಿನದ ಉತ್ಸವವ ನಡೆಸಿದರು' ಎಂದು ಮುಂದೆ ಹೇಳುವಂತೆ ನಾಲ್ಕು ದಿನದ ವಿವಾಹ ವ್ರತ ಕೈಗೊಂಡು ದಾಕ್ಷಾಯಣೀ ಪೂಜೆ ಮುಂತಾದುವನ್ನು ವಧೂವರರು ಮಾಡಬೇಕಾಗಿರುವುದರಿಂದ ಅವರೂ ಸಾಧಕರೆ ಎನ್ನಬಹುದು. ಆದ್ದರಿಂದ ಅವರು ವಂಶಾಸನಾದಿಗಳಲ್ಲಿ ಕುಳಿತುಕೊಳ್ಳುವಂತಿಲ್ಲ.

ಹೀಗೆ ರತ್ನ ಮಂಟಪದಲ್ಲಿ ಚಿನ್ನದ ಹಸೆಮಣೆ, ಅದಕ್ಕೆ ಮುತ್ತಿನ ಮೇಲ್ಹಾಸು ಬೇಕು. ಇವೆಲ್ಲವೂ ಮಂಗಳಕರ ಮಂಗಳ ದೇವತೆಯೆನಿಸಿದ ರಮೆ ತಾನೇ ಮಂಟಪ ಮಣಿ ಮುಂತಾದವುಗಳಲ್ಲಿ ಅವೇ ಆಕಾರದ ಚಿನ್ಮಯ ಸ್ವರೂಪದಿಂದ ಸನ್ನಿಹಿತಳಾಗಿದ್ದು ಶ್ರೀಹರಿಯನ್ನು ಹೊರುತ್ತಾಳೆ. ಭಗವಂತನ ಆರಾಧನೆಯಲ್ಲಿ ನಾವು ಧ್ಯಾನಿಸುವ ರತ್ನಮಂಟಪ ಮತ್ತು ಅದರಲ್ಲಿರುವ ಚಿತ್ರಾಸನಗಳೂ ಲಕ್ಷ್ಮೀಸ್ವರೂಪವೇ.

ಹಸೆಗೆ ಕರೆಯುವ ಮುತ್ತೈದೆಯರು ಇಲ್ಲಿ ಭಾರತಿ ಸರಸ್ವತಿ ಮುಂತಾದವರು. ಇವರು ಮುತ್ತೈದೆಯರು, ಅಂದರೆ ಮುದಿ ಐದೆಯರು. ವೃದ್ಧಸುಮಂಗಲಿಯರು. ನಿರ್ಜರರೆನಿಸಿದ ದೇವತೆಗಳು ವಯಸ್ಸಿನಲ್ಲಿ ವೃದ್ಧರಾಗುವುದೆ ಇಲ್ಲ, ಅವರು ಜ್ಞಾನವೃದ್ಧರು.

ವೃದ್ಧ ಸುಮಂಗಲಿಯರ ಹರಕೆ ಆಶೀರ್ವಾದಗಳು ನವದಂಪತಿಗಳಿಗೆ ಶುಭಕರವೆಂದು ಹಿಂದಿನಿಂದ ಹಸೆಗೆ ಕರೆವ ಸಂಪ್ರದಾಯ ಬಂದಿದೆ. ಹಸೆಗೆ ಕರೆದರೆಂದರೆ ಹಸೆಗೆ ಕರೆಯುವ ಹಾಡುಗಳನ್ನು ಹಾಡಿದರು. ಇಂದು ಮದುವೆಗಳಲ್ಲಿ ಈ ಸಂಪ್ರದಾಯಾಚರಣೆಗಳೆಲ್ಲ ನಶಿಸಿ ಹೋಗಿವೆ. ಹಿಂದೆ ಐದು ದಿನಗಳ ಕಾಲ ಸಂಭ್ರಮದಿಂದ ನಡೆಯುತ್ತಿದ್ದ ಮದುವೆ ಇಂದು ಚಿಟಿಕೆ ಚಪ್ಪರವಾಗಿದೆ. ಇದೂ ಒಂದು ಮದುವೆಯೆ ? ಎನ್ನುವಂತಾಗಿದೆ. ತಾಳಿ ಕಟ್ಟಿದರೆ ಮುಗಿಯಿತು ಎಂದುಕೊಳ್ಳುತ್ತಾರೆ. ಹಿಂದೆ ಮದುವೆಯ ಹಾಡುಗಳನ್ನು ಚೆನ್ನಾಗಿ ಹಾಡುವವರಿಗೆ ಊರಲ್ಲಿ ವಿಶೇಷ ಗೌರವ, ಅವರಿಗೆ ಮದುವೆಗಳಲ್ಲಿ ವಿಶೇಷ ಆಹ್ವಾನ. ಹಾಡು ಹೇಳಿಸಿ ಸನ್ಮಾನಿಸುತ್ತಿದ್ದರು. ಮುತ್ತೈದೆಯರು ಹಾಡಿ ಹರಸಿದರೆ ಮದು ಮಕ್ಕಳಿಗೆ ಒಳ್ಳೆಯದಾಗುತ್ತದೆ ಎಂಬ ನಂಬಿಕೆ ಮಾತ್ರವಲ್ಲ, ಹಾಡುಗಳನ್ನು ಕೇಳಿ, ಆನಂದಿಸುವ ಜನರೂ ಇದ್ದರು. ಅದರಿಂದ ಹಾಡುವವರಿಗೂ ಉತ್ಸಾಹ

ಹಾಡುವವರು ಪ್ರತಿಯೊಬ್ಬರೂ ತಾವು ಹೆಚ್ಚು ತಾವು ಹೆಚ್ಚೆಂದು ಸ್ಪರ್ಧೆಯಿಂದ ಹಾಡುತ್ತಿದ್ದರು. ಹಾಡಲು ಬಾರದವರೂ ಸೋಬಾನೆ, ಹಸೆಗೆ ಬಾ ಎಂದು ಮುಂತಾಗಿ ಹಿಮ್ಮೇಳ ಸೇರಿಸಿ ಈ ಹಾಡಿಗೆ ಕಳೆ ಬರಿಸುತ್ತಿದ್ದರು

'ಕೃಷ್ಣನ ಮುತ್ತೈದೆಯರೆಲ್ಲ ಕರೆದರು' ಎಂದರೆ ಕೃಷ್ಣನನ್ನೇ ಅಲ್ಲ ಜೊತೆಗೆ ರಮೆಯುನ್ನೂ ಕರೆದರು ಮದುಮಕ್ಕಳನ್ನು ಇಬ್ಬರನ್ನು ಜೊತೆಗೆ ಕರೆಯಬೇಕು. ಆದ್ದರಿಂದಲೇ ಇಲ್ಲಿಯೇ ಮುಂದೆ ಹಸೆಗೆ ಕರೆವ ಹಾಡಿನಲ್ಲಿ 'ಶ್ರೀನಾರಿಯೊಡನೆ ಹಸೆಗೆ ಬಾ' ಎಂದಿದೆ.

ಕೆಲವು ಸಂಪ್ರದಾಯದ ಹಾಡುಗಳಲ್ಲಿ ಮದುಮಗಳನ್ನೆ ಮದುಮಗನೊಂದಿಗೆ ಕರೆಯುವುದುಂಟು. ಇದರಲ್ಲಿಯೂ ಅನೌಚಿತ್ಯವೇನಿಲ್ಲ. ಉದಾ:-

ಹಸೆಗೆದ್ದು ಬಾರೆ ಬಿಸಜಾಕ್ಷಿ ಮೋಹನೆ ॥ ಪ ॥
ವಾಸುಕಿ ಶಯನ ಶ್ರೀವಾಸುದೇವನ ಪ್ರಿಯಳೆ ॥ ಅ ಪ ॥
ಕ್ಷೀರಸಾಗರವನು ಸುರರು ಅಸುರರು ಮಥಿಸೆ ।
ಸುರರನು ಪೊರೆಯಲು ವಾರಿಧಿಯೊಳುದಿಸಿದೆ ॥ ೧ ॥
ಪತಿಯ ವಕ್ಷಸ್ಥಳವ ಹಿತದಿ ನೀ ಸೇರುತ ।
ಪತಿತರ ಪೊರೆಯುವ ಸತಿ ಶಿರೋಮಣಿಯೆ ॥ ೨ ॥
ಕರಿಗಿರಿ ನಿಲಯ ಶ್ರೀಹರಿಯ ಪಟ್ಟದ ರಾಣಿ ।
ನಿರುತವು ಸ್ಮರಿಸಲು ಕರುಣದಿ ಪೊರೆಯುವೆ ॥ ೩ ॥

— ೭೭ —

**ಶೇಷಶಯನನೆ ಬಾ ದೋಷ ದೂರನೆ ಬಾ**
**ಭಾಸುರ ಕಾಯ ಹರಿಯೆ ಬಾ ।**
**ಭಾಸುರಕಾಯ ಹರಿಯೆ ಬಾ ಶ್ರೀಕೃಷ್ಣ ವಿ-**
**ಲಾಸದಿಂದೆಮ್ಮ ಹಸೆಗೆ ಬಾ ॥**

ಶೇಷಶಯನನೂ ದೋಷರಹಿತನೂ ಉಜ್ವಲ ಶರೀರಿಯೂ ಆದ, ಹರಿ ಕೃಷ್ಣ ಮುಂತಾದ ನಾಮಗಳಿಂದ ಕರೆಸಿಕೊಳ್ಳುವ ಹರಿಯೇ; ನಾವು ನೀಡುವ ಹಸೆ ಮಣೆಯನ್ನೇರಲು ಲೀಲೆಯಿಂದ ಬಾ.

ಹಸೆಮಣೆಯ ಮೇಲೆ ನೀನು ಕುಳಿತರೂ ಆ ಹಸೆಮಣೆಯ ಮೇಲೆ ಯೋಗಪೀಠ ರೂಪನಾದ ಶೇಷ, ಅವನಲ್ಲಿ ರಮಾರೂಪ ಚಿತ್ರಾಸನದ ಮೇಲೆಯೆ

ನೀನು ಕುಳಿತುಕೊಳ್ಳುವವ ಎನ್ನುವ ಅಭಿಪ್ರಾಯದಿಂದ 'ಶೇಷಶಯನ' ಎಂದು ಮೊದಲಿಗೇ ಹೇಳಿದೆ. ಆದ್ದರಿಂದಲೇ ಸಾಧಕರು ವಿಷ್ಣುಪೂಜೆಯಲ್ಲಿ ರತ್ನ ಮಂಟಪಧ್ಯಾನದ ಬಳಿಕ

ಭಗವತಃ ಶ್ರೀ ಲಕ್ಷ್ಮೀನಾರಾಯಣಸ್ಯ
ಯೋಗಪೀಠಾತ್ಮನೇ ಶ್ರೀಮದನಂತಾಯ ನಮಃ ।
ರಮಾರೂಪ ಚಿತ್ರಾಸನಾಯ ನಮಃ ॥

ಎಂದು ಧ್ಯಾನಿಸುತ್ತಾರೆ.

ಶ್ರೀಹರಿಗೆ ಶೇಷನು ಶಯ್ಯಾರೂಪದಿಂದ ಸೇವೆ ಮಾಡುವ ವೈಖರಿ ಹೀಗಿದೆ-

ದಕ್ಷಿಣ ದಿಕ್ಕಿನ ಹೆಡೆ ಹರಿಗೆ ತಲೆದಿಂಬು. ಉತ್ತರ ಫಣವೆ ಕಾಲುಗಳಿಗೆ ದಿಂಬು. ಪಶ್ಚಿಮದ ಫಣವೆ ಬೀಸಣಿಗೆ. ಆದರಿಂದ ಗಾಳಿ ಬೀಸುತ್ತಾನೆ, ಹರಿಯ ಶಂಖ, ಚಕ್ರ, ನಂದಕ ಖಡ್ಗ, ಎರಡು ಬತ್ತಳಿಕೆಗಳು, ಗರುಡವಾಹನ ಇವಿಷ್ಟನ್ನು ಈಶಾನ್ಯದ ಫಣದಲ್ಲಿ ಹೊತ್ತುಕೊಳ್ಳುತ್ತಾನೆ. ಗದಾ ಪದ್ಮ ಶಾಂರ್ಗ ಧನುಸ್ಸು ಮತ್ತು ಇತರ ನಾನಾವಿಧದ ಆಯುಧಗಳೆಲ್ಲವನ್ನು ಆಗ್ನೇಯದ ಫಣದಲ್ಲಿ ಹೊತ್ತುಕೊಳ್ಳುತ್ತಾನೆ. ತನ್ನ ಮೈಯನ್ನು ಹಾಸಿಗೆಯನ್ನಾಗಿ ಮಾಡಿ ಭೂತ ಭವ್ಯ ಜಗನ್ನಾಥನೂ ಪರಾಪರ ಪತಿಯೂ ಆದ ಶ್ರೀಹರಿಯನ್ನು ಶೇಷನು ಧರಿಸುತ್ತಾನೆ ಎಂದು ಕಾಲಿಕಾ ಪುರಾಣ ಹೇಳಿದೆ.

ಶ್ರೀಹರಿ ಶೇಷಶಾಯಿ ಎಂದರೆ ಶೇಷಸಿಂಹಾಸನದ ಮೇಲೆ ಸುಖಾಸನದಲ್ಲಿ ಕುಳಿತವನು ಎಂದೂ ಅರ್ಥ, ಶಯನವೆಂದರೆ ಮಲಗುವುದೇ ಅಲ್ಲ-

ಪರ್ಯಂಕೇ ಪೃಥಿವೀಪಾಲ ದಿವ್ಯಾಸ್ತರಣ ಸಂಸ್ಕೃತೇ ।
ಉಪವಿಷ್ಟಂ ಮಹಾರಾಜ ಬಾಲಂ ಪಶ್ಯಾಮಿ ಭಾರತ ॥

ಮಾರ್ಕಂಡೇಯರು ಪ್ರಳಯ ಸಮುದ್ರದಲ್ಲಿ ಆಲದ ಮರದ ಕೊಂಬೆಗಳಲ್ಲಿ ಒಂದು ಸಿಂಹಾಸನದ ಮೇಲೆ ಕುಳಿತಿದ್ದ ಒಬ್ಬ ಬಾಲಕನನ್ನು ಕಂಡರಂತೆ. ಒಡನೆ ತನಗೆ ತಾನೇ ಪ್ರಶ್ನಿಸಿಕೊಂಡರು-

ಕಥಂ ತ್ವಯಂ ಶಿಶುಃ ಶೇತೇ ಲೋಕೇ ನಾಶಮುಪಾಗತೇ ?
'ಲೋಕವೆ ನಾಶ ಹೊಂದಿರುವಾಗ ಈ ಮಗು ಹೇಗೆ ಶಯನ ಮಾಡುತ್ತಿದೆ ?'

ಇಲ್ಲಿ ಶಯನವೆಂದರೆ ಸುಖಾಸೀನನಾಗಿರುವುದು ಎಂಬ ಅರ್ಥ ಸ್ಪಷ್ಟ, ಆದ್ದರಿಂದ ಶೇಷಶಯನ ಎಂದರೆ ಶೇಷನಲ್ಲಿ ಕುಳಿತವ ಅನಂತಾಸನ. ಆದ್ದರಿಂದ

ಹರಿಯ ಶೇಷಾಸನ ಇನ್ನೊಬ್ಬರಿಗೆ ಎಂದೂ ದೊರಕದು ಎಂದು ಹೇಳುವ ಸಂದರ್ಭದಲ್ಲಿ ಯುಕ್ತಿಮಲ್ಲಿಕೆ ಹೇಳುತ್ತದೆ–

ನ ರಾಜವಾಹನಂ ಕಾಂಕ್ಷೇತ್ ನ ತತ್ಸಿಂಹಾಸನಂ ಭಟಃ ।
ಗರುಡಾರೂಢತಾ ಶೇಷಶಾಯಿತಾ ತತ್ ಕದಾಪಿ ನ ॥

'ರಾಜನಿಗೆ ಸೇವಕನಲ್ಲಿ ಎಷ್ಟೇ ಅಭಿಮಾನವಿರಲಿ, ಸೇವಕನು ರಾಜನ ವಾಹನವನ್ನು ಬಯಸುವುದಿಲ್ಲ, ರಾಜನ ಸಿಂಹಾಸನವನ್ನೂ ಬಯಸುವುದಿಲ್ಲ. ಆದ್ದರಿಂದ ಹರಿಯ ಗರುಡವಾಹನತ್ವವಾಗಲಿ ಶೇಷಶಾಯಿತ್ವವಾಗಲಿ ಇತರರಿಗೆ ಎಂದೂ ಲಭ್ಯವಾಗುವುದಿಲ್ಲ.'

ಯುಕ್ತಿಮಲ್ಲಿಕೆಯಲ್ಲಿ ಹೇಳುವಂತೆ ಶೇಷಶಾಯಿತ್ವ ಹರಿಯ ಅಸಾಧಾರಣ ಲಕ್ಷಣವಾದುದರಿಂದಲೂ ಅದನ್ನು ಮೊದಲಿಗೆ ಹೇಳಿದೆ ಎನ್ನಬಹುದು. ಚತುರ್ಭುಜ ಶಂಖ ಚಕ್ರಾದಿಗಳು ಹರಿಯ ಅಸಾಧಾರಣ ಲಕ್ಷಣವಲ್ಲ. ಮುಕ್ತರಿಗೆಲ್ಲರಿಗೂ ಆ ಲಕ್ಷಣಗಳಿವೆ. 'ನಿರಂಜನಃ ಪರಮಂ ಸಾಮ್ಯಮುಪೈತಿ' ಎಂದು ಹೇಳಿದ ಪರಮ ಸಾಮ್ಯದಲ್ಲಿ ಚತುರ್ಭುಜ ಶಂಖ ಚಕ್ರಾದಿಗಳೂ ಸೇರಿವೆ.

ಅತಃ ಸಾರೂಪ್ಯ ಮೋಕ್ಷೋಽಯಂ ಸರ್ವೇಷಾಮಪಿ ಯೋಗಿನಾಂ ।

'ಎಲ್ಲ ಮುಕ್ತರಿಗೂ ಸಾರೂಪ್ಯ ಮೋಕ್ಷವಿದ್ದೇ ಇದೆ' ಎಂದು ಯುಕ್ತಿಮಲ್ಲಿಕೆಯಲ್ಲಿ ಹೇಳಿದೆ

ಸರ್ವೇ ಚತುರ್ಬಾಹವ ಉನ್ಮಿಷನ್ಮಣಿ-
ಪ್ರವೇಕ ನಿಷ್ಕಾಭರಣಾಃ ಸುವರ್ಚಸಃ ॥

–ಶ್ರೀಹರಿಯು ಚತುರ್ಮುಖನಿಗೆ ವೈಕುಂಠದರ್ಶನ ಮಾಡಿಸುವ ಸಂದರ್ಭದಲ್ಲಿಯ ಭಾಗವತ ವಚನವಿದು. ಎಲ್ಲ ಮುಕ್ತರೂ ಚತುರ್ಭುಜ ಉಳ್ಳವರು, ಕೇವಲ ಜಯವಿಜಯಾದಿಗಳು ಮಾತ್ರವಲ್ಲ ಎಂದು ಇಲ್ಲಿ ಸ್ಪಷ್ಟ ಹೇಳಿದೆ

ಜಯವಿಜಯಾದಿಗಳು ಮಾತ್ರವಲ್ಲದೆ ಎಲ್ಲ ಮುಕ್ತರಿಗೂ ಚತುರ್ಭುಜ ಸಾಮ್ಯವೆಂದರೆ ತೃಣಾದಿ ಜೀವರಿಗೆ ಹೇಗೆ ? ಅವರಿಗೆ ಕೈಕಾಲುಗಳಿಲ್ಲ ತಾನೆ ? ಎಂಬ ಪ್ರಶ್ನೆ ಇಲ್ಲಿ ಸಹಜ. ಆದರೆ ಹರಿಯ ಮತ್ಸ್ಯಾದಿರೂಪಗಳಿಗೆ ಹೇಗೆ ಎಂದೂ ಕೇಳಬೇಕು. 'ಹಿಂಗಾಲಿಂ ರಕ್ಕಸರ ಒದೆವ' ವಾದಿರಾಜರ ಕುದುರೆಯ ಧ್ಯೇಯರೂಪ 'ಶಂಖಾಕ್ಷ ಪುಸ್ತಕ ಸುಬೋಧಯುತಾಬ್ಜಬಾಹು'ವಾಗಿದ್ದು ಶಂಖ ಅಕ್ಷಮಾಲೆ ಪುಸ್ತಕ

ಮುಂತಾದುವನ್ನು ಹೇಗೆ ಧರಿಸುತ್ತದೆ? ಪರಮಾತ್ಮನದು ಅಚಿಂತ್ಯ ಶಕ್ತಿ ಎನ್ನುವುದಾದರೆ,

ದಧಾನೋ ಹಲಸೌನಂದೌ ಶ್ವೇತವರ್ಣಃ ಕೃತಾಂಜಲಿಃ ।
ಸಹಸ್ರಮೂರ್ಧಾಽದ್ವಿತೀಯ ಕರ್ಣಭೂಷಃ ಪ್ರಿಯಾಯುತಃ ।
ವನಮಾಲೀ ನೀಲವಾಸಾ ಧ್ಯೇಯೋ ವಿಷ್ಣೋಸ್ತು ಪೃಷ್ಠತಃ ॥

'ಸಾವಿರ ಹೆಡೆಗಳಿಂದ ಯುಕ್ತನಾದ ಶೇಷ ಶ್ರೀಹರಿಯ ಹಿಂದೆ ಹಲ ಮುಸಲಗಳನ್ನು ಹಿಡಿದು ಏಕಕುಂಡಲ ವನಮಾಲಾ ನೀಲಾಂಬರ ಧಾರಿಯಾಗಿ ಕೈ ಮುಗಿದು ನಿಂತಿರುವುದು' ಹೇಗೆ? ಶ್ರೀರಾಮಚಂದ್ರ ಪರಂಧಾಮಕ್ಕೆ ಹೊರಟುನಿಂತು,

ಸಮಾಯಾತ ಸಮಾಯಾತ ಯೋ ಯೋ ಮೋಕ್ಷಪದೇಚ್ಛವಃ ।

'ಮೋಕ್ಷಕ್ಕೆ ಬರಲಿಚ್ಛಸುವವರೆಲ್ಲ ಬನ್ನಿ, ಬನ್ನಿ' ಎಂದು ಘೋಷಿಸಿದಾಗ,

ಸರ್ವೇ ಸಮಾಯಯುರಧಾ ತೃಣಮಾ ಪಿಪೀಲಂ ।

'ತೃಣಜೀವರಿಂದಲೂ ಇರುವೆ ಮುಂತಾದ ಜೀವರಿಂದಲೂ ತೊಡಗಿ ಎಲ್ಲ ಮುಮುಕ್ಷುಗಳೂ ರಾಮನ ಹಿಂದೆ ನಡೆದು ಬಂದವು' ಇದು ಹೇಗೆ? ಪರಮಾತ್ಮನ ಅನುಗ್ರಹ ಎನ್ನುವುದಾದರೆ ಮೋಕ್ಷದಲ್ಲಿಯೂ ಹಾಗೇ ತೃಣಾದಿ ಜೀವರು ಚತುರ್ಭುಜ ಶಂಖ ಚಕ್ರಾದಿಗಳನ್ನು ಧರಿಸಲಡ್ಡಿಯಿಲ್ಲ.

ಆದರೆ ಸಾರೂಪ್ಯ ಮುಕ್ತರೆಂದು ಕೆಲವರನ್ನು ಮಾತ್ರವೆ ಕರೆಯುವುದು ಹೇಗೆ ಎಂಬ ಪ್ರಶ್ನೆ ಉಳಿಯುತ್ತದೆ ಇದಕ್ಕೆ ಸಮಾಧಾನ ವೈಕುಂಠವರ್ಣನೆಯಲ್ಲಿದೆ ಸಾಯುಜ್ಯವೆಂದರೆ ಮುಕ್ತ ದೇವತೆಗಳು ಹರಿಯ ಅಂಗಗಳಲ್ಲಿರುವುದು. ಸಾಲೋಕ್ಯವೆಂದರೆ ಶ್ವೇತದ್ವೀಪ ಅನಂತಾಸನ ವೈಕುಂಠಗಳೆಂಬ ಮೂರು ಭಗವಲ್ಲೋಕಗಳಲ್ಲಿ ನೆಲೆಸಿರುವುದು. ಸಾಮೀಪ್ಯವೆಂದರೆ ಈ ಮೂರು ಲೋಕದ ಸಮೀಪ ಕ್ಷೀರಸಾಗರ ಘನೋದಕ ಸಾಂತಾನಿಕ ಲೋಕಗಳಲ್ಲಿರುವುದು. ಈ ಮೂರು ಮುಕ್ತಿಗಳಿಂದ ಹೊರಗಿರುವವರಿಗೆ ಅಂದರೆ ಸತ್ಯಲೋಕಾದಿಗಳಲ್ಲಿರುವ ಮುಕ್ತರಿಗೆ ಸಾರೂಪ್ಯ ಮುಕ್ತಿ ಎಂದು ವ್ಯವಹಾರ. ಎಲ್ಲರಿಗೂ ಸಾರೂಪ್ಯಮುಕ್ತರೆಂದು ಏಕೆ ವ್ಯವಹಾರವಿಲ್ಲ ಎಂದರೆ ಒಂದು ಉದಾಹರಣೆ ವೈಕುಂಠವರ್ಣನೆಯಲ್ಲಿ–

ಮೂರು ಶಾಕವ ಮಾಡಿ ಲವಣ ಕೂಡಿಸಿದರು
ಮೂರು ಶಾಕವೆಂದೆ ಕರೆವರ್ಯೆಸೆ ।

ಬೇರೆ ಬಡಿಸಿದ ಲವಣ ಲವಣವೆಂದೆನಿಸುವುದು
ಈ ರೀತಿಯುಹುದು ಸಾರೂಪ್ಯ ॥

ಹುಳಿ ಪಲ್ಯ ಮುಂತಾದ ಶಾಕ ಪದಾರ್ಥಗಳು ಮೂರಕ್ಕೂ ಲವಣ ಕೂಡಿಸುತ್ತೇವೆ ಆದರೆ ಮೂರನ್ನೂ 'ಶಾಕ ಪದಾರ್ಥವೆನ್ನುತ್ತೇವೆ. ಲವಣವೆನ್ನುವುದಿಲ್ಲ, ಬೇರೆ ಬಡಿಸಿದ ಲವಣವನ್ನೆ ಲವಣವೆನ್ನುತ್ತೇವೆ. ಹಾಗೆಯೇ ಸಾಯುಜ್ಯಾದಿ ಮೂರು ವಿಧದ ಮುಕ್ತಿಯಲ್ಲಿಯೂ ಸಾರೂಪ್ಯ ಉಂಟು, ಆದರೆ ಅವುಗಳನ್ನು ಸಾರೂಪ್ಯ ಮುಕ್ತಿ ಎನ್ನುವುದಿಲ್ಲ. ಮೂರುವಿಧದ ಮುಕ್ತಿಯಿಂದ ಹೊರಗಿರುವ ಮುಕ್ತರನ್ನೆ ಸಾರೂಪ್ಯ ಮುಕ್ತರೆನ್ನುತ್ತೇವೆ.

ಹೀಗೆ ಹರಿಯ ಸಾರೂಪ್ಯ ಸಕಲ ಮುಕ್ತರಿಗೂ ಇದೆ. ಆದರೆ ಶೇಷಶಾಯಿತ್ವ ಗರುಡವಾಹನತ್ವಾದಿಗಳು ಮಾತ್ರ ಹರಿಯಲ್ಲಿಯೆ ಹೊರತು ಇನ್ನಾರಲ್ಲಿಯೂ ಇಲ್ಲ. 'ಜ್ಞಾನೀ ಪ್ರಿಯತಮಃ' 'ಮಮ ಪ್ರಾಣಾ ಹಿ ಪಾಂಡವಾಃ' ಎಂದು ಹೇಳುವ ಶ್ರೀಹರಿಯೂ ತನ್ನ ಶೇಷಶಾಯಿತ್ವಾದಿ ವೈಭವವನ್ನು ಮುಕ್ತರಿಗೆ ಕೊಡುವುದಿಲ್ಲ. ಅವರು ಅದನ್ನು ಬಯಸುವುದೂ ಇಲ್ಲ 'ನ ರಾಜವಾಹನಂ ಕಾಂಕ್ಷೇತ್' ಎಂದು ಮುಂತಾಗಿ ಹಿಂದೆಯೇ ಹೇಳಿದೆ. ಆದ್ದರಿಂದ ಹರಿಯ ಅಸಾಧಾರಣ ಬಾಹ್ಯ ಲಕ್ಷಣವಾದ ಶೇಷಶಾಯಿತ್ವವನ್ನೆ ಮೊದಲಿಗೆ ಇಲ್ಲಿ ಹೇಳಿದೆ. ಶೇಷಶಾಯಿಯ ಸ್ಮರಣೆಯಿಂದ ನವದಂಪತಿಗಳಿಗೆ ಒಳ್ಳೆಯ ಪುತ್ರಸಂತತಿಯಾಗಲೆಂಬ ಹರಕೆಯೂ ಇಲ್ಲಿದೆ.

ಬಾಹ್ಯ ಲಕ್ಷಣದ ಬಳಿಕ ಸ್ವರೂಪ ಲಕ್ಷಣ. ಗುಣಪೂರ್ಣತ್ವ ದೋಷದೂರತ್ವ ಮುಮುಕ್ಷು ಧ್ಯೇಯತ್ವ, ಮುಕ್ತಗಮ್ಯತ್ವಗಳೆ ಮುಖ್ಯವಾಗಿ ಬ್ರಹ್ಮಸೂತ್ರದ ನಾಲ್ಕು ಅಧ್ಯಾಯಗಳಲ್ಲಿ ಹೇಳಿದ ನಾಲ್ಕು ಸ್ವರೂಪಲಕ್ಷಣಗಳು. ಮೊದಲಿಗೆ ದೋಷದೂರತ್ವ ಏಕೆಂದರೆ ರಮೆ ದೇವತೆಗಳನ್ನೆಲ್ಲ ಪರೀಕ್ಷಿಸಿ ಅವರಲ್ಲಿ ದೋಷಗಳನ್ನು ಕಂಡು 'ಕುಂದೆಳ್ಳಷ್ಟಿಲ್ಲದ ಮುಕುಂದನೆ ತನಗೆ' ಎಂದು ಹರಿಯನ್ನು ವರಿಸಿದಳು. ಹರಿ ದೋಷದೂರನಾದರೇನೆ ಸಾಂತತ್ವ ಸಾತಿಶಯತ್ವಾದಿ ದೋಷರಹಿತ ಶುದ್ಧ ಆನಂದಾದಿ ಗುಣಪೂರ್ಣನೆನಿಸುತ್ತಾನೆ. ಆದ್ದರಿಂದಲೂ ಮೊದಲಿಗೆ 'ದೋಷದೂರನೆ ಬಾ' ಎಂದಿದೆ. ಶ್ರೀಹರಿ ಹೊರತು ಇನ್ನಾರೇ ಆದರೂ ಒಂದುಕಡೆ ವೈಭವದಿಂದ ಕುಳಿತಿದ್ದರೆ ಇನ್ನೊಂದೆಡೆಯೂ ಅದೇ ವೈಭವದಿಂದ ಕುಳಿತಿರುತ್ತಾರೆ ಎಂಬ ನಿಯಮವಿಲ್ಲ. ಶ್ರೀಹರಿ ಎಲ್ಲಿ ಇದ್ದರೂ ಶೇಷಶಾಯಿ, ಎಲ್ಲಿ ಸಂಚರಿಸಿದರೂ ಗರುಡವಾಹನ, ಅವನ ವೈಭವಕ್ಕೆ ಚ್ಯುತಿ ಇಲ್ಲ. ಆದ್ದರಿಂದ ಅವನು ದೋಷದೂರ. ನವದಂಪತಿಗಳು ಪರಸ್ಪರ ಪ್ರೀತಿಯಿಂದ ಹಾಲು ಜೇನಿನಂತೆ

ಬೆರೆತಿದ್ದು ಕಲಹಾದಿ ದೋಷದೂರರಾಗಿ ಬಾಳಬೇಕೆಂಬ ಹರಕೆ ಈ ಮಾತಿನಲ್ಲಿ ಅಡಗಿದೆ.

ಗುಣಪೂರ್ಣತ್ವವೆಂಬ ಅಸಾಧಾರಣ ಲಕ್ಷಣ 'ಭಾಸುರಕಾಯ ಹರಿಯೆ ಬಾ' ಎಂಬಲ್ಲಿ ವ್ಯಕ್ತವಾಗುತ್ತದೆ. ಭಾಸುರಕಾಯ ಎಂದರೆ ಉಜ್ವಲ ಶರೀರ. ಜ್ಞಾನಾನಂದಮಯ ಪ್ರಕಾಶದಿಂದ ಉಜ್ವಲವಾಗಿ ಹೊಳೆಯುತ್ತಾನೆ ಶ್ರೀಹರಿ. ನಿರಾಕಾರವಾದಲ್ಲಿ ಪರಬ್ರಹ್ಮವೆಂದರೆ ಬರೀ ಕತ್ತಲು, ಸಾಕಾರವಾದದಲ್ಲಿ ಈ ಕತ್ತಲು ಪೂರ್ಣಗುಣ ಮಾಣಿಕ್ಯ ಪ್ರಭೆಯಿಂದ ದೂರವಾಗುತ್ತದೆ. ಗುಣಗಳಲ್ಲಿ ನ್ಯೂನತೆ ಬಂದರೆ ತಾನೆ ದೋಷಕ್ಕೆ ಆಸ್ಪದವಿರುತ್ತದೆ ? ಪೂರ್ಣಗುಣ ಉಳ್ಳವನಲ್ಲಿ ದೋಷದ ಕತ್ತಲೆಗೆ ಅವಕಾಶವಿಲ್ಲ. ಪ್ರಜ್ವಲಿಸುವ ಬೆಂಕಿಯ ಚೆಂಡಾದ ಸೂರ್ಯನಲ್ಲಿ ಕತ್ತಲಿರಬಹುದೆ ? ಹೀಗೆ ಗುಣಪೂರ್ಣನಾದ್ದರಿಂದಲೆ ದೋಷದೂರ ಶ್ರೀಹರಿ ಎಂಬ ಅಭಿಪ್ರಾಯದಿಂದ 'ದೋಷದೂರನೆ ಬಾ ಭಾಸುರಕಾಯ ಹರಿಯೆ ಬಾ' ಎಂದು ಕರೆಯಲಾಗಿದೆ. ಗುಣಪೂರ್ಣತ್ವಸ್ಮರಣೆಯಿಂದ ವಧೂವರರಿಗೆ ಮುಂದೆ ದಾಂಪತ್ಯ ಸುಖ ಸಮೃದ್ಧಿ ಉಂಟಾಗಲಿ ಎಂಬ ಹರಕೆ ಇಲ್ಲಿದೆ.

'ಭಾಸುರ ಕಾಯ ಹರಿಯೆ ಬಾ' ಎಂಬುದು ಹಾಡಿನಲ್ಲಿ ಆವೃತ್ತಿ ಹೊಂದಿದೆ. ಆದರೂ ಆ ಮಾತಿಗೆ ಇನ್ನೂ ಬೇರೆ ಅರ್ಥವಿವಕ್ಷೆ ಇಟ್ಟು ಕೊಳ್ಳಬಹುದು. ಭಾಸುರ ಎಂದರೆ ಸಾಧಕನ ಹೃದಯದಲ್ಲಿ ಧ್ಯಾನಕಾಲದಲ್ಲಿ ಹೊಳೆಯುವ ಮೂರ್ತಿ ಭಗವಂತನದು ಇದರಿಂದ ಮುಮುಕ್ಷು ಧ್ಯೇಯತ್ವರೂಪ ಅಸಾಧಾರಣ ಲಕ್ಷಣ ಉಕ್ತವಾದಂತಾಯಿತು. ಇದರ ಉಪಾಸನೆಯಿಂದ ದಂಪತಿಗಳಲ್ಲಿ ಮೋಕ್ಷಸಾಧನೆಗೆ ವಿರೋಧವಾಗದಂತೆ ಗೃಹಸ್ಥ ಧರ್ಮಾಚರಣೆಯಿಂದ ತ್ರಿವರ್ಗಸಾಧನೆಯಾಗುತ್ತದೆ ಎಂದು ಸೂಚನೆ ಇಲ್ಲಿದೆ.

ಭಾಸುರ ಎಂದರೆ ಮೋಕ್ಷದಲ್ಲಿ ಜ್ಞಾನಾನಂದಮಯ ಸ್ವರೂಪ ಪ್ರಕಾಶದಿಂದ ಹೊಳೆವ ಶರೀರ ಉಳ್ಳವರು ಮುಕ್ತರು ಅವರ ಶರೀರ ಹಾಗೆ ಹೊಳೆಯುವುದು ಹರಿಯ ಅನುಗ್ರಹದಿಂದ. ಆದ್ದರಿಂದ ಆತ ಭಾಸುರಕಾಯ. ಇದರಿಂದ ಮುಕ್ತಗಮ್ಯತ್ವರೂಪ ಅಸಾಧಾರಣ ಲಕ್ಷಣವನ್ನೂ ಇಲ್ಲಿ ಹೇಳಿದಂತಾಯಿತು, ಇದರ ಉಪಾಸನೆಯಿಂದ ದಂಪತಿಗಳಿಗೆ ಮೋಕ್ಷಸಾಧನೆ ಸುಲಭ.

ಶೇಷಶಾಯಿತ್ವಾದಿ ಅಸಾಧಾರಣ ಬಾಹ್ಯ ಲಕ್ಷಣಗಳಿಂದಲೂ, ದೋಷದೂರತ್ವಾದಿ ಅಸಾಧಾರಣ ಸ್ವರೂಪ ಲಕ್ಷಣಗಳಿಂದಲೂ ಯುಕ್ತನಾದ ಹರಿಯೇ 'ಹರಿ' 'ಕೃಷ್ಣ' ಎಂದು ಮುಂತಾಗಿ ಅನೇಕ ರೂಪ ನಾಮಗಳಲ್ಲಿ ಆವಿರ್ಭವಿಸುತ್ತಾನೆ. ಅವರಲ್ಲಿ ಎಳ್ಳಷ್ಟೂ ಭೇದವಿಲ್ಲ, ಎಲ್ಲ ರೂಪಗಳೂ ಶ್ರೀದೇವಿಯೊಡನೆಯೆ ಇರುತ್ತವೆ. ಆದ್ದರಿಂದ ಶ್ರೀಕೃಷ್ಣ, ಶ್ರೀದೇವಿಯೊಡನೆ ನಮ್ಮ

ಹಸೆಗೆ ಬಾ. ನೀವು ಅನಾದಿ ದಂಪತಿಗಳೇ ಆಗಿದ್ದರೂ ನಿಮ್ಮ ಈ ಮದುವೆ ನಮಗೆ ಹೊಸದು, ಲೀಲೆಯಿಂದ ಈ ಮದುವೆ ಮಾಡಿಕೊಳ್ಳಿ, ಹಸೆಮಣೆ ಏರು ಎನ್ನುತ್ತಿದ್ದಾರೆ, ದೇವತಾ ಸ್ತ್ರೀಯರು.

– ೭೮ –

**ಕಂಜಲೋಚನನೆ ಬಾ ಮಂಜುಳ ಮೂರ್ತಿ ಬಾ**
**ಕುಂಜರ ವರ ದಾಯಕನೆ ಬಾ**
**ಕುಂಜರ ವರದಾಯಕನೆ ಬಾ ಶ್ರೀಕೃಷ್ಣ ನಿ–**
**ರಂಜನ ನಮ್ಮ ಹಸೆಗೆ ಬಾ ॥**

ಕಮಲದಂಥ ಕಣ್ಣಿನವ, ಸುಂದರ ಶರೀರದವ, ಗಜೇಂದ್ರನಿಗೆ ವರ ನೀಡಿದವ, ನಿರ್ದೋಷನಾದವ, ಇಂಥ ಶ್ರೀಕೃಷ್ಣನೇ ! ನೀನು ನಮ್ಮ ಹಸೆಗೆ ಬಾ.

ಹಿಂದಿನ ನುಡಿಯಲ್ಲಿ ಶ್ರೀಹರಿಯಲ್ಲಿ ಮಾತ್ರವೆ ಕಂಡುಬರುವ ಇನ್ನಾರಲ್ಲೂ ಎಂದೂ ಕಾಣದಿರುವ ಶೇಷಶಯನತ್ವಾದಿ ಅಸಾಧಾರಣ ಲಕ್ಷಣಗಳನ್ನು ಹೇಳಿದೆ. ಇಲ್ಲಿ ಕರುಣಾಸಮುದ್ರನಾದ ಶ್ರೀಹರಿ ತನ್ನ ಭಕ್ತರಿಗೆ ಕೊಡಬಹುದಾದ ಸಾರೂಪ್ಯ ಲಕ್ಷಣಗಳನ್ನು ಹೇಳಿದೆ

ಶ್ರೀಹರಿ ಕಮಲದಂಥ ಕಣ್ಣುಗಳುಳ್ಳವ. ಮಹಾಪುರುಷರ ಶರೀರ ಸೌಂದರ್ಯದ ಮೂವತ್ತೆರಡು ಪ್ರಸಿದ್ಧ ಲಕ್ಷಣಗಳಲ್ಲಿ ಇದೂ ಒಂದು. ಕಾಶೀಖಂಡದಲ್ಲಿ ಆ ಲಕ್ಷಣಗಳನ್ನು ಹೀಗೆ ಹೇಳಿದೆ–

ಪಂಚ ದೀರ್ಘಃ ಪಂಚಸೂಕ್ಷ್ಮಃ ಸಪ್ತರಕ್ತಃ ಷಡುನ್ನತಃ ।
ತ್ರಿಪೃಥು ಲಘು ಗಂಭೀರೋ ದ್ವಾತ್ರಿಂಶಲ್ಲಕ್ಷಣ ಸ್ಥಿತಿ ॥

('ತ್ರಿಪೃಥುಸ್ತ್ರಿಷು ಗಂಭೀರಃ' ಎಂಬ ನಿರ್ಣಯ ವಾದಿರಾಜೀಯಟಿಕೆಯಲ್ಲಿ ಕಂಡು ಬರುವ ಪಾಠದಲ್ಲಿ ಮೂರು ಲಕ್ಷಣಗಳ ನ್ಯೂನತೆ ಬರುವುದರಿಂದ ಅದು ಅಶುದ್ಧ'.) ಮೂವತ್ತೆರಡು ಲಕ್ಷಣಗಳು ಇವು–

ಭುಜ, ನೇತ್ರ, ಹನು, ಜಾನು, ನಖ ಈ ಐದು ಉದ್ದವಿರಬೇಕು. ತ್ವಕ್, ಕೇಶ, ಅಂಗುಲಿ, ದಂತ, ಅಂಗುಲಿಪರ್ವಗಳು ಸೂಕ್ಷ್ಮವಿರಬೇಕು. ಅಂಗೈ, ಅಂಗಾಲು, ಕಡೆಗಣ್ಣು, ತಾಲು, ಜಿಹ್ವೆ, ಕೆಳತುಟಿ, ಉಗುರುಗಳು ಕೆಂಪಾಗಿರಬೇಕು. ಎದೆ, ಹೊಟ್ಟೆ, ಹಣೆ, ಹೆಗಲು, ಹಸ್ತ, ಮುಖ ಉನ್ನತವಾಗಿರಬೇಕು. ಹಣೆ, ಸೊಂಟ, ಎದೆ ವಿಸ್ತಾರವಾಗಿರಬೇಕು. ಜಂಘೆ, ಕಂಠ, ಮೇಹನ ಲಘುವಾಗಿರಬೇಕು. ಸ್ವರ, ಸತ್ವ, ನಾಭಿ ಗಂಭೀರವಾಗಿರಬೇಕು.

ಇಲ್ಲಿ ಕಣ್ಣು ಕಮಲದಳದಂತೆ ಉದ್ದವಾಗಿರುವುದು ಒಂದು ಲಕ್ಷಣ. ಇದು ಪೂರ್ಣವಾಗಿ ಸಿಗುವುದು ಶ್ರೀಹರಿಯಲ್ಲಿಯೇ ಹೊರತು ಇನ್ನಾರಲ್ಲೂ ಇಲ್ಲ. ಬೇರೆ ದೇವತೆಗಳು ಕಮಲಾಕ್ಷರೆಂದು ಪ್ರಸಿದ್ಧರಾಗಿಲ್ಲ. ವಿರೂಪಾಕ್ಷ, ಸಹಸ್ರಾಕ್ಷ, ಪಿಂಗಾಕ್ಷ ಎಂದು ಮುಂತಾಗಿಯೆ ಅವರು ಪ್ರಸಿದ್ಧರು–

ವಿರೂಪಾಕ್ಷಃ ಶಿವಃ ಸೂರ್ಯಃ ಸುರಾಚಾರ್ಯೋ ವಿನಾಯಕಃ ।
ಪುಂಡರೀಕೇಕ್ಷಣೋ ವಿಷ್ಣುಃ, ಸಹಸ್ರಾಕ್ಷಃ ಸುರಾಧಿಪಃ ॥

'ಶಿವ, ಸೂರ್ಯ, ಬೃಹಸ್ಪತಿ, ಗಣಪತಿಗಳು ವಿರೂಪಾಕ್ಷರೆಂದು ಪ್ರಸಿದ್ಧರು ವಿಷ್ಣು ಪುಂಡರೀಕಾಕ್ಷ, ದೇವೇಂದ್ರ ಸಹಸ್ರಾಕ್ಷ'

ಮೂವತ್ತೆರಡು ಲಕ್ಷಣಗಳಲ್ಲಿ ಈ ಒಂದು ಲಕ್ಷಣವನ್ನು ಹೇಳಿದುದು ಎಲ್ಲ ಲಕ್ಷಣಗಳೂ ಅವನಲ್ಲಿವೆ ಎಂದು ಸೂಚಿಸುವುದಕ್ಕಾಗಿ ಆದ್ದರಿಂದ ಶ್ರೀಹರಿ ಸಕಲ ಲಕ್ಷಣಗಳಿಂದೊಪ್ಪುವ ಮಂಜುಳಮೂರ್ತಿ. ಛಾಂದೋಗ್ಯೋಪನಿಷತ್ತಿನಲ್ಲಿ ಪುಂಡರೀಕಾಕ್ಷ ಸೂರ್ಯಮಂಡಲದಲ್ಲಿದ್ದು ಅಡಿಯಿಂದ ಮುಡಿವರೆಗೂ ಬಂಗಾರದಂತೆ ಹೊಳೆಯುತ್ತಾನೆ ಎಂದಿದೆ–

ಆ ಪ್ರಣಖಾತ್ ಸರ್ವ ಏವ ಸುವರ್ಣಃ ।
ತಸ್ಯ ಯಥಾ ಕಪ್ಯಾಸಂ ಪುಂಡರೀಕಮೇವಮಕ್ಷಿಣೀ ॥

ಈಶಾವಾಸ್ಯೋಪನಿಷತ್ತು 'ಯತ್ತೇ ರೂಪಂ ಕಲ್ಯಾಣತಮಂ' ಎಂದು ಕೊಂಡಾಡಿದೆ ಈ ಕಂಜಲೋಚನ ಮಂಜುಳಮೂರ್ತಿತ್ವವೆಂಬ ಆಕಾರವನ್ನು ಶ್ರೀಹರಿಯೆ ತನ್ನ ಭಕ್ತರಿಗೂ ಕೊಡಬಲ್ಲನೆನ್ನಲು 'ಕುಂಜರವರದಾಯಕ' ಎನ್ನಲಾಗಿದೆ.

ಈಗ ನಡೆಯುವುದು ವೈವಸ್ವತವೆಂಬ ಏಳನೆಯ ಮನಂತ್ವರ. ಹಿಂದೆ ನಾಲ್ಕನೆಯದಾದ ತಾಪಸ ಮನ್ವಂತರಕ್ಕೆ ಅಧಿಪತಿ ಶ್ರೀಹರಿಯು ತಾಪಸ ಎಂಬ ಅವತಾರ. ಆ ಮನ್ವಂತರದಲ್ಲಿ ಗಜೇಂದ್ರ ಮೋಕ್ಷ ನಡೆಯಿತು. ಹಾಹಾ ಹೂಹೂ ಎಂಬ ಇಬ್ಬರು ಗಂಧರ್ವರು ದೇವಲ ಮುನಿಗಳನ್ನು ವಿನೋದಕ್ಕಾಗಿ ಪೀಡಿಸಿದರು ಹೂಹೂ ಮೊಸಳೆಯ ರೂಪದಿಂದ ಬಂದು ಮುನಿಯನ್ನು ಭಯಪಡಿಸಿದ. ಹಾಹಾ ಆನೆಯ ರೂಪದಿಂದ ಬಂದು ಹಿಡಿದು ಆಟ ಆಡಿಸಿದ ಮುನಿಯು ಧ್ಯಾನದೃಷ್ಟಿಯಿಂದ ಎಲ್ಲ ತಿಳಿದು ಕುಪಿತರಾಗಿ ಹೂಹೂವನ್ನು ಮೊಸಳೆಯಾಗೇ ಹುಟ್ಟು ಎಂದು ಶಪಿಸಿದರು. ಹಾಹಾನನ್ನು ನೀನು ನನ್ನನ್ನು ಕೊಲ್ಲದೆ ಬಿಟ್ಟುದರಿಂದ ಮೊದಲಿಗೆ ಒಬ್ಬ ರಾಜನಾಗಿ ಹುಟ್ಟಿ ಬಳಿಕ ಆನೆಯಾಗಿ ಹುಟ್ಟು ಎಂದು ಶಪಿಸಿದರು ಅದರಂತೆ ಹಾಹಾ ಇಂದ್ರದ್ಯುಮ್ನ ರಾಜನಾಗಿ ಹುಟ್ಟಿದ. ಬಹುಕಾಲ ರಾಜ್ಯವಾಳಿ

ವೃದ್ಧಾಪ್ಯದಲ್ಲಿ ಅರಣ್ಯ ಸೇರಿ ತಪಸ್ಸು ಮಾಡುತ್ತಿದ್ದಾಗ ಅಗಸ್ತ್ಯಮುನಿ ಅವನಾಶ್ರಮಕ್ಕೆ ಬಂದರು. ರಾಜ ಇದು ತನ್ನ ಅನುಷ್ಠಾನಕಾಲವೆಂದು ಮುನಿಗೆ ಸರಿಯಾದ ಸತ್ಕಾರವಮಾಡದೆ, ಆನೆಯಾಗಿ ಹುಟ್ಟು ಎಂದು ಶಾಪಪಡೆದ. ಕ್ಷೀರಸಮುದ್ರದ ನಡುವೆ ತ್ರಿಕೂಟ ಪರ್ವತದ ಒಂದು ಕೊಳದಲ್ಲಿ ಈ ಆನೆಯನ್ನು ಆ ಮೊಸಳೆ ಹಿಡಿಯಿತು. ಆನೆ ಪೂರ್ವಜನ್ಮ ಸ್ಮರಣೆಯಿಂದ ಶ್ರೀಹರಿಯನ್ನೇ ಮೊರೆಹೊಕ್ಕು ಬೇಡಿತು. ಶ್ರೀಹರಿ ತಾಪಸ ಮನುವಾಗಿ ಅವತರಿಸಿದ್ದ ಕಾಲ ಅದು. ಆ ತಾಪಸನೆ ಬಂದು ಗಜರಾಜನನ್ನು ಎತ್ತಿದ, ಚಕ್ರದಿಂದ ಮೊಸಳೆಯನ್ನು ಕತ್ತರಿಸಿದ. ಇಬ್ಬರಿಗೂ ಶಾಪ ಮೋಕ್ಷವಿತ್ತ. ಗಜೇಂದ್ರನಿಗೆ ಆಗ ಚತುರ್ಭುಜ ಪೀತಾಂಬರಧಾರಿ ಸುಂದರ ಶರೀರವನ್ನು ಕೊಟ್ಟು ಅನುಗ್ರಹಿಸಿದನೆಂದು ಭಾಗವತದಲ್ಲಿ ಕಥೆ ಬರುತ್ತದೆ.

ಶ್ರೀಹರಿ ಕುಂಜರನಿಗೆ ಸಾರೂಪ್ಯವರದಾನ ಮಾಡಿದ್ದಾನೆ. ಆದರೆ ಕುಂಜರವರ ದಾನದಂಥ ಕಾರ್ಯವನ್ನು ಇನ್ನೊಬ್ಬರಿಗೆ ಬಿಟ್ಟುಕೊಡುವುದಿಲ್ಲ. ಕುಂಜರನ ಸಂಕಟವನ್ನು ಬ್ರಹ್ಮಾದಿ ದೇವತೆಗಳು ನೋಡುತ್ತಿದ್ದರೇ ಹೊರತು ರಕ್ಷಣೆಗೆ ಧಾವಿಸಿ ಬರಲಿಲ್ಲ. ಇದು ಶ್ರೀಹರಿಯ ಸ್ವಂತಕಾರ್ಯ. ಅದನ್ನು ಮಾಡಲು ನಮಗೆ ಅವನ ಆಜ್ಞೆಯಿಲ್ಲ ಎಂದು ಭೀತರಾಗಿ ಸುಮ್ಮನಿದ್ದರು.

'ನಮೋ ನಮಸ್ತೇಽಖಿಲ ಕಾರಣಾಯ
ನಾರಾಯಣಾಯಾರ್ತಿವಿನಾಶನಾಯ'

ಎಂಬ ಸ್ತೋತ್ರಕ್ಕೆ ಶ್ರೀಹರಿಯೇ ಅರ್ಹನೆಂದು ಅವರು ತಿಳಿದಿದ್ದರು

ಈ ತಾಪಸ ಮನುವಿಗೇ ಇನ್ನೊಂದು ಹೆಸರು ತಾಮಸ ಎಂದು. ಸ್ವಾಯಂಭುವ ಮನುವಿನ ಮಗನಾದ ಪ್ರಿಯವ್ರತರಾಜನಿಗೆ ಉತ್ತಮ, ತಾಮಸ, ರೈವತ ಎಂಬ ಮೂವರು ಮನ್ವಂತರಾಧಿಪತಿಗಳು ಮಕ್ಕಳು. ತಾಮಸ ಎಂಬ ಶಬ್ದದಿಂದ ತಾಪಸನಲ್ಲಿ ತಮೋಗುಣವಿದೆ ಎಂದು ಮಾತ್ರ ತಿಳಿಯಬಾರದು

'ತತ್ರಾಪಿ ಜಜ್ಞೇ ಭಗವಾನ್ ಹರಿಣ್ಯಾಂ ಹರಿಮೇಧಸಃ'

ಎಂಬ ಭಾಗವತ ವಚನದಂತೆ ಹೆಣ್ಣು ಜಿಂಕೆಯ ರೂಪದಿಂದ ವಿಹರಿಸುತ್ತಿದ್ದ ತಾಯಿಯಲ್ಲಿ ತಾಪಸನ ಜನನ. ಜಿಂಕೆಯಂಥ ಪ್ರಾಣಿಜನ್ಮ ಅಜ್ಞಾನಮಯವಾದ್ದರಿಂದ ತಾಮಸ ಎನಿಸುತ್ತದೆ. ಆದ್ದರಿಂದ ತಾಪಸನಿಗೆ ತಾಮಸ ಎಂಬುದು ನಾಮಾಂತರ. ವಸ್ತುತಃ ಈ ತಾಮಸನೆ ಗಜೇಂದ್ರನು ಸ್ತುತಿಸುವಂತೆ ತಮಸ್ಸಿನ ಆಚೆ ಇರುವವ, ತಮಸ್ಸಿನಲ್ಲಿದ್ದವರನ್ನು ಆಚೆ ಕೊಂಡೊಯ್ದು ಮೋಕ್ಷ ಕೊಡುವವ–

'ತಮಸ್ತದಾಸೀದ್ ಗಹನಂ ಗಂಭೀರಂ
ಯಸ್ತಸ್ಯ ಪಾರೇಽಭಿವಿರಾಜತೇ ವಿಭುಃ ।'
'ನಮಃ ಕೈವಲ್ಯ ನಾಥಾಯ ।'
'ಮುಕ್ತಾತ್ಮಭಿಃ ಸ್ವಹೃದಯೇ ಪರಿಭಾವಿತಾಯ ॥'

ಹೀಗೆ ಸಕಲ ದೋಷಗಳಿಗೂ ಮೂಲಭೂತವಾದ ತಮಸ್ಸು ಅಜ್ಞಾನ, ಶ್ರೀಹರಿಯಲ್ಲಿಲ್ಲದಿರುವುದರಿಂದ ಹಸರಿಗೆ ತಾಮಸನಾದರೂ ಸ್ವಭಾವತಃ ಅಂಜನ, ದೋಷ ಇಲ್ಲವವನೆ, ನಿರಂಜನ ಆದ್ದರಿಂದ 'ಕುಂಜರ ವರದಾಯಕ ನಿರಂಜನ' ಎಂದು ಸಂಬೋಧಿಸಿದೆ.

ಗಜೇಂದ್ರನು ಮಾಡುವ ಸ್ತೋತ್ರವನ್ನು ಕಂಡಾಗ ಶ್ರೀಹರಿಯು ಮಂಜುಳಮೂರ್ತಿ ಕೇವಲ ಮಾಯೆಯಿಂದವು, ವಸ್ತುತಃ ಆತ ನಿರಾಕಾರನೆಂದೂ ಅನಿಸಬಹುದು–

'ಸ್ವಮಾಯಯಾ ತಾನ್ಯನುಕಾಲಮೃಚ್ಛತಿ ।'

ಆದರೆ ಮಾಯೆ ಎಂಬುದು ತಮಸ್ಸೇ, ಅವಿದ್ಯೆಯೇ ಎನ್ನುವುದಾದರೆ ತಮಸ್ಸಿನ ಆಚೆ ಇರುವವ, ಮಾಯೆ ಉಳ್ಳವನೆನ್ನುವುದು ವಿರುದ್ಧವಾಗುವುದು ಗಜೇಂದ್ರನು ಹರಿಯನ್ನು ನಿರಾಕಾರ ಸಾಕಾರ ಎಂದು ಎರಡು ಬಗೆಯಿಂದಲೂ ಸ್ತುತಿಸುತ್ತಾನೆ–

'ಅರೂಪಾಯೋರುರೂಪಾಯ ನಮ ಆಶ್ಚರ್ಯಕರ್ಮಣೇ'

ಅರೂಪನೂ ಹೌದು, ಉರು ರೂಪನೂ ಹೌದು, ಹೇಗೆ ?

'ಸ್ವಮಾಯಯಾ' ಎಂದರೆ ಸ್ವೇಚ್ಛೆಯಿಂದ ಎಂದರ್ಥ. ಮಾಯೆ ಮೂರು ಬಗೆಯದು– ಜೀವ ಮಾಯೆ, ಆತ್ಮ ಮಾಯೆ, ಗುಣ ಮಾಯೆ ಎಂದು. ಜೀವ ಮಾಯೆ ಎಂದರೆ ಜೀವರನ್ನು ಪ್ರಕೃತಿ ಬಂಧನದಲ್ಲಿಟ್ಟುಕೊಳ್ಳುವ ಮಹಾಲಕ್ಷ್ಮಿ ಆತ್ಮಮಾಯೆ ಎಂದರೆ ಸ್ವಮಾಯೆ, ಸ್ವೇಚ್ಛೆ. ಗುಣಮಾಯೆ ಎಂದರೆ ಗುಣತ್ರಯಾತ್ಮಕವಾದ ಪ್ರಕೃತಿ ಪ್ರಕೃತ ಶ್ರೀಹರಿ ಸ್ವಮಾಯೆಯಿಂದ ಆಕಾರ ತಳೆಯುತ್ತಾನೆ ಎಂದರ್ಥ. ಅವಿದ್ಯೆಯ ರೂಪದ ಮಾಯೆಯನ್ನು ಭಾಗವತ ತಮಸ್ಸೆಂದು ಕರೆದು ಅದರಾಚೆ ಹರಿ ಇರುವನೆಂದಿದೆ. ಈ ಅಭಿಪ್ರಾಯದಿಂದಲೂ ಲಕ್ಷ್ಮೀಶೋಭನ ಪದದಲ್ಲಿ ನಿರಂಜನ ಎಂದು ಸಂಬೋಧಿಸಲಾಗಿದೆ.

ಮಾಯೆ, ಅವಿದ್ಯೆ ಎಂಬ ದೋಷವಿಲ್ಲದೆ ಇರುವುದರಿಂದ ಹರಿ ಪ್ರಾಕೃತ ಆಕಾರ ರಹಿತನಾಗಿದ್ದು ನಿರಾಕಾರ, ಅರೂಪನೆನಿಸುತ್ತಾನೆ ಚಿನ್ಮಯವಾದ

ಆಕಾರವಿರುವುದರಿಂದ ಸಾಕಾರ, ಉರುರೂಪನೆನಿಸುತ್ತಾನೆ ಎಂದು ವಿರೋಧ ಪರಿಹಾರ ಮಾಡುವುದೇ ಯುಕ್ತ. ಆದ್ದರಿಂದಲೆ ಶ್ರೀಹರಿ ಮಂಜುಳಮೂರ್ತಿ ಎನ್ನುವುದು ಗಜೇಂದ್ರನ ಸ್ತೋತ್ರದಲ್ಲಿ ಸ್ಪಷ್ಟವಾಗಿದೆ. ಆತ ಸ್ತುತಿಸುತ್ತಾನೆ–

ದಿದೃಕ್ಷವೋ ಯಸ್ಯ ಪದಂ ಸುಮಂಗಲಂ
ವಿಮುಕ್ತ ಸಂಗಾ ಮುನಯಃ ಸುಸಾಧವಃ ॥

ಗಜೇಂದ್ರಮೋಕ್ಷಪರನ ಸಕಲ ಸಂಕಷ್ಟಹರ, ದುಃಸ್ವಪ್ನಪರಿಹಾರಕ, ಗಜೇಂದ್ರನು ಆದರಲ್ಲಿ ಮಾಡಿದ ಸ್ತೋತ್ರವೂ ಅಷ್ಟೇ ಸಕಲ ಸಂಶಯ ಪರಿಹಾರಕ, ಪಾಪನಿವಾರಕ.

— ೭೯ —

**ಆದಿಕಾಲದಲ್ಲಿ ಆಲದೆಲೆಯ ಮೇಲೆ**
**ಶ್ರೀದೇವಿಯರೊಡನೆ ಪವಡಿಸಿದ ।**
**ಶ್ರೀದೇವಿಯರೊಡನೆ ಪವಡಿಸಿದ ಶ್ರೀಕೃಷ್ಣ**
**ಮೋದದಿಂದೆಮ್ಮ ಹಸೆಗೆ ಬಾ ॥**

ಸೃಷ್ಟಿಯ ಆದಿಯಲ್ಲಿ, ಬ್ರಹ್ಮಪ್ರಳಯದ ಕಾಲದಲ್ಲಿ, ಪ್ರಳಯ ಸಮುದ್ರದಲ್ಲಿ ಆಲದೆಲೆಯ ಮೇಲೆ ಶ್ರೀದೇವಿಯರೊಡನೆ ಮಲಗಿದ ಕೃಷ್ಣನೆ, ನಮ್ಮ ಹಸೆಗೆ ಸಂತೋಷದಿಂದ ಬಾ.

ದಾಂಪತ್ಯ ಜೀವನದ ಧ್ಯೇಯ ಎರಡು, ಸುಖ ಮತ್ತು ಸಂತತಿ. ಸುಖದಲ್ಲಿ ಮೈಮರೆತು ಮಾನವಜನ್ಮದಲ್ಲಿ ಅಂತಿಮ ಧ್ಯೇಯವಾದ ಮೋಕ್ಷಮಾರ್ಗವನ್ನು ಬಿಟ್ಟು ಬಿಡುವ ಅಪಾಯವೆ ಹೆಚ್ಚು. ಎಲ್ಲೋ ಕೆಲವರು ಮಾತ್ರ ಪೂರ್ವ ಪುಣ್ಯವಶದಿಂದ ಎಚ್ಚೆತ್ತು ಕೊಳ್ಳುತ್ತಾರೆ. ಈ ಅಭಿಪ್ರಾಯದಿಂದ ಹಿಂದಿನ ನುಡಿಯಲ್ಲಿ 'ಕುಂಜರವರದಾಯಕನೆ ಬಾ' ಎಂದಿದೆ. ಗಜೇಂದ್ರಮೋಕ್ಷದಕಥೆ ಅರ್ಥಪೂರ್ಣ ವಾಗಿದೆ. ಮಾನವ ವಿಷಯಸುಖ ಉಂಡು ಉಂಡು ಗಜರಾಜನಂತೆ ಮತ್ತನಾಗಿ ತಿರುಗಿ ಅದೇ ವಿಷಯ ಸುಖದ ಕೊಳದಲ್ಲಿ ವಿಹರಿಸುತ್ತ ತೃಪ್ತಿ ಕಾಣದೆ ವಿಷಯಲಾಲಸೆಯ ಮೊಸಳೆಯ ಬಾಯಿಗೇ ಸಿಗುತ್ತಾನೆ. ಪೂರ್ವಜನ್ಮದ ಪುಣ್ಯವಿದ್ದರೆ ಮಾತ್ರ ಹರಿಯ ಸ್ಮರಣೆ ಮಾಡಿ ಆ ಮೊಸಳೆಯ ಬಾಯಿಂದ ಮುಕ್ತನಾಗುತ್ತಾನೆ. ನವ ದಂಪತಿಗಳೂ ಮುಂದೆ ವಿಷಯಲಾಲಸೆಗೆ ಸಿಕ್ಕು ತಮ್ಮ ಜನ್ಮವನ್ನು ವ್ಯರ್ಥಗೊಳಿಸಬಾರದು, ಹರಿಯನ್ನು ಮೊರೆಹೊಕ್ಕು ವೈರಾಗ್ಯಭಾಗ್ಯವನ್ನು ಬೇಡಿ ಪಡೆಯಬೇಕು ಎಂಬುದನ್ನು ಹಿಂದಿನ ನುಡಿಯಲ್ಲಿ ಸೂಚ್ಯವಾಗಿ ಹೇಳಿದೆ ಈಗ ಈ ನುಡಿಯಲ್ಲಿ ವೈರಾಗ್ಯವೆಂದರೆ ಹೆಂಡತಿಮಕ್ಕಳನ್ನು

ತೊರೆದು ಬೀದಿಪಾಲು ಮಾಡುವುದಲ್ಲ, ಭೋಗಭಾಗ್ಯಗಳನ್ನು ಹರಿಯಲ್ಲಿ ಬೇಡಿ ಪಡೆದು ತಿರುಗಿ ಆವನಿಗೇ ಆರ್ಪಿಸಿ ಅವನ ಪ್ರಸಾದವೆಂದು ಸ್ವೀಕರಿಸಿ ಸಂಸಾರವನ್ನು ಪೋಷಿಸಬೇಕು ಎಂದಿದೆ.

ಅಪ್ಯಕಾರ್ಯಶತಂ ಕೃತ್ವಾ ಭರ್ತವ್ಯಾ ಮನುರಬ್ರವೀತ್ ।

'ನೂರು ಅಕಾರ್ಯ ಮಾಡಿಯಾದರೂ ಹೆಂಡತಿ ಮಕ್ಕಳನ್ನು ಪೋಷಿಸಬೇಕೆ'ಂದೇ ಮನು ಹೇಳಿದ್ದಾನೆ. ಆದ್ದರಿಂದ ನವದಂಪತಿಗಳಿಗೆ ಈ ನುಡಿ ಲಕ್ಷ್ಮೀನಾರಾಯಣರಂತೆ ಆದರ್ಶ ದಾಂಪತ್ಯ ಜೀವನ ನಡೆಸಿ ಸುಖ ಸಂತತಿಗಳನ್ನು ಪಡೆಯಬೇಕೆಂಬ ಸಂದೇಶ ನೀಡುತ್ತಿದೆ. ಅದಕ್ಕಾಗಿ ನಾರಾಯಣ ಲಯಕಾಲದಲ್ಲಿ ಶ್ರೀದೇವಿಯರೊಡನೆ ವಿಹರಿಸಿ ಬ್ರಹ್ಮಾದಿ ಸೃಷ್ಟಿ ಮಾಡಿದುದರ ವರ್ಣನೆ ಮಾಡಿದೆ. ಅದನ್ನು ಸ್ಮರಿಸಿಕೊಂಡರೆ ದಾಂಪತ್ಯ ಸುಖ ಸಂತತಿ ಎಲ್ಲವೂ ಲಭಿಸುತ್ತದೆ. ತತ್ವಸಾರದಲ್ಲಿ ವಾದಿರಾಜರು ಹೇಳಿದ್ದಾರೆ–

ಇಂತು ಮುಕ್ತಾಮುಕ್ತ ಜೀವರ ತಿಂತಿಣಿಯು-
ನಾಂತು ಶ್ರೀಕಾಂತ ಪವಡಿಸಿ ।
ಕಾಂತೆಯರೊಡನೆ ಸಂತೋಷದಲಿಹ ಕಥೆ
ಸಂತತ ನಮ್ಮ ಸಲಹಲಿ ॥

ಆದಿಕಾಲದಲ್ಲಿ ಎಲ್ಲೆಲ್ಲೂ ಲಕ್ಷ್ಮ್ಯಾತ್ಮಕವಾದ ನೀರು. ಆದರ ಮೇಲೆ ಲಕ್ಷ್ಮ್ಯಾತ್ಮಕವಾದ ವಟಪತ್ರ. ಆದರ ಮೇಲೆ ಶ್ರೀಹರಿ ಶ್ರೀದೇವಿಯೊಡನೆ ಪವಡಿಸಿದ. ಶ್ರೀದೇವಿಯರೊಡನೆ ಎಂದು ಬಹುವಚನದಲ್ಲಿ ಹೇಳಿದುದು ದೇವಿ ಬಹುರೂಪ ಧರಿಸಿ ರಮಿಸಿದಳೆಂಬ ಅಭಿಪ್ರಾಯದಿಂದ. ತತ್ವಸಾರ ಹೇಳಿದಂತೆ, ಶ್ರೀಹರಿ ಶ್ರೀದೇವಿಯನ್ನು ಚುಂಬಿಸಿದರೆ ಭೂದೇವಿಯ ಅಧರದಲ್ಲಿ ದಂತಕ್ಷತ ಕಂಡುಬರುತ್ತಿತ್ತು. ಭೂದೇವಿಯನ್ನಪ್ಪಿದರೆ ಶ್ರೀದೇವಿಯ ಎದೆಯಲ್ಲಿ ಗಂಧಲೇಪನವಾಗುತ್ತಿತ್ತು. ಹೀಗೆ ಬಹುಕಾಲ, ಅಂದರೆ ಬ್ರಹ್ಮನ ಆಯುಷ್ಯದ ಎರಡು ಪರಾರ್ಧಗಳಷ್ಟು ಕಾಲ ಹರಿ ವಿಹರಿಸಿದ್ದಾನೆ. ಬಳಿಕ ಸ್ವಲ್ಪಕಾಲ ಮಲಗಿದಂತೆ ಕಣ್ಮುಮುಚ್ಚಿ ದುರ್ಗಾದೇವಿಯ ಶ್ರುತಿಗೀತೆ ಕೇಳಿ ಎದ್ದು, ಮಹಾಲಕ್ಷ್ಮಿಯಲ್ಲಿ ಗರ್ಭಾಧಾನ ಮಾಡಿ ಪ್ರಪಂಚ ಸೃಷ್ಟಿ ಮಾಡಿದ್ದಾನೆ. ಅವನ ಈ ರತಿವಿಹಾರ ಮಹತ್ತಾದುದು ಈ ಸಂತತಿಯೂ ದೇವ ದಾನವ ಮಾನವ ರೂಪದಲ್ಲಿ ಅನಂತವಾದುದು. ಪಂಚಮಹಾಭೂತಾದಿ ರೂಪದ ಸಂಪತ್ತೂ ಅಪಾರವಾದುದು. ಮುಂದೆ ವಿಧಿವತ್ತಾಗಿ ಯಜ್ಞಾದಿಕರ್ಮಗಳನ್ನೂ ಮಾಡಿದನಂತೆ ಶ್ರೀಹರಿ. ಹೀಗೆ ಪತಿ, ಪತ್ನಿ, ಸಂತತಿ, ಸಂಪತ್ತು, ಯಜ್ಞಾದಿಕರ್ಮ ಈ ಐದರಲ್ಲಿಯೇ ದಾಂಪತ್ಯ ಜೀವನದ ಯಶಸ್ಸು ಅಡಗಿರುತ್ತದೆ ಎಂದು ಬೃಹದಾರಣ್ಯಕೋಪನಿಷತ್ತು ಹೇಳಿದೆ.

ಇಂಥ ಯಶಸ್ವಿ ದಾಂಪತ್ಯ ಜೀವನ ನೂತನ ದಂಪತಿಗಳಿಗೆ ಲಭಿಸಲೆಂದೇ ಈ ನುಡಿಯಲ್ಲಿ ಲಕ್ಷ್ಮೀನಾರಾಯಣರ ವಿಹಾರವನ್ನು ಉಲ್ಲೇಖಿಸಿದೆ.

ಒಂದು ಪ್ರಶ್ನೆ–

ಸತ್ವಂ ಭೃತೋ ಮೇ ಜಠರೇಣ ನಾಥ
ಕಥಂ ನು ಯಸ್ಯೋದರ ಏತದಾಸೀತ್ ।
ವಿಶ್ವಂ ಯುಗಾಂತೇ ವಟಪತ್ರ ಏಕಃ
ಶೇತೇ ಸ್ಮ ಮಾಯಾಶಿಶುರಂಘ್ರಿಪಾನಃ ॥

ಎಂದು ಭಾಗವತ ಹೇಳುವಂತೆ ವಟಪತ್ರದಲ್ಲಿ ಮಲಗಿದ್ದುದು ಒಂದು ಎಳೆ ಕೂಸು, ಕಾಲುಂಗುಟ ಚೀಪುತ್ತ ಏಕಾಂಗಿಯಾಗಿಯೇ ಮಲಗಿತ್ತು. ವಿಹಾರ ಮಾಡುವ ದಂಪತಿಗಳಲ್ಲ. ಮಹಾಭಾರತದಲ್ಲಿಯೂ ಮಾರ್ಕಂಡೆಯರು ಕಂಡಂತೆ ಪ್ರಳಯದಲ್ಲಿದ್ದುದು ಒಬ್ಬನೇ ಬಾಲಕ. ಶ್ರೀದೇವಿ ಆ ಎಳೆಗೂಸಿನೊಡನೆ ರತಿಕ್ರೀಡೆಯಾಡಿದಳೆಂದರೆ ಉಚಿತವಾಗುವುದಿಲ್ಲ. ರುಕ್ಮಿಣೀಶ ವಿಜಯದಲ್ಲಿ ಬಾಲಕೃಷ್ಣನು ಯಶೋದೆಯ ಮಡಿಲಿಗೆ ಬಂದೊಡನೆ ದೇವಿ ಅಲ್ಲಿಂದ ಹೋದಳು ಏಕೆಂದರೆ ಮುಕ್ತರಿಗೊಡೆಯನಾದ ತನ್ನ ಪತಿ ಶಿಶುವಾದುದನ್ನು ಕಂಡು ಲಜ್ಜೆಯಿಂದಲೋ ಎಂಬಂತೆ ಲಕ್ಷ್ಮಿ ಕೂಡಲೇ ಅಲ್ಲಿಂದ ಹೊರಟು ಹೋಗಲು ಬಯಸಿದಳು ಎಂದಿದೆ. ಉಪನಿಷತ್ತುಗಳೆಲ್ಲ,

'ಸದೇವ ಸೋಮ್ಯೇದಮಗ್ರ ಆಸೀತ್ ಏಕಮೇವಾದ್ವಿತೀಯಂ'
'ಬ್ರಹ್ಮ ವಾ ಇದಮಗ್ರ ಆಸೀದೇಕಮೇವ'

ಎಂದು ಮುಂತಾಗಿ ಲಯದಲ್ಲಿ ಹರಿ ಏಕಾಂಗಿಯಾಗಿದ್ದನೆಂದೇ ಸಾರುತ್ತಿವೆ. ಒಂದು ದಂಪತಿಗಳ ಸಂಸಾರ ಆಗ ಇತ್ತು ಎನ್ನುವುದಿಲ್ಲ.

ಇದಕ್ಕೆ ಸಮಾಧಾನ– ಬೃಹದಾರಣ್ಯಕೋಪನಿಷತ್ತಿನಲ್ಲಿ,

ಆತ್ಮೈವೇದಮಗ್ರ ಆಸೀತ್ ಏಕ ಏವ ।
ಸೋಽಕಾಮಯತ ಜಾಯಾ ಮೇ ಸ್ಯಾದಥ ಪ್ರಜಾಯೇಯ ।

'ಲಯದಲ್ಲಿ ಹರಿಯೊಬ್ಬನೇ ಇದ್ದ. ಅವನು ಮಡದಿಯೊಡನೆ ವಿಹರಿಸಲೂ ಸಂತತಿ ಪಡೆಯಲೂ ಬಯಸಿದ' ಎಂದಿದೆ. ಇದಕ್ಕೆ ಭಾಷ್ಯದಲ್ಲಿ, 'ಮೊದಲಿಗೆ ನಾರಾಯಣನೊಬ್ಬನೇ ಇದ್ದ. ಅವನು ಮಡದಿಯೊಡನೆ ವಿಹರಿಸಲು ಬಯಸಿದ, ಮಡದಿ ಲಕ್ಷ್ಮೀದೇವಿ ಆಗಲೂ ಇದ್ದಳು. ಆದರೂ ಅವಳಿಂದ ಆತ

ವಿಯುಕ್ತನಾಗಿದ್ದುದರಿಂದ ಒಬ್ಬನೇ ಇದ್ದನೆನ್ನಲಾಗಿದೆ. ಅವಳೊಂದಿಗೆ ವಿಹರಿಸಿ ಸಂತತಿ ಪಡೆಯಲು ಬಯಸಿದ' ಎಂದಿದೆ. ಆದ್ದರಿಂದ ಲಯಕಾಲದಲ್ಲಿ ದಂಪತಿಗಳು ವಿಹರಿಸುತ್ತಿದ್ದುದು ನಿಜವೇ. ಹಾಗಾದರೆ ಭಾಗವತ ಮತ್ತು ಮಹಾಭಾರತ ಹೇಳುವುದು ಸುಳ್ಳೇ ? ಸುಳ್ಳಲ್ಲ. ಆದರೂ ದ್ವಾದಶಸ್ಕಂಧ ಭಾಗವತ, ಮಹಾಭಾರತ ವನಪರ್ವ ಎರಡು ಕಡೆಗಳಲ್ಲಿಯೂ ಮಾರ್ಕಂಡೇಯರು ಕಂಡ ಪ್ರಳಯ ಕಲ್ಪಾಂತ್ಯದ್ದಲ್ಲ. ಆಗ ಕಲ್ಪಾಂತವಾಗಿರಲೇ ಇಲ್ಲ. ಹೊರಗೆ ನಾವು ಕಾಣುವ ಪ್ರಪಂಚದಂತೆಯೆ ಇರುವ ಸ್ವಾಪ್ನಪ್ರಪಂಚವನ್ನು ನಮ್ಮ ಕನಸಿನಲ್ಲಿ ಹರಿ ನಿರ್ಮಿಸುವಂತೆಯೇ ಮಹಾಪ್ರಳಯಕ್ಕೆ ಪ್ರತಿನಿಧಿಯಾಗಿರುವ ಇನ್ನೊಂದು ಪ್ರಳಯವನ್ನು ತನ್ನ ಮಾಯೆಯಿಂದ ಅಂದರೆ ಇಚ್ಛೆಯಿಂದ ತತ್ಕಾಲದಲ್ಲಿ ಸೃಷ್ಟಿ ಮಾಡಿ ಮುನಿಗೆ ಹರಿ ತೋರಿದ್ದ. ಇದು ಭಾಗವತದಲ್ಲಿಯೆ ಸ್ಪಷ್ಟ. ಮಹಾಭಾರತ ಲಕ್ಷಾಲಂಕಾರದಲ್ಲಿಯೂ ಹಾಗೇ ಹೇಳಿದೆ. ಆ ಲಯಕ್ಕೆ ಈ ಲಯ ಕೇವಲ ಪ್ರತಿನಿಧಿ ಎನ್ನುವುದನ್ನು ತೋರಲೆಂದೇ ಇರಬೇಕು, ಭಾರತ ಭಾಗವತಗಳೆರಡೂ ಆಲದ ಮರವನ್ನು ಮುನಿ ಕಂಡನೆನ್ನುತ್ತವೆ. ಕಲ್ಪಾಂತ್ಯ ಪ್ರಳಯದಲ್ಲಿ ಆಲದ ಎಲೆ ಇತ್ತು, ಮರವಿರಲಿಲ್ಲ. ಯುಕ್ತಿಮಲ್ಲಿಕೆ ಹೇಳಿದೆ–

ಕಲ್ಪಾಂತೇ ತಲ್ಪಕಲ್ಪಂ ಯತ್ ಪತ್ರಮಾಸೀನ್ನ ಪಾದಪಃ ।

ಇದರಂತೆಯೇ ಇನ್ನೊಂದು ಮುಖ್ಯವಾದ ವ್ಯತ್ಯಾಸ – ಮುನಿಗೆ ಕಂಡು ಬಂದುದು ಹರಿಯ ಏಕಾಂಗಿಯಾದ ಬಾಲರೂಪ. ಕಲ್ಪಾಂತ್ಯಲಯದಲ್ಲಿದ್ದುದು ರಮೆಯೊಡನೆ ರಮಿಸುವ ಪ್ರೌಢರೂಪ. ಏಕಾಂತದಲ್ಲಿ ವಿಹರಿಸುವ ಆ ರೂಪವನ್ನು ಮುನಿಗೆ ತೋರಲಾಗದು ತಾನೆ ? ಆದ್ದರಿಂದ ಬಾಲರೂಪವನ್ನೇ ತೋರಿದ್ದ.

ಮಾರ್ಕಂಡೇಯರು ಕಂಡ ಬಾಲರೂಪ ಮಹಾಭಾರತದಲ್ಲಿ ಆಲದ ಮರದ ಕೊಂಬೆಯಲ್ಲಿದ್ದ ಸಿಂಹಾಸನದ ಮೇಲಿತ್ತು. ಭಾಗವತದಲ್ಲಿ ಎಲೆಯ ಮೇಲಿತ್ತು.

ಶಾಖಾಯಾಂ ತಸ್ಯ ವೃಕ್ಷಸ್ಯ ವಿಸ್ತೀರ್ಣಾಯಾಂ ನರಾಧಿಪ ।
ಪರ್ಯಂಕೇ ಪೃಥಿವೀಪಾಲ ದಿವ್ಯಾಸ್ತರಣ ಸಂಸ್ತೃತೇ ।
ಉಪವಿಷ್ಟಂ ಮಹಾರಾಜ ಬಾಲಂ ಪಶ್ಯಾಮಿ ಭಾರತ ।

– ಮ.ಭಾ. ವನಪರ್ವ

ಪ್ರಾಗುತ್ತರಾಯಾಂ ಶಾಖಾಯಾಂ ತಸ್ಯಾಪಿ ದದೃಶೇ ಶಿಶುಂ ।
ಶಯಾನಂ ಪರ್ಣಪುಟಕೇ ಗ್ರಸಂತಂ ಪ್ರಭಯಾ ತಮಃ ॥

– ಭಾ. ದಶಮಸ್ಕಂಧ.

ಈ ವಿರೋಧ ಅಪರಿಹಾರ್ಯವೇನಲ್ಲ. ಭಾಗವತಾನುಸಾರವಾಗಿ ಭಾರತದಲ್ಲಿ 'ಶಾಖಾಯಾಂ ಪರ್ಣಪುಟಕೇ' ಕೊಂಬೆಯಲ್ಲಿದ್ದ ಎಲೆಯ ಮೇಲೆ ಸಿಂಹಾಸನದಲ್ಲಿ ಎಂದು ಸೇರಿಸಿ ಓದಬೇಕು. ಆಗ ಎರಡು ಗ್ರಂಥಗಳಲ್ಲಿಯೂ ಆಲದೆಲೆಯ ಮೇಲೆಯೆ ಶಿಶು ಎಂಬುದು ಸಮ್ಮತವೆನಿಸುತ್ತದೆ.

ತೃತೀಯಸ್ಕಂಧ ಭಾಗವತ ಹೇಳುವ ಬಾಲರೂಪ ಕಲ್ಪಾಂತ್ಯ ಪ್ರಳಯದ್ದೇ. ಬೃಹದಾರಣ್ಯಕದ ಪ್ರೌಢರೂಪವೂ ಕಲ್ಪಾಂತ್ಯದ್ದೇ.

ಯೇನಾನಿಶಂ ರಹಸಿ ಬಂಧಮುಪೇಕ್ಷಮಾಣಃ
ಶ್ರೀಶೋಽಖಿಲಂ ಹರತಿ ಪೂರ್ಣಮನೋರಥೋಽಪಿ ॥

"ರಮಾಬಾಹುಲತಾಲಿಂಗನವನ್ನು ಏಕಾಂತದಲ್ಲಿ ಪಡೆಯುವುದೇ ಲಯದ ಮುಖ್ಯ ಉದ್ದೇಶ"ವೆಂದು ರುಕ್ಮಿಣೀಶವಿಜಯ ಹೇಳುತ್ತದೆ. ಆದ್ದರಿಂದ ಕಲ್ಪಭೇದದಿಂದ ಬೃಹದಾರಣ್ಯಕ ವಿರೋಧ ಪರಿಹಾರವಾಗದು.

ಆದರೂ ವಸ್ತುತಃ ಬೃಹದಾರಣ್ಯಕದ ವಿರೋಧವಿಲ್ಲ. ಬೃಹದಾರಣ್ಯಕದ ಪ್ರಕಾರ ಪ್ರಳಯದಲ್ಲಿ ಮೊದಲಿಗೆ ಹರಿ ಒಬ್ಬನೇ ಇದ್ದ. ಅಂದರೆ ಲಕ್ಷ್ಮೀದೇವಿಯಿಂದ ವಿಯುಕ್ತನಾಗಿದ್ದ. ನಿತ್ಯಾವಿಯೋಗಿಗಳಿಗೆ ವಿಯೋಗ ಹೇಗೆಂದರೆ ರುಕ್ಮಿಣೀಶವಿಜಯದಲ್ಲಿ ಹೇಳಿದಂತೆ, ಹರಿಯ ಶಿಶುರೂಪ ಕಂಡು ನಾಚಿ ಲಜ್ಜೆಯಿಂದ ಲಕ್ಷ್ಮಿ ಯಶೋದೆಯ ಮಡಿಲಿಂದ ಮಾತ್ರವೇ ಅಲ್ಲ ವಟಪತ್ರದಿಂದಲೂ ಹಾಗೇ ದೂರ ಹೋಗಿರಬೇಕು. ಏಕಾಂಗಿಯಾಗಿಯೇ ಬಾಲ ಮುಕುಂದ ಕೆಲಕಾಲ ಆಲದೆಲೆ ಮೇಲೆ ಮಲಗಿದ್ದ. ಬಳಿಕ ಹುಸಿ ಮುನಿಸಿನಿಂದ ದೂರದಲ್ಲಿ ಸುಮ್ಮನಿದ್ದ ರಮೆಯೊಡನೆ ರಮಿಸ ಬಯಸಿ, ಪ್ರೌಢರೂಪದಿಂದ ಸರಸವಾಡಿದ–

ಏನೇ ಹರಿಣಾಕ್ಷಿ, ಮೋಹನೆ, ಗಜಗಮನೆ !
ಧ್ಯಾನವ್ಯಾತಕೆ ನಿನಗೆಂದ ।
ಶ್ರೀನಾಥ ಸತಿಯ ಮೊಗನೋಡಿ ನಸುನಕ್ಕು
ನಾನಾಪರಿಯಲ್ಲಿ ನುಡಿಸಿದ ॥

– ತತ್ವಸಾರ

**ಆದಿ ಕಾರಣನಾಗಿ ಆಗ ಮಲಗಿದ್ದ**
**ಮೋದ ಜೀವರ ತನ್ನುದರದಲಿ ।**
**ಮೋದ ಜೀವರ ತನ್ನುದರದಲಿ ಇಂಬಿಟ್ಟ ಅ-**
**ನಾದಿ ಮೂರುತಿಯೆ ಹಸೆಗೆ ಬಾ ॥**

ಆಗ, ಬ್ರಹ್ಮಪ್ರಳಯ ಕಾಲದಲ್ಲಿ, ಜಗತ್ತಿನ ಆದಿಕಾರಣನಾಗಿ, ಸುಖಿಗಳಾದ ಜೀವರನ್ನು ತನ್ನ ಉದರದಲ್ಲಿ ಸುರಕ್ಷಿತವಾಗಿಟ್ಟುಕೊಂಡ ಅನಾದಿಮೂರ್ತಿಯಾದ ಹರಿಯೆ ಹಸೆಗೆ ಬಾ

ಹಿಂದಿನ ನುಡಿಯಲ್ಲಿ ಆದರ್ಶ ಗೃಹಸ್ಥನು ಹೆಂಡತಿಯನ್ನು ಹೇಗೆ ನೋಡಿಕೊಳ್ಳಬೇಕೆಂಬುದನ್ನು ಸೂಚಿಸಿದೆ ಈಗ ಮಕ್ಕಳನ್ನು ನೋಡಿಕೊಳ್ಳುವ ಬಗೆಯನ್ನು ಹೇಳಿದೆ

ಹಿಂದಿನ ನುಡಿಯಲ್ಲಿ ಜಗತ್ತಿನ ಸೃಷ್ಟಿಗಿಂತ ಮೊದಲು ಹರಿ ಆಲದೆಲೆಯ ಮೇಲೆ ಮಲಗಿದ್ದನೆಂದಿದೆ ಈ ನುಡಿಯಲ್ಲಿ 'ಆದಿಕಾರಣನಾಗಿ' ಮಲಗಿದ್ದನೆಂದಿದೆ ಈ ಜಗತ್ತಿನ ಸೃಷ್ಟಿಗೆ ಮೊದಲು ಮಾತ್ರವಲ್ಲ, ಹಿಂದಿನ ಮುಂದಿನ ಎಲ್ಲ ಜಗತ್ತುಗಳ ಸೃಷ್ಟಿಗೂ ಮೊದಲು ಹರಿ ಆಲದೆಲೆಯ ಮೇಲೆ ಮಲಗಿದ್ದ ಮತ್ತು ಮಲಗಿರುತ್ತಾನೆ. ಆದ್ದರಿಂದ ಒಂದು ಪದಾರ್ಥದ ಉತ್ಪತ್ತಿಗೆ ಮೊದಲು ತಪ್ಪದೇ ಆವಶ್ಯಕವಾಗಿ ಇರುವ ವಸ್ತು ಆ ಪದಾರ್ಥಕ್ಕೆ ಕಾರಣ ಎನ್ನುವ ನಿಯಮದಂತೆ ಜಗತ್ತಿನ ಉತ್ಪತ್ತಿಗೆ ಮೊದಲು ತಪ್ಪದೆ ಆವಶ್ಯಕವಾಗಿ ಇರುವ ಶ್ರೀಹರಿ ಜಗತ್ಕಾರಣ ಎಂದೆನ್ನಬೇಕಾಗುತ್ತದೆ ವಾಸುದೇವನು ಸತ್ವಾಭಿಮಾನಿ ಶ್ರೀರೂಪಳಾದ ಮಾಯಾದೇವಿಯಲ್ಲಿ ವಿಷ್ಣುರೂಪದಿಂದಲೂ, ರಜೋಭಿಮಾನಿ ಭೂರೂಪಳಾದ ಮಾಯಾದೇವಿಯಲ್ಲಿ ಬ್ರಹ್ಮಾಂತರ್ಯಾಮಿ ಬ್ರಹ್ಮರೂಪದಿಂದಲೂ, ತಮೋಭಿಮಾನಿ ದುರ್ಗಾರೂಪಳಾದ ಮಾಯಾದೇವಿಯಲ್ಲಿ ರುದ್ರಾಂತರ್ಯಾಮಿ ರುದ್ರರೂಪದಿಂದಲೂ ಅವತರಿಸಿ ಈ ಮೂರು ರೂಪಗಳಿಂದ ಜಗತ್ತಿನ ಸ್ಥಿತಿ ಸೃಷ್ಟಿ ಲಯ ಕಾರ್ಯಗಳನ್ನು ನಡೆಸುತ್ತಾನೆ

ಬ್ರಹ್ಮನು ಸೃಷ್ಟಿಕರ್ತನೆಂಬುದು ಪ್ರಸಿದ್ಧ. ಶಿವನೂ ಸೃಷ್ಟಿಕಾರ್ಯ ಮಾಡುತ್ತಾನೆ ಅವನು ಬ್ರಹ್ಮ ವಾಯು ಶೇಷರಿಂದ, ಸತ್ವರಜಸ್ತಮೋಗುಣ ಪ್ರಚುರನಾಗಿ, ವಿಷ್ಣು ಬ್ರಹ್ಮರುದ್ರರೂಪಗಳಿಂದ ಜನಿಸಿ ಸ್ಥಿತಿ ಸೃಷ್ಟಿ ಲಯಗಳನ್ನು ಮಾಡುತ್ತಾನೆ ಅರ್ಧನಾರೀರೂಪನಾಗಿ ಬಲಭಾಗದಿಂದ ಇಂದ್ರಾದಿ ದೇವತೆಗಳನ್ನೂ ಎಡ ಭಾಗದಿಂದ ಅವರ ಸ್ತ್ರೀಯರನ್ನೂ ಸೃಷ್ಟಿಸುತ್ತಾನೆ ಅಹಂಕಾರಾಭಿಮಾನಿಯಾಗಿ

ವೈಕಾರಿಕ ತೈಜಸ ತಾಮಸ ಅಹಂಕಾರಗಳಿಂದ ಕ್ರಮವಾಗಿ ದೇವತಾಶರೀರ ಇಂದ್ರಿಯ ಪಂಚಭೂತಗಳನ್ನೂ ಸೃಷ್ಟಿಸುತ್ತಾನೆ. ಹೀಗೆ ಬ್ರಹ್ಮಾಂಡದ ಸೃಷ್ಟಿಯಾದ ಬಳಿಕ ಶ್ವೇತವರಾಹಕಲ್ಪದಲ್ಲಿ ಭೀಕರ ರುದ್ರಗಣಗಳನ್ನೂ ಸೃಷ್ಟಿ ಮಾಡುತ್ತಾನೆ. ಮುಂದೆ ಮರೀಚಿ ದಕ್ಷ ಮುಂತಾದ ಪ್ರಜಾಪತಿಗಳು ಸೃಷ್ಟಿಕಾರ್ಯವನ್ನು ಮುಂದುವರಿಸುತ್ತಾರೆ ಕಶ್ಯಪ ಸ್ವಾಯಂಭುವ ಮನು ಪ್ರಿಯವ್ರತಾದಿಗಳೂ ಸೃಷ್ಟಿ ಮಾಡುತ್ತಾರೆ ಹೀಗೆ ಸೃಷ್ಟಿಕರ್ತರು ಅನೇಕರಿದ್ದಾರೆ. ಅವರೆಲ್ಲರೂ ಜಗತ್ತಿಗೆ ಕಾರಣರು. ಆದರೆ ಆದಿ ಕಾರಣರಲ್ಲ. ಆದಿಕಾರಣ ಶ್ರೀಹರಿಯೆ. ಏಕೆಂದರೆ ಆಗ, ಪ್ರಳಯ ಕಾಲದಲ್ಲಿ ಬೇರಾರೂ ಇರಲಿಲ್ಲ. ಆತನೊಬ್ಬನೆ ಮಲಗಿದ್ದ. ಆದ್ದರಿಂದಲೆ ಆತ ಅನಾದಿ ಮೂರ್ತಿ. ಅವನ ಮೂರ್ತಿ ಅಂದರೆ ಶರೀರ ಅನಾದಿ. ಎಂದೂ ಹೊಸದಾಗಿ ಉತ್ಪನ್ನವಾದುದಲ್ಲ. ಹೊಸದಾಗಿ ಉತ್ಪನ್ನವೇ ಆಗಿದ್ದರೆ ಅದಕ್ಕೆ ಬೇರೊಬ್ಬ ಕಾರಣನಿರಬೇಕಾಗಿತ್ತು ಉತ್ಪನ್ನವಲ್ಲವಾದ್ದರಿಂದ ಬೇರೆ ಕಾರಣನಿಲ್ಲ ಅವನೇ ಆದಿಕಾರಣ. ಬ್ರಹ್ಮಾದಿದೇವತೆಗಳು ಯಾರೂ ಅನಾದಿ ಮೂರ್ತಿಗಳಲ್ಲ. ಅವರ ಮೂರ್ತಿಗಳು, ಅಂದರೆ ಅವರ ಜಡಶರೀರಗಳು ಉತ್ಪನ್ನವಾಗುತ್ತವೆ ಏಕೆಂದರೆ ಅವರು ಸಂಸಾರಿಗಳು. ಶ್ರೀಹರಿ ನಿತ್ಯಮುಕ್ತ ಅವನಿಗೆಂದೂ ಜಡಶರೀರಪ್ರಾಪ್ತಿ ಇಲ್ಲ ಆದ್ದರಿಂದ ಅವನೊಬ್ಬನೆ ಅನಾದಿ ಮೂರ್ತಿ, ಆದಿ ಕಾರಣ.

ಹರಿಯ ಬ್ರಹ್ಮಾಂಡಾಂತರ್ಗತವಾದ ಸಕಲ ರೂಪಗಳೂ ಒಂದು ದೃಷ್ಟಿಯಿಂದ ಸಾದಿ. ಅವುಗಳಿಗೆ ಶುದ್ಧ ಸೃಷ್ಟಿ ಇದೆ. ಒಂದು ದೀಪದಿಂದ ಅನೇಕ ದೀಪಗಳು ಹೊರ ಬರುವಂತೆ ಮೂಲರೂಪದಿಂದ ಎಲ್ಲ ರೂಪಗಳೂ ಹೊರಬರುತ್ತವೆ. ಕೊನೆಗೆ ಹಾಗೇ ಒಂದಾಗುತ್ತವೆ. ವಸ್ತುತಃ ಭೇದವಿಲ್ಲದಿದ್ದರೂ ವಿಶೇಷಬಲದಿಂದ ಈ ಸೃಷ್ಟಿ ಕೂಡುತ್ತದೆ. ಆದ್ದರಿಂದ ಬ್ರಹ್ಮಾಂಡದ ಹೊರಗೆ ವ್ಯಾಪ್ತವಾದ, ಶೂನ್ಯ–ಬ್ರಹ್ಮ–ನಾರಾಯಣ ಎಂದೆಲ್ಲ ಕರೆಸಿಕೊಳ್ಳುವ ಮೂಲ ರೂಪ ಅನಾದಿ, ಅನಾದಿ ಜೀವರ ಬಿಂಬ ರೂಪಗಳೂ ಅನಾದಿ. ಬೇರೆ ರೂಪಗಳೆಲ್ಲವೂ ಸಾದಿ. ಆದರೂ ಪ್ರಕೃತ ಸ್ವಯಂವರ ಮಾಲಿಕೆಯನ್ನು ಧರಿಸಿದ ಶ್ರೀಹರಿಯ ರೂಪವು ಅನಾದಿ ರೂಪದಿಂದ ಅಭಿನ್ನವಾದ್ದರಿಂದ ಅದೂ ಅನಾದಿ. ಆದ್ದರಿಂದ ಅನಾದಿ ಮೂರ್ತಿಯೆ, ಹಸೆಗೆ ಬಾ ಎಂದಿದೆ.

ಶ್ರೀಹರಿ ತನ್ನ ಉದರದಲ್ಲಿ ಸರ್ವಜೀವರನ್ನೂ ಸುರಕ್ಷಿತವಾಗಿಟ್ಟುಕೊಂಡು ಲಯಕಾಲದಲ್ಲಿ ಮಲಗಿದ. ವಿಷ್ಣುರಹಸ್ಯದಲ್ಲಿ ಹೇಳಿದಂತೆ ನಾಭಿಪ್ರದೇಶದಿಂದ ಮೇಲ್ಗಡೆ ಬಲಭಾಗದಲ್ಲಿ ಮುಕ್ತಜೀವರನ್ನೂ, ಎಡಭಾಗದಲ್ಲಿ ಮುಕ್ತಿಯೋಗ್ಯರನ್ನೂ, ನಾಭಿ ಪ್ರದೇಶದಲ್ಲಿ ಲಿಂಗಭಂಗವಾದ ಆಗಿರದ ಎಲ್ಲ ನಿತ್ಯಸಂಸಾರಿಗಳನ್ನೂ, ಎಡಭಾಗದಲ್ಲಿ ತಮೋವಾಸಿಗಳನ್ನೂ ಇಟ್ಟುಕೊಂಡು ಆಲದೆಲೆಮೇಲೆ ಯೋಗನಿದ್ರೆ ಮಾಡಿದ.

'ಸಂಶಾಂತ ಸಂವಿದಖಿಲಂ ಜರರೇ ನಿಧಾಯ',

'ದೃಷ್ಟ್ವಾ ಸ ಚೇತನಗಣಾನ್ ಜರರೇ ಶಯಾನಾನ್

ಎಂದು ನಿರ್ಣಯದಲ್ಲಿ ಹೇಳಿದೆ.

'ಮೋದ ಜೀವರ' ಎಂದ ಮಾತ್ರಕ್ಕೆ ಎಲ್ಲ ಜೀವರೂ ಸುಖಿಗಳಾಗಿಯೆ ಇದ್ದರೆಂದಲ್ಲ. 'ಸ್ವಾಪಂ ಪ್ರಾಪಯತಿ ಶ್ರಮಾಪಹೃತಯೇ' ಎಂದು ವಿಷ್ಣುತತ್ತ್ವ ನಿರ್ಣಯ ಟೀಕಾವಾಕ್ಯವು ಸಂಸಾರಿಗಳ ಕುರಿತು ಹೇಳಿದುದು. ಅವರಿಗೆ ನಿದ್ರೆಯ ಸುಖವಿದೆ. ಲಿಂಗಭಂಗ ಹೊಂದಿದ ಸಾತ್ವಿಕರಿಗೂ ತಮ್ಮ ಸ್ವರೂಪಸುಖಾನುಭವವಿದೆ. ಆದರೆ ಲಿಂಗಭಂಗ ಹೊಂದಿದ ರಾಜಸರಿಗೂ ತಾಮಸರಿಗೂ ಸ್ವರೂಪದುಃಖಾನುಭವ ಅನಿವಾರ್ಯ. ತಾಮಸರಿಗೆ ಸಂಸಾರದಲ್ಲಿ ಸುಪ್ತಿಸುಖವೂ ಇಲ್ಲವೆಂಬುದು ವಾದಿರಾಜರ ಸಿದ್ಧಾಂತ. ಕೇವಲ ಬಾಹ್ಯ ದುಃಖಾಭಾವವನ್ನೇ ತಾಮಸರು ಸುಪ್ತಿಯಲ್ಲಿ ಅನುಭವಿಸುತ್ತಾರೆ. ಸುಖವೆಂದು ಭ್ರಮಿಸುತ್ತಾರೆ. ಪ್ರಳಯಕಾಲದಲ್ಲಿ ಸ್ವರೂಪದುಃಖವನ್ನೇ ಅನುಭವಿಸುತ್ತಾರೆ. ವಾದಿರಾಜರು ಭೂಗೋಳವರ್ಣನೆಯಲ್ಲಿ ಹೇಳಿದ್ದಾರೆ –

ತತ್ರಾಪಿ ದುಃಖರೂಪತ್ವಾತ್ ಅಕ್ಷಿಕುಕ್ಷಿಶಿರೋವ್ಯಥಾಃ ।
ಆಧಿವ್ಯಾಧೀಂಶ್ಚ ಬಹುಶೋ ಭುಂಜತೇ ಸ್ವಶರೀರಗಾನ್ ॥

'ಪ್ರಳಯ ಕಾಲದಲ್ಲಿ ತಮೋನಿವಾಸಿಗಳು ತಮಸ್ಸನ್ನು ತೊರೆದು ಭಗವಂತನ ಉದರವನ್ನು ಪ್ರವೇಶಿಸುತ್ತಾರೆ. ಆದರೆ ಅಲ್ಲಿಯೂ ಅವರಿಗೆ ಸುಖವಿಲ್ಲ. ಅವರ ಸ್ವರೂಪವೇ ದುಃಖರೂಪವಾದ್ದರಿಂದ ಸ್ವರೂಪಶರೀರದಲ್ಲಿಯೇ ಕಣ್ಣುನೋವು ಹೊಟ್ಟೆನೋವು ತಲೆನೋವು ಎಂದು ಮುಂತಾಗಿ ನಾನಾ ಬಗೆಯ ಆಧಿ ವ್ಯಾಧಿಗಳ ದುಃಖವನ್ನೇ ಅನುಭವಿಸುತ್ತಾರೆ.'

ಆದ್ದರಿಂದ ಸಂಸಾರಿ ಜೀವರ ಮತ್ತು ಮುಕ್ತರ ವಿವಕ್ಷೆಯಿಂದ 'ಮೋದಜೀವರ ತನ್ನುದರದಲ್ಲಿ ಇಂಬಿಟ್ಟ'ನೆಂದು ಹೇಳಿದೆ ಅಥವಾ ಪ್ರಳಯಕಾಲದಲ್ಲಿ ಲಿಂಗಭಂಗ ಹೊಂದಿದ ರಾಜಸರಿಗೆ ಸ್ವರ್ಗಭೂಮಿನರಕಗಳಲ್ಲಿ ಸುತ್ತುವ ಕೆಲಸವಿಲ್ಲ. ತಾಮಸರಿಗೂ ಪಂಚಕಷ್ಟಗಳ ಶಿಕ್ಷೆಯಿಲ್ಲ. ಇವನ್ನೇ ಸುಖವೆಂದು ಭ್ರಮಿಸಿ ಅವರು ಮೋದಜೀವರೆನಿಸಬಹುದು.'

ಗೃಹಸ್ಥನು ಎಲ್ಲ ಜೀವರಿಗೂ ಸಾಧ್ಯವಿದ್ದಷ್ಟು ಅನ್ನನೀರು ಆಶ್ರಯಗಳನ್ನು ಕೊಡುತ್ತ ಎಲ್ಲರಿಗೂ ಸುಖ ಬಯಸಬೇಕು. ವಿಷ್ಣುಪುರಾಣ ಹೇಳುತ್ತದೆ. –

ನಿವಾಪೇನ ಪಿತೄನರ್ಚನ್ ಯಜ್ಞೈರ್ದೇವಾನ್ ತಥಾತಿಥೀನ್ ।
ಅನ್ನೈರ್ಮುನೀಂಶ್ಚ ಸ್ವಾಧ್ಯಾಯೈರಪತ್ಯೇನ ಪ್ರಜಾಪತಿಂ ॥
ಭೂತಾನಿ ಬಲಿಭಿಶ್ಚೈವ ವಾತ್ಸಲ್ಯೇನಾಖಿಲಂ ಜಗತ್ ।
ಪ್ರಾಪ್ನೋತಿ ಲೋಕಾನ್ ಪುರುಷೋ ನಿಜಕರ್ಮಸಮಾರ್ಜಿತಾನ್ ।
ಭಿಕ್ಷಾಭುಜಶ್ಚ ಯೇ ಕೇಚಿತ್ ಪರಿವ್ರಾಡ್‌ಬ್ರಹ್ಮಚಾರಿಣಃ ।
ತೇಽಪ್ಯತ್ರೈವ ಪ್ರತಿಷ್ಠಂತೇ ಗಾರ್ಹಸ್ಥ್ಯಂ ತೇನ ವೈ ಪರಂ ॥

'ಪಿಂಡ ತರ್ಪಣಾದಿಗಳಿಂದ ಪಿತೃಗಳನ್ನೂ, ಯಜ್ಞಗಳಿಂದ ದೇವತೆಗಳನ್ನೂ, ಅನ್ನದಾನದಿಂದ ಅತಿಥಿಗಳನ್ನೂ, ವೇದಾಧ್ಯಯನದಿಂದ ಋಷಿಗಳನ್ನೂ, ಪುತ್ರಸಂತಾನದಿಂದ ಪ್ರಜಾಪತಿಯನ್ನೂ, ಬಲಿಹರಣದಿಂದ ಪ್ರಾಣಿಗಳನ್ನೂ, ವಾತ್ಸಲ್ಯದಿಂದ ಸಕಲ ಜೀವರನ್ನೂ ತೃಪ್ತಿಪಡಿಸುವುದು ಗೃಹಸ್ಥನ ಕರ್ತವ್ಯ. ಅದರಿಂದ ಆತ ಉತ್ತಮ ಲೋಕಗಳನ್ನು ಹೊಂದುತ್ತಾನೆ. ಭಿಕ್ಷೆ ಬೇಡಿ ಜೀವಿಸುವ ಯತಿ ಬ್ರಹ್ಮಚಾರಿಗಳಿಗೂ ಗೃಹಸ್ಥನೇ ಆಶ್ರಯ ನೀಡಬೇಕು. ಆದ್ದರಿಂದ ಗೃಹಾಸ್ಥಾಶ್ರಮವೇ ಶ್ರೇಷ್ಠ.'

ಹೀಗೆ ಗೃಹಸ್ಥನು ಎಲ್ಲ ಜೀವರನ್ನೂ ಪ್ರೀತಿಸಿ ಹೊಟ್ಟೆಯಲ್ಲಿ ಹಾಕಿಕೊಳ್ಳಬೇಕು ಎಂಬ ಆದರ್ಶವನ್ನು ಆದರ್ಶ ಗೃಹಸ್ಥನಾದ ಶ್ರೀಹರಿ 'ಮೋದ ಜೀವರ ತನ್ನುದರದಲಿ ಇಂಬಿಟ್ಟು' ಕೊಳ್ಳುವ ಮೂಲಕ ತೋರಿದ್ದಾನೆ ಇದನ್ನು ನೂತನ ದಂಪತಿಗಳು ಅನುಸಂಧಾನ ಮಾಡಿದರೆ ಆದರ್ಶ ಗೃಹಸ್ಥ ಜೀವನ ನಡೆಸುವಲ್ಲಿ ಯಶಸ್ವಿಯಾಗಬಲ್ಲರು ಎಂಬ ಅಭಿಪ್ರಾಯದಿಂದ ಹಾಗೆ ಸಂಬೋಧಿಸಲಾಗಿದೆ.

– ೮೧ –

**ಚಿನ್ಮಯವೆನಿಪ ನಿಮ್ಮ ಮನೆಗಳಲ್ಲಿ ಜ್ಯೋ-**
**ತಿರ್ಮಯವಾದ ಪದ್ಮದಲ್ಲಿ ।**
**ರಮ್ಮೆಯರೊಡಗೂಡಿ ರಮಿಸುವ ಶ್ರೀಕೃಷ್ಣ**
**ನಮ್ಮ ಮನೆಯ ಹಸೆಗೆ ಬಾ ॥**

ಕೃಷ್ಣ, ನಿಮ್ಮ ಮನೆಗಳೆಲ್ಲವೂ ಚಿನ್ಮಯ. ಅವುಗಳಲ್ಲಿ ಜ್ಯೋತಿರ್ಮಯವಾದ ಪದ್ಮಗಳು ಅವುಗಳಲ್ಲಿ ರಮಾದೇವಿಯರೊಡಗೂಡಿ ರಮಿಸುವ ನೀನು ನಮ್ಮ ಹಸೆಮಣೆಗೆ ಬಾ'.

ಶ್ರೀಹರಿ ಬ್ರಹ್ಮಾಂಡ ಲಯಗೈದು ಎಲ್ಲ ಜೀವರನ್ನೂ ತನ್ನ ಹೊಟ್ಟೆಯೊಳಗಿಟ್ಟುಕೊಂಡು ಪ್ರಳಯ ಜಲದಲ್ಲಿ ಯೋಗನಿದ್ರೆ ಮಾಡಿದ್ದಾನೆ. ಇದನ್ನು ಹಿಂದಿನ ನುಡಿಯಲ್ಲಿ ವರ್ಣಿಸಲಾಗಿದೆ. ಮುಂದೆ ಪ್ರಳಯದ ಕೊನೆಯಲ್ಲಿ

ದುರ್ಗಾದೇವಿ ಹಾಡುವ ಶ್ರುತಿಗೀತೆಯು ಮಂಗಳಧ್ವನಿಗೆ ಎಚ್ಚೆತ್ತವನಂತೆ ಎದ್ದು, ಬ್ರಹ್ಮಾಂಡ ಸೃಷ್ಟಿ ಮಾಡಿ, ಅದರಲ್ಲಿ ಲಕ್ಷ್ಮೀ ಸ್ವರೂಪಭೂತವಾದ ಶ್ವೇತದ್ವೀಪ ಅನಂತಾಸನ ವೈಕುಂಠಗಳ ಶ್ರೀ ಭಾಗವನ್ನು ವ್ಯಕ್ತಗೊಳಿಸಿ, ತನ್ನ ಉದರದಲ್ಲಿ ಧ್ಯಾನಸ್ಥರಾದ ಮುಕ್ತಜೀವರನ್ನು ಅಲ್ಲಿ ಪ್ರವೇಶಮಾಡಿಸಿ, ಅವರೊಡನೆ ಕ್ರೀಡಿಸಿ, ದಿವ್ಯರತ್ನಮಂಟಪದೊಳಗಿರುವ ಚಿನ್ಮಯವಾದ ಪದ್ಮಗಳಲ್ಲಿ ರಮಾದೇವಿಯೊಡನೆ ರಮಿಸುತ್ತಾನೆ. ಇದನ್ನು ಈ ನುಡಿಯಲ್ಲಿ ವರ್ಣಿಸಲಾಗಿದೆ.

'ನಿಮ್ಮ ಮನೆಗಳು' ಎಂದರೆ ಶ್ರೀಹರಿಯ ಶ್ವೇತದ್ವೀಪ, ಅನಂತಾಸನ, ವೈಕುಂಠಗಳೆಂಬ ಧಾಮತ್ರಯ. ಇವುಗಳಲ್ಲಿ ಪ್ರತಿಯೊಂದರಲ್ಲಿಯೂ ಶ್ರೀಭಾಗ ಭೂಭಾಗ ದುರ್ಗಾಭಾಗಗಳೆಂಬ ಮೂರು ಭಾಗಗಳಿವೆ. ಭೂ ದುರ್ಗಾ ಭಾಗಗಳೆರಡೂ ಪ್ರಾಕೃತ. ನಶ್ವರ. ಲಯಕಾಲದಲ್ಲಿ ನಾಶ ಹೊಂದುತ್ತವೆ. ಶ್ರೀಭಾಗ ಮಾತ್ರ ಅಪ್ರಾಕೃತ, ಚಿನ್ಮಯ, ಲಕ್ಷ್ಮೀಸ್ವರೂಪ. ಅದು ಅವಿನಾಶಿಯಾದ್ದರಿಂದ ಲಯಕಾಲದಲ್ಲಿ ಅವ್ಯಕ್ತರೂಪದಲ್ಲಿರುತ್ತದೆ. ಬ್ರಹ್ಮಾಂಡ ಸೃಷ್ಟಿಯಾದಾಗ ವ್ಯಕ್ತವಾಗುತ್ತದೆ. ಚಿನ್ಮಯವೆನಿಪ 'ನಿಮ್ಮ ಮನೆಗಳು' ಎಂದು ಧಾಮತ್ರಯದ ಈ ಭಾಗಗಳನ್ನೇ ಹೇಳಲಾಗಿದೆ.

> ವೈಕುಂಠಂ ನಾಮಂ ಲೋಕಂ ತಂ ದಿವ್ಯಂ ಷಡ್ಗುಣಸಂಯುತಂ ।
> ಅವೈಷ್ಣವಾನಾಮಪ್ರಾಪ್ಯಂ ಗುಣತ್ರಯ ವಿವರ್ಜಿತಂ ॥
> ಅಪ್ರಾಕೃತಂ ಸುರೈರ್ವಂದ್ಯಂ ಅಯುತಾರ್ಕಸಮಪ್ರಭಂ ।
> ಪ್ರಕೃಷ್ಟಸತ್ವರಾಶಿತ್ವಾತ್ ಕದಾ ದ್ರಕ್ಷ್ಯಾಮಿ ಚಕ್ಷುಷಾ ?

ವೈಕುಂಠವೆಂಬ ಆ ಲೋಕವು ದಿವ್ಯ. ಐಶ್ವರ್ಯ ವೀರ್ಯ ಯಶಸ್ ಶ್ರೀಜ್ಞಾನ ವಿಜ್ಞಾನಗಳೆಂಬ ಆರು ಗುಣಗಳಿಂದ ಯುಕ್ತವಾಗಿದೆ. ವಿಷ್ಣುಭಕ್ತಿಯಿಲ್ಲದವರಿಗೆ ಅದು ಅಪ್ರಾಪ್ಯ. ಸತ್ವರಜಸ್ತಮೋರೂಪಗುಣತ್ರಯ ರಹಿತವಾದುದು. ಅಪ್ರಾಕೃತ. ದೇವತೆಗಳಿಗೂ ವಂದ್ಯವಾದುದು. ಹತ್ತು ಸಾವಿರ ಸೂರ್ಯರ ಪ್ರಕಾಶದಿಂದ ಹೊಳೆಯುವಂಥದ್ದು. ಇಲ್ಲಿರುವವರೆಲ್ಲ ಶುದ್ಧ ಚಿನ್ಮಯ ಶರೀರಿಗಳಾಗಿ ಇರುವುದರಿಂದ ಪ್ರಾಕೃತ ಶರೀರಿಯಾದ ನಾನು ಇದನ್ನು ಎಂದು ಕಣ್ಣಿಂದ ನೋಡುವೆನೋ !' ಎಂದು ಪಂಚರಾತ್ರದ ಜಿತಂತೇ ಸ್ತೋತ್ರದಲ್ಲಿ ಚತುರ್ಮುಖನು ಶ್ರೀಹರಿಯನ್ನು ಸ್ತುತಿಸುತ್ತಾನೆ. ಇದರಿಂದ ವೈಕುಂಠ ಬೇರೆ ಲೋಕಗಳಂತೆ ಪ್ರಾಕೃತವಲ್ಲ, ಚಿನ್ಮಯ ಎಂಬುದು ಸ್ಪಷ್ಟವಾಗುತ್ತದೆ.

ಭಾಗವತದಲ್ಲಿ 'ನ ಯತ್ರ ಮಾಯಾ ಕಿಮುತಾಪರೇ' ಎಂದು ವೈಕುಂಠವನ್ನು ವರ್ಣಿಸಲಾಗಿದೆ. ಮಾಯಾಲೇಶವೂ ವೈಕುಂಠದಲ್ಲಿ ಇಲ್ಲವೆನ್ನಲಾಗಿದೆ ಜಡಪದಾರ್ಥವೆಲ್ಲವೂ ಮಾಯಾಮಯವೇ ಆಗಿರುವುದರಿಂದ

ಮಾಯಾಲೇಶಶೂನ್ಯವಾದ ವೈಕುಂಠ ನಿತ್ಯಮುಕ್ತ ಚೇತನಸ್ವರೂಪವೇ ಆಗಿರಬೇಕು. ನಿತ್ಯಮುಕ್ತಚೇತನರೆಂದರೆ ಲೋಕದಲ್ಲಿ ಲಕ್ಷ್ಮೀನಾರಾಯಣರಿಬ್ಬರೇ. ನಾರಾಯಣ ವೈಕುಂಠಪತಿಯೆಂದ ಮೇಲೆ ಲಕ್ಷ್ಮಿಯೇ ವೈಕುಂಠರೂಪಳಾಗಿರಬೇಕು.

'ಶಂಭುಬ್ರಹ್ಮೋರ್ಧ್ವಧಾಮಗಂ' ಎಂದು ಪದ್ಮಪುರಾಣೋಕ್ತ ವಾಸುದೇವ ಸಹಸ್ರನಾಮಗಳಲ್ಲಿ ಒಂದು ನಾಮವಿದೆ. ಮೇಲುನೋಟಕ್ಕೆ ಶಂಭುವಿನ ಧಾಮವಾದ ಕೈಲಾಸಕ್ಕಿಂತಲೂ ಬ್ರಹ್ಮನ ಧಾಮವಾದ ಸತ್ಯಲೋಕಕ್ಕಿಂತಲೂ ಮೇಲಿನದಾದ ವೈಕುಂಠಲೋಕದಲ್ಲಿ ಹರಿ ಇದ್ದಾನೆ ಎಂದು ಹೇಳಿದಂತೆ ಕಾಣಬಹುದು. ಆದರೆ ಇದರಲ್ಲಿ ಮಹತ್ವವೇನಿಲ್ಲ. ಕೈಲಾಸಕ್ಕಿಂತ ಮೇಲಿದ್ದರೂ ಸ್ವರ್ಗ ಮುಂತಾದ ಲೋಕಗಳು ಕೈಲಾಸಕ್ಕಿಂತ ಶ್ರೇಷ್ಠವಲ್ಲ. ವೈಕುಂಠವೂ ಹಾಗೇ ಎಲ್ಲ ಲೋಕಗಳಿಗಿಂತ ಮೇಲೆ ಇದೆ ಎಂದ ಮಾತ್ರಕ್ಕೆ ಶ್ರೇಷ್ಠವೆಂದಾಗಬೇಕಾಗಿಲ್ಲ. ವಸ್ತುತಃ ಶಂಭುವಿನ ಧಾಮ ಕೈಲಾಸ, ಬ್ರಹ್ಮನ ಧಾಮ ಸತ್ಯಲೋಕವೆನ್ನುವುದೂ ಸರಿಯಲ್ಲ. ಬ್ರಹ್ಮಾಂಡದ ಹೊರಗೆ ಅಹಂಕಾರಾವರಣದವರೆಗೂ ಅಹಂಕಾರಾಭಿಮಾನಿ ಶಂಭುವಿನ ಆಧಿಪತ್ಯವಿದೆ. ಆದರಾಚೆ ಮಹತ್ತತ್ತ್ವಾವರಣಪರ್ಯಂತವೂ ಮಹತ್ತತ್ತ್ವಾಭಿಮಾನಿ ಬ್ರಹ್ಮನ ಒಡೆತನ ಇದೆ. ವೈಕುಂಠ ಅವುಗಳಿಗೂ ಆಚೆಯ ಲೋಕವೇನಲ್ಲ. ಆದ್ದರಿಂದ ಶಂಭು ಬ್ರಹ್ಮೋರ್ಧ್ವಧಾಮ ಎಂದರೆ ಶಂಭು ಬ್ರಹ್ಮರಿಗಿಂತ ಶ್ರೇಷ್ಠಳಾದ ಲಕ್ಷ್ಮಿಯ ಸ್ವರೂಪ ಭೂತವಾದ ಧಾಮ ಎಂದೇ ಅರ್ಥೈಸ ಬೇಕಾಗುತ್ತದೆ. ಹೀಗೆ ವೈಕುಂಠವು ಲಕ್ಷ್ಮೀ ಸ್ವರೂಪವಾಗಿದ್ದು ಚಿನ್ಮಯವೆನ್ನುವುದು ಪಂಚರಾತ್ರ ಭಾಗವತ ಪದ್ಮಪುರಾಣಾದಿಗಳಲ್ಲಿ ಸ್ಪಷ್ಟವಿದೆ. ವೈಕುಂಠಮಾತ್ರವೇ ಅಲ್ಲ, ಧಾಮತ್ರಯವೂ ಲಕ್ಷ್ಮೀಸ್ವರೂಪವೇ.

ಶ್ರೀರೇವ ಲೋಕರೂಪೇಣ ವಿಷ್ಣೋಸ್ತಿಷ್ಠತಿ ಸರ್ವದಾ ।
ಅತೋ ಹಿ ವೈಷ್ಣವಾ ಲೋಕಾ ನಿತ್ಯಾಸ್ತೇ ಚೇತನಾ ಅಪಿ ॥

'ಲಕ್ಷ್ಮೀದೇವಿ ತಾನೆ ಹರಿಗೆ ವೈಕುಂಠಾದಿ ಲೋಕಗಳ ರೂಪದಿಂದ ಸದಾ ಇರುತ್ತಾಳೆ. ಆದ್ದರಿಂದ ವಿಷ್ಣುಲೋಕಗಳು ನಿತ್ಯವೂ ಚೇತನಸ್ವರೂಪವೂ ಆಗಿರುತ್ತವೆ' ಎಂದು ಅಗ್ನಿಪುರಾಣವು ಸ್ಪಷ್ಟವಾಗಿ ಹೇಳುತ್ತಿದೆ.

ವೈಕುಂಠವು ಭೂಲೋಕದಿಂದ ಹದಿನಾರುಕೋಟಿ ಇಪ್ಪತ್ತೈದುಲಕ್ಷ ಯೋಜನ ಎತ್ತರದಲ್ಲಿ ಸತ್ಯಲೋಕಕ್ಕಿಂತಲೂ ಮೇಲೆ ಇದೆ. ವಾದಿರಾಜರು ಭೂಗೋಳವರ್ಣನೆಯಲ್ಲಿ ಹಾಗೆ ಹೇಳಿದ್ದಾರೆ–

ಕೋಟೀನಾಂ ಷೋಡಶೈಃ ಪಂಚವಿಂಶಲಕ್ಷಯುತೈಃ ಸ ಚ ।
ಭೂಲೋಕಾದುಚ್ಛ್ರಿತೋ ಜ್ಞೇಯಃ ॥

ಶ್ವೇತದ್ವೀಪವು ಕ್ಷೀರಸಮುದ್ರದಲ್ಲಿದ್ದರೂ ಆ ಪ್ರದೇಶದಲ್ಲಿ ಕ್ಷೀರವು ಹೆಪ್ಪುಗಟ್ಟಿ ಬೆಟ್ಟದಂತೆ ಐವತ್ತು ಲಕ್ಷ ಯೋಜನದಷ್ಟು ಎತ್ತರಕ್ಕೆ ಬೆಳೆದಿರುವುದರಿಂದ ಅದರ ಮೇಲೆ ಇರುವ ಶ್ವೇತದ್ವೀಪವು ಸ್ವರ್ಗಲೋಕದಷ್ಟು ಎತ್ತರದಲ್ಲಿ, ಎಂದರೆ ಭೂಮಿಯಿಂದ ಐವತ್ತುಲಕ್ಷ ಯೋಜನ ಎತ್ತರದಲ್ಲಿದೆ. ಅನಂತಾಸನವು ಭೂಲೋಕದಲ್ಲಿಯೇ ಒಂದು ಲಕ್ಷ ಯೋಜನ ಎತ್ತರದಲ್ಲಿದೆ

ಈ ಮೂರು ಲೋಕಗಳ ಶ್ರೀಭಾಗಗಳು ಚಿನ್ಮಯವಾಗಿದ್ದು ಅವುಗಳಲ್ಲಿ ಚಿನ್ಮಯವಾದ ರತ್ನಖಚಿತ ಸುವರ್ಣಮಂಟಪದೊಳಗೆ ಚಿನ್ಮಯಪ್ರಕಾಶದಿಂದ ಹೊಳೆಯುವ ಲಕ್ಷ್ಮೀಸ್ವರೂಪವಾದ ಒಂದು ಷಡ್‌ದಲ ಪದ್ಮ ಅದರ ಮುಂಭಾಗದ ಮೂರು ದಳಗಳಲ್ಲಿ ದೀಪಗಳಂತೆ ಸೂರ್ಯ ಚಂದ್ರ ವಹ್ನಿಮಂಡಲಗಳು. ಅವುಗಳು ಕ್ರಮವಾಗಿ ದ್ವಾದಶ, ಷೋಡಶ, ದಶಕಲೆಗಳಿಂದ ತುಂಬಿವೆ. ಓಂಕಾರದ ಅ ಉ ಮ್ ಎಂಬ ಮೂರು ಅಕ್ಷರಗಳಿಂದ ಕರೆಯಲ್ಪಡುತ್ತವೆ. ಹಿಂಭಾಗದ ಮೂರು ದಳಗಳಲ್ಲಿ ಸತ್ವರಜಸ್ತಮೋಽಭಿಮಾನಿನಿಯಾದ ಲಕ್ಷ್ಮೀದೇವಿಯ ಶ್ರೀಭೂದುರ್ಗಾರೂಪಗಳಿವೆ

ಈ ಪದ್ಮದ ಮೇಲೆ ಮೆಟ್ಟಲುಗಳ ರೂಪದಲ್ಲಿ ನಾಲ್ಕು ದಿಕ್ಕುಗಳಲ್ಲಿ ಆತ್ಮ ಅಂತರಾತ್ಮ ಪರಮಾತ್ಮ ಜ್ಞಾನಾತ್ಮ ಎಂಬ ನಾಲ್ಕು ಹರಿಯ ರೂಪಗಳಿವೆ. ಈ ಮೆಟ್ಟಲುಗಳ ಮೇಲೆ ಜ್ಯೋತಿರ್ಮಯವಾದ ಲಕ್ಷ್ಮೀಸ್ವರೂಪವಾದ ಇನ್ನೊಂದು ಪದ್ಮವಿದೆ. ಇದಕ್ಕೆ ಎಂಟು ದಳಗಳು. ಅವುಗಳಲ್ಲಿ ಸೂರ್ಯನಿದ್ದಾನೆ. ಇಪ್ಪತ್ತೆರಡು ಕೇಸರಗಳು. ಅವುಗಳಲ್ಲಿ ಸೋಮನಿದ್ದಾನೆ. ಕರ್ಣಿಕೆಯಲ್ಲಿ ಅಗ್ನಿ. ಒಂದೊಂದು ದಳದಲ್ಲಿ ಪ್ರತ್ಯೇಕವಾಗಿ ವಿಮಲಾ ಉತ್ಕರ್ಷಿಣೀ ಜ್ಞಾನಾ ಕ್ರಿಯಾ ಯೋಗಾ ಪ್ರಹ್ವೀ ಸತ್ಯಾ ಈಶಾನಾ ಎಂದು ಒಟ್ಟು ಎಂಟು ಮಂದಿ ದೇವತೆಗಳಿರುವರು. ನಡುವೆ ಕರ್ಣಿಕೆಯ ಮೇಲಿರುವ ಅಗ್ನಿಮಂಡಲದ ಜ್ವಾಲೆಯಲ್ಲಿ ಅನುಗ್ರಹಾದೇವಿ.

ವಿಮಲಾ ಉತ್ಕರ್ಷಿಣೀ ಮುಂತಾದ ಒಂಬತ್ತು ಮಂದಿ ದೇವಿಯರು ಪ್ರತಿಯೊಬ್ಬರೂ ವಿಷ್ಣು ರಮಾ ಬ್ರಹ್ಮ ವಾಯು ಶೇಷ ಗರುಡ ಎಂದು ಆರು ದೇವತೆಗಳ ಸ್ತ್ರೀರೂಪರಿರುತ್ತಾರೆ ಅವರೆಲ್ಲರೂ ತಿರುಗಿ ಜ್ಞಾನ, ಇಚ್ಛಾ, ಕ್ರಿಯಾ ಎಂದು ಮೂರು ರೂಪಗಳಿಂದ ಕೂಡಿರುವರು. ಅಂದರೆ ಜ್ಞಾನವಿಮಲಾ ಇಚ್ಛಾವಿಮಲಾ ಕ್ರಿಯಾವಿಮಲಾ ಎಂದು ವಿಷ್ಣುವಿನ ಸ್ತ್ರೀರೂಪಗಳು ಮೂರು. ಹೀಗೆ ಲಕ್ಷ್ಮೀಬ್ರಹ್ಮಾದಿಗಳ ರೂಪಗಳೂ ಮೂರು ಮೂರಾಗಿರುತ್ತವೆ.

ಎಂಟು ದಳಗಳಲ್ಲಿರುವ ಎಂಟು ಮಂದಿ ದೇವತೆಗಳು ಚಾಮರ ಬೀಸುತ್ತಿರುತ್ತಾರೆ. ನಡುವೆ ಇರುವ ಅನುಗ್ರಹಾದೇವಿ ಆಸನರೂಪಳಾಗಿರುತ್ತಾಳೆ. ಅವಳಲ್ಲಿ ಪುನಃ ಸತ್ವರಜಸ್ತಮೋಭಿಮಾನಿನಿಯರಾದ ಶ್ರೀ ಭೂ ದುರ್ಗೆಯರು, ಅವರಲ್ಲಿ ಹರಿಯ ಯೋಗಪೀಠ ಸ್ವರೂಪನಾದ ಶೇಷ. ಅವನು ಹಾಸಿಗೆ ದಿಂಬು ಹೊದ್ದಿಕೆ ರೂಪದಿಂದಿರುತ್ತಾನೆ. ಅವನಲ್ಲಿ ಪುನಃ ಹಾಸಿಗೆ ದಿಂಬು ಹೊದ್ದಿಕೆ ರೂಪದಲ್ಲಿ ಶ್ರೀ ಭೂ ದುರ್ಗೆಯರು. ಅವರಲ್ಲಿ ತಿರುಗಿ ರಮ್ಮೆಯರೊಡಗೂಡಿ ಅಂದರೆ ಶ್ರೀ ಭೂ ದುರ್ಗೆಯರೊಡಗೂಡಿ ಶ್ರೀಕೃಷ್ಣ ರಮಿಸುತ್ತಾನೆ. ಅಂಥ ಶ್ರೀಕೃಷ್ಣ ನಮ್ಮ ಮನೆಯ ಹಸೆಮಣೆಗೆ ಬರಬೇಕೆಂದು ಪ್ರಾರ್ಥನೆ.

ಈ ಪ್ರಾರ್ಥನೆ ಕೇಳಿ ನಸುನಗುತ್ತ ಶ್ರೀಕೃಷ್ಣ ಬರುವಾಗ ಒಂದಂಶದಿಂದ ಚಿನ್ಮಯವಾದ ಶ್ವೇತದ್ವೀಪ ಜ್ಯೋತಿರ್ಮಯ ಪದ್ಮಗಳೂ ಜೊತೆಗೇ ಬರುತ್ತವೆ. ಹಸೆಮಣೆಮೇಲೆ ಸನ್ನಿಹಿತವಾಗುತ್ತವೆ. ಇನ್ನು ಮುಂದಿನ ನುಡಿಗಳಲ್ಲಿ ಹೇಳುಂತೆ ಬ್ರಹ್ಮ ವಾಯು, ರುದ್ರಾದಿ ದೇವತೆಗಳ ಲೋಕಗಳಲ್ಲಿ ಹರಿ ಪೂಜಿಸಲ್ಪಡುವಾಗಲೂ, ಏಕೆ, ನಾವು ನಮ್ಮ ಹೃದಯಕಮಲದಲ್ಲಾಗಲೀ ಹೊರಗೆ ಪ್ರತಿಮಾದಿಗಳಲ್ಲಾಗಲೀ ಹರಿಯನ್ನು ಪೂಜಿಸುವಾಗಲೂ, ಒಂದಂಶದಿಂದ ಶ್ವೇತದ್ವೀಪ ಕಮಲಗಳು ಬಂದೇ ಬರುತ್ತವೆ. ಬಲ್ಲವರು ಆದರಿಂದ ತಪ್ಪದೆ ಪೀಠಪೂಜೆ ಮಾಡಿಯೇ ದೇವ ಪೂಜೆ ಮಾಡುತ್ತಾರೆ.

ನಮ್ಮ ವಧೂವರರನ್ನು ಹಸೆಮಣೆಗೆ ಕರೆದಾಗಲೂ ಅವರೊಳಗೆ ಶ್ವೇತದ್ವೀಪ ಕಮಲಗಳ ಸಹಿತವಾಗಿ ಲಕ್ಷ್ಮೀನಾರಾಯಣರನ್ನು ಚಿಂತಿಸಬೇಕು. ಆದ್ದರಿಂದ ಹರಿ ವೈಕುಂಠದಲ್ಲಿರುತ್ತಾನೆ ಎನ್ನುವುದು ಎಷ್ಟು ನಿಜವೋ ಅಷ್ಟೇ. ನಿಜ ಹರಿ ಎಲ್ಲಿರುವನೋ ಅಲ್ಲಿ ವೈಕುಂಠವಿದೆ ಎನ್ನುವುದು. ತಿರುಪತಿ ಉಡುಪಿ ಮುಂತಾದ ವಿಷ್ಣುಕ್ಷೇತ್ರಗಳನ್ನು ಭೂವೈಕುಂಠವೆನ್ನುವುದೂ ಈ ಅಭಿಪ್ರಾಯದಿಂದ ಅತ್ಯಂತ ಸಮಂಜಸವೆ.

ವಧೂವರರ ಹೃದಯಕಮಲಗಳಲ್ಲಿ ಹೀಗೆ ಲಕ್ಷ್ಮೀನಾರಾಯಣರು 'ಮನೆ' ಮಾಡಿ ರಮಿಸುವರೆಂಬ ಅನುಸಂಧಾನದಿಂದ ಹಸೆಗೆ ಕರೆಯುವ ಮುತ್ತೈದೆಯರು ಆಶೀರ್ವದಿಸಿದರೆ ವಧೂವರರೂ ಇದನ್ನರಿತರೆ, ಮುಂದೆ ತಮ್ಮ ದಾಂಪತ್ಯ ಜೀವನದಲ್ಲಿ ಅವರು ರಮಿಸುತ್ತ ಸದಾ ಸುಖಿಗಳಾಗಬಲ್ಲರು.

**ನಾನಾವತಾರದಲಿ ನಂಬಿದ ಸುರರಿಗೆ**
**ಆನಂದವೀವ ಕರುಣಿ ಬಾ ।**
**ಆನಂದವೀವ ಕರುಣಿ ಬಾ ಶ್ರೀಕೃಷ್ಣ**
**ಶ್ರೀನಾರಿಯರೊಡನೆ ಹಸೆಗೆ ಬಾ ॥**

ಸುರರು ತಮ್ಮ ನಾನಾವತಾರದಲ್ಲಿ ಹರಿಯುನ್ನು ಅವನ ನಾನಾವತಾರದಲ್ಲಿ ನಂಬಿದ್ದರಿಂದ ಹರಿಯು ಕೇವಲ ಕರುಣೆಯಿಂದ ಅವರಿಗೆ ಆನಂದ ನೀಡುತ್ತಾನೆ. ಇಂಥ ಕರುಣೆಯಾದ ಶ್ರೀಕೃಷ್ಣನೆ, ಲಕ್ಷ್ಮಿಯರೊಡನೆ ಹಸೆಗೆ ಬಾ.

ಅವತಾರಗಳಲ್ಲಿ ನಂಬಿಕೆ ಕುರುಡು ನಂಬಿಕೆಯಾಗಬಾರದು. ನಿರ್ಮಲಭಕ್ತಿಯಾಗಬೇಕು. ನಿರ್ಮಲಭಕ್ತಿ ಸುರರಿಗೆ ಮತ್ತು ಸುರಸ್ವಭಾವದ ಸಾತ್ವಿಕರಿಗೆ ಮಾತ್ರ ಸಾಧ್ಯ ಹೊರತು ಅಸುರರಿಗೆ ಸಾಧ್ಯವಿಲ್ಲ. ಆದ್ದರಿಂದ 'ನಂಬಿದ ಸುರರಿಗೆ' ಎಂದಿದೆ. ಸುರರಿಗೆ ಮಾತ್ರವೆಂಬ ಅಭಿಪ್ರಾಯವಿಲ್ಲ. ಅಥವಾ 'ನಂಬಿದ ಅಸುರರಿಗೆ' ಎಂದೂ ಸಂಧಿ ಬಿಡಿಸಬಹುದು. ಇದು ಗೂಢಶ್ಲೇಷ ಪ್ರಹ್ಲಾದ, ಬಲಿ ಮುಂತಾದ ಅಸುರರಿಗೂ ಹರಿ ಆನಂದವನ್ನು ನೀಡುವುದನ್ನು ನೆನೆದರೆ ಇದು ಹೊಳೆಯುತ್ತದೆ. ಈ ಗೂಢಶ್ಲೇಷ ಏಕೆಂದರೆ ಅಸುರರೆಂದರೆ ಎಲ್ಲ ಅಸುರರಲ್ಲ, ಸುರಸ್ವಭಾವದ ಅಸುರರು, ಪ್ರಹ್ಲಾದ, ಬಲಿ, ವಿಭೀಷಣನಂತವರು ಮಾತ್ರ ಹರಿಗೆ ಕರುಣಾಪಾತ್ರರು ಎಂದು ಹೇಳಬೇಕಾಗಿದೆ.

ಈ ನಿರ್ಮಲ ಭಕ್ತಿ ಅವತಾರಗಳ ಬಗ್ಗೆ ಸರಿಯಾದ ಕಲ್ಪನೆಗಳಿದ್ದರೆ ಮಾತ್ರ ಸಾಧ್ಯ ಭಕ್ತಿ ನವವಿಧ. ಈ ನವವಿಧ ಭಕ್ತಿ ನವವಿಧದ ದ್ವೇಷವಿಲ್ಲದಾಗಲೆ ನಿರ್ಮಲಭಕ್ತಿ ಎನಿಸುತ್ತದೆ. ಈ ನವವಿಧ ದ್ವೇಷಗಳು–

ಜೀವಾಭೇದೋ ನಿರ್ಗುಣತ್ವಂ ಅಪೂರ್ಣಗುಣತಾ ತಥಾ ।
ಸಾಮ್ಯಾಧಿಕ್ಯೇ ತದನ್ಯೇಷಾಂ ಭೇದಸ್ತದ್ಗತ ಏವ ಚ ।
ಪ್ರಾದುರ್ಭಾವ ವಿಪರ್ಯಾಸಸ್ತದ್ಭಕ್ತದ್ವೇಷ ಏವ ಚ ।
ತತ್ಪ್ರಮಾಣಸ್ಯ ನಿಂದಾ ಚ ದ್ವೇಷಾ ಏತೇಽಖಿಲಾ ಮತಾಃ ॥

೧. ಜೀವ ಪರಮಾತ್ಮರಿಗೆ ಐಕ್ಯವನ್ನು ತಿಳಿಯುವುದು.

೨. ಪರಮಾತ್ಮ ನಿರ್ಗುಣ ನಿರಾಕಾರನೆನ್ನುವುದು.

೩. ಪರಮಾತ್ಮನ ಗುಣಗಳಲ್ಲಿ ಲೋಪದೋಷಗಳನ್ನೆಣಿಸುವುದು.

೪ ಪರಮಾತ್ಮನಿಗೆ ಸಮಾನರು ಬೇರೆ ಇರುವರೆನ್ನುವುದು

೫. ಪರಮಾತ್ಮನಿಗಿಂತ ಉತ್ತಮರು ಬೇರೆ ಇರುವರೆನ್ನುವುದು.

೬. ಪರಮಾತ್ಮನಿಗೆ ಶರೀರ, ಗುಣ, ಕ್ರಿಯೆ, ಅವತಾರಗಳಲ್ಲಿ ಪರಸ್ಪರ ಭೇದವೆಣಿಸುವುದು.

೭. ಅವತಾರಗಳ ವಿಷಯದಲ್ಲಿ ತಪ್ಪುಕಲ್ಪನೆಗಳು.

೮. ಪರಮಾತ್ಮನ ಭಕ್ತರನ್ನು ದ್ವೇಷಿಸುವುದು

೯ ಪರಮಾತ್ಮನ ಬಗ್ಗೆ ಹೇಳುವ ಶಾಸ್ತ್ರಗಳನ್ನು ನಿಂದಿಸುವುದು

–ಇವೆಲ್ಲವೂ ದ್ವೇಷಗಳೆನಿಸುವುವು.

ಅವತಾರಗಳ ವಿಷಯದಲ್ಲಿ ತಪ್ಪು ಕಲ್ಪನೆಗಳು ಅನೇಕ ವಿಧ. ನಮ್ಮಂತೆ ಅಸ್ಥಿ ಮಾಂಸಯುಕ್ತ ಪಾರ್ಥಿವ ಶರೀರವಿದೆ ಎನ್ನುವುದು, ಜನನ ಮರಣಗಳು, ಶಸ್ತ್ರಾಸ್ತ್ರಗಳಿಂದ ಮೈಗೆ ಗಾಯವಾಗುವುದು, ಮೂರ್ಛೆ ಹೊಂದುವುದು ಮುಂತಾದುವು ಇವೆ ಎಂದೊಪ್ಪುವುದು, ಸ್ವರೂಪ ಆವೇಶ ವಿಭೂತಿ ರೂಪಗಳಲ್ಲಿ ವ್ಯತ್ಯಾಸ ಕಾಣದಿರುವುದು, ಅವತಾರವನ್ನು ಅವತಾರವಲ್ಲ ಎನ್ನುವುದು, ಅವತಾರವಲ್ಲದುದನ್ನು ಅವತಾರ ಎಂದೊಪ್ಪುವುದು ಇವೆಲ್ಲವೂ ತಪ್ಪುಕಲ್ಪನೆಗಳು. ಮತ್ಸ್ಯಕೂರ್ಮಾದಿಗಳು ಕೇವಲ ಅಂಶಾವತಾರಿಗಳಾಗಿದ್ದು ಪೂರ್ಣಶಕ್ತಿ ಇಲ್ಲದವುಗಳೆಂದೂ ಕೃಷ್ಣನು ಮಾತ್ರ ಪೂರ್ಣಾವತಾರ, ಪೂರ್ಣಶಕ್ತಿ ಉಳ್ಳವನೆಂದೂ ಕೆಲವರು ತಪ್ಪಾಗಿ ತಿಳಿಯುವುದುಂಟು. ವೇದವ್ಯಾಸರನ್ನು ಒಬ್ಬ ಋಷಿ, ಅವತಾರವಲ್ಲವೆನ್ನುವುದುಂಟು. ಪವಾಡ ತೋರುವ ಎಲ್ಲರನ್ನೂ ಅವತಾರವೆನ್ನುವವರುಂಟು. ವಸ್ತುತಃ ಪೃಥು ಚಕ್ರವರ್ತಿಯಲ್ಲಿ ಶ್ರೀಹರಿಯು ರಾಜರಾಜೇಶ್ವರ ರೂಪದ ಆವೇಶವೂ, ಬಲರಾಮನಲ್ಲಿ ಶುಕ್ಲಕೇಶದ ಆವೇಶವೂ ಇದೆ ಹೊರತು ಅವರು ಸ್ವರೂಪಾವತಾರರಲ್ಲ ಆದರೂ ಇದನ್ನು ತಿಳಿಯದೆ ಸ್ವರೂಪಾವತಾರರೆಂದೇ ಹೇಳುವುದೂ ಉಂಟು. ಇವೆಲ್ಲ ತಪ್ಪು ಕಲ್ಪನೆಗಳು. ಹರಿಯ ಅವತಾರ ಇತರ ದೇವತೆಗಳ ಅವತಾರದಂತೆಯೇ ಎಂದು ತಿಳಿಯುವುದೂ ತಪ್ಪುಕಲ್ಪನೆಯೆ. ವ್ಯತ್ಯಾಸವನ್ನು ಶ್ರೀಕೃಷ್ಣನೇ ಅರ್ಜುನನಿಗೆ ಹೇಳಿದ್ದಾನೆ–

ಬಹೂನಿ ಮೇ ವ್ಯತೀತಾನಿ ಜನ್ಮಾನಿ ತವ ಚಾರ್ಜುನ ।
ತಾನ್ಯಹಂ ವೇದ ಸರ್ವಾಣಿ ನ ತ್ವಂ ವೇತ್ಥ ಪರಂತಪ ॥

'ಅರ್ಜುನ, ನನಗೂ ನಿನಗೂ ಅನೇಕ ಜನ್ಮಗಳಾಗಿ ಹೋಗಿವೆ. ನಾನು ಅವು ಎಲ್ಲವನ್ನೂ ತಿಳಿದಿದ್ದೇನೆ, ನೀನು ತಿಳಿದಿಲ್ಲ'. ಕೃಷ್ಣನು ತನ್ನ ಅವತಾರಗಳನ್ನು ಎಲ್ಲಿ,

ಹೇಗೆ, ಏಕೆ ಮಾಡಬೇಕೆಂದು ತಿಳಿದೇ ಸ್ವೇಚ್ಛೆಯಿಂದಲೇ ಅವತರಿಸುತ್ತಾನೆ. ಅರ್ಜುನ ಹಾಗಲ್ಲ. ಅವನಿಗೆ ತನ್ನ ಅವತಾರದ ಬಗ್ಗೆ ತಿಳಿದಿರುವುದಿಲ್ಲ. ಪೂರ್ವ ಕರ್ಮವಶದಿಂದ ಅವತರಿಸುತ್ತಾನೆ. ಪ್ರಾರಬ್ಧಕರ್ಮವಿದ್ದರೆ ಗರ್ಭವಾಸ ದುಃಖವೂ ಅವನಿಗೆ ಬರಬಹುದು ಕೃಷ್ಣನಿಗೆ ಎಂದೂ ದುಃಖ ಪ್ರಸಂಗವಿಲ್ಲ. ಅರ್ಜುನಾದಿಗಳ ಶರೀರ ರಕ್ತಮಾಂಸಮಯ. ಜನನ ಮರಣ, ಶಸ್ತ್ರಾಸ್ತ್ರಗಳಿಂದ ಗಾಯ, ಮೂರ್ಛೆಹೊಂದುವುದು ಆಧಿವ್ಯಾಧಿಗಳೆಲ್ಲವೂ ಸಂಭವಿಸುತ್ತವೆ ಹರಿಯ ಅವತಾರಗಳಿಗೆ ಇವು ಒಂದೂ ಇಲ್ಲ ಅವನ ಶರೀರ ಎಂದೂ ಪಾಂಚಭೌತಿಕವಲ್ಲ, ಶುದ್ಧ ಸತ್ವಾತ್ಮಕವೂ ಅಲ್ಲ. ಮಾಯಾಮಯವೂ ಅಲ್ಲ. ಶುದ್ಧ ಚಿನ್ಮಯ., ನಿತ್ಯ

ಮಾಯಾವಾದದಲ್ಲಿ ಪರಮಾತ್ಮನ ಶರೀರ ಅನಿತ್ಯ ಏಕೆಂದರೆ ಅದು ತ್ರಿಗುಣಾತ್ಮಕವಾದ ಮಾಯೆಯಿಂದಾದುದು. ಮಾಯೆ ಅನಿತ್ಯ ವಿಶಿಷ್ಟಾದ್ವೈತದಲ್ಲಿ, ವೈಕುಂಠದಲ್ಲಿ ಶೇಷಶಾಯಿಯಾಗಿರುವ ಪರರೂಪಕ್ಕೆ ಶುದ್ಧ ಸತ್ವಾತ್ಮಕವಾದ ನಿತ್ಯ ಜಡಶರೀರವಿದೆ ಆದರೆ ವಾಸುದೇವಾದಿ ವ್ಯೂಹರೂಪಗಳಿಗೂ, ಮತ್ಸ್ಯಾದಿ ವಿಭವರೂಪಗಳಿಗೂ ನಿತ್ಯ ಶರೀರದ ಅಂಶಗಳಿಂದ ಉಂಟಾದ ಅನಿತ್ಯ ಶರೀರವೆ ಬಂದಿರುತ್ತದೆ. ಅರ್ಚಾವತಾರಗಳಿಗಂತೂ ಕಲ್ಲು ಮಣ್ಣು ಮುಂತಾದವುಗಳಿಂದಾದ ಅನಿತ್ಯ ಶರೀರವೆ. ಹೀಗೆ ಪರಮಾತ್ಮನಿಗೆ ಅನಿತ್ಯವೂ ತನಗಿಂತ ಬೇರೆಯೂ ಆದ ಜಡದೇಹ ಒಪ್ಪುತ್ತಾರೆ ಸ್ವರೂಪಭೂತವಾದ, ನಿತ್ಯವಾದ ಚಿನ್ಮಯ ಶರೀರ ಒಪ್ಪುವುದಿಲ್ಲ. ಇದು ಯುಕ್ತವಲ್ಲ–

ಅಭಾವಾಜ್ಜಡದೇಹಸ್ಯ ವಿಷ್ಣುರ್ನಿರ್ವಾಣ ಉಚ್ಯತೇ ।
ಭಿನ್ನದೇಹಾಭಾವತೋ ವಾ ಸ ಸಹಸ್ರಶಿರಾ ಅಪಿ ॥

'ಶ್ರೀಹರಿ ಸಹಸ್ರಶೀರ್ಷ ಸಹಸ್ರ ತಲೆಗಳುಳ್ಳ ಶರೀರ ಉಳ್ಳವ. ಆದರೂ 'ನಿರ್ವಾಣ' ಶರೀರವಿಲ್ಲದವನೆನಿಸಿದ್ದಾನೆ. ಏಕೆಂದರೆ ಅವನಿಗೆ ಜಡ ಶರೀರವಿಲ್ಲ ಮತ್ತು ತನಗಿಂತ ಬೇರೆಯಾಗಿ ತನ್ನ ಶರೀರವೆಂಬುದು ಆತನಿಗಿಲ್ಲ'.

ಭಗವದ್ಗೀತೆಯಲ್ಲಿಯೂ 'ದರ್ಶಯಾತ್ಮಾನಮವ್ಯಯಂ' ನಾಶರಹಿತವಾದ ನಿನ್ನ ರೂಪ ತೋರೆಂದು ಅರ್ಜುನ ಪ್ರಾರ್ಥಿಸಿದಾಗ,

'ಪಶ್ಯ ಮೇ ಪಾರ್ಥ ರೂಪಾಣಿ ಶತಶೋಽಥ ಸಹಸ್ರಶಃ'

'ನನ್ನ ನೂರಾರು ಸಾವಿರಾರು ರೂಪಗಳನ್ನು ನೋಡು' ಎನ್ನುತ್ತ ಶ್ರೀಕೃಷ್ಣ ವಿಶ್ವರೂಪಗಳನ್ನು ತೋರುತ್ತಾನೆ. ಆದ್ದರಿಂದ ಕೃಷ್ಣನ ರೂಪಗಳೆಲ್ಲವೂ ನಾಶರಹಿತ, ನಿತ್ಯ, ಚಿನ್ಮಯ. ವೈಕುಂಠದಲ್ಲಿ ಮುಕ್ತರು ಚಿನ್ಮಯ ಶರೀರದವರೇ ಆಗಿದ್ದರೂ ಬಯಸಿದಾಗಲೆಲ್ಲಾ ಶುದ್ಧಸತ್ವಮಯ ಶರೀರಗಳನ್ನು ಪರಿಗ್ರಹಿಸಿ

ತೊರೆಯುವುದುಂಟು ಆದರೆ ಶ್ರೀಹರಿ ಎಂದೂ ಹಾಗೆ ಮಾಡುವುದಿಲ್ಲ. ಅವನ ಶರೀರ ಎಂದೂ ಚಿನ್ಮಯ. ಸ್ವರೂಪಭೂತವಾದ ಜ್ಞಾನಾನಂದಾತ್ಮಕವಾದ ತಲೆ ಕೈಕಾಲು ಮುಂತಾದ ಸುಂದರ ಅವಯವ ಯುಕ್ತವಾಗಿರುತ್ತದೆ. ನಾಶರಹಿತವಾಗಿರುತ್ತದೆ.

'ಶರೀರವೆಂದರೆ ಜಡವೆ. ಅದು ಜ್ಞಾನಾನಂದಾತ್ಮಕವಾಗುವುದುಂಟೆ ? ಜ್ಞಾನ ಆನಂದಗಳಿಗೂ ತಲೆ, ಕೈಕಾಲು ಮುಂತಾಗಿ ಆಕಾರಗಳಿರಬಹುದೆ ? ' ಎಂದು ಆಕ್ಷೇಪಿಸುವುದು ಸರಿಯಲ್ಲ. ಜ್ಞಾನ ಆನಂದಗಳು ಎರಡು ಬಗೆಯವು. ಒಂದು ಜಡವಾದ ಅಂತಃಕರಣದ ಪರಿಣಾಮ. ಅದಕ್ಕೆ ಕರಚರಣಾದಿ ಆಕಾರವಿಲ್ಲ. ಇನ್ನೊಂದು ಚೇತನ ಸ್ವರೂಪಭೂತವಾದದ್ದು ಅದಕ್ಕೆ ಆಕಾರವಿದೆ ಎಲ್ಲ ವೇದಾಂತಿಗಳೂ ಜೀವ ಸ್ವರೂಪವನ್ನು ಜ್ಞಾನಾನಂದ ರೂಪವೆಂದು ಒಪ್ಪಿದ್ದಾರೆ. ಜಡ ಅಂತಃಕರಣದ ಪರಿಣಾಮವೇ ಜ್ಞಾನ ಆನಂದಗಳೆಂದು ಆಗ್ರಹಿಸದೆ, ಜೀವಸ್ವರೂಪವನ್ನೂ ಜ್ಞಾನಾನಂದ ರೂಪವೆಂದು ಒಪ್ಪುವುದಾದರೆ ಜಡಶರೀರ ಹೊರತಾಗಿ ಜೀವಸ್ವರೂಪವನ್ನೂ ಶರೀರರೂಪವೆಂದೂ ತಲೆ ಕೈಕಾಲು ಮುಂತಾದ ಅವಯವವುಳ್ಳದ್ದೆಂದೂ ಒಪ್ಪಿದರೆ ಅದರಲ್ಲಿ ಅನೌಚಿತ್ಯವೇನಿಲ್ಲ ವಿಶೇಷ ಬಲದಿಂದ ಜೀವನು ತನಗೆ ತಾನೇ ಶರೀರ. ಹೀಗೆ ಜೀವನಿಗೇ ಸ್ವರೂಪಭೂತ ಶರೀರವಿರುವಾಗ ಪರಮಾತ್ಮನಿಗೆ ಇರಲಾರದೆ ? ಇಷ್ಟೇ ವ್ಯತ್ಯಾಸ ಜೀವನಿಗೆ ಸ್ವರೂಪಭೂತ ಶರೀರದ ಹೊರಗೆ ಸಂಸಾರದಲ್ಲಿ ಪ್ರಾಕೃತ ಶರೀರ ಯಾವಾಗಲೂ ಇದೆ. ಮುಕ್ತಿಯಲ್ಲಿ ಶುದ್ಧ ಸತ್ವಮಯ ಶರೀರ ಅವನಿಗೆ ಬೇಕೆಂದಾಗ ಇದೆ. ಪರಮಾತ್ಮನಿಗೆ ಎಂದೂ ಸ್ವರೂಪವ್ಯತಿರಿಕ್ತ ಶರೀರವಿಲ್ಲ.

ಸ್ವರೂಪ ಶರೀರಕ್ಕೆ ನಾನಾ ವರ್ಣಗಳಿವೆ. 'ಆದಿತ್ಯವರ್ಣಂ ತಮಸಃ ಪರಸ್ತಾತ್' 'ಪ್ರಕೃತಿಯ ಸಂಪರ್ಕಲೇಶವಿಲ್ಲದ ಪರಮಾತ್ಮ ಸೂರ್ಯನಂಥ ವರ್ಣಉಳ್ಳವನು' ಎಂದು ಶ್ರುತಿಯು ಹೇಳುವುದರಿಂದ ಈ ಬಣ್ಣ ಸ್ವರೂಪಶರೀರದ್ದೇ. ಶುದ್ಧ ಸತ್ವಮಯ ಶರೀರದ್ದೇ ಏಕಿರಬಾರದೆಂದರೆ, ಮತ್ಸ್ಯಪುರಾಣ ಹೇಳುತ್ತದೆ–

ಶುದ್ಧಸ್ಫಟಿಕ ಸಂಕಾಶಂ ವಾಸುದೇವಂ ನಿರಂಜನಂ ।
ಚಿಂತಯೀತ ಯತಿರ್ನಾನ್ಯಂ ಜ್ಞಾನರೂಪಾದ್ ಋತೇ ಹರೇಃ ॥

'ಶುದ್ಧಸ್ಫಟಿಕ ವರ್ಣದ ವಾಸುದೇವನನ್ನು ಧ್ಯಾನಿಸಬೇಕು. ಧ್ಯಾನಕಾಲದಲ್ಲಿ ಜ್ಞಾನರೂಪನಾದ ಆ ಹರಿಯನ್ನು ಹೊರತು ಬೇರೇನನ್ನೂ ಆಲೋಚಿಸಕೂಡದು' ಇಲ್ಲಿ ಬೇರೇನನ್ನೂ ಆಲೋಚಿಸಕೂಡದು ಎಂದು ಶುದ್ಧ ಸತ್ವಮಯ ಶರೀರಧ್ಯಾನವನ್ನೂ ನಿಷೇಧಿಸಿದೆ. ಆದ್ದರಿಂದ ಸ್ಫಟಿಕವರ್ಣ ಸ್ವರೂಪಶರೀರದ್ದೇ.

ಈ ಮತ್ಸ್ಯಪುರಾಣದ ವಚನದಿಂದ ಇನ್ನೊಂದು ಸಂಶಯವೂ ಪರಿಹಾರವಾಗುತ್ತದೆ– 'ಪರಮಾತ್ಮನಿಗೆ ಶುದ್ಧ ಸತ್ವಮಯ ಶರೀರ ಒಪ್ಪಿದರೆ ಏನು ಬಾಧಕ ? ಅಶರೀರನೆಂದು ಶಾಸ್ತ್ರ ಹೇಳುವುದು ಪ್ರಾಕೃತ ಶರೀರ ರಹಿತ, ಸುಖದುಃಖ ಕಾರಣವಾದ ಪಾಂಚಭೌತಿಕ ಶರೀರವಿಲ್ಲದವ ಎಂಬ ಅಭಿಪ್ರಾಯದಿಂದ. ಧ್ಯಾನಕ್ಕೆ ಒಂದು ಶರೀರವಂತೂ ಬೇಕು. 'ಲೀಲಾಮಾನುಷವಿಗ್ರಹಃ' ಎಂಬಂತೆ ಲೀಲೆಯಿಂದ ಶುದ್ಧಸತ್ವಾತ್ಮಕವಾದ ಸುಖದುಃಖ ಕಾರಣವಲ್ಲದ ಸುಂದರ ಶರೀರ ಒಪ್ಪುತ್ತೇವೆ. ಧ್ಯಾನಕ್ಕಾಗಿ ಸ್ವರೂಪಶರೀರವನ್ನೇ ಏಕೆ ಒಪ್ಪಬೇಕು ? ಅದು ಅನಾವಶ್ಯಕ. ಅದಕ್ಕೆ ಸ್ಪಷ್ಟ ಪ್ರಮಾಣವಚನದ ಆಧಾರವೂ ಇಲ್ಲ.'

ಮತ್ಸ್ಯಪುರಾಣವಚನ ಸ್ಪಷ್ಟವಾಗಿ ಸ್ವರೂಪ ವ್ಯತಿರಿಕ್ತ ಜಡ ಶರೀರ ಧ್ಯಾನವನ್ನೇ ನಿಷೇಧಿಸಿದೆ

ಜಡ ಶರೀರ ಒಪ್ಪಿದರೆ ಅದು ಪರಮಾತ್ಮನ ಅಧೀನವಾಗಿದ್ದು ಅಸ್ವತಂತ್ರವೇ. ಅದರಲ್ಲಿರುವ ಬಲ ಶೌರ್ಯ ಸೌಂದರ್ಯಾದಿ ಗುಣಗಳೂ ಅಸ್ವತಂತ್ರವಾಗಿದ್ದು ಅಪೂರ್ಣವೆನಿಸುತ್ತವೆ. ಅವು ಪರಮಾತ್ಮನ ಧರ್ಮಭೂತ ಗುಣಗಳೆನಿಸುವುದರಿಂದ ಪರಮಾತ್ಮನ ಗುಣಗಳೇ ಅಪೂರ್ಣವೆಂದಂತಾಗಿ ನವವಿಧ ದ್ವೇಷಗಳಲ್ಲಿ ಅದೂ ಒಂದು ವಿಧದ ದ್ವೇಷವೆನಿಸುತ್ತದೆ. ಧ್ಯಾನಕ್ಕಾಗಿ ಇಂಥ ಜಡ ಶರೀರ ಒಪ್ಪುವ ಆವಶ್ಯಕತೆಯೂ ಇಲ್ಲ. ಸ್ವರೂಪ ಶರೀರವೇ ಸಾಕು.

ಸ್ವರೂಪಶರೀರ ನಿತ್ಯ. ಉತ್ಪತ್ತಿ ನಾಶಗಳಿಲ್ಲ. ರಾಮಕೃಷ್ಣಾದಿ ರೂಪಗಳ ಜನನವೆಂದರೆ ದೃಷ್ಟಿಗೋಚರವಾಗುವುದೇ ಹೊರತು ನಮ್ಮಂತೆ ಜನನವಲ್ಲ. ಮರಣವೂ ಅದೃಶ್ಯವಾಗುವುದೇ ಹೊರತು ನಮ್ಮಂತೆ ಮರಣವಲ್ಲ. ಶ್ರೀಕೃಷ್ಣ ಪರಂಧಾಮಕ್ಕೆ ಹೋಗುವಾಗ ತನ್ನಂತೇ ಇರುವ ಜಡ ದೇಹ ಸೃಷ್ಟಿ ಮಾಡಿ ಬಿಟ್ಟು ಹೋದನಂತೆ. ಅದೂ ಒಂದು ಲೀಲೆ.

ಸ್ವರೂಪಾವತಾರದಲ್ಲಿ ಮಾತ್ರ ಸ್ವರೂಪಶರೀರ ದೃಷ್ಟಿಗೋಚರವಾಗುತ್ತದೆ. ಆವೇಶಾವತಾರದಲ್ಲಿ ಅಲ್ಲ. ಆವೇಶಾವತಾರವೆಂದರೆ ಬಲರಾಮಾದಿ ಜಡ ಶರೀರಗಳಲ್ಲಿ ಪೂರ್ವಕರ್ಮದಿಂದ ಆ ಶರೀರವನ್ನು ಸಂಪಾದಿಸಿರುವ ಜೀವರು ಆ ಶರೀರದಲ್ಲಿ ಇರುವಾಗಲೇ ಪರಮಾತ್ಮನೂ ಅಲ್ಲಿದ್ದು ತನ್ನ ವಿಶೇಷ ಶಕ್ತಿಯನ್ನು ಪ್ರಕಟಪಡಿಸುತ್ತಾನೆ.

ರಾಮಕೃಷ್ಣಾದಿಗಳು ಇಂಥ ಆವೇಶಾವತಾರಗಳಲ್ಲ. ಆದರೂ ಹಾಗೆಂದು ತಾರ್ಕಿಕರು ಒಪ್ಪುತ್ತಾರೆ. ಇದು ತಪ್ಪು ಕಲ್ಪನೆ.

ಜೀವವಿಲ್ಲದ ಜಡ ದೇಹದಲ್ಲಿ ಪರಮಾತ್ಮ ಆವೇಶಹೊಂದುವುದಿಲ್ಲ–

ನಾನ್ಯಾನಭಿಮತೋ ದೇಹೋ ವಿಷ್ಣೋರಸ್ತಿ ಕದಾಚನ ।

ಲಕ್ಷ್ಮೀದೇವಿಯೂ ಹೀಗೆಯೇ. ಜೀವವಿಲ್ಲದ ಜಡದೇಹದಲ್ಲಿ ಆವೇಶಹೊಂದುವುದಿಲ್ಲ. ರಾವಣನು ಲಂಕೆಗೆ ಒಯ್ದ ಶರೀರದಲ್ಲಿ ದೇವೇಂದ್ರನಿದ್ದುದರಿಂದಲೇ ಅಲ್ಲಿ ಸೀತಾದೇವಿಯ ಆವೇಶ ಉಂಟಾಗಿತ್ತು.

ಪರಮಾತ್ಮನಿಗೆ ಸ್ವರೂಪ, ಆವೇಶಗಳು ಮಾತ್ರವಲ್ಲದೆ ವಿಭೂತಿರೂಪಗಳೂ ಬೇರೆ ಇವೆ. ಯಾವ ಭಗವದ್ರೂಪಗಳ ಸನ್ನಿಧಾನದಿಂದ ಕೆಲವು ವಸ್ತುಗಳು ತಮ್ಮ ಜಾತಿಯ ಇತರ ವಸ್ತುಗಳಿಗಿಂತ ಶ್ರೇಷ್ಠವೆನಿಸುವುವೋ ಆ ಭಗವದ್ರೂಪಗಳು ವಿಭೂತಿ ರೂಪಗಳೆನಿಸುವುವು. ಭಗವದ್ಗೀತೆಯಲ್ಲಿ ಈ ವಿಭೂತಿರೂಪಗಳ ಬಗ್ಗೆ ಒಂದು ಅಧ್ಯಾಯವೇ ಇದೆ.

ಪರಮಾತ್ಮನ ಸ್ವರೂಪ ಆವೇಶ ವಿಭೂತಿರೂಪಗಳನ್ನಾಗಲಿ ಇತರ ದೇವತೆಗಳ ಅವತಾರವನ್ನಾಗಲಿ ತಿಳಿಯಲು ಪವಾಡಸಾಮರ್ಥ್ಯ ಸಹಕಾರಿಯಲ್ಲ.

'ಅಶ್ರುತ ಪ್ರತಿಭಾ ಯಸ್ಯ ಶ್ರುತಿಸ್ಮೃತ್ಯವಿರೋಧಿನೀ'

'ಕಲಿಯದೇ ಸಿದ್ಧಿಸಿದ ಶ್ರುತಿಸ್ಮೃತ್ಯನುಸಾರಿಯಾದ ಬುದ್ಧಿಪ್ರತಿಭೆ ಇರುವವರೆಲ್ಲ ಅವತಾರ ಪುರುಷರು'.

'ನಾನಾ ಅವತಾರದಲಿ' ಎಂದರೆ ಸ್ವರೂಪ ಆವೇಶಾದಿ ನಾನಾ ವಿಧದ ಅವತಾರದಲ್ಲಿ ಎಂದರ್ಥ. ಸ್ವರೂಪಾವತಾರವೂ ನಾರಾಯಣಾದಿ ಪಂಚರೂಪ, ಮತ್ಸ್ಯಾದಿ ದಶರೂಪ, ಕೇಶವಾದಿ ಮತ್ತು ಸಂಕರ್ಷಣಾದಿ ದ್ವಾದಶರೂಪ, ನಾರಾಯಣಾದಿ ಶತರೂಪ, ವಿಶ್ವಾದಿ ಸಹಸ್ರರೂಪ. ಪರಾದಿ ಬಹುರೂಪ, ಅಜಿತಾದಿ ಅನಂತರೂಪ ಎಂದು ನಾನಾ ವಿಧ. ಈ ಎಲ್ಲ ರೂಪಗಳಲ್ಲಿಯೂ ಪ್ರತಿಯೊಂದು ರೂಪದ ಅವಯವಗಳು ಗುಣಗಳು ಕರ್ಮಗಳು ಪ್ರತ್ಯೇಕ ರೂಪಗಳೇ ಆಗಿರುತ್ತವೆ. ನವನಾರೀಕುಂಜರಾಕೃತಿಯಂತೆ ಎಲ್ಲ ಅವಯವ ಗುಣಕ್ರಿಯೆಗಳು ಸೇರಿ ಒಂದು ರೂಪವಾಗುತ್ತದೆ. ಉದಾ: ವಿಷ್ಣುವಿನ ವಾಕ್ ಪರಶುರಾಮ, ಘ್ರಾಣ ನರಸಿಂಹ, ಚಕ್ಷು ಕಪಿಲ, ಶಿರ ನಾರಾಯಣ, ಕೂದಲು ಕೃಷ್ಣ ಜ್ಞಾನಾದಿ ಗುಣಗಳು ವೇದವ್ಯಾಸಾದಿ ರೂಪಗಳು. ಹೀಗೆ ಅನೇಕ ರೂಪ ಒಂದಾಗುತ್ತದೆ. ಒಂದು ಅನೇಕವಾಗುತ್ತದೆ, ಅಚಿಂತ್ಯಶಕ್ತಿಯಿಂದ. ಆದ್ದರಿಂದ ನಾನಾ ಅವತಾರದಲ್ಲಿ ಆ ನಾನಾ ಅವತಾರವೆಲ್ಲ ಒಂದೆನ್ನುವ ನಂಬಿಕೆಯೂ ಬೇಕು ! ಇದು ನಿಜವಾದ ಅದ್ವೈತ. 'ಅದ್ವೈತಂ ಪರಮಾರ್ಥತಃ'

ಪರಮಾತ್ಮನು ಧರ್ಮಸಂಸ್ಥಾಪನೆಗಾಗಿ ನಾನಾ ಅವತಾರಗಳನ್ನು ಎತ್ತಬೇಕಾಗಿಲ್ಲ. ಮೂಲ ರೂಪದಿಂದಲೇ ಇದು ಸಾಧ್ಯ. ಆದರೂ ನಂಬಿದ ಸುರರಿಗೆ

ಆನಂದ ನೀಡುವುದಕ್ಕಾಗಿ ಲೀಲೆಯಿಂದ ಅವತಾರವೆತ್ತಿ ಧರ್ಮ ಸಂಸ್ಥಾಪನೆ ಮಾಡುತ್ತಾನೆ. ಇದು ಆತ ಕರುಣೆಯಾದ್ದರಿಂದಲೇ. ಪ್ರಕೃತ ಲಕ್ಷ್ಮೀಸ್ವಯಂವರವೂ ಒಂದು ಲೀಲೆ. ಆದ್ದರಿಂದ ಕರುಣೆಯಾದ ಕೃಷ್ಣನೆ, ನಮ್ಮ ಹಸೆಮಣೆಯೇರುವ ಲೀಲೆ ತೋರಲು ಬಾ.

– ೮೩ –

**ಬೊಮ್ಮನ ಮನೆಯಲ್ಲಿ ರನ್ನದ ಪೀಠದಿ ಕುಳಿತು**
**ಒಮ್ಮನದಿ ನೇಹವ ಮಾಡುವ ।**
**ನಿರ್ಮಲ ಪೂಜೆಯ ಕೈಗೊಂಬ ಶ್ರೀಕೃಷ್ಣ ಪರ–**
**ಬೊಮ್ಮಮೂರುತಿಯೆ ಹಸೆಗೆ ಬಾ ॥**

ಶ್ರೀಕೃಷ್ಣ, ನೀನು ಸತ್ಯಲೋಕದ ಬ್ರಹ್ಮನ ಅರಮನೆಯಲ್ಲಿ ರತ್ನದ ಪೀಠದಲ್ಲಿ ಕುಳಿತು ಅವನಲ್ಲಿ ಒಮ್ಮನಸ್ಸಿನಿಂದ ಸ್ನೇಹ ಮಾಡುವಿ ಮತ್ತು ಅವನು ಮಾಡುವ ನಿರ್ಮಲವಾದ ಪೂಜೆಯನ್ನು ಸ್ವೀಕರಿಸುವಿ. ಪರಬ್ರಹ್ಮ ಮೂರ್ತಿಯಾದ ನೀನು ನಮ್ಮ ಈ ರತ್ನ ಖಚಿತವಾದ ಹಸೆಮಣೆಗೂ ಬಾ

ಬ್ರಹ್ಮನು ಕೃಷ್ಣನಲ್ಲಿ ಸ್ನೇಹ ಮಾಡುತ್ತಾನೆ ಎನ್ನುವುದರ ಬದಲು ಕೃಷ್ಣನೇ ಬ್ರಹ್ಮನಲ್ಲಿ ಒಮ್ಮನಸ್ಸಿನಿಂದ ಸ್ನೇಹ ಮಾಡುತ್ತಾನೆ ಎನ್ನುವುದು ಇಲ್ಲಿ ವಿಶೇಷ ಏಕೆಂದರೆ ಕೃಷ್ಣನೇ ಸತ್ಯಲೋಕದ ಬ್ರಹ್ಮನ ಅರಮನೆಯಲ್ಲಿ ಅವನೊಡನೆ ಒಂದೇ ರತ್ನಪೀಠದಲ್ಲಿ ಕುಳಿತು ಅವನ ಜೊತೆಗೇ ಎಲ್ಲ ಭೋಗಗಳನ್ನೂ ಸವಿಯುತ್ತಾನೆ. ಇದು ಸಹಭೋಗ ಪದವಿ. ಬ್ರಹ್ಮನಿಗೆ ಹೊರತು ಇನ್ನಾವ ದೇವರಿಗೂ ಈ ಭಾಗ್ಯವಿಲ್ಲ

ಬ್ರಹ್ಮನು ಹಿಂದಿನ ಕಲ್ಪದಲ್ಲಿ ಮುಖ್ಯಪ್ರಾಣನಾಗಿದ್ದಾಗ ಎಲ್ಲ ಜೀವಿಗಳ ಶ್ವಾಸ ಕಾರ್ಯದಲ್ಲಿ ಹಂಸಮಂತ್ರಜಪ ಮಾಡಿದ್ದರ ಫಲ ಈ ಸಹಭೋಗ. ನಿಶ್ವಾಸದಲ್ಲಿ, ಅಂದರೆ, ಉಸಿರನ್ನು ಹೊರಗೆ ಬಿಡುವಾಗ 'ಹಂಸಃ' ಎಂದೂ, ಉಚ್ಛ್ವಾಸದಲ್ಲಿ, ಅಂದರೆ ಉಸಿರನ್ನು ಒಳಗೆ ತೆಗೆದುಕೊಳ್ಳುವಾಗ 'ಸೋಹಂ' ಎಂದೂ, ಇವೆರಡರ ನಡುವೆ 'ಸ್ವಾಹಾ' ಎಂದೂ ಮೂರು ಮಂತ್ರಗಳು ಹಂಸಮಂತ್ರವೆಂಬ ಒಂದು ಮಾಲಾಮಂತ್ರವಾಗುತ್ತದೆ. ಹಂಸಃ = ದೋಷರಹಿತನಾದ ಹರಿ. ಸೋಹಂ = ನನ್ನ ಅಂತರ್ಯಾಮಿ ಸ್ವಾಹಾ = ಅವನಿಗೆ ಎಲ್ಲವನ್ನೂ ಸಮರ್ಪಿಸುತ್ತೇನೆ. ಇದು ಕೇವಲ ಸರಳವಾದ ಒಂದು ಅರ್ಥ. ಇದರ ಅರ್ಥವ್ಯಾಪ್ತಿಗೆ ಕೊನೆಯಿಲ್ಲ ಸರ್ವಜ್ಞನಾದ ವಾಯುದೇವನಿಗೆ ಮಾತ್ರ ಇದು ಗೊತ್ತು. ಈ ಮಂತ್ರವನ್ನು ಪ್ರತಿದಿನ ಇಪ್ಪತ್ತೊಂದು ಸಾವಿರದ ಆರುನೂರು ಬಾರಿ ಪ್ರತಿಯೊಬ್ಬ ಜೀವಿಯು

ಶರೀರದಲ್ಲಿಯೂ ವಾಯುದೇವ ಜಪಿಸುತ್ತಾನೆ 'ಭೂರ್' = ಗುಣಪೂರ್ಣನೆಂದು ಹರಿಯನ್ನು ಧ್ಯಾನಿಸುತ್ತಾನೆ. ಆದ್ದರಿಂದ ಎಲ್ಲ ಜೀವಿಗಳೂ ನಿದ್ದೆ ಮಾಡುವಾಗ ಶ್ವಾಸವು 'ಭೂರ್' ಎಂಬ ಗೊರಕೆಯ ಧ್ವನಿ ಉಂಟುಮಾಡುತ್ತದೆ. ಸಜ್ಜನರೆಲ್ಲ ಹರಿಯನ್ನು 'ಭೂರ್' ಎಂದೇ ಉಪಾಸನೆ ಮಾಡುತ್ತಾರೆ ಮತ್ತು ಅಸುರರು 'ಅಭೂರ್' ಎಂದು ಉಪಾಸನೆ ಮಾಡುತ್ತಾರೆ. ಆದರೂ ಎಲ್ಲರ ಉಸಿರಿನಲ್ಲೂ ಮುಖ್ಯಪ್ರಾಣ 'ಭೂರ್' ಎಂದೇ ಉಪಾಸನೆ ಮಾಡುತ್ತಾನೆ ಆದ್ದರಿಂದಲೆ ಎಲ್ಲರ ಗೊರಕೆಯ ಧ್ವನಿಯೂ 'ಭೂರ್' ಎಂದೇ ಇರುತ್ತದೆ. 'ಅಭೂರ್' ಎಂದಲ್ಲ–

ತಸ್ಮಾದ್ಧಾಪ್ಯೇತರ್ಹಿ ಸುಪ್ತೋ ಭೂರ್ಭೂರಿತ್ಯೇವ ಪ್ರಶ್ವಸಿತಿ ।

'ಮುಖ್ಯಪ್ರಾಣ 'ಭೂರ್' ಎಂದೇ ಉಪಾಸನೆ ಮಾಡುವುದರಿಂದ ನಿದ್ರಿಸುವ ಜೀವರೆಲ್ಲರೂ 'ಭೂರ್ ಭೂರ್' ಎಂದೆ ಗೊರಕೆ ಹಾಕುತ್ತಾರೆ' ಎಂದು ಐತರೇಯೋಪನಿಷತ್ತು ಹೇಳುತ್ತದೆ.

ಬಾಲಕ ಧ್ರುವ ಮನುಷ್ಯಮಾನದ ಆರುತಿಂಗಳ ಕಾಲ ಮಾತ್ರ ವಾಸುದೇವ ದ್ವಾದಶಾಕ್ಷರ ಮಂತ್ರ ಜಪ ಮಾಡಿದ ಮಾತ್ರಕ್ಕೆ ಹರಿ ಒಲಿದು ಧ್ರುವಲೋಕದ ಒಡೆತನವನ್ನಿತ್ತ. ಬ್ರಹ್ಮಮಾನದ ನೂರುವರ್ಷ ಕಾಲ ಮುಖ್ಯಪ್ರಾಣ ಹದಿನಾಲ್ಕು ಲೋಕದಲ್ಲಿ ಎಂಬತ್ತನಾಲ್ಕು ಲಕ್ಷ ಯೋನಿಗಳಲ್ಲಿ ಹುಟ್ಟಿ ಉಸಿರಾಡುವ ಎಲ್ಲ ಜೀವರಲ್ಲಿ ಅವಿರತವಾಗಿ ಶ್ವಾಸಜಪ ಮಾಡಿದ್ದಾನೆ. ಅವನಿಗೆ ಸತ್ಯಲೋಕದ ಒಡೆತನವೇ ಸಾಕೆ ? ಮನುಷ್ಯಮಾನದ ಒಂದು ವರ್ಷ ದೇವಮಾನದಲ್ಲಿ ಒಂದು ದಿನ. ದೇವಮಾನದ ಹನ್ನೆರಡು ಸಾವಿರ ವರ್ಷಗಳು ಒಂದು ಚತುರ್ಯುಗ. ಒಂದುಸಾವಿರ ಚತುರ್ಯುಗಗಳು ಬ್ರಹ್ಮನಿಗೆ ಒಂದು ಹಗಲು. ಈ ಗಣನೆಯಲ್ಲಿ ನೂರುವರ್ಷಕಾಲ ವಾಯುದೇವ ಮಾಡಿದ ಮಹಾಜಪಕ್ಕೆ ಪ್ರತಿಫಲ ಸತ್ಯಲೋಕದ ಒಡೆತನ ಏನೂ ಅಲ್ಲ ಎನಿಸಿತು ಶ್ರೀಹರಿಗೆ ಆದರಿಂದ ಸಹಭೋಗವನ್ನೂ ಕೊಟ್ಟ. ಎಷ್ಟು ಕೊಟ್ಟರೂ ತೀರದಂಥ ದೊಡ್ಡ ಮೊತ್ತವನ್ನು ಸಾಲಮಾಡಿದವನು ಸಾಲಿಗನಿಗೆ ಏನೋ ಸ್ವಲ್ಪ ಮಾತ್ರ ಹಿಂತಿರುಗಿ ಕೊಟ್ಟು ತಾನು ಉಣ್ಣುವಾಗಲೆಲ್ಲ ಅವನನ್ನೂ ಜೊತೆಗೆ ಕುಳ್ಳಿರಿಸಿಕೊಂಡು ಜೊತೆಗೇ ಉಣ್ಣುವಂತೆ ಇದು. ವಾದಿರಾಜರು ವೈಕುಂಠ ವರ್ಣನೆಯಲ್ಲಿ ಹೇಳುತ್ತಾರೆ–

ನಂಬಿದ ಸಾಲಿಗ ಬಂದು ಬಂದು ಬೇಡ–
ಲುಂಬಾಗ ಕೂಡಿಕೊಂಡುಂಡು ।
ನಂಬಿಸುವಂತೆ ಬೊಮ್ಮನಿಗರ್ಧ ಉಣಿಸಿ ಹರಿ
ಉಂಬ ಸಂಭ್ರಮವನೇನೆಂಬೆ ॥

ಮುಖ್ಯಪ್ರಾಣನ ಶ್ವಾಸಜಪದ ಅನಂತಫಲವನ್ನೂ, ಜೊತೆಗೆ ಸಕಲಸಜ್ಜನರು ಮಾಡುವ ಸತ್ಕರ್ಮಗಳ ಅನಂತಫಲವನ್ನೂ 'ಶುಭಂ ಪಿಬತ್ಯಸೌ ನಿತ್ಯಂ' ಎಂಬಂತೆ ಹರಿ ತಾನು ಉಣ್ಣುವಾಗ ಬ್ರಹ್ಮನನ್ನೂ ಜೊತೆಗೆ ಕುಳ್ಳಿರಿಸಿಕೊಂಡು ಸಂಭ್ರಮದಿಂದ ಒಂದಂಶ ಅವನಿಗುಣಿಸುತ್ತ ಒಂದಂಶ ತಾನೂ ಉಣ್ಣುತ್ತಾನೆ. ಇದು ಒಂದು ಬ್ರಹ್ಮಕಲ್ಪ ಮಾತ್ರ. ಮುಂದೆ ಆ ಬ್ರಹ್ಮನನ್ನು ವೈಕುಂಠಕ್ಕೆ ಕಳಿಸಿ ಆ ಅನಂತಫಲವನ್ನು ಶ್ರೀಹರಿ ನಿರಂತರ ತಾನೊಬ್ಬನೇ ಉಣ್ಣುತ್ತಾನಂತೆ, ವಾದಿರಾಜರು ವೈಕುಂಠ ವರ್ಣನೆಯಲ್ಲಿ ಹೇಳುತ್ತಾರೆ–

ಬೊಮ್ಮನ ನೂರು ವರುಷ ಪರ್ಯಂತ
ಸಮ್ಮೀರ ಮಾಡಿದ ಜಪಕೆ ।
ಸಮ್ಮಾನ ಫಲ ಒಂದು ಬ್ರಹ್ಮಕಲ್ಪದಲುಣಿಸಿ
ರಮ್ಮೇಶ ತಾನೆಂದೆಂದುಂಬ ॥

ಆದರೆ ರಾಮಾಯಣದಲ್ಲಿ ಹನುಮಂತನು ಮಾಡಿದ ಸೇವೆಗೆ ಒಲಿದ ಶ್ರೀರಾಮ ಆಗಲೆ ಸಹಭೋಗದ ವರವನ್ನಿತ್ತನೆಂದಿದೆ. ಬಳಿತ್ಥಾಸೂಕ್ತದಲ್ಲಿಯೂ ಹಾಗೇ ಹೇಳಿದೆ–

ಯದೀಮುಪ ಹ್ವರತೇ ಸಾಧತೇ ಮತಿಃ
ಋತಸ್ಯ ಧೇನಾ ಅನಯಂತ ಸಸ್ರುತಃ ॥

'ಸಸ್ರುತಃ ಧೇನಾಃ' ಕರುಣಾಮೃತ ಸ್ಯಂದಿಯಾದ ಶ್ರೀರಾಮನ ವರ ದಾನದ ಮಾತುಗಳು ಹನುಮಂತನಿಗೆ 'ಋತಸ್ಯ ಈಂ' ಸತ್ಯಲೋಕದ ಅಧಿಕಾರ ಸಂಪತ್ತನ್ನು 'ಅನಯಂತ' ತಂದುಕೊಟ್ಟುವು. 'ಯತ್' ಏಕೆಂದರೆ 'ಮತಿಃ' ಹನುಮಂತನು 'ಉಪಹ್ವರತೇ ಸಾಧತೇ' ರಾಮನ ದೂತನಾಗಿದ್ದು ಕಾರ್ಯಸಾಧಕನಾಗಿದ್ದಾನೆ.

ವಾಯುಸ್ತುತಿಯಲ್ಲಿಯೂ ಸ್ಪಷ್ಟವಾಗಿ ಹೇಳಿದೆ–

ದೇವ್ಯಾದೇಶ ಪ್ರಣೀತಿ ದ್ರುಹಿಣ ಹರವರಾವಧ್ಯ ರಕ್ಷೋ ವಿಘಾತಾ–
ದ್ಯಾಸೇವೋದ್ಯದ್ದಯಾರ್ದ್ರಃ ಸಹಭುಜಮಕರೋದ್ರಾಮನಾಮಾ
ಮುಕುಂದಃ ॥

'ಸೀತಾಸಂದೇಶವನ್ನು ತಂದುದು, ಬ್ರಹ್ಮರುದ್ರರ ವರಬಲದಿಂದ ಅವಧ್ಯರಾದ ರಾಕ್ಷಸರನ್ನು ಕೊಂದುದು ಇವೇ ಮುಂತಾದ ಸೇವೆಗೆ ಒಲಿದ ಶ್ರೀರಾಮ ಹನುಮಂತನಿಗೆ ಸಹಭೋಗವನ್ನಿತ್ತ.'

ಇದಕ್ಕೆ ಸಮಾಧಾನ ಹೀಗೆ ಹೇಳಬೇಕು–ಬ್ರಹ್ಮರುದ್ರರ ವರಬಲದಿಂದ ಲೋಕ ಕಂಟಕನಾಗಿ ನಿರ್ಭಯದಿಂದ ತಿರುಗುತ್ತಿದ್ದ ರಾವಣನ ಅಂತಃಪುರವನ್ನು ಶೋಧಿಸಿ ಬರಬೇಕೆಂದರೆ ಇತರ ದೇವತೆಗಳಿಗೆಂದೂ ಸಾಧ್ಯವಲ್ಲದ ಕಾರ್ಯ. ಇಂಥ ಸಾಹಸ ಮಾಡಿದ ಹನುಮಂತನಲ್ಲಿ ರಾಮ ಪ್ರಸನ್ನನಾದುದು ಅಚ್ಚರಿಯೇನಲ್ಲ. ಆದರೆ ವಾಯುದೇವನ ಕಾರ್ಯಗಳಲ್ಲೆಲ್ಲ ಇದೇ ಸರ್ವಶ್ರೇಷ್ಠ ಎನ್ನಲಾಗದು. ಜ್ಞಾನ ಕಾರ್ಯ ಎಲಕಾರ್ಯಕ್ಕಿಂತ ಶ್ರೇಷ್ಠ. ಬಲಕಾರ್ಯ ಅದಕ್ಕೆ ಸಹಕಾರಿ ಮಾತ್ರ. ಬಲ ಜ್ಞಾನಸ್ವರೂಪನಾದ ವಾಯುದೇವನ ಬಲಕಾರ್ಯ ಜ್ಞಾನಕಾರ್ಯಗಳೆರಡೂ ಅನುಪಮವೇ. ಆದರೂ ಅವೆರಡರಲ್ಲಿ ಜ್ಞಾನಕಾರ್ಯವೆ ಹೆಚ್ಚಿನದು. ಅದಕ್ಕೆ ಫಲವಾಗಿಯೇ ಸಹಭೋಗ ದೊರೆಯಿತೆನ್ನಬೇಕು. ಧ್ರುವನು ದ್ವಾದಶಾಕ್ಷರ ಮಂತ್ರ ಜಪದಿಂದ ಧ್ರುವಲೋಕ ಪಡೆದ. ಎಲ್ಲ ದೇವತೆಗಳೂ ತಪಸ್ಸಿನಿಂದಲೇ ತಮ್ಮ ತಮ್ಮ ಪದವಿಗಳನ್ನು ಸಂಪಾದಿಸಿಕೊಂಡರು. ವಾಯುದೇವನೂ ಶ್ವಾಸಜಪರೂಪವಾದ ತಪಸ್ಸಿನಿಂದಲೇ ಬ್ರಹ್ಮಪದವಿಯನ್ನು ಪಡೆದನೆಂದರೆ ಅದು ಉಚಿತವಾಗುತ್ತದೆ. ಆದ್ದರಿಂದ ಮೂಲರೂಪಿ ವಾಯುದೇವನು ಅಂದಿನವರೆಗೆ ನಿರಂತರ ಮಾಡಿದ್ದ ಶ್ವಾಸಜಪಕ್ಕೆ ಒಲಿದೇ ಶ್ರೀಹರಿ ಅವನಿಗೆ ಸಹಭೋಗದ ವರವನ್ನು ನೀಡಲು ಸಿದ್ಧನಾಗಿದ್ದ. ಹನುಮಂತನ ಸಾಹಸಕಾರ್ಯವನ್ನು ಕಂಡಾಗ ಇನ್ನೂ ಹೆಚ್ಚು ಗಾಢವಾದ ಪ್ರೀತಿ ಉಂಟಾಯಿತು. ನಮಗೆ ಪ್ರಿಯರಾದವರು ಒಂದು ಸಣ್ಣ ಉಪಕಾರ ಮಾಡಿದರೂ ತುಂಬ ಮೆಚ್ಚಿಕೊಳ್ಳುತ್ತೇವೆ. ಉಳಿದವರು ಏನು ಮಾಡಿದರೂ ಹೆಚ್ಚು ಬೆಲೆ ಕೊಡುವುದಿಲ್ಲ. ಹಾಗೆಯೇ ಶ್ರೀರಾಮ ಹನುಮಂತನ ಸೇವೆಗೆ ತುಂಬ ಮೆಚ್ಚಿ ಹಿಂದಿನಕ್ಕಿಂತಲೂ ಹೆಚ್ಚಿನ ಗಾಢವಾದ ಸ್ನೇಹದಿಂದ ಅರಳಿದ ತಾವರೆ ಕಣ್ಣುಗಳಿಂದ ನೋಡುತ್ತ, ಹನುಮ, ನಿನಗೆ ಮುಂದಿನ ಕಲ್ಪದಲ್ಲಿ ಬ್ರಹ್ಮಪದವಿಯಲ್ಲಿ ಸಹಭೋಗ ನೀಡುವೆನೆಂದು ಹರಸಿದ–ಎಂದು ಪಂಡಿತಾಚಾರ್ಯರು ಹಾಗೇ ಹೇಳುತ್ತಾರೆ–

'ಭೂಯಃ ಪ್ರಭೂತ ಪ್ರಣಯ ವಿಕಸಿತಾಬ್ಜೇಕ್ಷಣಸ್ತೇಕ್ಷಮಾಣಃ'

ಇಲ್ಲಿ 'ಭೂಯಃ ಪ್ರಭೂತಪ್ರಣಯ'ವೆಂದರೆ ಹಿಂದೆಗಿಂತ ಹೆಚ್ಚಿನ ಗಾಢವಾದ ಸ್ನೇಹ ಎಂದರ್ಥ. ಲಕ್ಷ್ಮೀ ಶೋಭನ ಪದದಲ್ಲಿ ಬರುವ 'ಒಮ್ಮನದಿ ನೇಹ'ವೂ ಇದೇ. 'ಭೂಯಃ' ಶಬ್ದದಂಥ ಒಂದೊಂದು ಶಬ್ದದಿಂದಲೇ ಎಲ್ಲ ಪ್ರಶ್ನೆಗಳಿಗೆ ಸಮಾಧಾನ ನೀಡುವುದು ಪಂಡಿತಾಚಾರ್ಯರ ಆರ್ಷ ಶೈಲಿಯ ವೈಶಿಷ್ಟ್ಯ–

ಋಷೀಣಾಂ ಪುನರಾದ್ಯಾನಾಂ ವಾಚಮರ್ಥೋನುಧಾವತಿ !

ನಿರ್ಮಲ ಪೂಜೆಯೆಂದರೆ ನಿಷಿದ್ಧ ಕರ್ಮವೆಲ್ಲವನ್ನೂ ತೊರೆದು ವಿಹಿತಕರ್ಮಗಳಿಂದ ಭಗವಂತನನ್ನು ಆರಾಧಿಸುವುದು. ನಿಷಿದ್ಧ ಕರ್ಮ

ಮಾಡುತ್ತಲೇ ಇದ್ದರೆ ಎಷ್ಟು ಪೂಜೆ ಮಾಡಿದರೂ ಭಗವಂತ ಮೆಚ್ಚುವುದಿಲ್ಲ ನಿಷಿದ್ಧಕರ್ಮ ಅವನಿಗೆ ಆಗದು. ಈ ದೃಷ್ಟಿಯಿಂದಲೆ ಶ್ರುತಿಸ್ಮೃತಿಗಳು ಹಲವಾರು ನಿಷೇಧಗಳನ್ನು ಮಾಡಿವೆ. ಅವನ್ನು ಅನುಸರಿಸಿದರೇ ಕ್ಷೇಮ.

'ಜನರಿಗೆ ನಿಷಿದ್ಧಕರ್ಮ ಮಾಡಲು ಧರ್ಮಶಾಸ್ತ್ರಗಳೇ ಪರೋಕ್ಷವಾಗಿ ಪ್ರೇರಣೆ ನೀಡುವವರು. ಸಣ್ಣಮಕ್ಕಳಿಗೆ ಪದೇ ಪದೇ ನಿಷ್ಠುರವಾಗಿ ನಿಯಮಗಳನ್ನು ಹೇರಿದರೆ ಅವುಗಳಲ್ಲಿ ವಿರುದ್ಧ ಪ್ರತಿಕ್ರಿಯೆಯೇ ಮೂಡಿಬರುವುದು ಕಂಡಿದೆ ನಮಗೆ ನಾವೇ ಇಷ್ಟಪಟ್ಟು ನಿಯಮಗಳನ್ನು ಹಾಕಿಕೊಂಡೆವೆಂದರೆ ಅವನ್ನು ಪ್ರಾಮಾಣಿಕವಾಗಿ ಪಾಲಿಸುತ್ತೇವೆ ಇನ್ನೊಬ್ಬರು ನಿಮಗಳನ್ನು ಹೇರಿದಾಗ ಅವನ್ನು ಮುರಿಯಲು ಯತ್ನಿಸುವುದೇ ಹೆಚ್ಚು. ಇದು ಮನೋವೈಜ್ಞಾನಿಕ ಸತ್ಯ. ಆದ್ದರಿಂದಲೆ ಧರ್ಮಶಾಸ್ತ್ರಕಾರರು ಇನ್ನೂ ಹುಟ್ಟಿಕೊಳ್ಳದಿದ್ದ ಕಾಲದಲ್ಲಿ, ಮಹಾಭಾರತ ರಾಮಾಯಣ ಕಾಲೀನ ಸಮಾಜದಲ್ಲಿ ಮುಕ್ತಧರ್ಮದ ಆಚರಣೆಯೆ ಇತ್ತು'– ಈ ಆಕ್ಷೇಪ ಮಾಡುವುದಕ್ಕೆ ಶ್ರುತಿಸ್ಮೃತಿಗಳು, ಧರ್ಮಶಾಸ್ತ್ರಗಳು ಯಾರೋ ಋಷಿಮುನಿಗಳ ಆದೇಶಗಳೆನ್ನುವ ತಪ್ಪುಗ್ರಹಿಕೆಯೇ ಕಾರಣ. ವಸ್ತುತಃ ಅವೆಲ್ಲ ಭಗವಂತನದೇ ಆಜ್ಞೆ. ಅಲ್ಲಿರುವುದೆಲ್ಲ ಭಗವಂತನೇ ಮಾಡಿದ ನಿಯಮಗಳು. ಭಗವಂತನಲ್ಲಿ ವಿಶ್ವಾಸ ಉಳ್ಳವರೆಲ್ಲ ಭಗವಂತನ ನಿಯಮಗಳನ್ನು ಪಾಲಿಸಿಯೇ ಪಾಲಿಸುತ್ತಾರೆ. ಇಲ್ಲದಿದ್ದರೆ ಭಗವಂತನಿಗೆ ದ್ರೋಹವೆಸಗಿದಂತಾಗುತ್ತದೆ. ವಿಷ್ಣುಧರ್ಮೋತ್ತರದಲ್ಲಿ ಹೇಳಿದೆ–

ಶ್ರುತಿಃ ಸ್ಮೃತಿರ್ಮಮೇವಾಜ್ಞಾ ಯಸ್ತಾಮುಲ್ಲಂಘ್ಯ ವರ್ತತೇ ।
ಆಜ್ಞಾಚ್ಛೇದೀ ಮಮ ದ್ರೋಹೀ ಮದ್ಭಕ್ತೋಽಪಿ ನ ವೈಷ್ಣವಃ ॥

'ಶ್ರುತಿಸ್ಮೃತಿಗಳು ಭಗವಂತನದೇ ಆಜ್ಞೆ. ಶ್ರುತಿಯನ್ನಾಗಲಿ ಸ್ಮೃತಿಯನ್ನಾಗಲಿ ಮೀರಿ ನಡೆಯುವವನು ನನ್ನ ಆಜ್ಞೆಯನ್ನೇ ಉಲ್ಲಂಘಿಸಿದಂತಾಗುವುದು. ಅವನು ನನ್ನ ಭಕ್ತನೇ ಆಗಿದ್ದರೂ ದ್ರೋಹಿ ಎಂದೇ ತಿಳಿಯುತ್ತೇನೆ. ಆದ್ದರಿಂದ ಅವನು ವಿಷ್ಣುಭಕ್ತನೇ ಅಲ್ಲ' ಎಂದು ಭಗವಂತನೇ ಹೇಳುತ್ತಾನೆ

ನಿಜವಾದ ಭಕ್ತ ತನ್ನನ್ನು ತಾನು ಪ್ರೀತಿಸುವುದಕ್ಕಿಂತ ಹೆಚ್ಚಾಗಿ ತನ್ನೊಳಗಿರುವ ಭಗವಂತನನ್ನು ಪ್ರೀತಿಸುತ್ತಾನೆ ಏಕೆಂದರೆ ಬೇರೆಲ್ಲಕ್ಕಿಂತ ತಾನೇ ತನಗೆ ಹೆಚ್ಚು ಪ್ರಿಯನೆನಿಸಲು ಅಂಥ ಭಗವಂತ ತನ್ನೊಳಗಿರುವುದೇ ಕಾರಣ ಇದ್ದಿಲು ಸುಡುವುದೂ ಕೆಂಪಗೆ ಹೊಳೆಯುವುದೂ ಅದರೊಳಗೆ ಬೆಂಕಿ ಇರುವ ಪ್ರಯುಕ್ತ ತಾನೇ ಇದು ಈ ಅಭಿಪ್ರಾಯದಿಂದಲೆ.

'ಆತ್ಮನಸ್ತು ಕಾಮಾಯ ಸರ್ವಂ ಪ್ರಿಯಂ ಭವತಿ'

ಎಂದು ಬೃಹದಾರಣ್ಯಕೋಪನಿಷತ್ತು ಹೇಳುತ್ತದೆ. ತನಗೆ ತಾನು ಸದಾ ಪ್ರಿಯನೆನಿಸುತ್ತಾನೆ ಎಂಬ ನಿಯಮವೂ ಕೆಲವೇಳೆ ಸುಳ್ಳಾಗುವುದುಂಟು. ಆದ್ದರಿಂದಲೇ ಕೆಲವರು ಭಾವಾವೇಶದಿಂದ ದುಡುಕಿ ಆತ್ಮಹತ್ಯೆ ಮಾಡಿಕೊಳ್ಳುತ್ತಾರೆ. ಇದನ್ನು ಗಮನಿಸಿದರೆ ಒಬ್ಬನು ತನ್ನನ್ನು, ತನ್ನ ತಿಳುವಳಿಕೆಯನ್ನು ಪೂರ್ತಿ ನಂಬುವುದು ಕಷ್ಟ. ನಮ್ಮ ಹಿತ ನಮಗೇ ಸರಿಯಾಗಿ ತಿಳಿಯದು. ಎಲ್ಲವನ್ನೂ ಬಲ್ಲವನು ಅತ್ಯಂತ ಹಿತಕಾರಿ ಭಗವಂತನೊಬ್ಬನೇ. ಅವನು ಮಾಡಿದ ನಿಯಮಗಳನ್ನು ಮೀರುವುದು ಆತ್ಮಘಾತಕತನವಾಗುತ್ತದೆ. ಆದ್ದರಿಂದ ಧರ್ಮಶಾಸ್ತ್ರನಿಯಮಗಳನ್ನು ಎಲ್ಲರೂ ಪಾಲಿಸಬೇಕು.

ಜಾನಾಮಿ ಧರ್ಮಂ ನ ಚ ಮೇ ಪ್ರವೃತ್ತಿಃ
ಜಾನಾಮ್ಯಧರ್ಮಂ ನ ಚ ಮೇ ನಿವೃತ್ತಿಃ ।

ಎಂಬಂತೆ ಮನುಷ್ಯರು ಸಾಮಾನ್ಯವಾಗಿ ವಿಹಿತಕರ್ಮವನ್ನು ಬಿಡುತ್ತಾರೆ, ನಿಷಿದ್ಧಕರ್ಮ ಮಾಡುತ್ತಾರೆ ಅವರಿಗೆ ವಿಧಿನಿಷೇಧಗಳು ಆವಶ್ಯಕ ಅವರಿಗೆ ಮಾತ್ರ ಧರ್ಮಶಾಸ್ತ್ರ ನಿಷ್ಠುರವಾಗಿ ವಿಧಿನಿಷೇಧಗಳನ್ನು ಮಾಡುತ್ತದೆ. ದೇವತೆಗಳು ಸಾಮಾನ್ಯವಾಗಿ ವಿಹಿತ ಕರ್ಮ ಬಿಡಲಾರರು. ನಿಷಿದ್ಧಕರ್ಮ ಮಾಡಲಾರರು, ಕೆಲವೊಮ್ಮೆ ವಿಶೇಷ ಕಾರಣದಿಂದ ನಿಷಿದ್ಧಕರ್ಮ ಮಾಡುವುದುಂಟು ಇಂಥವರಿಗೆ ನಿಷ್ಠುರವಾಗಿ ನಿಷೇಧ ಮಾಡಿ ಅವರಲ್ಲಿ ವಿರುದ್ಧ ಪ್ರತಿಕ್ರಿಯೆ ಮೂಡಿಸುವ ಅವಿವೇಕವನ್ನು ಧರ್ಮಶಾಸ್ತ್ರ ಮಾಡುವುದಿಲ್ಲ. ವಿಶೇಷ ಕಾರಣವಿದ್ದಾಗ ನಿಷಿದ್ಧಕರ್ಮ ಮಾಡಲು ಅವರಿಗೆ ಅನುಮತಿಯನ್ನೇ ನೀಡುತ್ತದೆ. ಋಜುಯೋಗಿಗಳು ಮಾತ್ರ ಯಾವ ಕಾರಣದಿಂದಲೂ ನಿಷಿದ್ಧಕರ್ಮ ಮಾಡಲಾರರು ಅವರಿಗೆ ನಿಷೇಧ ಅರ್ಥ ಶೂನ್ಯವಾಗಿ ಬಿಡುತ್ತದೆ. ಆದ್ದರಿಂದ ನಿಷೇಧ ಮಾಡುವುದಿಲ್ಲ. ಮಾತ್ರವಲ್ಲ, ಅಸುರ ಮೋಹನಕ್ಕಾಗಿ ಕೆಲವೊಮ್ಮೆಯಾದರೂ ಅವರಿಂದ ನಿಷಿದ್ಧಕರ್ಮ ನಡೆಯಬೇಕೆಂಬ ದೃಷ್ಟಿಯಿಂಬ ನಿಷಿದ್ಧಕರ್ಮವನ್ನೇ ವಿಧಿಸುತ್ತದೆ. ಹೀಗಾಗಿ ಬ್ರಹ್ಮನು ನಿಷಿದ್ಧಕರ್ಮವೇನಾದರೂ ಮಾಡಿದಂತೆ ಕಂಡರೆ ವಸ್ತುತಃ ಅದು ಅವನಿಗೆ ವಿಹಿತಕರ್ಮವೇ ಆಗಿರುತ್ತದೆ. ಆದ್ದರಿಂದ ಅವನು ಮಾಡುವ ಪೂಜೆ ಎಂದೂ ನಿರ್ಮಲ ಪೂಜೆಯೇ ಆಗಿರುತ್ತದೆ ಎಂಬ ಅಭಿಪ್ರಾಯದಿಂದ 'ನಿರ್ಮಲ ಪೂಜೆಯ ಕೈಗೊಂಬ' ಎನ್ನಲಾಗಿದೆ

ಸರ್ವಜ್ಞನಾದ ಭಗವಂತನು ಮಾಡಿದ ನಿಯಮಗಳನ್ನು ಸರಿಯಾಗಿ ತಿಳಿದು ಅದರಂತೆ ನಡೆಯುವುದು ಸರ್ವಜ್ಞ ಸರ್ವಶಕ್ತರಾದ ಬ್ರಹ್ಮವಾಯುಗಳಿಗೆ ಮಾತ್ರ ಸಾಧ್ಯ. ಆದ್ದರಿಂದ ನಿಷಿದ್ಧ ಕರ್ಮವನ್ನು ಪೂರ್ತಿಯಾಗಿ ತಿಳಿದು ತ್ಯಜಿಸಿ ನಿರ್ಮಲ

ಪೂಜೆ ಮಾಡುವವನು ಬ್ರಹ್ಮನೆಂಬ ಅಭಿಪ್ರಾಯದಿಂದಲೂ 'ನಿರ್ಮಲ ಪೂಜೆಯ ಕೈಗೊಂಬ' ಎನ್ನಲಾಗಿದೆ.

'ಒಮ್ಮನದಿ ನೇಹವ ಮಾಡುವ ನಿರ್ಮಲ ಪೂಜೆ' ಎಂದು ಅನ್ವಯಿಸಿದರೂ ಸರಿಯೆ. ಏಕಾಂತ ಭಕ್ತಿಪೂರ್ವಕ ಪೂಜೆ ಋಜುಯೋಗಿಗಳಿಗೆ ಮಾತ್ರ ಸಾಧ್ಯ.

'ಪರಮ್ಮ ಮೂರುತಿ' ಎಂಬ ಪಾಠವಿದೆ. ಉತ್ತಮವಾದ ಚಿನ್ಮಯ ಶರೀರ ಎಂದರ್ಥ. 'ಪರಬೊಮ್ಮ ಮೂರುತಿ' ಎಂದರೆ ಪರಬ್ರಹ್ಮಸ್ವರೂಪ. ಚತುರ್ಮುಖನು ಕೇವಲ ಬ್ರಹ್ಮ ಶ್ರೀಹರಿ ಪರಬ್ರಹ್ಮ ಎಂದು ಅಭಿಪ್ರಾಯ.

— ೮೪ —

**ಮುಖ್ಯಪ್ರಾಣನ ಮನೆಯಲ್ಲಿ ಭಾರತಿಯಾಗ–**
**ಲಿಕ್ಕಿ ಬಡಿಸಿದ ರಸಾಯನವ ।**
**ಸಕ್ಕರೆಗೂಡಿದ ಪಾಯಸ ಸವಿಯುವ**
**ರಕ್ಕಸ ವೈರಿಯೆ ಹಸೆಗೆ ಬಾ ॥**

ಹಿಂದಿನ ನುಡಿಯಲ್ಲಿ 'ಬೊಮ್ಮನ ಮನೆಯಲ್ಲಿ' ಹರಿಯ ಆರಾಧನೆ. ಈಗ 'ಮುಖ್ಯಪ್ರಾಣನ ಮನೆಯಲ್ಲಿ'. ಹೀಗೆಂದ ಮಾತ್ರಕ್ಕೆ ಇಬ್ಬರದೂ ಬೇರೆ ಬೇರೆ ಮನೆ ಎಂದು ತಿಳಿಯಬಾರದು. ಇಬ್ಬರೂ ಒಂದೇ ಮನೆಯವರು, ಅಣ್ಣ ತಮ್ಮಂದಿರು, ಅವಳಿ ಮಕ್ಕಳು ಶ್ರೀಹರಿ ಬ್ರಹ್ಮಾಂಡವನ್ನು ನಿರ್ಮಿಸಿ ಅದರೊಳಗೆ ಶ್ವೇತದ್ವೀಪದಲ್ಲಿ ಶೇಷನ ಮೇಲೆ ಮಲಗಿ ಲಕ್ಷ್ಮೀದೇವಿಯಲ್ಲಿ ಬ್ರಹ್ಮವಾಯುಗಳನ್ನು ಜೊತೆಗೇ ಹುಟ್ಟಿಸಿದನು. ತೈತ್ತೀರಿಯೋಪನಿಷತ್ತಿನಲ್ಲಿ 'ಅಹಮಸ್ಮಿ ಪ್ರಥಮಜಾ ಋತಸ್ಯ', 'ನಾನು ಶ್ರೀಹರಿಯ ಜ್ಯೇಷ್ಠ ಪುತ್ರ' ಎಂದು ಬ್ರಹ್ಮನು ಹೇಳಿಕೊಂಡಿದ್ದಾನೆ. ಆದರೆ ಬೃಹದಾರಣ್ಯಕೋಪನಿಷತ್ತಿನಲ್ಲಿ 'ದ್ವಿತೀಯೋ ಮ ಆತ್ಮಾ ಜಾಯೇತ' ಎಂದು ಶ್ರೀಹರಿಯೇ ಬ್ರಹ್ಮನನ್ನು ದ್ವಿತೀಯ ಪುತ್ರನೆಂದಿದ್ದಾನೆ. ಈ ವಿರೋಧಕ್ಕೆ ಪರಿಹಾರ ಬೃಹದಾರಣ್ಯಕ ಭಾಷ್ಯದಲ್ಲಿದೆ 'ವಾಯು ಬ್ರಹ್ಮ ಇಬ್ಬರೂ ಜೊತೆಗೇ ಹುಟ್ಟಿದವರು. ಆದರೆ ಕೆಲವೆಡೆ ವಾಯುವನ್ನು ಮೊದಲು ಹುಟ್ಟಿದವನೆಂದು ಹೇಳಿದೆ. ಇದು ವಾಯುವೆ ಬ್ರಹ್ಮಪದವಿಗೆ ಬರುವನೆಂಬುದನ್ನು ಸೂಚಿಸುವುದಕ್ಕಾಗಿ. ಕೆಲವೆಡೆ ಬ್ರಹ್ಮನನ್ನು ಮೊದಲು ಹುಟ್ಟಿದವನೆಂದಿದೆ ಇದು ವಾಯುವಿಗಿಂತ ಬ್ರಹ್ಮನ ಪದವಿಯೇ ಶ್ರೇಷ್ಠವೆನ್ನುವುದಕ್ಕಾಗಿ'

ಬ್ರಹ್ಮಾಂಡ ಸೃಷ್ಟಿಗೆ ಮೊದಲು ವಾಸುದೇವನ ಪುತ್ರನಾಗಿ ಬ್ರಹ್ಮನೂ, ಸಂಕರ್ಷಣನ ಪುತ್ರನಾಗಿ ವಾಯುವೂ ಬೇರೆ ಬೇರೆಯಾಗಿ ಹುಟ್ಟಿದರು. ಬಳಿಕ

ಮಹತ್ತತ್ತ್ವಾಭಿಮಾನಿಗಳಾಗಿ ಅನಿರುದ್ಧ ಪುತ್ರರಾಗಿ ಜೊತೆಗೇ ಹುಟ್ಟಿದರು. ಈ ಬ್ರಹ್ಮ ವಾಯುಗಳ ಪತ್ನಿಯರಾದ ಸರಸ್ವತಿ ಭಾರತಿಯರೂ ಪ್ರದ್ಯುಮ್ನನ ಅವಳಿಮಕ್ಕಳು.

ಬ್ರಹ್ಮವಾಯುಗಳು ಜ್ಞಾನ, ಆನಂದ, ಬಲಾದಿ ಸಕಲಗುಣಗಳಲ್ಲಿಯೂ ಪರಸ್ಪರ ಸಮಾನರು ಮತ್ತು ಒಬ್ಬರಿಗೊಬ್ಬರು ಬಲಪ್ರದರು ಏಕೆಂದರೆ ಬ್ರಹ್ಮ ಅನ್ನಾಭಿಮಾನಿ, ವಾಯು ಪ್ರಾಣಾಭಿಮಾನಿ. ಅನ್ನವಿಲ್ಲದಿದ್ದರೆ ಶರೀರ ಒಣಗಿ ನಾಶವಾಗುತ್ತದೆ. ಪ್ರಾಣವಿಲ್ಲದಿದ್ದರೆ ಅದು ಕೊಳೆತು ನಾಶವಾಗುತ್ತದೆ. ಅನ್ನ ಉಣ ಬೇಕಾದರೆ ಶರೀರದಲ್ಲಿ ಪ್ರಾಣವಿರಬೇಕು. ಶರೀರದಲ್ಲಿ ಪ್ರಾಣವಿರಬೇಕಾದರೆ ಅನ್ನ ಉಣಬೇಕು ಹೀಗೆ ಶರೀರದಲ್ಲಿ ಅನ್ನ ಪ್ರಾಣಗಳು ಸಮಬಲ ಆಧಾರವೆನಿಸಿವೆ. ಅನ್ನ ಪ್ರಾಣಗಳಿಗೆ ಅಭಿಮಾನಿಗಳಾದ ಬ್ರಹ್ಮ ವಾಯುಗಳೂ ಹಾಗೇ ಸಮಬಲರಾಗಿದ್ದು ಪರಸ್ಪರ ಆಧಾರವೆನಿಸಿದ್ದಾರೆ. ವಾಯುವಿಗೆ ಅನ್ನ ಕೊಡುವವ ಬ್ರಹ್ಮ ಬ್ರಹ್ಮನಿಗೆ ಪ್ರಾಣ ಕೊಡುವವ ವಾಯು.

ಅನ್ಯೋನ್ಯ ಗುಣದಾತೃತ್ವಾತ್ ಸಮಾನೌ ಬ್ರಹ್ಮಮಾರುತೌ ।

— ಐತರೇಯಭಾಷ್ಯ.

ಇಬ್ಬರೂ ಸಮಾನಬಲರಾದ್ದರಿಂದಲೇ ಲಂಕೆಯ ರಾಕ್ಷಸರಿಗೆ ಬ್ರಹ್ಮನು ಕೊಟ್ಟಿದ್ದ ವರಗಳನ್ನು ಅನೇಕ ಬಾರಿ ಹನುಮಂತನು ವ್ಯರ್ಥಗೊಳಿಸಿದರೂ ಇಂದ್ರಜಿತ್ತಿನ ಬ್ರಹ್ಮಾಸ್ತ್ರಕ್ಕೆ ಗೌರವ ಕೊಡಬೇಕೆಂದು ಅದಕ್ಕೆ ಕಟ್ಟುಬಿದ್ದಂತೆ ತೋರಿಕೊಂಡ.

ಪ್ರಾಣಾಭಿಮಾನಿಯಾದ್ದರಿಂದ ವಾಯುವೇ ಪ್ರಾಣನೆನಿಸಿದ್ದಾನೆ. ಪ್ರಾಣ ಪ್ರೇರಕನಾಗಿದ್ದು ಮುಖ್ಯವಾಗಿ ಪ್ರಾಣನೆನಿಸಿದವ ಶ್ರೀಹರಿ. ವಾಯು ಮಧ್ಯಮ ಪ್ರಾಣ. 'ಯೋಽಯಂ ಮಧ್ಯಮಪ್ರಾಣಃ' ಎಂದು ಬೃಹದಾರಣ್ಯಕವು ಹೇಳುತ್ತದೆ. ಆದರೆ ಛಾಂದೋಗ್ಯಭಾಷ್ಯದಲ್ಲಿ ಹೇಳುವಂತೆ ಮಧ್ಯಮ ಪ್ರಾಣರು ಅನೇಕರಿದ್ದಾರೆ. ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ ಎಂಬ ಪಂಚಪ್ರಾಣಗಳಿಗೆ ಅವೇ ಹೆಸರಿನ ಪಂಚರೂಪಗಳುಳ್ಳ ವಾಯುವೆ ಅಭಿಮಾನಿ. ಅನಂತರ ಗರುಡನ ಪಂಚರೂಪಗಳು. ಅನಂತರ ವಾಯುಪುತ್ರರಾದ ಐದು ಮಂದಿ ವಾಯುಗಳು. ಹೀಗೇ ಮೂರು ಬಗೆಯ ಮಧ್ಯಮ ಪ್ರಾಣರಲ್ಲಿ ಮುಖ್ಯನಾದ್ದರಿಂದ ವಾಯುವನ್ನು ಮುಖ್ಯಪ್ರಾಣ ಎನ್ನಲಾಗಿದೆ. ಪ್ರಾಣಾಪಾನಾದಿ ಪಂಚಪ್ರಾಣಗಳಿಗೆ ಕ್ರಮವಾಗಿ ಶೇಷ, ಗರುಡ, ರುದ್ರ, ಇಂದ್ರ, ವಾಯುಗಳು ಅಭಿಮಾನಿಗಳಾಗಿದ್ದು ಇವರಲ್ಲೆಲ್ಲ ವಾಯು ಮುಖ್ಯನಾದ್ದರಿಂದಲೂ ಆತ ಮುಖ್ಯಪ್ರಾಣನೆನಿಸಿದ್ದಾನೆ.

ಮುಖ್ಯಪ್ರಾಣ ಪಂಚರೂಪಿಯಾದ್ದರಿಂದ ಹನುಮಂತನು ಪಂಚಮುಖ ನಾದುದುಂಟು. ಶಿವನೂ ಈಶಾನ, ತತ್ಪುರುಷ, ಅಘೋರ, ವಾಮದೇವ, ಸದ್ಯೋಜಾತ ಎಂದು ಪಂಚರೂಪನಾದ್ದರಿಂದ ಪಂಚಮುಖನಾಗಿದ್ದಾನೆ.

'ಹನುಮಂತನು ಶಿವನ ಅವತಾರವಾದ್ದರಿಂದ ಪಂಚಮುಖನಾದ' ಎಂದು ತಿಳಿಯುವುದು ತಪ್ಪು. 'ರೋಮ ರೋಮಕೆ ಕೋಟಿಲಿಂಗ ಉದುರಿಸಿದ' ವಾಯ್ವವತಾರ ಭೀಮನ ಅಣ್ಣ ಈ ವಾಯ್ವವತಾರನಾದ ಹನುಮಂತ. 'ಭರ್ಗಃ ಸಹಸೋ ಯತೋಜನಿ' ಎಂದು ಬಳಿತ್ಥಾ ಸೂಕ್ತದಲ್ಲಿ ಶಿವನನ್ನೇ ವಾಯುವಿನ ಮಗನೆಂದಿದೆ

ಮುಖ್ಯಪ್ರಾಣನ ಪಂಚಮುಖಗಳ ಆಕಾರ–

'ವಂದೇ ವಾನರ ನಾರಸಿಂಹ ಖಗರಾಟ್ ಕ್ರೋಢಾಶ್ವ ವಕ್ತ್ರಾನ್ವಿತಂ'

ಪೂರ್ವದಲ್ಲಿ ವಾನರ ಮುಖ, ದಕ್ಷಿಣದಲ್ಲಿ ನರಸಿಂಹ ಮುಖ, ಪಶ್ಚಿಮದಲ್ಲಿ ಗರುಡಮುಖ, ಉತ್ತರದಲ್ಲಿ ವರಾಹಮುಖ, ಊರ್ಧ್ವದಲ್ಲಿ ಹಯಮುಖ. ಪ್ರತಿಯೊಂದು ಮುಖದಲ್ಲಿಯೂ ತ್ರಿನೇತ್ರ. ಖಡ್ಗ, ಡಾಲು, ಪುಸ್ತಕ, ಅಮೃತ, ಪಾಶ, ಅಂಕುಶ, ನೇಗಿಲು, ಖಟ್ವಾಂಗ, ಸರ್ಪ, ವೃಕ್ಷಗಳನ್ನು ಹಿಡಿದಿರುವ ದಶಭುಜ. ರುದ್ರಯಾಮಳದ ಸುದರ್ಶನ ಸಂಹಿತೆಯಲ್ಲಿ ಇದರ ವರ್ಣನೆ ಇದೆ. ನರಸಿಂಹಾದಿ ಮುಖಗಳಿವೆ ಎಂದ ಮಾತ್ರಕ್ಕೆ ಶ್ರೀ ಹರಿಯ ಅಭೇದವನ್ನು ಕಲ್ಪಿಸಬಾರದು. ನರಸಿಂಹಾದಿರೂಪಿ ಶ್ರೀಹರಿಯ ಉಪಾಸಕನೆಂದು ಬಗೆಯಬೇಕು. ಗರುಡಮುಖ ಪ್ರಯುಕ್ತ ಗರುಡಾಭೇದವೂ ಸಲ್ಲದು. ಗರುಡನಿಗೆ ಆ ಮುಖ ಉಪಾಸ್ಯವೆನಿಸುತ್ತದೆ.

ಆನಂದ ರಾಮಾಯಣದಲ್ಲಿ ಹನುಮಂತನು ಅಹಿರಾವಣ, ಮಹಿರಾವಣ ರನ್ನು ಕೊಂದ ಕಥೆ ಇದೆ. ಇವರು ಜಯವಿಜಯರ ಶಾಪದಿಂದ ರಾಕ್ಷಸರಾಗಿ ಹುಟ್ಟಿದ್ದ ಅಶ್ವಿನೀ ದೇವತೆಗಳು. ಲಂಕೆಯ ಯುದ್ಧದ ನಡುವೆ ರಾಮಲಕ್ಷ್ಮಣರನ್ನು ಮಾಯೆಯಿಂದ ಪಾತಾಳಕ್ಕೆ ಒಯ್ದಿದ್ದರು. ಆಗ ಹನುಮಂತನು ಮಹಿರಾವಣನ ವಧೆಯಾಗಬೇಕಾದರೆ, ಅವನು ಬಂಧನದಲ್ಲಿಟ್ಟಿದ್ದ ನಾಗಕನ್ಯೆಯೋರ್ವಳ ಸಲಹೆಯಂತೆ, ಐದು ವಜ್ರ ದುಂಬಿಗಳನ್ನು ಏಕಕಾಲದಲ್ಲಿ ನಾಶಪಡಿಸಬೇಕಾಗಿತ್ತು. ಅದಕ್ಕೆ ಆತ ಐದು ಮುಖಗಳನ್ನು ಪ್ರಕಟಮಾಡಿ ಒಮ್ಮೆಲೆ ಐದು ದುಂಬಿಗಳನ್ನು ಐದು ಮುಖಗಳಲ್ಲಿ ಹಲ್ಲಿನಿಂದ ಕಚ್ಚಿ ಕೊಂದು ಉಗುಳಿದ. ಬಳಿಕ ಮಹಿರಾವಣನನ್ನು ಕೊಂದ. ವಿಜಯದಾಸರು ಮುಖ್ಯಪ್ರಾಣ ಹಸ್ತಮಹಿಮ ಸುಳಾದಿಯಲ್ಲಿ ಈ ಕತೆಯನ್ನು ಸೂಚಿಸಿದ್ದಾರೆ–

ಅಸುರ ಮೈರಾವಣನ ಕೊಂದು ಬಿಸುಟ ಹಸ್ತ ।

ಹೀಗೆ ಪಂಚರೂಪಿಯಾದ ಮುಖ್ಯಪ್ರಾಣ ಅನ್ನಾಭಿಮಾನಿ ಬ್ರಹ್ಮನ ಪಂಚ ಪ್ರಾಣಗಳಿಗೆ ಅಭಿಮಾನಿಯಾಗಿದ್ದು ಅವನಿಗೆ ಆಯುಷ್ಯಪ್ರದನಾದ್ದರಿಂದ ಅನ್ನಾಯು ಎನಿಸಿಕೊಂಡ. ಐತರೇಯೋಪನಿಷತ್ತು ಹೇಳುತ್ತದೆ–

ಅನ್ನಾಯುರ್ವಾ ಏಷ ಯದ್ ವಾಯುಃ ।

ಬ್ರಹ್ಮವಾಯುಗಳು ಹೀಗೆ ಸಮಬಲರಾಗಿದ್ದು ಪರಸ್ಪರ ಆಧಾರಭೂತರಾದ್ದರಿಂದ ನಮ್ಮ ಶರೀರದಲ್ಲಿ ಹೇಗೋ ಹಾಗೆ ಸತ್ಯಲೋಕದಲ್ಲಿಯೂ ಜೊತೆಗೇ ಇದ್ದು ಆ ಲೋಕಕ್ಕೆ ಅಧಿಪತಿಗಳಾಗಿದ್ದಾರೆ. ಆದ್ದರಿಂದ ವಾದಿರಾಜರು ಮುಖ್ಯಪ್ರಾಣನನ್ನು 'ಸತ್ಯಲೋಕೇಶ್ವರಃ ಪ್ರಾಣಃ' ಎಂದು ತೀರ್ಥಪ್ರಬಂಧದಲ್ಲಿ ವರ್ಣಿಸಿದ್ದಾರೆ. 'ಬೊಮ್ಮನ ಮನೆಯಲ್ಲಿ' ಹೇಗೋ ಹಾಗೆ 'ಮುಖ್ಯಪ್ರಾಣನ ಮನೆ'ಯಲ್ಲಿಯೂ ಹರಿ ಪೂಜೆ ಕೈಗೊಳ್ಳುತ್ತಾನೆ. ಇದನ್ನು ಬೇರೆ ಹೇಳಬೇಕಾಗಿಲ್ಲವೆಂದೇ ಹೇಳಿಲ್ಲ. ಹಿಂದಿನ ನುಡಿಯಲ್ಲಿ 'ಬೊಮ್ಮನ ಮನೆಯಲ್ಲಿ' ಎನ್ನುವುದರ ಜೊತೆಗೆ 'ಮುಖ್ಯಪ್ರಾಣನ ಮನೆಯಲ್ಲಿ' ಎಂದೂ ಇಟ್ಟುಕೊಳ್ಳಬೇಕು. ಒಂದು ವ್ಯತ್ಯಾಸ 'ಒಮ್ಮನದಿ ನೇಹ' ಸಹಭೋಗ, ಮುಖ್ಯಪ್ರಾಣನಿಗೆ ಈಗ ಇಲ್ಲ, ಬ್ರಹ್ಮನಿಗಿದೆ.

ಹೀಗೆ ಸೋದರರಾದ ಬ್ರಹ್ಮವಾಯುಗಳು ಮಾಡುವ ಹರಿಯ ಆರಾಧನೆಯನ್ನು ಹಿಂದಿನ ನುಡಿಯಲ್ಲಿ ಹೇಳಿ ಸೋದರಿಯರಾದ ಸರಸ್ವತಿ ಭಾರತಿಯರ ಹರಿಸೇವೆಯನ್ನು ವಿಶೇಷವಾಗಿ ಈ ನುಡಿಯಲ್ಲಿ ವರ್ಣಿಸಲಾಗಿದೆ. 'ಮುಖ್ಯಪ್ರಾಣ'ನ ಮನೆ ಎಂದಿರುವುದರಿಂದ ಭಾರತೀದೇವಿಯನ್ನು ಮಾತ್ರ ಹೆಸರಿಸಿದೆ ಸರಸ್ವತೀದೇವಿಯನ್ನೂ ಇಟ್ಟುಕೊಳ್ಳಬೇಕು. ಸರಸ್ವತಿ ಕ್ಷೀರಾಭಿಮಾನಿನಿ. ಭಾರತಿ ಪಾಯಸಾಭಿಮಾನಿನಿ. ಕ್ಷೀರವಿಲ್ಲದೆ ಪಾಯಸವಾಗದು. ಆದ್ದರಿಂದ ಇಬ್ಬರೂ ಸೇರಿ ಪಾಯಸ ಮಾಡಿ ಹರಿಗೆ ಉಣಬಡಿಸುತ್ತಾರೆ–

ಅನ್ನಂ ಸರಸ್ವತೀ ಕುರ್ಯಾತ್, ಬ್ರಹ್ಮಾ ಕುರ್ಯಾತ್ ತಥಾ ಹರೇಃ ।
ಸೂಪಂ, ಕುರ್ಯಾನ್ಮಹಾಲಕ್ಷ್ಮೀರ್ಘೃತಂ ನಾರಾಯಣಸ್ಯ ವೈ ।
ಪರಮಾನ್ನಂ ಭಾರತೀ ಚ, ಭಕ್ಷ್ಯಂ ವಾಯುರ್ಜಗತ್ಪತೇಃ ॥

ಪಾಕಕಾರ್ಯ ಕೇವಲ ಗೃಹಿಣಿಯರದೇ ಅಲ್ಲ, ಯಜಮಾನನೂ ಜೊತೆಗೆ ಸೇರಬೇಕು. ಗೃಹಿಣಿ ಅಡಿಗೆಮನೆಯಲ್ಲಿಯೇ ಇರುವುದಿಲ್ಲ, ಅವಳಿಗೂ ಹರಿಯ ಆರಾಧನೆ ಬೇಕು. ಆದ್ದರಿಂದ ಸರಸ್ವತಿ ಅನ್ನ ಮಾಡುವಾಗ ತೊವ್ವೆಯನ್ನು ಬ್ರಹ್ಮ ಮಾಡುತ್ತಾನೆ. ಭಾರತಿ ಪಾಯಸ ಮಾಡುವಾಗ ಭಕ್ಷ್ಯವನ್ನು ವಾಯು

ತಯಾರಿಸುತ್ತಾನೆ ಬೆಣ್ಣೆ ಕಾಸಿ ತುಪ್ಪ ತಯಾರಿಸುವವಳು ಮಹಾಲಕ್ಷ್ಮಿ. ಅವಳೇ ಪಾಕಶಾಲೆಯ ಒಡತಿ.

ಆ ಕಮಲೆ ಮಾಡಿದ್ದು ನಾಲ್ಕು ಬಗೆ ಘೃತ ಸೂಪ
ಲೋಕಪತಿಗನುವಾದ ದಿವ್ಯಾನ್ನವು ।
ಬೇಕಾದ ಪಂಚ ಭಕ್ಷ್ಯಗಳು ರಸಾಯನವ
ಏಕಾಂತದಲಿ ನಿಮ್ಮ ದೇವಿ ಬಡಿಸೆ ॥
ಆರೋಗಣೆಯ ಮಾಡೋ ಸಾರ ಸುಖದೊಡೆಯ ॥

ಎಂದು ವಾದಿರಾಜರು ಹೇಳುವಂತೆ ಮಹಾಲಕ್ಷ್ಮಿ ಘೃತವನ್ನು ತಾನೆ ಮಾಡಿ, ಸೂಪವನ್ನು ಬ್ರಹ್ಮನಿಂದ, ಅನ್ನವನ್ನು ಸರಸ್ವತಿಯಿಂದ, ಭಕ್ಷ್ಯಗಳನ್ನು ವಾಯುವಿನಿಂದ, ರಸಾಯನವನ್ನು ಭಾರತಿಯಿಂದ ಮಾಡಿಸಿ ಹರಿಗೆ ಬಡಿಸುತ್ತಾಳೆ.

'ರಕ್ಕಸ ವೈರಿಯೆ ಹಸೆಗೆ ಬಾ' ಎನಲು,
'ತ್ರಿಕೋಟಿ ಮೂರ್ತಿ ಸಂಯುಕ್ತಃ ತ್ರೇತಾಯಾಂ ರಾಕ್ಷಸಾಂತಕಃ'

ಎಂದು ವಾಯುಪುರಾಣ ಹೇಳುವಂತೆ ರಾಕ್ಷಸಾಂತಕನಾದ ವಾಯುದೇವನ ಆರಾಧ್ಯಮೂರ್ತಿ ರಕ್ಕಸ ವೈರಿಯೇ ಆಗಿರಬೇಕೆನ್ನುವುದು ಕಾರಣವೆನ್ನಬಹುದು.

— ೮೫ —

**ರುದ್ರನ ಮನೆಯಲ್ಲಿ ರುದ್ರಾಣಿ ದೇವಿಯರು**
**ಭದ್ರಮಂಟಪದಿ ಕುಳ್ಳಿರಿಸಿ ।**
**ಸ್ವಾದನ್ನಗಳನು ಬಡಿಸಲು ಕೈಗೊಂಬ**
**ಮುದ್ದು ನರಸಿಂಹ ಹಸೆಗೆ ಬಾ ॥**

ರುದ್ರನ ಅರಮನೆಯಲ್ಲಿ ಪಾರ್ವತಿದೇವಿಯರು ಮಂಗಳಕರವಾದ ಮಂಟಪದಲ್ಲಿ ನಿನ್ನನ್ನು ಕುಳ್ಳಿರಿಸಿ ಸ್ವಾದುವಾದ ಅನ್ನಗಳನ್ನು ಬಡಿಸುತ್ತಾರೆ. ಅದನ್ನು ಸ್ವೀಕರಿಸುವ ಒಲವಿನ, ಚೆಲುವಿನ ನರಸಿಂಹನೆ, ನಮ್ಮ ಹಸೆಮಣೆಗೆ ಬಾ.

ಇಲ್ಲಿ ರುದ್ರನೆಂದರೆ ಕಾಶಿಯ ವಿಶ್ವನಾಥನೆ? ಆತ ದಿಗಂಬರ. ಜಟಾಧಾರಿ. ಭಿಕ್ಷಾನ್ನ ಉಣ್ಣುತ್ತ ಹುಲಿಯ ಚರ್ಮದ ಮೇಲೆ ಕುಳಿತು ಸ್ಫಟಿಕಾಕ್ಷಮಾಲೆ ಹಿಡಿದು ತಾರಕ ಬ್ರಹ್ಮ ರಾಮ ಷಡಕ್ಷರ ಮಂತ್ರ ಜಪದ ಆನಂದವನ್ನು ಸವಿಯುತ್ತ, ಭೃಗು ನಾರದಾದಿ ಮುನಿಗಳಿಗೆ ತತ್ವವನ್ನು ಉಪದೇಶಿಸುತ್ತ ಕಾಶಿಯಲ್ಲಿ ಮರಣ ಹೊಂದುವ ಎಲ್ಲ ಸುಜೀವಿಗಳ ಕಿವಿಯಲ್ಲಿ ರಾಮಮಂತ್ರ ಉಸುರುವುದಕ್ಕಾಗಿ

ಕಾಶಿಯ ಬೀದಿ ಬೀದಿಗಳಲ್ಲಿ ಸದಾ ಅಲೆಯುತ್ತಿರುವ ಪರಮ ಹಂಸ ಸಂನ್ಯಾಸಿ. ಸ್ಕಾಂದ ಪುರಾಣ ಕಾಶೀಖಂಡ ಹೇಳಿದೆ–

ಪಾಯಂ ಪಾಯಂ ಶ್ರುತಿ ಚುಲುಕಿತಂ ರಾಮನಾಮಾಮೃತಂ ಯದ್
ಧ್ಯಾಯಂ ಧ್ಯಾಯಂ ಮನಸಿ ಸತತಂ ಬ್ರಹ್ಮ ತತ್ ತಾರಕಾಖ್ಯಂ ।
ಜಾಪಂ ಜಾಪಂ ಪ್ರಕೃತಿ ವಿಕೃತೌ ಪ್ರಾಣಿನಾಂ ಕರ್ಣಮೂಲೇ
ವೀಧ್ಯಾಂ ವೀಧ್ಯಾಂ ಅಟತಿ ಜಟಿಲಃ ಕೋಽಪಿ ಕಾಶೀನಿವಾಸೀ ॥

ನಿತ್ಯ ಸಂಚಾರಿಯಾದ ಈ ಪರಮಹಂಸ ಸಂನ್ಯಾಸಿ ರುದ್ರನು ಹರಿಯನ್ನು ಭದ್ರ ಮಂಟಪದಲ್ಲಿ ಕುಳ್ಳಿರಿಸಿ ಗೃಹಿಣಿಯ ಕೈಯಿಂದ ಅನ್ನ ಉಣಿಸುವನೆ ?

ರುದ್ರನೆಂದರೆ ರುದ್ರಭೂಮಿಯಲ್ಲಿ ದಿಗಂಬರನಾಗಿ ಚಿತಾಭಸ್ಮ ಪೂಸಿಕೊಂಡು ತಲೆಕೂದಲು ಕೆದರಿಕೊಂಡು ರುಂಡಮಾಲೆ, ಅಸ್ಥಿ, ಸರ್ಪಗಳನ್ನು ಧರಿಸಿ ಭೂತ ಪ್ರೇತಪಿಶಾಚಿಗಳ ನಡುವೆ ನಗುತ್ತ ಅಳುತ್ತ ಉನ್ಮತ್ತನಂತೆ ಸಂಚರಿಸುವ ಅವಧೂತ ಶಿರೋಮಣಿಯನ್ನು ಗ್ರಹಿಸಿದರಂತೂ ಭದ್ರಮಂಟಪದಲ್ಲಿ ಸ್ವಾದು ಅನ್ನ ಉಣಿಸುವ ಮಾತು ದೂರವೇ ಉಳಿದೀತು. ಭಾಗವತ ಆತನ ಚರ್ಯೆಯನ್ನು ವರ್ಣಿಸಿದೆ –

ಪ್ರೇತಾವಾಸೇಷು ಘೋರೇಷು ಪ್ರೇತೈರ್ಭೂತಗಣೈರ್ವೃತಃ ।
ಅಟತ್ಯುನ್ಮತ್ತವನ್ನಗ್ನೋ ವ್ಯುಪ್ತಕೇಶೋ ಹಸನ್ ರುದನ್ ।
ಚಿತಾಭಸ್ಮಕೃತಸ್ನಾನಃ ಪ್ರೇತಸ್ರಜ್ ನ್ರಸ್ಥಿಭೂಷಣಃ ।

ಆದರೆ ಕೈಲಾಸದ ರುದ್ರ ಶ್ರೀಮಂತ ಗೃಹಸ್ಥ, ಕುಬೇರನ ಮಿತ್ರ, ವಾಮದೇವ. ವಾಮ ಅಂದರೆ ಸುಂದರನಾದ ದೇವನಾತ. ಹಾರಾದಿ ಸರ್ವಾಲಂಕಾರ ಭೂಷಿತನಾಗಿ ಮಡದಿ ಉಮೆಯನ್ನು ತೊಡೆಯ ಮೇಲಿರಿಸಿಕೊಂಡು ಭವ್ಯವಾದ ಅರಮನೆಯೊಳಗೆ ಸಿಂಹಾಸನದಲ್ಲಿ ಮಂಡಿಸಿ ಶಿರೋಭೂಷಣ ಚಂದ್ರಮಂಡಲದಿಂದ ಸುರಿವ ಅಮೃತದಲ್ಲಿ ಮಿಂದು, ಮಣಿವ ಭಜಿಸುವ ಇಂದ್ರಾದಿ ದೇವತೆಗಳನ್ನು ಅನುಗ್ರಹಿಸುತ್ತಿರುವ, ವಿಶ್ವವನ್ನೇ ಮೈಮರೆಸುವ ಸೌಂದರ್ಯ ಮೂರ್ತಿ ಮಂಗಳಸ್ವರೂಪಿ ಸದಾಶಿವ–

ಕೋಟೀರೇಂದು ಗಲತ್ಸುಧಾಪ್ಲುತ ತನುಂ ಹಾರಾದಿ ಭೂಷೋಜ್ವಲಂ
ಕಾಂತ್ಯಾ ವಿಶ್ವವಿಮೋಹನಂ ಪಶುಪತಿಂ ಮೃತ್ಯುಂಜಯಂ ಭಾವಯೇ ॥

ಈ ಆದರ್ಶಗೃಹಸ್ಥನಾದ ಶಿವ ಭದ್ರಮಂಟಪದಲ್ಲಿ ಉಮೆಯ ಕೈಯಿಂದ ಹರಿಗೆ ಅನ್ನ ಉಣಿಸಬಲ್ಲ.

ಹಾಗೆಯೇ ಇಲಾವೃತ ಖಂಡದಲ್ಲಿ ಒಂದು ಶಿವನ ಅರಮನೆಯಿದೆ. ಆ ಖಂಡದಲ್ಲಿ ಅವನೊಬ್ಬನೇ ಗಂಡು. ಉಳಿದವರೆಲ್ಲ ಹೆಣ್ಣುಗಳು. ಅಲ್ಲಿಗೆ ಬರಬಹುದಾದ ಗಂಡುಗಳೆಲ್ಲ ಪಾರ್ವತಿಯ ಶಾಪದಿಂದ ಹೆಣ್ಣಾಗುವುದರಿಂದ ಕೋಟಿ ಕೋಟಿ ಸುಂದರಿಯರ ಕೈಯಿಂದ ಸೇವೆ ಕೈಗೊಳ್ಳುತ್ತ ಶಿವಪಾರ್ವತಿಯರು ಅಲ್ಲಿ ವಿಹರಿಸುತ್ತಾರೆ. ಶೇಷಾಂತರ್ಗತ ಸಂಕರ್ಷಣಮೂರ್ತಿಯ ಉಪಾಸನೆ ಮಾಡುತ್ತಾರೆ ಅವರೂ ಹರಿಯನ್ನು ಭದ್ರಮಂಟಪದಲ್ಲಿ ಕುಳ್ಳಿರಿಸಿ ಸ್ವಾದು ಅನ್ನ ಉಣಿಸಬಲ್ಲರು.

ಮನೋಭಿಮಾನಿಯಾದ ಶಿವನು ಅನ್ನಾಭಿಮಾನಿಯೂ ಹೌದು. 'ಅನ್ನಮಯಂ ಹಿ ಸೋಮ್ಯ ಮನಃ' ಎಂದು ಛಾಂದೋಗ್ಯೋಪನಿಷತ್ತೂ 'ಅನ್ನಾಭಿಮಾನೀ ರುದ್ರಶ್ಚ' ಎಂದು ಬ್ರಹ್ಮಾಂಡಪುರಾಣವೂ ಇದನ್ನೇ ಹೇಳುತ್ತಿದೆ. ಲೋಕ ಉಣ್ಣುವ ಎಲ್ಲ ಅನ್ನಕ್ಕೂ ಶಿವ ಅಭಿಮಾನಿ. ಎಲ್ಲ ಅನ್ನವನ್ನೂ ಆತ ಜೀವರ ಅಂತರ್ಯಾಮಿಯಾದ ಹರಿಗೆ ಉಣಿಸುತ್ತಾನೆ. ಪ್ರಸಾದವನ್ನು ತಾನು ಉಣ್ಣುತ್ತಾನೆ ಉಣ್ಣುವುದಕ್ಕೆಂದೆ ಭಿಕ್ಷೆ ಬೇಡುತ್ತಾನೆ. ಎಲ್ಲ ಯಜ್ಞಗಳಲ್ಲಿಯೂ ಸರ್ವ ಯಜ್ಞಭೋಕ್ತನಾದ ಹರಿಗೆ ಆಹುತಿ ಕೊಟ್ಟಬಳಿಕ ಉಳಿದುದನ್ನು ಶಿವನಿಗೆ ಆಹುತಿ ನೀಡುವುದು ಯಾಜ್ಞಿಕ ಸಂಪ್ರದಾಯ. ಈ ಉಚ್ಛಿಷ್ಟಾಹುತಿಯಾದ ಬಳಿಕ ಕೈತೊಳೆದುಕೊಳ್ಳುತ್ತಾರೆ ಯಾಜ್ಞಿಕರು. ಹರಿಭಕ್ತಿ ಲತೆಯಲ್ಲಿ ವಾದಿರಾಜರು ಹೇಳುತ್ತಾರೆ–

ಯಜ್ಞವಾಸ್ತುಗತಂ ಸರ್ವಮುಚ್ಛಿಷ್ಟಮೃಷಯಃ ಕ್ವಚಿತ್ ।
ಚಕ್ರುರ್ಹಿ ಭಾಗಂ ರುದ್ರಾಯ ಸ ದೇವಃ ಸರ್ವಮರ್ಹತಿ ॥

ಇತಿ ಭಾಗವತೇ ಯಸ್ಮಾತ್ ಮನುರಾಹ ಸುತಂ ಪ್ರತಿ ।
ತಸ್ಮಾದ್ ಯಜ್ಞಭುಜೋ ವಿಷ್ಣೋರತ್ತ್ಯುಚ್ಛಿಷ್ಟಂ ಹರಃ ಕಿಲ ॥

ಅದ್ಯಾಪಿ ರುದ್ರಾಯೋಚ್ಛಿಷ್ಟಾಹುತಿದಾಃ ಶ್ರುತಿಕೋವಿದಾಃ ।
ಹಸ್ತಂ ಪ್ರಕ್ಷಾಲಯಂತ್ಯೇತದುಚ್ಛಿಷ್ಟಂ ನೇತಿ ಕೋ ವದೇತ್ ?

ಉಮೆ ಅನ್ನಪೂರ್ಣೆ ಎಂದು ಪ್ರಸಿದ್ಧಳಾಗಿದ್ದಾಳೆ. ಶ್ರೀರಾಮನೊಮ್ಮೆ ಸಪರಿವಾರನಾಗಿ ವನವಿಹಾರಕ್ಕಾಗಿ ದಂಡಕಾರಣ್ಯಕ್ಕೆ ಬಂದಾಗ ಅಗಸ್ತ್ಯಮುನಿ ಅವನನ್ನು ಸತ್ಕರಿಸಿದ ಮಾತ್ರವಲ್ಲ, ಅನ್ನಪೂರ್ಣೆ ಅನುಗ್ರಹಿಸಿದ್ದ ಅಕ್ಷಯಪಾತ್ರೆಯ ಬಲದಿಂದ ರಾಮನನ್ನೂ ಅವನೆಲ್ಲ ಪರಿವಾರವನ್ನೂ ಪೂರ್ಣತೃಪ್ತಿಪಡಿಸಿದನೆಂದು ಆನಂದ ರಾಮಾಯಣದಲ್ಲಿ ಹೇಳಿದೆ. ಹೀಗೆ ಶಿವ ತಾನು ಅನ್ನಾಭಿಮಾನಿ, ಮಡದಿ ಅನ್ನಪೂರ್ಣೆ. ಆದರೂ ಭಿಕ್ಷೆ ಬೇಡುವುದೊಂದು ವಿಪರ್ಯಾಸವೆನಿಸಬಹುದು.

ಆದರೆ ಪರಮಹಂಸ ಸಂನ್ಯಾಸಿಯಂತೆ ಅವಧೂತನಂತೆ ನಡೆದು ವೈರಾಗ್ಯಾಧಿಪತಿ ತಾನೆನ್ನುವುದನ್ನು ಲೋಕಕ್ಕೆ ತೋರುತ್ತಾನೆ ಶಿವ. ಈ ವೈರಾಗ್ಯ ಹರಿ ಪ್ರೀತಿಗಾಗಿ.

ಯಮುದ್ದಿಶ್ಯ ಜಗನ್ನಾಥಂ ಮಹೇಶೋಽಪಿ ದಿಗಂಬರಃ
ಜಟೀ ಭಸ್ಮಾನುಲಿಪ್ತಾಂಗಸ್ತಪಸ್ವೀ ವೀಕ್ಷ್ಯತೇ ಜನೈಃ ॥

ಎಂದು ಪದ್ಮಪುರಾಣದಲ್ಲಿ ಪಾರ್ವತಿ ಶಿವನ ಮುಂದೆ ಹೇಳುವುದನ್ನು ಉಪನ್ಯಾಸ ರತ್ನಮಾಲೆಯಲ್ಲಿ ವಾದಿರಾಜರು ಪ್ರಸ್ತಾಪಿಸಿದ್ದಾರೆ. 'ಸದಾ ಸಮಸ್ತಾಶ್ರಮಭಾಕ್ ಸುರೇಶ್ವರಃ' ಎಂಬಂತೆ ದೇವತೆಗಳು ನಾಲ್ಕೂ ಆಶ್ರಮ ಧರ್ಮಗಳನ್ನು ಬೇರೆ ಬೇರೆ ರೂಪಗಳಲ್ಲಿ ಏಕಕಾಲದಲ್ಲಿ ನಡೆಸುತ್ತಾರೆ. ಶಿವನೂ ಇದಕ್ಕೆ ಹೊರತಲ್ಲ.

ಅನ್ನಾಭಿಮಾನಿ ಮತ್ತು ಅನ್ನಪೂರ್ಣೆಯರು ಜೊತೆಗೂಡಿ ಅನ್ನಮಯ ಅನಿರುದ್ಧನಿಗೆ ಅನ್ನ ಉಣಿಸುವುದರಿಂದ ಲೋಕಕ್ಕೆಲ್ಲ ತೃಪ್ತಿ. ಜಗದ್ವೃಕ್ಷಕ್ಕೆ ಮೂಲವೆನಿಸಿದ ಹರಿಗೆ ತೃಪ್ತಿಯಾಯಿತೆಂದರೆ ಶಾಖೆ ಎನಿಸಿದ ಲೋಕಕ್ಕೆ ತೃಪ್ತಿಯಾಗುವುದು ಸಹಜ ಭಾಗವತ ಹೇಳುತ್ತದೆ –

ಯಥಾ ತರೋರ್ಮೂಲ ನಿಷೇವಣೇನ
ತೃಪ್ಯಂತಿ ತತ್ ಸ್ಕಂಧಭುಜೋಪಶಾಖಾಃ ।

ಹರಿಗೆ ಯಥೇಚ್ಛ ಅನ್ನ ಉಣಿಸಿಯೇ ರುದ್ರನು ರುದ್ರಪದವಿಯನ್ನು ಸಂಪಾದಿಸಿ ಕೊಂಡನೆಂದು ಋಗ್ವೇದವು ಸ್ಪಷ್ಟವಾಗಿ ಹೇಳುತ್ತಿದೆ–

ಅಸ್ಯ ದೇವಸ್ಯ ಮೀಳ್ಹುಷೋ ವಯಾ
ವಿಷ್ಣೋರೇಷಸ್ಯ ಪ್ರಭೃಥೇ ಹವಿರ್ಭಿಃ
ವಿದೇ ಹಿ ರುದ್ರೋ ರುದ್ರಿಯಂ ಮಹಿತ್ವಂ ॥

ಶಿವನು ವಾಮದೇವನೆನಿಸಿದುದು ಅವನು ಸುಂದರನಾದ್ದರಿಂದಲೇ ಅಲ್ಲ. ತನ್ನ ಎಡ ಪಾರ್ಶ್ವದಲ್ಲಿ ಹರಿಯನ್ನು ಕುಳ್ಳಿರಿಸಿ ಅನ್ನಪಾನಾದಿಗಳನ್ನು ನೀಡಿ ಪೂಜಿಸುವುದುರಿಂದ. ವಾಮ ಅಂದರೆ ತನ್ನ ಎಡದಲ್ಲಿ, ದೇವ ಅಂದರೆ ವಾಸುದೇವನಾದ ಹರಿಯನ್ನಿರಿಸಿಕೊಂಡವನೆ ವಾಮದೇವನೆಂದು ಗರುಡಪುರಾಣ ಹೇಳುತ್ತಿದೆ –

ಸ್ವವಾಮ ಭಾಗೇ ಸಂಸ್ಥಿತೋ ವಾಸುದೇವಃ
ಸ್ವಯೋಗ್ಯ ಭಕ್ತ್ಯಾ ಪೂಜ್ಯತೇ ಸರ್ವದೈವ ।

ಅತೋ ರುದ್ರೋ ವಾಮದೇವೇತಿ ಸಂಜ್ಞಾಂ
ಅವಾಪೇತ್ಯುದೀರ್ಯತಂ ನ ತು ಸುಂದರತ್ವಾತ್ ॥

ಅರ್ಚಕನು ದೇವರಿಗೆ ಬಲಭಾಗದಲ್ಲಿ ಕುಳಿತುಕೊಳ್ಳಬೇಕೆಂದು ನಿಯಮವಿರುವುದರಿಂದ ದೇವರು ಅರ್ಚಕನಿಗೆ ಎಡಭಾಗದಲ್ಲಿಯೇ ಇರಬೇಕಾಗುತ್ತದೆ.

ಶಿವಾವತಾರನಾದ ಶುಕಮುನಿ ಶ್ರೀನಿವಾಸನಿಗೆ ಅನ್ನ ಉಣಿಸಿ ಲೋಕಕ್ಕೆಲ್ಲ ತೃಪ್ತಿಯ ತೇಗು ಬರುವಂತೆ ಮಾಡಿದುದು ಭವಿಷ್ಯೋತ್ತರ ಪುರಾಣದಲ್ಲಿ ವರ್ಣಿತವಾಗಿದೆ.

ಮುದ್ದು ನರಸಿಂಹನಿಗೆ ಅನ್ನ ಉಣಿಸುವುದೆಂದರೆ ಪರಿಹಾಸವೆನಿಸೀತು. ಉಗ್ರ ನರಸಿಂಹ ಮುದ್ದಾಗಿ ಕಾಣುವನೇ ಯಾರಿಗೆ ? ಸಾಕ್ಷಾತ್ ಮಹಾಲಕ್ಷ್ಮಿಯೂ ಅವನ ಬಳಿಗೆ ಹೋಗಲು ಹಿಂಜರಿದು ಶಿಶು ಪ್ರಹ್ಲಾದನನ್ನೇ ಮುಂದೆ ಕಳಿಸಿದಳಂತೆ ಅನ್ನ ಉಣಿಸುವ ಶಿವ ಪಾರ್ವತಿಯರಿಗಾಗಲಿ ಹಸೆಗೆ ಕರೆವ ದೇವತಾಸ್ತ್ರೀಯರಿಗಾಗಲಿ ನರಸಿಂಹ ಮುದ್ದಾಗಿ ಕಂಡುಬಂದುದು ಹೇಗೆ ? ಇದಕ್ಕೆ ಸಮಾಧಾನ ಸುಲಭ ನರಸಿಂಹ ಅಸುರರಿಗೆ ಉಗ್ರನಾದರೂ ಸುರರಿಗೆ ಮುದ್ದು ಅಸುರ ಸಂಹಾರ ಕಾಲದಲ್ಲಿ ಉಗ್ರನಾದರೂ ಸುರರ ಕೈಯಿಂದ ಅನ್ನ ಉಣ್ಣುವಾಗ ಮುದ್ದು ಅಪರಾಧಿಗಳಿಗೆ ಉಗ್ರನಾದರೂ ನಿರಪರಾಧಿಗಳಿಗೆ ಮುದ್ದು. ನಿರಪರಾಧಿಗಳೂ ಅಂಜುವಂಥ ಕೋಪ ಬಂದರೆ ಅದು ಅಜ್ಞಾನ ಮೂಲಕ ರಜಸ್ತಮೋ ದೋಷ ಜನ್ಯ, ಚಿತ್ತಕ್ಷೋಭದಿಂದ ಪರವಶತೆ ಉಂಟುಮಾಡುವಂಥಹುದು. ಅಜ್ಞರಿಗೆ ಆತ್ಮಬಲವಿಲ್ಲದವರಿಗೆ ಇಂಥ ಕೋಪ ಬರಬಹುದು. ಸ್ವತಂತ್ರನಾದ ಸರ್ವಶಕ್ತನಾದ ಹರಿಯಲ್ಲಿ ಇದಕ್ಕೆ ಅವಕಾಶವಿಲ್ಲ. ಅವನು ಸ್ವೇಚ್ಛೆಯಿಂದ ತಾನಾಗಿ ಕೋಪ ಮಾಡುತ್ತಾನೆ ಹೊರತು ಅವನಿಗೆ ಕೋಪ ತಾನಾಗಿ ಬರುವುದಿಲ್ಲ.

ಶಿವನಿಗೆ ಆರಾಧ್ಯಮೂರ್ತಿ ನರಸಿಂಹ. ವೇದಮಂತ್ರ ಒಂದು ಹಾಗೆ ಹೇಳುತ್ತದೆ –

ಸ್ತುಹಿ ಶ್ರುತಂ ಗರ್ತಸದಂ ಯುವಾನಂ
ಮೃಗಂ ನ ಭೀಮಮುಪಹತ್ನುಮುಗ್ರಂ ।
ಮೃಡಾ ಜರಿತ್ರೇ ರುದ್ರ ಸ್ತವಾನೋ
ಅನ್ಯಂ ತೇ ಅಸ್ಮನ್ನಿವಪಂತು ಸೇನಾಃ ॥

'ಹೇ ರುದ್ರ, ನಿನ್ನ ಹೃದಯದಲ್ಲಿ ಹದಿನಾರು ವರ್ಷವಯಸ್ಸಿನ ತಾರುಣ್ಯದಿಂದ ಕೂಡಿ, ಸಿಂಹಾಕಾರದಲ್ಲಿದ್ದು ಸಿಂಹದಂತೆಯೇ ಶತ್ರುಗಳನ್ನು ಆಕ್ರಮಿಸಿ ಸಂಹರಿಸುವ

ವೇದ ವೇದ್ಯನಾದ ನರಸಿಂಹನಿದ್ದಾನೆ. ಅವನನ್ನು ನೀನು ಸ್ತುತಿಸುವಿ. ನಾವು ನಿನ್ನನ್ನು ಕೊಂಡಾಡುತ್ತೇವೆ. ನಮಗೆ ಸುಖ ನೀಡು. ನಿನ್ನ ಅನುಚರರಾದ ಭೂತ ಪ್ರೇತಾದಿಗಳು ನಿನ್ನ ಹಾಗೂ ನಿನ್ನ ಆರಾಧ್ಯದೈವದ ಸೇವಕರಾದ ನಮ್ಮನ್ನು ಹಿಂಸಿಸದೆ ಬೇರೆಯವರನ್ನೇ ಹಿಂಸಿಸಲಿ'. ಹೀಗೆ ಶಿವನ ಆರಾಧ್ಯ ದೈವವಾದ ನರಸಿಂಹ ಅವನಿಗೆ ಒಲಿದರೂ ಚೆನ್ನ, ಮುನಿದರೂ ಚೆನ್ನ ಸದಾ ಮುದ್ದಾಗಿಯೆ ಕಾಣುತ್ತಾನೆ. ಅವನನ್ನು ಮುದ್ದು ಮಾಡುತ್ತಾನೆ.

ಶರಭಾವತಾರದಲ್ಲಿ ಹರನು ನರಸಿಂಹನನ್ನು ಅಣಗಿಸಿದನೆಂದು ಸ್ಕಾಂದ ಶಿವ ಪುರಾಣಗಳು ಹೇಳುತ್ತಿದ್ದರೂ ನರಸಿಂಹನೇ ಶರಭನನ್ನು ಅಣಗಿಸಿದನೆಂದು ಪದ್ಮವಾಮನ ಕೂರ್ಮ ಅಗ್ನಿ ಪುರಾಣಗಳು ಹೇಳುತ್ತಿವೆ. ಹರಿಗೆ 'ಹರಿ' ಎಂಬ ಹೆಸರು ಬಂದಿರುವುದೇ ಬ್ರಹ್ಮ ಇಂದ್ರ, ರುದ್ರ, ಯಮ, ವರುಣ ಮುಂತಾದ ಎಲ್ಲ ದೇವತೆಗಳನ್ನೂ ಲಯಕಾಲದಲ್ಲಿ ಸಂಹರಿಸುವುದರಿಂದ–

ಬ್ರಹ್ಮಾಣಮಿಂದ್ರಂ ರುದ್ರಂ ಚ ಯಮಂ ವರುಣಮೇವ ಚ ।
ನಿಹತ್ಯ ಹರತೇ ಯಸ್ಮಾತ್ ತಸ್ಮಾದ್ ಹರಿರಿಹೋಚ್ಯತೇ ॥

ಶಿವ, ಅಗ್ನಿ, ಲಿಂಗ, ಸ್ಕಂದ, ಕೂರ್ಮ, ಮತ್ಸ್ಯ ಈ ಆರು ಪುರಾಣಗಳು ತಾಮಸವಾದುದರಿಂದ ಅವು ಹೇಳಿದುದನ್ನೆಲ್ಲ ನಂಬುವುದೂ ಸರಿಯಲ್ಲ. ಆದ್ದರಿಂದ ರುದ್ರನಿಗೆ ರುದ್ರಪದವಿ ನೀಡಿದ, ಅವನ ಆರಾಧ್ಯ ದೈವವಾದ ನರಸಿಂಹ ಅವನಿಗೆ ಮುದ್ದಾಗಿ ಕಂಡು ಬರುವುದು ಅಸಂಭವವಲ್ಲ.

'ತವ ಪ್ರಿಯತಮಾದತಿ ಪ್ರಿಯತಮಂ ಸದೈವಾಂತರಂ'

ಎಂದು ಪಂಡಿತಾಚಾರ್ಯರು ಹೇಳುವಂತೆ ಶಿವನಿಗೆ ಪ್ರಿಯತಮವಾದ ಎಲ್ಲಕ್ಕಿಂತ ಪ್ರಿಯತಮ ಅವನೊಳಗಿರುವ ಹರಿ. ಆದ್ದರಿಂದ ಮುದ್ದು ಅಂದರೆ ಅತ್ಯಂತ ಪ್ರಿಯ ನರಸಿಂಹ.

ನರಸಿಂಹನಿಗೆ ಅನ್ನ ಉಣಿಸಲು ಇನ್ನೊಂದು ಕಾರಣ ಭವಿಷ್ಯೋತ್ತರ ವೆಂಕಟೇಶ ಮಹಾತ್ಮ್ಯೆಯಲ್ಲಿ ಉಕ್ತವಾಗಿದೆ. ಅಲ್ಲಿ ಶ್ರೀನಿವಾಸನ ಆಜ್ಞೆಯಂತೆ ಬ್ರಹ್ಮನು ಅಹೋಬಲ ನರಸಿಂಹನಿಗೆ ಅನ್ನ ನಿವೇದನಮಾಡಿದ. ಬಳಿಕ 'ಏಕೋ ವಿಷ್ಣುರ್ಮಹಾ ಭೂತಂ' ಎಂಬ ಮಂತ್ರದಿಂದ ಅನ್ನದಾನವನ್ನೂ ನೃಸಿಂಹಾರ್ಪಣ ಮಾಡಲಾಯಿತು. ನಾವೂ ನಿತ್ಯ ರಮಾಬ್ರಹ್ಮಾದಿಗಳಿಗೆ 'ಶ್ರೀನೃಸಿಂಹ ಪ್ರಸಾದ'ವನ್ನೇ ನೀಡುವುದು ಸಂಪ್ರದಾಯ.

ಶಿವನು ವಾಯ್ವಂತರ್ಗತ ನರಸಿಂಹನಿಗೇ ಅನ್ನ ಉಣಿಸುವುದರಿಂದ 'ನರಸಿಂಹ' ನೆಂದರೆ ನರರಲ್ಲೆಲ್ಲ, ಅಂದರೆ ಚೇತನರಲ್ಲೆಲ್ಲ ಸಿಂಹ ಅಂದರೆ ಶ್ರೇಷ್ಠನಾದ

ಹರಿ ಹೇಗೋ ಹಾಗೆ ನರರಲ್ಲೆಲ್ಲ, ಅಂದರೆ ಜೀವರಲ್ಲೆಲ್ಲ ಶ್ರೇಷ್ಠನಾದ ವಾಯುವೂ ನರಸಿಂಹನೆನಿಸುತ್ತಾನೆ. ಒಂದೇ ಶಬ್ದದಿಂದ ಇಬ್ಬರನ್ನೂ ಹೇಳಿದುದು ವಾಯ್ವಂತರ್ಗತ ನರಸಿಂಹನೆಂದು ಸೂಚಿಸುವುದಕ್ಕಾಗಿ. ದೇವತೆಗಳೆಲ್ಲ ವಾಯ್ವಂತರ್ಗತ ಹರಿಯ ಉಪಾಸಕರು.

ವಾಯುಸ್ಥಮಾಶ್ರಿತಾ ದೇವಾಃ ಪವಮಾನಾಭಿಧಂ ಹರಿಂ ।

ಎಂದು ಐತರೇಯಭಾಷ್ಯ ವಚನವಿದೆ. ಹೃಷೀಕೇಶದಲ್ಲಿ ಸಂಚಾರ ಮಾಡುತ್ತಿದ್ದ ಶ್ರೀಮಧ್ವಾಚಾರ್ಯರಿಗೆ ಶಿವನು ಬ್ರಾಹ್ಮಣ ವೇಷದಿಂದ ಬಂದು ಅನ್ನದಾನ ಮಾಡಿದುದು ಸುಮಧ್ವ ವಿಜಯದಲ್ಲಿ ವರ್ಣಿತವಾಗಿರುವುದರಿಂದ ಇದನ್ನು ಸೂಚಿಸುವುದಕ್ಕಾಗಿಯೂ ನರಸಿಂಹ ಶಬ್ದ ಪ್ರಯೋಗ ಮಾಡಲಾಗಿದೆ

ಸ್ವಾದು ಅನ್ನವೆಂದರೆ ರುಚಿಕರವಾದ ಭಕ್ಷ್ಯಚೋಷ್ಯ ಲೇಹ್ಯ ಪೇಯಗಳೆಂಬ ನಾಲ್ಕು ಬಗೆಯ ಅನ್ನ. 'ಸ್ವಾದು ಅನ್ನ' ವಾಯುದೇವನಿಂದ ಆಸ್ವಾದಿಸಲ್ಪಟ್ಟ ಅನ್ನವೆಂದೂ ಗ್ರಹಿಸಬೇಕು ಎಲ್ಲ ಜೀವಿಗಳೂ ಬಾಯಿಯ ಗಾಳಿಯಿಂದಲೇ ಅನ್ನವನ್ನು ಬಾಯೊಳಗೆ ಸೆಳೆದುಕೊಂಡು ಉಣ್ಣುತ್ತವೆ. ಪಾಯಸ ಸೀಕರಣೆ ಮುಂತಾದ ಅನ್ನ ಸೊರೆದು ಉಣ್ಣುವಾಗ ಶಬ್ದವಾಗುವುದು ಈ ಗಾಳಿಯಿಂದಾಗಿ ಹೀಗೆ ಎಲ್ಲರೂ ಉಣ್ಣುವುದು ವಾಯುದೇವನಿಂದ ಆಸ್ವಾದಿಸಲ್ಪಟ್ಟ ಅನ್ನವನ್ನೇ. ವೇದಮಂತ್ರ ಹೀಗೆ ಹೇಳುತ್ತದೆ –

ಸರ್ವಂ ಸಪೂತಮಶ್ನಾತಿ ಸ್ವದಿತಂ ಮಾತರಿಶ್ವನಾ ।

ಶಿವನೂ ವಾಯು ಸ್ವೀಕರಿಸಿದ ವಿಷ್ಣುನೈವೇದ್ಯವನ್ನೇ ಪ್ರಸಾದವೆಂದು ಸ್ವೀಕರಿಸುವನೆಂಬ ಅಭಿಪ್ರಾಯದಿಂದ 'ಸ್ವಾದನ್ನಗಳನು' ಎನ್ನಲಾಗಿದೆ.

– ೮೬ –

**ಗರುಡನ ಮೇಲೇರಿ ಗಗನ ಮಾರ್ಗದಲ್ಲಿ**
**ತರತರದಿ ಸ್ತುತಿಪ ಸುರಸ್ತ್ರೀಯರ ।**
**ಮೆರೆವ ಗಂಧರ್ವರ ಗಾನವ ಸವಿಯುವ**
**ನರಹರಿ ನಮ್ಮ ಹಸೆಗೆ ಬಾ ॥**

ಗರುಡವಾಹನನಾಗಿ ಅಂತರಿಕ್ಷದಲ್ಲಿ ವಿಹಾರ ಮಾಡುತ್ತ ಅಲ್ಲಿ ನಾನಾ ಬಗೆಯಿಂದ ಸ್ತುತಿಸುವ ದೇವತಾಸ್ತ್ರೀಯರ ಮತ್ತು ಮೆರೆಯುವ ಗಂಧರ್ವರ ಗಾನವನ್ನು ಸವಿಯುವ ನರಹರಿಯೆ, ನೀನು ನಮ್ಮ ಹಸೆಗೆ ಬಾ.

ಹಿಂದಿನ ನುಡಿಯಲ್ಲಿ ನರಹರಿಗೆ ರುದ್ರನ ಮನೆಯಲ್ಲಿ ಸಿಗುವ ಆದರೋಪಚಾರದ ಬಗ್ಗೆ ಹೇಳಿದೆ. ರುದ್ರನೇ ಮುಂದಿನ ಬ್ರಹ್ಮಕಲ್ಪದಲ್ಲಿ ಶೇಷನಾಗುತ್ತಾನೆ. ಆದಿತ್ಯ ಪುರಾಣದ ವೆಂಕಟೇಶಮಹಾತ್ಮೆಯಲ್ಲಿ ಹೇಳಿದೆ–

ಶೇಷಸ್ಯ ಕಿಮಹೋ ಭಾಗ್ಯಂ ಶೇಷಾಗೇಶಪ್ರಸಾದಜಂ ।
ಬಹುನೇತ್ರಾಣಿ ತ್ವತ್ಪಾದಸೌಂದರ್ಯಾಮೃತಸೇವನಂ ।
ಏತದ್ ದ್ವಯಂ ದುರ್ಲಭಂ ಮೇ ತ್ರಿನೇತ್ರತ್ವಾದಹೋ ಬತ ।
ಭಾವಿಜನ್ಮನಿ ಶೇಷತ್ವ ಪ್ರಾಪ್ತ್ಯರ್ಥಂ ವಾ ಮಹತ್ ತಪಃ ।
ಕರೋಮೀತ್ಯತಿ ವೈರಾಗ್ಯಾತ್ ಶಂಭುಃ ಕೈಲಾಸಗೋಽಭವತ್ ॥

'ಶೇಷಾಚಲಾಧೀಶ್ವರನಾದ ವೆಂಕಟೇಶನ ಅನುಗ್ರಹದಿಂದ ಶೇಷನ ಪಾಲಿಗೆ ಅದೆಂಥ ಭಾಗ್ಯ ಬಂದಿದೆ! ಸಾವಿರಾರು ಕಣ್ಣುಗಳು! ಶ್ರೀನಿವಾಸನ ಪಾದಸೌಂದರ್ಯ ರಸಾಮೃತ ಸೇವನೆ! ಮೂರೇ ಕಣ್ಣಿರುವ ನನಗೆ ಇವೆರಡೂ ದುರ್ಲಭವಾಗಿವೆ. ಮುಂದಿನ ಜನ್ಮದಲ್ಲಾದರೂ ನಾನು ಶೇಷನಾಗಿ ಜನಿಸುವೆ. ಅದಕ್ಕಾಗಿ ಮಹಾತಪಸ್ಸು ಮಾಡುವೆ' ಎಂದು ಆಲೋಚಿಸಿ ಶಿವನು ತಪಸ್ಸಿಗಾಗಿ ಕೈಲಾಸ ಸೇರಿಕೊಂಡ.

ಹೀಗೆ ಹಿಂದಿನ ರುದ್ರನೆ ಇಂದಿನ ಶೇಷನೆಂದ ಮೇಲೆ ರುದ್ರನ ಮನೆಯ ಬಗ್ಗೆ ಹೇಳಿದ ಬಳಿಕ ಶೇಷನ ಮನೆಯ ಬಗ್ಗೆ ಬೇರೆ ಹೇಳಬೇಕಾಗಿಲ್ಲ.

ಅಥವಾ ಶೇಷನು ತನ್ನ ಮನೆಯಾದ ಪಾತಾಳಲೋಕದ ಭೋಗವತೀ ನಗರಿಯ ಅರಮನೆಯಲ್ಲಿ ಮಣಿಮಯ ಮಂಟಪದ ನಡುವೆ ನರಹರಿಯನ್ನು ಕುಳ್ಳಿರಿಸಿ ತನ್ನ ರಾಣಿಯಾದ ವಾರುಣಿಯ ಕೈಯಿಂದ ಅಮೃತಾನ್ನದ ಊಟ ಉಣಿಸುತ್ತಾನೆ ಎಂದಿಟ್ಟುಕೊಳ್ಳಬೇಕು. ಒಂದು ರೂಪದಿಂದ ಶೇಷ ಪಾತಾಳದ ಅರಮನೆಯಲ್ಲಿದ್ದರೂ ಇನ್ನೊಂದು ರೂಪದಿಂದ ಬ್ರಹ್ಮಾಂಡ ಹೊರುತ್ತಾನೆ. ಬೇರೆ ರೂಪಗಳಿಂದ ಹರಿ ಇರುವಲ್ಲೆಲ್ಲ ಅವನಿಗೆ ಹಾಸಿಗೆಯೋ ಸಿಂಹಾಸನವೋ ಆಗಿ ಸೇವೆ ಮಾಡುತ್ತಾನೆ.

ಈ ಶೇಷನಿಗೆ ಎಲ್ಲ ಬಗೆಯಿಂದಲೂ ಸಮಾನವಾದ ಜ್ಞಾನ, ಬಲ, ಐಶ್ವರ್ಯ, ಸೌಂದರ್ಯ ಮುಂತಾದ ಗುಣಗಳಿಂದ ಯುಕ್ತನಾಗಿ ಶೇಷನಷ್ಟೇ ಹರಿಗೆ ಪ್ರಿಯನೆನಿಸಿರುವ ಗರುಡನ ಬಗ್ಗೆ ಈಗ ಈ ನುಡಿಯಲ್ಲಿ ಹೇಳಬೇಕಾಗಿದೆ. ಗರುಡನಿಗೆ ಶೇಷನಂತೆ ಒಂದು ಲೋಕವೆಂಬುದಿಲ್ಲ. ಕಾಲಿಂದ ಮೊಳಕಾಲವರೆಗೆ ಚಿನ್ನದ ಬಣ್ಣ, ನಾಭಿಯವರೆಗೆ ಬಿಳಿಬಣ್ಣ, ಕುತ್ತಿಗೆವರೆಗೆ ಕೆಂಪುಬಣ್ಣ, ತಲೆವರೆಗೆ ಹಸಿರುಬಣ್ಣ, ತಲೆಮೇಲೆ ಕಪ್ಪು ಬಣ್ಣ ಹೀಗೆ ಪಂಚವರ್ಣಗಳಿಂದ ಶೋಭಿಸುವ, ಹೊಂಬಣ್ಣದ ರೆಕ್ಕೆಯಿಂದ ಕೂಡಿದ ಸುಂದರ ಪಕ್ಷಿಯಾಗಿ, ಪಕ್ಷಿಗಳ ರಾಜನಾಗಿ

ಆಕಾಶದಲ್ಲೆಲ್ಲ ರೀವಿಯಿಂದ ಸಂಚರಿಸಿ ಮೆರೆಯುತ್ತಾನೆ. ಹರಿಯು ನೆನೆದಾಗೆಲ್ಲ ಅವನನ್ನು ಹೊತ್ತು ತಿರುಗುತ್ತಾನೆ. ಅವನ ಮನೆ ಕಾಯುತ್ತಾನೆ. ಅವನ ಶತ್ರುಗಳ ಮೇಲೆರಗುತ್ತಾನೆ.

ಗರುಡನು ಹರಿಗೆ ವಾಹನ ಎನಿಸಿದುದರಲ್ಲಿ ತುಂಬ ಔಚಿತ್ಯವಿದೆ. ಹರಿ ಅಖಿಲ ವೇದ ಪ್ರತಿಪಾದ್ಯ. ವೇದೈಕವೇದ್ಯ ಗರುಡ ವೇದವೇದ್ಯನೂ ಹೌದು, ವೇದಾಭಿಮಾನಿಯೂ ಹೌದು, ವೇದಋಷಿಯೂ ಹೌದು. ಆ ಹರಿಯನ್ನು ಈ ಗರುಡನಲ್ಲದೆ ಇನ್ನಾರು ಹೊರಬಲ್ಲರು ? ಗರುಡವಾಹನ ಹರಿಯೆ ವೇದಮಂತ್ರಗಳ ಮೇಲೇರಿ ಶ್ರವಣೇಂದ್ರಿಯದ ಮಾರ್ಗವಾಗಿ ಶ್ರೋತೃಗಳ ಹೃದಯದಲ್ಲಿ ಬಂದು ನೆಲೆಸುತ್ತಾನೆ. ಭಾಗವತದಲ್ಲಿ ಹೇಳಿದೆ–

ಛಂದೋಮಯೇನ ಗರುಡೇನ ಸಮುಹ್ಯಮಾನಃ ।

ಗರುಡ ವೇದಗಳಿಗೆ ಅಭಿಮಾನಿ ಮಾತ್ರವೆ ಅಲ್ಲ, ಅವನು ಆಕಾಶದಲ್ಲಿ ಹಾರಾಡಿದರೂ ಸಾಕು, ರೆಕ್ಕೆಗಳಿಂದ ಮಧುರವಾದ ಸಾಮಗಾನ ಧ್ವನಿ ಹೊರಡುತ್ತದೆ 'ವೇದಾನಾಂ ಸಾಮವೇದೋಽಸ್ಮಿ' ಎನ್ನುವ ಸಾಮಗಾನ ಲೋಲನಾದ ಹರಿ ಸಾಮಗಾನ ಮಾಡುವ ವಾಹವನ್ನೇರಿ ಆ ಗಾನವನ್ನಾಲಿಸುತ್ತ ಸಂಚರಿಸುತ್ತಾನೆ. ಭಾಗವತದಲ್ಲಿ ಇದನ್ನೂ ಹೇಳಿದೆ–

ಆಕರ್ಣಯನ್ ಪತ್ರರಥೇಂದ್ರ ಪಕ್ಷೈ–
ರುಚ್ಚಾರಿತಂ ಸ್ತೋಮಮುದೀರ್ಣಸಾಮ ॥

ಗರುಡಮಂತ್ರ ಧ್ಯಾನಶ್ಲೋಕವೂ ಒಂದು ಹೀಗೆ ಹೇಳುತ್ತದೆ–

ಪಕ್ಷೋಚ್ಚಾರಿತಸಾಮಗೀತಿಮಮಲಂ ಶ್ರೀಪಕ್ಷಿರಾಜಂ ಭಜೇ ॥

ಗರುಡ ಎಂಬ ಹೆಸರೇ ಹೇಳುತ್ತದೆ ಅವನ ರೆಕ್ಕೆ ಸಾಮಗಾನಧ್ವನಿ ಮಾಡುತ್ತದೆ ಎಂದು 'ಗೃಣಾತೀತಿ ಗರುತ್ । ಗರುದ್ಭ್ಯಾಂ ಡಯತ ಇತಿ ಗರುಡಃ ।' ಸಾಮಗಾನದಿಂದ ಹರಿಯನ್ನು ಸ್ತೋತ್ರ ಮಾಡುವ ರೆಕ್ಕೆಯೆ 'ಗರುತ್' ಅಂಥ ರೆಕ್ಕೆಯಿಂದ ಹಾರುವ ಹಕ್ಕಿಯೇ 'ಗರುಡ' ಈ ಗರುಡನ ಆಕಾರವಿರುವುದರಿಂದ ಬೇರೆ ಗರುಡ ಪಕ್ಷಿಗಳು ಗರುಡ ಎನಿಸಿವೆ. ಈ ಗರುಡನ ರಕ್ಕೆಯಂತೆ ಅವುಗಳ ರೆಕ್ಕೆ ಇರುವುದರಿಂದ ಅದೂ 'ಗರುತ್' ಎನಿಸಿದೆ.

ವಿಷವನ್ನು ನುಂಗಿ ಲೋಕದ ವಿಷಬಾಧೆಯನ್ನು ಪರಿಹರಿಸುವುದರಿಂದಲೂ 'ಗರುಡ' ನೆನಿಸಿದ್ದಾನೆ– 'ಗಿರತೀತಿ ಗರುಡಃ' ಸಮುದ್ರಮಥನ ಕಾಲದಲ್ಲಿ ಹಾಲಾಹಲ ವಿಷವನ್ನು ಕುಡಿದು ಒಮ್ಮೆ ಲೋಕವನ್ನು ಶಿವ ರಕ್ಷಿಸಿದರೆ ಎಲ್ಲ ಬಗೆಯ

ಸ್ಥಾವರ ಜಂಗಮ ವಿಷಗಳನ್ನೂ ಸದಾ ನುಂಗಿ ಭಕ್ತರನ್ನು ಕಾಪಾಡುವವ ಗರುಡ ಗರುಡಮಂತ್ರ ಧ್ಯಾನಶ್ಲೋಕ ಇದನ್ನೂ ಹೇಳಿದೆ–

ಸ್ಮರ್ತೃಣಾಂ ಶಮಯಂತಮುಗ್ರಮಖಿಲಂ
ನೃಣಾಂ ವಿಷಂ ತತ್‌ಕ್ಷಣಾತ್ ॥

ಕೈಗಳಲ್ಲಿ ಗರುಡಮುದ್ರೆ ಮಾಡಿ ತೋರಿದರೂ ವಿಷಪರಿಹಾರ –

ನಿರ್ವಿಷೀಕರಣಾರ್ಥಂ ತಾರ್ಕ್ಷ್ಯಮುದ್ರಾಂ ಪ್ರದರ್ಶಯಾಮಿ ।

ವಿಷಪರಿಹಾರಕ್ಕಾಗಿಯೇ ಗರುಡ ಹಾವುಗಳನ್ನು ತಿನ್ನುತ್ತಾನೆ. ಅವನ ಕೊಕ್ಕಿನಲ್ಲಿ ಹಾವುಗಳು ಸಿಲುಕಿ ವಿಲವಿಲನೆ ತೊಯ್ದಾಡುತ್ತವೆ–

'ಚಂಚ್ವಗ್ರ ಪ್ರಚಲದ್ಭುಜಂಗಂ'

ಗರುಡನಿಗೆ ಹಾವಿನ ಜಾತಿಯ ಮೇಲೆಯೇ ದ್ವೇಷವೇನಿಲ್ಲ. ಕೆಟ್ಟ ಹಾವುಗಳನ್ನು ಮಾತ್ರ ಆತ ಕೊಲ್ಲುತ್ತಾನೆ. ಒಳ್ಳೆಯ ಹಾವುಗಳನ್ನು ಪ್ರೀತಿಸುತ್ತಾನೆ. ತನ್ನ ಮೈ ಮೇಲೆ ಹೂವಿನ ಹಾರದಂತೆ ಹಾವುಗಳನ್ನು ಹಾಕಿಕೊಂಡು ಉರಗಭೂಷಣ ಶಿವನಂತೆಯೆ ಮೆರೆಯುತ್ತಾನೆ–

ತಪ್ತಸ್ವರ್ಣನಿಭಂ ಫಣೀಂದ್ರ ನಿಕರೈಃ ಕ್ಲೃಪ್ತಾಂಗಭೂಷಂ ಪ್ರಭುಂ ॥

ಹಸಿವಾದಾಗ ಗರುಡ ಹಾವುಗಳನ್ನು ತಿನ್ನುವನೆನ್ನುವುದೂ ಸರಿಯಲ್ಲ. ಹಾವುಗಳನ್ನು ತಿಂದೇ ಆತ ಬದುಕಬೇಕಾಗಿಲ್ಲ. ಅವನ ಕೈಯಲ್ಲಿ ಬಂಗಾರದ ಅಮೃತ ಕಲಶವಿದೆ. ಆ ಅಮೃತವನ್ನು ಆತ ತಾನು ಉಣ್ಣುವುದಿಲ್ಲ. ಅಮೃತ ಉಣದೆಯೂ ಅಜರಾಮರನಾಗುವಂತೆ ಹರಿಯ ವರ ಆತನಿಗಿದೆ. ಆದ್ದರಿಂದ ಅವನ ಕೈಯ ಅಮೃತಕಲಶ ಭಕ್ತರಿಗಾಗಿ ಇದೆ. ವಿಷ ಪರಿಹರಿಸಿ ಅಮೃತ ಉಣಿಸಿ ಅಭಯ ನೀಡುವ ಗರುಡನನ್ನು ಹೀಗೆ ಧ್ಯಾನಿಸಬೇಕು–

'ಸುಧಾಪೂರ್ಣಂ ಹಿರಣ್ಮಯಂ ದಧಾನಃ ಕುಂಭಮುಭಯಂ'
'ಸಕಲವಿಷ ವಿನಾಶಂ ಚಿಂತಯೇತ್ ಪಕ್ಷಿರಾಜಂ'

ಒಳ್ಳೆಯ ಹಾವುಗಳನ್ನು ಗರುಡ ಪ್ರೀತಿಸುವುದರಿಂದಲೇ ಶೇಷ ಗರುಡರು ಅನ್ಯೋನ್ಯವಾಗಿದ್ದು ಒಮ್ಮನಸ್ಸಿನಿಂದ ಹರಿಸೇವೆ ಮಾಡುತ್ತಾರೆ. ಶೇಷನಿಗೆ ಗರುಡನೆಂದರೆ ಬಹಳ ಇಷ್ಟ. ಗರುಡನಿಗಾಗದ ಕೆಟ್ಟ ಹಾವುಗಳೆಂದರೆ ಶೇಷನಿಗೂ ದ್ವೇಷವೆ. ಅವರ ಸಹವಾಸವನ್ನೇ ಬೇಡವೆನ್ನುವವನಾತ. ಸೋದರ ಹಾವುಗಳ

ದುರ್ಬುದ್ಧಿ ಕಂಡು ಸಹಿಸದೇ ಘೋರತಪಸ್ಸಿನಿಂದ ಬ್ರಹ್ಮನನ್ನು ಕಂಡು ಹೀಗೆ ಹೇಳಿದ–

ಸೋದರ್ಯಾ ಮಮ ಸರ್ವೇ ಹಿ ಭ್ರಾತರೋ ಮಂದ ಚೇತಸಃ ।
ಸಹ ತೈರ್ನೋತ್ಸಹೇ ವಸ್ತುಂ ತದ್ ಭವಾನನುಮನ್ಯತಾಂ ॥
ಅಸ್ಮಾಕಂ ಚಾಪರೋ ಭ್ರಾತಾ ವೈನತೇಯೋऽಂತರಿಕ್ಷಗಃ ।
ತಂ ಚ ದ್ವಿಷಂತಿ ಸತತಂ ॥

'ನನ್ನ ಸೋದರರ ಸಹವಾಸವೇ ನನಗೆ ಬೇಡವಾಗಿದೆ, ಬಿಟ್ಟು ಬಿಡುತ್ತೇನೆ. ಆದಕ್ಕೆ ಅನುಮತಿ ನೀಡು. ಅವರೆಲ್ಲ ಬುದ್ಧಿಯಿಲ್ಲದವರು, ಮಾತ್ರವಲ್ಲ, ನಮ್ಮ ಇನ್ನೊಬ್ಬ ತಮ್ಮನಾದ ಗರುಡನನ್ನು ಸದಾ ದ್ವೇಷಿಸುತ್ತಾರೆ!'

ಗರುಡನು ಪರಿಹರಿಸುವ ವಿಷವೆಂದರೆ ಕೇವಲ ವಿಷವಲ್ಲ, ಉಣಿಸುವ ಅಮೃತವೂ ಕೇವಲ ಅಮೃತವಲ್ಲ. ಎಲ್ಲ ಅಮಂಗಳಗಳನ್ನು ಪರಿಹರಿಸಿ ಮಂಗಳ ಉಂಟು ಮಾಡುತ್ತಾನೆ, ಸಾಮಗಾನದ ಬಲದಿಂದ. ಈ ಸಾಮಗಾನ ಸರ್ವ ಅಮಂಗಳ ಪರಿಹಾರಕವಾದ, ಮಂಗಳದಾಯಕವಾದ ಯಜ್ಞಗಳಲ್ಲಿ ಆವಶ್ಯಕ ಭಾಗವೇ ಆಗಿದೆ. ವೀಣಾವಾದನ ಯುಕ್ತವೂ ಆಗಿದೆ

ಗಾಯತೋ ಬ್ರಾಹ್ಮಣೌ ವೀಣಾಗಾಧಿನಾವಿತಿ ಚ ಶ್ರುತಿಃ ।
ಅಶ್ವಮೇಧ ಪ್ರಕರಣೇ ವೀಣೋಕ್ತಾ ಧರ್ಮಸಾಧನಂ ॥

ಅಶ್ವಮೇಧಯಾಗದಲ್ಲಿ ಸಾಮಗಾನವನ್ನು ವೀಣಾವಾದನದ ಜೊತೆಗೆ ಹಾಡಬೇಕೆನ್ನುತ್ತ ಶ್ರುತಿಯು ವೀಣಾವಾದನವನ್ನೂ ಧರ್ಮಸಾಧನವೆಂದಿದೆ.

ವೀಣಾಗಣಕಿನಃ ಪೂರ್ವೈಃ ಸಹಸುಕೃದ್ಭಿಃ
ರಾಜಭಿರಿಮಂ ಯಜಮಾನಂ ಸಂಗಾಯತ ॥ (ಆಪಸ್ತಂಬ ಶ್ರೌತ ಸೂತ್ರ)

ಆದ್ದರಿಂದಲೇ ಪ್ರಣವ–ವ್ಯಾಹೃತಿ–ಗಾಯತ್ರೀ ಮಂತ್ರ ಪುರಃಸರವಾಗಿಯೇ ವೀಣಾವಾದನ ಮಾಡುವುದು ಶಾಸ್ತ್ರೀಯ ಪದ್ಧತಿ. ಹೀಗೆ ಗಾಂಧರ್ವ ವೇದವೆನಿಸಿದ ಸಂಗೀತಕ್ಕೆ ಸಾಮವೇದ ಉಗಮಸ್ಥಾನ ಮತ್ತು ಚೈತನ್ಯದಾಯಕ. ಆದ್ದರಿಂದ ಹರಿ ಸಾಮಧ್ವನಿ ಮಾಡುವ ಗರುಡನ ಮೇಲೇರಿ ದೇವತಾಸ್ತ್ರೀಯರ ಹಾಗೂ ಗಂಧರ್ವರ ಗಾನವನ್ನು ಆಲಿಸುತ್ತಾನೆ. ಎರಡೂ ಪರಸ್ಪರ ಪೋಷಕವಾಗಿವೆ. ಅಥವಾ ಅವರು ಹಾಡುವ ಸಂಗೀತವೂ ಸಾಮಗಾನವೇ ಎನ್ನಲೂ ಅಡ್ಡಿಯಿಲ್ಲ. ಗಂಧರ್ವರು ಸಾಮಗಾನ ತಜ್ಞರೆಂದು ಹೆಸರುವಾಸಿಯಾದವರು. ಉದಾ:–

ತುಂಬುರು ನಾರದ ವಸಿಷ್ಠ ವಿಶ್ವಾವಸ್ವಾದಯಶ್ಚ ಗಂಧರ್ವಾಃ ।
ಸಾಮಸು ನಿಭೃತಂ ಕರಣಂ ಸ್ವರಸೌಕ್ಷ್ಮ್ಯಾತ್ ತೇಽಪಿ ಹಿ ನ ಕುರ್ಯುಃ ॥

'ತುಂಬುರು ನಾರದ ವಸಿಷ್ಠ ವಿಶ್ವಾವಸು ಮುಂತಾದ ಗಂಧರ್ವರೂ ಕೂಡ ಸಾಮಗಾನ ಲಕ್ಷಣವನ್ನು ಪೂರ್ಣಪ್ರಮಾಣದಲ್ಲಿ ವಿಸ್ತರಿಸಿ ಹೇಳಲಾರರು ಏಕೆಂದರೆ ಸಾಮ ಸ್ವರಗಳು ಬಹಳ ಸೂಕ್ಷ್ಮ' – ಈ ನಾರದ ಶಿಕ್ಷಾವಚನದಿಂದ ನಾರದ ವಸಿಷ್ಠರೆಂಬ ಹೆಸರಿನ ಗಂಧರ್ವರೂ ಬೇರೆ ಇರುವರೆನ್ನುವುದೂ, ಅವರು ಪ್ರಸಿದ್ಧ ಸಾಮಗರು ಎನ್ನುವುದೂ ತಿಳಿದುಬರುತ್ತದೆ. ಇಲ್ಲಿ ಹೇಳಿದ ಈ ಗಂಧರ್ವರೇ 'ಮೆರೆವ ಗಂಧರ್ವರು' ಅವರ ಗಾನವನ್ನಾಲಿಸುತ್ತ ನರಹರಿ ಅಂತರಿಕ್ಷದಲ್ಲಿ ವಿಹರಿಸುತ್ತಾನೆ. ಆದ್ದರಿಂದಲೇ ಸಾಮಗಾನವೂ ಅದಕ್ಕೆ ಪೋಷಕವಾದ ಇತರ ಗಾನವೂ ಮೋಕ್ಷಸಾಧನವೆನಿಸಿದೆ.

ವೀಣಾವಾದನ ತತ್ವಜ್ಞಃ ಶ್ರುತಿ ಜಾತಿ ವಿಶಾರದಃ ।
ತಾಲಜ್ಞಶ್ಚಾಪ್ರಯಾಸೇನ ಮೋಕ್ಷಮಾರ್ಗಂ ಸ ಗಚ್ಛತಿ ॥

'ವೀಣಾವಾದನ ತಜ್ಞನಾಗಿ ಶ್ರುತಿಜಾತಿಗಳಲ್ಲಿ ನಿಪುಣನಾಗಿ ತಾಳಗತಿಯನ್ನೂ ಅರಿತವನು ಅನಾಯಾಸವಾಗಿ ಮೋಕ್ಷ ಮಾರ್ಗವನ್ನು ಪಡೆಯುತ್ತಾನೆ' ಎಂದು ಯಾಜ್ಞವಲ್ಕ್ಯರ ವಚನ

'ನರಹರಿ' ಎಂದರೆ ಸಕಲ ಅಮಂಗಳ ಪರಿಹಾರಕ ಸಕಲ ಮಂಗಳದಾಯಕನಾದ ನರಸಿಂಹಮೂರ್ತಿ ಮಾತ್ರವಲ್ಲ, ಗರುಡಾಂತರ್ಗತ ಲಕ್ಷ್ಮೀನಾರಾಯಣನೂ ಹೌದು. 'ನರಹರಿ' ಪುರುಷಸಿಂಹ – ಪುರುಷೋತ್ತಮ ನಾರಾಯಣ. ಸಕಲ ವೇದಗಳೂ ಅವನ ಗುಣಗಾನ ಮಾಡುತ್ತವೆ. ವೇದಗಳೇ ಏಕೆ, ಸಕಲ ವರ್ಣಧ್ವನಿಗಳೂ ಅವನ ಗುಣಗಾನಕ್ಕಾಗಿಯೇ ಇವೆ–

ಸರ್ವೇ ವೇದಾಃ ಸರ್ವೇ ಘೋಷಾಃ
ಏಕೈವ ವ್ಯಾಹೃತಿಃ ಪ್ರಾಣ ಏವ ॥

ಎಂದು ಐತರೇಯೋಪನಿಷತ್ತು ಹೇಳುವಂತೆ ಸಕಲ ವರ್ಣಧ್ವನಿಗಳಿಂದಲೂ ವಾಚ್ಯನಾಗಿ ಆ ವರ್ಣಧ್ವನಿಗಳನ್ನು ಆಲಿಸುತ್ತ ಗಗನದಲ್ಲಿ ಸಂಚರಿಸುವ ಗರುಡವಾಹನನಾದ ಹರಿಯೆ, ನಮ್ಮ ಹಸೆಮಣೆಗೆ ಬಾ.

**ನಿಮ್ಮಣ್ಣನ ಮನೆಯ ಸುಧರ್ಮಸಭೆಯಲ್ಲಿ**
**ಉಮೆಯರಸ ನಮಿಸಿದ ।**
**ಧರ್ಮರಕ್ಷಕನೆನಿಪ ಕೃಷ್ಣ ಕೃಪೆಯಿಂದ ಪ-**
**ರಮ್ಮ ಮೂರುತಿಯೆ ಹಸೆಗೆ ಬಾ ॥**

ಕೃಷ್ಣ ನಿನ್ನನ್ನು ನಿಮ್ಮಣ್ಣನಾದ ದೇವೇಂದ್ರನ ಸ್ವರ್ಗಲೋಕದ ಸುಧರ್ಮಸಭೆಯಲ್ಲಿ ಉಮೆಯ ಅರಸನಾದ ಶಿವ ನಮಿಸುತ್ತಾನೆ. ಧರ್ಮರಕ್ಷಕನನೆನಿಸುವ ಪರಮಮೂರ್ತಿಯಾದ ಕೃಷ್ಣನೆ, ನೀನು ಹಸೆಗೆ ಬಾ.

ಹಿಂದಿನ ನುಡಿಯಲ್ಲಿ ಗರುಡನು ಮಾಡುವ ಹರಿಯ ಆರಾಧನೆಯನ್ನು ಹೇಳಿ ಈಗ ತಾರತಮ್ಯ ಕ್ರಮದಲ್ಲಿ ಅನಂತರದ ದೇವೇಂದ್ರನ ಬಗ್ಗೆ ಈ ನುಡಿಯಲ್ಲಿ ಹೇಳಿದೆ. ಕೃಷ್ಣನ ಅಣ್ಣ ದೇವೇಂದ್ರ, ಅದಿತಿ ಕಶ್ಯಪ ದಂಪತಿಗಳಲ್ಲಿ ದ್ವಾದಶ ಆದಿತ್ಯರಲ್ಲಿ ಕೊನೆಯವನಾಗಿ 'ವಿಷ್ಣು' ಎನಿಸಿ ಅವತರಿಸಿದಂದಿನಿಂದ ಹಿರಿಯ ಆದಿತ್ಯನಾದ ಇಂದ್ರ ಹರಿಗೆ ಅಣ್ಣನಾದ. ಹರಿ ಇಂದ್ರನಿಗೆ ಕಿರಿಯವ, ತಮ್ಮ ಎಂದು 'ಉಪೇಂದ್ರ' ನೆನಿಸಿದ ಇದು ಕೇವಲ ಲೀಲೆ. ವಸ್ತುತಃ ಪರಮಮೂರ್ತಿ ಸರ್ವೋತ್ತಮ, ಧರ್ಮ ರಕ್ಷಕ ಧರ್ಮರಕ್ಷಣೆಗಾಗಿ ನಾನಾ ಅವತಾರ ಮಾಡುವವ ಆದರಂತೆ ಉಪೇಂದ್ರನಾಗಿಯೂ ಅವತರಿಸಿದ್ದ.

ಇಂದ್ರನಿಗೆ ಮಾತ್ರ ಕೆಲವೊಮ್ಮೆ ತಾನು ನಿಜವಾಗಿಯೇ ಅಣ್ಣನಿರಬೇಕೆಂದು ಅನಿಸುವುದುಂಟು. ಅವನು ಹಾಗೇ ಹೇಳಿದ್ದಾನೆ ನಾರದರಿಗೆ – 'ಅಣ್ಣನಾದ ನನ್ನ ಸ್ವರ್ಗಲೋಕಕ್ಕಿಂತಲೂ ಮೇಲೆ ವೈಕುಂಠಲೋಕವನ್ನು ನಿರ್ಮಿಸಿಕೊಂಡು ನನಗೆ ಅವಮಾನ ಮಾಡುತ್ತಿದ್ದಾನೆ ವಿಷ್ಣು. ಎಷ್ಟಾದರೂ ನನ್ನ ತಮ್ಮ, ಮಗನಾದ ಜಯಂತನಿಗೆ ಸಮಾನವಾಗಿ ಪ್ರೀತಿಪಾತ್ರನಾದವ ಎಂದೇ ಸುಮ್ಮನಿದ್ದೇನೆ–

ಅವಮಾನಃ ನ ಚ ಮಯಾ ಪೃಷ್ಠತಃ ಕ್ರಿಯತೇ ಮುನೇ ।
ಲಾಲನೀಯೋ ಮಯಾ ಬಾಲ ಇತ್ಯೇವಂ ಭ್ರಾತೃಗೌರವಾತ್ ॥

–ಹರಿವಂಶ.

'ಅವನು ಯುದ್ಧದಲ್ಲಿ ಸಹಾಯವನ್ನೇನೋ ಮಾಡುತ್ತಾನೆ. ಆದರೆ ನಿಯಮವಿಲ್ಲ ತನಗೆ ಮನಸ್ಸು ಬಂದಾಗ ಮಾಡುತ್ತಾನೆ. ಹೆಚ್ಚಾಗಿ ನಾನೇ ವೃತ್ರವಧ ಮುಂತಾದ ಸಂದರ್ಭಗಳಲ್ಲಿ ಒಬ್ಬನೇ ಕಾದಿ ಗೆದ್ದಿದ್ದೇನೆ'.

ವೇದಮಂತ್ರಗಳಲ್ಲಿಯೂ ವಿಷ್ಣುವಿಗೆ ಬರಿ ಐದಾರು ಸೂಕ್ತಗಳು ಮೀಸಲು. ಇಂದ್ರನಿಗೆ ಇನ್ನೂರೈವತ್ತು! 'ಸರ್ವಸ್ಮಾದಿಂದ್ರ ಉತ್ತರಃ' ಇಂದ್ರನು ಸರ್ವೋತ್ತಮ ಎಂಬ ಹೊಗಳಿಕೆ ಬೇರೆ! ಇದರಿಂದಲೂ ಇಂದ್ರನಿಗೆ ಅಹಂಕಾರ ಬರುವುದು ಸಹಜ.

ಈ ಅಹಂಕಾರವನ್ನು ಹರಿ ಆಗಾಗ ಶಮನ ಮಾಡಿ, ತಾನು 'ಉಪೇಂದ್ರ' ನೆನಿಸಿದುದು ಇಂದ್ರನಿಗಿಂತ ಕಡಿಮೆ ಎಂಬ ಅರ್ಥದಲ್ಲಿ ಅಲ್ಲ, ಹೆಚ್ಚು ಎಂಬರ್ಥದಲ್ಲಿ 'ಉಪೋಽಧಿಕೇ ಚ' ಎಂಬ ಪಾಣಿನಿ ಸೂತ್ರ ಹೇಳುವಂತೆ 'ಉಪ' ಎಂದರೆ ಅಧಿಕ, ಶ್ರೇಷ್ಠ, ಇಂದ್ರನಿಗಿಂತ ಶ್ರೇಷ್ಠ, ಆದ್ದರಿಂದ 'ಉಪೇಂದ್ರ' ಎಂಬುದನ್ನು ಗೋವರ್ಧನೋದ್ಧಾರ ಮುಂತಾದ ಸಂದರ್ಭಗಳಲ್ಲಿ ಸ್ಪಷ್ಟ ತೋರಿಸಿದ್ದಾನೆ. ಇದನ್ನು ಹರಿವಂಶದಲ್ಲಿ ಇಂದ್ರನೇ ಒಪ್ಪಿದ್ದಾನೆ–

ಮಮೋಪರಿ ಯಥೇಂದ್ರಸ್ತ್ವಂ ಸ್ಥಾಪಿತೋ ಗೋಭಿರೀಶ್ವರಃ ।
ಉಪೇಂದ್ರ ಇತಿ ಕೃಷ್ಣ ತ್ವಾಂ ಗಾಸ್ಯಂತಿ ದಿವಿ ದೇವತಾಃ ॥

ಹೀಗೆ ಅಣ್ಣನಾದ ಇಂದ್ರ ಉಪೇಂದ್ರನನ್ನು ಅವನು ಸ್ವಾಮಿಯೇ ಆದರೂ ನಮಿಸಲಾರ. ನಮಿಸಿದರೆ ಕೃಷ್ಣನಿಗೆ ವಸುದೇವ ಮುಂತಾದವರು ನಮಿಸಿದಂತಾದೀತು. ಆದ್ದರಿಂದ ಶಿಷ್ಟಾಚಾರಾನುಸಾರ ಇಂದ್ರ ಬೇರೆ ರೀತಿಯಿಂದ ಹರಿಯನ್ನು ನಮಸ್ಕರಿಸುತ್ತಾನೆ. ತನ್ನ ಅರಮನೆಯಲ್ಲಿ ತಿಂಗಳಿಗೊಮ್ಮೆ ತಪ್ಪದೆ ಹಬ್ಬ ಆಚರಿಸುತ್ತಾನೆ. ಅದಕ್ಕೆ ರುದ್ರಾದಿ ದೇವತೆಗಳಿಗೂ ನಾರದಾದಿ ಮುನಿಗಳಿಗೂ ಗಂಧರ್ವ ಯಕ್ಷ ರಾಕ್ಷಸಾದಿಗಳಿಗೂ ಸ್ವತಃ ಪಾರಿಜಾತದ ಹೂವನ್ನಿತ್ತು ನಿಮಂತ್ರಿಸುತ್ತಾನೆ. ಹೀಗೆ ನಿಮಂತ್ರಿಸುವಾಗ ನಾರದರಿಗೆ ಇಂದ್ರನಿತ್ತ ಒಂದು ಪಾರಿಜಾತದ ಹೂವೇ ಕೃಷ್ಣನ ಕೈಸೇರಿ ಅಲ್ಲಿಂದ ರುಕ್ಮಿಣಿಯ ಮುಡಿಯನ್ನೇರಿ ಸತ್ಯಭಾಮೆಯ ಕೋಪವನ್ನು ಕೆರಳಿಸಿ ಸ್ವರ್ಗದಿಂದ ಪಾರಿಜಾತ ವೃಕ್ಷದ ಅಪಹರಣಕ್ಕೇ ಕಾರಣವಾಯಿತು. ಹೀಗೆ ನಿಮಂತ್ರಿತರಾದ ದೇವತೆಗಳು ಋಷಿಗಳು ಮುಂತಾದವರೊಂದಿಗೆ ದೇವೇಂದ್ರ ಒಂದು ರಾತ್ರಿ ಇಡೀ ಗಂಧರ್ವರ ಗಾನ ಅಪ್ಸರೆಯರ ಕುಣಿತಗಳಿಂದ ಉತ್ಸವ ಮಾಡುತ್ತಾನೆ. ಶಿವ ಉಮಾ ಸಹಿತನಾಗಿ ಸಪರಿವಾರನಾಗಿ ಬಂದು ಈ ಉತ್ಸವವನ್ನು ಕಣ್ತುಂಬ ನೋಡಿ ಅಲ್ಲಿಯೇ ಉಪಸ್ಥಿತನಾಗಿರುವ ಉಪೇಂದ್ರನಿಗೆ ಸಮರ್ಪಿಸುತ್ತಾನೆ. ಹರಿವಂಶ ಇದನ್ನು ಹೇಳುತ್ತದೆ–

ಮಾಸಿಮಾಸ್ಯುಚಿತಂ ಹ್ಯೇತನ್ಮಹೇಂದ್ರಸದನೇ ವಿಭೋ ।
ಪೂಜಾರ್ಥಂ ದೇವದೇವಸ್ಯ ಗಾಂಧರ್ವಂ ನೃತ್ಯಮೇವ ಚ ॥

ಮೇಲುನೋಟಕ್ಕೆ ಇದು ದೇವದೇವನಾದ ಶಿವನ ಆರಾಧನೆಯೆಂದೇ ಭಾಸವಾಗುತ್ತದೆ–

ಜುಜೋಷ ಭಗವಾನ್ ದೇವಸ್ತದುಪಸ್ಥಾನಮಾತ್ಮವಾನ್ ।

'ಆ ಆರಾಧನೆಯನ್ನು 'ಆತ್ಮವಾನ್' ಅಂದರೆ ಧೀರನಾದ ಶಿವನು ಸ್ವೀಕರಿಸಿದ'

ಆದರೆ ಉತ್ಸವಕ್ಕೆ ಆಗಮಿಸಿದವರಲ್ಲೆಲ್ಲ ಮುಖ್ಯಮಾತ್ರ ಶಿವ–

ಉಪರ್ಯುಪರಿ ಸರ್ವೇಷಾಂ ಸೋಮೋ ದೇವೋ ಮಹೇಶ್ವರಃ ।

ಎನ್ನುತ್ತದೆ ಹರಿವಂಶ. ಸ್ಪಷ್ಟವಾಗಿ ಅವನೇ ಆರಾಧ್ಯನೆನ್ನುತ್ತಿಲ್ಲ ಆರಾಧ್ಯಮೂರ್ತಿಯಾಗಿ ಎಲ್ಲರಿಗೂ ಕಾಣವಂತೆ ಸಭೆಯಲ್ಲಿ ಅವನು ಕುಳ್ಳಿರುವುದೂ ಇಲ್ಲ. ಅದೃಶ್ಯನಾಗಿ ನಿಂತು ನೋಡುವನಂತೆ–

ಅಂತರ್ಹಿತೋ ದೇವದೇವಃ ಸೋಮಃ ಸಪ್ರವರೋ ವಿಭುಃ ।
ಪಶ್ಯತ್ಯಮರಮುಖ್ಯೇನ ಕೃತಂ ಭಕ್ತ್ಯಾದ್ರಿಘಾತಿನಾ ॥

ಆದ್ದರಿಂದ ಗುರುಸ್ಥಾನದಲ್ಲಿದ್ದು ಇಂದ್ರನಿಂದ ಉತ್ಸವ ಮಾಡಿಸಿ ಹರಿಗೆ ಅರ್ಪಿಸಿದನೆನ್ನುವುದೇ ಚೆನ್ನು. ಎಲ್ಲರೂ ಮೊದಲಿಗೆ ಶಿವನನ್ನು ನಮಸ್ಕರಿಸಿ ಉತ್ಸವ ಪ್ರಾರಂಭಿಸುತ್ತಾರೆ ಇದು ಗುರು ನಮಸ್ಕಾರ. ಈಗ 'ಆತ್ಮವಾನ್' ಎಂದು ಹಿಂದೆ ಹೇಳಿದ ವಿಶೇಷಣವೂ ಅರ್ಥಪೂರ್ಣವಾಗುತ್ತದೆ. 'ಆತ್ಮ' ಎಂದರೆ ಪರಮಾತ್ಮ ಸ್ವಾಮಿಯಾದ ಜಗನ್ನಾಥ ವಿಷ್ಣು. ಅವನನ್ನಾರಾಧಿಸುವವ ಆತ್ಮವಾನ್. ತನ್ನ ಶಿಷ್ಯನಾದ ಇಂದ್ರ ಆರಾಧನೆ ಮಾಡಿದರೆ ವಸ್ತುತಃ ತಾನೇ ಮಾಡಿದಂತೆ. ಆದ್ದರಿಂದ ಆ ಆರಾಧನೆಯನ್ನು ಶಿವನೇ ಹರಿಗೆ ಅರ್ಪಿಸುತ್ತಾನೆ. ಆದ್ದರಿಂದಲೇ 'ನಿಮ್ಮಣ್ಣನ ಮನೆಯ ಸುಧರ್ಮ ಸಭೆಯಲ್ಲಿ ನಿಮ್ಮಣ್ಣ ನಮಿಸಿದನೆ'ನ್ನದೆ, 'ಉಮೆಯರಸ ನಮಿಸಿದ'ನೆಂದಿದೆ. ಹೀಗೆ ಇಂದ್ರನು ತಾನು ಹರಿಯನ್ನಾರಾಧಿಸಿ ಆ ಆರಾಧನೆಯನ್ನು ತನ್ನ ಗುರುವಾದ ಶಿವನ ಮೂಲಕ ಹರಿಗೆ ಅರ್ಪಿಸುವುದು ಒಂದು ಉತ್ತಮ ಆದರ್ಶ ನಾವೂ ಹಾಗೇ ನಮ್ಮ ಸತ್ಕರ್ಮಗಳನ್ನು ಗುರುಹಿರಿಯರ ಮೂಲಕ ಹರಿಗೆ ಅರ್ಪಿಸಬೇಕು.

ಸುಧರ್ಮಸಭೆ ದೇವಲೋಕದ್ದೆಂಬುದು ಪ್ರಸಿದ್ಧ. 'ನಿಮ್ಮಣ್ಣನ ಮನೆ'ಯದೆಂದು ಅದನ್ನೇ ಪ್ರತ್ಯೇಕ ಹೇಳಬೇಕಾಗಿರಲಿಲ್ಲ. ಆದರೂ ಕೃಷ್ಣನ ದ್ವಾರಕೆಯಲ್ಲಿಯೂ ಒಂದು ಸುಧರ್ಮಸಭೆ ಇದೆ. ದ್ವಾರಕೆಯ ನಿರ್ಮಾಣ ಕಾಲದಲ್ಲಿ ಕೃಷ್ಣ ವಾಯುವನ್ನು ಕರೆದು ದೇವಲೋಕದಿಂದ ಸುಧರ್ಮ ಸಭೆಯನ್ನು ರಹಸ್ಯವಾಗಿ ತರಿಸಿಕೊಂಡಿದ್ದನಂತೆ. ಅಂದರೆ, ಒಂದು ಅಂಶದಿಂದ ಸಭೆ ಅಲ್ಲಿಂದ

ಇಲ್ಲಿಗೆ ಬಂದಿರಬೇಕು ಏಕೆಂದರೆ ಅಲ್ಲಿ ಅದು ನೂರೈವತ್ತು ಯೋಜನ ಉದ್ದ, ನೂರು ಯೋಜನ ಅಗಲ, ಐದು ಯೋಜನ ಎತ್ತರವಿದ್ದು ಸೂರ್ಯನಂತೆ ಹೊಳೆಯುತ್ತ ಆಕಾಶದಲ್ಲಿ ಬೇಕೆಂದಲ್ಲಿಗೆ ಚಲಿಸುವಂಥದ್ದಾಗಿತ್ತು. ಇಲ್ಲಿ ದ್ವಾರಕಾನಗರವೇ ಹನ್ನೆರಡು ಯೋಜನ ಉದ್ದ, ಎಂಟು ಯೋಜನ ಅಗಲ. ಅದರಲ್ಲಿ ಸುಧರ್ಮಸಭೆ ಒಂದು ಯೋಜನ ಉದ್ದಗಲ.

ಈ ಸಭೆಗೆ ಇಂದ್ರ ಬಂದಾಗಲೆಲ್ಲ ಹಿರಿಯಣ್ಣನಾಗಿ ಕೃಷ್ಣನಿಂದ ತಾನೆ ಪೂಜಿಸಿಕೊಳ್ಳುತ್ತಿದ್ದ. ದೇವಲೋಕದ ಸುಧರ್ಮ ಸಭೆಯಲ್ಲಿ ಮಾತ್ರ ಹಿಂದೆ ಹೇಳಿದಂತೆ ಇಂದ್ರ ಕೃಷ್ಣನನ್ನು ಪೂಜಿಸುತ್ತಾನೆ.

'ಧರ್ಮರಕ್ಷಕನೆನಿಪ' ಎನ್ನುವುದು ಎರಡು ರೀತಿಯಿಂದ ಸರಿಹೊಂದುತ್ತದೆ. ಮೊದಲಿಗೆ ಸತ್ಯಭಾಮೆಯು ಪುಣ್ಯಕ ವ್ರತವೆಂಬ ಒಂದು ಧರ್ಮ ಕಾರ್ಯಕ್ಕೆ ತಾನು ರಕ್ಷಕನೆಂಬಂತೆ ತೋರಿಕೊಂಡ ಕೃಷ್ಣ. ಪತಿ ಸೌಭಾಗ್ಯ, ಅವ್ಯೆಧವ್ಯ, ನಿತ್ಯಯೌವನ, ಶರೀರ ಸೌಂದರ್ಯ, ಆರೋಗ್ಯ, ಪುತ್ರ ಸಂಪತ್ತು, ಅಪರಿಮಿತ ಐಶ್ವರ್ಯಾದಿ ಫಲಗಳಿಗಾಗಿ ಸ್ತ್ರೀಯರು ಮಾಡಬೇಕಾದುದು ಈ ಪುಣ್ಯಕವ್ರತ. ಅದಿತಿ ಶಚೀ ರೋಹಿಣೀ ಮುಂತಾದ ದೇವತಾ ಸ್ತ್ರೀಯರು ಈ ವ್ರತ ಮಾಡಿಯೇ ಸೌಭಾಗ್ಯವತಿಯರಾದರು. ಈ ವ್ರತ ನಿಯಮದಂತೆ ಪಾರಿಜಾತದ ಹೂವಿನ ಮಾಲೆಯನ್ನು ಪತಿಯ ಕೊರಳಿಗೆ ಹಾಕಿ ಅವನನ್ನು ಒಬ್ಬ ಬ್ರಾಹ್ಮಣನಿಗೆ ದಾನ ಮಾಡಬೇಕು. ಬಳಿಕ ಸರಿಯಾದ ಬೆಲೆ ತೆತ್ತು ಹಿಂತಿರುಗಿ ಪಡೆಯಬೇಕು. ಆದ್ದರಿಂದ ಈ ವ್ರತಕ್ಕೆ ಪಾರಿಜಾತದ ಹೂ ಬೇಕಾಗಿತ್ತು. ಕೃಷ್ಣ ತಾನು ಈ ವ್ರತದ ರಕ್ಷಣೆಯ ನೆಪ ಮಾಡಿಕೊಂಡು ಸ್ವರ್ಗದಿಂದ ಪಾರಿಜಾತ ವೃಕ್ಷವನ್ನೇ ಅಪಹರಿಸಿದ. ಇಂದ್ರನ ದರ್ಪ ಅಡಗಿಸಿದ. ಅವನ ಹೃದಯ ಶುದ್ಧವಾಯಿತು. ಅವನ ಶುದ್ಧ ಭಾಗವತ ಧರ್ಮದ ರಕ್ಷಣೆಯಾಯಿತು. ಕೃಷ್ಣ ಧರ್ಮರಕ್ಷಕನೆನಿಸಿದ.

— ೮೮ —

**ಇಂದ್ರನ ಮನೆಗ್ಹೋಗಿ ಅದಿತಿಗೆ ಕುಂಡಲವಿತ್ತು**
**ಅಂದದ ಪೂಜೆಯ ಕೈಗೊಂಡು ।**
**ಅಂದದ ಪೂಜೆಯ ಕೈಗೊಂಡು ಸುರತರುವ**
**ಇಂದಿರೆಗಿತ್ತ ಹರಿಯೆ ಬಾ ॥**

ಹರಿಯೇ, ನೀನು ಕೃಷ್ಣನಾಗಿ ನರಕಾಸುರನನ್ನು ಕೊಂದು ಸ್ವರ್ಗಕ್ಕೆ ಹೋಗಿ ಅಲ್ಲಿ ದೇವಮಾತೆ ಅದಿತಿಗೆ ನರಕಾಸುರನು ಅಪಹರಿಸಿದ್ದ ಅವಳ ಕರ್ಣಕುಂಡಲಗಳನ್ನಿತ್ತು ಎಲ್ಲ ದೇವತೆಗಳಿಂದ ಆದರದ ಸತ್ಕಾರವನ್ನು ಸ್ವೀಕರಿಸಿ

ಪಾರಿಜಾತವನ್ನಪಹರಿಸಿ ಸಾಕ್ಷಾತ್ ಇಂದಿರೆಯ ಅವತಾರಳಾದ ಸತ್ಯಭಾಮೆಗೆ ಇತ್ತ, ಅಂಥ ಹರಿಯೆ, ನಮ್ಮ ಹಸೆಗೆ ಬಾ.

ಹಿಂದಿನ ನುಡಿಯಲ್ಲಿ 'ನಿಮ್ಮಣ್ಣನ ಮನೆಯ ಸುಧರ್ಮಸಭೆಯಲ್ಲಿ ಉಮೆಯರಸ ನಮಿಸಿದ' ಎಂದಿದ್ದರೂ ಅದು ಉಮೆಯರಸನೇ ಮಾಡಿದ ಭಗವದಾರಾಧನೆಯಲ್ಲ. ಅದನ್ನು ಅದಕ್ಕಿಂತಲೂ ಹಿಂದೆ 'ರುದ್ರನ ಮನೆಯಲ್ಲಿ ರುದ್ರಾಣಿ ದೇವಿಯರು' ಎಂದು ಮುಂತಾಗಿ ಹೇಳಿದೆ. ಆದ್ದರಿಂದ ತಾರತಮ್ಯಾನುಗುಣವಾಗಿ ಇಂದ್ರನು ಮಾಡಿದ ಆರಾಧನೆಯನ್ನೇ ಹೇಳಿದೆ. ಹಾಗೆಯೇ ಈ ನುಡಿಯಲ್ಲಿಯೂ ಇಂದ್ರನ ಮನೆಗ್ಹೋಗಿ ಅಂದದ ಪೂಜೆಯ ಕೈಗೊಂಡು' ಎಂದಿದ್ದರೂ ಅದು ಇಂದ್ರನೆ ಮಾಡಿದ ಪೂಜೆ ಅಲ್ಲ. ಅದನ್ನು ಹಿಂದೆಯೇ ಹೇಳಿಯಾಗಿದೆ. ಅಲ್ಲಿ ಇಂದ್ರನ ಬಗ್ಗೆ ಹೇಳಿದ ಮೇಲೆ ತಾರತಮ್ಯಾನುಗುಣವಾಗಿ ಉಳಿದ ದೇವತೆಗಳ ಬಗ್ಗೆ ಇಲ್ಲಿ ಹೇಳುವ ವಿವಕ್ಷೆ ಕಾಣುತ್ತದೆ 'ಇಂದ್ರನ ಮನೆ' ಎಂದು ಇಂದ್ರನ ಕುರಿತು ಹೇಳುವ ಅಭಿಪ್ರಾಯವಿಲ್ಲ. ರೂಢಿಯಿಂದ ಇಂದ್ರಭವನವೆಂದರೆ ಸ್ವರ್ಗ. ನರಕಾಸುರನನ್ನು ಕೊಂದ ಮೇಲೆ ಸ್ವರ್ಗಕ್ಕೆ ಹೋಗಿ ಎಲ್ಲ ದೇವತೆಗಳಿಂದ ಸತ್ಕಾರ ಪಡೆದನೆಂದು ಈ ನುಡಿ ಹೇಳುತ್ತಿದೆ.

ಶ್ರೀಕೃಷ್ಣ ಪಾರಿಜಾತ ತಂದುದು ಭಾಗವತದಲ್ಲಿ ಒಂದೇ ಬಾರಿ. ಹರಿವಂಶದಲ್ಲಿ ಎರಡು ಬಾರಿ. ಒಮ್ಮೆ ಅದಿತಿಗೆ ಕುಂಡಲವಿತ್ತು ಇಂದ್ರನ ಅನುಮತಿಯಿಂದಲೆ ಯುದ್ಧವಿಲ್ಲದೆ ಪಾರಿಜಾತ ತಂದ. ಇನ್ನೊಮ್ಮೆ ಯುದ್ಧಮಾಡಿ ತಂದ. ನಿರ್ಣಯದಲ್ಲಿಯೂ ಎರಡು ಬಾರಿ ಉಲ್ಲೇಖವಿದೆ. ಹಾಗಾದರೆ ಕೃಷ್ಣ ಎರಡುಬಾರಿ ಪಾರಿಜಾತ ತಂದನೆ ? ಒಂದೇ ಬಾರಿ ಎನ್ನುವುದು ಉಚಿತ. ಆದ್ದರಿಂದ ಪಾರಿಜಾತ ಹರಣದ ಕತೆಯನ್ನು ನಿರ್ಣಯದ ವಿರೋಧ ಬಾರದಂತೆ ಭಾಗವತ ಹರಿವಂಶಗಳೆರಡನ್ನೂ ಸೇರಿಸಿ ಹೇಳುವುದಾದರೆ ಅದು ಹೀಗೆ–

ನಾರದರು ಒಂದು ಪಾರಿಜಾತದ ಹೂವನ್ನು ಕೃಷ್ಣನ ಕೈಗಿತ್ತಾಗ ಕೃಷ್ಣ ಅದನ್ನು ರುಕ್ಮಿಣಿಗೆ ಕೊಟ್ಟ. ಸತ್ಯಭಾಮೆ ಇದನ್ನು ಕೇಳಿ ಸಿಟ್ಟಾದಳು. ಸವತಿ ಮತ್ಸರದಿಂದ ಕೃಷ್ಣನೊಡನೆ ಕಲಹ ಮಾಡಿ, 'ಪಾರಿಜಾತ ವೃಕ್ಷವನ್ನೇ ದೇವಲೋಕದಿಂದ ಅಪಹರಿಸಿ ತಂದುಕೊಡುವೆ'ನೆಂದು ಅವನಿಂದ ಆಶ್ವಾಸನೆ ಪಡೆದಳು.

ಇಲ್ಲಿ 'ಈ ರುಕ್ಮಿಣೀ ಸತ್ಯಭಾಮೆಯರು ಬೇರೆ ಅಲ್ಲ. ದೇವಿ ಇಂದಿರೆಯ ಶ್ರೀ ಭೂ ರೂಪಗಳೇ ಅವರು. ಕಲಹ, ಬರೀ ನಟನೆ ಎಂದು ತಿಳಿಸುವುದಕ್ಕಾಗಿ 'ಸುರತರುವ ಇಂದಿರೆಗಿತ್ತ' ಎಂದಿದೆ. ರುಕ್ಮಿಣಿ ಮಾತ್ರವೇ ಲಕ್ಷ್ಮಿಯ ಅವತಾರ ಹೊರತು ಸತ್ಯಭಾಮೆಯಲ್ಲ ಎಂದು ಅನ್ಯಥಾ ತಿಳಿಯಬಾರದೆಂದು ಹೇಳುವ ಅಭಿಪ್ರಾಯವೂ ಉಂಟು.

ನಾರದರು ಇನ್ನೊಮ್ಮೆ ಬಂದು ಸತ್ಯಭಾಮೆಯ ಮುಂದೆ ಕೃಷ್ಣನಿಗೆ ಪಾರಿಜಾತ ವೃಕ್ಷದ ಮಹತ್ವವನ್ನು ಬಣ್ಣಿಸಿದರು– 'ಹಿಂದೆ ಅದಿತಿದೇವಿ ತಾನು ಸದಾ ಕುಮಾರಿಯಾಗಿ ಸರ್ವಾಭರಣ ಭೂಷಿತಳಾಗಿ ಶೋಕರಹಿತಳಾಗಿಯೇ ಇರಬೇಕೆಂದು ಬಯಸಿ ಪ್ರಾರ್ಥಿಸಿದಾಗ ಕಶ್ಯಪರು ಪುಣ್ಯಕವ್ರತವನ್ನು ಉಪದೇಶಿಸಿ ಆ ವ್ರತದ ಅನುಷ್ಠಾನಕ್ಕಾಗಿ ಪಾರಿಜಾತ ವೃಕ್ಷವನ್ನಿತ್ತರು. ಬಳಿಕ ಹೀಗೇ ಎಲ್ಲ ದೇವತಾ ಸ್ತ್ರೀಯರೂ ಪಾರಿಜಾತ ವೃಕ್ಷವನ್ನು ಪಡೆದು ಪುಣ್ಯಕ ವ್ರತವನ್ನಾಚರಿಸಿ ಎಲ್ಲ ಸೌಭಾಗ್ಯಗಳನ್ನು ಸಂಪಾದಿಸಿದರು, ಶಿವನೂ ಈ ಪಾರಿಜಾತ ವೃಕ್ಷವನ್ನು ಬಯಸಿದ್ದ. ಆದರೆ ಶಚೀದೇವಿಗಾಗಿ ದೇವೇಂದ್ರ ಹೇಗೋ ಶಿವನನ್ನೊಲಿಸಿಕೊಂಡು ಅದನ್ನು ತನ್ನಲ್ಲಿಯೆ ಉಳಿಸಿಕೊಂಡ. ಶಿವ ಬೇರೆಯೇ ಒಂದು ಪಾರಿಜಾತ ವನವನ್ನು ಮಂದರ ಪರ್ವತದಲ್ಲಿ ನಿರ್ಮಿಸಿ ವಿಹರಿಸಿದ. ದಟ್ಟವಾದ ಆ ವನ ಸೂರ್ಯಚಂದ್ರರ ಕಿರಣಗಳಿಗೂ ಪ್ರವೇಶ ನೀಡದೆ ಸ್ವಯಂ ಪ್ರಭೆಯಿಂದ ಬೆಳಗುತ್ತದೆ ವೃಕ್ಷಗಳು ಮೂರ್ತಿಮತ್ತಾಗಿಯೆ ಬಂದು ಶಿವ ಪಾರ್ವತಿಯರನ್ನು ನಿತ್ಯ ಸೇವಿಸುತ್ತವೆ'– ನಾರದರು ಹೀಗೆ ಹೇಳಿದಾಗ ಕೃಷ್ಣನೆಂದ – 'ಭಾಮೆಗೆ ವ್ರತಾಚರಣೆಗಾಗಿ ಪಾರಿಜಾತ ವೃಕ್ಷವನ್ನು ಸ್ವರ್ಗದಿಂದ ತಂದು ಕೊಡುವೆನೆಂದು ನಾನು ಪ್ರತಿಜ್ಞೆ ಮಾಡಿದ್ದೇನೆ. ನನ್ನ ಯಾವುದೇ ಪ್ರತಿಜ್ಞೆ ಹಾಳಾಗುವುದೆಂದರೆ ಲೋಕನಾಶವೇ ಸರಿ–

ಮಯಿ ಭಗ್ನಪ್ರತಿಜ್ಞೇ ವೈ ಲೋಕಾನಾಂ ವಿಪ್ಲವೋ ಭವೇತ್ ।

ಅದೇ ಸಮಯದಲ್ಲಿ ಸಕಲ ದೇವತೆಗಳಿಂದೊಡಗೂಡಿ ದೇವೇಂದ್ರ ಕೃಷ್ಣನ ಬಳಿಗೆ ಬಂದು ನರಕಾಸುರನ ವೃತ್ತಾಂತವನ್ನು ಬಣ್ಣಿಸಿ ಅವನನ್ನು ವಧಿಸಲು ಬೇಡಿದ. ನರಕಾಸುರ ದೇವಮಾತೆಯಾದ ಅದಿತಿಯ ಕುಂಡಲಗಳನ್ನು ಅಪಹರಿಸಿದ್ದ. ಸುಮಂಗಲಿಯರಿಗೆ ಅತಿಮುಖ್ಯ ಲಕ್ಷಣ ಕರ್ಣಕುಂಡಲ. ಅದಿತಿಯ ಕುಂಡಲಗಳು ದಿವ್ಯರತ್ನಮಯವಾಗಿದ್ದು ಅಮೃತ ಸುರಿಸುತ್ತಿದ್ದುವು. ಅವನ್ನು ಅಪಹರಿಸಿ ಅದಿತಿಯ ಮಕ್ಕಳಾದ ಇಂದ್ರಾದಿ ಸಕಲ ದೇವತೆಗಳಿಗೇ ಅವಮಾನ ಮಾಡಿದ್ದ ನರಕಾಸುರ. ಅಮೃತ ಸುರಿಸುವ ವರುಣನ ಶ್ವೇತಚ್ಛತ್ರವನ್ನೂ ಮಂದರ ಪರ್ವತದ ಒಂದು ಮಣಿಶಿಖರವನ್ನೂ ಅಪಹರಿಸಿದ್ದ.

ಶ್ರೀಕೃಷ್ಣ ಸತ್ಯಭಾಮಾ ಸಮೇತನಾಗಿ ಗರುಡಾರೂಢನಾಗಿ ಹೋಗಿ ನರಕಾಸುರನನ್ನು ಕೊಂದು ಸ್ವರ್ಗಕ್ಕೆ ಹೋಗಿ ಅದಿತಿಗೆ ಕುಂಡಲವಿತ್ತ. 'ನೀನೂ ದೇವೇಂದ್ರನಂತೆಯೇ ಶತ್ರುಗಳಿಗೆ ಅವಧ್ಯನೂ ಅಜೇಯನೂ ಆಗಿ ಲೋಕಪೂಜ್ಯನೆನಿಸು' ಎಂದು ಅದಿತಿ ಕೃಷ್ಣನಿಗೆ ಆಶೀರ್ವದಿಸಿದಳು. ಸತ್ಯಭಾಮೆಗೂ ಕೃಷ್ಣನು ಭೂಲೋಕದಲ್ಲಿರುವಷ್ಟು ಕಾಲವೂ ಸದಾ ನವಯುವತಿಯಾಗಿಯೇ ಇರುವಂತೆ ಹರಸಿದಳು. ಇಂದ್ರ ಶಚಿಯರು ಕೃಷ್ಣಭಾಮೆಯರಿಗೆ

ವಸ್ತ್ರಾಭರಣಾದಿಗಳನ್ನಿತ್ತು ಸತ್ಕರಿಸಿದರು ಎಲ್ಲ ದೇವತೆಗಳೂ ಅಭಿನಂದಿಸಿ ಆದರಿಸಿದರು. ಇದು ದೇವತೆಗಳು ಮಾಡಿದ ಅಂದದ ಪೂಜೆ. ಅದನ್ನು ಕೈಗೊಂಡ ಶ್ರೀಕೃಷ್ಣ.

ಅಷ್ಟರಿಂದಲೇ ಕೃಷ್ಣ ತೃಪ್ತಿಪಡಲಿಲ್ಲ. ಏಕೆಂದರೆ ಆ ಪೂಜೆಯಲ್ಲಿ ಸ್ವಲ್ಪ ನ್ಯೂನತೆ ಇತ್ತು. ಅವರು ಆ ಕಾಲದಲ್ಲಿ ಕೃಷ್ಣನನ್ನು ಒಬ್ಬ ಅಸಾಮಾನ್ಯ ಮಾನವನೆಂದು ತಿಳಿದಿದ್ದರೇ ಹೊರತು ಸರ್ವಶಕ್ತ ಭಗವಂತನೆಂದು ತಿಳಿದಿರಲಿಲ್ಲ. ಇದಕ್ಕೆ ಶಚಿಯ ವರ್ತನೆಯೊಂದೇ ಸಾಕ್ಷಿಯಾಗಬಲ್ಲುದು ಅವಳು ಸತ್ಯಭಾಮೆಗೆ ಪಾರಿಜಾತದ ಒಂದೇ ಒಂದು ಹೂವನ್ನೂ ಕೊಡಲಿಲ್ಲ. ತಾನು ಮಾತ್ರ ಮುಡಿ ತುಂಬ ಮುಡಿದುಕೊಂಡಿದ್ದರೂ ಸತ್ಯಭಾಮೆ ಮಾನವಳೆಂದು ದೇವಯೋಗ್ಯವಾದ ಪಾರಿಜಾತದ ಹೂವನ್ನು ಕೊಡಲಿಲ್ಲ. ವಿಷ್ಣುಪುರಾಣ ಹೇಳುತ್ತದೆ–

ಶಚೀ ಚ ಸತ್ಯಭಾಮಾಯೈ ಪಾರಿಜಾತಸ್ಯ ಪುಷ್ಪಕಂ ।
ನ ದದೌ ಮಾನುಷೀಂ ಮತ್ವಾ ಸ್ವಯಂ ಪುಷ್ಪೈರಲಂಕೃತಾ ॥

ಸತ್ಯಭಾಮೆ ಪಾರಿಜಾತದ ಉದ್ದೇಶದಿಂದಲೇ ಕೃಷ್ಣನ ಜೊತೆಗೆ ಬಂದವಳು. ಅವಳಿಗೀಗ ಅದೆಷ್ಟು ಕೋಪ ಬಂದಿರಲಿಕ್ಕಿಲ್ಲ? ತಡೆದು ಸುಮ್ಮನಾದಳು.

ಕೃಷ್ಣಭಾಮೆಯರು ದೇವತೆಗಳಿಂದ ಅಂದದ ಪೂಜೆ ಸ್ವೀಕರಿಸಲೆಂದೆ ನಂದನವನದಲ್ಲಿ ವಿಹಾರದ ನೆಪದಿಂದ ಸುತ್ತಾಡತೊಡಗಿದರು. ಪಾರಿಜಾತ ವೃಕ್ಷವನ್ನು ಕಿತ್ತು ಗರುಡನ ಮೇಲಿರಿಸಿಕೊಂಡರು. ವೃಕ್ಷದೇವನು ಮೂರ್ತಿಮತ್ತಾಗಿ ಬಂದು ನಿಂತು ಕೈಮುಗಿದು 'ರಕ್ಷಿಸು' ಎಂದ. 'ಭಯಪಡಬೇಡ' ಎಂದ ಕೃಷ್ಣ ಬಳಿಕ ತಡೆಯಲು ಬಂದ ಕಾವಲಿನ ಜನರನ್ನು ಲೆಕ್ಕಿಸದೆ ಭೂಮಿಗಿಳಿದು ದ್ವಾರಕೆಯ ಅರಮನೆಯಂಗಳದಲ್ಲಿ ವೃಕ್ಷವನ್ನು ಇರಿಸಿದ. ಆದರೂ ದೇವೇಂದ್ರನ ಸಮ್ಮತಿಯಿಲ್ಲದೆ ವೃಕ್ಷದ ಒಡೆತನ ಕೃಷ್ಣನಿಗೆ ಬಾರದು. ಇಂದ್ರ ಪ್ರೀತಿಯಿಂದ ಸಮ್ಮತಿ ನೀಡಿದರೆ ಸರಿ. ಇಲ್ಲದಿದ್ದರೆ ಬಲಾತ್ಕಾರವಾಗಿಯಾದರೂ ಸಮ್ಮತಿ ಹೊಂದಬೇಕು. ಆದ್ದರಿಂದ ನಾರದರ ಮೂಲಕ ದೇವೇಂದ್ರನಿಗೆ ಒಂದು ಸಂದೇಶ ಕಳಿಸಿಕೊಟ್ಟ ಕೃಷ್ಣ. 'ಸತ್ಯಭಾಮೆಯ ಪುಣ್ಯಕ ವ್ರತಾಚರಣೆಗೆ ಪಾರಿಜಾತವೃಕ್ಷ ಅವಶ್ಯ ಬೇಕಾಗಿದೆ ಆದ್ದರಿಂದ ತಂದಿದ್ದೇನೆ. ನೀನು ಸಂತೋಷದಿಂದ ಸಮ್ಮತಿಸಿದರೆ ಉತ್ತಮ ಇಲ್ಲದಿದ್ದರೆ ಶಚಿ ಆಲಿಂಗಿಸುವಂಥ ನಿನ್ನ ಎದೆಯ ಮೇಲೆ ನನ್ನ ಗದಾಪ್ರಹಾರವಾದೀತು'–

ಪುಣ್ಯಾರ್ಥಂ ದಾನಧರ್ಮಾರ್ಥಂ ಮಮ ಪ್ರೀತ್ಯರ್ಥಮೇವ ಚ ।
ಆನಾಯಯದ್ ದ್ವಾರವತೀಂ ಪಾರಿಜಾತಂ ಮಹಾದ್ರುಮಂ ॥

ಸ ಪಾರಿಜಾತಂ ಯದಿ ನ ಪ್ರದಾಸ್ಯತಿ
ಪ್ರಯಾಚ್ಯಮಾನೋ ಭವತಾಮರೇಶ್ವರಃ ।
ತತಃ ಶಚೀವ್ಯಾವ್ಯದಿತಾನುಲೇಪನೇ
ಗದಾಂ ವಿಮೋಕ್ಷ್ಯಾಮಿ ಪುರಂದರೋರಸಿ ॥ – ಹರಿವಂಶ

ಇದನ್ನು ಕೇಳಿದ ದೇವೇಂದ್ರನಿಗೆ ತಡೆಯಲಾಗಲಿಲ್ಲ. 'ಶಚಿ ಆಲಿಂಗಿಸುವ ನಿನ್ನೆದೆಯ ಮೇಲೆ' ಎಂದು ಶಚಿಯನ್ನು ಹೆಸರುಹಿಡಿದು ಹೇಳುತ್ತ ಈ ರೀತಿ ತನ್ನ ಹೆಂಡತಿಯ ಮಾತು ಕೇಳಿ ನನಗೆ ಅವಮಾನ ಮಾಡುವ ಕೃಷ್ಣನಿಗೆ ಪಾರಿಜಾತವೃಕ್ಷದ ಮಾತಂತಿರಲಿ, ಅದರ ಒಂದು ಅರ್ಧ ಎಲೆಯನ್ನೂ ಕೊಡಲಾರೆ' ಎಂದ.

ಕೃಷ್ಣ ಸತ್ಯಭಾಮೆಯೊಂದಿಗೆ ಸ್ವರ್ಗಕ್ಕೆ ಹೊರಟ. ಜೊತೆಗೆ ಪ್ರದ್ಯುಮ್ನ ಸಾತ್ಯಕಿಗಳೂ ಬಂದರು. 'ಅಹಂ ರುದ್ರಾಯ ಧನುರಾತನೋಮಿ' ಎಂದು ಶ್ರುತಿಯು ಹೇಳುವುದಕ್ಕೆ ನಿದರ್ಶನವಾಗಿ ಸತ್ಯಭಾಮೆ ಬಿಲ್ಲಿಗೆ ಬಾಣ ಹೂಡಿದಳು. ಪ್ರದ್ಯುಮ್ನ ಜಯಂತರಿಗೂ ಸಾತ್ಯಕಿ ಪ್ರವರರಿಗೂ ಯುದ್ಧ ನಡೆಯಿತು. ಕೃಷ್ಣ ಭಾಮಯರಿಗೆ ಸೋತು ರುದ್ರಾದಿ ಸಮಸ್ತ ದೇವತೆಗಳೂ ಹಿಂತಿರುಗಿದರು. ಇಂದ್ರನಿಗಿದು ಅಪಮಾನಕರವಾದ ಸೋಲು. ಸತ್ಯಭಾಮೆಯೂ ನೋಡಿ ನಗುತ್ತಿದ್ದಳು.

ಅತ್ತ ಬ್ರಹ್ಮದೇವನ ಆದೇಶದಂತೆ ಅದಿತಿ ಕಶ್ಯಪರು ನಡುವೆ ಬಂದು ಯುದ್ಧ ನಿಲ್ಲಿಸಿದರು. ಇಂದ್ರ ಕೃಷ್ಣನಲ್ಲಿ ಕ್ಷಮೆ ಬೇಡಿದ. ಪಾರಿಜಾತ ವೃಕ್ಷವನ್ನು ಮಾತ್ರವಲ್ಲದೆ ಜೊತೆಗೆ ಮಣಿ ಪರ್ವತವನ್ನು ಇಟ್ಟುಕೊಳ್ಳೆನ್ನುತ್ತ ಅದನ್ನೂ ಕೊಟ್ಟ. ಈಗ ದೇವತೆಗಳ ಅಹಂಕಾರ ಅಸುರಾವೇಶಗಳು ಅಳಿದು ಅಂತಃಕರಣ ಶುದ್ಧವಾಯಿತು. ಭಕ್ತಿಯಿಂದ ಕೃಷ್ಣಭಾಮೆಯರನ್ನು ಪೂಜಿಸಿದರು. 'ನಾನು ನಿಮ್ಮಲ್ಲಿ ಅಪರಾಧ ಮಾಡಿದುದು ನಿಜ. ಅದರೆ ಕರುವು ಆಕಳ ಕೆಚ್ಚಲಿಂದ ಹಾಲು ಬೇಗನೆ ಬಾರದಿದ್ದರೆ ಗುದ್ದುವುದಿಲ್ಲವೆ? ಹಾಗೇ ನಮ್ಮ ತಂದೆ ತಾಯಿಗಳಾದ ನೀವು ನಮ್ಮ ಸೊತ್ತುಗಳನ್ನು ಅಪಹರಿಸುವಾಗ ಬಾಲಕರಾದ ನಾವು ವಿರೋಧಿಸುವುದು ಸಹಜ' ಎಂದ ದೇವೇಂದ್ರ–

ವತ್ಸೋ ಯಥಾ ತನುಬಲಃ ಸಕೃದೇತ್ಯ ಮಾತ–
ರ್ಯೂರ್ಧಸ್ಯ ಪಾನಸಮಯೇ ಕುರುತೇ ವಿರೋಧಂ ।
ತದ್ವದ್ ವಯಂ ಚ ನಿಜಶೈಶವಮಪ್ರಮೇಯೇ
ನಾಥೇ ವಿರುಧ್ಯ ಪಿಶಿತಾಶನಿ ದರ್ಶಯಾಮಃ ॥

ಹೀಗೆ ಶುದ್ಧಾಂತಃಕರಣದಿಂದ ದೇವತೆಗಳು ಪೂಜೆ ಮಾಡಿದುದರಿಂದ ಅವರ ಪೂಜೆ ನಿಜವಾಗಿ 'ಅಂದದ ಪೂಜೆ'ಯಾಯಿತು. ಅದನ್ನು ಕೈಗೊಂಡು ಕೃಷ್ಣ ದ್ವಾರಕೆಗೆ ಹಿಂತಿರುಗಿದ. ಪಾರಿಜಾತ ವೃಕ್ಷವನ್ನು ಸತ್ಯಭಾಮೆಯ ವಶಕ್ಕೆ ಕೊಟ್ಟ.

ಸತ್ಯಭಾಮೆಯ ಮನೆಯಂಗಳವನ್ನಲಂಕರಿಸಿದ ದಿವ್ಯವಾದ ಪಾರಿಜಾತದ ದರ್ಶನ ಮಾತ್ರದಿಂದಲೇ ವೃದ್ಧರು ನವಯೌವನ ಭರಿತರಾದರು. ಅದರ ಸುವಾಸನೆಯನ್ನಾಘ್ರಾಣಿಸಿಯೇ ಕುರುಡರು ದೃಷ್ಟಿಶಕ್ತಿ ಹೊಂದಿದರು. ರೋಗಿಗಳು ಆರೋಗ್ಯ ಹೊಂದಿದರು. ವೃಕ್ಷದ ಬಳಿ ಬಂದವರೆಲ್ಲ ಬಗೆ ಬಗೆಯ ದಿವ್ಯ ವಾದ್ಯ ಸಂಗೀತ ಧ್ವನಿಗಳನ್ನಾಲಿಸಿದರು. ಬಯಸಿದ ಸುವಾಸನೆಗಳೆಲ್ಲವನ್ನೂ ಆಘ್ರಾಣಿಸಿ ಆನಂದಿಸಿದರು. ಬಯಸಿದ ಐಶ್ವರ್ಯಗಳನ್ನು ಪಡೆದರು. ಭೂಮಿಯಲ್ಲಿಯೇ ಸ್ವರ್ಗಸುಖ ಅವರಿಗೆ ಲಭಿಸಿತು.

ಕೃಷ್ಣ ಬಯಸಿದಂತೆಲ್ಲ ಆ ವೃಕ್ಷ ಸಣ್ಣಗಿಡವೂ ಆಗುತ್ತಿತ್ತು. ಹೆಮ್ಮರವೂ ಆಗುತ್ತಿತ್ತು. ನಾಲ್ಕು ಯೋಜನ ಉದ್ದಗಲದ ಕೃಷ್ಣನರಮನೆಯನ್ನು ಮಾತ್ರವೇ ಅಲ್ಲದೆ ಎಂಟು ಯೋಜನ ಅಗಲ ಹನ್ನೆರಡು ಯೋಜನ ಉದ್ದದ ಇಡಿ ದ್ವಾರಕಾ ನಗರಿಯನ್ನೆ ಪೂರ್ತಿಯಾಗಿ ನೆರಳಿಂದ ಆಚ್ಛಾದಿಸುವಷ್ಟು ಬೃಹದಾಕಾರ ತಾಳುತ್ತಿತ್ತು. ಹಾಗೇ ಒಮ್ಮೊಮ್ಮೆ ಬೇಕಾದರೆ ಅಂಗೈಯೊಳಗೆ ಹಿಡಿಸುವಂತೆ ಹೆಬ್ಬೆಟ್ಟಿನ ಗಾತ್ರಕ್ಕೂ ಇಳಿಯುತ್ತಿತ್ತು. ಇದರ ನೆರಳಲ್ಲಿ ಕುಳಿತವರಿಗೆ ಪೂರ್ವಜನ್ಮದ ಸ್ಮರಣೆ ಸಹಜವಾಗಿಯೇ ಬರುತ್ತಿತ್ತು. ಹೀಗೆ ಪಾರಿಜಾತ ವೃಕ್ಷದೇವನೂ ಕೃಷ್ಣನಿಗೆ ಅಂದದ ಪೂಜೆಯನ್ನೇ ಮಾಡಿದ.

ಆಹಂಕಾರಿಕ ಪ್ರಾಣ ಅನಿರುದ್ಧ ಮುಂತಾದ ತಾತ್ವಿಕ ದೇವತೆಗಳೂ ಪಾರಿಜಾತಾದಿ ಕರ್ಮಜ ದೇವತೆಗಳೂ ದೇವಾನುಚರರಾದ ಗಂಧರ್ವ, ಕಿನ್ನರ, ಯಕ್ಷ, ರಾಕ್ಷಸ, ಭೂತ ಪ್ರೇತಪಿಶಾಚಾದಿ ಆಜಾನಜ ದೇವತೆಗಳೂ ಸೇರಿದಂತೆ ಒಂಬತ್ತುಕೋಟಿ ದೇವತೆಗಳೂ ಈ ಸಂದರ್ಭದಲ್ಲಿ ಹರಿಗೆ ಅಂದದ ಪೂಜೆ ಸಲ್ಲಿಸಿದರು. ಅವರು ಹರಿಯನ್ನು ಮನುಷ್ಯರಂತೆ ಕೇವಲ ಪ್ರತಿಮೆಯಲ್ಲಿಯೇ ಪೂಜಿಸದೆ, ಮುನಿಗಳಂತೆ ಕೇವಲ ಹೃದಯದಲ್ಲಿಯೂ ಪೂಜಿಸದೆ ಒಳಗೆ ಹೊರಗೆ ಸರ್ವತ್ರ ಪೂಜಿಸುವವರು. ಆದ್ದರಿಂದ 'ನಿಮ್ಮ ನೆನೆವ ಮುನಿ ಹೃದಯದಲಿ ನೆಲಸಿದ' ಎಂದು ಮುಂದಿನ ನುಡಿಯಲ್ಲಿ ಹೇಳುವ ರೀತಿಯ ಮುನಿಗಳ 'ಸಮ್ಮತ ಪೂಜೆ' ಗಿಂತ ದೇವತೆಗಳ ಅಂದದ ಪೂಜೆಯೇ ಶ್ರೇಷ್ಠವೆಂದು ಮೊದಲಿಗೆ ಈ ಅಂದದ ಪೂಜೆಯನ್ನೇ ಈ ನುಡಿಯಲ್ಲಿ ಹೇಳಿದೆ.

**ನಿಮ್ಮ ನೆನೆವ ಮುನಿ ಹೃದಯುದಲಿ ನೆಲಸಿದ**
**ಧರ್ಮ ರಕ್ಷಕನೆನಿಸುವ ।**
**ಸಮ್ಮತವಾಗಿದ್ದ ಪೂಜೆಯ ಕೈಗೊಂಬ ನಿ–**
**ಸ್ಸೀಮ ಮಹಿಮ ಹಸೆಗೆ ಬಾ ॥**

ಶ್ರೀಹರಿ, ನೀನು' ನಿನ್ನನ್ನು ಧ್ಯಾನಿಸುವ ಮುನಿಗಳ ಹೃದಯುದಲ್ಲಿ ಸದಾ ನೆಲೆಸಿರುವಿ ಧರ್ಮರಕ್ಷಕನೆನಿಸಿರುವಿ. ನಿಸ್ಸೀಮಮಹಿಮನೆ, ಮುನಿಗಳು ಮಾಡುವ ಸಮ್ಮತವಾದ ಪೂಜೆಯುನ್ನು ಕೈಗೊಂಬ ನೀನು ನಮ್ಮ ಹಸೆಗೆ ಬಾ

ಇಷ್ಟರವರೆಗೆ 'ದೇವಾಸ್ತತ್ರೋತ್ತಮಾ ಮತಾಃ' ಎಂಬಂತೆ ಉತ್ತಮಾಧಿಕಾರಿಗಳೆನಿಸಿದ ಬ್ರಹ್ಮಾದಿದೇವತೆಗಳ ಭಗವದುಪಾಸನೆಯುನ್ನು ವರ್ಣಿಸಿ ಈಗ ತಾರತಮ್ಯ ಕ್ರಮದಿಂದ 'ಮಧ್ಯಮಾ ಋಷಿಗಂಧರ್ವಾಃ' ಎಂಬಂತೆ ಮಧ್ಯಮಾಧಿಕಾರಿಗಳೆನಿಸಿದ ಋಷಿಗಳ ಉಪಾಸನಾಕ್ರಮವನ್ನು ಈ ನುಡಿಯುಲ್ಲಿ ಹೇಳಿದೆ.

ಮುನಿಗಳದು ಧ್ಯಾನರೂಪ ಉಪಾಸನೆ. ಹರಿಗಿದು ಅವರ ವಿಷಯುದಲ್ಲಿ ಸಮ್ಮತವಾದ ಪೂಜೆ. ಏಕೆಂದರೆ ಜೀವರ ಅನಾದಿಯಾದ ಸ್ವರೂಪಯೋಗ್ಯತೆ ಬೇರೆ ಬೇರೆಯಾಗಿರುವುದರಿಂದ ಅವರ ಪರಮಾತ್ಮ ಸಾಕ್ಷಾತ್ಕಾರ ಸಾಧನಗಳೂ ಬೇರೆ ಬೇರೆಯೆ. ಉದಾ. 'ದೇವಾ ಏವ ಸರ್ವಪ್ರಕಾಶಾಃ' ಎಲ್ಲ ದೇವತೆಗಳೂ ನಾರದಾದಿ ನೂರು ಋಷಿಗಳೂ, ನೂರು ಚಕ್ರವರ್ತಿಗಳೂ ನೂರು ಗಂಧರ್ವರು ಮುಂತಾದವರೂ ಹೃದಯುದೊಳಗೆ ಹೊರಗೂ ಎಲ್ಲೆಡೆ ಬಿಂಬಮೂರ್ತಿಯು ಉಪಾಸನೆ ಮಾಡಿ ಸಾಕ್ಷಾತ್ಕರಿಸಿಕೊಳ್ಳುವರು. ಇವರು ವ್ಯಾಪ್ತ್ಯೋಪಾಸಕರು, ಅಪ್ರತೀಕಾಲಂಬನರು ಇವರಿಗೆ ಧ್ಯಾನ ಅಲ್ಪ. ವಿಷ್ಣುಪ್ರಸಾದಲಬ್ಧ ಪ್ರತಿಭೆಯೆ ಅಧಿಕ. ಬಿಂಬ ದರ್ಶನಕ್ಕೆ ಇದೇ ಮುಖ್ಯಸಾಧನ 'ಋಷಯೋಽಂತಃ ಪ್ರಕಾಶಾಃ' ಋಷಿಗಳು ಶ್ರವಣ, ಪ್ರತಿಭೆಗಳಿಂದ ಬಿಂಬಮೂರ್ತಿಯುನ್ನು ತಿಳಿದು ವಿಶೇಷ ಧ್ಯಾನದಿಂದ ಹೃದಯುದಲ್ಲಿ ಬಿಂಬಸಾಕ್ಷಾತ್ಕಾರ ಪಡೆಯುವರು. ಇವರು ಪ್ರತೀಕಾಲಂಬನರು ಧ್ಯಾನಯೋಗಿಗಳು ಇವರಿಗೆ ಧ್ಯಾನವೆ ಮುಖ್ಯವಾಗಿ ಅಪರೋಕ್ಷಸಾಧನ. ಇದನ್ನು ತಿಳಿಸುವದಕ್ಕೆ 'ನಿಮ್ಮ ನೆನೆವ ಮುನಿಹೃದಯುದಲಿ' ಎಂದಿದೆ. ಕರ್ಮಯೋಗಿಗಳಾದ ಚಕ್ರವರ್ತಿಗಳು ಸ್ವಲ್ಪ ಶ್ರವಣ ಪ್ರತಿಭೆಗಳಿಂದ ಬಿಂಬನನ್ನರಿತು ನೆನೆದು ಭಕ್ತಿಯಿಂದ ಯಾಗಾದಿ ಕರ್ಮಗಳನ್ನು ವಿಶೇಷವಾಗಿ ಮಾಡುವರು. ಯಜ್ಞದಲ್ಲಿ ಹವಿಸ್ಸನ್ನು ಸ್ವೀಕರಿಸಲು ಬರುವ ಬಿಂಬನನ್ನೇ ಸಾಕ್ಷಾತ್ಕರಿಸಿಕೊಳ್ಳುವರು. 'ಮಾನುಷಾ ಬಹಿಃ

ಪ್ರಕಾಶಾ' ಮನುಷ್ಯೋತ್ತಮರಿಗೆ ಅಗ್ನಿ ಪ್ರತಿಮೆಗಳಲ್ಲಿ ಬಿಂಬದರ್ಶನ ಇವರಿಗೆ ಪ್ರತಿಭೆ ಅತ್ಯಲ್ಪ. ಸದಾ ಶ್ರವಣ ಮನನ ನಿದಿಧ್ಯಾಸನಗಳೇ ಬೇಕು.

ವಸ್ತುತಃ ಹೃದಯದಲ್ಲಿ ಬಿಂಬಮೂರ್ತಿಯ ಧ್ಯಾನರೂಪವಾದ ಉಪಾಸನೆ ಮುನಿಗಳ ವಿಷಯದಲ್ಲಿ ಮಾತ್ರವೆ ಅಲ್ಲ, ಎಲ್ಲ ಉಪಾಸಕರ ವಿಷಯದಲ್ಲಿಯೂ ಹರಿಗೆ ಸಮ್ಮತವಾದ ಪೂಜೆಯೆನಿಸುತ್ತದೆ. ಬಾಹ್ಯೋಪಾಸಕರಾದ ಮಾನವರೂ ಕೂಡ ಹೃದಯದಲ್ಲಿ ಸ್ವಲ್ಪವಾದರೂ ಬಿಂಬನ ಧ್ಯಾನ ಮಾಡಲೇಬೇಕು

ಹೃದಿ ಕಿಂಚಿದುಪಾಸ್ಯೈವ ವಿಷ್ಣುಂ ಮುಕ್ತಿಮನುವ್ರಜೇತ್ –ಬೃಹದ್ಭಾಷ್ಯ

ಹೀಗೆ ಮುನಿಗಳು ಹೃದಯದಲ್ಲಿ ಮಾಡುವ ಸರ್ವಸಮ್ಮತವಾದ ಧ್ಯಾನರೂಪವಾದ ಪೂಜೆಯನ್ನು ಕೈಗೊಂಡು ಹರಿ ಒಲಿಯುತ್ತಾನೆ.

ಧ್ಯಾನೋಪಾಸನೆ ಹರಿಗೆ ಸಮ್ಮತವಾಗಬೇಕಾದರೆ ಸಾಧಕನು ಮಾನಸ ವಾಸನಾ ಮಯವಾದ ಅರ್ಘ್ಯಪಾದ್ಯಾದಿ ಷೋಡಶೋಪಚಾರ ವಸ್ತುಗಳಲ್ಲಿ ನಿಯಾಮಕನಾಗಿ ಆಯಾ ವಸ್ತುಗಳ ಆಕಾರ ನಾಮಗಳಿಂದಿರುವ ಹರಿಯ ಜ್ಞಾನಾನಂದಮಯ ರೂಪಗಳನ್ನು ಚಿಂತಿಸಿ ಆ ರೂಪಗಳಿಗೆ ಬಿಂಬರೂಪದೊಡನೆ ನೀರಲ್ಲಿ ನೀರ ಅಲೆಗಳಿಗಿರುವಂತೆ ಅಭೇದವನ್ನು ಚಿಂತಿಸಿ ಆ ವಸ್ತುಗಳನ್ನು ಬಿಂಬನಿಗೂ ಅಧೀನವೆಂದು ಚಿಂತಿಸಬೇಕು.

ಅಥವಾ 'ಸುಲಭ ಪೂಜೆಯ ಮಾಡಿ ಬಲವಿಲ್ಲದವರು' ಎಂದು ಪುರಂದರದಾಸರು ಹೇಳುವ ಸುಲಭಪೂಜೆಯೂ ಸಮ್ಮತ ಪೂಜೆಯೆ. ಬಲವಿಲ್ಲದವರೆಂದರೆ ಹೊರಗೆ ವಿಗ್ರಹಗಳ ಮುಂದೆ ಬೆಟ್ಟದಷ್ಟು ಪದಾರ್ಥಗಳನ್ನಿರಿಸುವ ಐಶ್ವರ್ಯದ ಬಲವಿಲ್ಲದವರು. ದೇಹವನ್ನೆ ವಿಗ್ರಹವೆಂದು ತಿಳಿದು ಅದರಲ್ಲಿ ಪೂಜೆ ಮಾಡುವವರು. ದೇಹವಿರಲಿ, ವಿಗ್ರಹವೇ ಇರಲಿ ಬಾಹ್ಯವಸ್ತುಗಳಲ್ಲಿ ನಿಯಾಮಕವಾದ ಭಗವದ್ರೂಪಗಳಿಗೆ ದೇಹ ಅಥವಾ ವಿಗ್ರಹದಲ್ಲಿರುವ ಭಗವದ್ರೂಪದ ಐಕ್ಯ ಚಿಂತಿಸಬೇಕು. ಇಂಥ ಬಾಹ್ಯಪೂಜೆ ಮಾಡುವುದಕ್ಕೆ ಮುನ್ನ ಮಾನಸಪೂಜೆಯನ್ನೂ ಸ್ವಲ್ಪ ಮಾಡಿರಲೇಬೇಕು. ಬಾಹ್ಯವಸ್ತು ಸಿಗದಿದ್ದಾಗಲಂತೂ ಮಾನಸಪೂಜೆಯನ್ನಾದರೂ ಅವಶ್ಯ ಮಾಡಲೇಬೇಕು ಹೀಗೆ ಮಾನಸಪೂಜೆ ಹರಿಗೆ ಅತ್ಯಂತ ಸಮ್ಮತ.

ಹೊರಗೆ 'ಒಂದು ದಳ ಶ್ರೀತುಳಸಿ ಬಿಂದು ಗಂಗೋದಕವು' ಸಿಕ್ಕಿದರೂ ಸಾಕು ಮನಸ್ಸಿನಲ್ಲಿ ಮಾತ್ರ ನಿಃಸಂಕೋಚವಾಗಿ ಸಕಲ ವೈಭವಗಳನ್ನೂ ಹರಿಗೆ ಅರ್ಪಿಸಬೇಕು ಉದಾಹರಣೆಗೆ ನೈವೇದ್ಯ ಸಮರ್ಪಣೆ–

ಸೌವರ್ಣೈಃ ಸ್ಥಾಲಿವರ್ಯೈಃ ಮಣಿಗಣ ಖಚಿತೈ-
ರ್ಗೋಘೃತಾಕ್ತಾನ್ ಸುಪಕ್ವಾನ್
ಭಕ್ಷ್ಯಾನ್ ಭೋಜ್ಯಾಂಶ್ಚ ಲೇಹ್ಯಾನ್ ಅಪಿ ಪರಮ ಮಹ-
ಚ್ಚೋಷ್ಯಮನ್ನಂ ನಿಧಾಯ ।
ನಾನಾಶಾಕೈರುಪೇತಂ ದಧಿಮಧು ಸುಘೃತಂ
ಕ್ಷೀರಪಾನೀಯಯುಕ್ತಂ
ತಾಂಬೂಲಂ ಚಾಪಿ ವಿಷ್ಣೋಃ ಪ್ರತಿದಿವಸಮಹಂ
ಮಾನಸೇ ಚಿಂತಯಾಮಿ ॥

ಬಿಂದು ಗಂಗೋದಕವನ್ನಾದರೂ ದೇವರ ಮುಂದಿಟ್ಟು ನಾವು ಹೀಗೆ ಮನಸ್ಸಿನಲ್ಲಿ ಚಿಂತಿಸಬೇಕು– 'ಮಣಿಗಣ ಖಚಿತ ಸ್ವರ್ಣಪಾತ್ರೆಗಳಲ್ಲಿ ಪಾಕಮಾಡಿದ ಗೋಘೃತದಿಂದ ಸಿಕ್ತವಾದ ಭಕ್ಷ್ಯಭೋಜ್ಯ ಲೇಹ್ಯ ಚೋಷ್ಯವೆಂಬ ಚತುರ್ವಿಧ ಅನ್ನ, ಶಾಕ, ದಧಿ, ಮಧು, ಘೃತ, ಕ್ಷೀರ, ಪಾನೀಯ, ತಾಂಬೂಲಗಳ ಮೇಲೆ ಕಾಮಧೇನು ಅಮೃತವನ್ನು ಸುರಿಸುತ್ತಾಳೆ ಸುದರ್ಶನ ಚಕ್ರ ಸುತ್ತಲೂ ತಿರುಗಿ ಅನ್ನಾದಿಗಳನ್ನು ರಕ್ಷಿಸುತ್ತದೆ. ಪಾಂಚಜನ್ಯ ಶಂಖ ಪವಿತ್ರಗೊಳಿಸುತ್ತದೆ. ಮೇರುಪರ್ವತ ವಿಪುಲವಾಗಿಸುತ್ತದೆ, ಅಕ್ಷಯಗೊಳಿಸುತ್ತದೆ. ಚಂದ್ರನು ತನ್ನ ಕಿರಣಗಳಿಂದ ತಂಪಾಗಿಸುತ್ತಾನೆ. ಕದಲಿ ಕಪಿತ್ಥ ಜಂಬೀರಾದಿ ನಾನಾ ಫಲಭೂಷಿತವಾದ ಚತುಃಸ್ತಂಭೋಪೇತ ರತ್ನಖಚಿತ ಸ್ವರ್ಣಮಂಟಪದೊಳಗೆ ಬಾಳೆಲೆಗಳನ್ನು ಹಾಸಿರುತ್ತದೆ. ಹರಿಯೂ ಅವನ ಮುಂದೆ ಕೇಶವಾದಿ ಚತುರ್ವಿಂಶತಿ ರೂಪಯುಕ್ತರಾದ ಇಪ್ಪತ್ತನಾಲ್ಕು ಮಂದಿ ಶ್ರೋತ್ರಿಯ ಬ್ರಾಹ್ಮಣರೂ ಕುಳಿತಿರುತ್ತಾರೆ ಬಳಿಯಲ್ಲಿ ಬಂಗಾರದ ಕಂಬಗಳಲ್ಲಿ ದೀಪ ಜ್ವಲಿಸುತ್ತದೆ. ಮಹಾಲಕ್ಷ್ಮಿ ಮುಖ್ಯಪ್ರಾಣಾದಿಗಳು ಕೈಯಿಂದ ಬಡಿಸುತ್ತಾರೆ. ಭಗವಂತನಿಗೆ ಷಡ್ರಸಭೋಜನ ನಡೆಯುತ್ತದೆ.'

ಬಾಹ್ಯದಲ್ಲಿ ಇವೆಲ್ಲವನ್ನೂ ಪ್ರತಿದಿನ ಪ್ರತ್ಯಕ್ಷವಾಗಿ ಮಾಡಲು ಯಾರಿಗೆ ತಾನೆ ಸಾಧ್ಯವಿದೆ? ಹೃದಯದೊಳಗಿನ ಅವಕಾಶವನ್ನು ಉಪನಿಷತ್ತು 'ದಹರಾಕಾಶ' ಅಂದರೆ ಅಲ್ಪ ಪ್ರದೇಶವೆಂದು ಕರೆದಿದೆ. ಆ ಅಲ್ಪಪ್ರದೇಶದಲ್ಲಿ ಇಷ್ಟೆಲ್ಲ ವೈಭವದ ನೈವೇದ್ಯ ಸಮರ್ಪಣೆ ನಡೆಯುವುದು ಆ 'ನಿಃಸೀಮ ಮಹಿಮ'ನಾದ ಹರಿಯ ಅನುಗ್ರಹದಿಂದ ಮಾತ್ರ ಸಾಧ್ಯ. ಇಲ್ಲದಿದ್ದರೆ,

'ಸ ಭೂಮೀಂ ವಿಶ್ವತೋ ವೃತ್ವಾ ಅತ್ಯತಿಷ್ಠತ್ ದಶಾಂಗುಲಂ'

ಎಂಬಂತೆ ಬ್ರಹ್ಮಾಂಡದ ಆಚೆ ಅವ್ಯಾಕೃತಾಕಾಶದಲ್ಲಿಯೂ ಎಲ್ಲೆಡೆ ಬಿಡದೆ ವ್ಯಾಪಿಸಿರುವ ಬೃಹತ್ಕಾಯದ ಹರಿ ಸಾಧಕನ ಹೃದಯದೊಳಗೆ ಸಣ್ಣಪ್ರದೇಶದಲ್ಲಿ

ಸಣ್ಣ ರೂಪದಿಂದ ಅದರಲ್ಲೂ ಸಾಧಕನು ಇಷ್ಟಪಡುವ ರೂಪದಿಂದ ನೆಲೆಸುವುದು ಸಾಧ್ಯವೇ ? ಪ್ರಳಯಕಾಲದಲ್ಲಿ ಬ್ರಹ್ಮಾಂಡವನ್ನೇ ಅನಾಯಾಸದಿಂದ ನುಂಗಿ ತೇಗುವ ಹರಿ ಸಾಧಕನು ಮನಸ್ಸಿನಲ್ಲಿ ಸಮರ್ಪಿಸುವ, ಮನಸ್ಸಿಗಿಂತಲೂ ಸೂಕ್ಷ್ಮವಾದ ಮಾನಸ ಪದಾರ್ಥಗಳನ್ನುಂಡು ತೃಪ್ತಿಪಡುವುದು ಸಾಧ್ಯವೇ ? ನಿಃಸೀಮ ಮಹಿಮನಾದ್ದರಿಂದ ಇದು ಸಾಧ್ಯವಾಗಿದೆ.

ಸಾಧಕನ ಧರ್ಮರಕ್ಷಣೆಗಾಗಿಯೆ ಹರಿ ಹೀಗೆ ಮಾಡುತ್ತಾನೆ. ಇಲ್ಲದಿದ್ದರೆ ಪೂರ್ಣಾನಂದನಾದ್ದರಿಂದ ಅವನೇನೂ ಮಾಡಬೇಕಾಗಿರಲಿಲ್ಲ. ಹೃದಯದೊಳಗೆ ಹರಿಯನ್ನಾರಾಧಿಸುವುದು, ಮಾನಸ ಪದಾರ್ಥಗಳನ್ನೇ ಅವನಿಗರ್ಪಿಸುವುದು ದರಿದ್ರರಾಗಿ ವಿರಕ್ತಜೀವನ ನಡೆಸುವ ಮುನಿಗಳಿಗೆ ಧರ್ಮ. ಆ ಆರಾಧನೆಯನ್ನೂ ಸ್ವೀಕರಿಸಿ ತೃಪ್ತನಾಗುವುದು ಮುನಿಧರ್ಮರಕ್ಷಕನಾದ ಮುನಿಜನಪ್ರಿಯನಾದ ಹರಿಗೆ ಧರ್ಮ ಭಕ್ತ ಭಗವಂತನ "ಎತ್ತರಕ್ಕೇರಲಾರ ತಾನೇ ? ಆದ್ದರಿಂದ ಭಗವಂತನೆ ಭಕ್ತನ ಕುಬ್ಜತೆಗಿಳಿಯುತ್ತಾನೆ. ಹೀಗೆ ಭಕ್ತರ ಧರ್ಮಗಳಿಗೆ ರಕ್ಷಕನಾಗಿ ಮುನಿಗಳ ಹೃದಯದಲ್ಲಿ ನೆಲೆಸಿದ ಹರಿಯೆ ಹಸೆಗೆ ಬಾ.

ಹೀಗೆ ತಂದೆತಾಯಿಗಳಾದ ನಿಮ್ಮ ಕಲ್ಯಾಣೋತ್ಸವ ಮಾಡುವುದೂ ಮಕ್ಕಳಾದ ನಮ್ಮ ಧರ್ಮ. ಅದನ್ನು ಕೈಗೊಂಡು ಸುಪ್ರಿತನಾಗುವುದೂ ನಿನ್ನ ಧರ್ಮ ಈ ಎರಡು ಧರ್ಮಗಳಿಗೂ ರಕ್ಷಕನಾಗು. ನಮ್ಮ ಹಸೆಗೆ ಬಾ ಎಂದೂ ಕರೆಯುತ್ತಾರೆ, ದೇವತಾಸ್ತ್ರೀಯರು

— ೯೦ —

**ಮುತ್ತಿನ ಸತ್ತಿಗೆ ನವರತ್ನದ ಚಾಮರ**
**ಸುತ್ತ ನಲಿವ ಸುರಸ್ತ್ರೀಯರ ।**
**ನೃತ್ಯವ ನೋಡುತ್ತ ಚಿತ್ರವಾದ್ಯಂಗಳ ಸಂ—**
**ಪತ್ತಿನ ಹರಿಯೆ ಹಸೆಗೆ ಬಾ ॥**

ಮುತ್ತಿನ ಮಾಲೆಗಳಿಂದ ಅಲಂಕೃತವಾದ ಶ್ವೇತಚ್ಛತ್ರ, ನವರತ್ನ ಖಚಿತವಾದ ಹಿಡಿಯುಳ್ಳ ಬಿಳಿದಾದ ಚಾಮರಗಳು ಮತ್ತು ಸುತ್ತ ನಲಿವ ದೇವತಾಸ್ತ್ರೀಯರ ನೃತ್ಯವನ್ನು ನೋಡುತ್ತ ನಾನಾ ಬಗೆಯ ವಾದ್ಯ ಧ್ವನಿಗಳ ಸಂಪತ್ತಿನಿಂದ ಮೆರೆವ ಹರಿಯೆ ಹಸೆಗೆ ಬಾ.

ಛತ್ರಚಾಮರಗಳು ಕೇವಲ ಬಿಸಿಲು ತಾಪ ಪರಿಹಾರಕ್ಕಲ್ಲ, ವೈಭವ ಪ್ರದರ್ಶನಕ್ಕೂ ಅಲ್ಲ. ಅವು ಮಂಗಳಕರ. ಸ್ವತಃ ವೈಕುಂಠಲೋಕ ಸ್ವರೂಪಳಾಗಿದ್ದು ವೈಕುಂಠದಲ್ಲಿ ಛತ್ರಚಾಮರ ವ್ಯಜನ ಪರ್ಯಂಕರೂಪದಿಂದ ಹರಿಯ ನಿತ್ಯಸೇವೆ

ಮಾಡುವ ಮಹಾಲಕ್ಷ್ಮಿಯೆ ಶ್ವೇತಚ್ಛತ್ರದ ಅಭಿಮಾನಿನಿ. ಧರ್ಮರೂಪಿ ವಾಯುದೇವ ಚಾಮರಕ್ಕೆ ಅಭಿಮಾನಿ. ಆದ್ದರಿಂದ ಇವು ಮುಖ್ಯವಾಗಿ ಹರಿಗೇ ಒಪ್ಪುವ ಚಿಹ್ನೆಗಳು. ಹರಿಯು ಸನ್ನಿಧಾನ ಪಾತ್ರರು ರಾಜರು– 'ನಾವಿಷ್ಣುಃ ಪೃಥಿವೀಪತಿಃ' ಆದ್ದರಿಂದ ರಾಜರಿಗೆ ಅವು ಚಿಹ್ನೆಗಳೆನಿಸಿವೆ

'ನೃತ್ಯವ ನೋಡುವ' ಎಂದು ಮಾತ್ರವೆ ಹೇಳದೆ 'ಸುರಸ್ತ್ರೀಯರ' ಎಂದು ಸೇರಿಸಿರುವುದು ಇಲ್ಲಿಯವರೆಗೆ ಹೇಳಿದ ದೇವತಾ ತಾರತಮ್ಯವನ್ನು ಈ ನುಡಿಯಲ್ಲಿಯೂ ಮುಂದುವರಿಸಿದೆ ಎಂದು ತಿಳಿಸುವುದಕ್ಕಾಗಿ ಸುರಸ್ತ್ರೀಯರೆಂದರೆ ಇಲ್ಲಿ ಎಲ್ಲ ದೇವತಾಸ್ತ್ರೀಯರಲ್ಲ. ಗಂಧರ್ವ ಕಿನ್ನರಾದಿ ಸ್ತ್ರೀಯರನ್ನು ಮಾತ್ರ ಹೇಳುವ ಅಭಿಪ್ರಾಯವಿದೆ. ಏಕೆಂದರೆ ಹಿಂದಿನ ನುಡಿಯಲ್ಲಿ ಋಷಿಗಳು ಮಾಡುವ ಭಗವದುಪಾಸನೆಯ ಬಗ್ಗೆ ಹೇಳಿದ ಬಳಿಕ ಈಗ ತಾರತಮ್ಯ ಕ್ರಮದಲ್ಲಿ ಮುಂದೆ ಬರುವ ಗಂಧರ್ವಾದಿಗಳ ಬಗ್ಗೆಯೇ ಈ ನುಡಿಯಲ್ಲಿ ಹೇಳುವ ಅಭಿಪ್ರಾಯ ಕಾಣುತ್ತದೆ.

ನೃತ್ತ ಗಾನಾದಿ ಕರ್ತಾರೋ ವಾಹನಾದಿಕೃತಸ್ತಥಾ ।
ಸಿದ್ಧಸಿದ್ಧೇತಿ ವಕ್ತಾರಶ್ಚಾರಾಶ್ಚೈಷಾಂ ಪೃಥಕ್ ಪೃಥಕ್ ಸೇವಾಕರಾಃ ॥

— ಭಾಗ.ತಾ.

ಎಂದು ಹೇಳುವಂತೆ ನೃತ್ಯಗಾನಾದಿ ಸೇವೆ ಮಾಡುವವರು ಗಂಧರ್ವ ಕಿನ್ನರಾದಿಗಳು ಛತ್ರಚಾಮರಾದಿ ಸೇವೆ ಮಾಡುವವರು ಯಕ್ಷರಾಕ್ಷಸ ಅಸುರಾದಿಗಳು. ಹೇಳಿದ ಎಲ್ಲ ಕೆಲಸವನ್ನು ಸಿದ್ಧವಾಯಿತು ಸಿದ್ಧವಾಯಿತೆಂದು ಹೇಳುತ್ತ ಬೇಗನೆ ಮಾಡುವವರು ಸಿದ್ಧರು. ಬೇರೆ ಬೇರೆ ರೀತಿಯಿಂದ ಸೇವೆ ಮಾಡುವವರು ಭೂತ ಪ್ರೇತ ಪಿಶಾಚ ಬೇತಾಳ ಮುಂತಾದವರು. ಉದಾಹರಣೆಗೆ ನೋದೆಯಲ್ಲಿ ತ್ರಿವಿಕ್ರಮ ರಥವನ್ನು ಬದರಿಯಿಂದ ಹೊತ್ತು ತಂದಿರಿಸಿದವರು ಭೂತರಾಜರು. ಗಂಧರ್ವಾದಿಗಳಲ್ಲೆಲ್ಲ ಕೆಲವರು ಕರ್ಮಜ ದೇವತೆಗಳಿಗೂ ಕೆಲವರು ಆಜಾನಜ ದೇವತೆಗಳಿಗೂ ಸಮರಾಗಿದ್ದು ಋಷಿಗಳಿಗಿಂತ ಉತ್ತಮರಾಗಿದ್ದಾರೆ, ದೇವತೆಗಳೆನಿಸಿದ್ದಾರೆ ಉಳಿದೆಲ್ಲರೂ ಕೇವಲ ಉಪದೇವತೆಗಳು. ಆಜಾನಜ ದೇವತೆಗಳು ತಾರತಮ್ಯದಲ್ಲಿ ಇಪ್ಪತ್ತೇಳನೆ ಕಕ್ಷೆಯವರು. ಋಷಿಗಳು ಇಪ್ಪತ್ತೆಂಟನೆಯವರು. ಪಿತೃಗಳು ಇಪ್ಪತ್ತೊಂಬತ್ತನೆಯವರು. ಮೂವತ್ತು ಮೂವತ್ತೊಂದನೆ ಕಕ್ಷೆಗಳಲ್ಲಿ ಗಂಧರ್ವಾದಿಗಳು. ಇವರನ್ನು 'ಉಪದೇವತೆ'ಗಳೆಂದು ವಾದಿರಾಜರು ನಿರ್ದೇಶಿಸಿದ್ದಾರೆ–

ದೇವ್ಯೋಪದೇವಾಃ ಪಿತರೋ ಯೋಗೀಂದ್ರಾಶ್ಚಕ್ರವರ್ತಿನಃ ।
ಶ್ರೀವಿಷ್ಣುಪಾರ್ಷದಾಃ ಸರ್ವೇಽಪ್ಯಾಯಾಂತೂತ್ಸವರಕ್ಷಕಾಃ ॥

'ದೇವತೆಗಳು, ಉಪದೇವತೆಗಳು, ಪಿತೃಗಳು, ಋಷಿಗಳು, ಚಕ್ರವರ್ತಿಗಳು ಹೀಗೆ ವಿಷ್ಣುಸೇವಕರಾದ ಎಲ್ಲರೂ ಬಂದು ಶ್ರೀಹರಿಯ ಉತ್ಸವವನ್ನು ನಿರ್ವಿಘ್ನವಾಗಿ ನಡೆಸಿಕೊಡಲಿ'. ಇಲ್ಲಿ ಉಪದೇವತೆಗಳೆಂದು ದೇವಭೃತ್ಯರಾದ ಗಂಧರ್ವಾದಿಗಳನ್ನೇ ನಿರ್ದೇಶಿಸಲಾಗಿದೆ. ಯಕ್ಷ ರಾಕ್ಷಸ ಗುಹ್ಯಕಾದಿಗಳು ಕುಬೇರನ ಭೃತ್ಯರು. ಭೂತ ಪ್ರೇತ ಪಿಶಾಚ ಬೇತಾಳಾದಿಗಳು ರುದ್ರಭೃತ್ಯರು. ಪಿತೃಗಳು ಯಮಭೃತ್ಯರು. ನಾಗರು ವರುಣ ಭೃತ್ಯರು ಹೀಗೆ ಈ ಉಪದೇವತೆಗಳನ್ನೇ ಈ ನುಡಿಯಲ್ಲಿ ಪ್ರಸ್ತಾಪಿಸಿದೆ.

ಸುರಸ್ತ್ರೀಯರೆಂದು ಅಪ್ಸರ ಸ್ತ್ರೀಯರನ್ನು ಗ್ರಹಿಸಿದರೆ ಅಸಂಗತವಾಗುತ್ತದೆ ಅವರೆಲ್ಲ ವ್ಯಾಪ್ಯೋಪಾಸಕರು. ಆಜಾನಜ ದೇವತೆಗಳಿಂತ ಸ್ವಲ್ಪ ಕಡಿಮೆಯುವರಾದರೂ ಪ್ರತೀಕಾಲಂಬನರಾದ ಮುನಿಗಳಿಗಿಂತ ಶ್ರೇಷ್ಠರು.

ಅಪ್ಸರಾಸು ಚ ಯಾ ಮೇಧಾ ಗಂಧರ್ವೇಷು ಚ ಯನ್ಮನಃ ।
ದೈವೀ ಮೇಧಾ ಸರಸ್ವತೀ ಸಾ ಮಾಂ ಮೇಧಾ
ಸುರಭಿರ್ಜುಷತಾಂ ಸ್ವಾಹಾ ॥

'ಅಪ್ಸರೆಯರಲ್ಲಿ ಗಂಧರ್ವರಲ್ಲಿ ದೇವತೆಗಳಲ್ಲಿ ಇರುವ ವಿದ್ಯೆ ಮೇಧಾಶಕ್ತಿಗಳು ನನಗೂ ಲಭಿಸಲಿ' 'ಎಂದು ಉಪನಿಷತ್ತಿನ ಋಷಿವಾಣಿ ಹೇಳಿದೆ.

ಛತ್ರಚಾಮರ ನೃತ್ಯವಾದ್ಯ ಸಂಪತ್ತನ್ನು ಈ ನುಡಿಯಲ್ಲಿ ವರ್ಣಿಸಿದುದು ಹೀಗೆ ದೇವತಾ ತಾರತಮ್ಯದ ಕೊನೆಯ ಕಕ್ಷೆಯನ್ನು ಹೇಳುವ ಅಭಿಪ್ರಾಯದಿಂದ ಎಂದು ಗ್ರಹಿಸುವುದು ಯುಕ್ತವೆ. ಇನ್ನೊಂದು ರೀತಿಯಲ್ಲಿಯೂ ಈ ನುಡಿ ಅರ್ಥಗರ್ಭಿತವಾಗಿ ಕಾಣುತ್ತದೆ– ನಾವು ದೇವಪೂಜೆ ಮಾಡುವಾಗ ಎಲ್ಲ ಷೋಡಶೋಪಚಾರಗಳನ್ನು ಸಲ್ಲಿಸಿದ ಬಳಿಕ ಛತ್ರಚಾಮರ ನೃತ್ಯವಾದ್ಯಾದಿ ರಾಜೋಪಚಾರಗಳನ್ನು ಸಲ್ಲಿಸಿಯೆ ಪೂಜೆಯನ್ನು ಮುಗಿಸುತ್ತೇವೆ. ಹಾಗೆಯೇ ಇಲ್ಲಿ ಬ್ರಹ್ಮಾದಿ ದೇವತೆಗಳು ಮಾಡುವ ಭಗವದಾರಾಧನೆಯ ಕೊನೆಯಲ್ಲಿ ಈಗ ಛತ್ರಚಾಮರಾದಿ ಸೇವೆಯ ವರ್ಣನೆ ಬಂದಿದೆ. 'ನೃತ್ಯವ ನೋಡುತ' ಎಂದಿಷ್ಟೇ ಹೇಳದೆ 'ಸುರಸ್ತ್ರೀಯರ ನೃತ್ಯ'ವೆಂದಿರುವುದು ಗಂಧರ್ವಾದಿಗಳು ಮಾಡುವ ನೃತ್ಯವಾದ್ಯಾದಿ ಸೇವೆಯನ್ನೇ ನಾವು ಹರಿಗೆ ಸಮರ್ಪಿಸಬೇಕೆನ್ನುವುದಕ್ಕಾಗಿ. ಇದಕ್ಕೆ ಕಾರಣವಿಷ್ಟೆ. ಗಂಧರ್ವಾದಿಗಳ ಕರ್ತವ್ಯವೇ ನೃತ್ಯಗಾನಾದಿ ರೂಪದಿಂದ ಹರಿಸೇವೆ ಮಾಡುವುದು. ನಾವು ನೃತ್ಯಗಾನಾದಿಗಳನ್ನು ಮಾಡಬೇಕೆಂದರೆ ನಮಗೆ ಅವರು

ಗುರುಗಳು. ಹಿಂದೆ 'ನಿಮ್ಮಣ್ಣನ ಮನೆಯ ಸುಧರ್ಮಸಭೆಯಲ್ಲಿ ಉಮೆಯರಸ ನಮಿಸಿದ' ಎನ್ನುವಾಗ ದೇವೇಂದ್ರ ಶಿವನ ಕೈಯಿಂದ ಹರಿಪೂಜೆ ಮಾಡಿಸಿದನೆಂದು ಅಭಿಪ್ರಾಯವಿತ್ತು. ಹಾಗೆಯೇ ಇಲ್ಲಿಯೂ ನಾವು ಗಂಧರ್ವಾದಿಗಳ ಕೈಯಿಂದಲೇ ಹರಿಗೆ ನೃತ್ಯಗಾನಾದಿ ಸೇವೆ ಸಲ್ಲಿಸಬೇಕು. ಷೋಡಶೋಪಚಾರವನ್ನೂ ಹಾಗೆಯೇ ಲಕ್ಷ್ಮೀ ಬ್ರಹ್ಮಾದಿಗಳ ಕೈಯಿಂದಲೆ ಅರ್ಪಿಸಬೇಕು. ಉದಾ. ಲಕ್ಷ್ಮೀ ಹಸ್ತದಿಂದ ಅರ್ಘ್ಯ, ಸರಸ್ವತೀ ಹಸ್ತದಿಂದ ಪಾದ್ಯ, ರತಿ ಹಸ್ತದಿಂದ ಆಚಮನ, ಬ್ರಹ್ಮಹಸ್ತದಿಂದ ಮಧುಪರ್ಕ ಇತ್ಯಾದಿ

ಗಂಧರ್ವರು ಅಪ್ಸರೆಯರು ಮೊದಲಾದವರ ನೃತ್ಯಗಾನಾದಿ ಸಂಪತ್ತು ದೇವತೆಗಳಿಗೆ ಇಂದ್ರ ಯಮ ವರುಣ ರುದ್ರ ಮೊದಲಾದವರಿಗೆ ಇರುತ್ತದೆ ಆದರೆ ಇದು ಅವರ ಮೂಲರೂಪದಲ್ಲಿ ಹೊರತು ಅವತಾರ ರೂಪಗಳಲ್ಲಿ ಇರುವುದಿಲ್ಲ. ಉದಾ. ಇಂದ್ರನು ಅರ್ಜುನನಾಗಿ ಹುಟ್ಟಿದಾಗ, ಶಿವನು ಅಶ್ವತ್ಥಾಮನಾಗಿ ಹುಟ್ಟಿದಾಗ ಗಂಧರ್ವಾದಿಗಳ ಸೇವೆ ಇಲ್ಲ. ಆದರೆ ಶ್ರೀಹರಿಗೆ ಅವತಾರದಲ್ಲಿಯೂ ಅದು ಕಂಡುಬರುವುದು ವಿಶೇಷ ನರಸಿಂಹನಿಗೆ ಕಿನ್ನರರು 'ವಯಮೀಶ ಕಿನ್ನರಗಣಾಸ್ತವಾನುಗಾಃ' 'ನಾವು ಕಿನ್ನರರೆಲ್ಲ ನಿನ್ನ ಸೇವಕರು' ಎನ್ನುತ್ತಾರೆ, ಭಾಗವತದಲ್ಲಿ ಹಂಸಡಿಭಿಕರ ದೂತನಾಗಿ ಜನಾರ್ದನನೆಂಬ ವಿಪ್ರನು ದ್ವಾರಕೆಯಲ್ಲಿ ಕೃಷ್ಣನನ್ನು ಕಾಣಲು ಬಂದಾಗ ಗಂಧರ್ವ ಅಪ್ಸರೆಯರು ಕೃಷ್ಣನನ್ನು ನೃತ್ಯಗಾನಾದಿಗಳಿಂದ ಸೇವಿಸುತ್ತಿದ್ದರೆಂದು ಹರಿವಂಶ ಹೇಳುತ್ತದೆ. ಆದ್ದರಿಂದ ಶ್ರೀಹರಿಗೆ ಅವತಾರಗಳಲ್ಲಿಯೂ ಗಂಧರ್ವಾದಿಗಳ ಸೇವೆ ಸದಾ ಇದೆ. ಇಂದ್ರಾದಿ ದೇವತೆಗಳಿಗೆ ಮೂಲರೂಪದಲ್ಲಿ ಮಾತ್ರ, ಅದೂ ಅವರು ಅಧಿಕಾರದಲ್ಲಿದ್ದಾಗ ಮಾತ್ರ. ಅಸುರರ ದಾಳಿಯಿಂದ ಅವರು ತಲೆ ಮರೆಸಿಕೊಂಡಾಗ ಎಲ್ಲ ವೈಭವಗಳೂ ಇಲ್ಲವಾಗುತ್ತವೆ ಶ್ರೀಹರಿಗೆ ಅಧಿಕಾರ ಚ್ಯುತಿ ಎಂಬುದೇ ಇಲ್ಲ

ಬ್ರಹ್ಮಾಂಡಲಯ ಕಾಲದಲ್ಲಿ ಗಂಧರ್ವಾದಿಗಳೆ ಇಲ್ಲದಿದ್ದ ಕಾಲದಲ್ಲಿ ಮಹಾಲಕ್ಷ್ಮಿಯೇ ಸ್ವತಃ 'ಸುತ್ತ ನಲಿವ ಸುರಸ್ತ್ರೀ'ಯರ ರೂಪ ತಳೆದು ನೃತ್ಯಗಾನಾದಿಗಳನ್ನೂ ಛತ್ರಚಾಮರಾದಿಗಳನ್ನೂ ಹರಿಗೆ ಅರ್ಪಿಸುತ್ತಾಳೆ ಎಂದು ವೈಕುಂಠವರ್ಣನೆಯಲ್ಲಿ ವಾದಿರಾಜರು ಹೇಳಿದ್ದಾರೆ. ಆದ್ದರಿಂದ ಸುರಸ್ತ್ರೀಯರ ಎಂಬ ಶಬ್ದದಿಂದ ಮಹಾಲಕ್ಷ್ಮಿ ರೂಪಗಳನ್ನೂ ಇಟ್ಟುಕೊಳ್ಳುವುದೂ ಉಚಿತ.

ಹೀಗೆ ಛತ್ರಚಾಮರಾದಿ ಸಂಪತ್ತಿಗೆ ಶಾಶ್ವತ ಪ್ರಭುವೆನಿಸಿದ ಹರಿಯೆ ಹಸೆಗೆ ಬಾ ಎಂದು ಹಾಡುತ್ತ ದೇವತಾಸ್ತ್ರೀಯರು ತಮ್ಮ ಹಸೆಗೆ ಕರೆವ ಹಾಡನ್ನು ಇಲ್ಲಿಗೆ ಮುಗಿಸುತ್ತಿದ್ದಾರೆ.

**ಎನಲು ನಗುತ ಬಂದು ಹಸೆಯ ಮೇಲೆ**
**ವನಿತೆ ಲಕ್ಷುಮಿಯೊಡಗೂಡಿ ।**
**ಅನಂತ ವೈಭವದಿ ಕುಳಿತ ಕೃಷ್ಣನ ನಾಲ್ಕು**
**ದಿನದುತ್ಸವವ ನಡೆಸಿದರು ॥**

ಮುತ್ತೈದೆಯರು ಶ್ರೀಹರಿಯನ್ನು ಹೊಗಳಿ ಹಾಡಿ ಹಸೆಗೆ ಕರೆದಾಗ ಆತ ನಗುತ್ತ ವನಿತೆ ಲಕ್ಷ್ಮಿಯೊಡಗೂಡಿ ಬಂದು ಅನಂತ ವೈಭವಗಳ ನಡುವೆ ಹಸೆಯ ಮೇಲೆ ಕುಳಿತ ಬ್ರಹ್ಮಾದಿ ದೇವತೆಗಳು ಮುಂದೆ ಶ್ರೀಕೃಷ್ಣನ ನಾಲ್ಕುದಿನಗಳ ಕಲ್ಯಾಣೋತ್ಸವವನ್ನು ನಡೆಸಿದರು

ಮುತ್ತೈದೆಯರು ಹಾಡಿದಾಗ ಹರಿ ನಗುತ್ತ ಬಂದನಂತೆ ಈ ನಗು ತುಂಬ ಅರ್ಥಗರ್ಭಿತ. ಹರಿ ಗಾನಲೋಲ ಸ್ತೋತ್ರಪ್ರಿಯ. ಸ್ತ್ರೀಯರೂ ಸುಲಭವಾಗಿ ಅವನನ್ನು ಹಾಡಿ ಒಲಿಸಿಕೊಳ್ಳಬಹುದೆಂಬುದನ್ನು ಇದು ತೋರಿಸುತ್ತದೆ

ಅಥವಾ ಹರಿ ಹಾಡು ಕೇಳಿದ್ದೂ ನಿಜ, ನಗುತ್ತ ಬಂದುದೂ ನಿಜ. ಆದರೆ ಹಾಡು ಕೇಳಿದ್ದರಿಂದಲೇ ನಕ್ಕನೆನ್ನುವಂತಿಲ್ಲ. ಸದಾ ಸ್ವಾನಂದಾನುಭ ಮಗ್ನನಾಗಿ ನಗುತ್ತಿರುತ್ತಾನೆ ನಾವೇನಾದರೂ ಸದಾ ನಗಲು ತೊಡಗಿದರೆ ಹುಚ್ಚು ಎಂದಾಗುತ್ತದೆ. ನಮಗೆ ಆನಂದೋದ್ರೇಕ ಎಂದಾದರೊಮ್ಮೆ ನಗುವುದೂ ಎಂದಾದರೊಮ್ಮೆ ಸದಾ ಅಲ್ಲ. ಹರಿಗೆ ಮಾತ್ರ ಹೀಗಿಲ್ಲ. ಅವನಿಗೆ ಸದಾ ಆನಂದದೋದ್ರೇಕ ಸದಾ ನಗು. ಅದು ಅವನ ಅಸಾಧಾನಣ ಸ್ವಭಾವ. ಇದನ್ನು ತಿಳಿದು ಸದಾ ಉಪಾಸನೆ ಮಾಡಿದರೆ ನಮಗೆ ಮೋಕ್ಷಾನಂದ ಲಾಭ. ದ್ವಾದಶಸ್ತೋತ್ರ ಹೀಗೇ ಹೇಳುತ್ತಿದೆ–

ಪೂರ್ಣಾನನ್ಯ ಸುಖೋದ್ಭಾಸಿ ಮಂದಸ್ಮಿತಮಧೀಶಿತುಃ ।
ಗೋವಿಂದಸ್ಯ ಸದಾ ಚಿಂತ್ಯಂ ನಿತ್ಯಾನಂದಪದಪ್ರದಂ ॥

ಯಾವುದೇ ಸತ್ಕಾರ್ಯದ ಪ್ರಾರಂಭದಲ್ಲಿ ಪ್ರಸನ್ನವದನನಾದ ಹರಿಯನ್ನೇ ಧ್ಯಾನಿಸಬೇಕು–

ಪ್ರಸನ್ನವದನಂ ಧ್ಯಾಯೇತ್ ಸರ್ವವಿಘ್ನೋಪಶಾಂತಯೇ ॥

ನಾಲ್ಕು ದಿನಗಳ ಕಲ್ಯಾಣೋತ್ಸವವನ್ನು ನಿರ್ವಿಘ್ನವಾಗಿ ಬ್ರಹ್ಮಾದಿಗಳು ನಡೆಸಲು ಮೊದಲಿಗೆ 'ನಗುತ್ತ' ಬಂದು ಹಸೆಯ ಮೇಲೆ ಕುಳಿತ ಕೃಷ್ಣನನ್ನು ಕಂಡು ಧ್ಯಾನಿಸಿದರು. ಕೃಷ್ಣ ಸದಾ ನಗುತ್ತಿದ್ದರೂ ಹಾಡುಕೇಳಿ ನಕ್ಕಂತೆ ಲೀಲೆಯಿಂದ

ತೋರಿಕೊಳ್ಳುತ್ತಾನೆ ಹಾಡಿಗೆ ಫಲ ನೀಡುವುದಕ್ಕಾಗಿ ಹರಿಯು ಈ ಸ್ವಭಾವದ ಸುಂದರವರ್ಣನೆ ಸ್ವಭಾವೋಕ್ತ್ಯಲಂಕಾರ

ಅಥವಾ ಹಾಡು ಕೇಳಿ ಹರಿ ನಕ್ಕ ನಿಜ ಆದರೆ ಅದು ಅದರ ಮಾಧುರ್ಯಕ್ಕಾಗಿ ಅಲ್ಲ. ಪ್ರಪಂಚದ ಏಕಮಾತ್ರ ಅನಾದಿನಿತ್ಯ ದಂಪತಿಗಳಾದ ಲಕ್ಷ್ಮೀ ನಾರಾಯಣರನ್ನು ಈ ಹಾಡಿನಿಂದ ಹಸೆಗೆ ಕರೆಯುತ್ತಿರುವುದು ಹಾಸ್ಯರಸಕ್ಕೆ ಒಂದು ಒಳ್ಳೆಯ ಉದಾಹರಣೆಯಾಗಬಲ್ಲುದು ಎಂದು. ಹಾಸ್ಯರಸಕ್ಕೆ ಆಲಂಕಾರಿಕರು ಕೊಡುವ ಒಂದು ಉದಾಹರಣೆ ಹೀಗಿದೆ- 'ಅಮ್ಮ ನನಗೆ ಆ ಚಂದ್ರನನ್ನು ತಂದುಕೊಡು, ಚೆಂಡಾಟ ಆಡುವೆ' ಎಂದು ಕೃಷ್ಣ ಹಟ ಮಾಡಿದಾಗ ಯಶೋದೆ ನಕ್ಕಳು. ನಗುವಿಗೆ ಇಲ್ಲಿ ಕೃಷ್ಣ ಕಾರಣನಾದ್ದರಿಂದ ಅವನೆ ಆಲಂಬನವಿಭಾವ. ಯಶೋದೆ ನಗುವುದು ಅನುಭಾವ. ಇದರಿಂದ ಹಾಸಸ್ಥಾಯಿಭಾವಕ್ಕೆ ಪುಷ್ಟಿದೊರೆತು ಹಾಸ್ಯರಸ ಉಂಟಾಗಿದೆ ಹಾಗೆಯೇ ಪ್ರಕೃತದಲ್ಲಿ ಹಾಡುವ ಮುತ್ತೈದೆಯರು ಹರಿಯು ನಗುವಿಗೆ ಆಲಂಬನ ವಿಭಾವ. ಅನಾದಿ ದಂಪತಿಗಳನ್ನು ಹಸೆಗೆ ಕರೆವ ವಿಚಿತ್ರ ಸನ್ನಿವೇಶ ಉದ್ದೀಪನ ವಿಭಾವ. ಹರಿ ಕೇಳಿ ನಗುವುದು ಅನುಭಾವ. ಇದರಿಂದ ಹಾಸಸ್ಥಾಯಿಭಾವಕ್ಕೆ ಒಳ್ಳೆಯ ಪುಷ್ಟಿ ದೊರೆತಿರುವುದರಿಂದ ಹಾಸ್ಯರಸವಾಗಿ ಪರಿಣಮಿಸಿದೆ ಇದು ಕೇವಲ ಸ್ವಭಾವೋಕ್ತ್ಯಲಂಕಾರವಲ್ಲ, ಅದಕ್ಕಿಂತಲೂ ಹೆಚ್ಚು ಸುಂದರವಾದ ರಸ

ಅಥವಾ ಹಾಡುಕೇಳಿ ತಾನು ಹಸೆಮಣೆಯೇರಿ ಕುಳಿತುಕೊಳ್ಳುವುದು ತನಗೇ ನಗು ಬರಿಸುತ್ತಿದೆ. ಅನಾದಿ ಪತ್ನಿಯಾದ ವನಿತೆ ಲಕ್ಷ್ಮಿಯೊಡನೆ ಹೊಸ ಮದುಮಗನಂತೆ ಹಸೆಯ ಮೇಲೆ ಕುಳಿತುಕೊಳ್ಳುತ್ತಿದ್ದೇನೆ ಎಂದು ತಾನೆ ನಗುತ್ತಿದ್ದಾನೆ. ಈ ನಗುವಿಗೆ ತಾನೆ ಆಲಂಬನ ವಿಭಾವ. ಹಸೆಮಣೆಯೇರುವುದು ಉದ್ದೀಪನವಿಭಾವ. ನಗುವುದು ಅನುಭಾವ ಜೋರಾಗಿ ನಗುವ ಸಂದರ್ಭವಾಗಿದ್ದರೂ ತಡೆದುಕೊಂಡು ಮುಗುಳುನಗು ಬೀರುವುದರಿಂದ ಅವಹಿತ್ಥವೆಂಬ ಸಂಚಾರಿಭಾವವೂ ಇಲ್ಲಿದೆ. ಇವುಗಳಿಂದ ಹಾಸಸ್ಥಾಯಿಭಾವಕ್ಕೆ ಒಳ್ಳೆಯ ಪುಷ್ಟಿ ಬಂದಿರುವುದರಿಂದ ಹಾಸ್ಯರಸವಿದೆ

ಅಥವಾ ನಗುತ್ತ ಬಂದು ಕುಳಿತ ಕೃಷ್ಣನ ನಾಲ್ಕು ದಿನದ ಉತ್ಸವವನ್ನು ಬ್ರಹ್ಮಾದಿಗಳು ನಡೆಸಿದರು, ಅಂದರೆ ತನ್ನ ನಾಲ್ಕು ದಿನದ ಕಲ್ಯಾಣೋತ್ಸವವನ್ನು ತನ್ನ ಮಕ್ಕಳೆ ಆದ ಬ್ರಹ್ಮಾದಿಗಳು ಮಾಡುತ್ತಿರುವುದು ಹರಿಗೆ ನಗು ಬರಿಸಿದೆ. ಈ ನಗುವಿಗೆ ಬ್ರಹ್ಮಾದಿಗಳು ಆಲಂಬನ ವಿಭಾವ. ಅವರು ನಾಲ್ಕು ದಿನ ಉತ್ಸವಮಾಡುವುದು ಉದ್ದೀಪನ ವಿಭಾವ. ಹರಿ ನಗುವುದು ಅನುಭಾವ. ಅವಹಿತ್ಥ ಸಂಚಾರಿಭಾವ. ಇವುಗಳಿಂದ ಹಾಸ್ಯರಸಕ್ಕೆ ಪುಷ್ಟಿ.

ಅಥವಾ ಬ್ರಹ್ಮಾದಿಗಳು ನಗುತ್ತ ಬಂದು, ಹಸೆಯ ಮೇಲೆ ಕುಳಿತ ಕೃಷ್ಣನ ವಿವಾಹೋತ್ಸವ ನಡೆಸಿದರು, ಅಂದರೆ ಹರಿ ವಿವಾಹವಾಗುವುದು ಬ್ರಹ್ಮಾದಿಗಳಿಗೇ ನಗು ಬರಿಸುತ್ತಿದೆ. ಹರಿ ಆಲಂಬನ ವಿಭಾವ ಅವನು ಹೊಸ ಮದುಮಗನಂತೆ ಹಸೆಮಣೆಯೇರಿ ಕುಳಿತುದು ಉದ್ದೀಪನ ವಿಭಾವ. ಬ್ರಹ್ಮಾದಿಗಳ ನಗು ಅನುಭಾವ. ಇವುಗಳಿಂದ ಹಾಸ್ಯರಸಕ್ಕೆ ಪುಷ್ಟ ಬಂದಿದೆ.

ಅಥವಾ 'ಒಲಿದು ಬಕುತರಿಗಾಗಿ ಮದುವೆಗ್ಗವಣಿಸಿಕೊಂಡ ಸುಲಭ ದೇವರ ದೇವ ವಿಜಯವಿಟ್ಠಲರೇಯ' ಎಂಬಂತೆ ಬ್ರಹ್ಮಾದಿಗಳು ತಾವೆ ಹರಿಯನ್ನು ಪ್ರಾರ್ಥಿಸಿ ಈ ವಿವಾಹಕ್ಕೆ ಒಪ್ಪಿಸಿರುವುದರಿಂದ ಹರಿ ಬ್ರಹ್ಮಾದಿಗಳ ವಿನೋದಕ್ಕಾಗಿಯೇ ಹಸೆಮಣೆಯೇರಿದ್ದಾನೆ. ಆದ್ದರಿಂದ ಬ್ರಹ್ಮಾದಿಗಳು ಸ್ವತಃ ಉತ್ಸಾಹದಿಂದ ವಿವಾಹೋತ್ಸವ ನಡೆಸುತ್ತಿದ್ದಾರೆ ತಮಗೆ ತಾವೆ ನಗುತ್ತಿದ್ದಾರೆ. ತಾವೆ ಆಲಂಬನ ವಿಭಾವ ತಾವು ಕಲ್ಯಾಣೋತ್ಸವ ಮಾಡುವುದೆ ಉದ್ದೀಪನ ವಿಭಾವ. ತಾವೆ ನಗುವುದು ಅನುಭಾವ. ಹೀಗೆ ಹಾಸ್ಯರಸ ಮೂಡಿಬಂದಿದೆ.

ಅಥವಾ ನಗುತ್ತ ಉತ್ಸವ ನಡೆಸಿದರೆಂದರೆ ಆನಂದದಿಂದ ನಲಿಯುತ್ತ ಉತ್ಸವಮಾಡಿದರೆಂದರ್ಥ. ಆನಂದದಿಂದ ಮಾಡಿದರೇ ಉತ್ಸವ ಉತ್ಸವವೆನಿಸುತ್ತದೆ. 'ಉತ್ಸವ' ಎಂದರೆ ಸಡಗರ ಆನಂದ. ನಾವು ದೇವಸ್ಥಾನಗಳಲ್ಲಿ ಹರಕೆಗಾಗಿ ಮಾಡುವ ಕಲ್ಯಾಣೋತ್ಸವದಂತಲ್ಲ ಈ ಉತ್ಸವ. ನಿಜವಾಗಿಯೇ ಉತ್ಸವ. ಆದ್ದರಿಂದ ಈ ವರ್ಣನೆ ಸುಂದರವಾದ ಸ್ವಭಾವದ ವರ್ಣನೆಯಾದ್ದರಿಂದ ಸ್ವಭಾವೋಕ್ತ್ಯಲಂಕಾರ.

ಅಥವಾ ನಗುತ್ತ ಬಂದು ವನಿತೆ ಲಕ್ಷ್ಮಿಯೊಡಗೂಡಿ ಕುಳಿತನೆಂದರೆ ಲಕ್ಷ್ಮಿದೇವಿಯೊಡನೆ ಕುಳಿತುಕೊಳ್ಳುವುದು ಹರಿಗೆ ತುಂಬ ಪ್ರಿಯ ಪ್ರಸನ್ನನಾಗಿ ಆತ ನಗುತ್ತಿದ್ದಾನೆ ಇದು ದೇವಿಯಲ್ಲಿ ಹರಿಗೆ ಇರುವ ಗಾಢವಾದ ಅನುರಾಗವನ್ನು ಸೂಚಿಸುತ್ತದೆ. ಆದ್ದರಿಂದ ದೇವಿ ಆಲಂಬನ ವಿಭಾವ. ಹರಿ ಹಸೆಮಣೆಯೇರುವುದು ಅನುಭಾವ. ಪ್ರೇಯಸಿಯಾದ ದೇವಿಯ ಸಮಾಗಮದಿಂದಾದ ಹರ್ಷವು ಸಂಚಾರಿ ಭಾವ. ರತಿಸ್ಥಾಯಿಭಾವ ಪುಷ್ಟಿಗೊಂಡು ಶೃಂಗಾರರಸವಾಗಿ ಪರಿಣಮಿಸಿದೆ.

ಹೀಗೆ ಈ ಒಂದು ನುಡಿಯಲ್ಲಿ ಶೃಂಗಾರ ಹಾಸ್ಯಗಳ ಮಧುರ ಸಂಯೋಜನೆಯಿದೆ, ಸ್ವಭಾವೋಕ್ತ್ಯಲಂಕಾರವಿದೆ.

ನಾಲ್ಕು ದಿನದ ಉತ್ಸವವೆಂದರೆ ಕನ್ಯಾದಾನ ಅಕ್ಷತಾರೋಪಣಾದಿಗಳಾದ ಬಳಿಕ ಹಸೆಮಣೆಯ ಮೇಲೆ ಕುಳಿತ ವಧೂವರರಿಗೆ ಕಂಕಣಬಂಧ. ಅವರು ರಮಾ, ಪಾರ್ವತಿ ಶಚೀದೇವಿಯರನ್ನು ಪ್ರಾರ್ಥಿಸುತ್ತಾರೆ. ವರನು ಚತುರ್ದಿನ ವಿವಾಹ ವ್ರತ ಸಂಕಲ್ಪ ಮಾಡುತ್ತಾನೆ. ಮೊದಲನೆ ದಿನ ವಧೂವರರು ತಮ್ಮಲ್ಲಿ ರೋಹಿಣೀ

ಸೋಮರ ಸಾನ್ನಿಧ್ಯವನ್ನು ಚಿಂತಿಸಿ ದಾಕ್ಷಾಯಣೀ ಪೂಜೆಯನ್ನೂ ಎರಡನೆ ದಿನ ಅಪ್ಸರೋ ಗಂಧರ್ವರ ಸಾನ್ನಿಧ್ಯವನ್ನು ಚಿಂತಿಸಿ ಮಹಾದೇವಿಯನ್ನೂ ಮೂರನೆ ದಿನ ಸ್ವಾಹಾ ಅಗ್ನಿ ಸಾನ್ನಿಧ್ಯ ಚಿಂತಿಸಿ ಕಾಳಿಯನ್ನೂ ನಾಲ್ಕನೆ ದಿನ ಮಾನವರೆಂದು ಚಿಂತಿಸಿ ಶಾಂಕರಿಯನ್ನೂ ಪೂಜಿಸುತ್ತಾರೆ. ನಾಲ್ಕುದಿನವೂ ಬ್ರಹ್ಮಚರ್ಯ ಅಕ್ಷಾರಲವಣ ಅಧಃಶಯನ ಬ್ರಾಹ್ಮಣಾರಾಧನ ಮಾಡುತ್ತಿರುತ್ತಾರೆ ಬ್ರಹ್ಮಾದಿ ದೇವತೆಗಳು ಲಕ್ಷ್ಮೀನಾರಾಯಣರಿಂದ ದಾಕ್ಷಾಯಣೀ ಮುಂತಾದವರ ಪೂಜೆಮಾಡಿಸುವಾಗ ದಾಕ್ಷಾಯಣೀ ಮುಂತಾದ ಹೆಸರಿನಿಂದ ಸ್ತ್ರೀರೂಪಿ ಯಾಗಿರುವ ನಾರಾಯಣನ ಪೂಜೆ ಮಾಡಿಸಿದರೆಂದಿಟ್ಟುಕೊಳ್ಳಬೇಕು.

ನ ಹಿ ವಿಷ್ಣುಃ ಪ್ರಣಮತಿ ಕಸ್ಮೈಚಿದ್ ವಿಬುಧಾಯ ಚ ।

'ವಿಷ್ಣು ಯಾವ ದೇವತೆಗೂ ನಮಿಸುವುದಿಲ್ಲ' ಎಂದು ಮೋಕ್ಷಧರ್ಮದಲ್ಲಿ ಹೇಳಿದೆ. ಆದ್ದರಿಂದ ವಿಷ್ಣು ತನ್ನನ್ನೇ ತಾನು ನಮಿಸುತ್ತಾನೆ ವಸ್ತುತಃ ಇತರರು ವಿಷ್ಣುವನ್ನು ನಮಿಸುವಾಗ ಅವರೊಳಗಿರುವ ಅಂತರ್ಯಾಮಿ ವಿಷ್ಣು ತನ್ನನ್ನು ನಮಿಸುವುದರಿಂದಲೆ ಇತರರು ವಿಷ್ಣುವನ್ನು ನಮಿಸುವರು ಹೊರತು ಸ್ವತಃ ಅಲ್ಲ.

ನ ಋತೇ ತ್ವತ್ ಕ್ರಿಯತೇ ಕಿಂಚನಾರೇ
ಮಹಾಮರ್ಕಂ ಮಘವನ್ ಚಿತ್ರಮರ್ಚ ।

'ಹರಿ ನಿನ್ನ ಹೊರತು ಯಾರಿಂದಲೂ ಯಾವ ಕಾರ್ಯವೂ ನಡೆಯದು. ನೀನೇ ನಿನ್ನ ಪೂಜೆ ಮಾಡಿಕೊಳ್ಳು' ಎಂದು ವೇದಮಂತ್ರ ಪ್ರಾರ್ಥನೆಯೇ ಇದೆ

ಮೊದಲನೆ ದಿನ ದಾಕ್ಷಾಯಣಿ ಪೂಜೆಯಾದ ಬಳಿಕ ಮಾಂಗಲ್ಯಧಾರಣವಿದೆ. ಇಂದು ಈ ಲಕ್ಷ್ಮೀ ಶೋಭನ ಪದವನ್ನು ಹಾಡುವ ಸುವಾಸಿನಿಯರಿಂದ ಮಂಗಳಸೂತ್ರವನ್ನು ಮುಟ್ಟಿಸಿ ವಧುವಿನ ಕೊರಳಿಗೆ ಕಟ್ಟಿಸುವುದು ವಾಡಿಕೆ. ಆಶ್ಚರ್ಯವೆಂದರೆ ಇಂಥ ಲಕ್ಷ್ಮೀಶೋಭನ ಪದವೆ ಮಂಗಲಸೂತ್ರವನ್ನು ಪ್ರಸ್ತಾಪಿಸುವುದಿಲ್ಲ. 'ನಾಲ್ಕುದಿನದ ಉತ್ಸವ'ದಲ್ಲಿ ಇದೂ ಸೇರಿದೆ ಎಂದು ತೃಪ್ತಿಪಟ್ಟುಕೊಳ್ಳಬೇಕಷ್ಟೆ. 'ಹೊಸ ಜನಿವಾರ ಹಾಕಿಕೊಳ್ಳುವುದೇ ಉಪಾಕರ್ಮ, ಉಪಾಕರ್ಮವೆಂದರೆ ಹೊಸ ಜನಿವಾರ' ಎಂಬಂತೆ 'ವಿವಾಹವೆಂದರೇ ಮಾಂಗಲ್ಯ ಬಂಧನ, ಮಾಂಗಲ್ಯ ಬಂಧನವೇ ವಿವಾಹ' ಎಂದು ಜನ ಭ್ರಮಿಸುವಷ್ಟು ಮುಖ್ಯವಾದ ಒಂದು ಕಾರ್ಯಕ್ರಮ ಮಾಂಗಲ್ಯ ಬಂಧನ. ಅದರ ಬಗ್ಗೆ ಲಕ್ಷ್ಮೀ ಶೋಭನಪದಕ್ಕೆ ಏಕೆ ಈ ಮೌನ ? ಹಿಂದೆ 'ಕಂಬು ಕಂಠದ ಸುತ್ತ ಕಟ್ಟಿದ ಮಂಗಳ ಸೂತ್ರ' ಎಂದು ಹೇಳಿದ್ದುಂಟು. ಆದರೆ ಅದು ವಿವಾಹಕ್ಕಿಂತ ಹಿಂದಿನದು. ಅವತಾರ ಕಾಲದಲ್ಲಿ ಜೊತೆಗೇ ಬಂದಿರುವಂಥದ್ದು. ರುಕ್ಮಿಣೀಶ ವಿಜಯದಲ್ಲಿಯೂ

ವಿವಾಹವೆಲ್ಲ ಮುಗಿದ ಬಳಿಕವೆ, ರುಕ್ಮಿಣೀ ಕೃಷ್ಣರ ಆಪಾದ ಮೌಳಿ ವರ್ಣನೆಯಲ್ಲಿ ಮಂಗಲ ಸೂತ್ರದ ಬಗ್ಗೆ ಹೇಳಿದೆ. ವಿವಾಹ ಸಂದರ್ಭದಲ್ಲಲ್ಲ, ಆದ್ದರಿಂದ ಮಾಂಗಲ್ಯ ಬಂಧನವೆ ವಿವಾಹವೆನ್ನುವಷ್ಟು ಪ್ರಾಮುಖ್ಯತೆ ಅದಕ್ಕಿಲ್ಲವೆನ್ನುವುದು ಧ್ವನಿತವಾಗುವಂತಿದೆ.

ಇಲ್ಲಿ ಮಂಗಲಸೂತ್ರದ ಉದ್ದೇಶದ ಬಗ್ಗೆ– 'ಅದು ಮದುವೆಯಾದದ್ದರ ಗುರುತೆನ್ನುವುದಾದರೆ ಹೆಂಗಸಿಗೆ ಮಾತ್ರವೆ ಏಕೆ ? ಹೆಣ್ಣು ಗಂಡಿಗೆ ದಾಸಿ ಎಂದು ಅದು ಸೂಚಿಸುತ್ತಿದೆಯೆ ? ಮದುವೆಯಾದದ್ದರ ಗುರುತು ಗಂಡಿಗೆ ಏಕಿಲ್ಲ ?' ಇತ್ಯಾದಿ ಪ್ರಶ್ನೆಗಳು ಬರಬಹುದು. ಅದರೆ ಮದುವೆಯಾದದ್ದರ ಗುರುತು ಹೆಣ್ಣಿಗೆ ಮಾತ್ರ ಏಕೆ ಎಂದು ಆಕ್ಷೇಪಿಸುವುದರಲ್ಲಿ ಹುರುಳಿಲ್ಲ. ಇಂದು ಹೆಣ್ಣು ಮಾತ್ರ ಧರಿಸುವ ಹಣೆಯ ಕುಂಕುಮ, ಮೂಗಿನ ಮೂಗುತಿ, ಕೈಯ ಬಳೆ ಮುಂತಾದುದು ಹಿಂದೆ ಗಂಡಿಗೂ ಇತ್ತು. ಉದಾಹರಣೆಗೆ –

ಕಸ್ತೂರೀ ತಿಲಕಂ ಲಲಾಟ ಫಲಕೇ ವಕ್ಷಃಸ್ಥಲೇ ಕೌಸ್ತುಭಂ
ನಾಸಾಗ್ರೇ ವರಮೌಕ್ತಿಕಂ ಕರತಲೇ ವೇಣುಃ ಕರೇ ಕಂಕಣಂ ।
ಸರ್ವಾಂಗೇ ಹರಿಚಂದನಂ ಸುಲಲಿತಂ ಕಂಠೇ ಚ ಮುಕ್ತಾವಲೀ
ಗೋಪಸ್ತ್ರೀಪರಿವೇಷ್ಟಿತೋ ವಿಜಯತೇ ಗೋಪಾಲಚೂಡಾಮಣೀಃ ॥

'ಗೋಪಾಲಚೂಡಾಮಣಿಯಾದ ಶ್ರೀಕೃಷ್ಣ ಹಣೆಯಲ್ಲಿ ಕಸ್ತೂರಿಯ ಬೊಟ್ಟು ಎದೆಯಲ್ಲಿ ಕೌಸ್ತುಭರತ್ನ, ಮೂಗಿನ ತುದಿಯಲ್ಲಿ ಮುತ್ತಿನ ಮೂಗುತಿ, ಕೈಯಲ್ಲಿ ಕೊಳಲು, ಕೈಗಳಿಗೆ ಬಳೆ, ಸರ್ವಾಂಗಕ್ಕೆ ಒಳ್ಳೆಯ ಗಂಧದ ಲೇಪನ, ಕುತ್ತಿಗೆಗೆ ಮುತ್ತಿನ ಹಾರಗಳನ್ನು ಧರಿಸಿ ಗೋಪಿಯರೊಡನೆ ಮೆರೆಯುತ್ತಾನೆ ' ಆದ್ದರಿಂದ ಹಣೆಬೊಟ್ಟು ಮೂಗುತಿ ಬಳೆಗಳು ಪುರುಷೋತ್ತಮನಾದ ಶ್ರೀಕೃಷ್ಣನಿಗೇ ಇವೆ ಎಂದ ಮೇಲೆ ಸಾಮಾನ್ಯ ಪುರುಷರಿಗಿನ್ನೇನು ? ಕಸ್ತೂರಿಯ ಬೊಟ್ಟು ಎಂದಿರುವುದು ಕುಂಕುಮ ಬೇಡವೆಂದಲ್ಲ. ಕಸ್ತೂರಿ ಮುಖ್ಯ ಕುಂಕುಮ ಕರ್ಪೂರಗಳು ಸೇರಬೇಕು. ಆಗ ಒಳ್ಳೆಯ ತಿಲಕವಾಗುತ್ತದೆ. ಈಗಲೂ ಆಚಾರವಂತರು ಹಣೆಗೆ ಅಕ್ಷತೆ ಇಟ್ಟುಕೊಳ್ಳುತ್ತಾರೆ. ಅಕ್ಷತೆಯೆಂದರೆ ಆರ್ದ್ರ ಕುಂಕುಮವೆ ತಾನೆ ? ಆದ್ದರಿಂದ ಕುಂಕುಮ ಹೆಣ್ಣಿಗೇ ಮೀಸಲಲ್ಲ. ಮಂಗಳ ಸೂತ್ರ ಹೆಣ್ಣಿಗೆ ಮಾತ್ರವೆ ಇದೆ, ನಿಜ. ಆದರೆ ಗಂಡಿಗೂ ಮದುವೆಯಾದದ್ದರ ಗುರುತು ಬೇರೆಯೇ ಇದೆ. ಬ್ರಹ್ಮಚಾರಿಗೆ ಒಂದು ಯಜ್ಞೋಪವೀತ ಅಜಿನ ದಂಡ ಕಮಂಡಲು ಭಿಕ್ಷಾಪಾತ್ರೆ ಮೇಖಲೆ ಕೌಪೀನಗಳಿವೆ. ತಾಂಬೂಲ ಅಂಗರಾಗಗಳನ್ನು ವರ್ಜ್ಯ ಮಾಡಬೇಕು. ಆದರೆ ಮದುವೆಯಾದವನು ಎರಡು ಯಜ್ಞೋಪವೀತ ಪಟ್‌ಪುಚ್ಛಕಚ್ಛ ಉತ್ತರೀಯ ಗಂಧಮಾಲ್ಯಾಭರಣ ತಾಂಬೂಲ ಅಂಗರಾಗಾದಿ

ಧರಿಸಿ ತಾನು ಗೃಹಸ್ಥನೆಂದು ಕಾಣುವಂತೆ ವೇಷ ಧರಿಸಿರಬೇಕು. ಬ್ರಹ್ಮಚಾರಿ ಗೃಹಸ್ಥನಂತೆ ಗೃಹಸ್ಥನು ಬ್ರಹ್ಮಚಾರಿಯಂತೆ ವೇಷ ಧರಿಸಿದರೆ ಅವರನ್ನು ನೋಡಿದವರು ಸಚೈಲ ಸ್ನಾನ ಮಾಡಬೇಕು. ಅದೇ ರೀತಿ ಸುಮಂಗಲಿಯೂ ಮಂಗಲಸೂತ್ರ ಮುಂತಾದ ಅಲಂಕಾರಗಳನ್ನು ಸದಾ ಧರಿಸಬೇಕು.

ವಸ್ತುತಃ ಮಂಗಲಸೂತ್ರದ ಉದ್ದೇಶ ಬೇರೆಯೇ ಇದೆ.

ಮಾಂಗಲ್ಯಂ ತುಂತುನಾನೇನ ಮಮ ಜೀವನ ಹೇತುನಾ ।

ಎಂಬಂತೆ ಪುರುಷನ ದೀರ್ಘಾಯುಷ್ಯಕ್ಕೆ ಕಾರಣವಾಗಿರಲಿ ಎಂಬುದೆ ಮಾಂಗಲ್ಯ ಬಂಧನದ ಉದ್ದೇಶ. ಸಾವಿತ್ರಿಯಂಥ ಪತಿವ್ರತೆಯರು ತಮ್ಮ ಮಾಂಗಲ್ಯದ ಪ್ರಭಾವದಿಂದ ಪುರುಷರಿಗೆ ದೀರ್ಘಾಯುಷ್ಯ ತಂದುಕೊಂಡಿರುವುದರ ನಿದರ್ಶನಗಳು ಅನೇಕ ಇವೆ. ನಾರಾಯಣನು ಮಾತ್ರ ಲಕ್ಷ್ಮೀದೇವಿಗೆ ಮಂಗಲಸೂತ್ರವನ್ನು ಬಂಧಿಸುವಾಗ ತನ್ನ ದೀರ್ಘಾಯುಷ್ಯಕ್ಕೆನ್ನದೆ,

ಮಾಂಗಲ್ಯಂ ತಂತುನಾನೇನ ಜಗಜ್ಜೀವನ ಹೇತುನಾ ।

'ಲೋಕದ ಸಕಲ ಸಜ್ಜನರ ದೀರ್ಘಾಯುಷ್ಯಕ್ಕೆ, ಅಂದರೆ ಮುಕ್ತಿಲೋಕದಲ್ಲಿ ಅವರ ಅನಂತವಾದ ಸುಖಜೀವನಕ್ಕಾಗಿ ನಾನೀ ಮಂಗಲಸೂತ್ರವನ್ನು ನಿನ್ನ ಕೊರಳಿಗೆ ಕಟ್ಟುವೆನು' ಎನ್ನುತ್ತಾನೆ. ಆದ್ದರಿಂದ ಲಕ್ಷ್ಮೀದೇವಿಯ ಮಾಂಗಲ್ಯ ಬಂಧನವನ್ನು ನೆನೆದರೆ ಮೋಕ್ಷವೇ ಕರಗತವಾಗುವಾಗ ಸಂಸಾರದಲ್ಲಿ ದೀರ್ಘಾಯುಷ್ಯ ಲಭಿಸುವುದರಲ್ಲಿ ಏನು ಸಂದೇಹ ?

– ೯೨ –

**ಅತ್ತೇರೆನಿಪ ಗಂಗೆ ಯಮುನೆ ಸರಸ್ವತಿ ಭಾ–**
**ರತ್ತಿ ಮೊದಲಾದ ಸುರಸ್ತ್ರೀಯರು ।**
**ಮುತ್ತಿನಕ್ಷತೆಯನು ಶೋಭನವೆನುತ ತ–**
**ಮ್ಮರ್ತಿಯಳಿಯಗೆ ತಳೆದರು ॥**

ಶ್ರೀಹರಿಗೆ ಅತ್ತೆಯರೆನಿಸುವ ಗಂಗಾ ಯಮುನಾ ಸರಸ್ವತೀ ಭಾರತೀ ಮುಂತಾದ ದೇವತಾಸ್ತ್ರೀಯರು ತಮ್ಮ ಪ್ರೀತಿಯ ಅಳಿಯನಿಗೆ ಶೋಭನವಾಗಲಿ ಎನ್ನುತ್ತ ಮುತ್ತಿನ ಅಕ್ಷತೆ ಕಾಳುಗಳನ್ನು ಹಾಕಿದರು.

ಸಮುದ್ರರಾಜ ವರುಣನ ಕುಮಾರಿ ಲಕ್ಷ್ಮೀದೇವಿಯನ್ನು ವಿವಾಹವಾಗುತ್ತಿರುವ ಶ್ರೀಹರಿಗೆ ವರುಣನ ರಾಣಿಯರಾದ ಗಂಗಾದಿ ನದ್ಯಭಿಮಾನಿ ದೇವತೆಗಳು ಅತ್ತೆಯರೆನ್ನಲಾಗಿದೆ. ಆದರೆ ಇವರು ಅತ್ತೆಯರೆನಿಸಿದ್ದಾರೆ ಹೊರತು

ವಾಸ್ತವದಲ್ಲಿ ಅತ್ತೆಯರಲ್ಲ ಏಕೆಂದರೆ ಲಕ್ಷ್ಮೀದೇವಿ ಅವರಲ್ಲಾಗಲಿ ನೇರವಾಗಿ ವರುಣನಲ್ಲಾಗಲಿ ಹುಟ್ಟಿ ಬಂದವಳಲ್ಲ. ಪ್ರಾಕೃತ ಶರೀರದಿಂದ ಅವಳಿಗೆ ಜನನವಿಲ್ಲ ಜನಿಸಿದಂತೆ ತೋರಿಕೊಳ್ಳುತ್ತಾಳೆ. ಅಷ್ಟರಿಂದಲೆ ಗಂಗೆ ಯಮುನೆ ಮುಂತಾದವರು ಅತ್ತೆಯರೆನಿಸುತ್ತಾರಷ್ಟೆ. ಅದು ಅವರ ಪುಣ್ಯದ ಫಲ.

ಆದರೆ ಗಂಗೆ ಯಮುನೆಯರು ವರುಣನ ಮಡದಿಯರಾದ್ದರಿಂದ ಅತ್ತೆಯರೆನಿಸಲಿ, ಸರಸ್ವತಿ ಭಾರತಿಯರು, ಬ್ರಹ್ಮವಾಯುಗಳ ಮಡದಿಯರು, ಹೇಗೆ ಅತ್ತೆ ಎನಿಸಿದರು ? ಗಂಗೆ ಯಮುನೆಯರ ಜೊತೆಗೆ ಹೇಳಿದ ಸರಸ್ವತಿಯು ಸರಸ್ವತೀ ನದಿ ಎನ್ನುವುದಾದರೆ ಭಾರತಿಯ ಜೊತೆಗೆ ಹೇಳಿದ ಸರಸ್ವತಿ ಬ್ರಹ್ಮನ ರಾಣಿ ಎಂದೇ ಏಕೆ ಹೇಳಕೂಡದು ? ಸರಸ್ವತಿಯನ್ನು ನದಿ ಎಂದೇ ಸ್ವೀಕರಿಸಿದರೆ ಭಾರತಿ ಯಾರು ? ಅವಳು ಹೇಗೆ ಅತ್ತೆ ಎನಿಸಿದಳು ?

ಅತ್ತೆಯರೆನಿಸಿದವರು ಗಂಗೆ ಯಮುನೆಯರು ಮಾತ್ರ. ಸರಸ್ವತಿ ಭಾರತಿ ಮುಂತಾದವರು ಬೇರೆ ಸುರಸ್ತ್ರೀಯರು ಎಂದು ಗ್ರಹಿಸಿದರೂ ಕಷ್ಟವೆ. ಅತ್ತೆಯರೆನಿಸುವವರು ಗಂಗೆ ಯಮುನೆಯರು ಮಾತ್ರವೆ ಅಲ್ಲ ಸರಸ್ವತಿ ಗೋದಾವರಿ ಕಾವೇರಿ ಮುಂತಾದವರೂ ಇದ್ದಾರೆ ಅತ್ತೆಯರೂ ಬೇರೆ ಸುರಸ್ತ್ರೀಯರೂ ಕೂಡಿ ಅಕ್ಷತೆ ಕಾಳುಗಳನ್ನೆರಚುವುದು ಯುಕ್ತವೇ ಆದರೂ ತಮ್ಮ 'ಅರ್ತಿಯ ಅಳಿಯ'ನಿಗೆ ಅವರೆಲ್ಲರೂ ಅಕ್ಷತೆ ತಳಿಯುವುದು ಹೇಗೆ ಎಂಬ ಪ್ರಶ್ನೆಯೂ ಹಾಗೇ ಉಳಿಯುತ್ತದೆ.

ಲಕ್ಷ್ಮ್ಯಾಶ್ಚ ಮಾಂಗಲ್ಯವಿಧೌ ಮುಖ್ಯಾಸ್ತತ್ರ ತು ಯೋಷಿತಃ ।
ಆಸನ್ ಗಂಗಾದಯೋ ನದ್ಯಃ ॥

ಲಕ್ಷ್ಮೀದೇವಿಯ ವಿವಾಹದಲ್ಲಿ ಮಾಂಗಲ್ಯವಿಧಿಯನ್ನು ಅಂದರೆ ಶೋಭನವೆನ್ನುತ್ತ ಅಕ್ಷತೆಕಾಳೆರಚುವ ಕಾರ್ಯವನ್ನು ನಡೆಸಿದವರಲ್ಲಿ ಮುಖ್ಯರಾದವರು ಗಂಗಾದಿ ನದಿಗಳು ಎಂದು ಸ್ಕಾಂದಪುರಾಣದಲ್ಲಿ ಹೇಳಿದ್ದನ್ನು ನೋಡಿದರೆ ಪ್ರಕೃತದಲ್ಲಿಯೂ 'ಸುರಸ್ತ್ರೀ'ಯರೆಂದರೆ ಗಂಗಾದಿ ನದ್ಯಭಿಮಾನಿದೇವತೆಯರೆಂದೇ ಇಟ್ಟುಕೊಳ್ಳುವುದು ಉಚಿತ.

ಸರಸ್ವತೀ ಭಾರತೀ ಪಾರ್ವತೀ ಮುಂತಾದ ಎಲ್ಲ ದೇವತಾ ಸ್ತ್ರೀಯರೂ ಅಜಿತರೂಪಿ ಹರಿಗೆ ಹಿರಿಯರಾಗಿದ್ದು ಅತ್ತೆಯರಿಗೆ ಸಮಾನರು ಎಂಬ ಅಭಿಪ್ರಾಯದಿಂದ ಅತ್ತೆಯರೆನಿಸಿದರೆನ್ನುವುದಾದರೆ ಅದಕ್ಕಿಂತಲೂ ತಾಯಿಗೆ ಸಮಾನರಾಗಿ ತಾಯಿಯರೆನಿಸುವುದೆ ಹೆಚ್ಚು ಉಚಿತ

ಈ ಎಲ್ಲ ಪ್ರಶ್ನೆಗಳಿಗೆ ಮಹಾಭಾರತದ ವನಪರ್ವದಲ್ಲಿ ಬರುವ ಈ ಮಾತಿನಲ್ಲಿ ಸಮಾಧಾನ ಸಿಗುತ್ತದೆ.

ಭಾರತೀ ಸುಪ್ರಯೋಗಾ ಚ ಕಾವೇರೀ ಮುರ್ಮುರಾ ತಥಾ ।
ಏತಾ ನದ್ಯಸ್ತು ಧಿಷ್ಣ್ಯಾನಾಂ ಮಾತರೋ ಯಾಃ ಪ್ರಕೀರ್ತಿತಾಃ ॥

'ಭಾರತೀ ಸುಪ್ರಯೋಗಾ ಕಾವೇರೀ ಮುರ್ಮುರಾ ಈ ಎಲ್ಲ ನದಿಗಳೂ ಅಗ್ನಿಗಳಿಗೆ ಜನ್ಮವಿತ್ತವರು' – ಇಲ್ಲಿ ಭಾರತಿ ಒಬ್ಬಳು ನದೀದೇವತೆ

ನದೀ ತಾರತಮ್ಯದಲ್ಲಿ ಗಂಗೆ ಸರ್ವೋತ್ತಮಳು. ಅನಂತರ ಕ್ರಮವಾಗಿ ಗೋದಾವರೀ ಕೃಷ್ಣಾ ಮತ್ತು ಕಾವೇರಿ ಕೃಷ್ಣೆಗೆ ಸ್ವಾಮಿ ಪುಷ್ಕರಿಣಿ, ಚಂದ್ರಪುಷ್ಕರಿಣಿ, ಮಾನಸ ಸರೋವರಗಳೂ, ಕಾವೇರಿಗೆ ಸರಸ್ವತೀ ನದಿಯೂ ಸಮಾನರು. ಅನಂತರ ಸರಯೂ ನದಿ. ಅವಳಿಗೆ ಸಮಾನಳು ತುಂಗಭದ್ರೆ. ಅನಂತರ ಯಮುನೆ. ಅನಂತರ ಸಿಂಧು ನರ್ಮದಾ ಭವನಾಶಿನಿಯರು. ಅನಂತರ ಕುಮುದ್ವತೀ ಕೊನೆಯಲ್ಲಿ ತಾಮ್ರಪರ್ಣೀ ಭೀಮರಥೀ ಮಲಾಪಹಾರೀ ಮುಂತಾದ ನದೀ ದೇವತೆಗಳು ಇವರಲ್ಲಿ ಭಾರತಿಯೂ ಒಬ್ಬಳು. ಇದು ಶ್ರೀ ರಾಘವೇಂದ್ರಯತಿಗಳು ಉದ್ಧರಿಸಿರುವ ಬ್ರಹ್ಮಾಂಡಪುರಾಣ ವಚನದಲ್ಲಿ ಉಕ್ತವಾಗಿದೆ.

ಪ್ರಸಿದ್ಧ ನದಿಗಳಾದ ಗಂಗಾ ಯಮುನಾ ಸರಸ್ವತಿಯರೊಡನೆ ಅಪ್ರಸಿದ್ಧಳಾದ ಭಾರತಿಯನ್ನು ಉಲ್ಲೇಖಿಸಿದ್ದೇಕೆ ಎಂಬ ಪ್ರಶ್ನೆ ಇಲ್ಲಿ ಸಹಜ. ಅದರೆ ಪ್ರಸಿದ್ಧ ಅಪ್ರಸಿದ್ಧಗಳೆನ್ನದೆ ಎಲ್ಲ ನದೀ ದೇವತೆಗಳೂ ಹರಿಗೆ ಆಕ್ಷತೆ ಕಾಳೆರಚುವ ಯೋಗಕ್ಕೆ ಭಾಗಿಗಳಾಗಿದ್ದಾರೆನ್ನುವ ಅಭಿಪ್ರಾಯವಿರಬಹುದು. ಅಥವಾ 'ಅತ್ತೇರೆನಿಪ' ಎಂದು ಹೇಳಿದ ಅತ್ತೆಯ ಸ್ಥಾನ ಅಮುಖ್ಯ ನದಿಗಳಿಗೆ ಹೇಗೋ ಹಾಗೇ ಮುಖ್ಯ ನದಿಗಳಿಗೂ ಅಮುಖ್ಯವೇ ಎನ್ನುವ ಉದ್ದೇಶವಿರಬೇಕು. ಅಥವಾ ನಮ್ಮ ಶರೀರದ ಎಪ್ಪತ್ತೆರಡು ಸಾವಿರ ನಾಡಿಗಳಲ್ಲಿ ಎಪ್ಪತ್ತೆರಡು ಸಾವಿರ ನದ್ಯಭಿಮಾನಿ ದೇವತೆಗಳಿದ್ದಾರೆ –

ಸೂರಿಗಳು ಚಿತ್ತೈಸುವುದು ಭಾ–
ಗೀರಥಿಯೆ ಮೊದಲಾದ ತೀರ್ಥಗ–
ಳೀರಧಿಕ ಎಪ್ಪತ್ತುಸಾವಿರ ನಾಡಿಯೊಳಗಿಹವು ।
ಈ ರಹಸ್ಯವನಲ್ಪಜನರಿಗೆ
ತೋರಿ ಪೇಳದೆ ನಾಡಿನದಿಯೊಳು
ಧೀರರನುದಿನ ಮಜ್ಜನವ ಮಾಡುತಲಿ ಸುಖಿಸುವರು ॥

— ಹರಿಕಥಾಮೃತಸಾರ.

ಆದ್ದರಿಂದ ಎಲ್ಲ ನದೀದೇವತೆಗಳೂ ನಮ್ಮನ್ನು ಸಲಹುವ ತಾಯಂದಿರು. ಅವರಲ್ಲಿ ಮುಖ್ಯ ಅಮುಖ್ಯರೆಂದು ಭೇದವೆಣಿಸದೆ ಎಲ್ಲರನ್ನೂ ಹರಿಗೆ ಅತ್ತೆಯರೆನಿಸಿದವರೆಂದು ನಾವು ಆದರಿಸಬೇಕು ಎನ್ನುವ ಅಭಿಪ್ರಾಯವೂ ಇರಬಹುದು. ಎಪ್ಪತ್ತೆರಡು ಸಾವಿರ ಬೃಹತೀಸಹಸ್ರ ಸ್ವರ ವ್ಯಂಜನ ಪ್ರತಿಪಾದ್ಯನಾಗಿ ಎಪ್ಪತ್ತೆರಡು ಸಾವಿರ ನಾಡಿಗಳಲ್ಲಿರುವ ಹರಿಯನ್ನು ಈ ಎಪ್ಪತ್ತೆರಡು ಸಾವಿರ ನದ್ಯಭಿಮಾನಿ ದೇವತೆಗಳು ಆ ಎಲ್ಲ ಸ್ವರ ವ್ಯಂಜನಗಳಿಂದ 'ಶೋಭನ' ಮಂಗಳಸ್ವರೂಪನೆಂದು ಸದಾ ಕೊಂಡಾಡುವುದರಿಂದ ಅವರೇ ಪ್ರಕೃತ ಶೋಭನಪದವನ್ನು ಹಾಡುತ್ತಿದ್ದಾರಷ್ಟೆ.

'ಶೋಭನ ಪದ' ಸೊಬಗಿನ ಸೋನೆ ಮುಂತಾದ ಮಟ್ಟಿನ ದೇಶಭಾಷೆಯ ಕೃತಿಯಾಗಿರಬಹುದು ಅಥವಾ ದೇವಭಾಷೆಯ ವೈದಿಕ ಛಂದಸ್ಸಿನ ಕೃತಿಯೂ ಇರಬಹುದು. ದೇವತಾಸ್ತ್ರೀಯರಿಗೂ ಋಷಿಪತ್ನಿಯರಿಗೂ ವೇದಾಧಿಕಾರವಿರುವುದ ರಿಂದ 'ಶೋಭನ' ಎಂಬ ಪದವಾಗಲಿ 'ಸುಭಗ' 'ಮೋದ' 'ಶಂ' ಎಂದು ಮುಂತಾಗಿ ಅದೇ ಅರ್ಥದ ಬೇರೆ ಶಬ್ದವಾಗಲಿ ಇರುವ –

ಸುಪುತ್ರಾಂ ಸುಭಗಾಂ ಕೃಣು ॥
ಇಹೈವಸ್ತಂ ಮಾ ವಿಯೌಷ್ಟಂ ... ಮೋದಮಾನೌ ಸ್ವೇ ಗೃಹೇ ॥
ಶಂ ನೋ ಭವ ದ್ವಿಪದೇ ಶಂ ಚತುಷ್ಪದೇ ॥

ಇತ್ಯಾದಿ ವೈದಿಕ ಸೂಕ್ತಗಳಾಗಲಿ ಶೋಭನ ಪದಗಳೆನ್ನಬಹುದು. ಈ ದೃಷ್ಟಿಯಿಂದ ಸೂರ್ಯಾಸೂಕ್ತವೆ ಪ್ರಪಂಚದ ಪ್ರಾಚೀನತಮ ಶೋಭನಪದ ವಾಗುತ್ತದೆ.

ರುಕ್ಮಿಣೀಶ ವಿಜಯದಲ್ಲಿ ಶೋಭನಪದ 'ಮಂಗಳಕಥಾಗೀತ' ವೆನಿಸಿದೆ–

ನಾರ್ಯೋಽಕ್ಷತಾನ್ ಪ್ರವವೃಷುರ್ನವ ಕುಂಕುಮಾಭಾನ್*
ಸಂಗೀತ ಮಂಗಲ ಕಥಾಃ ಸಮಲಂಕೃತಾಂಗ್ಯಃ ।

'ನಾರಿಯರು ತಮ್ಮನ್ನು ಚೆನ್ನಾಗಿ ಸಿಂಗರಿಸಿಕೊಂಡು ಮಂಗಲಕಥಾ ಗೀತೆಗಳನ್ನು ಹಾಡುತ್ತ ಹೊಸ ಕುಂಕುಮದ ಬಣ್ಣದಿಂದ ಹೊಳೆವ ಅಕ್ಷತೆ ಕಾಳುಗಳನ್ನು ವಧೂವರರಿಗೆ ತಳಿದರು'. ಇದರಿಂದ ಲಕ್ಷ್ಮೀಸ್ವಯಂವರ ಮುಂತಾದ ಮಂಗಲ ಕಥೆಗಳನ್ನು ಗೀತಬದ್ಧಗೊಳಿಸಿದಾಗ ಶೋಭನಪದವಾಗುತ್ತದೆ ಎಂದಂತಾಯಿತು.

ಅಕ್ಷತೆಯ ಲಕ್ಷಣವನ್ನೂ ,'ನವ ಕುಂಕುಮಾಭಾನ್' ಎಂದು ಮೇಲೆ ಹೇಳಿದೆ. ಆದ್ದರಿಂದ ಅಕ್ಷತೆ ಹೊಸ ಕುಂಕುಮದಂತೆ ಕೆಂಪಾಗಿರಬೇಕಾಗುತ್ತದೆ. ಪ್ರಕೃತದಲ್ಲಿ ಗಂಗೆ ಯಮುನೆ ಮುಂತಾದವರು ಮುತ್ತಿನ ಅಕ್ಷತೆ ತಳಿಯುತ್ತಿದ್ದಾರೆ. ಅದು ಕೆಂಪಗೆ ಇರಲು ಸಾಧ್ಯವೆ? ಎಂಬ ಪ್ರಶ್ನೆ ಬರಬಹುದು. ಇದಕ್ಕೆ ಸಮಾಧಾನವಾಗಿ ಬೇರೆ ಅಕ್ಷತೆ ಕೆಂಪಿದ್ದರೂ ಮುತ್ತಿನ ಅಕ್ಷತೆ ಬೆಳ್ಳಗೆಯೇ ಇರಬಹುದು ಎನ್ನಲೂಬಹುದು. ಆದರೆ ಮುತ್ತು ಎಲ್ಲವೂ ಬಿಳಿಯಾಗಿಯೆ ಇರಬೇಕೆಂಬ ನಿಯಮವಿಲ್ಲ. ಅವು ಬಿಳಿ ಕೆಂಪು ಹಳದಿ ನೀಲ ಬಣ್ಣದವುಗಳಾಗಿದ್ದು ಕ್ರಮವಾಗಿ ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರ ಜಾತಿಯವುಗಳಾಗಿರುತ್ತವೆ ಕಡುಕೆಂಪಿನ ಮುತ್ತು ಧಾರಣೆಗೆ ಯೋಗ್ಯವಲ್ಲದಿದ್ದರೂ ಅಕ್ಷತೆ ಕಾಳಾಗಿ ಉಪಯೋಗಿಸಲು ಅರ್ಹವಾಗಬಹುದು. ಅಥವಾ ನಸುಗೆಂಪಿನ ಉತ್ತಮ ಮುತ್ತು ಅಕ್ಷತೆಕಾಳಾಗಬಹುದು. ಧಾರಣೆಗೂ ಅದು ಯೋಗ್ಯವೆ ಅಂತೂ ಸೂರ್ಯಾ ಸೂಕ್ತದಂಥ ವೈದಿಕ ಮಂತ್ರದಿಂದಾಗಲೀ ಲಕ್ಷ್ಮೀಶೋಭನಪದದಂಥ ಲೌಕಿಕ ಮಂತ್ರದಿಂದಾಗಲೀ ಅಭಿಮಂತ್ರಿತವಾದ 'ಮಂತ್ರಾಕ್ಷತೆ'ಯನ್ನು ಸುಮಂಗಲಿಯರು ವಧೂವರರ ಮೇಲೆ ತಳಿದರು.

— ೯೩ —

**ರತ್ನದಾರತಿಗೆ ಸುತ್ತ ಮುತ್ತನೆ ತುಂಬಿ**
**ಮುತ್ತೈದೆರೆಲ್ಲ ಧವಳದ**
**ಮುತ್ತೈದೆರೆಲ್ಲ ಧವಳದ ಪದನ ಪಾ–**
**ಡುತ್ತಲೆತ್ತಿದರೆ ಸಿರಿವರಗೆ ॥**

ಮುತ್ತೈದೆಯರೆಲ್ಲರೂ ರತ್ನದಾರತಿಗೆ ಸುತ್ತ ಮುತ್ತನ್ನು ತುಂಬಿ ಧವಳದ ಪದವನ್ನು ಹಾಡುತ್ತ ಲಕ್ಷ್ಮೀರಮಣನಿಗೆ ಆರತಿಯೆತ್ತಿದ್ದರು.

ಅಕ್ಷತೆ ಹಾಕಿದ ಮೇಲೆ ಈಗ ಆರತಿ. ಅತ್ತೇರೆನಿಪ ಗಂಗೆ ಯಮುನೆ ಸರಸ್ವತಿ ಭಾರತಿ ಮುಂತಾದ ಮುತ್ತೈದೆಯರೆ ಲಕ್ಷ್ಮೀನಾರಾಯಣರಿಗೆ ಅಕ್ಷತೆ ತಳಿದು, ಈಗ ಆರತಿ ಮಾಡುತ್ತಿದ್ದಾರೆ. ಆರತಿ ರೂಢಿಯಲ್ಲಿ ದೀಪದಾರತಿ, ಮಾಣಿಕ್ಯದಾರತಿ, ಮರಕತದಾರತಿ, ಹೀರದಾರತಿ, ಕುಂದಣದಾರತಿ, ಮಿಸುನಿಯಾರತಿ, ಕುಂಕುಮದಾರತಿ, ಮುತ್ತಿನ ಹರಿವಾಣದ ಚಿತ್ತಾರದಾರತಿ, ಬಂಗಾರದ ತಟ್ಟೆಯ ಶೃಂಗಾರದಾರತಿ ಎಂದು ಮುಂತಾಗಿ ಅನೇಕ ವಿಧ. ಪ್ರಕೃತದಲ್ಲಿ ರತ್ನದಾರತಿ ಬೆಳಗುತ್ತಿದ್ದಾರೆ.

'ಆರತಿ' ಶಬ್ದ ಸಂಸ್ಕೃತದ 'ಆರಾತ್ರಿಕ' ಶಬ್ದದಿಂದ ಜನ್ಯ. ಅರಾತ್ರಿಯಲ್ಲಿಯೂ ಅಂದರೆ ನಡು ಹಗಲಿನಲ್ಲಿಯೂ ಬೆಳಗಬಲ್ಲ ಉಜ್ವಲ ಪ್ರಕಾಶದ ದೀಪಮಾಲೆಯೇ ಆರಾತ್ರಿಕ. ದೀಪ ಅನೇಕ ವಿಧ ಎಣ್ಣೆ ದೀಪ, ತುಪ್ಪದ ದೀಪಗಳಂತೆ ರತ್ನದೀಪ,

ಮಾಣಿಕ್ಯದೀಪ ಮುಂತಾದವೂ ಇವೆ. ಎಣ್ಣೆ ತುಪ್ಪದ ದೀಪವೂ ತೇಜಸ್ಸೆ, ರತ್ನದೀಪವೂ ತೇಜಸ್ಸೆ. ಆದರೆ ಒಂದು ಭೌಮ, ಇನ್ನೊಂದು ಆಕರಜ ಎಂದ ವ್ಯವಹಾರ. ಭೌಮ ವಿಪರೀತ ಶಾಖ ಕೊಡುತ್ತದೆ, ಮುಟ್ಟಿದರೆ ಸುಡುತ್ತದೆ. ಕಪ್ಪಾದ ಹೊಗೆ ಉಗುಳುತ್ತದೆ. ಗಾಳಿಗೆ ನೀರಿಗೆ ಸಿಕ್ಕಿ ಆರಿಹೋಗುತ್ತದೆ ಆಕರಜ ಕೇವಲ ಬೆಳಕನ್ನು ಕೊಡುತ್ತದೆ. ಸುಡುವುದಿಲ್ಲ, ಹೊಗೆ ಉಗುಳುವುದಿಲ್ಲ, ಗಾಳಿ ನೀರಿಗೆ ಆರುವುದಿಲ್ಲ. ಸಮುದ್ರರಾಜನ ಅರಮನೆಯ ಈ ಆರತಕ್ಷತೆಗೆ ಇಂಥ ರತ್ನದಾರತಿಯೇ ತಕ್ಕುದಾಗಿರುತ್ತದೆ.

ರತ್ನದ ದೀಪ, ಆರತಿ ನಡುಹಗಲಿನಲ್ಲಿಯೂ ಬೆಳಗುತ್ತದೆಯೇ ? ಎಂದರೆ ಗರುಡಪುರಾಣವು ಹೇಳುತ್ತದೆ, ನಡುರಾತ್ರಿಯಲ್ಲಿಯೂ ಬೇರೆ ಯಾವ ದೀಪದ ಸಹಾಯವಿಲ್ಲದೆ ಬೆಳಗುತ್ತದೆ–

ದಿವಾ ಯಥಾ ದೀಪ್ತಿಕರಂ ತಥೈವ ತಮೋಽವಗಾಢಾಸ್ವಪಿ ತನ್ನಿಶಾಸು ।

ಈ ಮಾತನ್ನು ಮೋಡಗಳಲ್ಲಿ ಹುಟ್ಟುವ ಒಂದು ಬಗೆಯ ಮುತ್ತಿನ ಬಗ್ಗೆ ಹೇಳಲಾಗಿದೆ ಕೋಳಿಮೊಟ್ಟೆಯ ಗಾತ್ರದ ಈ ಮುತ್ತು ದುಂಡಗೆ ಇದ್ದು ಭಾರವಾಗಿರುತ್ತದೆ. ಸೂರ್ಯನಂತೆ ಬರಿಗಣ್ಣಿಗೆ ನೋಡಲೂ ಸಾಧ್ಯವಾಗದಷ್ಟು ಪ್ರಕಾಶ. ಕೇವಲ ದೇವತೆಗಳಿಗೆ ಇದು ಯೋಗ್ಯ. ಆಕಾಶದಿಂದ ಭೂಮಿಗೆ ಇಳಿಯುವುದೇ ಇಲ್ಲ –

ನಾಭ್ಯೇತಿ ಮೇಘಪ್ರಭವಂ ಧರಿತ್ರೀಂ
ವಿಯದ್ಗತಂ ತದ್ ವಿಬುಧಾ ಹರಂತಿ ।
ಅರ್ಚಿಃ ಪ್ರಭಾವಾವೃತ ದಿಗ್ವಿಭಾಗಂ
ಆದಿತ್ಯವದ್ ದುಃಖವಿಭಾವ್ಯಬಿಂಬಂ ॥

ಈ ಮುತ್ತಿಗೆ ಬೆಲೆ ಎಷ್ಟೆಂದರೆ ಭೂಮಿಯಲ್ಲಿ ಸಿಗಬಹುದಾದ ಎಲ್ಲ ಬಂಗಾರ ಸಹಿತವಾಗಿ ಇಡಿ ಭೂಮಿಯೇ ಇದಕ್ಕೆ ಬೆಲೆಯಲ್ಲಿ ಸರಿಗಟ್ಟಲಾರದು ಮಹಾಪುಣ್ಯದಿಂದ ಇದು ಭೂಮಿಯಲ್ಲಿ ಯಾರಿಗಾದರೂ ಸಿಕ್ಕಿದ್ದೇ ಆದರೆ ಆತ ಸಾರ್ವಭೌಮ, ಚಕ್ರವರ್ತಿಯಾಗುತ್ತಾನೆ. ಅವನ ಪ್ರಜೆಗಳೂ ಸುಖಿಸುತ್ತಾರೆ. ಈ ಮುತ್ತು ಇರುವ ಆಸುಪಾಸಿನ ನೂರು ಯೋಜನ ವಿಸ್ತಾರದ ನೆಲವೆಲ್ಲ ಸಕಲ ಅನರ್ಥಗಳಿಂದ ದೂರವಾಗಿರುತ್ತದೆ. ಇಂಥ ರತ್ನ ದೀಪಗಳಿಂದ ಮುತ್ತೈದೆಯರು ಮದು ಮಕ್ಕಳಿಗೆ ಆರತಿ ಎತ್ತುತ್ತಿದ್ದಾರೆ.

ರತ್ನದಾರತಿಗೆ ಸುತ್ತ ಮುತ್ತನ್ನು ತುಂಬುವುದು ಬಣ್ಣ ಬಣ್ಣದ ಪ್ರಕಾಶಕ್ಕಾಗಿ. ಇಪ್ಪತ್ತೇಳು ನಕ್ಷತ್ರಗಳಲ್ಲಿ ಹುಟ್ಟುವ ಈ ಮುತ್ತುಗಳು ಗಾತ್ರದಲ್ಲಿಯೂ

ಬಣ್ಣದಲ್ಲಿಯೂ ಬೇರೆ ಬೇರೆಯಾಗಿದ್ದು ಇಪ್ಪತ್ತೇಳು ಬಗೆಯವುಗಳಾಗಿರುತ್ತವೆ. ಆದ್ದರಿಂದ ಈ ಆರತಿ ಮುತ್ತಿನ ಹರಿವಾಣದ ಚಿತ್ತಾರದಾರತಿ, ಚಿತ್ರವಿಚಿತ್ರದಾರತಿ !

'ಮುತ್ತೈದೆ'ಯೆಂದರೆ ಮುದಿ ಐದೆಯರು. ವೃದ್ಧ ಸುಮಂಗಲಿಯರು. ಮಾನವ ಸ್ತ್ರೀಯಾಗಿರದೆ ದೇವತಾ ಸ್ತ್ರೀಯರಾದುದರಿಂದ ಅವರು ವಯಸ್ಸಿನಲ್ಲಿ ವೃದ್ಧೆಯರಾದರೂ ಲಾವಣ್ಯದಲ್ಲಿ ಕೇವಲ ಹದಿನಾರರ ಹರೆಯದವರು. ಅವರಿಗೆ ಮನುಷ್ಯರಂತೆ ಜರೆ ಎಂಬುದಿಲ್ಲ. 'ನಿರ್ಜರ'ರೆಂದೇ ದೇವತೆಗಳಿಗೆ ಇನ್ನೊಂದು ಹೆಸರು.

ಆರತಿ ಬೆಳಗಲು ಧವಳದ ಪದ ಶ್ರೇಷ್ಠ. ಧವಳಿಸುವ ಅಂದರೆ ಬೆಳಗಿಸುವ ಪದವೆ ಧವಳ ಪದ. ಆರತಿ ಮದುಮಕ್ಕಳ ಮುಖವನ್ನು ಧವಳಿಸಿದರೆ, ಹಾಡು ಅವರ ಗುಣವನ್ನು ಹೊಗಳಿ ಧವಳಿಸುತ್ತದೆ ಆದ್ದರಿಂದ ಆರತಿಹಾಡಿಗೆ ಧವಳಪದವೆನ್ನುತ್ತಾರೆ.

ದೇವತಾ ಸ್ತ್ರೀಯರು ಆರತಿಯೆತ್ತಿ ಲಕ್ಷ್ಮೀನಾರಾಯಣರನ್ನು ಹೊಗಳುತ್ತ ಮಂಗಲ ಧ್ವನಿಯಿಂದ ಹಾಡಿದರಂತೆ. ಅದನ್ನು ಕೇಳಿದ ಎಲ್ಲ ದೇವತೆಗಳೂ ಋಷಿಗಳೂ ಅವರವರ ಹೃದಯದಲ್ಲಿ ಲಕ್ಷ್ಮೀನಾರಾಯಣರು ಪ್ರಕಟಗೊಂಡು ಹೊಳೆಯುತ್ತಿರುವುದನ್ನು ಕಂಡು ಚಿತ್ರದಲ್ಲಿ ಬರೆದಂತೆ ನಿಶ್ಚಲರಾಗಿ ನಿಂತರು ಎಂದು ಸ್ಕಂದಪುರಾಣ ಹೇಳಿದೆ–

ತದಾ ಚ ಗೀತಾನಿ ಸುಮಂಗಲಾನಿ
ಶ್ರಿಯಶ್ಚ ವಿಷ್ಣೋರ್ಗುಣವರ್ಣನಾನಿ ।
ದುರ್ಗಾದಯಶ್ಚಾಥ ಪುಲೋಮಜಾದ್ಯಾ
ದೇವ್ಯೋ ಜಗುಃ ಸಸ್ಮಿತ ಚಾರುವಕ್ತ್ರಾಃ ॥

ಯಥಾ ತದಾಕರ್ಣ್ಯ ಸುರಾಃ ಸಮಸ್ತಾ
ಮಹರ್ಷಯಶ್ಚಾಖಿಲಯೋಷಿತೋಽಪಿ ।
ಸ್ವಾಂತಸ್ತ್ವಮೈಕ್ಷಂತ ಸಹ ಶ್ರಿಯೇಶಂ
ಸ್ಫುರಂತಮಾಸನ್ ನನು ಚಿತ್ರವಚ್ಚ ॥

ಧವಳ ಎಂದು ಒಂದು ಬಗೆಯ ಹಾಡಿನ ಮಟ್ಟೂ ಇದೆ. ಯಕ್ಷಗಾನದಲ್ಲಿ ಕೊನೆಗೆ ಆರತಿ ಬೆಳಗಲು ಈ ಮಟ್ಟನ್ನು ಬಳಸುತ್ತಾರೆ. ಧವಳ ಧವಳಾರ ಡವಳ ಡವಳಾರ ಎಂದೆಲ್ಲ ಇದನ್ನು ಕರೆಯುತ್ತಾರೆ. ಪ್ರಕೃತದಲ್ಲಿ 'ಧವಳಾರ' ಎಂದು ಪಾಠಾಂತರವೂ ಇದೆ. ಶೋಬಾನೆ ಹಾಡುಗಳ ಒಂದು ಪ್ರಭೇದವಿದು. ನಾಲ್ಕರಿಂದ ಹದಿನೈದರವರೆಗೂ ಪಾದಗಳಿದ್ದು ಪಲ್ಲವಿಯಿರುವುದಿಲ್ಲ. ವಸ್ತುತಃ ಆರತಿಗೆ

ಧವಳವೆ ಎಂದಾಗಲೀ, ಧವಳ ಆರತಿಗೇ ಎಂದಾಗಲೀ ನಿಯಮವೇನಿಲ್ಲ. ಬೇರೆ ಬೇರೆ ಮಟ್ಟಿನ ಆರತಿ ಹಾಡುಗಳೂ ಇವೆ, ಬೇರೆ ಬೇರೆ ಸಂದರ್ಭದ ಡವಳಗಳೂ ಇವೆ. ಉದಾಹರಣೆಗೆ ದೇವತಾ ತಾರತಮ್ಯ ಡವಳ ವಾದಿರಾಜರದೇ ಉಪಲಬ್ಧವಿದೆ–

ಜಯ ಜಯತು ನರಹರಿಗೆ ಜಯ ಜಯತು ಶ್ರೀಹರಿಗೆ ।
ಜಯ ಜಯತು ಹರಿಯುರದಿ ಧರಿಸಿದ ಸಿರಿಗೆ ।
ಚತುರ್ಮುಖ ಬ್ರಹ್ಮ ವಾಯು ಸರಸ್ವತಿ ಭಾರತಿಯರಿಗೆ ।
ಭಕ್ತಿಯಿಂದ ಗರುಡ ಶೇಷ ರುದ್ರರಿಗೆರಗುವೆನು.. ।

ತಾರತಮ್ಯ ಡವಳವನು ಪೇಳುವ ಸತಿಯರಿಗೆ
ಕಾಮಿತ ಫಲ ಕೊಡುವ ಶ್ರೀ ಹಯವದನ ॥

ಕನ್ನಡ ಧವಳಗಳಿಗೆ ಛಂದಸ್ಸಿನ ನಿಯಮವಿಲ್ಲವೆಂದು ಮಾನಸೋಲ್ಲಾಸದಲ್ಲಿ ಹೇಳಿದೆ–

ಧವಲಾದಿಪದ್ಯೈಃ ಪಾದ್ಯೈರಾಶೀರ್ವಾದ ಸಮನ್ವಿತೈಃ ।
ಛಂದಸಾ ಯೇನ ಕೇನಾಪಿ ಕರ್ತವ್ಯೋ ಧವಲಾಭಿಧಃ ॥

'ಧವಲ' ಮುಂತಾದ ಪದಗಳಿಂದ ಅಂದರೆ ತತ್ಸಮಾನಾರ್ಥದ ಆರತಿ ಬೆಳಗೋಣ, ಆರತಿಯೆತ್ತಿರೆ ಎಂದು ಮುಂತಾದ ಪದಗಳಿಂದಲೂ, ಜಯವಾಗಲಿ ಮಂಗಳವಾಗಲಿ ಎಂದು ಮುಂತಾಗಿ ಆಶೀರ್ವಾದಗಳಿಂದಲೂ ಯುಕ್ತವಾಗಿದ್ದು ಯಾವುದೇ ಛಂದಸ್ಸಿನಲ್ಲಿರುವಂತೆ ಧವಳ ಪದಗಳನ್ನು ರಚಿಸಬಹುದು'.

ಕನ್ನಡದಲ್ಲಿ ಡವಳಾರ ಎಂಬ ಮಟ್ಟು ಇರುವಂತೆ ಸಂಸ್ಕೃತದಲ್ಲಿಯೂ ಧವಳ ಅಥವಾ ಧವಲಾಂಕ ಎಂದು ಒಂದು ಛಂದಸ್ಸಿದೆ. ಅದರ ಲಕ್ಷಣ ಹೀಗೆ ಉಕ್ತವಾಗಿದೆ–

ದ್ವಿಜ ವರಗಣಯುಗಸನಗಣನಗಣಯುಗಲಕಂ
ವಿಮಲ ವಲಯಮಪಿ ಚ ಕಲಯ ಸಕಲ ಜನಸುಖಂ ।
ಫಣಿಪತಿ ವರಭಣಿತಮಮಲಮಿಹ ಹಿತಂ
ವಿಮಲಕವಿಸುಹೃದಿವ ಲಲಿತಮಿತಿ ಭುವಿ ವಿದಿತಂ ॥

ಒಂದನೆ, ಎರಡನೆ ಮತ್ತು ನಾಲ್ಕನೆ ಪಾದಗಳಲ್ಲಿ ಆರು ನಗಣಗಳು ಮತ್ತು ಒಂದು ಗುರು, ಮೂರನೆ ಪಾದದಲ್ಲಿ ಐದು ನಗಣಗಳು ಮತ್ತು ಒಂದು ಗುರು. ನಗಣವೆಂದರೆ ಮೂರು ಲಘು ಅಕ್ಷರಗಳಿಂದ ಕೂಡಿದ ಎಂದು ಗಣ.

– ೯೪ –

**ಬೊಮ್ಮ ತನ್ನರಸಿ ಕೂಡೆ ಬಂದೆರಗಿದ**
**ಉಮ್ಮೆಯರಸ ನಮಿಸಿದ ।**
**ಅಮ್ಮರರೆಲ್ಲರು ಬಗೆ ಬಗೆ ಉಡುಗೊರೆಗಳ**
**ರಮ್ಮೆಯರಸಗೆ ಸಲಿಸಿದರು ॥**

ಚತುರ್ಮುಖ ಬ್ರಹ್ಮನು ತನ್ನ ರಾಣಿ ಸರಸ್ವತಿಯೊಡನೆ ಬಂದು ವಧೂವರರಾಗಿ ಕುಳಿತಿದ್ದ ಲಕ್ಷ್ಮೀನಾರಾಯಣರಿಗೆ ನಮಸ್ಕರಿಸಿದ. ಹೀಗೆ ಇಂದ್ರಾದಿ ದೇವತೆಗಳೆಲ್ಲರೂ ಪತ್ನೀ ಸಮೇತರಾಗಿ ಬಂದು ನಮಸ್ಕರಿಸಿದರು. ಬಳಿಕ ಎಲ್ಲರೂ ರಮೆಯ ಅರಸನಾದ ನಾರಾಯಣನಿಗೆ ಬಗೆಬಗೆಯ ಉಡುಗೊರೆಗಳನ್ನಿತ್ತರು.

ಹಿಂದಿನ ಎರಡು ನುಡಿಗಳಲ್ಲಿ ಆರತಕ್ಷತೆಯ ಬಗ್ಗೆ ಹೇಳಿದ ಅನಂತರ ಸಪ್ತಪದಿ ಶಾಸ್ತ್ರ ಅರುಂಧತೀ ದರ್ಶನ, ಹೂವಿನ ಚೆಂಡಾಟ, ಉರುಟಾಣೆಗಳ ಬಳಿಕ ಉಡುಗೊರೆ ಕಾರ್ಯಕ್ರಮ.

ವರನು ವಧುವಿನ ಕೊರಳಿಗೆ ಮಾಂಗಲ್ಯವನ್ನು ಕಟ್ಟಿದನೆಂದರೆ ಅಲ್ಲಿಗೆ ಹೆಣ್ಣು ಕೊಟ್ಟವರ ಕರ್ತವ್ಯಗಳ ಮುಗಿದುವು ಮುಂದೆ ವಧೂವರರು ವಿವಾಹವೇದಿಕೆಗೆ ಬಂದು ಹಸೆಮಣೆಯೇರಿ ಆರತಕ್ಷತೆ ಮಾಡಿಸಿಕೊಂಡು ವಿವಾಹಹೋಮ ನಡೆಸಬೇಕು ಸಹಧರ್ಮಿಣೀ ಪ್ರಾಪ್ತಿಯಿಂದ ವರನಿಗೆ ಔಪಾಸನಾಗ್ನಿ ಲಭಿಸುತ್ತದೆ ಆ ಅಗ್ನಿಯ ಸಿದ್ಧಿಗಾಗಿ ವಿವಾಹ ಹೋಮ. ಸಂಪತ್ತನ್ನು ಬೇಡಿ ಪವಮಾನಾಗ್ನಿಗೂ, ದಾಂಪತ್ಯ ಪ್ರೇಮವನ್ನು ಬೇಡಿ ಅರ್ಯಮನಿಗೂ, ಸಕಲ ಪುರುಷಾರ್ಥಗಳನ್ನು ಬೇಡಿ ಪ್ರಜಾಪತಿಗೂ ಆಜ್ಯಾಹುತಿ ನೀಡಿ ವರನು ವಧುವಿನ ಪಾಣಿಗ್ರಹಣ ಮಾಡಬೇಕು ಎದ್ದು ನಿಂತು ವಧುವಿನ ಕೈ ಹಿಡಿದೆತ್ತಬೇಕು. ಆಗ ಹೇಳುವ ಮಂತ್ರ–

ಗೃಭ್ಣಾಮಿ ತೇ ಸೌಭಗತ್ವಾಯ ಹಸ್ತಂ
ಮಯಾ ಪತ್ಯಾ ಜರದಷ್ಟಿರ್ಯಥಾಸಃ ।
ಭಗೋ ಅರ್ಯಮಾ ಸವಿತಾ ಪುರಂಧಿ–
ರ್ಮಹ್ಯಂ ತ್ವಾದುರ್ಗಾರ್ಹಪತ್ಯಾಯ ದೇವಾಃ ॥

'ಸೌಭಾಗ್ಯಕ್ಕಾಗಿ ನಾ ನಿನ್ನ ಪಾಣಿಗ್ರಹಣ ಮಾಡುವೆ. ನನ್ನೊಡನೆ ಚಿರಕಾಲ ಬಾಳಿ ಮುದಿತನ ಹೊಂದು. ಅಂದಿನವರೆಗೂ ನಿನ್ನ ಸಹಾಯದಿಂದ ಗೃಹಸ್ಥ ಧರ್ಮವನ್ನು ನಾನು ನಡೆಸಲೆಂದು ಭಗ ಅರ್ಯಮ ಸವಿತೃ ಪುರಂಧಿ ಮುಂತಾದ ದೇವತೆಗಳೇ ನಿನ್ನನ್ನು ನನಗೆ ಅನುಗ್ರಹಿಸಿದ್ದಾರೆ'.

ಬಳಿಕ ಲಾಜಹೋಮ. ವಧುವಿನ ಕೈಯಿಂದ ಅರ್ಯಮಾಗ್ನಿಗೆ ಲಾಜಾಹುತಿ ಕೊಡಿಸಿ ಅವಳ ಕೈಹಿಡಿದು ನಡೆಸುತ್ತ ಪೂರ್ಣಕುಂಭ ಸಹಿತವಾದ ಅಗ್ನಿಗೆ ಪ್ರದಕ್ಷಿಣೆ ಮಾಡಿಸಬೇಕು. ಆಗ ಹೇಳುವ ಮಂತ್ರ –

ಅಮೋಹಮಸ್ಮಿ ತಾವೇಹ ವಿವಹಾವಹೈ ।
ಪ್ರಜಾಂ ಪ್ರಜನಯಾವಹೈ ಸಂಪ್ರಿಯೌ ರೋಚಿಷ್ಣೂ
ಸುಮನಸ್ಯಮಾನೌ ಜೀವೇವ ಶರದಃ ಶತಂ ॥

'ನಾನು ರಾಗ, ನೀನು ಸಾಹಿತ್ಯ, ನಾನು ಅಂತರಿಕ್ಷ, ನೀನು ಭೂಮಿ. ನಾವಿಬ್ಬರೂ ವಿವಾಹವಾಗೋಣ, ಒಂದಾಗೋಣ ಸಂತತಿಯನ್ನು ಪಡೆಯೋಣ. ಪರಸ್ಪರ ಪ್ರೀತಿಯಿಂದ ನಲಿಯುತ್ತ ನೂರು ವರ್ಷ ಬಾಳೋಣ' 'ಪರಿಣಯ' ಎಂದರೆ ಇನ್ನೇನೂ ಅಲ್ಲ ವಧುವನ್ನು ಅಗ್ನಿಗೆ ಹೀಗೆ ಪ್ರದಕ್ಷಿಣೆ ಮಾಡಿಸುವುದು.

ವಿವಾಹ ಎಂದರೆ ಗಂಡು ಹೆಣ್ಣನ್ನು ತನ್ನ ವಶಕ್ಕೆ ಒಯ್ಯುವುದೆಂದು ಹೇಳುವುದುಂಟು. ಆದರೆ ಈ ಮಂತ್ರ ಹೇಳುವಂತೆ ಗಂಡು ಹೆಣ್ಣು ಇಬ್ಬರೂ ಪ್ರೀತಿಯಿಂದ ಜೊತೆ ಸೇರುವುದೇ 'ವಿವಾಹ'.

ಪ್ರದಕ್ಷಿಣೆಯಾದ ಬಳಿಕ ಅಗ್ನಿಯ ಉತ್ತರ ಭಾಗದಲ್ಲಿರುವ ಕಲ್ಲಿನ ಮೇಲೆ ವಧುವನ್ನು ನಿಲ್ಲಿಸಿ 'ಶರೀರದಾರ್ಢ್ಯ, ಮನೋದಾರ್ಢ್ಯಗಳಲ್ಲಿ ನೀನು ಕಲ್ಲಿನಂತಾಗು' ಎನ್ನಬೇಕು – 'ಅಶ್ಮೇವ ತ್ವಂ ಸ್ಥಿರಾ ಭವ'

ಹೀಗೆ ವರುಣಾಗ್ನಿಗೂ, ಪೂಷಾಗ್ನಿಗೂ ಲಾಜಾಹುತಿ ಕೊಡಿಸಿ ಪ್ರದಕ್ಷಿಣೆ ಮಾಡಿಸಿ ಕಲ್ಲಿನ ಮೇಲೇರಿಸಿ ಉಳಿದ ಲಾಜಾಹುತಿಯನ್ನು ಪ್ರಜಾಪತಿಗೆ ಕೊಡಿಸಿ ವಧುವನ್ನು ಒಂದೊಂದಾಗಿ ಏಳು ಅಕ್ಕಿರಾಶಿಗಳ ಮೇಲೆ ನಡೆಸಬೇಕು 'ಇಷ ಏಕಪದೀ ಭವ' ಎಂದು ಮುಂತಾಗಿ ಮಂತ್ರ ಹೇಳಬೇಕು. ಅನ್ನ, ಬಲ, ಸಂಪತ್ತು, ಪ್ರಣಯಸುಖ, ಸಂತತಿ, ಅನುಕೂಲ ಋತು, ಸಖ್ಯ ಈ ಏಳು ಅಭೀಷ್ಟಗಳಿಗಾಗಿ ನೀನು ನನ್ನೊಡನೆ ಏಳು ಹೆಜ್ಜೆಯಿಡು. ಇವುಗಳ ವಿಷಯದಲ್ಲಿ ನೀನು ನನ್ನನ್ನು ಅನುಸರಿಸುತ್ತಿರು. ಅಂದರೆ ಸುಖದುಃಖಗಳಲ್ಲಿ ನಾವಿಬ್ಬರೂ ಒಂದಾಗೋಣ. ಈ ಉದಾತ್ತ ಸಂಕಲ್ಪವೇ ಸಪ್ತಪದಿ ಇದು ಕೇವಲ ಶಾಸ್ತ್ರ, ನಿಸ್ಸಾರವಾದ ಕ್ರಿಯಾಕಲಾಪವೆಂದು ತಿಳಿದರೆ ವಿಪರ್ಯಾಸ.

ರಾತ್ರಿ ವಧುವಿಗೆ ಅರುಂಧತೀದರ್ಶನ ಮಾಡಿಸಬೇಕು. ಅಂದರೆ ಧ್ರುವ ಅರುಂಧತಿ ಸಪ್ತರ್ಷಿಗಳು ಶುಕ್ರ ಗುರು ಮುಂತಾದ ಗ್ರಹಗಳು ಇವರನ್ನು ನಮಸ್ಕರಿಸಿ 'ಜೀವಪತ್ನೀ ಪ್ರಜಾಂ ವಿಂದೇಯ', 'ದೀರ್ಘಸುಮಂಗಲಿಯಾಗಿ ಸುಪುತ್ರವತಿಯಾಗಿ ಬಾಳುವಂತೆ ಅನುಗ್ರಹಿಸಿರಿ' ಎಂದು ಪ್ರಾರ್ಥನೆ ಮಾಡಿಸಬೇಕು. ಅರುಂಧತೀ ದರ್ಶನವೆಂದರೆ ಕೇವಲ ಅರುಂಧತಿಯ ದರ್ಶನವಲ್ಲ. ಧ್ರುವ ಸಪ್ತರ್ಷಿಗಳು ಶುಕ್ರಾದಿಗಳನ್ನೂ ದರ್ಶನ ಮಾಡಲೇಬೇಕು. ಹಾಗಿದ್ದರೆ 'ಅರುಂಧತೀ ದರ್ಶನ' ಎಂದೇಕೆ ಪ್ರಸಿದ್ಧಿ? ಇದಕ್ಕೆ ಕಾರಣವನ್ನು ಕೆಲವರು ಹೀಗೆ ಊಹಿಸುತ್ತಾರೆ–

'ಅಕ್ಷಮಾಲಾ ವಸಿಷ್ಠೇನ ಸಂಗತಾಧಮಯೋನಿಜಾ'

ಎಂದು ಮನುಸ್ಮೃತಿ ಹೇಳುವಂತೆ ಅಕ್ಷಮಾಲೆ ಎಂಬ ಒಬ್ಬ ಹೀನಜಾತಿಯ ಹೆಣ್ಣು ವಸಿಷ್ಠರನ್ನು ಮದುವೆಯಾದಳು ಅವಳಿಗೇ ಇನ್ನೊಂದು ಹೆಸರು ಅರುಂಧತಿ ಜಾತಿ ಮತ ಭೇದ ಭಾವನೆಯ ಸೋಂಕಿಲ್ಲದ ನಿರ್ಮಲ ಮನಸ್ಸಿನ ಅರುಂಧತಿಯಂಥ ಹೆಣ್ಣಿನ ಆಶೀರ್ವಾದ ವಧುವಿಗೆ ಬೇಕೆಂದು ಅರುಂಧತಿಯ ದರ್ಶನಕ್ಕೆ ಪ್ರಾಶಸ್ತ್ಯ ಬಂದಿದೆ ಎಂದು.

ಆದರೆ ಅರುಂಧತಿ ಕರ್ದಮ ಪ್ರಜಾಪತಿಯ ಪುತ್ರಿ. ಈಕೆಯ ತಾಯಿ ಸ್ವಾಯಂಭುವ ಮನು ಮಹಾರಾಜನ ಪುತ್ರಿ ದೇವಹೂತಿ. ಈಕೆಯ ಸೋದರಿಯರು ಮರೀಚಿ ಅಂಗೀರಸ ಮುಂತಾದ ಬ್ರಹ್ಮರ್ಷಿಗಳ ಮಡದಿಯರು ಸೋದರ ಕಪಿಲ ಮಹರ್ಷಿ. ಹೀನ ಜಾತಿಯವಳೆನ್ನಲಾದ ಅಕ್ಷಮಾಲೆ ಈ ಅರುಂಧತಿಯೆ ಎನ್ನುವುದು ಅಶಕ್ಯ. ವಸ್ತುತಃ ಅರುಂಧತಿ ಮಹಾ ಪತಿವ್ರತೆಯಾದ್ದರಿಂದಲೇ ಅವಳ ಆಶೀರ್ವಾದಕ್ಕೆ ಪ್ರಾಶಸ್ತ್ಯ ಬಂದಿರಬೇಕು ಮಾಂಗಲ್ಯ ಕಟ್ಟಿದ ಬಳಿಕ ವಧು ಮೌನವಾಗಿದ್ದು ವಿವಾಹಹೋಮಾನಂತರ ಅರುಂಧತೀ ದರ್ಶನವಾದ ಬಳಿಕವೇ ಮೌನ ಮುರಿಯಬೇಕು ಎಂದು ವಿಧಿ ಇರುವುದರಿಂದ ವಧು ಮುಂದೆ ಅರುಂಧತಿಯಂತೆ ಪತಿವ್ರತೆಯಾಗಿ ಅಂದರೆ ಪತಿಯೊಡನೆ ಪ್ರಿಯಭಾಷಿಣಿಯಾಗಿ ಬಾಳಬೇಕೆಂಬ ಅಭಿಪ್ರಾಯವೂ ಇರಬಹುದು.

ಹೀಗೆ ವಿವಾಹಹೋಮದಿಂದಾರಂಭಿಸಿ ಅರುಂಧತೀದರ್ಶನದವರೆಗಿನ ಕಾರ್ಯ ಕಲಾಪವನ್ನೂ ಹೂವಿನ ಚೆಂಡಾಟ, ಉರುಟಾಣೆಗಳನ್ನೂ ನಾಲ್ಕುದಿನದ ಉತ್ಸವವ ನಡೆಸಿದರು ಎಂದು ಒಂದು ಮಾತಿನಲ್ಲಿಯೆ ಹಿಂದೆ ಹೇಳಿದೆ. ಇದೀಗ ಅನಂತರದ ಉಡುಗೊರೆಯ ಕಾರ್ಯಕ್ರಮ. ಹೊಸದಾಗಿ ಸಂಸಾರ ಪ್ರಾರಂಭಿಸುವ ದಂಪತಿಗಳಿಗೆ ಅನುಕೂಲವಾಗಲೆಂಬ ದೃಷ್ಟಿಯಿಂದ ಗೃಹೋಪಯೋಗಿ ವಸ್ತುಗಳು, ವಸ್ತ್ರಾಭರಣಗಳು, ಹಣ ಮುಂತಾದುವನ್ನು ಬಂಧುಮಿತ್ರರು ಉಡುಗೊರೆಯಾಗಿ ನೀಡುತ್ತಾರೆ. ಬಳಿಕ ವಧೂವರರು ಸಭಾ ಜನರಿಗೆ ನಮಿಸುತ್ತಾರೆ. ಸಭಿಕರು

ಆಶೀರ್ವದಿಸುತ್ತಾರೆ. ಉಡುಗೊರೆ ಓದಿಸುವುದಕ್ಕೂ ಆಶೀರ್ವಾದ ಮಾಡುವುದಕ್ಕೂ ಸಂಪ್ರದಾಯದಲ್ಲಿ ಹಾಡುಗಳಿವೆ

ಲಕ್ಷ್ಮೀಶೋಭನ ಪದದಲ್ಲಿ ಉಡುಗೊರೆ ಕಾರ್ಯಕ್ರಮ ಹೇಳಿದೆ. ಆಶೀರ್ವಾದವಿಲ್ಲ. ಅದಕ್ಕೆ ಬದಲಾಗಿ ಸಭಾ ಜನರ ವಧೂವರರಿಗೆ ನಮಿಸುವುದನ್ನು ವರ್ಣಿಸಲಾಗಿದೆ. ವಿವಾಹ ವಿಧಿವಿಧಾನಗಳಲ್ಲಿ ಈ ನಮಸ್ಕಾರವಿಲ್ಲ. ಅದನ್ನೇಕೆ ಇಲ್ಲಿ ಸೇರಿಸಲಾಗಿದೇ ? ಉಡುಗೊರೆ ಓದಿಸುವುದು ಸಂಪ್ರದಾಯ ಮಾತ್ರವೇ ಅಲ್ಲ. ಪುರಾಣದಲ್ಲೂ ಇದೆ –

ಏಕಾಸನೇ ತೌ ಸಹ ಸನ್ನಿವಿಷ್ಟೌ
ಬ್ರಹ್ಮಾಂಡಮಾತಾಪಿತರೌ ಮನೋಜ್ಞೌ ॥
ಸಂಪೂಜಯಾಮಾಸುರನರ್ಘ್ಯವಸ್ತ್ರ–
ವಿಭೂಷಣೈರ್ದೇವಗಣಾಃ ಸಯೋಷಾಃ ॥

ದೇವತೆಗಳು ಪತ್ನೀಸಮೇತರಾಗಿ ಬಂದು ಹಸೆಮಣೆಯ ಮೇಲೆ ಏಕಾಸನದಲ್ಲಿ ಕುಳಿತ ಪ್ರಪಂಚದ ಮಾತಾಪಿತರಾದ ಲಕ್ಷ್ಮೀನಾರಾಯಣರಿಗೆ ಅನರ್ಘ್ಯ ವಸ್ತ್ರಾಭರಣಗಳನ್ನು ಉಡುಗೊರೆಯಾಗಿ ಇತ್ತು ಸಂತೋಷಗೊಳಿಸಿದರು – ಎಂದು ಸ್ಕಂದಪುರಾಣ ಹೇಳಿದೆ.

ಋಗ್ವೇದದ ಸೂರ್ಯಾಸೂಕ್ತದಲ್ಲಿಯೂ ಸೂರ್ಯಾಸೋಮ ದಂಪತಿಗಳಿಗೆ ದೇವತೆಗಳು ಉಡುಗೊರೆ ನೀಡಿದ್ದಾರೆ –

ಮನೋ ಅಸ್ಯಾ ಅನ ಆಸೀತ್ ದ್ಯೌರಾಸೀದುತ ಚ್ಛದಿಃ ।
ಶುಕ್ರಾವನಡ್ವಾಹಾವಾಸ್ತಾಂ ಯದಯಾತ್ ಸೂರ್ಯಾ ಗೃಹಂ ॥

'ಸೂರ್ಯೆ ಪತಿಗೃಹಕ್ಕೆ ತೆರಳುವ ಮುನ್ನ ಮನೋಭಿಮಾನಿ ದೇವನು ವಧೂವರರಿಗೆ ರಥವನ್ನು ನೀಡಿದನು. ದ್ಯುಲೋಕಾಭಿಮಾನಿ ಹೊದೆಯುವ ವಸ್ತ್ರಗಳನ್ನು ನೀಡಿದ. ಸೂರ್ಯ ಚಂದ್ರರು ಗೋವುಗಳನ್ನು ನೀಡಿದರು. ಈ ಮಂತ್ರದಲ್ಲಿ 'ರಥವನ್ನು ನೀಡಿದ, ವಸ್ತ್ರವನ್ನು ನೀಡಿದ, ಗೋವುಗಳನ್ನು ನೀಡಿದರು' ಎಂದು ಸ್ಪಷ್ಟ ಹೇಳದೆ ದೇವತೆಗಳು ತಾವೇ ರಥ, ವಸ್ತ್ರ, ಗೋವುಗಳಾದರೆಂದಿದೆ ಏಕೆಂದರೆ ರಥಾದಿಗಳೆಲ್ಲ ಕೇವಲ ಸಾಂಕೇತಿಕ. ಸೂರ್ಯಾ ಸೋಮರೆಂದರೆ ಲಕ್ಷ್ಮೀನಾರಾಯಣರೆ. ಅವರು ಜಗತ್ತಿನ ಮಾತಾಪಿತರು. ಜಗತ್ತೇ ಅವರದು. ಅವರಿಗೆ ಕೊಡಲು ಈ ದೇವತೆಗಳದ್ದೆಂದು ಏನಿದೆ ಜಗತ್ತಿನಲ್ಲಿ ? ಆದ್ದರಿಂದ ರಥಾದಿಗಳನ್ನು ಕೊಡುವ ಮೂಲಕ ತಮ್ಮನ್ನೇ ತಾವು ಅರ್ಪಿಸಿಕೊಂಡರು. ಲೋಕದಲ್ಲಿಯೂ ಉಡುಗೊರೆ ಓದಿಸುವುದು ಬರೀ ಆಡಂಬರದ ಪ್ರದರ್ಶನವಾಗಬಾರದು.

ಅಂತಃಕರಣ ಪೂರ್ವಕ ಉಡುಗೊರೆ ನೀಡಬೇಕು ಆದ್ದರಿಂದಲೆ ಉಡುಗೊರ ನೀಡಿ ಅಕ್ಷತೆಕಾಳು ಹಾಕಿ ಆಶೀರ್ವದಿಸುವುದು ರೂಢಿ. ಆಶೀರ್ವಾದ ಮುಖ್ಯ. ಉಡುಗೊರೆ ಸಾಂಕೇತಿಕ. ಬ್ರಹ್ಮರುದ್ರಾದಿ ದೇವತೆಗಳು ಅದಕ್ಕೆಂದೇ ಆಶೀರ್ವಾದದ ಬದಲಿಗೆ ನಮಸ್ಕಾರ ಮಾಡಿದರು. ಏಕೆಂದರೆ ಇಲ್ಲಿ ವಧೂವರರು ಬ್ರಹ್ಮಾಂಡ ಮಾತಾಪಿತರು. ಅವರಿಗೆ ಯಾರೂ ಆಶೀರ್ವಾದ ಕೊಡಲಾರರು. ಆಶೀರ್ವಾದ ಬೇಡಬಲ್ಲರು. ಆದ್ದರಿಂದ ಆಶೀರ್ವಾದದ ಬದಲಿಗೆ ನಮಸ್ಕಾರ. 'ಮಾಂಗಲ್ಯಂ ತಂತುನಾನೇನ ಮಮ ಜೀವನ ಹೇತುನಾ' ಎನ್ನುವುದು ನಾರಾಯಣನ ವಿಷಯದಲ್ಲಿ 'ಜಗಜ್ಜೀವನ ಹೇತುನಾ' ಎಂದಾಗುವಂತೆಯೇ ಈ ವ್ಯತ್ಯಾಸವೂ ಅನಿವಾರ್ಯ.

ಅಥವಾ 'ಒಲಿದು ಬಕುತರಿಗಾಗಿ ಮದುವೆಗ್ಹವಣಿಸಿಕೊಂಡ' ಎನ್ನುವಂತೆ ಇದೊಂದು ಲಕ್ಷ್ಮೀನಾರಾಯಣರು ಆಡುವ ಮದುವೆಯ ನಾಟಕ. ಇಲ್ಲಿ ದೇವತೆಗಳು ಬರೀ ಪ್ರೇಕ್ಷಕರಲ್ಲ. ಅವರೂ ಯಥಾಶಕ್ತಿ ಪಾತ್ರವಹಿಸಲೇಬೇಕು. ಆದರೆ ಉಡುಗೊರೆ ಓದಿಸುವ ನಟನೆ ಕಷ್ಟ. ಅದರಲ್ಲಿ ಉಡುಗೊರೆ ಕೊಟ್ಟರೆ ಸಾಲದು ಅಕ್ಷತೆ ಕಾಳು ಹಾಕಿ ಆಶೀರ್ವದಿಸಬೇಕಾಗುತ್ತದೆ. ಆರ್ಶೀವಾದ ಬೇಡುವ ಬ್ರಹ್ಮಾದಿ ದೇವತೆಗಳೆ ಆಶೀರ್ವಾದ ನೀಡಬೇಕೆಂದರೆ ಸಂಕೋಚ. ಆದ್ದರಿಂದ ಮೊದಲಿಗೆ ಮನಸ್ಸಿನಿಂದಲೆ ಬಾಗಿ ನಮಿಸುತ್ತಾರೆ. ನಮಿಸಿ ಉಡುಗೊರೆ ಓದಿಸುವ ನಟನೆಗೆ ಅನುಮತಿ ಬೇಡುತ್ತಾರೆ. ಆದ್ದರಿಂದಲೆ ಮೊದಲಿಗೆ ನಮಸ್ಕಾರವನ್ನು ಹೇಳಿದೆ ಅನಂತರವಲ್ಲ

ಅಥವಾ ಜಗದೊಡೆಯನಿಗೆ ಉಡುಗೊರೆ ಎಂದರೆ ಕೆರೆಯ ನೀರನು ಕೆರೆಗೆ ಚೆಲ್ಲಿ ಎಂಬಂತೆ ಒಂದು ಪೂಜೆ. ಅವನದನ್ನೆ ಅವನಿಗೆ ಕೊಡುವ ಮುನ್ನ ಕ್ಷಮೆ ಬೇಡಬೇಕು. ಅವನು ಕ್ಷಮಿಸಿ ಸ್ವೀಕರಿಸಬೇಕು. ಅದಕ್ಕೆ, ಮೊದಲು ದೇವತೆಗಳು ಈ ಪೂಜೆಗೆ ಅನುಮತಿ ಬೇಡುತ್ತಿದ್ದಾರೆ. ಅನುಮತಿ ಪಡೆದು ಉಡುಗೊರೆ ನೀಡಿ ಆಶೀರ್ವದಿಸುವ ನಟನೆಯನ್ನು ಮಾಡುತ್ತಿದ್ದಾರೆ. ಭವಿಷ್ಯೋತ್ತರ ಪುರಾಣದ ವೆಂಕಟೇಶ ಮಹಾತ್ಮೆಯಲ್ಲಿ ಪದ್ಮಾವತಿಗೆ ಆಶೀರ್ವದಿಸುವ ವೈಖರಿ ಹೀಗಿದೆ–

ಸಾವಿತ್ರೀವ ಚ ಕಲ್ಯಾಣೀ ಬಹು ಪುತ್ರವತೀ ಭವ ।
ಸರ್ವ ಲೋಕಸ್ಯ ಜನನೀ ಭವ ಮಂಗಳದಾಯಿನೀ ॥

'ಸಾವಿತ್ರಿಯಂತೆ ನೀನು' ಅಂದರೆ ಸವಿತನ ಮಗಳಾದ ಸೂರ್ಯೆಯಂತೆ ನೀನು. ಏಕೆಂದರೆ ನೀವಿಬ್ಬರೂ ಲಕ್ಷ್ಮಿಯ ಅವತಾರಗಳು. ಆದ್ದರಿಂದ ನೀನು ಕಲ್ಯಾಣಿ, ಮಂಗಳದೇವತೆ. ನೀನು ಬಹು ಪುತ್ರವತಿ ಆಗು, ಅಂದರೆ ಆಗಿರುವಿ ಎಂಬ ಮರ್ಯಾದೆ ನಿನಗೆ ಸಲ್ಲಲಿ. ಏಕೆಂದರೆ ಬ್ರಹ್ಮರುದ್ರಾದಿ ಸರ್ವಲೋಕ ಜನನಿ ನೀನೆ.

ಇಂಥ ನೀನು ಸರ್ವಲೋಕಕ್ಕೆ ಮಂಗಲದಾಯಕಳಾಗು. 'ಇದು ಆಶೀರ್ವಾದ, ತೋರಿಕೆಗೆ. ವಸ್ತುತಃ ಪ್ರಾರ್ಥನೆ. ಹೀಗೆ ಬ್ರಹ್ಮರುದ್ರಾದಿಗಳು ಲಕ್ಷ್ಮೀನಾರಾಯಣರಿಗೆ ನಮನ ರೂಪವಾದ ಆಶೀರ್ವಾದ ಮಾಡುತ್ತ ಉಡುಗೊರೆ ನೀಡಿದರು.

– ೯೫ –

**ಸತ್ಯಲೋಕದ ಬೊಮ್ಮ ಕೌಸ್ತುಭರತ್ನವನಿತ್ತ**
**ಮುಕ್ತ ಸುರರು ಮುದದಿಂದ ।**
**ಮುತ್ತಿನ ಕಂಠೀ ಸರ ಮುಖ್ಯಪ್ರಾಣನಿತ್ತ**
**ಮಸ್ತಕ ಮಣಿಯ ಶಿವನಿತ್ತ ॥**

ಸತ್ಯಲೋಕಾಧಿಪತಿ ಚತುರ್ಮುಖನು ಶ್ರೀಹರಿಗೆ ಕೌಸ್ತುಭರತ್ನವನ್ನು ಉಡುಗೊರೆಯಾಗಿತ್ತ. ಮುಕ್ತರಾದ ಸುರರು ಆನಂದದಿಂದ ಮುತ್ತಿನ ಕಂಠಿಯನ್ನಿತ್ತರು. ಸರವನ್ನು ಮುಖ್ಯಪ್ರಾಣನಿತ್ತ. ಮಸ್ತಕದ ಮಣಿಯನ್ನು ಶಿವನಿತ್ತ.

ಅಮರರೆಲ್ಲರೂ ರಮೆಯರಸನಿಗೆ ಬಗೆಬಗೆ ಉಡುಗೊರೆಗಳನ್ನಿತ್ತರೆಂದು ಹಿಂದೆ ಹೇಳಿದೆ. ಅದರ ವಿವರಣೆಗಾಗಿ ಅಮರರಲ್ಲಿ ಮುಖ್ಯರಾದ ಬ್ರಹ್ಮ ವಾಯು ರುದ್ರರ ಬಗ್ಗೆ ಇಲ್ಲಿ ಹೇಳಿದೆ 'ಮುತ್ತಿನ ಕಂಠಿ'ಯ ಅನಂತರ ಒಂದು ಅಲ್ಪ ವಿರಾಮ ಹಾಕಿ ಓದಬೇಕು. ಇಲ್ಲದಿದ್ದರೆ ಮುಕ್ತಸುರರು ಮುದದಿಂದ ಮುತ್ತಿನ ಕಂಠೀಸರವನ್ನೆ ಇತ್ತರೆ ಮುಖ್ಯಪ್ರಾಣನೇನಿತ್ತ? ಮುಖ್ಯಪ್ರಾಣ ಮಸ್ತಕದ ಮಣಿಯನ್ನಿತ್ತರೆ ಶಿವನೇನಿತ್ತ? 'ಮುಕ್ತಸುರರ ಮುದದಿಂದ' ಎಂದು ಒಂದು ಪಾಠವಿದೆ. ಈ ಪಾಠದಂತೆ ಮುಕ್ತ ಸುರರ ಮುದದಿಂದ ಮುಖ್ಯಪ್ರಾಣನೆ ಮುತ್ತಿನ ಕಂಠೀಸರವಿತ್ತ ಮತ್ತು ಮಸ್ತಕದ ಮಣಿಯನ್ನು ಶಿವನಿತ್ತ ಎಂದರೆ ತಪ್ಪೇನಿಲ್ಲ. ಆದರೆ 'ಮುಕ್ತಸುರರ ಮುದದಿಂದ' ಎಂಬ ಅಂಶ ಮುಖ್ಯಪ್ರಾಣನು ಮುಕ್ತರ ಆನಂದವನ್ನೆ ಸಂಸಾರದಲ್ಲಿಯೂ ಅನುಭವಿಸುವವನು ಎಂಬ ಅಭಿಪ್ರಾಯದಲ್ಲಿ ಅಸಂಗತವಲ್ಲದಿದ್ದರೂ ಮುಖ್ಯಪ್ರಾಣನನ್ನು ಅಷ್ಟು ಸ್ಪಷ್ಟ ಹೊಗಳುವ ಸ್ಥಳ ಇದಲ್ಲ. ಆದ್ದರಿಂದ 'ಮುಕ್ತಸುರರು ಮುದದಿಂದ' ಎಂಬ ಪಾಠವೆ ಇರಲಿ.

ಈ ಪಾಠದಲ್ಲಿ ಮುಕ್ತಸುರರು ಮುದದಿಂದ ಮುತ್ತಿನ ಕಂಠೀಸರವನ್ನೆ ಇತ್ತರೂ ಸರಿಯೆ. ಮುಂದೆ 'ಮುಖ್ಯಪ್ರಾಣ ಇತ್ತ ಮಸ್ತಕದ ಮಣಿಯನ್ನೆ ಶಿವನಿತ್ತ' ಎಂದು ಅನ್ವಯಿಸಬಹುದು. ಮುಖ್ಯಪ್ರಾಣ ಶಿವನ ಮೂಲಕ ಹರಿಗೆ ಚೂಡಾಮಣಿಯನ್ನಿತ್ತ. ಏಕೆ? ರುದ್ರಾದಿಗಳಾರಿಗೂ ಸ್ವಾತಂತ್ರ್ಯವಿಲ್ಲ. ಅವರೊಳಗೆ ಅಂತರ್ಯಾಮಿಯಾಗಿ ನಿಂತು ಅವರಿಗೆ ಪೂಜಾದ್ರವ್ಯಗಳನ್ನೊದಗಿಸಿಕೊಟ್ಟು ಅವರಿಂದ ಹರಿಪೂಜೆ ಮಾಡಿಸುವವ ಮುಖ್ಯಪ್ರಾಣ. ಆದ್ದರಿಂದ ರುದ್ರಾದಿಗಳ ಮೂಲಕವೆ ಹರಿಗೆ ಉಡುಗೊರೆ ಸಲ್ಲಿಸುತ್ತಾನೆ. ಪ್ರತ್ಯೇಕವಾಗಿ ತಾನೂ

ಕೊಡಬಹುದಾಗಿತ್ತು. ಆದರೆ ಕಣ್ವಶಾಪ ಪ್ರಯುಕ್ತ ಮೂಲರೂಪದಲ್ಲಿ ಲೋಕಪ್ರಸಿದ್ಧಿಗೆ ಕಾರಣವಾದ ಇಂಥ ಕಾರ್ಯವನ್ನು ಹೆಚ್ಚಾಗಿ ಆತ ಮಾಡಲಾರ.

ಈಗ ಮಸ್ತಕದ ಮಣಿಯನ್ನೇ ಮುಖ್ಯಪ್ರಾಣ ಶಿವನ ಮೂಲಕ ಹರಿಗೆ ಕೊಡಿಸುವುದರಲ್ಲಿ ಔಚಿತ್ಯವೂ ಉಂಟು. ಏಕೆಂದರೆ–

ಕೌಸ್ತುಭೋ ಬ್ರಹ್ಮಣೋ ರೂಪಂ ಪ್ರಾಣಶ್ಚೂಡಾಮಣಿಸ್ತಥಾ ।

'ಕೌಸ್ತುಭಕ್ಕೆ ಬ್ರಹ್ಮನು ಅಭಿಮಾನಿ. ಹಾಗೇ ಚೂಡಾಮಣಿಗೆ ಮುಖ್ಯಪ್ರಾಣ ಅಭಿಮಾನಿ'

ಶಿವನು ಚೂಡಾಮಣಿಯನ್ನಿತ್ತು ಅಶ್ವತ್ಥಾಮಾವತಾರದಲ್ಲಿ ಹುಟ್ಟಿನಿಂದಲೆ ~~ಸ್ವಾಭಾವಿಕವಾಗಿ ಶಿರಸ್ಸಿನಲ್ಲಿ ಬೆಳೆದು ಬಂದ~~ ದಿವ್ಯವಾದ ಮಣಿಯನ್ನು ತಲೆಯಮೇಲೆ ಹೊತ್ತಿದ್ದ. ಅದರ ಪ್ರಭಾವವೆಷ್ಟೆಂದರೆ ದೇವ ದಾನವ ನಾಗ ರಾಕ್ಷಸರಾರಿಂದಲೂ ಅಪಜಯವಿಲ್ಲ. ಜರೆ ಮರಣ ಹಸಿವು ಬಾಯಾರಿಕೆ ಆಯಾಸಗಳಾವುವೂ ಇಲ್ಲ. ಸುಗಂಧಯುಕ್ತವಾಗಿದ್ದು ತನ್ನ ಕಾಂತಿಯಿಂದ ಕತ್ತಲೆಯನ್ನೋಡಿಸುತ್ತಿತ್ತು.

'ಮುತ್ತಿನ ಕಂಠಿಯನ್ನು ಮುಕ್ತಸುರರು ಮುದದಿಂದ ಹರಿಗೆ ಇತ್ತರು. ಸರವನ್ನು ಮುಖ್ಯಪ್ರಾಣನಿತ್ತ' ಎಂದು ಗ್ರಹಿಸುವ ಪಕ್ಷದಲ್ಲಿ ಸರವೆಂದರೆ ಮಾಲೆ, ವೈಜಯಂತೀ ಮಾಲೆ.

ಅನೇಕರತ್ನ ಸಂಯುಕ್ತಾ ತುಲಸೀದಲಮಿಶ್ರಿತಾ ।
ವಿಷ್ಣುವಕ್ಷಃ ಸ್ಥಲೇ ಮಾಲಾ ವೈಜಯಂತೀತ್ಯುದಾಹೃತಾ ॥

'ಮುತ್ತು ಮಾಣಿಕ್ಯ ವಜ್ರ ಹವಳ ಮುಂತಾದ ಅನೇಕ ಬಗೆಯ ರತ್ನಗಳನ್ನು ಪೋಣಿಸಿ ತುಲಸೀದಲ ಬೆರೆಸಿ ತಯಾರಿಸಿದ ಮಾಲೆಯೆ ಹರಿಯ ಎದೆಯಲ್ಲಿರುವ ವೈಜಯಂತಿ'. ಇಂಥ ರತ್ನಮಾಲೆಯನ್ನು ಹರಿಗೆ ಉಡುಗೊರೆಯಾಗಿತ್ತವ ಮುಖ್ಯಪ್ರಾಣ. ಆದರಿಂದ ಹನುಮಂತನಾಗಿ ಶ್ರೀರಾಮನಿಂದ ಮಣಿಮಂಜುಮಾಲೆಯನ್ನು ಪ್ರೀತಿಯ ಉಡುಗೊರೆಯಾಗಿ ಪಡೆದ.

ಮುಕ್ತರಾದ ಸುರರು ಮುತ್ತಿನ ಕಂಠಿಯನ್ನೀಯುವುದೆಂದರೆ, ಇಲ್ಲಿ 'ಸುರರು' ಮುಖ್ಯವಾಗಿ, ಅನೇಕ ಕಲ್ಪಗಳಲ್ಲಿ ಮುಕ್ತರಾಗಿ ವಿಷ್ಣುಲೋಕದಲ್ಲಿರುವ ಚತುರ್ಮುಖರು. ಇವರು ಶ್ರೀಹರಿಯ ಎದೆಯಲ್ಲಿ ಮುತ್ತಿನ ಮಾಲೆಯಾಗಿ ಕುಳ್ಳಿರುತ್ತಾರೆ. ಪ್ರತಿಯೊಬ್ಬ ಚತುರ್ಮುಖನೂ ಒಂದೊಂದು ಮುತ್ತು. ಪಂಡಿತಾಚಾರ್ಯರು ವಿಷ್ಣುಸ್ತುತಿಯಲ್ಲಿ–

ಮುಕ್ತಾಮಾಲಾ ವಿಮುಕ್ತದ್ರುಹಿಣಗಣತನುರ್ನಿತ್ಯಮುಕ್ತಸ್ಯ ಕಂಠೇ ॥

ಎಂದಿದ್ದಾರೆ ಆದ್ದರಿಂದ ಮುಕ್ತ ಚತುರ್ಮುಖರು ಎಲ್ಲರೂ ಬಂದು ಒಂದು ಮುತ್ತಿನ ಮಾಲೆಯ ಆಕಾರದಲ್ಲಿ ಹರಿಯ ವಕ್ಷಃಸ್ಥಲವನ್ನಲಂಕರಿಸಿದರೆಂದರ್ಥ.

ಬ್ರಹ್ಮ ಕೌಸ್ತುಭವನ್ನಿತ್ತ ಮುಖ್ಯಪ್ರಾಣ ವೈಜಯಂತಿನ್ನೊ ಚೂಡಾಮಣಿಯನ್ನೋ ಕೊಟ್ಟ. ಇವರಿಬ್ಬರ ನಡುವೆ ಮುಕ್ತ ಬ್ರಹ್ಮರ ಬಗ್ಗೆ ಏಕೆ ಉಲ್ಲೇಖಿಸಲಾಗಿದೆ ಎಂದರೆ ಬ್ರಹ್ಮವಾಯುಗಳಿಬ್ಬರೂ ವಿಲೀನ ಪ್ರಕೃತಿಗಳು. ಈಗಲೆ ಮುಕ್ತಿ ಸುಖ ಅನುಭವಿಸುತ್ತಿರುವವರು. ಮುಕ್ತ ಬ್ರಹ್ಮರಿಗೂ ಅವರಿಗೂ ಹೆಚ್ಚಿನ ವ್ಯತ್ಯಾಸವೇನಿಲ್ಲ ಎಂಬುದನ್ನು ಸೂಚಿಸುವುದಕ್ಕಾಗಿ ಹಾಗೆ ಹೇಳಿರಬಹುದು.

ಸತ್ಯಲೋಕಾಧಿಪತಿ ಚತುರ್ಮುಖನು ಭೂಲೋಕದಲ್ಲಿ ಸಮುದ್ರದಿಂದ ಉದಿಸಿದ ಕೌಸ್ತುಭವನ್ನು ಹರಿಗೆ ಉಡುಗೊರೆ ನೀಡಲು ಕಾರಣ ಸ್ಪಷ್ಟವಿದೆ– ಈ ಕೌಸ್ತುಭಮಣಿ ಬ್ರಹ್ಮನದೇ ಇನ್ನೊಂದು ಶರೀರ. 'ವಿಧಿಂ ಬ್ರಹ್ಮಾಂಡವಿಗ್ರಹಂ' ಎಂಬಂತೆ ಬ್ರಹ್ಮಾಂಡವೆ ಅವನಿಗೆ ಶರೀರವಾಗಿದ್ದರೂ ಈ ಕೌಸ್ತುಭದಲ್ಲಿ ವಿಶೇಷ ಅಭಿಮಾನ. ತನ್ನ ಶರೀರಕ್ಕಿಂತಲೂ, ಏಕೆ, ತನ್ನ ಆತ್ಮಕ್ಕಿಂತಲೂ ಹೆಚ್ಚು ಅಭಿಮಾನಾಸ್ಪದನಾದ ಹರಿಗೇ ಈ ಮಣಿ ಯೋಗ್ಯ ಮತ್ತು ಈ ಮಣಿಯೇ ಹರಿಗೆ ಯೋಗ್ಯ–

ಕೌಸ್ತುಭಾಖ್ಯಂ ಅಭೂದ್ ರತ್ನಂ ಪದ್ಮರಾಗೋ ಮಹೋದಧೇಃ ।
ತಸ್ಮಿನ್ ಹರಿಃ ಸ್ಪೃಹಾಂ ಚಕ್ರೇ ವಕ್ಷೋಽಲಂಕರಣೇ ಮಣೌ ॥

'ಕೌಸ್ತುಭವೆಂಬ ಪದ್ಮರಾಗಮಣಿ ಕ್ಷೀರಸಾಗರದಿಂದ ಉದ್ಭವಿಸಿತು. ಅದನ್ನು ತನ್ನೆದೆಯಲ್ಲಿ ಅಲಂಕಾರವಾಗಿ ಧರಿಸಲು ಹರಿ ಬಯಸಿದ' ಎಂದು ಭಾಗವತ ಹೇಳುತ್ತದೆ. ಕಾಮಧೇನು ಕಲ್ಪವೃಕ್ಷಾದಿ ಬೇರೆಲ್ಲ ರತ್ನಗಳನ್ನೂ ಬಯಸದೆ ಕೌಸ್ತುಭ ಹಾಗೂ ಲಕ್ಷ್ಮಿ ಈ ಎರಡು ರತ್ನಗಳನ್ನು ಮಾತ್ರ ಹರಿ ಬಯಸಿದನೆಂದರೆ, ಇಡೀ ಸಮುದ್ರ ಮಥನದ ಮಹಾ ಸಾಹಸಕಾರ್ಯವನ್ನು ಲೀಲಾಜಾಲವಾಗಿ ನಡೆಸಿಕೊಟ್ಟ ಹರಿಗೆ ಕೌಸ್ತುಭವನ್ನು ಕೊಡದಿರಲು ಶಕ್ಯವಿಲ್ಲ

'ಬಭೂವ ತತ್ ಕೌಸ್ತುಭಂ ಲೋಕಸಾರಂ'

ಲಕ್ಷ್ಮಿಯಂತೆ ಜಗತ್ತಿನಲ್ಲೆಲ್ಲ ಶ್ರೇಷ್ಠವಾದ ಇನ್ನೊಂದು ರತ್ನವೆಂದರೆ ಕೌಸ್ತುಭ. ಸರ್ವೋತ್ತಮನಾದ ಹರಿಗೆ ಅದುವೆ ಯೋಗ್ಯವಾದ ಉಡುಗೊರೆ.

ಕೌಸ್ತುಭ ಒಂದು ಪದ್ಮರಾಗಮಣಿ, ಅಂದರೆ ಮಾಣಿಕ್ಯ. ಕೆಂಪು ಬಣ್ಣದಿಂದ ಹೊಳೆಯುವಂಥಹುದು.

ದೇದೀಪ್ಯಮಾನ ಚಂದ್ರಾರ್ಕ ಕೋಟಿಕಾಂತಿಸಮಪ್ರಭಃ ।

'ದೇದೀಪ್ಯಮಾನರಾದ ಕೋಟಿ ಚಂದ್ರ ಸೂರ್ಯರಂಥ ಕಾಂತಿ ಅದರದು'. 'ಕುಂ ಸ್ತುಭ್ನಾತಿ' ನೆಲವನ್ನು ಆಚ್ಛಾದಿಸುತ್ತದೆ' ಎಂಬರ್ಥದಲ್ಲಿ 'ಕುಸ್ತುಭ'ವೆಂದರೆ ಸಮುದ್ರ. ಅದರಿಂದ ಹುಟ್ಟಿದುದು 'ಕೌಸ್ತುಭ'. 'ಕುಂ ಸ್ತುಭತೇ' 'ವಿಶ್ವವನ್ನು ವ್ಯಾಪಿಸುತ್ತಾನೆ' ಎಂಬರ್ಥದಲ್ಲಿ 'ಕುಸ್ತುಭ' ವಿಷ್ಣು. ಅವನಿಗೇ ಯೋಗ್ಯವಾದುದು 'ಕೌಸ್ತುಭ'. ಆದ್ದರಿಂದ ಕೌಸ್ತುಭವನ್ನು ವಿಷ್ಣುವೇ ಧರಿಸಬೇಕೆಂಬುದು ದೇವತೆಗಳೆಲ್ಲರ ಆಸೆಯಾಗಿತ್ತು. ಅವರೆಲ್ಲರೂ ಸೇರಿ ಪಿತಾಮಹನಾದ ಬ್ರಹ್ಮನ ಮೂಲಕ ಅದನ್ನು ಹರಿಗಿತ್ತರು–

ಸರ್ವೇ ಸುರಾ ದದುಸ್ತಂ ವೈ ಕೌಸ್ತುಭಂ ವಿಷ್ಣವೇ ತದಾ । – ಸ್ಕಂದ ಪುರಾಣ.

ಕೌಸ್ತುಭದಂತೆ ಹರಿಯ ಶಾಂರ್ಗಧನುಸ್ಸೂ ಪಾಂಚಜನ್ಯ ಶಂಖವೂ ಸಮುದ್ರ ಮಥನದಿಂಲೇ ಉದಿಸಿತೆಂದು ಸ್ಕಂದಪುರಾಣ ಹೇಳಿದೆ–

ಆಸೀದಥ ಧನುಃ ಶಾಂರ್ಗಂ ಸರ್ವಶಸ್ತ್ರಾಧಿದೈವತಂ ।
ವಾದ್ಯಾಧಿದೈವತಂ ಶಂಖಃ ಪಾಂಚಜನ್ಯಸ್ತತೋಽಭವತ್ ।
ಕೌಸ್ತುಭಶ್ಚ ಧನುಃ ಶಂಖೋ ವಿಷ್ಣುಮೇವ ಪ್ರಪೇದಿರೇ ॥

'ಎಲ್ಲ ಆಯುಧಗಳಿಗೂ ಅಧಿದೈವವಾದ ಶಾಂರ್ಗಧನುಸ್ಸೂ ಎಲ್ಲ ವಾದ್ಯಗಳ ಅಧಿದೇವತೆಯಾದ ಪಾಂಚಜನ್ಯಶಂಖವೂ ಸಮುದ್ರದಿಂದ ಉದಿಸಿತು. ಕೌಸ್ತುಭ ಶಾಂರ್ಗ ಪಾಂಚಜನ್ಯ ಈ ಮೂರೂ ಹರಿಯನ್ನೇ ಸೇರಿದುವು' ಆದ್ದರಿಂದ ಕೌಸ್ತುಭದೊಂದಿಗೆ ಶಾಂರ್ಗ ಪಾಂಚಜನ್ಯಗಳನ್ನೂ ದೇವತೆಗಳು ಬ್ರಹ್ಮನ ಮೂಲಕ ಹರಿಗೆ ಕೊಡಿಸಿದರೆಂದಿಟ್ಟುಕೊಳ್ಳಬೇಕು.

ಒಂದು ಪ್ರಶ್ನೆ– ಕೌಸ್ತುಭ ಶಾಂರ್ಗ ಪಾಂಚಜನ್ಯ ಮುಂತಾದುವನ್ನು ಧರಿಸಿಕೊಂಡೇ ಹರಿ ಮೈದೋರಿ ಸುರರಿಗೆ ಸಮುದ್ರಮಥನದ ಆದೇಶ ನೀಡಿದನೆಂದು ಭಾಗವತ ಹೇಳಿದೆ–

ಕೌಸ್ತುಭಾಭರಣಂ ಲಕ್ಷ್ಮೀಂ ಬಿಭ್ರತೀಂ ವನಮಾಲಿನೀಂ ।
ಸುದರ್ಶನಾದಿಭಿಃ ಸ್ವಾಸ್ತ್ರೈರ್ಮೂರ್ತಿಮದ್ಭಿರುಪಾಸಿತಾಂ ॥

'ಕೌಸ್ತುಭ, ಶ್ರೀವತ್ಸ, ವನಮಾಲೆಗಳನ್ನು ಧರಿಸಿ ಸುದರ್ಶನಾದಿ ಆಯುಧಗಳಿಂದ ಸಾಕ್ಷಾತ್ತಾಗಿ ಸೇವಿಸಲ್ಪಡುವ ಹರಿಯನ್ನು ಸುರರು ಕಂಡರು' ಹೀಗೆ ಕೌಸ್ತುಭಾದಿಗಳು ಮೊದಲೆ ಇದ್ದುವೆಂದರೆ ಸಮುದ್ರದಿಂದ ಉದಿಸುವುದೆಂತು ? ಮುಂಧುವರಿದು ಇನ್ನೂ ಕೇಳಬಹುದು– 'ಸಮುದ್ರ ಮಥನಕ್ಕೆ ಮೂಲಕಾರಣವಾದ ದೂರ್ವಾಸಶಾಪ ಪ್ರಸಂಗದಲ್ಲಿ ದೂರ್ವಾಸರು ಪಾರಿಜಾತದ

ಮಾಲೆಯನ್ನು ಎಲ್ಲಿಂದ ತಂದರು ? ಆಗ ದೇವೇಂದ್ರ ಯಾವ ಐರಾವತದ ಮೇಲೆ ಸವಾರಿ ಮಾಡುತ್ತಿದ್ದ ? ಅತ್ರಿಮುನಿಯು ನೇತ್ರಗಳಿಂದುದಿಸಿದ್ದ ಚಂದ್ರ ಸಮುದ್ರದಿಂದ ಹೇಗೆ ಹುಟ್ಟಿದ ?'

ಸ್ಕಂದ ಪುರಾಣದಲ್ಲಿ ಚಂದ್ರ ಸಮುದ್ರದಿಂದ ಹೇಗೆ ಹುಟ್ಟಿದನೆಂಬುದನ್ನು ಹೀಗೆ ವಿವರಿಸಿದೆ–

ಕ್ಷೀರಾಬ್ಧಿಂ ಮಥ್ಯಮಾನಂ ತು ದೃಷ್ಟ್ವಾಚಂದ್ರೋ ಮುದಾನ್ವಿತಃ ।
ಕ್ಷೀರಾಬ್ಧಿರಪಿ ಚಂದ್ರಂ ಚ ದೃಷ್ಟ್ವಾ ಸೋಽಪ್ಯುತ್ಸುಕೋಽಭವತ್ ॥
ಪ್ರವಿಷ್ಟಶ್ಚೋಭಯಂ ಪ್ರೀತ್ಯಾ ಶೃಣ್ವತಾಂ ಭೋ ದ್ವಿಜೋತ್ತಮಾಃ ।
ಚಂದ್ರೋ ಹ್ಯಮೃತಪೂರ್ಣೋಽಭೂತ್ ಅಗ್ರತೋ ದೇವಸನ್ನಿಧೌ ॥

'ಕ್ಷೀರಸಮುದ್ರವನ್ನು ಕಡೆವಾಗ ಚಂದ್ರ ಆನಂದದಿಂದ ನೋಡತೊಡಗಿದ. ಸಮುದ್ರರಾಜನೂ ಚಂದ್ರನನ್ನು ಉತ್ಸುಕತೆಯಿಂದ ನೋಡಿದ. ಪರಸ್ಪರ ಪ್ರೀತಿಯಿಂದ ಒಬ್ಬರನ್ನೊಬ್ಬರು ನೋಡುತ್ತ ಪರಸ್ಪರ ಪ್ರವೇಶಿಸಿದರು. ಅದರ ಪರಿಣಾಮವಾಗಿ ಚಂದ್ರ ಅಮೃತಪೂರ್ಣನಾದ'. ಹೊಸ ಜನ್ಮ ಪಡೆದಂತಾಗಿ ಜಗನ್ಮಾತೆ ಮಹಾಲಕ್ಷ್ಮಿಗೆ ಸೋದರನಾಗಿ ಜಗನ್ಮಾತುಲನಾದ. ಲೋಕಕ್ಕೇ ಮಾತೆ ಮಹಾಲಕ್ಷ್ಮಿಯಾದರೆ ಚಂದ್ರ ಲೋಕಕ್ಕೇ ಮಾವ. ಅಂದಿನಿಂದ 'ಚಂದಮಾಮ'ನೆಂದೇ ಆತ ಪ್ರಸಿದ್ಧನಾದ ಪದ್ಮ ಪುರಾಣ ಹೇಳುತ್ತದೆ–

ಸುಧಾಮಯೂಖವಾನ್ ದೇವೋ ಮಾತುರ್ಭ್ರಾತಾ ಸುಖಾವಹಃ ।
ನಕ್ಷತ್ರಾಧಿಪತಿಶ್ಚಾಭೂಚ್ಚಂದ್ರೋ ವೈ ಲೋಕಮಾತುಲಃ ॥

ಹೀಗೆ ಭಂಗ್ಯಂತರದಿಂದಲೋ ರೂಪಾಂತರದಿಂದಲೋ ದೇವತೆಗಳೂ ಕೌಸ್ತುಭಾದಿಗಳೂ ಅನೇಕ ಬಾರಿ ಹುಟ್ಟುತ್ತಾರೆ. ಭೃಗುಮುನಿಯಿಂದ ಖ್ಯಾತಿದೇವಿಯಲ್ಲಿ ಅವತರಿಸಿದ ಮಹಾಲಕ್ಷ್ಮಿಯೆ ಈಗ ಸಮುದ್ರರಾಜನ ಕನ್ನಿಕೆಯಾಗಿ ಅವತರಿಸಿದ್ದಾಳೆ. ಆದ್ದರಿಂದ ಯಾವ ಅಸಂಗತಿಯೂ ಇಲ್ಲ.

— ೮೬ —

**ತನ್ನರಸಿ ಕೂಡೆ ಸವಿನುಡಿ ನುಡಿವಾಗ ವ–**
**ದನ್ನದಲ್ಲಿದ್ದಗ್ನಿ ಕೆಡದಂತೆ ।**
**ವಹ್ನಿಪ್ರತಿಷ್ಠೆಯ ಮಾಡಿ ಅವನೊಳಗಿದ್ದ**
**ತನ್ನಾಹುತಿಯಿತ್ತ ಸುರರಿಗೆ ॥**

ತನ್ನ ಅರಸಿಯಾದ ರಮೆಯೊಡನೆ ಸರಸದ ಮಾತುಗಳನ್ನಾಡುವಾಗ ತನ್ನ ಮುಖದೊಳಗಿರುವ ಅಗ್ನಿ ಕೆಡಬಾರದೆಂದು ಶ್ರೀಹರಿ ಅಗ್ನಿ ಪ್ರತಿಷ್ಠೆ ಮಾಡಿ ಆ ಅಗ್ನಿಯೊಳಗೆ ತಾನಿದ್ದ ತನ್ನ ಆಹುತಿಗಳನ್ನು ಸುರರಿಗೆ ನೀಡಿದ

ಶ್ರೀಹರಿ ರಮೆಯೊಡನೆ ಸವಿನುಡಿ ನುಡಿದ ಮಾತ್ರಕ್ಕೆ ಬಾಯೊಳಗಿನ ಅಗ್ನಿ ಏಕೆ ಕೆಡುತ್ತಾನೆ ಎಂದರೆ ಅಮೃತದಂತೆ ಶಾಂತಿಗೊಳಿಸುವ ಸ್ವಭಾವದವು ಹರಿಯ ನುಡಿಗಳು ಆದ್ದರಿಂದ ಅವುಗಳ ಸಂಪರ್ಕದಿಂದ ಅಗ್ನಿ ಶಾಂತನಾಗುತ್ತಾನೆ ಹೀಗೆ ಹರಿ ಮಾತನಾಡುವಾಗ ಅಗ್ನಿ ಬಾಯಲ್ಲಿದ್ದರೆ ಕೆಡುತ್ತಾನೆ ಎಂದೇ ಆ ಅಗ್ನಿಯನ್ನು ಬಾಯಿಂದ ಹೊರ ತೆಗೆದು ಪ್ರತಿಷ್ಠಿಸುತ್ತಾನೆ. ಆದರೂ ಹೊರಗೆ ಎಲ್ಲೆಡೆ ಬರಿ ನೀರೇ. ಸಮುದ್ರರಾಜ ವರುಣನ ಅರಮನೆ ಜಲಮಯ ಅಲ್ಲಿ ಅಗ್ನಿ ಪ್ರತಿಷ್ಠೆ ಮಾಡಿದರೆ ಅಗ್ನಿ ಉರಿಯಲಾರ ಪಾಕಕಾರ್ಯ ನಡೆಸಿಕೊಡಲಾರ. ವಿವಾಹಕ್ಕೆ ಬಂದ ದಿಬ್ಬಣದ ದೇವತೆಗಳಿಗೆ ಪಾಕ ಸಿದ್ಧವಾಗಬೇಕು ಅದಕ್ಕೆ ಹರಿ ಅವನೊಳಗಿದ್ದು ಅಚಿಂತ್ಯ ಶಕ್ತಿಯಿಂದ ಅವನನ್ನು ಸ್ಥಿರವಾಗಿಟ್ಟ. ಇದರಿಂದ ಅಗ್ನಿಯೂ ಕೆಡದಂತಾಗುವುದು, ಪಾಕವೂ ಸಿದ್ಧವಾಗುವುದು. ಇದು ಒಂದು ಉತ್ಪ್ರೇಕ್ಷೆ. ಮೇಲು ನೋಟಕ್ಕೆ ಸರಿಯೆನಿಸುತ್ತದೆ. ಆದರೆ ವಾಗೀಂದ್ರಿಯದಿಂದ ಹುಟ್ಟಿದ ಅಗ್ನಿ ವಾಗಿಂದ್ರಿಯ ವ್ಯಾಪಾರದಿಂದ ಕೆಡುವುದು ಅಸಂಭಾವಿತ. ಮತ್ತು ಅಗ್ನಿ ಕೆಡುವುದು, ವಹ್ನಿಪ್ರತಿಷ್ಠೆ, ಆಹುತಿ– ಈ ಶಬ್ದಗಳೆಲ್ಲ ಹೋಮ ಹವನಗಳಿಗೆ ಸಂಬಂಧಿಸಿದವುಗಳು. ಅಡಿಗೆಗೆ ಅಲ್ಲ. ಆದ್ದರಿಂದ ಹೀಗೆ ಹೇಳಬೇಕು–

ಹಿಂದಿನ ನುಡಿಯಲ್ಲಿ ಉಡುಗೊರೆ ಕಾರ್ಯಕ್ರಮವನ್ನು ವರ್ಣಿಸಲಾಗಿದೆ. ಈ ಕಾರ್ಯಕ್ರಮಕ್ಕೆ ಮುಂಚಿತವಾಗಿ ಅಗ್ನಿ ಪ್ರತಿಷ್ಠೆ ಮಾಡಿ ಪಾಣಿಗ್ರಹಣ ಹೋಮ ಲಾಜಹೋಮಗಳನ್ನೂ ಉಡುಗೊರೆಯಾದ ಬಳಿಕ ಔಪಾಸನ ಹೋಮ ಗೃಹಪ್ರವೇಶ ಹೋಮಗಳನ್ನೂ ಮಾಡಬೇಕು. ಈ ಎಲ್ಲ ಹೋಮಗಳನ್ನೂ ಹರಿ ಮಾಡಿದ್ದಾನೆ ಎಂದು ಒಂದೇ ಮಾತಿನಲ್ಲಿ ಈ ನುಡಿ ಸಂಕ್ಷೇಪವಾಗಿ ವರ್ಣಿಸುತ್ತಿದೆ.

ಸರ್ವಯಜ್ಞಭೋಕ್ತನಾಗಿದ್ದು ಯಜ್ಞಪುರುಷನೆನಿಸಿದವ ನಾರಾಯಣ. ಆದರೂ ತಾನೆ ಹೋಮಮಾಡಿ ದೇವತೆಗಳಿಗೆ ಆಹುತಿ ನೀಡುತ್ತಾನೆ. ಮೂಲರೂಪದಲ್ಲಿ ಅಲ್ಲ, ಅವತಾರಗಳಲ್ಲಿ. ಇದು 'ಮರ್ತ್ಯಾವತಾರಸ್ತ್ವಿಹ ಮರ್ತ್ಯಶಿಕ್ಷಣಂ' ಎಂಬಂತೆ ಲೋಕಕ್ಕೆ ಸರಿಯಾದ ದಾರಿ ತೋರುವುದಕ್ಕಾಗಿ ಎನ್ನುವುದರಲ್ಲಿ ಸಂಶಯವಿಲ್ಲ. ಜೊತೆಗೆ ಅಯೋಗ್ಯರನ್ನು ವಂಚಿಸುವ ಉದ್ದೇಶವೂ ಇದೆ. ದೇವತೆಗಳ ಪ್ರಾರ್ಥನೆಯಂತೆ ಹರಿ ಹಾಗೆ ಮಾಡುತ್ತಾನೆ. ಇದಕ್ಕೆ ಪದ್ಮಪುರಾಣದ ಈ ಶಿವ ವಚನ ಸಾಕ್ಷಿ–

ಅಲಬ್ಧ್ವಾ ಚಾತ್ಮನಃ ಪೂಜಾಂ ಸಮ್ಯಗಾರಾಧಿತೋ ಹರಿಃ ।
ಅಂಶಾಂಶೇನಾತ್ಮನೈವೈತಾನ್ ಪೂಜಯಾಮಾಸ ಕೇಶವಃ ॥

'ಕೃತಯುಗದಲ್ಲಿ ದೇವತೆಗಳು ಆಲೋಚಿಸಿದರು- ಎಲ್ಲರೂ ಈಗ ಹರಿಯನ್ನೇ ಆರಾಧಿಸುತ್ತಿದ್ದಾರೆ. ಇದು ಹೀಗೇ ಮುಂದುವರಿದರೆ ಮುಂದೆ ದ್ವಾಪರ ಕಲಿಯುಗಗಳು ಬರಲಾರವು ಆದ್ದರಿಂದ ಅಯೋಗ್ಯರೂ ಹರಿಯನ್ನೇ ಆರಾಧಿಸುವಂತಾಗಬಾರದು. ಅವರು ಬೇರೆ ದೇವತೆಗಳನ್ನೂ ಸ್ವತಂತ್ರವಾಗಿ ಆರಾಧಿಸಬೇಕು. ಹೀಗೆ ಆಲೋಚಿಸಿ ದೇವತೆಗಳು ಹರಿಯ ಅನುಮತಿಯಿಂದಲೆ ಹರಿಯನ್ನಾರಾಧಿಸಿ ಹರಿಗಿಂತ ಹೆಚ್ಚಿನ ಪೂಜೆಯನ್ನು ಬೇಡಿ ಪಡೆದರು. ನಾನೂ ಹಾಗೇ ಮಾಡಿದೆ. ಅಂದಿನಿಂದ ಹರಿ ರಾಮ ಕೃಷ್ಣಾದಿ ಅವತಾರಗಳಲ್ಲಿ ತಪ್ಪದೆ ಬೇರೆ ದೇವತೆಗಳನ್ನು ಪೂಜಿಸುತ್ತಾನೆ. ಇದರಿಂದ ಅಯೋಗ್ಯರು ಮೋಸಹೋದರು ಅವರು ಬೇರೆ ದೇವತೆಗಳನ್ನು ಪೂಜಿಸತೊಡಗಿದರು'.

ಹೀಗೆ ಅಜಿತಾವತಾರಿ ಶ್ರೀಹರಿಯೂ ಅಗ್ನಿಪ್ರತಿಷ್ಠೆ ಮಾಡಿ ವಿವಾಹ ಹೋಮಾದಿಗಳನ್ನು ಮಾಡಿದ, ದೇವತೆಗಳಿಗೆ ಆಹುತಿ ನೀಡಿದ. ಸ್ಕಾಂದಪುರಾಣ ಹಾಗೇ ಹೇಳಿದೆ-

ಹುತಸ್ಯ ತಸ್ಯಾಥ ಹುತಾಶನಸ್ಯ
ಪ್ರದಕ್ಷಿಣಂ ಚಾಪಿ ಸಹ ಶ್ರಿಯೈವ ।
ಚಕಾರ ಚೇತಾಂಸಿ ನಿಜೇಕ್ಷಕಾಣಾಂ
ಸ್ತ್ರೀಣಾಂ ಚ ಪುಂಸಾಂ ಚ ಹರನ್ ಹರಿಃ ಸಃ ॥

'ಲಕ್ಷ್ಮೀಸ್ವಯಂವರದಲ್ಲಿ ಲಕ್ಷ್ಮೀನಾರಾಯಣರು ವಿವಾಹಹೋಮ ಮಾಡಿ ಅಗ್ನಿಗೆ ಪ್ರದಕ್ಷಿಣೆ ಬಂದು, ನೋಡುವ ಸ್ತ್ರೀಪುರುಷರ ಕಣ್ಣು ಮನಗಳಿಗೆ ಹಬ್ಬ ನೀಡಿದರು'.

ವಸ್ತುಸ್ಥಿತಿ ಹೀಗಿದ್ದರೂ ರಮಾನಾರಾಯಣರು ದೇವತೆಗಳಿಗೆ ಆಹುತಿ ನೀಡುವ ವಿಷಯದಲ್ಲಿ ವಾದಿರಾಜರು ಒಂದು ಸುಂದರವಾದ ಉತ್ಪ್ರೇಕ್ಷೆಯನ್ನು ಇಲ್ಲಿ ಮಾಡಿದ್ದಾರೆ-

ವಿವಾಹವಾದೊಡನೆ ನವದಂಪತಿಗಳು ಏಕಾಂತದಲ್ಲಿ ಪರಸ್ಪರ ದರ್ಶನ, ಸ್ಪರ್ಶನ ಸರಸ ಸಲ್ಲಾಪ ಆಲಿಂಗನ ಚುಂಬನಗಳನ್ನು ಮಾಡಲಿದ್ದಾರೆ. ಆದರೆ ರಮಾ ನಾರಾಯಣರಿಗೆ ಏಕಾಂತವೆಲ್ಲಿ? ಸರ್ವದೇವತಾಮಯ ಶ್ರೀಹರಿ. ಅವನ ಎಲ್ಲ ಅಂಗಗಳಲ್ಲಿಯೂ ಆಯಾ ದೇವತೆಗಳು ಹುಟ್ಟಿ ಅಲ್ಲಿಯೆ ನೆಲೆಸಿದ್ದಾರೆ. ಉದಾ-

ಚಕ್ಷೋಃ ಸೂರ್ಯೋ ಅಜಾಯತ ।
ಮುಖಾದಿಂದ್ರಶ್ಚಾಗ್ನಿಶ್ಚ ಪ್ರಾಣಾದ್ ವಾಯುರಜಾಯತ ॥

'ಹರಿಯ ಕಣ್ಣಿಂದ ಸೂರ್ಯ, ಮುಖದಿಂದ ಇಂದ್ರ ಅಗ್ನಿಗಳು, ಮೂಗಿನಿಂದ ವಾಯು ಹುಟ್ಟಿದರು'. ಆದ್ದರಿಂದ ದಂಪತಿಗಳು ಪ್ರೀತಿಯಿಂದ ಪರಸ್ಪರ ಅವಲೋಕನ ಮಾಡಿದರೆ ಅದನ್ನು ಅವರ ಕಣ್ಣಲ್ಲಿರುವ ಸೂರ್ಯ ನೋಡುತ್ತಾನೆ. ಸರಸ ಸಲ್ಲಾಪ ಮಾಡಿದರೆ ಮುಖದಲ್ಲಿರುವ ಅಗ್ನಿ ಕೇಳಿಸಿಕೊಳ್ಳುತ್ತಾನೆ. ಆಲಿಂಗನ ಚುಂಬನಗಳನ್ನೂ ತ್ವಗಿಂದ್ರಿಯದಲ್ಲಿರುವ ಆಹಂಕಾರಿಕ ಪ್ರಾಣ, ರಸನೇಂದ್ರಿಯದಲ್ಲಿರುವ ವರುಣ ತಿಳಿಯುತ್ತಾರೆ. ಹರಿಯ ಸರ್ವಾಂಗಗಳಲ್ಲಿರುವ ಪ್ರಜಾಪತಿ ಚತುರ್ಮುಖನಂತೂ ಈ ಎಲ್ಲ ಪ್ರಣಯ ಲೀಲೆಗಳನ್ನು ತಿಳಿಯುತ್ತಾನೆ !

ಇದಕ್ಕೆ ಹರಿ ಒಂದು ಉಪಾಯ ಮಾಡುತ್ತಾನೆ. ಎಲ್ಲ ದೇವತೆಗಳನ್ನೂ ಆಹುತಿಗಳಿಂದ ತೃಪ್ತಿಪಡಿಸಿ ತನಗೆ ಆತ್ಮೀಯರನ್ನಾಗಿ ಮಾಡಿಕೊಳ್ಳುತ್ತಾನೆ, ಅವರು ಕೆಡದಂತೆ. ಅಂದರೆ, ತಮ್ಮ ಪ್ರಣಯರಹಸ್ಯವನ್ನು ತಿಳಿದು ಇತರರಿಗೆ ಬಯಲು ಮಾಡದಂತೆ, ಒಟ್ಟಾರೆ, ಆತ್ಮೀಯ ಮಿತ್ರರು ಹೇಗಿರಬೇಕೋ ಹಾಗೆ, ಮಾಡುತ್ತಾನೆ. ಭರ್ತೃಹರಿಯ ನೀತಿಶತಕದಲ್ಲಿ ಹೀಗೆ ಹೇಳಿದೆ–

ಪಾಪಾನ್ನಿವಾರಯತಿ ಯೋಜಯತೇ ಹಿತಾಯ
ಗುಹ್ಯಂ ನಿಗೂಹತಿ ಗುಣಾನ್ ಪ್ರಕಟೀಕರೋತಿ ।
ಆಪದ್ಗತಂ ಚ ನ ಜಹಾತಿ ದದಾತಿ ಕಾಲೇ
ಸನ್ಮಿತ್ರಲಕ್ಷಣಮಿದಂ ಪ್ರವದಂತಿ ಸಂತಃ ॥

'ಅಕಾರ್ಯ ಮಾಡದಂತೆ ತಡೆಯುತ್ತಾನೆ. ಹಿತಕಾರ್ಯದಲ್ಲಿ ತೊಡಗಿಸುತ್ತಾನೆ. ರಹಸ್ಯ ಕಾಪಾಡುತ್ತಾನೆ. ಗುಣಗಳನ್ನು ಹೊಗಳಿ ಹುರಿದುಂಬಿಸುತ್ತಾನೆ. ಆಪತ್ಕಾಲದಲ್ಲಿ ಕೈಬಿಡುವುದಿಲ್ಲ. ಸರಿಯಾದ ಸಮಯಕ್ಕೆ ಸಹಾಯ ನೀಡುತ್ತಾನೆ. ಇವು ಒಳ್ಳೆಯ ಮಿತ್ರನ ಲಕ್ಷಣವೆಂದು ಬಲ್ಲವರು ಹೇಳುತ್ತಾರೆ'.

ಹೀಗೆ ಹರಿ ದೇವತೆಗಳಿಗೆ ಆಹುತಿ ನೀಡುವುದರ ಉದ್ದೇಶ ಬೇರೆಯೆ ಇದೆ ಎಂದು ಇಲ್ಲಿ ಉತ್ಪ್ರೇಕ್ಷೆ ಮಾಡಲಾಗಿದೆ. ರುಕ್ಮಿಣೀಶ ವಿಜಯದಲ್ಲಿಯೂ ಇದೇ ಉತ್ಪ್ರೇಕ್ಷೆ ಕಂಡುಬರುತ್ತದೆ–

ಗೃಹೀತಪಾಣೀ ಕಿಲ ಚಕ್ರತುಸ್ತೌ
ಪ್ರದಕ್ಷಿಣಂ ಲಾಜಸಮೇಧಿತಾಗ್ನೇಃ ।
ವಧೂವರೌ ರಮ್ಯರಹಸ್ಯಗೋಷ್ಠ್ಯಾಂ
ವಿಧಾತುಮಾತ್ಮೀಯಮಿವಾಸ್ಯಗಂ ತಂ ॥

'ರುಕ್ಮಿಣೀಕೃಷ್ಣರು ಮುಂದೆ ತಮ್ಮ ಮಧುರ ಏಕಾಂತ ಸಂಭಾಷಣೆಯಲ್ಲಿ ಮುಖದಲ್ಲಿರುವ ಅಗ್ನಿಯನ್ನು ಆತ್ಮೀಯನನ್ನಾಗಿ ಮಾಡಿಕೊಳ್ಳಲು ಲಾಜಹೋಮ ಮಾಡಿ ಅನಂತರ ಅಗ್ನಿಗೆ ಪ್ರದಕ್ಷಿಣೆಯನ್ನೂ ಮಾಡಿದರು'.

ರುಕ್ಮಿಣೀಶವಿಜಯದಲ್ಲಿ ಶ್ರೀಕೃಷ್ಣ ಕೇವಲ ಅಗ್ನಿಗೇ ಹೋಮ ಪ್ರದಕ್ಷಿಣೆಗಳನ್ನು ಮಾಡಿ ಸತ್ಕಾರ ಮಾಡಿದಂತೆ ಕಾಣುತ್ತದೆ. ಲಕ್ಷ್ಮೀಶೋಭನ ಪದದಲ್ಲಿ ಶ್ರೀಅಜಿತನು ಅಗ್ನಿಗೆ ಮಾತ್ರವಲ್ಲದೆ ಸೂರ್ಯಪ್ರಜಾಪತಿಗಳಿಗೂ ಔಪಾಸನ ಹೋಮದಿಂದ ಸತ್ಕಾರ ಮಾಡುತ್ತಾನೆ– 'ತನ್ನಾಹುತಿಯಿತ್ತ ಸುರರಿಗೆ'. ಸರಸ ಸಲ್ಲಾಪದ ರಹಸ್ಯ ಕಾಪಾಡಲು ಅಗ್ನಿಯನ್ನು ಹೇಗೋ ಹಾಗೇ ದರ್ಶನ ಸ್ಪರ್ಶನಾದಿ ರಹಸ್ಯ ಕಾಪಾಡುವುದಕ್ಕೂ ಬೇರೆ ದೇವತೆಗಳನ್ನು ಸತ್ಕರಿಸಿ ವಶದಲ್ಲಿಟ್ಟುಕೊಳ್ಳಬೇಕಾಗುತ್ತದೆ ಆದ್ದರಿಂದ ರುಕ್ಮಿಣೀಶವಿಜಯದಲ್ಲಿ ಅಗ್ನಿಯೊಬ್ಬನನ್ನೇ ಹೇಳಿದ್ದರೂ ಅವನೊಬ್ಬನೇ ಅಲ್ಲ, ಬೇರೆ ದೇವತೆಗಳೂ ವಿವಕ್ಷಿತರೇ.

ಅಜಿತ ಅಗ್ನಿಯನ್ನು ಸತ್ಕರಿಸಿದ ಬಗೆ ಹೀಗೆ– ಹಿಂದೆ ಹರಿಯ ಬಾಯೊಳಗೇ ವಾಗಿಂದ್ರಿಯದಲ್ಲಿ ಒಂದು ಮೂಲೆಯಲ್ಲಿ ಕುಳಿತಿದ್ದು ಹರಿಯ ರಹಸ್ಯ ಸಂಭಾಷಣೆಯನ್ನಾಲಿಸುತ್ತಿದ್ದ ಅಗ್ನಿಯನ್ನು ಈಗ ವಿವಾಹ ಹೋಮಕ್ಕೆ ಅಗ್ನಿ ಪ್ರತಿಷ್ಠೆಮಾಡುವ ನೆವದಿಂದ, ಎತ್ತಿ ಹೊರಗಿಡೋಣವೆಂದರೆ ಅದೂ ಮನಸ್ಸಿಗೆ ಒಪ್ಪುವುದಿಲ್ಲ. ಮಕ್ಕಳು ತಮ್ಮ ಏಕಾಂತಕ್ಕೆ ಭಂಗ ತರುವರೆಂದು ತಂದೆತಾಯಿಗಳು ಅವರನ್ನು ದೂರವಿಡುವುದುಂಟೆ? ಅಗ್ನಿಯು ನಾರಾಯಣನ ಮುಖದಿಂದ ಜನಿಸಿದ ಪುತ್ರ. ಆದ್ದರಿಂದ ಅಗ್ನಿ ಪ್ರತಿಷ್ಠೆಯ ಕಾಲದಲ್ಲಿ ಹರಿ ತನ್ನ ಬಾಯೊಳಗಿನ ಅಗ್ನಿಯನ್ನು ಒಂದು ಅಂಶದಿಂದ ಮಾತ್ರ ಹೊರತಂದು ಎಲ್ಲರ ಸಮಕ್ಷಮದಲ್ಲಿ ಅಲಂಕೃತವಾದ ವಿವಾಹವೇದಿಕೆಯ ಮೇಲೆ ಪ್ರತಿಷ್ಠಿಸಿ ಆರಾಧಿಸುತ್ತಾನೆ.

ಅಗ್ನಿಪ್ರತಿಷ್ಠೆ ಮಾತ್ರ ಮಾಡಿದರೆ ಸಾಲದು. ಅದರ ರಕ್ಷಣೆ ಬಹಳ ಮುಖ್ಯ. ವಿವಾಹ ಹಗಲಲ್ಲಾದರೆ ಸಂಜೆ ಔಪಾಸನ ಮಾಡಿ ಗೃಹಪ್ರವೇಶ ಹೋಮ ಮಾಡಬೇಕು. ರಾತ್ರಿ ವಿವಾಹವಾದರೆ ಮರುದಿನ ಸಂಜೆ ಔಪಾಸನ ಮಾಡಿಯೇ ಗೃಹಪ್ರವೇಶ ಹೋಮ ಮಾಡಬೇಕು ಹೀಗೆ ಅದೇ ದಿನವಾಗಲಿ ಮರುದಿನವಾಗಲಿ ಗೃಹಪ್ರವೇಶ ಹೋಮ ಮಾಡುವುದಕ್ಕೆ ಮುನ್ನ ಅಗ್ನಿ ನಾಶವಾದರೆ ತಿರುಗಿ ವಿವಾಹ

ಹೊಮ ಮಾಡಬೇಕಾಗುತ್ತದೆ. ಗೃಹಪ್ರವೇಶ ಹೋಮದ ಬಳಿಕ ಅಗ್ನಿನಾಶವಾದರೆ ತಿರುಗಿ ವಿವಾಹ ಹೋಮ ಗೃಹಪ್ರವೇಶ ಹೋಮಗಳೆರಡನ್ನೂ ಮಾಡಬೇಕಾಗುತ್ತದೆ. ಆದ್ದರಿಂದ ಅಗ್ನಿಯನ್ನು ಸದಾ ರಕ್ಷಿಸಬೇಕು. ಹೀಗೆ ಸ್ಥಿರವಾಗಿ ಪ್ರತಿಷ್ಠಿಸುವ ಉದ್ದೇಶದಿಂದ ತಾನು ಅಗ್ನಿಯೊಳಗೆ ಪ್ರವೇಶ ಮಾಡಿ 'ಅವನೊಳಗಿದ್ದ'. ಅವನೊಳಗಿದ್ದು ಅವನಿಗೆ ಸ್ಥಿರತೆ ತಂದುಕೊಟ್ಟ.

ಹೀಗೆ ಅಗ್ನಿಯನ್ನು ಸ್ಥಿರವಾಗಿ ಪ್ರತಿಷ್ಠಿಸಿ ಆತ್ಮೀಯತೆಯನ್ನು ತೋರಿ ದೇವತೆಗಳಿಗೆಂದು ತಾನೇ ನೀಡಿದ ಆಹುತಿಗಳನ್ನು ಅಗ್ನಿಯೊಳಗಿದ್ದು ತಾನೇ ಸ್ವೀಕರಿಸಿ ಆಯಾ ದೇವತೆಗಳಿಗೆ ಮುಟ್ಟಿಸಿದ. ಇದರಿಂದ ಅಗ್ನಿಗೂ ಸಂತೋಷ. ದೇವತೆಗಳಿಗೂ ಸಂತೋಷ. ಇಷ್ಟರವರೆಗೆ ಅಗ್ನಿಯಲ್ಲಿ ದೇವತೆಗಳಿಗೆ ನೀಡುವ ಆಹುತಿಗಳನ್ನು ಅಗ್ನಿ ದೂತನಾಗಿ ದೇವತೆಗಳಿಗೆ ಮುಟ್ಟಿಸುತ್ತಿದ್ದ. ಈಗ ಈ ಕೆಲಸ ತಪ್ಪಿತು. ದೇವತೆಗಳಿಗೂ ಸಾಕ್ಷಾದ್ ವಿಷ್ಣು ನಮಗೆ ಆಹುತಿಯನ್ನು ಹೊರಗೆ ನಿಂತು ಕೊಟ್ಟುದುದು ಮಾತ್ರವಲ್ಲದೆ ಅಗ್ನಿಯೊಳಗೆಯೂ ನಿಂತು ತಮಗೆ ಆ ಆಹುತಿಗಳನ್ನು ತಂದು ಕೊಟ್ಟಿದ್ದಾನೆ ಎಂದು ತಮಗೆ ಮುಜಗರವಾಗುವಷ್ಟು ಗೌರವ ಲಭಿಸಿದ ತೃಪ್ತಿ.

ವಸ್ತುತಃ ಹರಿ ತಾನೆ ದೂತನಂತೆ ದೇವತೆಗಳಿಗೆ ಆಹುತಿ ತಲುಪಿಸುವ ಕಾರ್ಯ ಮಾಡುವುದಿಲ್ಲ. ಮರದ ಬೇರು ನೀರುಂಡರೆ ಕೊಂಬೆ ಎಲೆಗಳೆಲ್ಲ ಪುಷ್ಟವಾಗುವಂತೆ ಹರಿ ತಾನು ಆಹುತಿಗಳನ್ನು ಸ್ವೀಕರಿಸಿದರೆ ದೇವತೆಗಳು ತೃಪ್ತರಾಗುತ್ತಾರೆ ಆದರೂ ಪ್ರಕೃತದಲ್ಲಿ ಹರಿ ದೂತನಂತೆ ವರ್ತಿಸುವನೆಂದು ಉತ್ಪ್ರೇಕ್ಷೆ ಮಾಡಲಾಗಿದೆ. ಹೀಗೆ ಎಲ್ಲ ದೇವತೆಗಳಿಗೂ ಸತ್ಕಾರಮಾಡಿ ಹರಿ ಅವರನ್ನು 'ಕೆಡದಂತೆ' ಅಂದರೆ, ಆತ್ಮೀಯರಾಗಿದ್ದು ಪ್ರಣಯರಹಸ್ಯವನ್ನು ಬಯಲು ಮಾಡದಂತೆ ಮಾಡಿಕೊಂಡ.

ಇತರರಿಗೆ ಬಯಲು ಮಾಡದಿದ್ದರೂ ತಮ್ಮಷ್ಟಕ್ಕೆ ತಾವು ಕಾಣುತ್ತಾರಷ್ಟೆ? ಎಂಬ ಸಂದೇಹಕ್ಕೂ ಅವಕಾಶವಿಲ್ಲ. ಏಕೆಂದರೆ ಅವರು ಕಾಣುವುದೆ ಇಲ್ಲ. ಕಾಣುವ ಯತ್ನವನ್ನೂ ಮಾಡುವುದಿಲ್ಲ. ಹಾಗೆ ಯತ್ನ ಮಾಡದಿರುವಂತೆ ಹರಿ ಅವರನ್ನು ತನ್ನಾಹುತಿಗಳಿಂದ ವಶಪಡಿಸಿಕೊಂಡಿದ್ದಾನೆ.

ವಸ್ತುತಃ ಹರಿಯು ಕಣ್ಣುಬಾಯಿ ಮುಂತಾದವುಗಳಲ್ಲಿರುವ ದೇವತೆಗಳಿಗೂ ಆ ಕಣ್ಣು ಬಾಯಿಗಳ ರಹಸ್ಯ ಕಾರ್ಯಗಳನ್ನು ತಿಳಿಯುವ ಸಾಮರ್ಥ್ಯವಿಲ್ಲ. ಹರಿಯ ಶಕ್ತಿ ಅಂಥದ್ದು. ಆದ್ದರಿಂದ ತಿಳಿಯಲು ಅವರು ವ್ಯರ್ಥಪ್ರಯತ್ನ ಮಾಡುವುದಿಲ್ಲ. ಆಹುತಿ ದೊರೆತುದರಿಂದ ಅವರು ಸುಮ್ಮನಿರುತ್ತಾರೆ ಎನ್ನುವುದು ಉತ್ಪ್ರೇಕ್ಷೆ

ಹರಿ ಇಷ್ಟೆಲ್ಲ ಕಷ್ಟಪಡುವುದು ರಮೆಯೊಡನೆ ಏಕಾಂತವನ್ನು ಪಡೆಯುವುದಕ್ಕಾಗಿ. ಇದರಿಂದ ಹರಿಗೆ ಅವಳಲ್ಲಿ ಎಂಥ ಗಾಢವಾದ

ಅನುರಾಗವಿದೆಯೆಂಬುದು ತಿಳಿಯುವುದರಿಂದ ಶೃಂಗಾರರಸವಿದೆ. ಅದಕ್ಕೆ ಮೇಲಿನ ಉತ್ಪ್ರೇಕ್ಷೆ ಒಳ್ಳೆಯ ಪೋಷಕವಾಗಿದೆ. ಏಕೆಂದರೆ ಪ್ರಣಯಿಗಳಿಗೆ ಏಕಾಂತ ಎಂದು ದೊರಕೀತೆಂಬ ಔತ್ಸುಕ್ಯವನ್ನು ಅದು ಧ್ವನಿಸುತ್ತದೆ. ವಿಲಂಬವನ್ನು ಸಹನೆ ಮಾಡದಂಥ ಈ ಔತ್ಸುಕ್ಯ ಶೃಂಗಾರ ರಸಕ್ಕೆ ಅವಶ್ಯ ಬೇಕಾಗುವ ಒಂದು ಸಂಚಾರಿಭಾವ. ಅಲಂಕಾರದಲ್ಲಿ ಚಮತ್ಕಾರ ಬರುವುದು ಹೀಗೆ, ಅದು ರಸಕ್ಕೆ ಪೋಷಕವಾದಾಗಲೆ. ಇಲ್ಲದಿದ್ದರೆ ಅದು ನೀರಸವೆನಿಸುತ್ತದೆ.

– ೯೭ –

**ಕೊಬ್ಬಿದ ಖಳರೋಡಿಸಿ ಅಮೃತಾನ್ನ ಊಟಕ್ಕೆ**
**ಉಬ್ಬಿದ ಹರುಷದಲಿ ಉಣಿಸಲು ।**
**ಉಬ್ಬಿದ ಹರುಷದಲಿ ಉಣಿಸಬೇಕೆಂದು ಸಿಂಧು**
**ಸರ್ಬರಿಗೆಡೆಯ ಮಾಡಿಸಿದ ॥**

ಕೊಬ್ಬಿದ ದುಷ್ಟ ದಾನವರನ್ನು ಓಡಿಸಿ, ಮದುವೆಯ ಊಟಕ್ಕೆ ಅಮೃತಾನ್ನವನ್ನು ಉಬ್ಬಿದ ಹರ್ಷದಲ್ಲಿ ಉಣಿಸಬೇಕೆಂದು ಸಮುದ್ರರಾಜ ಎಲ್ಲರಿಗೂ ಭೋಜನ ಸಿದ್ಧಪಡಿಸಿದ.

ಹಿಂದಿನ ನುಡಿಯಲ್ಲಿ ಔಪಾಸನ ಗೃಹಪ್ರವೇಶ ಹೋಮಗಳ ಬಗ್ಗೆ ಹೇಳಿ ಇದೀಗ ವಿವಾಹ ಭೋಜನದ ಬಗ್ಗೆ ಹೇಳಿದೆ. ವಧೂವರರಿಗೆ ಭೂಮದೂಟ, ಇತರರಿಗೆ ಮೃಷ್ಟಾನ್ನ ಭೋಜನವಾಗಬೇಕು ತಾನೆ ? ಮೃಷ್ಟಾನ್ನಮಿತರೇ ಜನಾಃ !

ಆದರೆ ಸಮುದ್ರರಾಜ ತಾನೇ ಅಸುರರನ್ನೋಡಿಸಿದನೆ ? ತಾನೇ ದೇವತೆಗಳಿಗೆ ಅಮೃತ ಉಣಿಸಿದನೆ ? ಆ ಅಮೃತವನ್ನೂ ತಾನೇ ಸಿದ್ಧಪಡಿಸಿದನೆ ? ಅಸುರರನ್ನು ಯಾರೂ ಓಡಿಸಲೇ ಇಲ್ಲ. ಅವರನ್ನು ಮೋಹಿನೀ ವೇಷದಿಂದ ವಂಚಿಸಿ ದೇವತೆಗಳಿಗೆ ಅಮೃತ ಉಣಿಸಿದವ ಶ್ರೀಹರಿ. ಅಮೃತವನ್ನು ಮಥನದಿಂದ ಸಿದ್ಧಪಡಿಸಿದವರು ದೇವಾಸುರರು. ಎಲ್ಲವನ್ನೂ ಸಮುದ್ರರಾಜ ತಾನೆ ಮಾಡಿದನೆಂದರೆ ಸತ್ಯಕ್ಕೆ ದೂರವಾಗುವುದು.

ಪದ್ಮಪುರಾಣದಲ್ಲಿ ಅಮೃತ ಬಂದ ಬಳಿಕ ಲಕ್ಷ್ಮೀಪ್ರಾದುರ್ಭಾವ. ಆಕೆ ಹರಿಯನ್ನು ವರಿಸಿ ದೇವತೆಗಳ ಕಡೆಗೆ ವಾತ್ಸಲ್ಯದ ನೋಟ ಬೀರಿದೊಡನೆ ಅವರು ಪುಷ್ಟರಾಗಿ ಬಲಿಷ್ಠರಾಗಿ ಅಸುರರನ್ನೋಡಿಸಿ ಅಮೃತಪಾನಕ್ಕೆ ಕುಳಿತರು. ತಿರುಗಿ ಅಸುರರು ಬಂದಾರೆಂಬ ಶಂಕೆಯಿಂದಲೇ ಹರಿ ಸ್ತ್ರೀ ರೂಪ ಧರಿಸಿ ಅಮೃತವನ್ನು ಉಣಬಡಿಸಿದ. ಸ್ಕಂದಪುರಾಣದಲ್ಲಿ ಲಕ್ಷ್ಮೀವಿವಾಹಕ್ಕೆ ಮೊದಲೇ ಅಮೃತಪಾನ.

ಅಸುರರು ಮೊದಲಿಗೆ ಧನ್ವಂತರಿಯ ಕೈಯಿಂದ ಅಮೃತವನ್ನಪಹರಿಸಿದರೂ ಮೋಹಿನಿಗೆ ಮರುಳಾಗಿ ಅವಳ ಕೈಗೇ ಕೊಟ್ಟರು ಬಳಿಕ ಅನುಮಾನಪಟ್ಟು ಅವಳಿಂದಲೂ ಅಮೃತವನ್ನು ಅಪಹರಿಸಿದರು. ಆಗ ನರನಾರಾಯಣರು ಅವರ ಮೇಲೇರಿ ಹೋಗಿ, ಅಮೃತವನ್ನು ಕಿತ್ತು ಮೋಹಿನಿಯ ಕೈಗಿತ್ತು, ಕಾಳಗ ಮುಂದುವರಿಸಿದರು. ಇತ್ತ ಮೋಹಿನಿ ದೇವತೆಗಳಿಗೆ ಅಮೃತ ಉಣಿಸಿದಳು. ಈ ಎರಡು ಕಥೆಗಳೂ ಪ್ರಕೃತಕ್ಕೆ ಉಪಯುಕ್ತವಲ್ಲ. ಮಹಾಭಾರತ ತಾತ್ಪರ್ಯ ನಿರ್ಣಯಕ್ಕೂ ಅನುಗುಣವಾಗಿಲ್ಲ.

ಮಾವರ ಸುಧೆಯ ಕ್ರಮದಿಂದ ಬಡಿಸಿ ತನ್ನ
ಸೇವಕ ಸುರರಿಗುಣಿಸಿದ ।

ಎಂದು ಇಲ್ಲಿ ಮುಂದೆ ಮೋಹಿನಿಯೆ ಅಮೃತ ಉಣಿಸಿದಳೆಂದಿರುವುದರಿಂದ ಈ ನುಡಿಗೆ ಬೇರೇ ಅಭಿಪ್ರಾಯ ಹೇಳಬೇಕಾಗುತ್ತದೆ.

ಕನ್ಯಾದಾನ ಮಾಡಿರುವ ಸಮುದ್ರರಾಜ ವಧೂವರರಿಗೆ ಭೂಮದೂಟ ಏರ್ಪಡಿಸಬೇಕಾಗಿದೆ. ಅದಕ್ಕೆ ಅಮೃತದಂಥ ಅನ್ನಬೇಕು. ಇತರರಿಗೆ ವಿವಾಹ ಭೋಜನದಲ್ಲಿ ಅಮೃತದಂಥ ಅನ್ನ ಮಾತ್ರವಲ್ಲದೆ ಅಮೃವೆಂಬ ಅನ್ನವನ್ನೂ ಬಡಿಸಬೇಕು. ಕೊಬ್ಬಿದ ದಾನವರಿಂದ ವಿಘ್ನ ಬಂದರೆ ಅವರನ್ನು ಓಡಿಸಲೂ ಬೇಕು. ಉಣುವವರು ಮೂವತ್ತಮೂರು ಕೋಟಿಯಾದರೆ ವಿಘ್ನತರುವವರು ಎಗಡುಪಾಲು ಹೆಚ್ಚಿನ ಸಂಖ್ಯೆಯಲ್ಲಿರುವ ಅಸುರರು. ಅಮೃತಾನ್ನವಿನ್ನೂ ಸಿದ್ಧವೂ ಆಗಿಲ್ಲ. ಹೀಗಾಗಿ ಸರ್ವಶಕ್ತನಾದ ಭಗವಂತನೆ ಎಲ್ಲ ನಡೆಸಬೇಕು, ನಡೆಸುತ್ತಾನೆ. ತನ್ನ ಕೈಯಿಂದ ಕನ್ಯಾದಾನ ಮಾಡಿಸಿಕೊಂಡವ, ಪ್ರೀತಿಯ ಅಳಿಯ, ಮದುವೆಯ ಊಟವನ್ನೂ ನಡೆಸಿಕೊಡದಿರುತ್ತಾನೆಯೆ ? ಆದ್ದರಿಂದ ಸಮುದ್ರರಾಜ ತನ್ನಳಿಯನ ಮೇಲೆಯೆ ಎಲ್ಲ ಭಾರ ಹಾಕಿದ್ದಾನೆ. ಅವನ ಸಹಾಯದಿಂದ ತಾನು ಕೊಬ್ಬಿದ ಖಳರನ್ನೋಡಿಸಿ ಅಮೃತಾನ್ನ ಉಣಿಸಬೇಕೆಂದು ಸಂಕಲ್ಪಿಸಿ ಆ ಸಂಕಲ್ಪದಿಂದಲೇ ಹರ್ಷದಲ್ಲಿ ಉಬ್ಬಿದ್ದಾನೆ. ವಾಸ್ತವದಲ್ಲಿ ಮಥನದಿಂದಾಗಿ ಸಮುದ್ರ ಉಕ್ಕಿದೆ. ಆದರೆ ಈ ಸಂಕಲ್ಪದಿಂದುಂಟಾದ ಹರ್ಷವೆ ಇದಕ್ಕೆ ಕಾರಣವೆಂದು ಕವಿಯ ಉತ್ಪ್ರೇಕ್ಷೆ.

ದೇವಾಸುರರೆಲ್ಲ ಸೇರಿ ತನ್ನನ್ನು ಮಥನ ಮಾಡುತ್ತಿದ್ದಾರೆ ಎಂದು ಸಮುದ್ರ ರಾಜ ಮುನಿಯಲಿಲ್ಲ, ಬೇಸರಿಸಲಿಲ್ಲ. ಸಂತೋಷದಿಂದಲೆ ಮಥನದ ಘರ್ಷಣೆಯನ್ನು ಸಹಿಸಿದ. ಕಾರಣ ಈ ಉಬ್ಬಿದ ಹರ್ಷ. ಉಬ್ಬಿದ ಹರ್ಷದಲ್ಲಿಯೆ ಆತ ಸರ್ವರಿಗೂ ಎಡೆಯನ್ನು ಅಂದರೆ ಅಮೃತದಂಥ ಅನ್ನವನ್ನು ಮತ್ತು ಅಮೃತವೆಂಬ ಅನ್ನವನ್ನು ಮಥನದ ಮೂಲಕ ಸಿದ್ಧಮಾಡಿದ. ಎರಡು ಅನ್ನಗಳೂ ಸಮುದ್ರದಿಂದ ಉದ್ಭವಿಸಿದವು.

ಅಥವಾ 'ಅಮೃತಾನ್ನ' ಎಂದರೆ ಅಮೃತಸ್ವರೂಪವಾದ ಸ್ವಾನಂದರಸವನ್ನು ಉಣ್ಣುವ ಹರಿ, ಅವನು ಕೊಬ್ಬಿದ ಖಳರನ್ನೋಡಿಸಬೇಕು, ಉಬ್ಬಿದ ಹರ್ಷದಲ್ಲಿ ದೇವತೆಗಳನ್ನು ಉಣಿಸಬೇಕು ಎಂಬುದು ಸಮುದ್ರರಾಜನ ಮನೋರಥ ಆದ್ದರಿಂದ ಹಾಗೆ ಸಂಕಲ್ಪಿಸಿ ಸಮುದ್ರರಾಜ ಸರ್ವರಿಗೂ ಭೋಜನ ಏರ್ಪಡಿಸಿದ. ಇಲ್ಲಿ 'ಉಬ್ಬಿದ ಹರುಷ' ಸಮುದ್ರರಾಜನದಲ್ಲ, ಹರಿಯದು. ಹರಿಮಾಡುವುದೆಲ್ಲ ಉಬ್ಬಿದ ಹರ್ಷದಲ್ಲಿಯೆ

ಕೋ ಹ್ಯೇವಾನ್ಯಾತ್ ಕಃ ಪ್ರಾಣ್ಯಾತ್
ಯದೇಷ ಆಕಾಶ ಆನಂದೋ ನ ಸ್ಯಾತ್ ।

ಎಂದು ಉಪನಿಷತ್ತು ಹಾಗೇ ಹೇಳುತ್ತಿದೆ. ಆದರೂ ಪ್ರಕೃತದಲ್ಲಿ ದೇವತೆಗಳು ಹರಿಗೆ ಅತ್ಯಂತ ಪ್ರಿಯರು. ಅಮೃತಪಾನಾರ್ಹರು. ಅಮೃತಕ್ಕಾಗಿ ಶಕ್ತಿಮೀರಿ ಶ್ರಮಿಸಿದವರು ಅವರಿಗೆ ಅಮೃತ ಉಣಿಸುವಲ್ಲಿ ವಿಶೇಷವಾಗಿ ಹರ್ಷದಿಂದ ಉಬ್ಬುತ್ತಾನೆ ಹರಿ. ಹೀಗೆ ಉಬ್ಬಿ ಬಂದ ಹರ್ಷದಿಂದಲೇ ಆನಂದಾಶ್ರು ಉದುರಿ ಅಮೃತ ಕಲಶದ ಮೇಲೆ ಬಿದ್ದುವು. ಅದರಿಂದ ತುಲಸೀ ಪ್ರಾದುರ್ಭಾವ. ಆನಂದಾಶ್ರುಗಳು ಲಕ್ಷ್ಮೀಸ್ವರೂಪ. ಅವುಗಳಿಂದುದಿಸಿದ ತುಲಸಿಯೂ ಲಕ್ಷ್ಮೀಸ್ವರೂಪಳು. ಆದ್ದರಿಂದ ತುಲಸಿಯನ್ನೂ ಹರಿ ವಿವಾಹವಾದನಂತೆ. ಕಾರ್ತಿಕ ಶುದ್ಧ ದ್ವಾದಶಿ ಸೂರ್ಯೋದಯಕಾಲದಲ್ಲಿ ಸಮುದ್ರಮಥನ ನಡೆಯುತ್ತಿದ್ದಂತೆ ಅಮೃತಕಲಶದಿಂದ ತುಲಸೀ ಪ್ರಾದುರ್ಭಾವವೆಂದು ಅಂದೆ ತುಲಸೀವಿವಾಹ ಆಚರಿಸುವುದು ರೂಢಿ.

ತುಲಸಿ ಜಲಂಧರನ ಪತ್ನಿ, ಶಂಖಚೂಡನ ಪತ್ನಿ ಎಂದು ಮುಂತಾಗಿ ದೇವೀಭಾಗವತಾದಿಗಳಲ್ಲಿ ಹೇಳಿರುವುದು ಮೋಹಕ. ತುಲಸಿಯನ್ನು ನಾವು ಸ್ತುತಿಸುವುದು 'ತುಲಸ್ಯಮೃತ ಜನ್ಮಾಸಿ ಸದಾ ತ್ವಂ ಕೇಶವಪ್ರಿಯೇ' 'ಅಮೃತದಿಂದ ಹುಟ್ಟಿರುವಿ, ಸದಾ ಹರಿ ಪ್ರಿಯಳೆನಿಸಿರುವಿ' 'ಕ್ಷೀರೋದಮಥನೋದ್ಭೂತೇ' 'ಕ್ಷೀರ ಸಮುದ್ರಮಥನದಿಂದ ಉದಿಸಿ ಬಂದವಳು' 'ವಿಷ್ಣೋರ್ಹರ್ಷಾಶ್ರುಸಂಭೂತೇ' 'ವಿಷ್ಣುವಿನ ಆನಂದಾಶ್ರುಗಳಿಂದ ಉದಿಸಿ ಬಂದವಳು' 'ಶ್ರೀಸಖಿ ಶುಭೇ' 'ಲಕ್ಷ್ಮೀದೇವಿಯ ಸಖಿ, ಶುಭಕರಳು' ಎಂದು ಮುಂತಾಗಿ. ಜಲಂಧರ ಅಥವಾ ಶಂಖಚೂಡನ ಪತ್ನಿ ಅಮೃತದಿಂದ ಹುಟ್ಟಿಲ್ಲ, ಹರಿಯ ಆನಂದಾಶ್ರುಗಳಿಂದ ಉದಿಸಿಲ್ಲ, ಹರಿಗೆ ಸದಾ ಪ್ರಿಯಳೂ ಅಲ್ಲ, ಲಕ್ಷ್ಮೀದೇವಿಗೆ ಸಖಿಯೂ ಅಲ್ಲ. ತುಲಸೀ ಪ್ರಾದುರ್ಭಾವ ಕಾರ್ತಿಕ ಹುಣ್ಣಿಮೆಯಲ್ಲಿ ಎಂದೋ, ಕಾರ್ತಿಕ ಅಮಾವಾಸ್ಯೆಯಲ್ಲಿ ಎಂದೋ ಹೇಳಿದ್ದರೆ ಅದು ಬೇರೇ ತುಲಸಿಯರ ಪ್ರಾದುರ್ಭಾವವಿರಬಹುದು.

ಹೀಗೇ ಹರಿ ಉಬ್ಬಿದ ಹರ್ಷದಿಂದ ದೇವತೆಗಳಿಗೆ ಅಮೃತ ಉಣಿಸಲಿ ಎಂದು ಸಮುದ್ರರಾಜ ಸರ್ವರಿಗೆ ಎಡೆಯನ್ನು ಮಾಡಿಸಿದ, ಅಂದರೆ ತನ್ನ ಮೈಯನ್ನು ಮಥನಕ್ಕೆ ಒಡ್ಡಿ ಅಮೃತಾನ್ನ ಪ್ರಾದುರ್ಭಾವಗೊಳಿಸಿದ ಧನ್ವಂತರಿ ಅಮೃತಕಲಶ ಹಿಡಿದು ಸಮುದ್ರದಿಂದ ಎದ್ದು ಬಂದ. ಒಡನೆ ಅಸುರರು ಕಲಶವನ್ನು ಕಿತ್ತುಕೊಂಡರು. ಸಮುದ್ರರಾಜ ಯಾವುದನ್ನು ಮೊದಲೆ ಶಂಕಿಸಿದ್ದನೋ ಅದೇ ಈಗ ತನ್ನ ಕಣ್ಣಮುಂದೆಯೇ ನಡೆದಿತ್ತು. ಕೊಬ್ಬಿದ ಖಳರನ್ನೋಡಿಸೆಂದು ಆತ ಹರಿಯನ್ನು ಪ್ರಾರ್ಥಿಸಿದ ವೇದಮಂತ್ರದಲ್ಲಿ ಅವನ ಪ್ರಾರ್ಥನೆ ಹೀಗೆ ಮೂಡಿ ಬಂದಿರಬಹುದು–

ಪೀಯೂಷಮಗ್ನೇ ಯತಮಸ್ ತಿತೃಪ್ಸಾತ್ ।
ತಂ ಪ್ರತ್ಯಂಚಂ ಅರ್ಚಿಷಾ ವಿಧ್ಯ ಮರ್ಮನ್ ॥

'ಶತ್ರುಸೇನೆಯೆಂಬ ಹುಲ್ಲಿನ ರಾಶಿಗೆ ಬೆಂಕಿಯಂತಿರುವ ಹರಿಯೆ, ಅಮೃತವನ್ನು ಅಪಹರಿಸಿ ತಾವೇ ಕುಡಿಯಲು ಯತ್ನಿಸುವ ಅಸುರರನ್ನು ತೇಜೋಮಯವಾದ ನಿನ್ನ ಚಕ್ರದಿಂದ ಮರ್ಮ ಭೇದಿಸಿ ಶಿಕ್ಷಿಸು'.

ಹೀಗೆ ಸಮುದ್ರರಾಜ ಮಾತ್ರವೆ ಅಲ್ಲ, ಎಲ್ಲ ದೇವತೆಗಳೂ ಪ್ರಾರ್ಥಿಸಿದ್ದಾರೆ. ಅದನ್ನು ಕೇಳಿ ಹರಿ ಮೋಹಿನೀ ವೇಷಧರಿಸಿ ಅಸುರರನ್ನು ವಂಚಿಸಿ ದೇವತೆಗಳಿಗೇ ಅಮೃತ ಉಣಿಸಿದ.

ಹರಿಗೆ ಇದು ಪಕ್ಷಪಾತವಲ್ಲವೆ ? ಅಮೃತದಲ್ಲಿ ಒಂದು ಪಾಲು ಕೊಡುತ್ತೇವೆ ಎಂದೇ ದೇವತೆಗಳು ಅಸುರರ ಸಹಾಯ ಬೇಡಿದ್ದರು ತಾನೆ ? ಇದಕ್ಕೆ ಸಮಾಧಾನ ಅಸುರರು ಕೊಬ್ಬಿದ ಖಳರು ಎಂದು. ತಮ್ಮ ಸಹಾಯದಿಂದ ಸಮುದ್ರಮಥನ ನಡೆಸಿದವರೆ ದೇವತೆಗಳು ವಿಶೇಷವಾಗಿ ಹರಿಯೆ ಎಲ್ಲ ನಡೆಸಿದವ. ವಾಸುಕಿಯ ಬಾಲದ ಕಡೆ ದೇವತೆಗಳೂ ಹೆಡೆಯ ಕಡೆ ಅಸುರರೂ ಹಿಡಿದು ಸಮುದ್ರವನ್ನು ಕಡೆಯುತ್ತಿದ್ದಂತೆ ಹರಿ ಬಾಲ ಮತ್ತು ಹೆಡೆ ಈ ಎರಡೂ ಕಡೆಯಲ್ಲಿ ಸಾವಿರ ಕೈಗಳಿಂದ ಹಿಡಿದು, ಒಂದು ಬೆಟ್ಟದಿದಿರು ಇನ್ನೊಂದು ಬೆಟ್ಟದಂತೆ ನಿಂತು ಬಹು ರಭಸದಿಂದ ಲೀಲೆಯಿಂದಲೇ ಕಡೆಯುತ್ತ ನೋಡುವ ಕಣ್ಣುಗಳಿಗೆ ಸಂಭ್ರಮದ ಹಬ್ಬ ಉಂಟು ಮಾಡುತ್ತ ಆಕಾಶದಲ್ಲಿ ಕೋಟಿಗಟ್ಟಲೆ ಋಷಿಮುನಿಗಳ ನಡುವೆ ನಿಂತ ಬ್ರಹ್ಮದೇವನಿಂದ ಜಯಕಾರ ಮಾಡಿಸಿಕೊಂಡ, ಪುಷ್ಪವೃಷ್ಟಿ ಮಾಡಿಸಿಕೊಂಡ. ಹೀಗೆ ಮಥನ ನಡೆಯುತ್ತಿದ್ದಾಗ ಧನ್ವಂತರಿ ಅಮೃತಕಲಶ ಹಿಡಿದು ಸಮುದ್ರದಿಂದ ಎದ್ದು ಬಂದೊಡನೆ ಅಸುರರು ಓಡಿ ಬಂದು ಅದನ್ನು ಕಿತ್ತುಕೊಂಡರು. ದೇವತೆಗಳಿಗೆ ಅನ್ಯಾಯ ಬಗೆದರು. ಆದ್ದರಿಂದ ಅವರು 'ಖಳರು'. ಧನ್ವಂತರಿ ಸಾಕ್ಷಾತ್ ಹರಿಯ ಅವತಾರ ಅವನ ಕೈಯಿಂದಲೆ ಅಮೃತಕಲಶವನ್ನು ಕಿತ್ತುಕೊಳ್ಳಬೇಕೆಂದರೆ, ಎಲ್ಲ

ದೇವತೆಗಳೂ ನೋಡುತ್ತಿದ್ದಂತೆ ಹಾಗೆ ಮಾಡಬೇಕೆಂದರೆ ಅಸುರರಿಗೆ ಅದೆಷ್ಟು ಕೊಬ್ಬು ! ಆದ್ದರಿಂದ 'ಕೊಬ್ಬಿದ ಖಳರು' ಅವರು. ಇದನ್ನು ಲೋಕಕ್ಕೆ ತಿಳಿಸಲೆಂದೇ ಧನ್ವಂತರಿ ಸುಮ್ಮನಿದ್ದ

ಈಗ ದೇವತೆಗಳು ವಿಷಣ್ಣರಾಗಿ ಹರಿಯನ್ನೇ ಪ್ರಾರ್ಥಿಸಿದರು. ಹರಿ ಮೋಹಿನೀ ವೇಷ ಧರಿಸಿದ. ಅಸುರರು ಮೋಹಿತರಾಗಿ ಅಮೃತವನ್ನು ಮೋಹಿನಿಯ ಕೈಗೆ ಕೊಟ್ಟರು. ಅವಳು 'ನೀವು ನನ್ನನ್ನು ನಂಬಬೇಡಿ. ನಾನು ನನ್ನಿಚ್ಛೆಯಂತೆ ಯಾರಿಗಾದರೂ ಅಮೃತ ಉಣಿಸಿಯೇನು' ಎಂದು ಸಾರಿ ಹೇಳಿದರೂ ಮೋಹಾಂಧರಾದ ಅಸುರರು 'ನಿನ್ನಿಚ್ಛಾನುಸಾರ ಮಾಡು' ಎಂದರು. ಮೋಹಿನಿ ದೇವಾಸುರರನ್ನು ಎರಡು ಪಂಕ್ತಿಯಲ್ಲಿ ಕೂಡಿಸಿ ಅಸುರರಿಗೆ 'ಕಣ್ಣು ಮುಚ್ಚಿಕೊಳ್ಳಿ', 'ನೀವು ನೋಡುತ್ತಿದ್ದರೆ ನನಗೆ ನಾಚಿಕೆಯಾಗುತ್ತದೆ' ಎಂದಳು. ಇದು ಸ್ತ್ರೀ ಸ್ವಭಾವವೆಂದು ಬಗೆದು ಅಸುರರು ಕಣ್ಣುಮುಚ್ಚಿದರು. ಇತ್ತ ಮೋಹಿನಿ ದೇವತೆಗಳಿಗೆ ಎಲ್ಲ ಅಮೃತ ಉಣಿಸಿ ಬರಿದು ಮಾಡಿದಳು. ಅಸುರರು ಕೋಪದಿಂದ ದೇವತೆಗಳ ಮೇಲೇರಿ ಹೋಗಿ ತಾವೇ ಸೋತು ಓಡಿದರು. ಹೀಗೆ ಕೊಬ್ಬಿದ ಖಳರನ್ನು ಹರಿ ಓಡಿಸಿದ. ದೇವತೆಗಳಿಗೆ ಅಮೃತಾನ್ನ ಉಣಿಸಿದ.

ಈಗ ಪ್ರಶ್ನೆ–ಹರಿ ಅಸುರರನ್ನೋಡಿಸಿ ದೇವತೆಗಳಿಗೆ ಅಮೃತ ಬಡಿಸಿದನೆ ಅಥವಾ ಅಮೃತ ಉಣಿಸಿದ ಬಳಿಕ ಅಸುರರನ್ನೋಡಿಸಿದನೆ ? ಅಮೃತ ಉಣಿಸಿಯೆ ಅಸುರರನ್ನೋಡಿಸಿದನೆಂದು ಸಮಾಧಾನ. ಕೊಬ್ಬಿದ ಖಳರೋಡಿಸಿ ಅಮೃತಾನ್ನ ಉಣಿಸಲೆಂದು ಸಮುದ್ರರಾಜನೂ ದೇವತೆಗಳೂ ಪ್ರಾರ್ಥಿಸಿದ್ದುದು ನಿಜವೆ. ಆದರೂ ಹರಿ ಉಪಾಯದಿಂದ ಅಸುರರನ್ನು ವಂಚಿಸಿಯೇ ಅಮೃತವನ್ನು ದೇವತೆಗಳಿಗೆ ಉಣಿಸಿದ. ಏಕೆಂದರೆ ಅಸುರರನ್ನೋಡಿಸಿಯೆ ಅಮೃತ ಉಣಿಸಬೇಕೆಂದು ದೇವತೆಗಳಿಗೆ ಆಗ್ರಹವೇನಿರಲಿಲ್ಲ. ಅವರಿಗೆ ಅಮೃತ ಸಿಕ್ಕಿದರಾಯಿತು. ಆದ್ದರಿಂದ ಹರಿ ಮೊದಲಿಗೆ ಅಸುರರನ್ನೋಡಿಸಲಿಲ್ಲ. ಈ ನುಡಿಯಲ್ಲಿ 'ಕೊಬ್ಬಿದ ಖಳರೋಡಿಸಿ' ಎಂದುದು ದೇವತೆಗಳ ಪ್ರಾರ್ಥನೆಯ ದೃಷ್ಟಿಯಿಂದ. ವಾಸ್ತವ ದೃಷ್ಟಿಯಿಂದಲ್ಲ. ಆದ್ದರಿಂದ ವಿರೋಧವಿಲ್ಲ. 'ಅಮೃತ ಕುಡಿಯಲು ಯತ್ನಿಸುವ ಅಸುರರನ್ನು ಚಕ್ರದಿಂದ ಭೇದಿಸಿ ಶಿಕ್ಷಿಸು' ಎಂದು ಹಿಂದೆ ಹೇಳಿದ ಸಮುದ್ರರಾಜನ ವೈದಿಕ ಪ್ರಾರ್ಥನೆಯನ್ನು ರಾಹುವಿನ ವಿಷಯದಲ್ಲಿ ಸತ್ಯವಾಗಿಸಿಯೆ ಇದ್ದಾನೆ ಶ್ರೀಹರಿ. ಪೂರ್ತಿ ಸುಳ್ಳಾಗಿಸಲಿಲ್ಲ. ಚಕ್ರದಿಂದ ರಾಹುವಿನ ಶಿರಶ್ಛೇದ ಮಾಡಿದ್ದಾನೆ.

ಅಮೃತದಂಥ ಷಡ್ರಸಾನ್ನವನ್ನೂ ದೇವತೆಗಳಿಗೆ ಉಣಿಸಿದ ಸಮುದ್ರರಾಜ ಎಂದು ಸ್ಕಂದಪುರಾಣ ಹೇಳಿದೆ–

ಚತುರ್ವಿಧೈರ್ಬಹುರಸೈಃ ಸವನ್ನೈರಮೃತೋಪಮೈಃ ।
ಸರ್ವಾನ್ ಸಮಾಗತಾಂಸ್ತತ್ರ ತರ್ಪಯಾಮಾಸ ಸಾದರಂ ॥

'ಬಹುರುಚಿಕರವಾದ ಅಮೃತದಂಥ ಚತುರ್ವಿಧ ಅನ್ನಗಳಿಂದ ವಿವಾಹಕ್ಕೆ ಬಂದ ಎಲ್ಲರನ್ನೂ ಸಮುದ್ರರಾಜ ತೃಪ್ತಿಪಡಿಸಿದ'. ಆದರೆ ಅಮೃತವನ್ನೂ ವಿವಾಹ ಭೋಜನಕ್ಕೆ ಬಡಿಸಿದ ಅಂಶ ಪುರಾಣಗಳಲ್ಲಿಲ್ಲ. ಸಮುದ್ರಮಥನದ ಮುಖ್ಯ ಉದ್ದೇಶವೆ ಅಮೃತ ಲಾಭವಾಗಿತ್ತೆಂದು ಪ್ರಸಿದ್ಧಿ.

ರತ್ನೈರ್ಮಹಾಬ್ಧೇಸ್ತುತುಷುರ್ನ ದೇವಾಃ
ನ ಭೇಜಿರೇ ಭೀಮವಿಷೇಣ ಭೀತಿಂ ।
ಸುಧಾಂ ವಿನಾ ನ ಪ್ರಯಯುರ್ವಿರಾಮಂ
ನ ನಿಶ್ಚಿತಾರ್ಥಾದ್ ವಿರಮಂತಿ ಧೀರಾಃ ॥

'ಸಮುದ್ರಮಥನಕ್ಕೆ ತೊಡಗಿದ ದೇವತೆಗಳು ಪಾರಿಜಾತ ಕಲ್ಪವೃಕ್ಷಾದಿ ರತ್ನಗಳಿಂದ ತೃಪ್ತಿ ಹೊಂದಲಿಲ್ಲ. ಭಯಂಕರವಾದ ಹಾಲಾಹಲದಿಂದ ಭೀತರೂ ಆಗಲಿಲ್ಲ. ಮುಖ್ಯ ಉದ್ದೇಶವಾದ ಅಮೃತ ಸಿಗುವವರೆಗೆ ಮಥನ ನಿಲ್ಲಿಸಲೇ ಇಲ್ಲ. ಧೈರ್ಯ ಸ್ಥೈರ್ಯ ಉಳ್ಳವರು ಧ್ಯೇಯಸಾಧನೆಯಾಗದ ಹೊರತು ನಡುವೆ ಎಷ್ಟೇ ಕಷ್ಟ ಬರಲಿ, ಹಿಂಜರಿಯುವುದಿಲ್ಲ. ಆಸೆ ಆಮಿಷಗಳಿಗೆ ಬಲಿಯಾಗಿ ಪ್ರಾರಂಭಿಸಿದ ಪ್ರಯತ್ನ ಅರ್ಧಕ್ಕೆ ನಿಲ್ಲಿಸುವುದೂ ಇಲ್ಲ' ಎಂದು ಭರ್ತೃಹರಿ ಹೇಳುತ್ತಾನೆ. ವಾದಿರಾಜರ ಅಭಿಪ್ರಾಯದಲ್ಲಿ ಮಥನದ ಮುಖ್ಯ ಉದ್ದೇಶ ಲಕ್ಷ್ಮೀಪ್ರಾದುರ್ಭಾವ ಮತ್ತು ವಿವಾಹ. ಅಮೃತ ವಿವಾಹಭೋಜನಕ್ಕಾಗಿ ಬೇಕಷ್ಟೆ. ಇದಕ್ಕೆ ಸಮುದ್ರ ಮಥನದ ಹಿನ್ನೆಲೆಯಲ್ಲಿ ನಡೆದ ಸಂಗತಿಯೇ ಸಾಕ್ಷಿ. ದೂರ್ವಾಸರ ಶಾಪದಿಂದ ಲಕ್ಷ್ಮಿ ಅಂತರ್ಧಾನಗೊಂಡ ಪ್ರಯುಕ್ತ ದೇವತೆಗಳು ದುಃಖದಿಂದ ಹರಿಯನ್ನು ಪ್ರಾರ್ಥಿಸಿದಾಗ ಹರಿ ಹೇಳಿದುದು ಪದ್ಮಪುರಾಣದಲ್ಲಿ ಹೀಗೆ–

ಕುರುಷ್ವ ಮಥನಂ ದೇವಾಃ ಸದೈತ್ಯಾಃ ಕ್ಷೀರವಾರಿಧೇಃ ।
ತಸ್ಮಾದುತ್ಪದ್ಯತೇ ಲಕ್ಷ್ಮೀಃ ಜಗನ್ಮಾತಾ ಚ ಭೋಃ ಸುರಾಃ ॥

'ದೇವತೆಗಳೆ, ದೈತ್ಯರ ಸಹಾಯ ಪಡೆದು ಕ್ಷೀರಸಮುದ್ರ ಮಥನ ಮಾಡಿ. ಅದರಿಂದ ಜಗನ್ಮಾತೆ ಲಕ್ಷ್ಮಿ ಪ್ರಾದುರ್ಭವಿಸುತ್ತಾಳೆ' ಇದರಿಂದ ಲಕ್ಷ್ಮೀ ಪ್ರಾದುರ್ಭಾವವೆ ದೇವತೆಗಳಿಗೆ ಮುಖ್ಯಬೇಕಾಗಿತ್ತು, ಅವಳ ಕೃಪಾಕಟಾಕ್ಷದಿಂದಲೆ ಅವರಿಗೆ ಬಲ ಪುಷ್ಟಿ ಸಮೃದ್ಧಿ ಎಲ್ಲವೂ ಬರಬೇಕಾಗಿದ್ದುವು. ಅಮೃತ ವಿವಾಹಭೋಜನಕ್ಕಾಗಿ ಮಾತ್ರ. ಅಸುರರ ದೃಷ್ಟಿಯಲ್ಲಿ ಅಮೃತವೇ ಮುಖ್ಯ

ಉದ್ದೇಶ ಲಕ್ಷ್ಮಿ ಉದಿಸುವುದು ಬೇಕಾಗಿಲ್ಲ. ವಿವಾಹವೂ ಬೇಡ. ಲಕ್ಷ್ಮೀನಾರಾಯಣರ ವಿಯೋಗವನ್ನೇ ಬಯಸುವವರು ಅವರು.

ಪದ್ಮಪುರಾಣದ ಪ್ರಕಾರ ಕಾರ್ತಿಕ ಶುದ್ಧ ಏಕಾದಶಿ ದಿನ ಅಮೃತಕಲಶಸಹಿತ ಧನ್ವಂತರಿ ಪ್ರಾದುರ್ಭಾವಾದ ಬಳಿಕ ದ್ವಾದಶಿ ಸೂರ್ಯೋದಯವಾದೊಡನೆ ಮಹಾಲಕ್ಷ್ಮೀಪ್ರಾದುರ್ಭಾವ. ಆದರೂ ಅಸುರರು ಅಮೃತ ಬಂದೊಡನೆ ಮಥನ ನಿಲ್ಲಿಸಲಿಲ್ಲ. ಅವರಿಗೂ ಲಕ್ಷ್ಮೀ ಪ್ರಾದುರ್ಭಾವ ಬೇಕಿತ್ತು ಎನ್ನಬಹುದಲ್ಲವೆ? ಎಂದರೆ, ನಿಜ. ಲಕ್ಷ್ಮಿ ತಮ್ಮನ್ನು ವರಿಸಬಹುದೆಂಬ ಆಸೆ ಅವರದಾಗಿತ್ತು, ಹೊರತು ಲಕ್ಷ್ಮೀನಾರಾಯಣರ ವಿವಾಹವನ್ನು ನೋಡುವ ಆಸೆಯಲ್ಲ. ದೇವತೆಗಳಿಗೆ ವಿವಾಹ ನೋಡುವಾಸೆ ಮದುವೆಯ ಊಟದಲ್ಲಿ ಅಮೃತ ಉಣ್ಣುವ ಆಸೆ.

ಬೇರೆ ಎಲ್ಲಿಯೂ ಕಂಡುಬಾರದ ಸುಂದರವಾದ ಹೊಸ ಕಲ್ಪನೆ ಇದು

– ೯೮ –

**ಮಾವನ ಮನೆಯಲ್ಲಿ ದೇವರಿಗೌತಣವ ದಾ–**
**ನವರು ಕೆಡಿಸದೆ ಬಿಡರೆಂದು ದಾ–**
**ನವರು ಕೆಡಿಸದೆ ಬಿಡರೆಂದು ಶ್ರೀಕೃಷ್ಣ**
**ದೇವ ಸ್ತ್ರೀವೇಷವ ಧರಿಸಿದ ॥**

ಮಾವನಾದ ಸಮುದ್ರರಾಜನ ಅರಮನೆಯಲ್ಲಿ ಮದುವೆಯ ಔತಣವನ್ನು ದೇವತೆಗಳಿಗೆ ಸಿಗದಂತೆ ದಾನವರು ಕೆಡಿಸದೆ ಬಿಡರೆಂದು ಶ್ರೀಕೃಷ್ಣದೇವ ಸ್ತ್ರೀವೇಷ ಧರಿಸಿದ.

ಇಲ್ಲಿ ಮೇಲುನೋಟಕ್ಕೆ ಹೀಗೆ ಅರ್ಥಕಾಣುತ್ತದೆ– 'ಲಕ್ಷ್ಮೀದೇವಿಯ ಕಟಾಕ್ಷದ ಬಲದಿಂದ ದೇವತೆಗಳು ಪುಷ್ಟರಾಗಿ ಬಲಿಷ್ಠರಾಗಿ ಅಸುರರನ್ನು ಓಡಿಸಿದರು. ಆದರೂ ಅವರು ತಿರುಗಿ ಬರಬಹುದೆಂದು ಔತಣವನ್ನು ಕೆಡಿಸಬಹುದೆಂದು ಭೀತಿಯಿಂದಲೇ ದೇವತೆಗಳ ಪ್ರಾರ್ಥನೆಯಂತೆ ಹರಿ ಸ್ತ್ರೀವೇಷ ಧರಿಸಿದ' ಎಂದು ಪದ್ಮಪುರಾಣದಲ್ಲಿ ಹೀಗೇ ಕಥೆ ಇದೆ. ಆದರೆ ಮಹಾಭಾರತ ತಾತ್ಪರ್ಯ ನಿರ್ಣಯಕ್ಕೆ ಅನುಗುಣವಲ್ಲದುದರಿಂದ ಕಲ್ಪಾಂತರದ ಕಥೆ ಎಂದು ಅದನ್ನು ಬಿಟ್ಟು ಹೀಗೆ ಅರ್ಥ ಹೇಳಬೇಕು–

ಸಮುದ್ರರಾಜ ಕೊಬ್ಬಿದ ದಾನವರನ್ನೋಡಿಸಿ ದೇವತೆಗಳಿಗೆ ಮದುವೆಯ ಔತಣ ನೀಡಲು ಸಂಕಲ್ಪಿಸಿದ್ದನೆಂದು ಹಿಂದಿನ ನುಡಿಯಲ್ಲಿ ಹೇಳಿದೆ. ಸಮುದ್ರರಾಜನ ಸಂಕಲ್ಪ ಹಾಗಿದ್ದರೂ ನಡೆದುದು ಬೇರೆಯೆ. ಅಮೃತಕಲಶವನ್ನು ಹಿಡಿದು ಧನ್ವಂತರಿ ಪ್ರಕಟನಾದೊಡನೆ ದಾನವರು ಕಲಶವನ್ನಪಹರಿಸಿದರು. ಅವರೇ

ದೇವತೆಗಳನ್ನೋಡಿಸಿ ಅಮೃತಪಾನ ಮಾಡುವ ಸಂಭವವಿತ್ತು. 'ದಾನವರು ಕೆಡಿಸದೆ ಬಿಡರೆಂದು, ದಾನವರು ಕೆಡಿಸದೆ ಬಿಡರೆಂದು' ಎಂಬ ಪುನರುಕ್ತಿ ಇಲ್ಲಿ ಸೊಬಗಿನ ಸೋನೆಯು ಹಾಡಿನ ಮಟ್ಟಿನಲ್ಲಿ ಸ್ವಾಭಾವಿಕವಾಗಿಯೆ ಬಂದಿದ್ದರೂ ಪ್ರಕೃತ ವಿಷಯದಲ್ಲಿ 'ದಾನವರು ಕೆಡಿಸದೆ ಬಿಡರೆನ್ನುವುದು ಖಚಿತ' ಎಂಬ ಭಾವವನ್ನು ಸೂಚಿಸುತ್ತ ಧ್ವನಿಪೂರ್ಣವಾಗಿದೆ. ದಾನವರ ಕೈ ಮೇಲಾಯಿತು. ಅವರು ದೇವರಿಗೆ ಔತಣವನ್ನು ಕೆಡಿಸದೆ ಬಿಡರೆನ್ನುವುದು ನಿಃಸಂದಿಗ್ಧವಾಯಿತು. ಅದರಿಂದ ದೇವತೆಗಳ ಪ್ರಾರ್ಥನೆಯಂತೆ ಶ್ರೀಕೃಷ್ಣದೇವ ಸ್ತ್ರೀವೇಷ ಧರಿಸಿದ ಎಂದರ್ಥ.

'ಸ್ತ್ರೀವೇಷ' ಧರಿಸಿದನೆಂದರೆ ನಾಟಕದಲ್ಲಿ ಪುರುಷರು ಕೃತಕವಾದ ಸ್ತ್ರೀವೇಷ ಧರಿಸಿದಂತೆ ಎಂದಾಗುತ್ತದೆ. ವಸ್ತುತಃ ಹರಿಗೆ ಸ್ವಾಭಾವಿಕ ಪುರುಷರೂಪದಂತೆ ಸ್ವಾಭಾವಿಕ ಸ್ತ್ರೀರೂಪವೂ ಇದೆ. ಕೃತಕ ಸ್ತ್ರೀರೂಪ ಧರಿಸಬೇಕಾಗಿಲ್ಲ, ಧರಿಸುವುದೂ ಇಲ್ಲ.

ಐತರೇಯೋಪನಿಷತ್ತಿನಲ್ಲಿ –

'ನೈನಂ ವಾಚಾ ಸ್ತ್ರಿಯಂ ಬ್ರುವನ್'

'ಭಗವಂತನನ್ನು ಸ್ತ್ರೀ ಎಂದೆನ್ನುವವನು ಸಮರ್ಪಕವಾಗಿ ಹೇಳುತ್ತಿಲ್ಲ' ಎಂದಿದ್ದರೂ ಅದಕ್ಕೆ ಸ್ತ್ರೀರೂಪವಿಲ್ಲ ಎಂದರ್ಥವಲ್ಲ. ಮುಂದೇ ಅದೇ ಉಪನಿಷತ್ತು.

'ಪುಮಾಂಸಂ ನ ಬ್ರುವನ್ನೇನಂ ವದನ್ ವದತಿ ಕಶ್ಚನ'

'ಭಗವಂತನನ್ನು ಪುರುಷನೆನ್ನುವವನೂ ಯಾರೂ ಸರಿಯಾಗಿ ಹೇಳುತ್ತಿಲ್ಲ' ಎಂದಿದೆ. ಅದರಿಂದ ಪುರುಷರೂಪವೂ ಇಲ್ಲ ಎನ್ನಬೇಕಾದೀತು. ಹಾಗಾದರೆ ನಿರಾಕಾರವಾದದಂತೆ ಸ್ತ್ರೀಯೂ ಅಲ್ಲ, ಪುರುಷನೂ ಅಲ್ಲ ಎನ್ನೋಣವೆ ? ಎಂದರೆ, ಅದೇ ಉಪನಿಷತ್ತು.

'ನೈನಮಸ್ತ್ರೀಪುಮಾನ್ ಬ್ರುವನ್'

'ಸ್ತ್ರೀಯೂ ಅಲ್ಲ ಪುರುಷನೂ ಅಲ್ಲ ಎನ್ನುವವನೂ ಸರಿಯಾಗಿ ಹೇಳುತ್ತಿಲ್ಲ' ಎಂದೂ ಹೇಳಿದೆ. ಸ್ತ್ರೀಯೂ ಅಲ್ಲದ ಪುರುಷನೂ ಅಲ್ಲದ ನಪುಂಸಕ ಭಗವಂತನೆನ್ನುವ ಕುಚೋದ್ಯಕ್ಕೂ ಇದೇ ಉತ್ತರ–

'ನೈನಮಸ್ತ್ರೀಪುಮಾನ್ ಬ್ರುವನ್'

'ಭಗವಂತನನ್ನು ಸ್ತ್ರೀಯೂ ಅಲ್ಲ ಪುರುಷನೂ ಅಲ್ಲ ನಪುಂಸಕ ಎಂದು ಹೇಳುವವನು ಸಮರ್ಪಕವಾಗಿ ಹೇಳುತ್ತಿಲ್ಲ'.

ಆದ್ದರಿಂದ 'ಭಗವಂತನನ್ನು ಸ್ತ್ರೀ ಎನ್ನುವವನು ಸರಿಯಾಗಿ ಹೇಳುತ್ತಿಲ್ಲ ಎಂದರೆ 'ಕೇವಲಸ್ತ್ರೀ ಎನ್ನುವವನು ಸರಿಯಾಗಿ ಹೇಳುತ್ತಿಲ್ಲ, ಪುರುಷನೂ ಆಗಿದ್ದಾನೆ ಎನ್ನಬೇಕೆ'ಂದರ್ಥ.' ಮತ್ತು 'ಲೋಕಸಾಧಾರಣ ಸ್ತ್ರೀ ಎನ್ನುವವನು ಸರಿಯಾಗಿ ಹೇಳುತ್ತಿಲ್ಲ. ಲೋಕವಿಲಕ್ಷಣ ಸ್ತ್ರೀಯಾಗಿದ್ದಾನೆ ಎನ್ನಬೇಕೆ'ಂದೂ ಅರ್ಥ. ಹೀಗೆ ಪುರುಷನೆಂದರೆ ಕೇವಲ ಪುರುಷನಲ್ಲ, ಸ್ತ್ರೀಯೂ ಆಗಿದ್ದಾನೆ. ಮತ್ತು ಲೋಕ ಸಾಧಾರಣ ಪುರುಷನೂ ಅಲ್ಲ, ಲೋಕವಿಲಕ್ಷಣ ಪುರುಷನಾಗಿದ್ದಾನೆ ಎಂದೂ ಉಪನಿಷತ್ತಿಗೆ ಅರ್ಥವಿವರಣೆ ಉಂಟು ಬ್ರಹ್ಮಾಂಡ ಪುರಾಣದಲ್ಲಿ ಸ್ಪಷ್ಟವಿದೆ–

ಸ್ತ್ರೀಪುಂರೂಪದ್ವಯಂ ವಿಷ್ಣೋರ್ನ ತೃತೀಯಂ ಕಥಂಚನ !

'ವಿಷ್ಣುವಿಗೆ ಸ್ತ್ರೀರೂಪ ಪುರುಷರೂಪಗಳೆರಡೂ ಇವೆ. ನಪುಂಸಕರೂಪ ಸರ್ವಥಾ ಇಲ್ಲ'. ಆದ್ದರಿಂದ ಪ್ರಕೃತದಲ್ಲಿ ಶ್ರೀಕೃಷ್ಣ 'ಸ್ತ್ರೀಯಾದ' ನೆನ್ನದೆ 'ಸ್ತ್ರೀವೇಷ ಧರಿಸಿದ' ಎನ್ನಲಾಗಿದೆ. ಸ್ತ್ರೀಯಾದನೆದರೆ ಸುದ್ಯುಮ್ನನೆಂಬ ರಾಜ ಸ್ತ್ರೀಯಾಗಿ ಚಂದ್ರನಿಂದ ಗರ್ಭಧರಿಸಿದಂತೆ ಕೃಷ್ಣನೂ ಲೋಕಸಾಧಾರಣ ಸ್ತ್ರೀಯಾದ, ಅಬಲೆಯಾದನೆಂಬ ಭಾವನೆಗೆ ಅವಕಾಶವಿರುತ್ತಿತ್ತು.

ಈಗ 'ಹರಿಗೆ ಸ್ವಾಭಾವಿಕ ಸ್ತ್ರೀರೂಪವೆ ಇರುತ್ತಿದ್ದರೆ ಅವನು ಸ್ತ್ರೀಯಾಗಬೇಕಾಗಿತ್ತು. 'ಸ್ತ್ರೀವೇಷ ಧರಿಸಿದ್ದೇಕೆ' ಎಂಬ ಪ್ರಶ್ನೆಗೆ ಅವಕಾಶವಿಲ್ಲ ಆದರೂ ಸ್ತ್ರೀವೇಷ ಎಂದರೆ ಕೃತಕ ಎಂಬ ಭಾವನೆ ಬರುತ್ತದೆ. ಆದ್ದರಿಂದ ಸ್ತ್ರೀವೇಷ ಎನ್ನದೆ ಸ್ತ್ರೀರೂಪ ಎನ್ನಬಹುದಿತ್ತು ಎಂಬ ಶಂಕೆಗೆ ಅವಕಾಶ ಉಂಟು ಆದರೆ ಸ್ತ್ರೀರೂಪ ತಾಳಿದನೆಂದರೂ ಸ್ತ್ರೀರೂಪ ಬೇರೆ, ಸ್ತ್ರೀರೂಪದಲ್ಲಿ ಲಾವಣ್ಯಾದಿ ಸ್ತ್ರೀಸಹಜ ಗುಣಗಳು ಮಾತ್ರವೆ ಇವೆ. ಶೌರ್ಯ ಪರಾಕ್ರಮಾದಿ ಪುರುಷಗುಣಗಳಿಲ್ಲ ಎಂದು ತಿಳಿಯುವ ಸಂಭವ ಉಂಟು. ವಸ್ತುತಃ ಹರಿಗೆ ಸ್ತ್ರೀರೂಪದಲ್ಲಿ ಪುರುಷಗುಣವೂ ಉಂಟು.

'ಸ್ತ್ರಿಯಃ ಸತೀಸ್ತಾ ಉಭೇ ಪುಂಸ ಆಹುಃ'

'ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ'

ಎಂದು ಮುಂತಾದ ಶ್ರುತಿಗಳೂ,

'ಆತ್ಮನಿ ಚೈವಂ ವಿಚಿತ್ರಾಶ್ಚ ಹಿ'

ಎಂಬ ಬ್ರಹ್ಮಸೂತ್ರವೂ ಹಾಗೇ ಹೇಳುತ್ತಿವೆ ಬ್ರಹ್ಮಾದಿ ದೇವತೆಗಳಾರಿಗೂ ಇಲ್ಲದ ವಿಚಿತ್ರ ಶಕ್ತಿ ಇದು. ಹಾಗಾದರೆ ಸ್ತ್ರೀರೂಪ ತಾಳಿದನೆಂದರೂ ಸರಿಯಲ್ಲ, ಸ್ತ್ರೀವೇಷ ಧರಿಸಿದನೆಂದರೂ ಸರಿಯಲ್ಲ, ಇನ್ನೇನು ಮಾಡಬೇಕು ? ಪ್ರಾಯಶಃ, ಮುಂದೆ,

ಹೆಣ್ಣು ರೂಪವ ಕಂಡು ಕನ್ನೆ ಮಹಲಕ್ಷ್ಮಿ ಇವ-
ಗನ್ಯರು ಯಾಕೆಂದು ಬೆರಗಾದಳು ॥

ಎಂಬ ೯೯ನೇ ನುಡಿಯಲ್ಲಿ 'ಹೆಣ್ಣುರೂಪ' ಎಂದಿರುವುದರಿಂದ ಕೃತಕ ಸ್ತ್ರೀವೇಷವಲ್ಲ ಎನ್ನುವ ತಾತ್ಪರ್ಯ, ಇಲ್ಲಿ 'ಸ್ತ್ರೀವೇಷ' ಎಂದಿರುವುದರಿಂದ ಸ್ತ್ರೀರೂಪ ಎಲ್ಲರಂತಲ್ಲ ಎನ್ನುವ ತಾತ್ಪರ್ಯ ಇರಬಹುದು. ಆದರಿಂದ ಎರಡೂ ಬಗೆಯ ಪ್ರಯೋಗ ಮಾಡಿರಬಹುದು.

'ಹರಿ ಕೊಬ್ಬಿದ ಖಳರೋಡಿಸಿ ಅಮೃತಾನ್ನ ಉಣಿಸಲಿ' ಎಂದು ದೇವತೆಗಳೂ ಸಮುದ್ರರಾಜನೂ ಪ್ರಾರ್ಥಿಸಿದರೆಂದು ಹಿಂದಿನ ನುಡಿಯಲ್ಲಿ ಹೇಳಿದೆ. ಅದರಂತೆ ಹರಿ ಪುರುಷರೂಪದಿಂದಲೆ ಬಂದು ಶೌರ್ಯ ಪರಾಕ್ರಮ ತೋರಬಹುದಿತ್ತು. ಅಸುರರನ್ನೋಡಿಸಬಹುದಿತ್ತು. ಆದರೆ ಇಲ್ಲಿ ಹೇಳುವ ಅಮೃತಪಾನ ತತ್ವಜ್ಞಾನಾಮೃತಪಾನದ ಸಂಕೇತ. ಮೋಕ್ಷಾನಂದ ರಸಾಮೃತಪಾನ ದೇವತೆಗಳಿಗೇ ಹೊರತು ಅಸುರರಿಗಿಲ್ಲ ಎನ್ನುವುದಕ್ಕೆ ನಿದರ್ಶನ ಅದಕ್ಕೆಂದೇ ಧನ್ವಂತರಿ ಒಂದು ಕೈಯಲ್ಲಿ ಅಮೃತ ಕಲಶವನ್ನೂ ಇನ್ನೊಂದು ಕೈಯಲ್ಲಿ ಜ್ಞಾನಮುದ್ರೆಯನ್ನೂ ಹಿಡಿದಿದ್ದಾನೆ. ತಂತ್ರಸಾರದಲ್ಲಿ ಹೇಳಿದೆ-

ಜ್ಞಾನಂ ಸುಧಾಕಲಶಮೇವ ಚ ಸಂದಧಾನಂ ।

ಮಹಾಭಾರತ ತಾತ್ಪರ್ಯನಿರ್ಣಯದಲ್ಲಿ ಹೇಳಿದೆ-

ಸಾಧ್ವಮೃತಂ ಸುರೇಷು ದತ್ತಂ ಹಿ ಮೋಕ್ಷಸ್ಯ ನಿದರ್ಶನಾಯ ॥

ವಾದಿರಾಜರೂ ಒಂದು ಸುಳಾದಿಯಲ್ಲಿ ಹೇಳಿದ್ದಾರೆ-

ಒಂದೆ ಅಂಬುಧಿ ಒಂದೆ ಕಡಗೋಲು ನೇಣೊಂದೆ
ಒಂದೆ ಸಾಧನ ಸರ್ವಸಾಧನಂಗಳು ಸರಿ
ಮುಂದೆ ಪರಿವ ದೈತ್ಯರ ವೃಂದಕ್ಕೆ ಸುಧೆಯಿಲ್ಲ
ವೃಂದಾರಕರಿಗುಂಟು ಎಂದು ನಿರ್ಣೈಸಿತಾಗಿ
ಮುಂದಣ ಮುಕುತಿ ಯೋಗ್ಯರಿಗುಂಟು ಇತರರಿ-
ಗೆಂದೆಂದಿಗಾಗದಯ್ಯ... ॥

ಅಸುರರು ತಾಮಸ ಸ್ವಭಾವದವರು. ಅವರು ಈಗಾಗಲೆ ಸಮುದ್ರ ಮಥನದಿಂದುಸಿದ ಮಾದಕವಾದ ಮದ್ಯವನ್ನು ತಮ್ಮದಾಗಿಸಿಕೊಂಡಿದ್ದಾರೆ-

ಸುರಾ ದೇವೀ ತತೋ ಜಜ್ಞೇ ಸರ್ವ ಮಾದಕ ದೇವತಾ ।
ಅಶ್ವಃ ಶ್ವೇತೋಽಧಾವಿರಾಸೀತ್ ಹಯಾನಾಮಧಿದೇವತಾ ।
ವಾರುಣೀಮಶ್ವರಾಜಂ ಚ ದೈತ್ಯೇಶಾ ಜಗೃಹುರ್ದ್ರುತಂ ॥

ಮದ್ಯಪಾನದ ಮತ್ತೇರಿತೆಂದರೆ ಮುಂದೆ ಇದ್ದೇ ಇದೆ ಸ್ತ್ರೀಸಂಗದ ಅಭಿಲಾಷೆ. ಪಾನ ವ್ಯಭಿಚಾರ ನಿರತರು ಶೌಚಾಚಾರ ಬಿಡುವುದೂ, ಜ್ಞಾನಸಾಧನೆಯಲ್ಲಿ ಅಸಮರ್ಥರೆನಿಸುವುದೂ ಸ್ವಾಭಾವಿಕ ಆದ್ದರಿಂದ ಸಾಕ್ಷಾತ್ ಕಶ್ಯಪ ಮಹಾಮುನಿಯ ಮಕ್ಕಳಾಗಿದ್ದು ಬ್ರಹ್ಮದೇವರಲ್ಲಿಯೆ ವಿಧ್ಯುಕ್ತವಾಗಿ ವೇದಾಧ್ಯಯನ ಮಾಡಿದ್ದರೂ ದೈತ್ಯರು ಜ್ಞಾನದಿಂದ ವಂಚಿತರಾದರು ಇದಕ್ಕೆ ಉದಾಹರಣೆ– ಇಂದ್ರ ವಿರೋಚನರು ಬ್ರಹ್ಮದೇವರಲ್ಲಿ ಅಧ್ಯಯನ ಮಾಡಿದರು ಆದರೆ ವಿರೋಚನ ಅವರ ಉಪದೇಶವನ್ನು ತಪ್ಪಾಗಿ ತಿಳಿದು ಅಷ್ಟರಿಂದಲೇ ಬೇಗನೆ ತೃಪ್ತಿಹೊಂದಿ ಹೊರಟುಹೋದ ಇಂದ್ರನು ಮಾತ್ರ ತೃಪ್ತಿಹೊಂದದೆ ನಿಧಾನವಾಗಿ ಹೆಚ್ಚು ವಿಚಾರ ಮಾಡಿದ. ಬಹುಕಾಲ ಅಧ್ಯಯನ ಮಾಡಿ ಜ್ಞಾನ ಸಂಪಾದನೆ ಮಾಡಿದ ಎಂದು ಬೃಹದಾರಣ್ಯಕೋಪನಿಷತ್ತು ಹೇಳುತ್ತದೆ ಹೀಗೆ ಮದ್ಯಪಾಯಿಗಳಿಗೆ ಇಂದ್ರಿಯನಿಗ್ರಹವಿಲ್ಲ, ಜ್ಞಾನ ಸಾಧನೆ ಇಲ್ಲ. ಅಮೃತಪಾನ ಮಾಡುವವರಿಗೆ ಇಂದ್ರಿಯನಿಗ್ರಹ ಮತ್ತು ಶರೀರ ಮನೋದಾರ್ಢ್ಯ ಉಂಟಾಗುವುದರಿಂದ ಜ್ಞಾನಸಾಧನೆ ಸುಲಭ. ದೇವತೆಗಳು ಅಪ್ಸರೆಯರ ಒಡನಾಟವಿರುವವರು ಸ್ತ್ರೀಲೋಲುಪರು ಎಂದು ಪ್ರಸಿದ್ಧರಾದರೂ ವಸ್ತುತಃ ಅವರು ಹಾಗಲ್ಲ. ಬ್ರಹ್ಮಜ್ಞಾನಿಗಳಾದ್ದರಿಂದ ಇಂದ್ರಿಯನಿಗ್ರಹ ಉಳ್ಳವರು. ಕುಡಿತದ ವ್ಯಸನವಿಲ್ಲದವರು. ಪರಸ್ತ್ರೀಸ್ಪರ್ಶ ಮಾಡದವರು. ಆದ್ದರಿಂದ ಹರಿಯ ಸ್ತ್ರೀವೇಷ ಕಂಡು ಮೋಹಿತರಾಗದೆ ತಾಯಿಯ ಸೊಬಗನ್ನು ಮಕ್ಕಳು ಕಾಣುವಂತೆಯೇ ಕಂಡರು ಮುಂದೆ ಮೋಹಿನಿ ಅಸುರರಿಗೆ 'ನೀವು ಕಣ್ಣುಮುಚ್ಚಿರಿ, ಹೀಗೇ ಬಿಟ್ಟಕಣ್ಣುಗಳಿಂದ ನೋಡುತ್ತಿದ್ದರೆ ನನಗೆ ನಾಚಿಕೆಯಾಗುತ್ತದೆ' ಎನ್ನುತ್ತಾಳೆ. ದೇವತೆಗಳಿಗೆ ಹಾಗೆ ಹೇಳುವುದಿಲ್ಲ ಅವರು ನೋಡಿದರೆ ನಾಚಿಕೆಯಾಗುವುದಿಲ್ಲ ಅವರು ಮಕ್ಕಳು ಮಕ್ಕಳ ದೃಷ್ಟಿಯಿಂದಲೆ ನೋಡುತ್ತಾರೆ ಎಂದು.

ಕೊಬ್ಬಿದ ಅಸುರರು ಸ್ವತಃ ಅಮೃತಪಾನಕ್ಕೆ ಯೋಗ್ಯರಲ್ಲದಿದ್ದರೂ ಬಲಾತ್ಕಾರದಿಂದ ತಾವೆ ಕುಡಿಯುವೆವು, ದೇವತೆಗಳಿಗೆ ನೀಡಲಾರೆವೆಂದು ಆಗ್ರಹದಿಂದ ಅಮೃತವನ್ನು ಅಪಹರಿಸಿ ಅಪರಾಧಿಗಳೂ ಆದರು. ಹರಿ ಅವರನ್ನು ಯುದ್ಧದಲ್ಲಿ ಸೋಲಿಸಿಯೇ ಓಡಿಸಬಹುದಿತ್ತು, ಆದರೂ 'ಅಸುರರು ಬಲಿಷ್ಠರು, ಉನ್ನತವಾದ ಕಶ್ಯಪವಂಶಜರು, ವೇದಾಧ್ಯಯನ ಮಾಡಿದವರು. ಇಂಥವರೂ ಓರ್ವ ಅಬಲೆಯ ಕಡೆಗಣ್ಣಿನೋಟಕ್ಕೆ ಬಲಿಯಾಗಿ ಆಕೆ ತಾನು ಮೋಸಗಾರಳೆಂದು ಸಾರಿ ಹೇಳುತ್ತಿದ್ದರೂ ಸಮುದ್ರಮಥನದ ಮಹಾಕಾರ್ಯದ ಮುಖ್ಯ ಉದ್ದೇಶವೆ

ಆಗಿದ್ದು ತಮ್ಮ ಕೈಗೇ ಬಂದಿದ್ದ ಅಮೃತವನ್ನು ಅವಳ ಕೈಗಿತ್ತು ತಮ್ಮ ವೈರಿಗಳಾದ ದೇವತೆಗಳಿಗೆ ಸಿಗುವಂತೆ ಮಾಡಿ ಮುಂದೆ ಅದೇ ಅಮೃತದ ಪಾನದಿಂದ ಬಲಿಷ್ಠರಾದ ದೇವತೆಗಳ ಕೈಯಿಂದ ಹೊಡೆಸಿಕೊಂಡು ದಿಕ್ಕೆಟ್ಟು ಓಡುವಂತಹ, ಬಲು ಹೀನಾಯವಾದ ಸೋಲನ್ನು ಅನುಭವಿಸಬೇಕು. ಇತ್ತ ಅಮೃತದ ಸಿಹಿ ಊಟವೂ ಇಲ್ಲ ಅತ್ತ ಮೋಹಿನಿಯ ಒಡನಾಟವೂ ಇಲ್ಲ. ಇತೋ ಭ್ರಷ್ಟಃ ತತೋ ಭ್ರಷ್ಟಃ ಎನ್ನುವಂಥ ಅಪಮಾನಕರ ಸ್ಥಿತಿ ಒದಗಬೇಕೆಂದೇ, ಅವರ ಕೊಬ್ಬಿಗೆ ತಕ್ಕ ಶಾಸ್ತಿಯಾಗಬೇಕೆ'ಂದೇ ಹರಿ ಸ್ತ್ರೀವೇಷ ಧರಿಸಿದ.

ಇಲ್ಲಿ ಎರಡನೆ ಮತ್ತು ಮೂರನೆ ಸಾಲುಗಳು 'ನವರು' ಎಂದು ಪ್ರಾರಂಭವಾಗುತ್ತವೆ 'ದಾನವರು' ಎಂದಲ್ಲ. ಏಕೆಂದರೆ ಮೊದಲನೇ ಸಾಲಿನಲ್ಲಿ 'ಮಾವನ ಮನೆಯಲ್ಲಿ' ಎಂದೂ, ನಾಲ್ಕನೆ ಸಾಲಿನಲ್ಲಿ 'ದೇವಸ್ತ್ರೀವೇಷವ' ಎಂದೂ ಪ್ರಾರಂಭವಾಗುವುದರಿಂದ ವಕಾರ ದ್ವಿತೀಯಾಕ್ಷರ ಪ್ರಾಸವಿದೆ. 'ನವರು' ಎಂಬುದನ್ನು ಹಾಡಿನಲ್ಲಿ 'ನಾವರು' ಎಂದು ಎಳೆದು, ಧ್ಯಾತಮಾಡಿ ಹಾಡಿದಾಗ ನಾಲ್ಕೂ ಸಾಲುಗಳಲ್ಲಿ ಮಾವ–ನಾವ–ನಾವ–ದೇವ ಎಂದು ಹಿತಕರವಾದ ಪ್ರಾಸ ಸಿಗುತ್ತದೆ

'ದಾನವ' ಶಬ್ದವನ್ನು 'ದಾನಾವ' ಎಂದು ಎಳೆದು ಅದರ ಸಹಜ ಉಚ್ಚಾರಣೆಯನ್ನು ಕೆಡಿಸುವುದೂ ಇಲ್ಲಿ ಅರ್ಥಪೂರ್ಣವಾಗಿದೆ. ದಾನವರು ದೇವತೆಗಳ ಔತಣವನ್ನು ಕೆಡಿಸಲು ಯತ್ನಿಸಿ ತಾವೆ ಕೆಡುತ್ತಾರೆ ಎಂದು ಅದು ಸೂಚಿಸುತ್ತದೆ. ಒಂದು ಸಾಲಿನ ಕೊನೆಯಲ್ಲಿ 'ದಾ' ಎಂದೂ ಇನ್ನೊಂದು ಸಾಲಿನ ಆದಿಯಲ್ಲಿ 'ನವರು' ಎಂದೂ 'ದಾನವರು' ಎಂಬ ಶಬ್ದವನ್ನು ಛೇದಿಸಿರುವುದೂ ಅರ್ಥಪೂರ್ಣ ರಾಹುವಿನ ಶಿರಶ್ಛೇದವಾಯಿತು ಅವನ ರುಂಡ ಮುಂಡಗಳು ಬೇರೆಯಾದವು. ಉಳಿದ ಅಸುರರೂ ಅಮೃತಪಾನದಿಂದ ಬಲಿಷ್ಠರಾದ ದೇವತೆಗಳ ಕೈಯಲ್ಲಿ ತಮ್ಮ ಅಂಗಾಂಗ ಛೇದಭೇದಗಳಿಗೆ ಬಲಿಯಾದರು. ಅಳಿದುಳಿದ ಅಸುರರೂ ತಮ್ಮ ಕೀರ್ತಿಪ್ರತಿಷ್ಠೆ ಘನತೆಗಳನ್ನು ಹಾಳುಮಾಡಿಕೊಂಡರು ಎಂದು ಅದು ಸೂಚಿಸುತ್ತದೆ.

– ೯೯ –

**ತನ್ನ ಸೌಂದರ್ಯದಿಂದನ್ನಂತ ಮಡಿಯಾದ ಲಾ–**
**ವಣ್ಯದಿ ಮೆರೆವ ನಿಜ ಪತಿಯ ।**
**ಹೆಣ್ಣುರೂಪವ ಕಂಡು ಕನ್ನೆ ಮಹಲಕ್ಷುಮಿ ಇವ–**
**ಗನ್ಯರೇಕೆಂದು ಬೆರಗಾದಳು ॥**

ಕನ್ಯೆ ಮಹಾಲಕ್ಷ್ಮಿ ತನ್ನ ಸೌಂದರ್ಯಕ್ಕಿಂತಲೂ ಅನಂತಪಟ್ಟು ಅಧಿಕವಾದ ಲಾವಣ್ಯದಿಂದ ಮೆರೆಯುವ ತನ್ನ ಪತಿಯಾದ ಶ್ರೀಹರಿಯ ಸ್ತ್ರೀರೂಪವನ್ನು ಕಂಡು ಇವನಿಗೆ ಇನ್ನು ಬೇರೆ ಹೆಣ್ಣುಗಳೇಕೆ ಎಂದು ಬೆರಗಾದಳು.

ರಂಭೆ ಊರ್ವಶಿಯರಂಥ ಅಪ್ಸರೆಯರ ಮತ್ತು ರತಿ ಪಾರ್ವತಿ ಸರಸ್ವತಿಯರಂಥ ದೇವತಾ ಸ್ತ್ರೀಯರ ಎಲ್ಲ ಸೌಂದರ್ಯಕ್ಕಿಂತಲೂ ಕೋಟಿಪಟ್ಟು ಅಧಿಕ ಮಹಾಲಕ್ಷ್ಮಿಯ ಸೌಂದರ್ಯ. ಅಂಥ ಮಹಾಲಕ್ಷ್ಮಿಯೂ ಹರಿಯ ಸ್ತ್ರೀರೂಪದ ಸೌಂದರ್ಯವನ್ನು ಕಂಡು ಬೆರಗಾದಳು!

ಹರಿಯ ಅನಂತ ಸೌಂದರ್ಯವನ್ನು ಮಹಾಲಕ್ಷ್ಮಿ ಅನಾದಿಕಾಲದಿಂದ ಸತತವಾಗಿ ಕಂಡು ಸವಿಯುತ್ತಿದ್ದಾಳೆ. ಆದರೂ ಕ್ಷಣಕ್ಷಣಕ್ಕೆ ಇನ್ನೂ ಹೊಸಹೊಸ ಸೌಂದರ್ಯವೇ ಮಿಂಚುತ್ತಿರುವುದನ್ನು ಕಂಡು ಬೆರಗಾಗುತ್ತಾಳೆ, ಬೆರಗಿನ ಕಡಲಲ್ಲಿ ಮುಳುಗುತ್ತಾಳೆ ಎಂದು ತ್ರಿವಿಕ್ರಮ ಪಂಡಿತರು ವಿಷ್ಣುಸ್ತುತಿಯಲ್ಲಿ ಹೇಳುತ್ತಾರೆ–

ಪಶ್ಯಂತೀ ಸಂತತಂ ಸಾ ನವನವ ಸುವಿಶೇಷೋಪಲಂಭೇನ ತತ್ತ–
ತ್ಕಾಲೇ ಕೌತೂಹಲಾಬ್ಧೌ ಸುಮಹತಿ ಗಹನೇ ಗಾಹಮಾನಾವತಾನ್ನಃ ॥

ಮಹಾಲಕ್ಷ್ಮಿಗೇ ಹೀಗೆ ಬೆರಗುಂಟು ಮಾಡುವಂಥ ಹರಿಯ ಸ್ತ್ರೀಸೌಂದರ್ಯ ಲೋಕದ ಅದ್ಭುತಗಳನ್ನೆಲ್ಲ ಮೀರಿಸಿದ ಅದ್ಭುತ, ಅದ್ಭುತಕ್ಕೇ ಅದ್ಭುತವೆನ್ನಬೇಕು ನಾರಾಯಣ ಪಂಡಿತರೂ ಸುಮಧ್ವವಿಜಯದಲ್ಲಿ ಹಾಗೇ ಹೇಳುತ್ತಾರೆ–

ಆಶ್ಚರ್ಯರತ್ನೇಷ್ವಧಿಕಂ ಜಗತ್ತ್ರಯೇ–
ಪ್ಯಾಶ್ಚರ್ಯಮಾಶ್ಚರ್ಯಮಹೋ ಮುಹುರ್ಮುಹುಃ ।
ಸೌಂದರ್ಯ ಸಾರೈಕರಸಂ ರಮಾಪತೇ ರೂಪಂ... ॥

ಲಕ್ಷ್ಮಿಯ ಬೆರಗು ಅವಳ ಈ ಉದ್ಗಾರದಲ್ಲಿ ಸಾಕಾರತೆ ಪಡೆದಿದೆ– 'ಇವಗನ್ಯರು ಏಕೆ'? ಇವನನ್ನಾಕರ್ಷಿಸಬಲ್ಲ ಸೌಂದರ್ಯ ಇನ್ನಾರಿಗಿದೆ? ಯಾವ ಸ್ತ್ರೀಗೂ ಇಲ್ಲ. ತನ್ನಲ್ಲೆ ಎಲ್ಲ ಸೌಂದರ್ಯವಿರುವಾಗ ಅನ್ಯರಲ್ಲಿ ಅದನ್ನು ಅರಸಬೇಕಾಗಿಯೂ ಇಲ್ಲ. ಓ! ಇದೆಂಥ ಅದ್ಭುತ ಸೌಂದರ್ಯ!

ಇಲ್ಲಿ 'ಹೆಣ್ಣುರೂಪವ ಕಂಡು ಬೆರಗಾದಳು' ಎಂಬ ಶಬ್ದಪ್ರಯೋಗ ಹೃದಯಂಗಮವಾಗಿದೆ. ಹಿಂದಿನ ನುಡಿಯಲ್ಲಿ ಹೇಳಿದಂತೆ 'ಹೆಣ್ಣು ವೇಷ'ವ ಕಂಡು ಎಂದು ಇಲ್ಲಿಯೂ ಹೇಳಿದ್ದರೆ ಹೆಣ್ಣು ವೇಷ ತೊಟ್ಟ ಮಾತ್ರಕ್ಕೆ ಗಂಡಿಗೆ ಹೆಣ್ಣು ಬೇಡವೆಂದಾಗುವುದು ಅಸಂಭವವಾಗುವುದರಿಂದ 'ಇವಗನ್ಯರು ಏಕೆ'? ಎನ್ನುವುದು ಅಸಂಗತವಾಗುತ್ತಿತ್ತು. 'ನಿಜ ಪತಿಯು ಹೆಣ್ಣಾದುದ ಕಂಡು' ಎಂದು

ಹೇಳಿದ್ದರೂ 'ಹೆಣ್ಣಿಗೆ ಬೇರೆ ಹೆಣ್ಣೇಕೆ? ಆದ್ದರಿಂದ ತನ್ನಿಂದ ಇವನಿಗೇನೂ ಪ್ರಯೋಜನವಿರಲಾರದು' ಎಂದು ಲಕ್ಷ್ಮಿ ಗಾಬರಿಯಾಗಬೇಕಾಗುತ್ತಿತ್ತು, ಬೆರಗಾಗುವ ಸಂದರ್ಭವಿರಲಿಲ್ಲ. ಆದ್ದರಿಂದ 'ಹೆಣ್ಣುರೂಪವೂ ಹರಿಗೆ ಇದೆ ಎಂಬುದನ್ನು ಕಂಡು ಬೆರಗಾದಳು' ಎಂದುದು ಅತ್ಯಂತ ಉಚಿತವಾಗಿದೆ.

ಆದರೂ 'ಬೆರಗಾದಳು' ಎಂದು ಅದ್ಭುತರಸವನ್ನು ಸ್ಪಷ್ಟಶಬ್ದದಿಂದ ಹೇಳುವುದು ಆಲಂಕಾರಿಕರಿಗೆ ಒಪ್ಪಿಗೆಯಾಗದು. ಮಮ್ಮಟನು,

'ವ್ಯಭಿಚಾರಿ ರಸ ಸ್ಥಾಯಿಭಾವಾನಾಂ ಸ್ವಶಬ್ದ ವಾಚ್ಯತಾ'

ಎಂದು ಹೇಳುತ್ತಾನೆ. 'ಆಲಂಬನ ಉದ್ದೀಪನ ವಿಭಾವಗಳನ್ನೂ ಅನುಭಾವಗಳನ್ನೂ ಸ್ಪಷ್ಟಶಬ್ದದಿಂದ ಹೇಳಿ ರಸ ಸ್ಥಾಯಿ ಸಂಚಾರಿಗಳನ್ನು ಮಾತ್ರ ಹಾಗೆ ಹೇಳದೆ ಸಹೃದಯನ ಊಹೆಗೆ ಬಿಟ್ಟು ಬಿಡಬೇಕು. ಇಲ್ಲದಿದ್ದರೆ ರಸ ಕೆಡುತ್ತದೆ. ಕಾವ್ಯದೋಷ ಉಂಟಾಗುತ್ತದೆ'. ಅಸ್ಪಷ್ಟತೆಯ ಭೀತಿ ಇದ್ದಾಗ ಸ್ಪಷ್ಟತೆಗಾಗಿ ಹಾಗೆ ಹೇಳಬಹುದಾದರೂ ಪ್ರಕೃತದಲ್ಲಿ 'ಇವಗನ್ಯರೇಕೆಂದು ನುಡಿದಳು' ಎಂದಿದ್ದರೂ ಅಸ್ಪಷ್ಟತೆಗೆ ಅವಕಾಶವಿರುತ್ತಿರಲಿಲ್ಲ. ಕವಿಕುಲತಿಲಕರೆನಿಸಿದ ವಾದಿರಾಜರು ಇಂಥ ಒಂದು ಒಳ್ಳೆಯ ರಸಪ್ರಸಂಗವನ್ನು ವಿರಸಗೊಳಿಸಿದರೆ? ಇದಕ್ಕೆ ಹೀಗೆ ಸಮಾಧಾನ ಹೇಳಬೇಕು–

'ಬೆರಗಾದಳು' ಎಂದು ಬೆರಗನ್ನೇ ಹೇಳುವ ವಿವಕ್ಷೆಯಲ್ಲ, ಬೆರಗುಂಟಾದಾಗ ಶರೀರದಲ್ಲಿ ಕಂಡು ಬರಬಹುದಾದ ನಡುಕ ರೋಮಾಂಚ ಮ..ತಾಪ ಅಸಂಖ್ಯ ಪರಿಣಾಮಗಳನ್ನು ಹೇಳುವ ಅಭಿಪ್ರಾಯವಿದೆ. ಏಕೆಂದರೆ ಬೇರೆ ಯಾವ ಶಬ್ದವೂ ಅಷ್ಟು ವಿಶಾಲವಾದ ಅನುಭವ ಪ್ರಪಂಚವನ್ನು ತೆರೆದು ತೋರಿಸಲಾರದು, ಮಹಾಕವಿ ಪ್ರಯೋಗವೆ ಈ ತೆರನಾದುದು.

ಅಥವಾ 'ಬೆರಗು' ಎಂದರೆ ದಿಗ್ಭ್ರಮೆ ಆತಂಕವೆಂದೂ ಅರ್ಥವಿದೆ. ಪ್ರಕೃತ ಮಹಾಲಕ್ಷ್ಮಿ ಹರಿಯ ಹೆಣ್ಣುರೂಪ ಕಂಡು ವಿಸ್ಮಯಪಟ್ಟಳು, ನಿಜ. ಆದರೆ ಯಶೋದೆ ಕೃಷ್ಣನ ಬಾಯಲ್ಲಿ ವಿಶ್ವರೂಪ ಕಂಡಾಗ ಬೆರಗಾಗಿ ಮರವಟ್ಟು ನಿಂತಂತೆ ಮಹಾಲಕ್ಷ್ಮಿ ವಿಸ್ಮಯದಿಂದ ಸುಮ್ಮನೆ ನಿಲ್ಲಲಿಲ್ಲ. ತನ್ನಲ್ಲಿ ಸ್ತ್ರೀಸೌಂದರ್ಯದ ಸರ್ವಸ್ವವನ್ನೇ ತುಂಬಿಕೊಂಡಿರುವ ಹರಿಗೆ ಅನ್ಯ ಸ್ತ್ರೀಯರೇಕೆ? ನಾನು ಅವನನ್ನು ನಿಜವಾಗಿ ಆಕರ್ಷಿಸಬಲ್ಲೆನೆ? ಎಂದು ಬೆರಗಾದಳು, ಅಂದರೆ, ಆತಂಕಗೊಂಡಳು. ಇದು ಶೃಂಗಾರರಸಕ್ಕೆ ಪೋಷಕವಾದ ಶಂಕಾ ಎಂಬ ಸಂಚಾರಿಭಾವ. ಆದರಿಂದ ಗಾಢ ಅನುರಾಗ ವ್ಯಕ್ತವಾಗುತ್ತದೆ.

ಸಂಚಾರಿಯನ್ನೂ ಸ್ಪಷ್ಟಶಬ್ದದಿಂದ ಹೇಳಕೂಡದೆಂದು ನಿಯಮವಿದೆ ಆದರೂ ಅಸ್ಪಷ್ಟತೆಯ ಪರಿಹಾರಕ್ಕಾಗಿ ಹಾಗೆ ಹೇಳಬಹುದು. 'ಇವಗನ್ಯರೇಕೆಂದು ನುಡಿದಳು' ಎಂದೇ ಹೇಳಿದ್ದರೆ 'ಅನ್ಯರು ಏಕೆ ? ಆದ್ದರಿಂದ ಹರಿ ನನ್ನನ್ನು ಉಪೇಕ್ಷಿಸುವ ಸಂಭವವೆ ಹೆಚ್ಚು. ನಾನೇಕೆ ಈತನನ್ನು ವರಿಸಿದೆನೊ ?' ಎಂದು ದುಃಖದಿಂದ ಲಕ್ಷ್ಮಿ ನುಡಿದಂತೆ ತಪ್ಪಾಗಿ ತಿಳಿಯುವ ಸಂಭವವಿದೆ. ಗಾಢವಾದ ಅನುರಾಗ ವ್ಯಕ್ತವಾಗುವ ಬದಲಿಗೆ ವೈರಾಗ್ಯವೇ ಕಂಡುಬರಬಹುದು. ಶೃಂಗಾರ ರಸಕ್ಕೆ ಭಂಗ ಉಂಟಾಗಬಹುದು. 'ಇವಗನ್ಯರೇಕೆಂದು ಬೆರಗಾದಳು' ಎಂದು ಹೇಳಿದಾಗ 'ಇವನಿಗೆ ಅನ್ಯರ ಅಪೇಕ್ಷೆಯಿಲ್ಲ. ನಾನು ಈತನನ್ನು ಮೆಚ್ಚಿಸಲು ಶಕ್ತಳಾಗಲಾರೆ. ಆಗ ನನಗೆ ಇವನ ಒಡನಾಟ ಸದಾ ದೊರಕದೆ ಹೋದರೆ ನನ್ನ ಗತಿಯೇನು ? ನಾನೀತನನ್ನು ಬಿಟ್ಟು ಅರೆಕ್ಷಣವೂ ಇರಲಾರೆ', ಎನ್ನುವ ಆತಂಕ ಕಂಡು ಬರುತ್ತದೆ ಆದರಿಂದ ಗಾಢ ಅನುರಾಗ ವ್ಯಕ್ತವಾಗುತ್ತದೆ.

ಲಕ್ಷ್ಮಿಯು ಆತಂಕಕ್ಕೆ ಇನ್ನೂ ಬೇರೆ ಬಲವಾದ ಕಾರಣಗಳಿವೆ. ಹರಿಗೆ ಹೆಣ್ಣಿನ ಸೌಂದರ್ಯವನ್ನು ಅನುಭವಿಸಬೇಕೆಂದರೆ ಲಕ್ಷ್ಮಿಗಿಂತಲೂ ಎಷ್ಟೋ ಅಧಿಕಪಟ್ಟು ಅದು ತನ್ನಲ್ಲೆ ಇದೆ, ಬೇರೆ ಹೆಣ್ಣು ಬೇಡ. ಹಾಗೆಯೆ, ಚಂದನ ಶ್ರೀಗಂಧದ ತಂಪು, ಹೂವಿನ ಕಂಪು, ಕೋಗಿಲೆಯ ದನಿಯ ಇಂಪು ಎಲ್ಲವೂ ತನ್ನಲ್ಲೆ ಇದೆ. ಬೇರೆ ಶ್ರೀಗಂಧ ಬೇಡ, ಬೇರೆ ಹೂಮಾಲೆ ಬೇಡ, ಬೇರೆ ಸಂಗೀತ ಬೇಡ, ಸಕಲ ಭೋಗಭಾಗ್ಯಗಳೂ ಹರಿಗೆ ತನ್ನ ಸ್ವರೂಪದಲ್ಲಿಯೇ ಪೂರ್ಣವಾಗಿ ಇದೆ. ತಾನೇ ಅವಳಿಗೆ ಕೊಡುತ್ತಾನೆ. ತನ್ನ ನರುಗಂಪಿನ ಮೈಯುಪ್ಪುಗೆಯಿಂದ ದೇವಿಯ ಮೈಗೇ ಹೆಚ್ಚಿನ ಕಂಪು ನೀಡುತ್ತ 'ಶ್ರೀನಿವಾಸ'ನೆನಿಸುತ್ತಾನೆ. ವಾದಿರಾಜರು ಲಕ್ಷಾಲಂಕಾರದಲ್ಲಿ ಸಹಸ್ರನಾಮದೊಳಗಿನ ಶ್ರೀನಿವಾಸನಾಮಕ್ಕೆ ,

'ಶ್ರಿಯಂ ಸ್ವಗಾತ್ರಪರಿಮಲೇನ ನಿತರಾಂ ವಾಸಯತಿ ಇತಿ ಶ್ರೀನಿವಾಸಃ'

ಎಂದು ಭಾಷ್ಯ ಬರೆದಿದ್ದಾರೆ. ಹೀಗೆ ಆಲಿಂಗನ ಸುಖಾನುಭವವೆಲ್ಲ ಲಕ್ಷ್ಮಿಗೇ ಹರಿಯಿಂದ ಹೊರತು ಹರಿಗೆ ಲಕ್ಷ್ಮಿಯಿಂದಲ್ಲ. ಆತ ಸ್ವರಮಣ. ಇದನ್ನು ಕಂಡೇ ಲಕ್ಷ್ಮಿ ಬಹಳ ಆತಂಕಗೊಳ್ಳುತ್ತಾಳೆ ಎಂದು ಗ್ರಹಿಸಬೇಕು.

ವಸ್ತುತಃ ಲಕ್ಷ್ಮೀನಾರಾಯಣರು ಮದುವೆಯ ನಾಟಕವಾಡುತ್ತಿರುವುದರಿಂದ ಆತಂಕವೂ ನಟನೆಯೇ. ಹರಿ ದೇವಿಯನ್ನು ಎಷ್ಟು ಪ್ರೀತಿಸುತ್ತಿದ್ದಾನೆ ಎಂದರೆ, ವಾದಿರಾಜರು ಕೀರ್ತನೆಯೊಂದರಲ್ಲಿ ಹೇಳುವಂತೆ, ಲಕ್ಷ್ಮಿಯ ಮೈಯೊಳಗಿನ ತಾರುಣ್ಯ ಲಾವಣ್ಯ ಹಾಳಾಗದಿರಲೆಂದು ತನ್ನ ಮೈಯಿಂದಲೆ ಮಕ್ಕಳನ್ನು ಹುಟ್ಟಿಸುತ್ತಾನೆ–

'ಮುಖಾದಿಂದ್ರಶ್ಚಾಗ್ನಿಶ್ಚ ಪ್ರಾಣಾದ್ ವಾಯುರಜಾಯತ'

ಲಕ್ಷ್ಮಿಯು ಮೈಯಪ್ಪಲು ಅನಂತ ಬಾಹುಗಳನ್ನೂ, ಮುಖವನ್ನು ಚುಂಬಿಸಲು ಅನಂತ ಮುಖಗಳನ್ನೂ, ಕಣ್ಣಲ್ಲಿ ಕಣ್ಣಿಟ್ಟು ನೋಡಲು ಅನಂತ ಕಣ್ಣುಗಳನ್ನೂ ಧರಿಸುತ್ತಾನೆ–

'ನಮೋಽಸ್ತ್ವನಂತಾಯ ಸಹಸ್ರ ಮೂರ್ತಯೇ
ಸಹಸ್ರ ಪಾದಾಕ್ಷಿ ಶಿರೋರುಬಾಹವೇ'

ಇಷ್ಟೂ ಸಾಲದೆಂಬಂತೆ ತಾನು ಅರೆಕ್ಷಣವೂ ದೇವಿಯನ್ನಗಲಿರಬಾರದೆಂದು ತನ್ನ ಅನಂತ ರೂಪಗಳಲ್ಲಿಯೂ ಎದೆಯಲ್ಲಿ ದೇವಿಯನ್ನಿರಿಸಿಕೊಂಡಿದ್ದಾನೆ. ವಾದಿರಾಜರು ಹೇಳುತ್ತಾರೆ–

ಸ್ವರಮಣನೆನಿಪ ರಮಣನುರದೊಳು ನೀನು
ಅರಮನೆಯ ಮಾಡಿ ಭಾಪುರೆ ಮೆರೆವೆ ಮುದದಿ ॥

ಹರಿಗೆ ದೇವಿಯಲ್ಲಿರುವ ಪ್ರೀತಿ ಲೋಕವಿಲಕ್ಷಣ ಲೋಕದಲ್ಲಿ ಪ್ರಣಯಿಗಳಿಗೆ ಪರಸ್ಪರವಾಗಿ ಪ್ರಣಯಸುಖದಾಸೆ ಇದ್ದೇ ಇರುತ್ತದೆ. ಹರಿಗೆ ಹಾಗಿಲ್ಲ ಆದರೂ ನಿಃಸ್ವಾರ್ಥಪ್ರೀತಿ. ಇದನ್ನು ಕಂಡು ಲಕ್ಷ್ಮಿ ಬೆರಗಾಗುತ್ತಾಳೆ. ತಾನು ಬಯಸಿದುದಕ್ಕಿಂತ ಹೆಚ್ಚಿನ ಉನ್ನತಮಟ್ಟದ ನಿಃಸ್ವಾರ್ಥ ಪ್ರಣಯ ತನಗೆ ಲಭಿಸಿದೆ ಎಂದು ದೇವಿ ರೋಮಾಂಚನಗೊಳ್ಳುತ್ತಾಳೆ, ಆದ್ದರಿಂದ ಇದು ಆಲಂಕಾರಿಕರ ಪ್ರಕಾರ ಪ್ರಹರ್ಷಣಾಲಂಕಾರ 'ಬೆರಗು' ಇಲ್ಲಿ ಅದ್ಭುತರಸವಲ್ಲ. ಆಶ್ಚರ್ಯ ಹರ್ಷ ಅನುರಾಗ ಮುಂತಾದ ಭಾವಗಳಿಂದ ವ್ಯಕ್ತವಾಗುವ ಶೃಂಗಾರರಸ.

ಹೀಗೆ ಬೆರಗಾದಳೆಂಬ ಒಂದು ಮಾತಿನಲ್ಲಿ ಅದ್ಭುತ ಶೃಂಗಾರ ರಸ ಪ್ರಪಂಚವನ್ನೇ ಅಡಗಿಸಿಟ್ಟಿರುವ ವಾದಿರಾಜರ ರಾಜಪ್ರತಿಭೆಗೆ ಸಹೃದಯನಾರೂ ನಮೋ ಎನ್ನದಿರಲಾರ.

ಮುದ್ರಿತ ಪ್ರತಿಗಳಲ್ಲೆಲ್ಲ 'ತನ್ನ ಸೌಂದರ್ಯದಿಂದುನ್ನಂತಮಯವಾದ' ಎಂದೇ ಪಾಠವಿದೆ. ಆದರೆ ಈ ಪಾಠದಲ್ಲಿ ಅರ್ಥ ಅಸ್ಪಷ್ಟವಾಗಿದೆ. ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯ ಪ್ರಕಾಶನದಲ್ಲಿ ಮಾತ್ರ 'ಅನಂದಮಯವಾದ' 'ಅನಂತ ಮಡಿಯಾದ' ಎಂದು ಎರಡು ಅಪೂರ್ವ ಪಾಠಗಳನ್ನು ಅಡಿಟಿಪ್ಪಣಿಯಲ್ಲಿ ತೋರಿಸಲಾಗಿದೆ. 'ಅನಂದಮಯ'ವೆಂದರೆ 'ಆನಂದಮಯ' ಎಂದಿಟ್ಟುಕೊಂಡರೆ, 'ಹರಿಯ ಹೆಣ್ಣುರೂಪವು ತನ್ನ ಸೌಂದರ್ಯದಿಂದ ತಾನೆ ಉಬ್ಬಿ ಆನಂದಮಯವಾಗಿದೆ, ಲಾವಣ್ಯದಿಂದ ಮೆರೆದಿದೆ. ಅಂಥ ಹೆಣ್ಣುರೂಪವನ್ನು ಕಂಡು ಲಕ್ಷ್ಮಿ ಬೆರಗಾದಳು' ಎಂದು ವಿವರಣೆ ನೀಡಬಹುದು. 'ಅನಂತ ಮಡಿಯಾದ' ಎಂಬ ಪಾಠದಲ್ಲಿ ಯಾವ ತೊಡಕೂ ಇಲ್ಲ.

**ಲಾವಣ್ಯಮಯವಾದ ಹರಿಯ ಸ್ತ್ರೀವೇಷಕ್ಕೆ**
**ಭಾವುಕೆಯರೆಲ್ಲ ಮರುಳಾಗೆ ।**
**ಮಾವರ ಸುಧೆಯ ಕ್ರಮದಿಂದ ಬಡಿಸಿ ತನ್ನ**
**ಸೇವಕ ಸುರರಿಗುಣಿಸಿದ ॥**

ಲಾವಣ್ಯದಿಂದ ತುಂಬಿದ ಹರಿಯು ಸ್ತ್ರೀವೇಷವನ್ನು ಕಂಡು ಸುರಸುಂದರಿಯರು ಮರುಳಾದರು. ಅಂಥ ಸ್ತ್ರೀವೇಷದಲ್ಲಿ ರಮಾರಮಣನು ಅಮೃತವನ್ನು ಕ್ರಮದಿಂದ ಬಡಿಸಿ ತನ್ನ ಸೇವಕರಾದ ಸುರರಿಗೆ ಉಣಿಸಿದ.

ಮಹಾಲಕ್ಷ್ಮಿ ಬೆರಗಾದಳೆಂದು ಹಿಂದೆ ಹೇಳಿದೆ. ಈಗ ಚೆಲುವೆಯರು ಮರುಳಾದರೆಂದಿದೆ. ಇದೇಕೆ ? ಎಲ್ಲರೂ ಬೆರಗಾದರೆಂದೋ ಎಲ್ಲರೂ ಮರುಳಾದರೆಂದೋ ಹೇಳಬಹುದಿತ್ತು. ಆದರೆ ಮಹಾಲಕ್ಷ್ಮಿಯನ್ನು ಮರುಳುಗೊಳಿಸುವ ಉದ್ದೇಶವಿಲ್ಲ. ಅವಳೀಗ ನವವಧು. ಅವಳನ್ನು ಬೆರಗಾಗಿಸಬೇಕಾಗಿದೆ ಬೇರೆ ಸ್ತ್ರೀಯರನ್ನೇ ಮರುಳುಗೊಳಿಸಿದ್ದಾನೆ ಹರಿ.

ಸ್ತ್ರೀಯರನ್ನು ಮರುಳುಗೊಳಿಸಿ ಏನು ಮಾಡಬೇಕಾಗಿದೆ ? ದೈತ್ಯರನ್ನು ಮರುಳುಗೊಳಿಸಬೇಕು. ಅಮೃತವನ್ನು ಅಪಹರಿಸಿದವರು ಅವರು ತಾನೆ ? ಹೌದು. ಅವರನ್ನೇ ಮರುಳುಗೊಳಿಸುವುದು ಉದ್ದೇಶ. ಸ್ತ್ರೀಯರು ಮರುಳಾದರೆಂದರೆ ಪುರುಷರ ಪಾಡೇನು ? ಅದರಲ್ಲಿಯೂ ಸ್ತ್ರೀಲೋಲುಪರಾದ ದೈತ್ಯರ ಪಾಡೇನು ? ಅವರು ಪರವಶರಾಗಿ ಹೋದರೆಂದು ಪರ್ಯಾಯವಾಗಿ ಹೇಳಿದಂತಾಯಿತು. ಇದು ಪರ್ಯಾಯೋಕ್ತ್ಯಲಂಕಾರ

ಸ್ತ್ರೀಯರು ಮರುಳಾಗುವುದೆಂದರೆ ಭ್ರಾಂತಿಗೊಳ್ಳುವುದು. ಮೋಹಿನಿಯನ್ನು ನಿಜವಾಗಿ ಓರ್ವ ಸ್ತ್ರೀ ಎಂದೇ ಭ್ರಮಿಸಿದರು ಎಂದರ್ಥ. ಅಥವಾ ಮೋಹಗೊಂಡರು. ಪುರುಷರಂತೆ ಸ್ತ್ರೀಯರೂ ಸ್ತ್ರೀಯರಿಗೆ ಮೋಹಿಸುವುದುಂಟೆ ? ಎಂದರೆ ಭಾವುಕೆಯರು, ರಸಾನುಭವ ನಿಪುಣೆಯರು. ಹರಿ ಸ್ತ್ರೀವೇಷ ತೊಟ್ಟಿದ್ದಾನೆ. ನಾವೀಗ ಪುರುಷ ಪಾತ್ರ ವಹಿಸಬೇಕು. ಆಗ ರಸಾನುಭವ ಸಾಧ್ಯ ಎಂದುಕೊಂಡು ತಮ್ಮನ್ನು ತಾವೆ ಪುರುಷರೆಂದು ಭಾವಿಸಿಕೊಂಡರು. ನಾಟಕದಲ್ಲಿ ಪಾತ್ರಧಾರಿಗಳನ್ನು ಕಂಡಾಗ ಪ್ರೇಕ್ಷಕರಿಗೆ ರಸಾನುಭವವಾಗುವಂತೆ ಪಾತ್ರಧಾರಿಗಳಾದ ನಟರಿಗೂ ಅವರು ಆ ಪಾತ್ರಗಳಲ್ಲಿ ತನ್ಮಯರಾಗಿರುವಾಗ ರಸಾನುಭವ ಸಹಜ.

ಅಥವಾ ಇದು ಔಪನಾಯಿಕ ರಸವಲ್ಲ. ಮಾನೋರಥಿಕ ರಸ. ಅಂದರೆ, ಭಾವುಕೆಯರಿಗೆ ತಾವು ಪುರುಷರಾದರೆ ಹರಿಯ ಈ ಸ್ತ್ರೀರೂಪ ಲಾವಣ್ಯ ದರ್ಶನದ

ಸುಖವನ್ನು ಇನ್ನೂ ಗಾಢವಾಗಿ ಅನುಭವಿಸಬಹುದು ಎನ್ನುವುದು ಮನೋರಥ. ಅದರಿಂದ ರಸಾನುಭವ ಇದೂ ಅಲೌಕಿಕವಾದ್ದರಿಂದ ನಿಷಿದ್ಧವಲ್ಲ. ಮಹಾಭಾರತದಲ್ಲಿ ದ್ರೌಪದೀದೇವಿಯ ಶರೀರಲಾವಣ್ಯ ಕಂಡು ಅದನ್ನು ಸವಿಯಲು ದಾಸಿಯರು ತಮ್ಮನ್ನು ಗಂಡಸರೆಂದು ಭಾವಿಸಿಕೊಂಡರಂತೆ ಅಥವಾ ತಾವು ಗಂಡಸರಾಗಲು ಬಯಸಿದರಂತೆ–

ಯಾಃ ಸ್ತ್ರಿಯೋ ದೃಷ್ಟವತ್ಯಸ್ತಾಃ ಪುಂಭಾವಂ ಮನಸಾ ಯಯುಃ ।

ರಾಮಾಯಣದಲ್ಲಿಯೂ ಶ್ರೀರಾಮನ ದೇಹಸೌಂದರ್ಯಕ್ಕೆ ಪುರುಷರು ಮಾರು ಹೋದರಂತೆ–

ಪುಂಸಾಂ ದೃಷ್ಟಿಚಿತ್ತಾಪಹಾರಿಣಂ ।

ಇಲ್ಲಿ ಪುರುಷರು ತಮ್ಮನ್ನು ಸ್ತ್ರೀಯರಾಗಿ ಭಾವಿಸಿಕೊಂಡರೆಂದೋ ಸ್ತ್ರೀಯರಾಗಲು ಬಯಸಿದರೆಂದೋ ಇಟ್ಟುಕೊಳ್ಳಬಹುದು. ಇಂಥ ಮನೋರಥ ಅಪರೂಪವೇನಲ್ಲ. ಹದಿನಾರು ಸಾವಿರ ಮಂದಿ ಅಗ್ನಿಪುತ್ರರು ಸ್ತ್ರೀತ್ವ ಬಯಸಿ ತಪಸ್ಸುಮಾಡಿ ವರ ಪಡೆದು ಕೃಷ್ಣನ ಮಹಿಷಿಯರಾದರು.

ಹೀಗೆ ಭಾವುಕೆಯರು ಮನೋರಥದಿಂದ ಸವಿದ ಶೃಂಗಾರರಸ ಅಲೌಕಿಕ, ಅನಿಷಿದ್ಧ. ದಾನವರದು ಹಾಗಲ್ಲ. ಅವರದು ಶೃಂಗಾರಾಭಾಸ, ನಿಷಿದ್ಧ. ಶೃಂಗಾರಾಭಾಸವೆಂದ ಮಾತ್ರಕ್ಕೆ ಅದು ನಿಷಿದ್ಧವೆಂದಲ್ಲ. ಅಲೌಕಿಕವಾಗಿದ್ದರೆ ರಸಾಭಾಸವೂ ರಸದಂತೆಯೇ ಆಸ್ವಾದ್ಯವಾಗಿದ್ದು ಕಾವ್ಯಕ್ಕೆ ಚೈತನ್ಯದಾಯಕ ಪ್ರಾಣರೂಪವೇ ಆಗಿರುತ್ತದೆ. ಪ್ರಕೃತ ದಾನವರು ಹರಿಯ ಸ್ತ್ರೀರೂಪಕ್ಕೆ ಮನಸೋತು ಅನುಭವಿಸಿದ ಶೃಂಗಾರ ಅನುಚಿತವಾದ್ದರಿಂದ ಶೃಂಗಾರಾಭಾಸವಾಗಿದ್ದು ಕೇವಲ ಲೌಕಿಕವಾದ್ದರಿಂದ ನಿಷಿದ್ಧವಾಗಿದೆ. ಭಾವುಕೆಯರ ಅಲೌಕಿಕ ಶೃಂಗಾರದ ವರ್ಣನೆಯ ಮೂಲಕ ಈ ಲೌಕಿಕ ಶೃಂಗಾರಾಭಾಸವನ್ನು ಸಹೃದಯರ ಊಹೆಗೇ ಬಿಟ್ಟಿದ್ದಾರೆ ವಾದಿರಾಜರು ಸ್ತ್ರೀಯರೆ ಹೀಗೆ ಮೋಹಿತರಾದರೆಂದರೆ ಇನ್ನು ದಾನವರ ಪಾಡೇನು ಎಂದು. ಹೀಗೆ ದಾನವರನ್ನು ಮರುಳುಗೊಳಿಸಿ ಅಮೃತವನ್ನು ಅಪಹರಿಸಿ ದೇವತೆಗಳಿಗೆ ಉಣಿಸಿದ ಶ್ರೀಹರಿ. ಇದನ್ನು ದಶಾವತಾರಸ್ತುತಿಯಲ್ಲಿ ವಾದಿರಾಜರು ಹೀಗೆ ವರ್ಣಿಸಿದ್ದಾರೆ–

ಸೂಕ್ಷ್ಮಾವಲಗ್ನ ವಸನಾಕ್ಷೇಪಕೃತ್ ಕುಚ ಕಟಾಕ್ಷಾಕ್ಷಮೀಕೃತ ಮನೋ-
ದೀಕ್ಷಾಸುರಾಹೃತಸುಧಾಕ್ಷಾಣಿ ನೋಽವತು ಸುರೂಕ್ಷೇಕ್ಷಣಾದ್ ಹರಿತನುಃ ॥

'ಸಣ್ಣನಡು, ಬಟ್ಟೆಯನ್ನಾಕ್ಷೇಪಿಸುವಂಥ ಸ್ತನಗಳು ಮತ್ತು ಕಡೆಗಣ್ಣ ನೋಟ ಇವುಗಳಿಂದ ಹರಿಯ ಸ್ತ್ರೀರೂಪ ಅಮೃತವನ್ನು ತಾವೇ ಉಣಬೇಕೆನ್ನುವ ಅಸುರರ ಛಲವನ್ನು ಮುರಿದು ಅಮೃತವನ್ನಪಹರಿಸಿ ದೇವತೆಗಳಿಗೆ ತಂದು ಉಣಿಸಿತು.

ಹಾಗೇ ನಮ್ಮ ಇಂದ್ರಿಯಗಳನ್ನೂ ದುಷ್ಟ ವಿಷಯಗಳಿಂದ ಈಚೆಗೆ ಸೆಳೆದು ತಂದು ನಮಗೇ ಕೊಟ್ಟು ನಮ್ಮನ್ನು ಕಾಪಾಡಲಿ'.

'ಸೇವಕ ಸುರರಿಗೆ ಉಣಿಸಿದ' ಇಲ್ಲಿ ಸೇವಕ ಸುರರೆಂದು ಹೇಳಿದುದು ಹರಿಗೆ ಜೀವರಲ್ಲಿ ಪಕ್ಷಪಾತವಿಲ್ಲ, ಯಾರು ಸೇವೆ ಮಾಡುವರೊ ಅವರಿಗೆ ಫಲ ನೀಡುತ್ತಾನೆ ಎಂದು ಸೂಚಿಸುತ್ತಿದೆ. ಭಾಗವತದಲ್ಲಿ ಹೇಳಿದೆ–

ತತ್ರಾಮೃತಂ ಸುರಗಣಾಃ ಫಲಮಂಜಸಾಪು-
ರ್ಯತ್ಪಾದಪಂಕಜರಜಃಶ್ರಯಣಾನ್ನ ದೈತ್ಯಾಃ ॥

'ಸುರರು ಹರಿಪಾದಸೇವೆ ಮಾಡಿದರು, ಅಮೃತ ಉಂಡರು. ಅಸುರರು ಸೇವೆ ಮಾಡಲಿಲ್ಲ, ಅವರಿಗೆ ಅಮೃತವಿಲ್ಲ'

ಐತರೇಯೋಪನಿಷತ್ತೂ ಹಾಗೇ ಹೇಳುತ್ತದೆ–

ತಂ ನಾತೀಯಾತ್ । ನ ಹ್ಯತ್ಯಾಯನ್ ಪೂರ್ವೇ ।
ಯೇಽತ್ಯಾಯನ್ ತೇ ಪರಾಬಭೂವುಃ ॥

'ಹರಿಯ ಸೇವೆಯನ್ನು ತ್ಯಜಿಸಕೂಡದು. ದೇವತೆಗಳು ತ್ಯಜಿಸಲಿಲ್ಲ. ಆದ್ದರಿಂದ ಮೋಕ್ಷ ಪಡೆದರು. ಅಸುರರು ತ್ಯಜಿಸಿದರು ತಮಸ್ಸಿಗೆ ಬಿದ್ದರು'

'ಕ್ರಮದಿಂದ ಉಣಿಸಿದ' ಏಕೆಂದರೆ ಈ ಅಮೃತದ ಊಟ ಮೋಕ್ಷಾನಂದಾನುಭವಕ್ಕೆ ನಿದರ್ಶನ. ಮೋಕ್ಷಾನಂದಾನುಭವ ತಾರತಮ್ಯಾನುಸಾರಿ. ಆದ್ದರಿಂದ ಅಮೃತ ಪಾನವೂ 'ಕ್ರಮದಿಂದ' ಅಂದರೆ ತಾರತಮ್ಯಾನುಸಾರವಾಗಿಯೆ ಇದ್ದಿತು. ಶ್ರೀನಿವಾಸ ಕಲ್ಯಾಣದಲ್ಲಿಯೂ ಹರಿ ದೇವತೆಗಳಿಗೆ ನೀಡಿದ ಅಮೃತಾನ್ನಭೋಜನ ತಾರತಮ್ಯಾನುಸಾರವಿತ್ತು–

ಪಂಕ್ತೀಶ್ಚ ಕಾರಯಿತ್ವಾಥ ತಾರತಮ್ಯಾನುಸಾರತಃ ।
ಪತ್ರಾಣಿ ಹ್ಯಾಸ್ತೃಣಾಚ್ಛಂಭುಃ ಪಾತ್ರಾಪಾತ್ರವಿಚಕ್ಷಣಃ ॥

'ಪಾತ್ರಾಪಾತ್ರ ವಿವೇಕ ಉಳ್ಳ ಶಿವ ದೇವತೆಗಳನ್ನು ಪಂಕ್ತಿಯಲ್ಲಿ ತಾರತಮ್ಯಾನುಸಾರ ಕೂಡಿಸಿ ಎಲೆ ಹಾಕಿಸಿದ' ಎಂದು ಭವಿಷ್ಯೋತ್ತರದಲ್ಲಿ ಹೇಳಿದೆ. ಆದ್ದರಿಂದ ತಾರತಮ್ಯಾನುಸಾರವಾಗಿ ಬ್ರಹ್ಮಾದಿ ದೇವತೆಗಳೆಲ್ಲರಿಗೂ ಶ್ರೀಹರಿ ಅಮೃತ ಉಣಿಸಿದ್ದಾನೆ. ಆದರೆ,

ವೃಷಧ್ವಜೋ ನಿಶಮ್ಯೇದಂ ಯೋಷಿದ್ರೂಪೇಣ ದಾನವಾನ್ ।
ಮೋಹಯಿತ್ವಾ ಸುರಗಣಾನ್ ಹರಿಃ ಸೋಮಮಪಾಯಯತ್ ॥
ಸೋಽಹಂ ತದ್ ದ್ರಷ್ಟುಮಿಚ್ಛಾಮಿ ಯತ್ ತೇ ಯೋಷಿದ್ವಪುರ್ಧೃತಂ ॥

ಹರಿ ಸ್ತ್ರೀರೂಪದಿಂದ ಅಸುರರನ್ನು ಮೋಹಗೊಳಿಸಿ ಸುರರಿಗೆ ಅಮೃತ ಉಣಿಸಿದ್ದನ್ನು 'ನಿಶಮ್ಯ' ಕೇಳಿ ಶಿವನು ಹರಿಯ ಬಳಿಗೆ ಹೋಗಿ 'ಹರಿ, ನಾನು ನಿನ್ನ ಆ ಸ್ತ್ರೀರೂಪವನ್ನು ನೋಡಬಯಸುವೆನು' ಎಂದನು ಎಂದು ಭಾಗವತದಲ್ಲಿ ಹೇಳಿದೆ. 'ನಿಶಮ್ಯ' ಕೇಳಿ ಎಂದಿರುವುದರಿಂದ ನೋಡಿಲ್ಲವೆಂದಾಯಿತು. ನೋಡಿಲ್ಲವೆಂದರೆ ಅಮೃತದೂಟಕ್ಕೆ ಬರಲಿಲ್ಲವೆಂದಾಯಿತು.

ಆದರೆ 'ನಿಶಮ್ಯ' ಎನ್ನುವ ಶಬ್ದ ಬೇರೆ ಕಡೆಯೂ ಬರುತ್ತದೆ, ಭಾಗವತದಲ್ಲಿ–

ನಿಶಮ್ಯ ಕರ್ಮ ತಚ್ಛಂಭೋರ್ದೇವದೇವಸ್ಯ ಮೀಢುಷಃ ।
ಪ್ರಜಾ ದಾಕ್ಷಯಣೀ ಬ್ರಹ್ಮಾ ವೈಕುಂಠಶ್ಚ ಶಶಂಸಿರೇ ॥

ಶಿವನು ಹಾಲಾಹಲ ವಿಷವನ್ನು ಕುಡಿದನೆಂದು 'ನಿಶಮ್ಯ' ಕೇಳಿ ಪ್ರಜೆಗಳೂ ದಾಕ್ಷಾಯಣಿಯೂ ಬ್ರಹ್ಮನೂ ವಿಷ್ಣುವೂ ಪ್ರಶಂಸೆ ಮಾಡಿದರು, ಅಂದರೆ, ಇವರಾರೂ ನೋಡಿರಲಿಲ್ಲ ಎಂದೇ? ಆದ್ದರಿಂದ ನೋಡಿದ್ದಾರೆ, ಜನ ಪ್ರಶಂಸೆ ಮಾಡುವುದನ್ನು ಕೇಳಿಯೂ ಇದ್ದಾರೆ.

'ನಿಶಮ್ಯ' ನೋಡಿ ಎಂದೇ ಸತ್ಯಧರ್ಮರ ವ್ಯಾಖ್ಯಾನದಲ್ಲಿದೆ.

ಶ್ರೀಹರಿಯ ಸಮುದ್ರಮಥನದ ಆದೇಶವನ್ನು ಕೇಳಿದವರಲ್ಲಿ ಬ್ರಹ್ಮನೂ ಶಿವನೂ ಇದ್ದರು.

ಹಂತ ಬ್ರಹ್ಮನ್ ಅಹೋ ಶಂಭೋ ಹೇ ದೇವಾ ಮಮ ಭಾಷಿತಂ ।

'ಬ್ರಹ್ಮನೆ ಶಿವನೆ ದೇವತೆಗಳೆ ನನ್ನ ಮಾತನ್ನು ಕೇಳಿ' ಎನ್ನುತ್ತಾನೆ ವಿಷ್ಣು ಭಾಗವತದಲ್ಲಿ.

ವರಾಹ ಪುರಾಣದಲ್ಲಿಯೂ ಹೇಳಿದೆ–

ಏವಮುಕ್ತ್ವಾ ತತೋ ದೇವಾನ್ ದಧ್ಯೌ ರುದ್ರಂ ಹರಿಃ ಸ್ವಯಂ ।
ಬ್ರಹ್ಮಾಣಂ ಚ ತಥಾ ದಧ್ಯೌ ವಾಸುಕಿಂ ನೇತ್ರಕಾರಣಾತ್ ॥
ತೇ ಸರ್ವೇ ತತ್ರ ಸಹಿತಾ ಮಮಂಥುರ್ವರುಣಾಲಯಂ ॥

'ಹರಿ ಹೀಗೆ ಹೇಳಿ ದೇವತೆಗಳು, ಶಿವ, ಬ್ರಹ್ಮ ಹಾಗೂ ಹಗ್ಗಕ್ಕಾಗಿ ವಾಸುಕಿ ಇವರೆಲ್ಲರಿಗೂ ಆಜ್ಞೆ ಮಾಡಿದ. ಎಲ್ಲರೂ ಸೇರಿ ಸಮುದ್ರ ಮಥನ ಮಾಡಿದರು'.

ಆದ್ದರಿಂದ ಎಲ್ಲ ದೇವತೆಗಳೂ ಮಥನಕಾರ್ಯದಲ್ಲಿ ಶ್ರಮಿಸಿದ್ದಾರೆ, ಫಲವನ್ನು ಉಂಡಿದ್ದಾರೆ.

ಉಂಡಿದ್ದು ದೇವತೆಗಳು ಬಹಳ ಶ್ರಮಪಟ್ಟು ಪಡೆದ ಆ ಸುಧೆಯನ್ನು, ಶ್ರಮಕ್ಕೆ ತಕ್ಕ ಫಲವಾದ ಸುಧೆಯನ್ನು, ಉಣಿಸಿದ್ದು ಭಾವುಕೆಯರನ್ನು ಮರಳುಗೊಳಿಸಿದ ಲಾವಣ್ಯಮಯ ಮೂರ್ತಿಯಾದ ಹರಿ, ದೇವತೆಗಳಿಗೆ ಅತ್ಯಂತ ಪ್ರಿಯನಾದ ಹರಿ. ಆ ಊಟದ ಸೊಗಸು ಎಷ್ಟಿರಬಹುದು! ಅದೂ ಅಲ್ಲದೆ, ಕ್ರಮದಿಂದ ಬಡಿಸಿದ್ದಾನೆ, ಹರಿ. ಕೆಲವರಿಗೆ ಯಥೇಚ್ಛ ಬಡಿಸಿ ಇನ್ನು ಕೆಲವರಿಗೆ ಅರೆಹೊಟ್ಟೆ ಬಡಿಸಿ ಅವ್ಯವಸ್ಥೆ ಮಾಡಲಿಲ್ಲ ಆತ. ಕೇವಲ ಬಡಿಸಲೂ ಇಲ್ಲ, ಉಣಿಸಿದ! ಬಡಿಸಿದನೆಂದಮೇಲೆ ಇನ್ನು ಉಣಿಸುವುದು ಬೇರೆ ಏನಿದೆ ಎಂದು ಮಾತ್ರ ಕೇಳಕೂಡದು. ಪ್ರೀತಿಯಿಂದ ಬಡಿಸಿದರೆ ಉಣಿಸಿದಂತಾಗುತ್ತದೆ. ಸುಮ್ಮನೆ ಬಡಿಸಿದರೆ ಬಡಿಸಿದಂತಾಯಿತಷ್ಟೆ

'ಮಾವರ' ಶಬ್ದವೂ ಇಲ್ಲಿ ಅರ್ಥಗರ್ಭಿತವಾಗಿದೆ. 'ತನ್ನ ಮಕ್ಕಳ ಕುಂದ ತಾನೆ ಪೇಳುವುದಕ್ಕೆ' ಎಂದು ಹಿಂದೆ ಹೇಳಿದಂತೆ ದೇವತೆಗಳು ಮಹಾಲಕ್ಷ್ಮಿಗೆ ಮಕ್ಕಳು. ಅಂಥ ಮಕ್ಕಳಾದ ದೇವತೆಗಳಿಗೆ ಹರಿ ಅಮೃತ ಉಣಿಸುತ್ತಾನೆ ಎಂಬ ವಿಶ್ವಾಸದಿಂದಲೆ ದೇವಿ ಹರಿಯನ್ನು ವರಿಸಿದ್ದಳು. 'ಸರ್ಬರಿಗಾವ ಅಮೃತವನುಣಿಸುವ' ಎಂದು ಹಿಂದೆ ಹೇಳಿದೆ ಹೀಗೆ ಮಹಾಲಕ್ಷ್ಮಿಗೆ ಅಭೀಷ್ಟವಾದ ಅಮೃತ ಉಣಿಸುವ ಕಾರ್ಯವನ್ನು 'ಮಾ-ವರ' ಮಹಾಲಕ್ಷ್ಮಿ ವರಿಸಿದ ಹರಿ ಮಾಡುವುದು ಸಹಜ. 'ದೇವತರುವಿನ ಹೂವಿನ ಮಳೆಗಳ ಶ್ರೀವರನ ಮೇಲೆ' ಎಂಬಲ್ಲಿ ಹೇಳಿದ 'ಶ್ರೀ-ವರ'ನಂತೆ ಈ 'ಮಾ-ವರ' ಅಳಿಯನಾದ 'ಮಾವರ'ನು 'ಮಾವ'ರ ಅಂದರೆ ಮಾವಂದಿರಾದ ಸಮುದ್ರರಾಜರ ಸುಧೆಯನ್ನು ಸುರರಿಗುಣಿಸಿ ಆ ಮಾವಂದಿರಿಗೆ ಬಹಳ ಸಂತೋಷ ಉಂಟುಮಾಡಿದನೆಂದೂ ಅರ್ಥಗ್ರಹಿಸಬಹುದು. ಮಾವ ಕನ್ಯಾದಾನ ಮಾತ್ರ ಮಾಡಿದ. ಉಳಿದುದನ್ನೆಲ್ಲ ಅಳಿಯನೆ ನಿರ್ವಹಿಸಿದನೆನ್ನುವ ಧ್ವನಿ ಇಲ್ಲಿದೆ.

— ೧೦೧ —

**ನಾಗನ ಮೇಲೆ ತಾ ಮಲಗಿದ್ದಾಗ**
**ಆಗಲೆ ಜಗವ ಜತನದಿ ।**
**ಆಗಲೆ ಜಗವ ಜತನದಿ ಧರಿಸೆಂದು**
**ನಾಗಬಲಿಯ ನಡೆಸಿದ ॥**

ಶ್ರೀಹರಿ ರಮೆಯೊಡನೆ ತಾನು ನಾಗನ ಮೇಲೆ ಮಲಗಿದ್ದಾಗ ಜಗತ್ತನ್ನು ನೀವೇ ವಿಶೇಷ ಪ್ರಯತ್ನದಿಂದ ಜೋಪಾನವಾಗಿ ಧರಿಸಿ ಎಂದು ನಾಗಬಲಿಯನ್ನು ನಡೆಸಿದ.

ನಾಲ್ಕುದಿನದ ಮದುವೆಯಲ್ಲಿ ನಾಲ್ಕನೆ ದಿನ ಮದುಮಗ ನಾಗಬಲಿ ನಡೆಸಬೇಕು. ವಿವಾಹ ಪ್ರಯೋಗದ ಗ್ರಂಥಗಳಲ್ಲಿ ಕೆಲವೆಡೆ 'ನಾಕಬಲಿ' ಎಂದೂ ಹೇಳಿದೆ. ಮೇಲಿನ ನುಡಿಯಲ್ಲಿ 'ನಾಕಬಲಿಯ' ಎಂದು ಪಾಠಾಂತರವೂ ಉಂಟು.

'ನಾಗ' ಎಂದರೆ 'ಶ್ರೇಷ್ಠ'. 'ಬಲಿ' ಎಂದರೆ ಪೂಜೆ. ಶ್ರೇಷ್ಠರಾದ ದೇವತೆಗಳಿಗೆ ಮಾಡುವ ಪೂಜೆ 'ನಾಗಬಲಿ'. 'ನಾಕ' ಎಂದರೆ ಸ್ವರ್ಗ, ಸ್ವರ್ಗದಲ್ಲಿರುವ ದೇವತೆಗಳ ಪೂಜೆ 'ನಾಕಬಲಿ' – ಎರಡರ ಅಭಿಪ್ರಾಯ ಒಂದೇ.

'ನೂತನವಧುವಾದ ರಮೆಯೊಡನೆ ನಾಗನ ಮೇಲೆ ಅಂದರೆ ಶೇಷನಾಗನ ಮೇಲೆ ನಾನು ಮಲಗಬೇಕಾಗಿದೆ. ರಮಿಸಬೇಕಾಗಿದೆ. ಆಗ ನನಗೆ ಜಗತ್ತನ್ನು ಧರಿಸುವ ಕಾರ್ಯದಲ್ಲಿ ವಿರಾಮ ಬೇಕು. ಆದ್ದರಿಂದ ದೇವತೆಗಳೆ, ನೀವೀ ಕಾರ್ಯ ಮಾಡಿರಿ. ನಾನು ಕೂರ್ಮರೂಪದಿಂದ ಬ್ರಹ್ಮಾಂಡದ ಒಳಗೂ ಹೊರಗೂ ನಿಂತು ಅನಾಯಾಸವಾಗಿ ಜಗತ್ತನ್ನು ಧರಿಸುವವನು. ನೀವು ಮಾತ್ರ ಬಹು ಪ್ರಯತ್ನ ಮಾಡಬೇಕಾದೀತು. ಚಿಂತೆಯಿಲ್ಲ. 'ಜತನದಿ', ಬಹುಪ್ರಯತ್ನದಿಂದಲೆ ಧರಿಸಿರಿ. ಅದಕ್ಕಾಗಿ ನಾನೀಗ ನಿಮಗೆ 'ನಾಗಬಲಿ'ಯ ಪೂಜೆ ಮಾಡುತ್ತೇನೆ' ಎನ್ನುತ್ತಿದ್ದಾನೆ ಹರಿ. ಇಲ್ಲಿ ಹರಿ ಸರ್ವಶಕ್ತ, ದೇವತೆಗಳು ಅಶಕ್ತರೆನ್ನುವುದು ವ್ಯಕ್ತವಾಗುತ್ತದೆ. ಅಥವಾ 'ನಾನು ಜಗತ್ತನ್ನು 'ಜತನದಿ' ಜೋಪಾನವಾಗಿ ಧರಿಸುತ್ತಿದ್ದೇನೆ. ಇನ್ನು ಮುಂದೆ ನೀವೇ ಜೋಪಾನವಾಗಿ ಧರಿಸಬೇಕು' ಎನ್ನುವ ಅಭಿಪ್ರಾಯವಿದೆ. ಇಲ್ಲಿ ಹರಿಗೆ ಜಗತ್ತಿನಲ್ಲಿ ಎಷ್ಟು ಪ್ರೀತಿ ವಾತ್ಸಲ್ಯಗಳಿವೆ ಎಂದು ವ್ಯಕ್ತವಾಗುತ್ತದೆ.

ನಾನು ಶೇಷನಾಗನ ಮೇಲೆ ಮಲಗುತ್ತಿದ್ದೇನೆ. ಈ ಶೇಷನಾಗನೆ ಕೂರ್ಮದ ಮೇಲೆ ನಿಂತು ಜಗತ್ತನ್ನು ಹೊರುವವನು. ಅವನಿಗೆ ಈಗ ವಿಶ್ರಾಂತಿ ಬೇಕಾಗಿರುವುದರಿಂದ ದೇವತೆಗಳೇ ನೀವೇ ಅವನ ಕಾರ್ಯವನ್ನೂ ಮಾಡಬೇಕು. ಅವನು 'ನಾಗ', ನೀವೂ ಶ್ರೇಷ್ಠರೆಂಬ ಅರ್ಥದಲ್ಲಿ 'ನಾಗ'ರೆ. ಆದ್ದರಿಂದ ಅವನಿಲ್ಲದಾಗ ನೀವೆ ಅವನ ಬದಲಿಗೆ ಜಗತ್ತನ್ನು ಧರಿಸಬೇಕು. ಆದರೆ ನೀವು ಅವನಂತೆ ಬಲಶಾಲಿಗಳಲ್ಲ. ಆದ್ದರಿಂದ 'ಜತನದಿ' ಬಹು ಪ್ರಯತ್ನದಿಂದ ಜೋಪಾನವಾಗಿ ಜಗತ್ತನ್ನು ಧರಿಸಿರಿ. ನಿಮಗೆ ಕಷ್ಟವಾದರೂ ನಮಗಾಗಿ ಅದನ್ನು ಸಹಿಸಿಕೊಳ್ಳಿರಿ. ನಿಮಗೆ 'ನಾಗಬಲಿ' ಪೂಜೆ ಮಾಡುತ್ತೇನೆ' ಎನ್ನುತ್ತಾನೆ ಹರಿ. ಇಲ್ಲಿ ನವವಧುವಿನೊಡನೆ ಶೇಷನ ಮೃದುಶಯ್ಯೆಯಲ್ಲಿ ತಾನೆಂದು ಮಲಗಿ

ರಮಿಸುವೆನೋ ಎಂಬ ಔತ್ಸುಕ್ಯವನ್ನು ಹರಿ ವ್ಯಕ್ತಪಡಿಸುವುದರಿಂದ ಶೃಂಗಾರರಸವಿದೆ.

ಶೇಷನು ಒಂದು ರೂಪದಿಂದ ಸದಾ ಜಗತ್ತನ್ನು ಹೊತ್ತಿದ್ದೇ ಬೇರೆ ರೂಪಗಳಿಂದ ಹರಿ ಮಲಗುವಲ್ಲೆಲ್ಲ ಮಂಚವಾಗಿ ಅವನನ್ನು ಸದಾ ಹೊರುತ್ತಿದ್ದಾನೆ. ಈಗ ನವದಂಪತಿಗಳನ್ನು ಹೊರುವುದಕ್ಕೆ ಲೋಕಧಾರಣಕಾರ್ಯವನ್ನು ಬಿಟ್ಟು ಬರುವ ಪ್ರಮೇಯವೇ ಇಲ್ಲ. ಆದರೂ ನವವಧುವನ್ನು ರತಿಕ್ರೀಡೆಯಲ್ಲಿ ತಾನು ಚೆನ್ನಾಗಿ ಮರ್ದಿಸಬೇಕೆಂಬ ಆಸೆ. ಶೇಷನು ಇದನ್ನು ಸಹಿಸಲು ತನ್ನೆಲ್ಲ ಶಕ್ತಿಯನ್ನು ಉಪಯೋಗಿಸಬೇಕಾದೀತು. ಅವನಿಂದ ಲೋಕಧಾರಣಕಾರ್ಯವಾಗದು ಎನ್ನುವ ಚಿಂತೆ. ಆಗ ಬೇರೆ ದೇವತೆಗಳೆಲ್ಲ ಸೇರಿ ಆ ಕಾರ್ಯ ಮಾಡಲಿ ಎನ್ನುತ್ತಾನೆ ಶ್ರೀಹರಿ. ಇದೊಂದು ಸುಂದರವಾದ ಉತ್ಪ್ರೇಕ್ಷೆ. ಹರಿಗೆ ರಮೆಯಲ್ಲಿ ಅನುರಾಗ, ಶೇಷನ ಮೇಲೆ ಅನುಕಂಪ, ಜಗತ್ತಿನ ಮೇಲೆ ಪ್ರೀತಿ ವಾತ್ಸಲ್ಯವೆಲ್ಲವೂ ಧ್ವನಿತವಾಗುತ್ತದೆ.

ವಸ್ತುತಃ ಇದು 'ನಾಕಬಲಿ' ಅಲ್ಲ 'ನಾಕಬಲಿ' ಎಂಬ ಪಾಠವೂ ಸರಿಯಲ್ಲ ಆ ಪಾಠದಲ್ಲಿ 'ಗ'ಕಾರ ದ್ವಿತೀಯಾಕ್ಷರ ಪ್ರಾಸಕ್ಕೆ ಭಂಗ ಬರುತ್ತದೆ 'ನಾಗ-ಆಗ-ಆಗ-ನಾಕ' ಎಂದು ಕೊನೆಯಲ್ಲಿ 'ಕ'ಕಾರ ಬಂದರೆ ಪ್ರಾಸವಿಲ್ಲದಾಗುತ್ತದೆ. ಪ್ರಾಸವಿಲ್ಲದ ಪದವ ತಾಸು ಹಾಡಿದರೇನು? ವ್ಯವಹಾರದಲ್ಲಿಯೂ 'ನಾಗೋಲೆ'ಯೇ ಇದೆ. 'ಭೂಮವನುಂಡು ನಾಗೋಲೆಗಳ ಮಾಡಿದರು' ಎಂದು ಶುಕ್ರವಾರದ ಹಾಡು ಹೇಳುತ್ತದೆ. 'ನಾಗೋಲೆ'ಯ ಮೂಲ 'ನಾಗಬಲಿ'ಯಲ್ಲಿದೆ. 'ನಾಕಬಲಿ'ಯಲ್ಲಿ ಅಲ್ಲ.

ನಾಗಬಲಿಯ ವಿಧಾನ– ವಿವಾಹದ ನಾಲ್ಕನೆ ದಿನ ರಾತ್ರಿ ರಂಗೋಲಿಯಿಂದ ಮಾನಸ ಸರೋವರವನ್ನು ಬರೆದು ಅದರೊಳಗೆ ಅಕ್ಕಿಕಾಳುಗಳಿಂದ ಹಂಸ ಕಮಲ ಮುಂತಾದುವನ್ನೂ, ಭದ್ರಮಾತಂಗ ಮತ್ತಮಾತಂಗಗಳೆಂಬ ಎರಡು ಆನೆಗಳನ್ನೂ, ಅವುಗಳ ಸುತ್ತಲೂ ಸಪ್ತ ಮಾತೃಕೆಯರನ್ನೂ, ದಡದಲ್ಲಿ ಶಿವನನ್ನೂ, ಅವನ ಬಳಿ ವೀಳೆಯದ ಬಳ್ಳಿಯನ್ನೂ, ಬರೆದು ನಡುವೆ ಕರ್ಪೂರ ಜಲಪೂರ್ಣವಾದ ಕುಂಭವನ್ನಿಡಬೇಕು. ಹೊರಗೆ ಉತ್ತರದಲ್ಲಿ ಒಂದು ಕಲ್ಲನ್ನಿಡಬೇಕು. ವರನು ಕುಂಭದಲ್ಲಿ ದಾಕ್ಷಾಯಣಿಯನ್ನೂ, ಸುತ್ತಲೂ ಸಪ್ತಮಾತೃಕೆಯರು, ಬ್ರಹ್ಮ–ಸಾವಿತ್ರಿ, ಶಿವ–ಪಾರ್ವತಿ, ಲಕ್ಷ್ಮೀ–ನಾರಾಯಣ, ಶಚಿ–ಇಂದ್ರರು, ಅಷ್ಟ ದಿಗ್ಗಜಗಳು, ಅಷ್ಟ ದಿಕ್ಪಾಲರು ಇವರೆಲ್ಲರನ್ನೂ ಆವಾಹಿಸಿ, ನೀರಿನಲ್ಲಿ ಅಪ್ಸರೆಯರನ್ನೂ ಸೋಮ ಗಂಧರ್ವ ಅಗ್ನಿಗಳನ್ನೂ ಆವಾಹಿಸಬೇಕು, ಪೂಜಿಸಬೇಕು. ಇದು ಕಲ್ಪೋಕ್ತ ಪೂಜೆ. ಇದಾದ ಬಳಿಕ ಕುಂಭದ ಬಳಿ ಕತ್ತಿ, ಮಂಗಳಸೂತ್ರ, ತಾಂಬೂಲಗಳನ್ನಿಟ್ಟು ಪೂಜಿಸಬೇಕು. ಭದ್ರಮಾತಂಗ ಮತ್ತಮಾತಂಗಗಳನ್ನೂ ಪೂಜಿಸಬೇಕು. ಇದಿಷ್ಟು

ವರನು ಮಾಡಬೇಕಾದ ಅಂಶ. ಬಳಿಕ ಕನ್ಯಾಮಾತೆ ಅನ್ನ ಅಪೂಪಗಳಿಂದ ತುಂಬಿದ ಪಾತ್ರೆಯನ್ನು ತಲೆಯ ಮೇಲೆ ಹೊತ್ತು ತಂದು ಕುಂಭದ ಮೇಲೂ ಎಲ್ಲ ದಿಕ್ಕುಗಳಲ್ಲಿಯೂ ಬಲಿ ನೀಡಬೇಕು. ಬಳಿಕ ವರನು ಮಂಗಲಸೂತ್ರವನ್ನು ವಧುವಿನ ಕೊರಳಿಗೆ ಕಟ್ಟಿ ಇಬ್ಬರೂ ತಾಂಬೂಲ ಮೆಲ್ಲಬೇಕು. ವರನು ಭದ್ರಮಾಂತಗವನ್ನೂ ವಧು ಮತ್ತಮಾತಂಗವನ್ನೂ ಏರಿ ಕುಳಿತು, ಬಳಿಕ ಆ ಎರಡು ಮಾತಂಗಗಳನ್ನೂ ಅದಲು ಬದಲು ಮಾಡಿಕೊಳ್ಳಬೇಕು. ಕೊನೆಯಲ್ಲಿ ಬ್ರಾಹ್ಮಣ ಸುವಾಸಿನಿಯರಿಗೆ ಸಮಾರಾಧನ ನಡೆಸಬೇಕು.

ವಧುವಿನಲ್ಲಿ ನೆಲೆಸಿರುವ ವಿಶ್ವಾವಸು ಗಂಧರ್ವನು ಆಕೆಗೆ ಮಧುರವಾದ ಮಾತಿನ ಕಲೆಯನ್ನು ಪೂರ್ಣ ಅನುಗ್ರಹಿಸಿ ಹೊರಟು ಹೋಗಲಿ ಎಂಬ ಉದ್ದೇಶದಿಂದ ನಾಗಬಲಿ ಮಾಡುತ್ತಾರೆ. ಆದರೆ ಜಗನ್ಮಾತೆಯಾದ ಮಹಾಲಕ್ಷ್ಮಿಗೆ ಮಕ್ಕಳು ಮಾತು ಕಲಿಸುವುದುಂಟೆ ? ಎಲ್ಲ ದೇವ ಗಂಧರ್ವಾದಿಗಳೂ ದೇವಿಯ ಶರೀರವನ್ನೆ ಆಶ್ರಯಿಸಿರುವವರೆಂದ ಮೇಲೆ ವಿಶ್ವಾವಸು ಗಂಧರ್ವ ಅವಳನ್ನು ಬಿಟ್ಟು ಎಲ್ಲಿಗೆ ಹೋಗಬಲ್ಲ ? ಆದ್ದರಿಂದ ಹರಿ ಮಾಡಿದ ನಾಗಬಲಿಗೆ ಬೇರೆಯೆ ಅರ್ಥವಿರಬೇಕು. ಅದೇನಿರಬಹುದು ?

ದಾಕ್ಷಾಯಣಿ ಸಪ್ತಮಾತೃಕೆಯರು ಬ್ರಹ್ಮವಿಷ್ಣು ಮುಂತಾದ ಎಲ್ಲ ದೇವತೆಗಳ ಪೂಜೆ ನಾಗಬಲಿಯಲ್ಲಿ ಇದೆ. 'ನಾಗ' ಅಂದರೆ ಶೇಷನಾಗಾದಿ ಸರ್ಪಗಳ ಪೂಜೆಯಲ್ಲ. ಆದರೂ 'ನಾಗಬಲಿ' ಎಂದು ಹೆಸರು ಏಕೆ ? ದಿಗ್ಗಜಗಳ ಪೂಜೆಯೂ ಸೇರಿರುವುದರಿಂದ, 'ನಾಗ' ಎಂದರೆ ದಿಗ್ಗಜಗಳೂ ಆಗಬಹುದಾದ್ದರಿಂದ 'ನಾಗಬಲಿ' ಎನ್ನೋಣವೆ ? ದಿಗ್ಗಜಗಳನ್ನು ವಿಶೇಷ ಹೇಳಲು ಕಾರಣವೇನು ? ದಿಗ್ಗಜಗಳನ್ನು ಹೇಳಲು 'ನಾಗ' ಶಬ್ದವೆ ಏಕೆ ಬೇಕಾಗಿತ್ತು ?

ಮೇಲಿನ ಎಲ್ಲ ಪ್ರಶ್ನೆಗಳಿಗೆ ಉತ್ತರ ಮೇಲಿನ ನುಡಿಯಲ್ಲಿದೆ. 'ನಾಗನ ಮೇಲೆ' ಶೇಷನಾಗನ ಮೇಲೆ ತಾನು ಮಲಗಿದ್ದಾಗ ಜಗತ್ತನ್ನು ಹೊರುವ ಕಾರ್ಯವನ್ನು 'ನಾಗ'ರು ದಿಗ್ಗಜಗಳು ನಡೆಸಲಿ' ಎಂದು ದಿಗ್ಗಜಗಳಿಗೇ ವಿಶೇಷಪೂಜೆ ಮಾಡುತ್ತಾನೆ ಹರಿ. ಶ್ರೇಷ್ಠ ದೇವತೆಗಳ ಪಂಕ್ತಿಯಲ್ಲಿ ಕೂಡಿಸಿ ದಿಗ್ಗಜಗಳಿಗೆ ಪೂಜೆ ಮಾಡಿದರೆ ಅದೇ ವಿಶೇಷ ಪೂಜೆ ಸತ್ಕಾರವೆನಿಸುತ್ತದೆ. ಹೀಗೆ ಶೇಷ'ನಾಗ'ನ ಕಾರ್ಯವನ್ನು ದಿಙ್ 'ನಾಗ'ಗಳು ನಡೆಸಲೆಂಬ ಉದ್ದೇಶದಿಂದ ಮಾಡಿದ ಪೂಜೆ 'ನಾಗಬಲಿ'ಯೆ ಆಗಬೇಕು ತಾನೆ ?

ಈ ಉತ್ಪ್ರೇಕ್ಷೆಯನ್ನು ವಾದಿರಾಜರು ರುಕ್ಮಿಣೀಶವಿಜಯದಲ್ಲಿಯೂ ಮಾಡಿದ್ದಾರೆ–

ತತಶ್ಚತುರ್ಥೇ ದಿವಸೇ ಕಿಲೈತೌ
ಚಿರಂ ರತೌ ತಲ್ಪತನೌ ಫಣೀಂದ್ರೇ ।
ವಿಲಂಬಿನಿ ಕ್ಷ್ಮಾಂ ವಹತೇತಿ ನೂನಂ
ಪ್ರಚಕ್ರತುರ್ನಾಗಬಲಿಂ ಪ್ರಹೃಷ್ಟೌ ॥

'ದಿಗ್ಗಜಗಳೆ, ನಾವು ಮುಂದೆ ಶೇಷಮಂಚದಲ್ಲಿ ಮಲಗಿ ರಮಿಸಬೇಕಾಗಿರುವುದರಿಂದ ಶೇಷನು ಲೋಕಧಾರಣ ಕಾರ್ಯಕ್ಕೆ ಬರುವುದರಲ್ಲಿ ವಿಲಂಬವಾಗುವುದು. ಈ ಸಮಯದಲ್ಲಿ ನೀವೆ ಲೋಕಗಳನ್ನು ಹೊರುತ್ತಿರಿ' ಎನ್ನುತ್ತ ರುಕ್ಮಿಣೀಕೃಷ್ಣರು ದಿಗ್ಗಜಗಳನ್ನು ಸಂತೋಷಗೊಳಿಸುವುದಕ್ಕಾಗಿ ವಿವಾಹದ ಚತುರ್ಥ ದಿನದಲ್ಲಿ 'ನಾಗಬಲಿ' ಮಾಡಿರಬಹುದೆಂದು ನನ್ನ ಊಹೆ'.

ಇಲ್ಲಿಯು 'ಫಣೀಂದ್ರ' ಶಬ್ದಕ್ಕಿಂತಲೂ ಮೇಲಿನ ನುಡಿಯಲ್ಲಿ ಬಂದ 'ನಾಗ' ಶಬ್ದ ಹೆಚ್ಚು ಸ್ವಾರಸ್ಯ ಪೂರ್ಣವೆನ್ನಬಹುದು.

– ೧೦೨ –

**ಕ್ಷುಧೆಯ ಕಳೆವ ನವರತ್ನದ ಮಾಲೆಯ**
**ಮುದದಿಂದ ವಾರಿಧಿ ವಿಧಿಗಿತ್ತ ।**
**ಚದುರ ಹಾರವ ವಾಯುದೇವರಿಗಿತ್ತ**
**ವಿಧುವಿನ ಕಲೆಯ ಶಿವಗಿತ್ತ ॥**

ಹಸಿವು ನೀರಡಿಕೆಗಳನ್ನು ಕಳೆಯುಬಲ್ಲ ಒಂದು ನವರತ್ನದ ಹಾರವನ್ನು ಸಮುದ್ರರಾಜ ಸಂತೋಷದಿಂದ ಬ್ರಹ್ಮದೇವರಿಗಿತ್ತ. ಚತುರನಾದುದರಿಂದ ಆತ ವಾಯುದೇವರಿಗೂ ಅಂಥದೇ ಒಂದು ಹಾರವನ್ನಿತ್ತ, ಮತ್ತು ಶಿವನಿಗೆ ಚಂದ್ರಕಲೆಯನ್ನಿತ್ತ.

ರಮಾನಾರಾಯಣರ ವಿವಾಹದ ನಾಲ್ಕು ದಿನಗಳ ಮಹೋತ್ಸವ ವೈಭವ ಪೂರ್ಣವಾಗಿ ನೆರವೇರಿತು. ಕೊನೆಯಲ್ಲಿ ಬಂಧುಗಳಾದ ಬ್ರಹ್ಮಾದಿದೇವತೆಗಳಿಗೆ ಸಮುದ್ರರಾಜ ಯಥೋಚಿತವಾಗಿ ಉಡುಗೊರೆಗಳನ್ನಿತ್ತು ಅವರವರ ಲೋಕಗಳಿಗೆ ಬೀಳ್ಕೊಡುತ್ತಿದ್ದಾನೆ. ಆತ ಮೊದಲೆ ರತ್ನಾಕರ. ಈಗ ಸಂಪತ್ತಿನ ಅಧಿದೇವತೆಯಾದ ಮಹಾಲಕ್ಷ್ಮಿ ಉದಿಸಿದ ಬಳಿಕ ಅವನ ಸಂಪತ್ತು ಇನ್ನೂ ವೃದ್ಧಿ ಹೊಂದಿತು. ಆದರಿಂದ ಅನರ್ಘ್ಯ ವಸ್ತುಗಳನ್ನೆ ಆತ ದೇವತೆಗಳಿಗೆ ಕೊಡುತ್ತಿದ್ದಾನೆ. ಸ್ಕಂದ ಪುರಾಣ ಹಾಗೆ ಹೇಳಿದೆ–

ಅನರ್ಘ್ಯಾಣಿ ಚ ವಸ್ತ್ರಾಣಿ ರತ್ನಭೂಷಾಃ ಪರಿಚ್ಛದಾನ್ ।
ದೇವಾದಿಭ್ಯೋ ದದೌ ಪ್ರೀತ್ಯಾ ಸರ್ವೇಭ್ಯೋಽಪಿ ಪೃಥಕ್ ಪೃಥಕ್ ॥

'ಅನರ್ಘ್ಯ'ವೆಂದರೆ ಬರಿ ಔಪಚಾರಿಕ ಮಾತಲ್ಲ. ನಿಜವಾಗಿ ಬೆಲೆ ಕಟ್ಟಲಾಗದ ವಸ್ತುಗಳನ್ನೇ ವರುಣ ಕೊಟ್ಟಿದ್ದಾನೆ. ಏಕೆಂದರೆ ಬೇರೆ ನವರತ್ನಮಾಲೆಗೆ ಬೆಲೆ ಕಟ್ಟಬಹುದು. ಹಸಿವು ನೀರಡಿಕೆಗಳನ್ನು ಕಳೆವ ನವರತ್ನಮಾಲೆಗೆ ಬೆಲೆ ಕಟ್ಟಲಾದೀತೆ ?

ಬೇರೆ ಆಭರಣಗಳಿಗೆ ಬೆಲೆ ಕಟ್ಟಬಹುದು. ಸಮುದ್ರದಿಂದ ತನ್ನ ಮಗನಾಗಿ ಉದಿಸಿ ಬಂದ ಚಂದ್ರನ ಕಲೆಗೆ ಬೆಲೆ ಕಟ್ಟಲಾದೀತೆ? ಆದ್ದರಿಂದ ವರುಣನಿತ್ತ ಉಡುಗೊರೆಗಳ ಬಗ್ಗೆ ಮುಂದಿನ ನಾಲ್ಕು ನುಡಿಗಳಲ್ಲಿ ವರ್ಣಿಸಲಾಗಿದೆ. ಮೊದಲಿಗೆ ಬ್ರಹ್ಮವಾಯು ಶಿವರಿಗೆ ನೀಡಿದ ಅನರ್ಘ್ಯ ವಸ್ತುಗಳ ಬಗ್ಗೆ ಈ ನುಡಿಯಲ್ಲಿ ಹೇಳಿದೆ.

ಬ್ರಹ್ಮದೇವರಿಗೆ ನೀಡಿದ ನವರತ್ನಮಾಲೆ ಸಮುದ್ರ ಮಥನದಿಂದ ಉದ್ಭವಿಸಿದುದು. ಹಾಗೇ ಉದ್ಭವಿಸಿದ ಚಂದ್ರನಂತೆಯೇ ಅಮೃತಕಿರಣವನ್ನು ಸುರಿಸುವಂಥದ್ದು. ಚಂದ್ರನ ಅಮೃತಕಿರಣವನ್ನು ಉಂಡು ದೇವತೆಗಳೂ ಪಿತೃಗಳೂ ಹಸಿವು ಬಾಯಾರಿಕೆ ಜರೆ ಮರಣಗಳಿಂದ ದೂರವಿರುವರು. ಹಾಗೆಯೇ ಈ ನವರತ್ನ ಮಾಲೆಯಿಂದ ಸುರಿವ ಅಮೃತವೂ ಹಸಿವು ನೀರಡಿಕೆಗಳನ್ನು ಕಳೆಯುವುದು. ಆದ್ದರಿಂದ ಅದನ್ನು ಅನ್ನಾಭಿಮಾನಿಗಳಾದ ಬ್ರಹ್ಮದೇವರಿಗೆ ಕೊಟ್ಟಿದ್ದ ಚತುರನಾದ ವರುಣ.

ಆದ್ದರಿಂದಲೇ ಬ್ರಹ್ಮ ಶ್ವೇತರಾಜನಿಗೆ ಈ ಮಾಲೆ ನೀಡಿದನಂತೆ. ಶ್ವೇತರಾಜ ಅನ್ನದಾನವಿಲ್ಲದ ಯಜ್ಞಗಳನ್ನು ಮಾಡಿ ಸ್ವರ್ಗಪಡೆದ. ಅದರಿಂದ ಸ್ವರ್ಗದಲ್ಲಿದ್ದರೂ ಅವನಿಗೆ ಸದಾ ಹಸಿವು. ಆಗಾಗ ಸ್ವರ್ಗದಿಂದ ಇಳಿದು ಬಂದು ಭೂಮಿಯಲ್ಲಿ ಒಂದು ಸರೋವರದಲ್ಲಿ ತೇಲುತ್ತಿದ್ದ ತನ್ನ ಹೆಣದ ಮಾಂಸ ತಿಂದು ಸ್ವರ್ಗಕ್ಕೆ ಮರಳುತ್ತಿದ್ದ. ಕೊನೆಗೆ ಬ್ರಹ್ಮನನ್ನು ತಪಸ್ಸಿನಿಂದ ಒಲಿಸಿಕೊಂಡು ಈ ನವರತ್ನ ಮಾಲೆಯನ್ನು ಪಡೆದ. ಅದನ್ನು ಆತ ಅಗಸ್ತ್ಯರಿಗಿತ್ತ. ಅಗಸ್ತ್ಯರು ಶ್ರೀರಾಮನಿಗಿತ್ತರು. ಶ್ರೀರಾಮ ಅದನ್ನು ಧರಿಸಿದಾಗ ರಾಜನ ಹಸಿವು ಪೂರ್ತಿ ಅಡಗಿತು. ನೇರವಾಗಿ ಶ್ರೀರಾಮನಿಗೆ ಮಾಲೆ ಅರ್ಪಿಸುವಷ್ಟು ಯೋಗ್ಯತೆ ರಾಜನಲ್ಲಿರಲಿಲ್ಲವೆಂದೇ ಬ್ರಹ್ಮದೇವರು ರಾಜನ ಹಿತಕ್ಕಾಗಿ ಅಗಸ್ತ್ಯರ ಮೂಲಕ ಕೊಡಿಸಿದರು. ವಸ್ತುತಃ ಚದುರನಾದ ವರುಣನೇ ಬ್ರಹ್ಮದೇವರ ಮೂಲಕ ಹರಿಗೆ ಮಾಲೆಯನ್ನರ್ಪಿಸಿದ್ದ.

ವರುಣ ಚತುರನಾದ್ದರಿಂದಲೇ ಅಂಥದೇ ಇನ್ನೊಂದು ಹಾರವನ್ನು ವಾಯುದೇವರಿಗಿತ್ತ. ಏಕೆಂದರೆ ಬ್ರಹ್ಮ ವಾಯುಗಳು ಸಮಾನರು. ಸಮನಾಗಿಯೇ ಅವರಿಬ್ಬರನ್ನೂ ಸತ್ಕರಿಸಿದ್ದ ಚತುರನಾದ ವರುಣ.

ವರುಣನನ್ನು ಚತುರನೆನ್ನಲು ಬೇರೆ ಕಾರಣವೂ ಉಂಟು ಸಮುದ್ರಮಥನದಿಂದೆದ್ದ ಕಾಮಧೇನು ಕಲ್ಪವೃಕ್ಷ ಮುಂತಾದ ರತ್ನಗಳನ್ನು ದೇವತೆಗಳೂ ಅಸುರರೂ ತಮಗೆ ತಾವೇ ಬೇಕು ಬೇಕಾದಂತೆ ಎತ್ತಿಕೊಂಡರೆ? ಹಾಗಿದ್ದರೆ ಅವ್ಯವಸ್ಥೆ ಉಂಟಾಗಿ ಜಗಳವಾಗುತ್ತಿತ್ತು. ಅಮೃತದ ಬಗ್ಗೆ ಜಗಳವಾದುದು ಪ್ರಸಿದ್ಧವೆ ಇದೆ ರತ್ನಗಳ ವಿತರಣೆಯಲ್ಲಿ ಅವ್ಯವಸ್ಥೆಯಂತೂ ಕಾಣುತ್ತಿದೆ ಬ್ರಹ್ಮವಾಯುಗಳಿಗೆ ನವರತ್ನಹಾರ ಮಾತ್ರ. ಶಿವನಿಗೆ ಚಂದ್ರಕಲೆ ಮಾತ್ರ. ದೇವೇಂದ್ರನಿಗೆ ಐರಾವತ ಕಲ್ಪವೃಕ್ಷ ಅಪ್ಸರೆಯರು ಮುಂತಾದುವೆಲ್ಲ ಸಿಕ್ಕಿದುವು. ಅಸುರರಿಗೆ ಮದ್ಯಮಾತ್ರ. ಅವ್ಯವಸ್ಥೆಯಂತೆ ಕಾಣುವ ಈ ವ್ಯವಸ್ಥೆಗೆ ಕಾರಣವೇನು ? ಹರೀಚ್ಛೆ ಎಂದು ಸ್ಕಂದ ಪುರಾಣದಿಂದ ತಿಳಿದುಬರುತ್ತದೆ. ಉದಾ–

ಐರಾವತಂ ದೇವರಾಜೋ ಜಗ್ರಾಹಾನುಮತಾದ್ಧರೇಃ ।

'ಹರಿಯ ಅನುಮತಿಯಿಂದ ಇಂದ್ರ ಐರಾವತವನ್ನು ಸ್ವೀಕರಿಸಿದ'. ಆದರೆ ಹರಿ ನೇರವಾಗಿ ತಾನೆ ರತ್ನಗಳನ್ನು ಹಂಚಲಿಲ್ಲ. ಅಮೃತ ಒಂದನ್ನೇ ಕೈಯಾರೆ ಬಡಿಸಿದ. ಉಳಿದೆಲ್ಲ ರತ್ನಗಳನ್ನೂ ವರುಣನ ಮೂಲಕ ವಿವಾಹೋತ್ಸವದ ಉಡುಗೊರೆಯ ರೂಪದಿಂದ ಕೊಡಿಸಿದ ಚತುರನಾದ ವರುಣ ಹರಿಯ ಮನೋಗತವನ್ನು ಅರಿತು ಅದರಂತೆ ರತ್ನಗಳನ್ನು ಹಂಚಿದ. ಹರಿಯ ಮನಸ್ಸಿಗೆ ಸಂತೋಷ ಉಂಟುಮಾಡಿದ. ಸ್ಕಂದಪುರಾಣ ಹಾಗೇ ಹೇಳಿದೆ–

ಜಾಮಾತುಸ್ತುಷ್ಟಯೇ ಸ್ವಸ್ಯ ತದೀಯೇಭ್ಯಸ್ತದಾಂಬುಧೇಃ ।
ನಾಸೀತ್ ಕಿಮಪ್ಯದೇಯಂ ವೈ ಘನವದ್ ಘನವರ್ಷಿಣಃ ॥

'ತನ್ನ ಅಳಿಯನಾದ ಹರಿಯ ಸಂತೋಷಕ್ಕಾಗಿ ಅವನಿಚ್ಛೆಯಂತೆ ಅವನ ಕಡೆಯವರಾದ ದಿಬ್ಬಣದ ಸುರರಿಗೆ ವರುಣ ಏನು ಬೇಕಾದರೂ ಕೊಡಲು ಸಿದ್ಧನಿದ್ದ, ಮೋಡ ತನ್ನಲಿರುವ ನೀರನ್ನು ಸಂಕೋಚವಿಲ್ಲದೆ ಮಳೆಗರೆವಂತೆ'.

ಅಸುರರಿಗೆ ಮೊದಲಿಗೇ ಮದ್ಯವನ್ನು ಕೊಟ್ಟಿದ್ದ ವರುಣ ಆದುದರಿಂದ ಅವರು ಇನ್ನಾವ ರತ್ನವನ್ನೂ ಸಂಪಾದಿಸದೆ ಹೋದರು. ಮದ್ಯವ್ಯಸನಿಗಳು ಯಾವ ಉಚ್ಚ ಧ್ಯೇಯವನ್ನೂ ಸಾಧಿಸಿಕೊಳ್ಳಲಾರರು ತಾನೆ ?

ಬ್ರಹ್ಮವಾಯುಗಳಿಗೆ ಒಂಬತ್ತು ರತ್ನಗಳನ್ನು ಒಂದು ಹಾರದಲ್ಲಿತ್ತರೆ ಶಿವನಿಗೆ ಚಂದ್ರನೆಂಬ ಒಂದು ರತ್ನದಲ್ಲಿ ಅವನ ಒಂಬತ್ತು ಕಲೆಗಳನ್ನಿತ್ತ, ಚತುರನಾದ ವರುಣ. ಏಕೆಂದರೆ 'ಅಷ್ಟಮೀಸಾಮಿಸೋಮಾಂಕ' ಶಿವನೆಂದು ಪ್ರಸಿದ್ಧ. ಅಂದರೆ ಶಿವನ ತಲೆಯಲ್ಲಿರುವುದು ಅಷ್ಟಮೀ ಚಂದ್ರ. ಅವನಿಗೆ ಒಂಬತ್ತು ಕಲೆಗಳು. ಒಟ್ಟು ಚಂದ್ರನಿಗೆ ಹದಿನಾರು ಕಲೆಗಳು. ಅವುಗಳು ಮಂತ್ರಶಾಸ್ತ್ರದಲ್ಲಿ 'ಅಮೃತಾ ಮಾನದಾ

ಪೂಷಾ ಪುಷ್ಟಿ ತುಷ್ಟಿ ರತಿ ಧೃತಿ ಶಶಿನೀ ಚಂದ್ರಿಕಾ ಕಾಂತಿ ಜ್ಯೋತ್ಸ್ನಾ ಶ್ರೀ ಪ್ರೀತಿ ಅಂಗದಾ ಪೂರ್ಣಾ ಪೂರ್ಣಾಮೃತಾ' ಎಂದು ಪ್ರಸಿದ್ಧವಾಗಿವೆ. ಚಂದ್ರನ ಕಲೆಗಳು ಸದಾ ವೃದ್ಧಿಕ್ಷಯ ಹೊಂದುತ್ತಿದ್ದರೂ ಶಿವನ ಮಸ್ತಕದಲ್ಲಿ ಸದಾ ಅಷ್ಟಮಿ ಚಂದ್ರನೆ ಇರುತ್ತಾನೆ. ಅಲ್ಲಿ ಅವನಿಗೆ ವೃದ್ಧಿಕ್ಷಯಗಳಿಲ್ಲವೆಂದು ಲಿಂಗಪುರಾಣ ಹೇಳಿದೆ. ದಕ್ಷ ಶಾಪಕ್ಕೊಳಗಾಗಿ ಕ್ಷಯರೋಗ ಪೀಡಿತನಾದ ಚಂದ್ರ ಖಿನ್ನನಾಗಿ ಲೋಕದಿಂದ ಮರೆಯಾಗಿ ಹೋದನೆಂದೂ ಅವನನ್ನು ತಿರುಗಿ ಆವಿರ್ಭಾವಗೊಳಿಸಲೆಂದು ದೇವತೆಗಳು ಸಮುದ್ರ ಮಥನ ಮಾಡಿದರೆಂದೂ ಲಿಂಗಪುರಾಣ ಹೇಳಿದೆ. ವರುಣ ತನ್ನ ಮಗನಾದ ಚಂದ್ರ ಶಿವನ ತಲೆಯಲ್ಲಿ ಕುಳಿತು ವೃದ್ಧಿಕ್ಷಯವಿಲ್ಲದೆ ಸದಾ ಬೆಳಗಲಿ, ತನ್ನಲ್ಲಿ ಹುಟ್ಟಿದ ವಿಷ ಉಂಡು ಬಾಧೆಗೊಳಗಾದ ಶಿವನಿಗೂ ತಂಪಾಗಲಿ ಎಂದು ಬಗೆದು ಚಂದ್ರನ ಕಲೆಯನ್ನು ಶಿವನಿಗಿತ್ತ. ಇದು ವರುಣನ ಚಾತುರ್ಯ. ಇದರಿಂದ ಚಂದ್ರ ಒಂದಂಶದಿಂದ ವೃದ್ಧಿಕ್ಷಯವಿಲ್ಲದೆ ಶಿವನ ಮಸ್ತಕದಲ್ಲಿ ಬೆಳಗುತ್ತಾನೆ, ಇನ್ನೊಂದಂಶದಿಂದ ವೃದ್ಧಿಕ್ಷಯ ಯುಕ್ತನಾಗಿಯೇ ಇಪ್ಪತ್ತೇಳು ನಕ್ಷತ್ರರಾಣಿಯರ ಜೊತೆಗೆ ಆಕಾಶದಲ್ಲಿ ವಿಹರಿಸುತ್ತಾನೆ.

ವರುಣನಿಗೆ ಗೊತ್ತು, ಬ್ರಹ್ಮದೇವರು ತನ್ನ ಅಳಿಯನಾದ ಹರಿಗೆ ಕೌಸ್ತುಭ ಹಾರವಿತ್ತರೆಂದು. ಅದಕ್ಕೆ ನವರತ್ನದ ಹಾರವಿತ್ತ. ವಾಯುದೇವರೂ ಕಂಠೀಸರವಿತ್ತಿದ್ದರು. ಅವರಿಗೂ ಹಾರವನ್ನಿತ್ತ. ಶಿವ ಮಸ್ತಕದ ಮಣಿ ಇತ್ತಿದ್ದ. ಅವನಿಗೆ ಶಿರೋಭೂಷಣನಾದ ಚಂದ್ರನನ್ನೇ ಇತ್ತ.

ಅಥವಾ 'ಹಾರಂ ಸರಸ್ವತೀ ಪದ್ಮಮಜೋ ನಾಗಾಶ್ಚ ಕುಂಡಲೇ' ಎಂದು ಭಾಗವತ ಹೇಳುವಂತೆ ಸರಸ್ವತಿಯ ಮೂಲಕ ಬ್ರಹ್ಮದೇವರೂ ಭಾರತಿಯ ಮೂಲಕ ವಾಯುದೇವರೂ ಮದುಮಗಳಾದ ಮಹಾಲಕ್ಷ್ಮಿಗೆ ಹಾರತೊಡಿಸಿದ್ದರು. ಅದರಿಂದ ಚದುರನಾದ ವರುಣ ಅವರಿಗೆ ನವರತ್ನದ ಹಾರವನ್ನೇ ಇತ್ತ.

ಅಥವಾ 'ಶ್ರೀಮನ್ಮಧ್ವಮತೇ ಹರಿಃ ಪರತರಃ' ಎಂಬಂತೆ ಪ್ರಮೇಯ ನವರತ್ನ ಮಾಲೆಯೆನಿಸುವ ಸರ್ವಮೂಲಗ್ರಂಥ ಮಾಲೆಯನ್ನು ರಚಿಸಿ ವಾಯುದೇವರು ಹರಿಗೆ ಅರ್ಪಿಸಿದ್ದಾರೆ. ಬ್ರಹ್ಮದೇವರೂ ಪೂರ್ವಕಲ್ಪದಲ್ಲಿ ಹಾಗೆ ಮಾಡಿದ್ದಾರೆ. ಆ ಪ್ರಮೇಯ ನವರತ್ನಗಳು ಒಂದೊಂದೂ ಹಸಿವು ನೀರಡಿಕೆಗಳನ್ನು ಪೂರ್ತಿ ಕಳೆವ ಮೋಕ್ಷವನ್ನೇ ನೀಡಬಲ್ಲುವು. ಆದ್ದರಿಂದ ಚದುರನಾದ ವರುಣ ಹಸಿವು ನೀರಡಿಕೆ ಕಳೆವ ನವರತ್ನ ಮಾಲೆಯನ್ನೇ ಅವರಿಗೆ ಅರ್ಪಿಸಿದ.

ಹೀಗೆ ದೇವತೆಗಳಿಗೆ ಯಥಾಯೋಗ್ಯವಾಗಿ ರತ್ನಗಳನ್ನು ಉಡುಗೊರೆಯಿತ್ತ ವರುಣ ಚದುರನೇ ಸರಿ.

ಅಥವಾ ಈ ಚದುರನಾದ ವರುಣನ ಪಾತ್ರ ಚಿತ್ರಿಸಿ ಅಮೃತವನ್ನು ಬಂಧುಗಳಿಗೆ ವಿವಾಹ ಭೋಜನ ರೂಪದಿಂದಲೂ ಬೇರೆ ರತ್ನಗಳನ್ನು ಉಡುಗೊರೆ ರೂಪದಿಂದಲೂ ವರುಣನ ಕೈಯಿಂದ ಕೊಡಿಸಿದ ಶ್ರೀ ವಾದಿರಾಜರನ್ನೆ ಚದುರರೆನ್ನುವುದು ಸೂಕ್ತ.

'ಚದುರ ಹಾರವ ವಾಯುದೇವರಿಗಿತ್ತ' ಎಂಬುದು ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯ ಪ್ರಕಾಶನದಲ್ಲಿ ದೊರೆತ ಪಾಠಾಂತರ. ಪ್ರಚಲಿತ ಪಾಠ 'ಚದುರವರವ' ಎಂದಿದೆ. ಇದರ ಅರ್ಥ ಅಸ್ಪಷ್ಟ. ವರುಣ ವಾಯುದೇವರಿಗೆ ಏನು ವರ ಕೊಟ್ಟಾನು ? ಜೀವ ಜೀವೋತ್ತಮನಿಗೆ ವರ ಕೊಡುವನೆ ? ವಾಯುವಿನ ಬಲಜ್ಞಾನಾದಿ ಗುಣಗಳು ಸದಾ ಪೂರ್ಣವಾಗಿದ್ದು ಅನ್ಯರ ವರ ಶಾಪಗಳಿಂದ ವೃದ್ಧಿಹ್ರಾಸ ಹೊಂದುವಂತಿಲ್ಲ. ಆದ್ದರಿಂದ ಅಂಥ ವಾಯುದೇವರಿಗೆ ವರ ನೀಡಲು ಹೊರಟರೆ ವರುಣ ಚದುರ ಹೇಗಾದಾನು ? ಬೇರೆ ಎಲ್ಲ ದೇವತೆಗಳಿಗೆ ಬೇರೆ ಬೇರೆ ರತ್ನಗಳನ್ನು ನೀಡುತ್ತ ವಾಯುವಿಗೆ 'ವರ' ನೀಡಲು ಕಾರಣವಾದರೂ ಏನು ? ಎಂದು ಮುಂತಾಗಿ ಪ್ರಶ್ನೆಗಳಿಗೆ ಅವಕಾಶ ಈ ಪಾಠದಲ್ಲಿ ಉಂಟು. ಆದರೂ ಹೀಗೆ ಸಮಾಧಾನ ಹೇಳಬಹುದು–

'ವರ ನೀಡುವುದು ಸಾಮಾನ್ಯವಾಗಿ ದೊಡ್ಡವರು ಸಣ್ಣವರಿಗೆ ಎನ್ನುವುದು ನಿಜವೆ. ಆದರೂ ಸಣ್ಣವರು ದೊಡ್ಡವರಿಗೆ ವರ ನೀಡುವುದಿಲ್ಲ ಎನ್ನಲಾಗದು. ಮಹಾಭಾರತದಲ್ಲಿ ಗರುಡ ಶ್ರೀಹರಿಗೆ ವರ ನೀಡುತ್ತಾನೆ. 'ನಾನು ನಿನಗೆ ವಾಹನವಾಗಿ ನಿನ್ನನ್ನು ಹೊರುತ್ತೇನೆ' ಎಂಬುದೇ ಆ ವರ. 'ವರ' ಎಂದರೇನು ? ಸ್ವೀಕಾರಾರ್ಹವಾದುದೆಲ್ಲ ವರವೆ. ಗರುಡನು ಮಾಡುವ ಸೇವೆ ಹರಿಗೆ ಸ್ವೀಕಾರಾರ್ಹವೆ ತಾನೆ ? ವಾದಿರಾಜರು ಮಹಾಭಾರತ ಲಕ್ಷಾಲಂಕಾರದಲ್ಲಿ ಹಾಗೇ ಹೇಳಿದ್ದಾರೆ–

'ವ್ರಿಯಮಾಣಸ್ಯೈವ ವರತ್ವಾತ್ ತ್ವಯಾ ಮತ್ತೋ ವ್ರಿಯಮಾಣಾ
ಸೇವಾಪಿ ವರ ಏವೇತಿ ಭಾವೇನೋಕ್ತಂ ಭವತೋ ವರಂ ದದ್ಮೀತಿ ॥'

ವರುಣ ವಾಯುದೇವರಿಗೆ ಹೇಳಬಹುದು 'ನಿಮ್ಮ ಅಪೇಕ್ಷೆ ಏನು ಹೇಳಿ. ನಾನು ಸ್ವತಃ ಏನಾದರೂ ಕೊಡಲು ಹೋದರೆ ಅದು ತಮಗೆ ಅನಪೇಕ್ಷಿತವಾಗಿರುವ ಭಯ ಉಂಟು ತಾವೇ ತಮಗೆ ಬೇಕಾದುದನ್ನು ಆರಿಸಿಕೊಳ್ಳಿ'. ಇಲ್ಲಿ ವಿನಯವಿದೆ. ಚತುರತೆ ಇದೆ. ಬ್ರಹ್ಮದೇವರಿಗೆ ನವರತ್ನಮಾಲೆ ತಾನೇ ತೆಗೆದುಕೊಟ್ಟು ವಾಯುದೇವರಿಗೆ ಮಾತ್ರ ಬೇಕಾದ ವರ ನೀಡುವ ವಿನಯ ತೋರಲು ಕಾರಣವೇನೆಂದರೆ ಬ್ರಹ್ಮದೇವರು ಎಲ್ಲರಿಗೆ ಪಿತಾಮಹರಾಗಿ ನಿಂತು ಸಮುದ್ರಮಥನದ ಕಾರ್ಯ ನೋಡಿಕೊಂಡವರು ನಿಜ. ಆದರೆ ವಾಯುದೇವರು

ನಿರ್ವಹಿಸಿದ ಪಾತ್ರ ಅನನ್ಯಾದೃಶ ಕಣ್ವಶಾಪದಿಂದಾಗಿ ಸದಾ ತೆರೆಮರೆಯಲ್ಲಿಯೇ ಇದ್ದರೂ ಎಲ್ಲ ದೇವಾಸುರರ ಅಂತರ್ಯಾಮಿಯಾಗಿ ನಿಂತು ಸಕಲ ಕಾರ್ಯ ನಡೆಸಿದುದು ಮಾತ್ರವಲ್ಲದೆ ಹಾಲಾಹಲ ವಿಷವನ್ನೆಲ್ಲ ಕುಡಿದು ಲೋಕವನ್ನು ರಕ್ಷಿಸಿದವರು, ವಾಯುದೇವರು. ಅವರಿಗೆ ಬೇರೆ ದೇವತೆಗಳಿಗೆ ಕೊಟ್ಟಂತೆಯೆ ಏನಾದರೂ ಉಡುಗೊರೆ ಕೊಟ್ಟರೆ ಸರಿಯಾಗದು. ಏನು ಕೊಟ್ಟರೂ ಸಾಲದು ಚತುರನಾದ ವರುಣ 'ಏನು ಬೇಕಾದರೂ ಸ್ವೀಕರಿಸಿರೆ'ಂದು ವಿನಯದಿಂದ ಕೇಳಿಕೊಂಡ. ವಾಯುದೇವರು ಮಾತ್ರ ತಾವು ಬ್ರಹ್ಮಸಮರೆಂದು ಬ್ರಹ್ಮನು ಪಡೆದ ನವರತ್ನಮಾಲೆಗಿಂತ ಹೆಚ್ಚೇನನ್ನೂ ಸ್ವೀಕರಿಸಲಿಲ್ಲ, ಒಂದು ನವರತ್ನ ಮಾಲೆಯನ್ನೇ ಸ್ವೀಕರಿಸಿದರು ಎಂದರೆ ಅನುಪಪತ್ತಿ ಏನೂ ಇಲ್ಲ

– ೧೦೩ –

**ಶಕ್ರ ಮೊದಲಾದ ದಿಕ್ಪಾಲಕರಿಗೆ**
**ಸೊಕ್ಕಿದ ಚೌದಂತ ಗಜಂಗಳ ।**
**ಉಕ್ಕಿದ ಮನದಿಂದ ಕೊಟ್ಟ ವರುಣ ಮದು–**
**ಮಕ್ಕಳಾಯುಷ್ಯವ ಬೆಳೆಸೆಂದ ॥**

ವರುಣನು ಇಂದ್ರಾದಿ ದಿಕ್ಪಾಲಕರಿಗೆ ನಾಲ್ಕು ದಂತಗಳುಳ್ಳ ಮದಭರಿತವಾದ ಆನೆಗಳನ್ನು ಅತ್ಯಂತ ಆದರದಿಂದ ಕೊಟ್ಟ ಮತ್ತು ಮದುಮಕ್ಕಳಿಗೆ ದೀರ್ಘಾಯುಷ್ಯ ನೀಡಿರೆಂದು ಬೇಡಿದ

ಪೂರ್ವದಿಕ್ಕಿನಲ್ಲಿ ಇಂದ್ರ ವಾಮನನನ್ನು ಪೂಜಿಸುತ್ತ ಆ ದಿಕ್ಕಿಗೆ ಅಧಿಪತಿಯಾಗಿದ್ದಾನೆ ಆಗ್ನೇಯದಲ್ಲಿ ಅಗ್ನಿ ಪರಶುರಾಮನನ್ನೂ, ದಕ್ಷಿಣದಲ್ಲಿ ಯಮನು ಶ್ರೀರಾಮನನ್ನೂ, ನೈಋತ್ಯದಲ್ಲಿ ನಿರ್‌ಋತಿ ಯಮಪುತ್ರನಾದ ಶ್ರೀಕೃಷ್ಣನನ್ನೂ, ಪಶ್ಚಿಮದಲ್ಲಿ ವರುಣನು ನಾರಾಯಣನನ್ನೂ, ವಾಯುವ್ಯದಲ್ಲಿ ಪ್ರವಹವಾಯು ನೃಸಿಂಹನನ್ನೂ, ಉತ್ತರದಲ್ಲಿ ಕುಬೇರನು ಕಲ್ಕಿಯನ್ನೂ, ಈಶಾನ್ಯದಲ್ಲಿ ಶಿವನು ಸಂಕರ್ಷಣನನ್ನೂ ಆರಾಧಿಸುತ್ತ ಆಯಾ ದಿಕ್ಕುಗಳಿಗೆ ಅಧಿಪತಿಗಳಾಗಿದ್ದಾರೆ. ಇವರಲ್ಲಿ ಪಶ್ಚಿಮ ದಿಕ್ಪಾಲಕನಾಗಿ ವರುಣ ತಾನೇ ಇರುವುದರಿಂದ ಉಳಿದವರಿಗೆ ನಾಲ್ಕು ದಂತಗಳ ಮದ್ದಾನೆಗಳನ್ನಿತ್ತು ಸತ್ಕರಿಸಿ ಮದುಮಕ್ಕಳನ್ನು ದೀರ್ಘಾಯುಷಿಗಳಾಗಿರೆಂದು ಹರಸಲು ಬೇಡುತ್ತಾನೆ ವರುಣ.

ಐರಾವತಃ ಪುಂಡರೀಕೋ ವಾಮನಃ ಕುಮುದೋಽಂಜನಃ ।
ಪುಷ್ಪದಂತಃ ಸಾರ್ವಭೌಮಃ ಸುಪ್ರತೀಕಶ್ಚ ದಿಗ್ಗಜಾಃ ॥

ಪೂರ್ವಾದಿ ಎಂಟು ದಿಕ್ಕುಗಳಲ್ಲಿ ಕ್ರಮವಾಗಿ ಐರಾವತ, ಪುಂಡರೀಕ, ವಾಮನ, ಕುಮುದ, ಅಂಜನ, ಪುಷ್ಪದಂತ, ಸಾರ್ವಭೌಮ, ಸುಪ್ರತೀಕಗಳೆಂಬ ಎಂಟು ದಿಗ್ಗಜಗಳಿವೆ. ಅವೆಲ್ಲವೂ ಲೋಕಗಳನ್ನು ಧರಿಸುವ ಮಹಾಬಲಿಷ್ಠರಾದ ಕರ್ಮಜ ದೇವತೆಗಳು, ಒಳ್ಳೆಯ ತತ್ವಜ್ಞಾನಿಗಳು. ಸಗರ ಚಕ್ರವರ್ತಿಯ ಮೊಮ್ಮಗನಾದ ಅಂಶುಮಂತನು ಪಾತಾಳಕ್ಕೆ ಹೋದಾಗ ಅಲ್ಲಿ ಪೂರ್ವ ದಕ್ಷಿಣ ಪಶ್ಚಿಮ ಉತ್ತರ ದಿಕ್ಕುಗಳಲ್ಲಿ ಕ್ರಮವಾಗಿ ವಿರೂಪಾಕ್ಷ ಮಹಾಪದ್ಮ ಸೌಮನಸ ಭದ್ರ ಎಂಬ ನಾಲ್ಕು ದಿಗ್ಗಜಗಳನ್ನು ಕಂಡನಂತೆ. ವಾಲ್ಮೀಕಿ ರಾಮಾಯಣದಲ್ಲಿ ಅವುಗಳನ್ನು ಹೀಗೆ ವರ್ಣಿಸಲಾಗಿದೆ–

ದೇವದಾನವ ರಕ್ಷೋಭಿಃ ಪಿಶಾಚ ಪತಗೋರಗೈಃ ।
ಪೂಜ್ಯಮಾನಂ ಮಹಾತೇಜಾ ದಿಶಾಗಜಮಪಶ್ಯತ ॥

ತೈಶ್ಚ ಸರ್ವೈರ್ದಿಶಾಪಾಲೈರ್ವಾಕ್ಯಜ್ಞೈರ್ವಾಕ್ಯಕೋವಿದೈಃ ।
ಪೂಜಿತಃ ಸಹಯಶ್ಚೈವಾಗಂತಾಸೀತ್ಯಭಿಚೋದಿತಃ ॥

'ದೇವ ದಾನವ ರಾಕ್ಷಸ ಪಿಶಾಚ ಪಕ್ಷಿ ಸರ್ಪಾದಿಗಳಿಂದ ಪೂಜಿತವಾಗುತ್ತಿರುವ ದಿಗ್ಗಜವನ್ನು ಅಂಶುಮಂತ ಕಂಡ, ಎಲ್ಲ ದಿಗ್ಗಜಗಳೂ ಶಾಸ್ತ್ರಜ್ಞಾನಿಗಳು, ವಾಗ್ಮಿಗಳು. ಅಂಶುಮಂತನನ್ನು ಅವು ಹರಸಿದವು, 'ನೀನು ಯಜ್ಞಾಶ್ವವನ್ನು ಪಡೆದು ಹಿಂತಿರುಗುವಿ' ಎಂದು'.

ಐರಾವತ ವಾಮನ ಅಂಜನ ಸಾರ್ವಭೌಮ ದಿಗ್ಗಜಗಳೇ ವಿರೂಪಾಕ್ಷ ಮುಂತಾದ ಹೆಸರಿನಿಂದಲೂ ಕರೆಯಲ್ಪಡುತ್ತವೆ. ಬೇರೆ ಅಲ್ಲ ಎಂದು ಇಲ್ಲಿ ಗ್ರಹಿಸಬಹುದು

'ಕಾರ್ತಿಕ ಬಹುಳಾಷ್ಟಮೀ ಆಶ್ಲೇಷಾ ನಕ್ಷತ್ರವಿರುವಾಗ ರಾತ್ರಿ ಹುತ್ತಗಳಲ್ಲಿ ಪಾಯಸದಿಂದ ನಾಗರನ್ನು ಆರಾಧಿಸಿದರೆ ಭೂಭಾರ ಹೊತ್ತು ಕ್ಲೇಶಪಡುತ್ತಿರುವ ನಮಗೆ ಸ್ವಲ್ಪ ಶ್ರಮಪರಿಹಾರವಾಗುತ್ತದೆ.' ಎಂದು ಅನುಶಾಸನ ಪರ್ವದಲ್ಲಿ ದಿಗ್ಗಜಗಳು ಧರ್ಮೋಪದೇಶ ಮಾಡುತ್ತವೆ. ಆದ್ದರಿಂದ ದಿಗ್ಗಜಗಳು ಜ್ಞಾನಿಗಳಾದ ಕರ್ಮಜ ದೇವತೆಗಳೆನ್ನುವುದು ಉಚಿತವೆ.

ಬೀಷ್ಮಪರ್ವದಲ್ಲಿ, ದಿಗ್ಗಜಗಳು ಭೂಮಿಯ ಮೇಲಿವೆ. ವಾದಿರಾಜರು ಲಕ್ಷಾಲಂಕಾರದಲ್ಲಿ ಹೇಳುವಂತೆ ಭೂಮಿ ದುಂಡಗೆ ಚಪ್ಪಟೆಯಾಗಿದ್ದು ಸುತ್ತಲೂ ಅಂಚಿನಲ್ಲಿ ಮೂವತ್ತಮೂರು ಸಣ್ಣ ದುಂಡಗಿನ ಅರ್ಧಚಂದ್ರಾಕಾರದ ಭೂಭಾಗಗಳಿವೆ ವಿಷ್ಣುವಿನ ಸುದರ್ಶನ ಚಕ್ರದ ಅಂಚಿನಲ್ಲಿರುವ ದುಂಡಗಿನ ಭಾಗಗಳಂತೆಯೇ ಇವೂ ಕಾಣುವುದರಿಂದ ಭೂಮಿಯನ್ನು 'ಭೂಚಕ್ರ' ಎಂದು

ವ್ಯವಹರಿಸುತ್ತೇವೆ ಆ ಮೂವತ್ತುಮೂರು ಭೂಭಾಗಗಳಲ್ಲಿ ಮೂವತ್ತಮೂರು ಪ್ರಧಾನ ದೇವತೆಗಳು ಇರುತ್ತಾರೆ. ಅಲ್ಲಿಯೆ ದಿಗ್ಗಜಗಳು ವಾಸವಾಗಿದ್ದು, ಗಾಳಿಯು ಭೂಮಿಯಲ್ಲಿ ಎಲ್ಲ ದಿಕ್ಕುಗಳಿಂದಲೂ ಮೇಲೆ ಕೆಳಗೆ ಅಡ್ಡವಾಗಿ ಎಂದೆಲ್ಲ ಅವ್ಯವಸ್ಥಿತವಾಗಿ ಬೀಸುವಾಗ ಆ ಎಲ್ಲ ಗಾಳಿಯನ್ನು ಈ ದಿಗ್ಗಜಗಳು ಸೊಂಡಿಲಿನಿಂದ ಒಳಕ್ಕೆ ಸೆಳೆದುಕೊಂಡು ಯಾವ ದಿಕ್ಕಿಗೆ ಯಾವಾಗ ಗಾಳಿ ಬೀಸಬೇಕಾಗಿದೆಯೋ ಆಗ ಆ ದಿಕ್ಕಿಗೇ ವ್ಯವಸ್ಥಿತವಾಗಿ ಗಾಳಿಯನ್ನು ಸೊಂಡಿಲಿನಿಂದ ಹೊರಬಿಡುತ್ತವೆ ಇದರಿಂದ ಕಾಲಕಾಲಕ್ಕೆ ಮಳೆ ಮೋಡಗಳು ಗಾಳಿಯಲ್ಲಿ ವ್ಯವಸ್ಥಿತವಾಗಿ ಹಾರಿ ಬಂದು ಮಳೆ ಸುರಿಸುತ್ತವೆ. ಹೀಗೆ ಲೋಕ ಧಾರಣೆಯ ಕಾರ್ಯವನ್ನು ದಿಗ್ಗಜಗಳು ಮಾಡುತ್ತವೆ. ಗಾಳಿಯನ್ನು ನಿಯಂತ್ರಿಸಿ ಪ್ರಾಣಿಗಳ ಮನುಷ್ಯರ ಉಳಿವಿಗೆ ಕಾರಣವಾಗಬಲ್ಲ ದಿಗ್ಗಜಗಳು ಆಯುಷ್ಯವನ್ನು ಬೆಳೆಸುವುದು ಅಶಕ್ಯವೇನಲ್ಲ ವರುಣ ಇಂಥ ದಿಗ್ಗಜಗಳನ್ನು ದಿಕ್ಪಾಲಕರಿಗೆ ನೀಡಿ ಮದುಮಕ್ಕಳ ಆಯುಷ್ಯ ಬೆಳೆಸಿರೆಂದು ಬೇಡಿದ.

ಸಮುದ್ರ ಮಥನದಿಂದ ಈ ದಿಗ್ಗಜಗಳು ಉದಿಸಿದ ಮಾತ್ರಕ್ಕೆ ಅವು ಮೊದಲಿಗೆ ಇರಲಿಲ್ಲವೆಂದಾಗುವುದಿಲ್ಲ. ಅತ್ರಿನೇತ್ರ ಸಮುದ್ಭವನಾದ ಚಂದ್ರ ಮೊದಲಿಗೇ ಇದ್ದರೂ ಇನ್ನೊಂದು ರೂಪದಿಂದ ಸಮುದ್ರದಿಂದ ಉದ್ಭವಿಸಿ ಬಂದಂತೆ ಈ ದಿಗ್ಗಜಗಳೂ ಸಾಂಶ ದೇವತೆಗಳಾಗಿದ್ದು ಮೊದಲಿಗೆ ಆಯಾ ದಿಕ್ಕುಗಳಲ್ಲಿದ್ದೇ ಮಥನಕಾಲದಲ್ಲಿ ಸಮುದ್ರದಿಂದ ಉದಿಸಿ ಬಂದಿರಬಹುದು. ಹೀಗೆ ಹೇಳದಿದ್ದರೆ ರಾಮಾಯಣದಲ್ಲಿ ರಸಾತಳದಲ್ಲಿದ್ದ ದಿಗ್ಗಜಗಳು ಮಹಾಭಾರತದಲ್ಲಿ ಭೂಮಿಯ ಮೇಲೆ ಹೇಗೆ ಗೋಚರವಾಗುತ್ತವೆ ? ಸ್ವರ್ಗದಲ್ಲಿ ಐರಾವತ ಇಂದ್ರನ ವಾಹನವಾಗಿ ಹೇಗೆ ಸಂಚರಿಸುತ್ತದೆ ? ಸುಪ್ರತೀಕ ಈಶಾನ್ಯದ ದಿಗ್ಗಜ. ಅದು ಉತ್ತರ ದಿಕ್ಪಾಲಕನಾದ ಕುಬೇರನಿಗೆ ಹೇಗೋ ಸಿಕ್ಕತ್ತು. ಅದನ್ನು ನರಕಾಸುರ ಅಪಹರಿಸಿದಾಗ ನರಕಾಸುರನ ಮಗ ಭಗದತ್ತನಾಗಿ ಅವತರಿಸಿ ನರಕಾಸುರನ ಅನಂತರ ತಾನು ಆ ಆನೆಯ ಮೇಲೆ ಸಂಚರಿಸುತ್ತಿದ್ದ. ಕುರುಕ್ಷೇತ್ರ ಯುದ್ಧದಲ್ಲಿ ಆನೆ ಸಹಿತವಾಗಿ ಭಗದತ್ತ ಅಸು ನೀಗಿದ ದಿಗ್ಗಜ ಪಾತಾಳದಲ್ಲಿ ಸ್ಥಿರವಾಗಿ ಒಂದೆಡೆ ನಿಂತೇ ಇದ್ದರೆ ಇದೆಲ್ಲ ಕತೆ ಅಸಂಗತವಾದೀತು. ಆದ್ದರಿಂದ ಬೇರೆ ಬೇರೆ ಅಂಶಗಳಿಂದ ಬೇರೆ ಬೇರೆ ಕಡೆ ಇರುತ್ತದೆ ಎಂದು ಗ್ರಹಿಸಬೇಕು.

ಅಥವಾ ಐರಾವತ ಸುಪ್ರತೀಕ ಮುಂತಾದವು ದಿಗ್ಗಜಗಳ ಕುಲನಾಮವೆನ್ನಬೇಕು. ಸುಪ್ರತೀಕ ಕುಲದಲ್ಲಿಯೇ ಒಳಪಂಗಡಗಳು ಐರಾವತ ವಾಮನ ಕುಮುದ ಅಂಜನಗಳು ಎಂದು ಉದ್ಯೋಗಪರ್ವದಲ್ಲಿ ಹೇಳಿದೆ–

ಐರಾವಣೋ ನಾಗರಾಜೋ ವಾಮನ ಕುಮುದೋಂಽಜನಃ ।
ಪ್ರಸೂತಾಃ ಸುಪ್ರತೀಕಸ್ಯ ವಂಶೇ ವಾರಣಸತ್ತಮಾಃ ॥

ಈಗ ರಾಮಾಯಣದಲ್ಲಿ ಐರಾವತಾದಿಗಳನ್ನು ವಿರೂಪಾಕ್ಷ ಎಂದು ಮುಂತಾಗಿ ಕರೆದುದು ಯುಕ್ತವೆನಿಸುತ್ತದೆ. 'ಐರಾವತ' ಎಂಬುದು ಕುಲನಾಮ 'ವಿರೂಪಾಕ್ಷ' ವ್ಯಕ್ತಿಯ ನಾಮ.

ಹೀಗೆ ಐರಾವತಾದಿ ಕುಲಕ್ಕೆ ಸೇರಿದ ಅಸಂಖ್ಯ ಮದ್ದಾನೆಗಳು ಸಮುದ್ರದಿಂದ ಉದಿಸಿ ಬಂದಿದ್ದರಿಂದ ಅವನ್ನು ದಿಕ್ಪಾಲಕರಿಗೆ ವರುಣ ಕೊಟ್ಟಿದ್ದಾನೆ.

ದಿಕ್ಪಾಲಕರು ಇಂದ್ರಾದಿಗಳೆನ್ನುವುದು ಪ್ರಸಿದ್ಧ. ಉತ್ತರದಿಕ್ಕಿಗೆ ಕುಬೇರ ಅಧಿಪತಿ ಎನ್ನುವುದೂ ಪ್ರಸಿದ್ಧ ವರಾಹಪುರಾಣ ಹೇಳುತ್ತದೆ.–

ಬ್ರಹ್ಮಾ ಸಸರ್ಜ ತೂರ್ಣಂ ತಾನ್ ಲೋಕಪಾಲಾನ್ ಮಹಾಬಲಾನ್ ।
ಏಕಾಮಿಂದ್ರಾಯ ಸ ಪ್ರಾದಾತ್ ಅಗ್ನಯೇಽನ್ಯಾಂ ಯಮಾಯ ಚ ।
ನಿರ್‌ಋತಾಯ ಚ ದೇವಾಯ ವರುಣಾಯ ಮಹಾತ್ಮನೇ ॥
ವಾಯವೇ ಧನದೇಶಾಯ ಈಶಾನಾಯ ಚ ಸಾಪ್ರತ ।
ಊರ್ಧ್ವಂ ಸ್ವಯಮಧಿಷ್ಠಾಯ ಶೇಷಾಯಾಧೋ ವ್ಯವಸ್ಥಿತಾಂ ॥

ಆದರೆ ಕೆಲವೆಡೆ ಉತ್ತರದಿಕ್ಕಿಗೆ 'ಸೋಮ' ಅಧಿಪತಿ ಎಂದಿದೆ. ಸಂಧ್ಯಾವಂದನೆ ದೇವಪೂಜೆಗಳಲ್ಲಿ ಸೋಮನಿಗೇ ನಮಸ್ಕಾರ. ಉತ್ತರದಿಕ್ಕಿಗೆ 'ಸೌಮ್ಯಾ' ಎಂಬ ಹೆಸರೂ ಇದಕ್ಕೆ ಪುಷ್ಟಿ ನೀಡುತ್ತದೆ. ರಾಮಾಯಣದಲ್ಲಿ–

ಖನಂತಃ ಸಮುಪಕ್ರಾಂತಾ ದಿಶಂ ಸೋಮವತೀಂ ತದಾ ।

ಎನ್ನುವಲ್ಲಿ ಉತ್ತರದಿಕ್ಕು ಸೋಮನ ಆಡಳಿತಕ್ಕೆ ಸೇರಿದೆ ಎಂದಿದೆ. ಕುಬೇರನಿಗೂ 'ಸೋಮ' ಎಂಬ ಹೆಸರು ಸಲ್ಲುತ್ತದೆ ಎನ್ನುವುದು ನಿಜವೇ. ಆದರೂ 'ಸೋಮಾಯ ನಕ್ಷತ್ರಾಧಿಪತಯೇ' ಎಂದು ಆವರಣಪೂಜೆ, ಹೋಮಾದಿಗಳಲ್ಲಿ ಹೇಳಿರುವುದರಿಂದ ಇಲ್ಲಿ ಸೋಮನೆಂದರೆ ನಕ್ಷತ್ರಾಧಿಪತಿಯಾದ ಚಂದ್ರನೆ ಇರಬೇಕು ಆದ್ದರಿಂದ ಉತ್ತರ ದಿಕ್ಪಾಲ ಕುಬೇರನೇ ? ಅಥವಾ ಚಂದ್ರನೇ ?

ಇಬ್ಬರೂ ಅಧಿಪತಿಗಳೆನ್ನಬೇಕಾಗುತ್ತದೆ. ಆದ್ದರಿಂದಲೇ ಸಂಧ್ಯಾಭಾಷ್ಯದಲ್ಲಿ 'ಸೋಮಾದ್ಯಾ ಉತ್ತರಾಃ ಸ್ಮೃತಾಃ' ಎಂಬ ಷಟ್ತ್ರಿಂಶ ಭಾಷ್ಯವಚನವನ್ನಾಧರಿಸಿ ಉತ್ತರದಿಕ್ಕಿಗೆ ಕಲ್ಕಿಮೂರ್ತ್ಯುಪಾಸಕರಾದ ಚಂದ್ರ ಕುಬೇರರಿಬ್ಬರೂ ಅಧಿಪತಿಗಳೆಂದಿದೆ.

ದಿಕ್ಕುಗಳು ಎಂಟೇ ಅಲ್ಲ. ಹನ್ನೊಂದು ದಿಕ್ಕುಗಳಿವೆ. ಊರ್ಧ್ವ ಅಧಃ ಅವಾಂತರ ಅಂದರೆ ಮೇಲೆ ಕೆಳಗೆ ಮಧ್ಯ ಎಂದು ಮೂರು ದಿಕ್ಕುಗಳನ್ನೂ ಅಷ್ಟದಿಕ್ಕುಗಳಿಗೆ ಸೇರಿಸಿಕೊಳ್ಳಬೇಕು. ಊರ್ಧ್ವದಿಕ್ಕಿಗೆ ನಾರಾಯಣೋಪಾಸಕರಾದ ಬ್ರಹ್ಮ ಗರುಡ ಮನ್ಮಥರು ಅಧಿಪತಿಗಳು. ಅಧೋದಿಕ್ಕಿಗೆ ಶೇಷಶಾಯಿಯ ಉಪಾಸಕರಾದ ಶೇಷ ಮತ್ತು ಮಿತ್ರರು. ಅವಾಂತರ ದಿಕ್ಕಿಗೆ ಸಂಕರ್ಷಣೋಪಾಸಕನಾದ ಗಣಪತಿ ಮತ್ತು ಅನಿರುದ್ಧೋಪಾಸಕರಾದ ಮರುತ್ತುಗಳು. ಇವರೆಲ್ಲರಿಗೂ ವರುಣ ಮದ್ದಾನೆಗಳನ್ನಿತ್ತು ಸತ್ಕರಿಸಿದ.

'ಶಕ್ರ ಮೊದಲಾದ ದಿಕ್ಪಾಲಕರಿಗೆ' ಎಂಬಲ್ಲಿ ಕೆಲವೆಡೆ 'ಶುಕ್ರ ಮೊದಲಾದ ದಿಕ್ಪಾಲಕರಿಗೆ' ಎಂದೂ ಪಾಠವಿದೆ. ಇದೂ ಅಸಂಗತವಲ್ಲ. ಏಕೆಂದರೆ,

ಸೂರ್ಯಃ ಶುಕ್ರಃ ಕ್ಷಮಾಪುತ್ರಃ ಸೈಂಹಿಕೇಯಃ ಶನಿಃ ಶಶೀ ।
ಸೌಮ್ಯ ಸ್ತ್ರಿದಶಮಂತ್ರೀ ಚ ಪ್ರಾಚ್ಯಾದಿ ದಿಗಧೀಶ್ವರಾಃ ॥

ಸೂರ್ಯ ಶುಕ್ರ ಕುಜ ರಾಹು ಶನಿ ಚಂದ್ರ ಬುಧ ಗುರು ಇವರು ಜ್ಯೋತಿಃಶಾಸ್ತ್ರದಲ್ಲಿ ಕ್ರಮವಾಗಿ ಪೂರ್ವಾದಿ ಅಷ್ಟದಿಕ್ಪಾಲಕರು. ಅವರಿಗೂ ವರುಣ ಸತ್ಕಾರ ಮಾಡಿದ್ದಾನೆ.

ಇಲ್ಲಿ ಮೊದಲಿಗೆ ಪೂರ್ವದಿಕ್ಪಾಲನಾದ ಸೂರ್ಯನನ್ನು ಹೇಳುತ್ತ 'ಸೂರ್ಯ ಮೊದಲಾದ ದಿಕ್ಪಾಲಕರಿಗೆ' ಎನ್ನಬೇಕಾಗಿತ್ತು. ಆದರೆ ದೈತ್ಯಗುರುಗಳಾದ್ದರಿಂದ ಶುಕ್ರಾಚಾರ್ಯರಿಗೆ ಅಗ್ರಪೂಜೆ. ದೈತ್ಯರನ್ನೆಲ್ಲ ತಾನು ತನ್ನಳಿಯನಾದ ನಾರಾಯಣನ ಸಹಾಯದಿಂದ ವಂಚಿಸಿ ಅಮೃತ ನೀಡದೆ ಹೊಡೆದೋಡಿಸಿದ ಬಳಿಕ ಈಗ ಆ ದೈತ್ಯರ ಗುರು ಶುಕ್ರಾಚಾರ್ಯರಿಗೆ ಅಸಮಾಧಾನವಾಗಬಾರದೆಂದು ಮೊದಲು ಸತ್ಕಾರಮಾಡಿದ್ದಾನೆ. ಸೂರ್ಯ, ರಾಹು ಶಿರಶ್ಛೇದಕ್ಕೆ ಕಾರಣನಾದ್ದರಿಂದ ಶುಕ್ರಾಚಾರ್ಯರ ಸಮ್ಮುಖದಲ್ಲಿ ಅಂಥ ಸೂರ್ಯನಿಗೆ ಮೊದಲು ಸತ್ಕಾರ ಮಾಡಲೂ ಹಿಂಜರಿದಿದ್ದಾನೆ.

ಗ್ರಹಗಳು ಪ್ರಸನ್ನರಾದರೆ ಆಯುಷ್ಯ ಹೆಚ್ಚುವುದರಿಂದ ಗ್ರಹಗಳಿಗೆ ವರುಣ ಕೇಳಿಕೊಳ್ಳುತ್ತಾನೆ 'ಮದುಮಕ್ಕಳಾಯುಷ್ಯ ಬೆಳೆಸಿ' ಎಂದು. ಪ್ರಕೃತ ಲಕ್ಷ್ಮೀನಾರಾಯಣರು ಸ್ವತಃ 'ಸಕಲಗ್ರಹಬಲ'ರು ಅವರಿಗೆ ಬೇರೆ ಗ್ರಹಗಳು ಆಯುರ್ದಾನ ಮಾಡಬೇಕಾಗಿಲ್ಲ. ಇಂದ್ರಾದಿ ದಿಕ್ಪಾಲರೂ ಅಷ್ಟೇ. ಆದರೆ ಅವತಾರದಲ್ಲಿ ಇದು ಅನುಚಿತವೇನಲ್ಲ. ವೆಂಕಟೇಶ ಕಲ್ಯಾಣದಲ್ಲಿ 'ದೀರ್ಘಾಯುರ್ಭವ ಗೋವಿಂದ' ಎಂದು ಹರಸುತ್ತ ಸುಮಂಗಲಿಯರು ಶ್ರೀನಿವಾಸನಿಗೆ ಮಂಗಳಸ್ನಾನ ಮಾಡಿಸುತ್ತಾರೆ. ಹಾಗೇ ಇದು. ವಸ್ತುತಃ ಆಯುಷ್ಯ

ಇಲ್ಲಿ ಲಕ್ಷ್ಮೀನಾರಾಯಣರು ಅವತಾರಲೀಲೆ ತೋರುವ ಅವಧಿ ಅದನ್ನು ವಿಸ್ತರಿಸಲು ಎಲ್ಲ ದೇವತೆಗಳೂ ಗ್ರಹರೂ ಕೂಡಿ ತನ್ನ ಪರವಾಗಿ ಪ್ರಾರ್ಥಿಸಲೆಂದು ವರುಣನ ಆಸೆ. ಎಲ್ಲರ ಪ್ರಾರ್ಥನೆ ಕೇಳಿದಾಗ ಲಕ್ಷ್ಮೀನಾರಾಯಣರು ಅದನ್ನು ನಡೆಸಿ ಕೊಡದಿರುತ್ತಾರೆಯೆ ?

– ೧೦೪ –

**ಮತ್ತೆ ದೇವೇಂದ್ರಗೆ ಪಾರಿಜಾತವನಿತ್ತ**
**ಚಿತ್ತವ ಸೆಳೆವಪ್ಸರ ಸ್ತ್ರೀಯರ ।**
**ಹತ್ತು ಸಾವಿರ ಕೊಟ್ಟ ವರುಣ ದೇವ ಹರಿ**
**ಭಕ್ತಿಯ ಮನದಿ ಬೆಳೆಸೆಂದ ॥**

ಎಲ್ಲ ದಿಕ್ಪಾಲರಿಗೂ ಸೊಕ್ಕಿದ ಚೌದಂತ ಗಜಗಳನ್ನಿತ್ತ ಬಳಿಕ ಮತ್ತೆ ದೇವೇಂದ್ರನಿಗೆ ಪಾರಿಜಾತವೃಕ್ಷವನ್ನು ವರುಣದೇವನಿತ್ತ. ಚಿತ್ತಾಕರ್ಷಕರಾದ ಹತ್ತು ಸಾವಿರ ಅಪ್ಸರೆಯರನ್ನೂ ಕೊಟ್ಟ. ಪ್ರತಿಫಲವಾಗಿ ಬೇರೇನನ್ನೂ ಬೇಡದೆ 'ನನ್ನ ಮನಸ್ಸಿನಲ್ಲಿ ಹರಿಭಕ್ತಿ ವೃದ್ಧಿಯಾಗುವಂತೆ ಮಾಡು' ಎಂದು ಬೇಡಿಕೊಂಡ.

ಭಗವದ್ಗೀತೆಯಲ್ಲಿ ಹೇಳಿದ ನಿಷ್ಕಾಮ ಕರ್ಮವೆಂದರೇ ಇದು. ಕರ್ಮಮಾಡುವಾಗ ವಿಷಯಸುಖ ಕಾಮನೆ ಏನೂ ಇರಕೂಡದು ಹರಿಭಕ್ತಿಕಾಮನೆ ಇಲ್ಲದೆಯೂ ಇರಕೂಡದು. ವರುಣ 'ಚದುರ'ನೆಂದು ಹಿಂದಿನ ನುಡಿಯಲ್ಲಿಯೆ ಹೇಳಿದೆ 'ಯೋಗಃ ಕರ್ಮಸು ಕೌಶಲಂ' ಎನ್ನುವಂತೆ ಕೌಶಲವನ್ನು ತೋರುತ್ತಾನೆ ವರುಣ ನಿಷ್ಕಾಮನೆಯಿಂದ ಕರ್ಮವಾಚರಿಸುವುದೇ ಕೌಶಲ. ನಿಷ್ಕಾಮನೆಯಿಂದ ನೂರು ಅಶ್ವಮೇಧಯಾಗ ಮಾಡಿದ ದೇವೇಂದ್ರನನ್ನು ಚದುರನಾದ ವರುಣ ಸತ್ಕರಿಸುತ್ತಿದ್ದಾನೆ. ನಿಷ್ಕಾಮನೆಯಿಂದ ಹರಿಪ್ರೀತಿಗಾಗಿ ಯಾಗಾದಿ ಕರ್ಮಮಾಡುವವರೆಲ್ಲರಿಗೂ ಈ ರೀತಿ ಮನಸ್ಸನ್ನು ಪ್ರೇರಿಸುವವ ದೇವೇಂದ್ರನೆಂದೇ ಅವನನ್ನು ಸತ್ಕರಿಸಿ ಮನದಲ್ಲಿ ಹರಿಭಕ್ತಿಯನ್ನು ಬೇಡುತ್ತಿದ್ದಾನೆ, ಚದುರನಾದ ವರುಣ

ಚಿತ್ತವ ಸೆಳೆವ ಅಪ್ಸರ ಸ್ತ್ರೀಯರನ್ನು ಕೊಟ್ಟು ಚಿತ್ತದಲ್ಲಿ ಹರಿಭಕ್ತಿಯನ್ನು ಬೇಡುವುದೂ ಒಂದು ಚಾತುರ್ಯವೆ ? ಹೇಗೆ ? ಸಮುದ್ರಮಥನಕಾರ್ಯದಲ್ಲಿ ದೇವತೆಗಳಿಗೆ ನಾಯಕ ದೇವೇಂದ್ರ. ಅಸುರರಿಗೆ ನಾಯಕ ಬಲಿಚಕ್ರವರ್ತಿ. ಬ್ರಹ್ಮ ವಾಯು ಗರುಡ ಶೇಷ ರುದ್ರರು ಹಿರಿಯ ಮಾರ್ಗದರ್ಶಕರು. ಉಳಿದ ದೇವತೆಗಳೆಲ್ಲ ಇಂದ್ರನ ನಾಯಕತ್ವದಲ್ಲಿ ಶ್ರಮಿಸಿದವರು. ಆದ್ದರಿಂದ ದೇವೇಂದ್ರನಿಗೇ ವಿಶೇಷ ಸತ್ಕಾರ ಉಚಿತ. ಅದನ್ನು ಮಾಡಿದ್ದಾನೆ ಚತುರನಾದ ವರುಣ. ಆದರೆ, ಪಾರಿಜಾತದಂಥ ಸುಗಂಧದ ಹೂಗಳನ್ನೂ ಅಪ್ಸರೆಯರಂಥ

ಮನಸೆಳೆವ ವೇಶ್ಯೆಯರನ್ನೂ ಕೊಟ್ಟು ಹರಿಭಕ್ತಿಯನ್ನು ಬಯಸಬಹುದೆ ? ವಿಷಯ ಪದಾರ್ಥ ನೀಡಿ ವಿಷಯಸುಖ ಬಯಸಬೇಕಲ್ಲವೆ ?

ಈ ಪ್ರಶ್ನೆ ಪಾರಿಜಾತದ ಮತ್ತು ಅಪ್ಸರೆಯರ ಬಗ್ಗೆ ತಪ್ಪು ಗ್ರಹಿಕೆಯಿಂದ ಬರುವಂಥದ್ದು. ವಸ್ತುತಃ ಪಾರಿಜಾತ ಸುಗಂಧದ ಹೂಗಳಿಂದ ವಿಷಯ ಲಾಲಸೆಯನ್ನು ಕೆರಳಿಸುವಂಥದ್ದಲ್ಲ ಅಪ್ಸರೆಯರೂ ಕಾಮೋದ್ದೀಪಕ ನೃತ್ಯಗೀತಗಳಿಂದ ಮನಸೆಳೆವ ಸೂಳೆಯರಲ್ಲ. ಪಾರಿಜಾತದ ಸುಗಂಧವಾಘ್ರಾಣಿಸಿದ ಮಾತ್ರಕ್ಕೆ ಅಂಧರಿಗೆ ದಿವ್ಯದೃಷ್ಟಿ, ರೋಗಿಗಳಿಗೆ ರೋಗ ಪರಿಹಾರ–

ಯೇ ತ್ವಂಧಚಕ್ಷುಷಃ ಸರ್ವೇ ತೇಽಭವನ್ ದಿವ್ಯಚಕ್ಷುಷಃ ।
ವಿರೋಗಾ ರೋಗಿಣಶ್ಚಾಸನ್ ಘ್ರಾತ್ವಾ ಗಂಧಂ ವನಸ್ಪತೇಃ ॥

ಹೀಗೆ ಶರೀರ ಅಂತಃಕರಣಗಳ ಆರೋಗ್ಯವನ್ನೂ ಇಂದ್ರಿಯ ಪಾಟವವನ್ನೂ ನೀಡಿ ಜ್ಞಾನಸಾಧನೆಗೆ ನೆರವಾಗುತ್ತದೆ ಪಾರಿಜಾತ.

ಅಪ್ಸರೆಯರೂ ಹರಿನಾಮ ಸಂಕೀರ್ತನ ನರ್ತನಗಳಿಂದ ಹರಿಯ ಕಡೆಗೇ ಮನಸೆಳೆಯುತ್ತಾರೆ ಹರಿಯ ಗುಣಗಾನವಲ್ಲದೆ ಬೇರೆ ಮಾತು ಅವರಿಗೆ ಬೇಡ. ಅವರಿಗೆ ಗೊತ್ತು, ಬೇರೆ ಮಾತು ಬಂಧಕವಾಗುತ್ತದೆಂದು ಹಾಗೇ ಹೇಳುತ್ತಾರೆ ಸ್ಕಂದ ಪುರಾಣದಲ್ಲಿ–

ಯೇ ಕಥಾಸ್ತೇ ವಿಹಾಯಾನ್ಯಗಾಥಾಃ ಪ್ರಭೋ
ಕೀರ್ತಯಂತೇಽಥ ಶೃಣ್ವಂತಿ ವಾ ತೇ ಜನಾಃ ।
ದುಃಖಿತಾಃ ಸ್ಯುಶ್ಚ ಸಂಸಾರಪಾಶೈಃ ಸಿತಾ–
ಸ್ತ್ವಂ ನತಾಃ ಸ್ಮಃ ಶರಣ್ಯಂ ಭವಂತಂ ವಯಂ ॥

'ಶ್ರೀಹರಿ, ಯಾರು ನಿನ್ನ ಗುಣಗಾನ ಮಾಡದೆ ಬೇರೆ ಮಾತುಗಳನ್ನೇ ಆಡುತ್ತಿರುವರೋ ಅಥವಾ ಕೇಳುತ್ತಿರುವರೊ ಅವರು ಸದಾ ಸಂಸಾರ ಬಂಧನದಲ್ಲಿಯೆ ಸಿಲುಕಿ ಕ್ಲೇಶಪಡುವರು. ಕ್ಲೇಶನಾಶಕನು ರಕ್ಷಕನು ನೀನು. ನಿನ್ನನ್ನೆ ನಾವು ನಮಿಸುವೆವು'. ಇದು ಕೇವಲ ಮಾತಿನ ಪ್ರದರ್ಶನವಲ್ಲ ವೈಯಕ್ತಿಕ ಜೀವನದಲ್ಲಿಯೂ ಅಪ್ಸರೆಯರು ಬ್ರಹ್ಮವಾದಿನಿಯರು, ಮಹಾಯೋಗಿನಿಯರು–

ಸರ್ವಾಶ್ಚ ಬ್ರಹ್ಮವಾದಿನ್ಯೋ ಮಹಾಯೋಗಾಶ್ಚ ತಾಃ ಸ್ಮೃತಾಃ ।

ಹೀಗೆ ಜ್ಞಾನಿಗಳೂ ವಿವೇಕಿಗಳೂ ಆದ ಅಪ್ಸರೆಯರು ಎಂದೂ ಪುರುಷರನ್ನು ಮೋಹದಲ್ಲಿ ಸಿಲುಕಿಸಿ ದುರ್ಮಾರ್ಗದಲ್ಲಿ ಕೆಡಹುವುದಿಲ್ಲ. ಕೆಲವೊಮ್ಮೆ ದೇವಕಾರ್ಯಕ್ಕಾಗಿ ದೇವೇಂದ್ರನ ಆದೇಶದಂತೆ ವಿಶ್ವಾಮಿತ್ರರಂಥ ತಪಸ್ವಿಗಳಿಗೆ

ತಪ್ಪೋವಿಘ್ನ ಮಾಡಿದರೂ ಮುಂದೆ ಅವರು ತಪಸ್ಸಿನ ದಾರಿಯನ್ನೇ ಹಿಡಿದರು. ಪತಿತರಾಗಲಿಲ್ಲ. ಸೂಕ್ಷ್ಮವಾದ ಭಗವತ್ತತ್ವಗಳನ್ನು ಗ್ರಹಿಸುವುದರಲ್ಲಿ, ಧಾರಣ ಮಾಡುವುದರಲ್ಲಿ ಅಪ್ಸರೆಯರು ಸಮರ್ಥರೆಂದು ಉಪನಿಷತ್ತು ಹೊಗಳುತ್ತದೆ. ಅವರ ಆ ಬುದ್ಧಿಶಕ್ತಿಯನ್ನು ನಾವು ಬಯಸಿ ಬೇಡಬೇಕಂತೆ–

ಅಪ್ಸರಾಸು ಚ ಯಾ ಮೇಧಾ .......
ಸಾ ಮಾಂ ಮೇಧಾ ಸುರಭಿರ್ಜುಷತಾಂ ಸ್ವಾಹಾ ।

– ನಾರಾಯಣೋಪನಿಷತ್

ಆದ್ದರಿಂದ ಭಕ್ತಿಪ್ರಚೋದಕರಾದ ಪಾರಿಜಾತ ಮತ್ತು ಅಪ್ಸರೆಯರನ್ನು ದೇವೇಂದ್ರನಿಗೆ ನೀಡಿ ಭಕ್ತಿಯನ್ನು ಬೇಡುವುದು ಅನುಚಿತವಾಗಲಾರದು.

ಅಪ್ಸರೆಯರೆಲ್ಲ ವಿಷ್ಣುಭಕ್ತೆಯರೆಂದು ಮಾತ್ರ ತಿಳಿಯಬಾರದು. ಕಲಿಯ ಹೆಂಡತಿಯಾದ ಅಲಕ್ಷ್ಮಿಯೂ ಸಮುದ್ರದಿಂದ ಉದ್ಭವಿಸಿ ಬಂದ ಓರ್ವ ಅಪ್ಸರೆಯೆ. ಕಾಲಯವನನನ್ನು ಹೆತ್ತವಳೂ ಓರ್ವ ದುಷ್ಟ ಅಪ್ಸರೆಯೆ.

'ಆಹುರಪ್ಯುತ್ತಮಸ್ತ್ರೀಣಾಮಧಿಕಾರಂ ತು ವೈದಿಕೇ ಯಥೋರ್ವಶೀ'

'ಉತ್ತಮಸ್ತ್ರೀಯರಿಗೂ ವೇದಾಧಿಕಾರ ಉಂಟು. ಉದಾ: ಊರ್ವಶಿ ಮುಂತಾದವರು' ಎಂದು ಭಾಷ್ಯದಲ್ಲಿ ಹೇಳಿದಂತೆ ವೇದಮಂತ್ರ ದ್ರಷ್ಟಾರರಾದ ಅಪ್ಸರೆಯರೂ ಇದ್ದಾರೆ, ಅತ್ಯಂತ ದುಷ್ಟರಾದ ಅಪ್ಸರೆಯರೂ ಇದ್ದಾರೆ. ವರುಣ ಉತ್ತಮ ಅಪ್ಸರೆಯರನ್ನೇ ಕೊಟ್ಟು ಉತ್ತಮವಾದ ವಿಷ್ಣುಭಕ್ತಿಯನ್ನು ಬೇಡುತ್ತಿದ್ದಾನೆ.

ದೇವೇಂದ್ರನೂ ಎಲ್ಲರ ಮನೋಭಿಮಾನಿ, ದೃಢ ಮನಸ್ಸಿನಿಂದ ವಿಷ್ಣುವನ್ನಾರಾಧಿಸುವವನು. ಪಾರಿಜಾತಾದಿ ಸುಗಂಧದ ಹೂಗಳ ನಂದನವನ, ಊರ್ವಶಿ ಮುಂತಾದ ಅಪ್ಸರೆಯರ ಒಡನಾಟ, ಮೂಲೋಕವಾಳುವ ಸ್ವರ್ಗಸಿಂಹಾಸನ ಇಷ್ಟೆಲ್ಲ ಇದ್ದರೂ ಇವುಗಳ ನಡುವೆಯೂ ಸ್ವಲ್ಪವೂ ವಿಚಲಿತನಾಗದೆ ಮೂಲೋಕವಾಳುತ್ತಾನೆ, ಮೂಲೋಕದ ಎಲ್ಲ ಜೀವರ ಮನಸ್ಸನ್ನು ಆಳುತ್ತಾನೆ. ಅಹಲ್ಯೆಯನ್ನು ಆತ ಕೆಡಿಸಿದುದು ದೇವಕಾರ್ಯವೆಂದು ಅವನೆ ವಾಲ್ಮೀಕಿರಾಮಾಯಣದಲ್ಲಿ ಹೇಳಿದ್ದಾನೆ. ಮೂಲರೂಪದಲ್ಲಿ ಮಾತ್ರವಲ್ಲದೆ ಅವತಾರದಲ್ಲಿಯೂ ಆತನ ಚಿತ್ತಸ್ಥೈರ್ಯ ಅಪಾರ. ಉದಾ: ಅರ್ಜುನನನ್ನು ಸ್ವರ್ಗದಲ್ಲಿ ಊರ್ವಶಿ ಎಷ್ಟು ಯತ್ನಿಸಿದರೂ ವಶೀಕರಿಸಲಾದರೆ ಹೋದಳು,

ಸೋತಳು. ಇಂಥ ದೇವೇಂದ್ರನಲ್ಲಿ ವರುಣ ವಿಷ್ಣುಭಕ್ತಿಯನ್ನು ಬೇಡಿದುದೂ ಉಚಿತವೆ.

ವರುಣ ದೇವೇಂದ್ರನಿಗೆ ಪಾರಿಜಾತ ಮತ್ತು ಅಪ್ಸರೆಯರನ್ನು ಮಾತ್ರವೆ ಕೊಟ್ಟಿದ್ದಲ್ಲ.

ತತೋಽಪ್ಸರಗಣಾ ದಿವ್ಯಾ ಗಂಧರ್ವಾಶ್ಚ ಮಹೌಜಸಃ ।
ಜಜ್ಞಿರೇ ರೂಪಸಂಪನ್ನಾ ಮಧುಗಾಯನ ತತ್ಪರಾಃ ।
ಐರಾವತಸ್ತತೋ ಜಜ್ಞೇ ತಥೈವೋಚ್ಚೈಃಶ್ರವಾ ಹಯಃ ।
ಧನ್ವಂತರಿಃ ಪಾರಿಜಾತಃ ಸುರಭಿಃ ಸರ್ವಕಾಮಧುಕ್ ।
ಏತಾನ್ ಸರ್ವಾನ್ ಸಹಸ್ರಾಕ್ಷೋ ಜಗ್ರಾಹ ಪ್ರೀತಮಾನಸಃ ।

'ಅಪ್ಸರೆಯರು, ಗಂಧರ್ವರು, ಐರಾವತ, ಉಚ್ಚೈಃಶ್ರವಸ್, ಧನ್ವಂತರಿ, ಪಾರಿಜಾತ, ಕಾಮಧೇನು ಇವರೆಲ್ಲ ಕ್ಷೀರಸಮುದ್ರದಿಂದ ಉದಿಸಿ ಬಂದರು. ಎಲ್ಲರನ್ನೂ ದೇವೇಂದ್ರ ಸಂತೋಷದಿಂದ ಸ್ವೀಕರಿಸಿದ' ಆದ್ದರಿಂದ ವರುಣ ಇವರೆಲ್ಲರನ್ನೂ ಕೊಟ್ಟಿದ್ದನೆಂದಿಟ್ಟುಕೊಳ್ಳಬೇಕು.

– ೧೦೫ –

**ಪೊಳೆವ ನವರತ್ನದ ರಾಸಿಯು ತೆಗೆತೆಗೆದು**
**ಉಳಿದ ಅಮರರಿಗೆ ಸಲಿಸಿದ ।**
**ಉಳಿದ ಅಮರರಿಗೆ ಸಲಿಸಿದ ಸಮುದ್ರ**
**ಕಳುಹಿದನವರ ಮನೆಗಳಿಗೆ ॥**

ದೇವೇಂದ್ರನಿಗೆ ಪಾರಿಜಾತ ವೃಕ್ಷವನ್ನೂ ಅಪ್ಸರೆಯರನ್ನೂ ಕೊಟ್ಟ ಬಳಿಕ ಉಳಿದ ದೇವತೆಗಳಿಗೆಲ್ಲ ಹೊಳೆಯುವ ನವರತ್ನರಾಶಿಗಳನ್ನೇ ತೆಗೆತೆಗೆದು ಕೊಟ್ಟ, ಬಳಿಕ ಎಲ್ಲರನ್ನೂ ಅವರವರ ಮನೆಗಳಿಗೆ ಬೀಳ್ಕೊಟ್ಟ, ಸಮುದ್ರರಾಜ.

ಮಹಾಭಾರತ ತಾತ್ಪರ್ಯನಿರ್ಣಯಟೀಕೆಯಲ್ಲಿ ವಾದಿರಾಜರು –

'ಆಯುಧಾನ್ಯಾಭರಣಾನಿ ಚ ಯಥಾಯೋಗ್ಯಂ ಸುರೇಷು ದತ್ತಾನಿ'

'ಆಯುಧಗಳನ್ನೂ ಆಭರಣಗಳನ್ನೂ, ದೇವತೆಗಳಿಗೆ ಅವರ ಯೋಗ್ಯತೆಗೆ ತಕ್ಕಂತೆ ಕೊಟ್ಟ ಸಮುದ್ರರಾಜ' ಎಂದಿದ್ದಾರೆ. ಆದ್ದರಿಂದ 'ನವರತ್ನದ ರಾಶಿ' ಎಂದರೆ ಎರಡು ಅರ್ಥದಲ್ಲಿ ಗ್ರಹಿಸಬೇಕು. ಮಾಣಿಕ್ಯ ಮರಕತ ಪುಷ್ಯರಾಗ ನೀಲ ಗೋಮೇಧಿಕ ವೈಢೂರ್ಯ ವಜ್ರ ಮುತ್ತು ಹವಳ ಎಂಬ ಒಂಬತ್ತು ಬಗೆಯ

ರತ್ನಗಳಾಭರಣದ ರಾಶಿ ನವರತ್ನರಾಶಿ. ಹಾಗೇ ಸಮುದ್ರದಿಂದ ಆಗ ತಾನೆ ಉದಿಸಿಬಂದ ಹೊಸದಾದ (ನವ = ಹೊಸ) ರತ್ನಗಳ ಅಂದರೆ ಆಯುಧ ರತ್ನಗಳ ರಾಶಿಯೂ 'ನವರತ್ನರಾಶಿ' ಆಯುಧಗಳೂ ರತ್ನಗಳೆ. ಏಕೆಂದರೆ–

'ಜಾತೌ ಜಾತೌ ಯದುತ್ಕೃಷ್ಟಂ ತದ್ರತ್ನಮಿಹ ಕಥ್ಯತೇ'

ಪ್ರತಿಯೊಂದು ಜಾತಿಯ ವಸ್ತುಗಳಲ್ಲಿಯೂ ಆ ಜಾತಿಯ ವಸ್ತುಗಳಲ್ಲೆಲ್ಲ ಶ್ರೇಷ್ಠವಾದುದನ್ನು ರತ್ನ ಎನ್ನುತ್ತಾರೆ. ಉದಾ:–

'ದೇವಿ ತ್ವಂ ಲಲನಾರತ್ನಂ ದೇವೋಽಸೌ ಪುರುಷೋತ್ತಮಃ'

'ದೇವಿ ಮಹಾಲಕ್ಷ್ಮಿ ನೀನು ಸ್ತ್ರೀಯರಲ್ಲೆಲ್ಲ ರತ್ನ. ನಾರಾಯಣ ಪುರುಷರಲ್ಲೆಲ್ಲ ಉತ್ತಮ'– ಶ್ರೀಶ್ರೀಶಗುಣದರ್ಪಣ.

ಸಮುದ್ರರಾಜ ಶಕ್ರ ಮೊದಲಾದ ದಿಕ್ಪಾಲಕರಿಗೂ ಶುಕ್ರ ಮೊದಲಾದ ದಿಕ್ಪಾಲರಿಗೂ ಆಯುಧರತ್ನಗಳನ್ನಿತ್ತ, ಇಂದ್ರನಿಗೆ ವಜ್ರಾಯುಧ, ಅಗ್ನಿಗೆ ಶಕ್ತ್ಯಾಯುಧ, ಯಮನಿಗೆ ದಂಡ, ನಿರ್‌ಋತಿಗೆ ಖಡ್ಗವನ್ನಿತ್ತ. ತನಗೆ ಪಾಶಇಟ್ಟುಕೊಂಡ. ವಾಯುವಿಗೆ ಅಂಕುಶ, ಸೋಮನಿಗೆ ಗದಾ, ಈಶನಿಗೆ ಶೂಲ, ಶೇಷನಿಗೆ ಚಕ್ರ, ಬ್ರಹ್ಮನಿಗೆ ಪದ್ಮ ಹೀಗೆ ಆಯುಧರತ್ನಗಳನ್ನಿತ್ತ. ನವಗ್ರಹಗಳಿಗೂ ಸೂರ್ಯನಿಗೆ ಪದ್ಮ ಚಂದ್ರನಿಗೆ ಗದೆ, ಕುಜನಿಗೆ ಶಕ್ತಿ, ಬುಧನಿಗೆ ಖಡ್ಗ, ಗುರುವಿಗೆ ದಂಡ, ಶುಕ್ರನಿಗೂ ದಂಡ, ಶನಿಗೆ ಧನುಸ್, ರಾಹುವಿಗೆ ಖಡ್ಗ, ಕೇತುವಿಗೆ ಗದೆ ಹೀಗೆ ಆಯುಧರತ್ನಗಳನ್ನಿತ್ತ. ಉಳಿದ ದೇವತೆಗಳಿಗೆ ಅವರವರ ಆಯುಧರತ್ನಗಳನ್ನಿತ್ತ 'ಉಳಿದ ಅಮರರಿಗೆ' ಎಂದಿದ್ದರೂ, 'ಉಳಿದ ಅಮರರಿಗೂ' ಎಂದು ಅರ್ಥವಿಟ್ಟುಕೊಳ್ಳಬೇಕು. ಶಕ್ರಾದಿದೇವತೆಗಳಿಗೆ ಚೌದಂತ ಗಜಗಳನ್ನು ಕೊಟ್ಟಿದ್ದ. ಉಳಿದ ಅಮರರಿಗೆ ಆಯುಧ ಆಭರಣಗಳು ಮಾತ್ರ ಎಂಬ ಅಭಿಪ್ರಾಯದಿಂದ 'ಉಳಿದ ಅಮರರಿಗೆ' ಎನ್ನಲಾಗಿದೆ. ಆಭರಣಗಳೂ ಹೀಗೇ ಎಲ್ಲ ದೇವತೆಗಳಿಗೂ ಲಭಿಸಿದೆ. ಹೀಗೆ ರತ್ನಾಭರಣಗಳನ್ನೂ, ಆಯುಧರತ್ನಗಳನ್ನೂ ರಾಶಿ ರಾಶಿಯಾಗಿ ತೆಗೆತೆಗೆದು ಎಲ್ಲ ದೇವತೆಗಳಿಗೂ ಸಮುದ್ರರಾಜ ಕೊಟ್ಟ.

ಹಾಗಾದರೆ ಸಮುದ್ರದಲ್ಲಿ ಉದ್ಭವಿಸಿದ ರತ್ನಗಳೆಷ್ಟು ? ಹದಿನಾಲ್ಕು ರತ್ನಗಳೆಂದು ಪ್ರಸಿದ್ಧಿ–

ಲಕ್ಷ್ಮೀಃ ಕೌಸ್ತುಭಪಾರಿಜಾತಕಸುರಾ ಧನ್ವಂತರಿಶ್ಚಂದ್ರಮಾ
ಗಾವಃ ಕಾಮದುಘಾಃ ಸುರೇಶ್ವರಗಜೋ ರಂಭಾದಿದೇವಾಂಗನಾಃ ।

ಅಶ್ವಃ ಸಪ್ತಮುಖೋ ವಿಷಂ ಹರಿಧನುಃ ಶಂಖೋಽಮೃತಂ ಚಾಂಬುಧೇಃ
ರತ್ನಾನೀಹ ಚತುರ್ದಶ ಪ್ರತಿದಿನಂ ಕುರ್ಯುಃ ಸದಾ ಮಂಗಲಂ ॥

ಲಕ್ಷ್ಮೀ, ಕೌಸ್ತುಭ, ಪಾರಿಜಾತ, ಮದ್ಯ, ಧನ್ವಂತರಿ, ಚಂದ್ರ, ಕಾಮಧೇನು, ಐರಾವತ, ಅಪ್ಸರೆಯರು, ಉಚ್ಚೈಃಶ್ರವಸ್, ಹಾಲಾಹಲ, ಶಾರ್ಙ್ಗ, ಪಾಂಚಜನ್ಯ, ಅಮೃತ – ಇವು ಹದಿನಾಲ್ಕು ರತ್ನಗಳು. ಇಲ್ಲಿ ಹಾಲಾಹಲ ವಿಷವನ್ನೂ ಒಂದು ರತ್ನವೆಂದು ಪರಿಗಣಿಸಿದುದು ವಿಷಗಳಲ್ಲೆಲ್ಲ ಅತ್ಯಂತ ಭಯಂಕರ ಶ್ರೇಷ್ಠ ವಿಷ ಅದು ಎಂಬ ಅಭಿಪ್ರಾಯದಿಂದ. ಹಾಗೆಯೆ ಲಕ್ಷ್ಮಿ ಕೌಸ್ತುಭಾದಿಗಳೂ ಶ್ರೇಷ್ಠವಸ್ತುಗಳೆಂದೆ ರತ್ನವೆನಿಸಿವೆ. ಹಾಲಾಹಲ ವಿಷದೊಂದಿಗೆ ಅದರ ಅಭಿಮಾನಿಯಾದ ಕಲಿಗೆ ತಕ್ಕ ಹೆಂಡತಿ ಅಲಕ್ಷ್ಮಿಯೂ ಉದಿಸಿದ್ದಳು. ಆದ್ದರಿಂದ ಹಾಲಾಹಲ ಅಲಕ್ಷ್ಮಿ ಎರಡೂ ಸೇರಿ ಒಂದು ರತ್ನ. ಕಾಮಧೇನುವಿನ ಜೊತೆಗೆ ಅಸಂಖ್ಯ ಗೋವುಗಳು ಉದಿಸಿವೆ. ಐರಾವತದೊಂದಿಗೆ ಎಲ್ಲ ದಿಗ್ಗಜಗಳು, ಶ್ರೀಹರಿಯ ಶಾರ್ಙ್ಗ ಧನುಸ್ಸಿನ ಜೊತೆಗೆ ಎಲ್ಲ ದೇವತೆಗಳ ಆಯುಧಗಳು, ಪಾಂಚಜನ್ಯದ ಜೊತೆಗೆ ಎಲ್ಲ ಆಭರಣಗಳು ಸೇರಿದರೆ ಒಟ್ಟು ಹದಿನಾಲ್ಕು ರತ್ನಗಳಾಗುತ್ತವೆ. ಈ ಚತುರ್ದಶ ರತ್ನಗಳೂ 'ನವ ರತ್ನಗಳ'. ನವ ಅಂದರೆ ನೂತನ ಚಿರನೂತನ. ಅವುಗಳ ಹೊಸತನ ಎಂದೂ ಮಾಸುವುದಿಲ್ಲ

ಕನ್ಯಾದಾನದ ಸಂಪೂರ್ಣಫಲಾವಾಪ್ತಿಗಾಗಿ ವರುಣ ಸಂತೋಷದಿಂದ ತನ್ನ ಸಂಪತ್ತನ್ನೆಲ್ಲ ದಾನಮಾಡುತ್ತಿದ್ದಾನೆ. 'ರಾಶಿಯ ತೆಗೆ ತೆಗೆದು' ಎನ್ನುವಲ್ಲಿ ಎಷ್ಟು ತೆಗೆದು ಕೊಟ್ಟರೂ ಬರಿದಾಗದಂಥ ಸಂಪತ್ತು ವರುಣನದು ಮತ್ತು ಅಷ್ಟೇ ಕೊಡುಗೈ ದಾನಿಯೂ ಆಗಿದ್ದಾನೆ ಆತ ಎಂದು ಸ್ಪಷ್ಟವಾಗುತ್ತದೆ. ಮೊದಲೇ ಆತ 'ರತ್ನಾಕರ'ನೆನಿಸಿದವ. ರತ್ನಾಕರ ಎಂದರೆ, ಸಂಪತ್ತಿನ ಖನಿ. ಸಂಪತ್ತಿನ ಅಧಿಷ್ಠಾತ್ರಿಯಾದ ಮಹಾಲಕ್ಷ್ಮಿ ಮಗಳಾಗಿ ಬಂದ ಮೇಲಂತೂ ಅವನ ಸಂಪತ್ತಿಗೆ ಮಿತಿಯೆ ಇಲ್ಲವಾಯಿತು. 'ರತ್ನಾಕರ' ಎಂಬ ಹೆಸರು ಅವನಿಗೆ ಅನ್ವರ್ಥಕವಾಯಿತು. ಸ್ಕಂದಪುರಾಣ ಹಾಗೇ ಹೇಳುತ್ತಿದೆ–

ತತೋ ರತ್ನಾಕರಃ ಸ್ವಸಾಮ್ರಾಜ್ಞೀಜನೇರನುಭಾವತಃ ।
ಬಭೂವಾನ್ವರ್ಥಸಂಜ್ಞೋ ವೈ ಸಂಪೂರ್ಣಾಕ್ಷಯರತ್ನವಾನ್ ॥

'ಉಳಿದ ಅಮರರಿಗೆ' ಎಂದು ಹೇಳಿದರೂ ದೇವತೆಗಳಿಗೆ ಮಾತ್ರವೆ ಅಲ್ಲ ಗಂಧರ್ವ ಸಿದ್ಧ ಸಾಧ್ಯ ಯಕ್ಷ ರಾಕ್ಷಸಾದಿಗಳಿಗೂ ಹಾಗೇ ರತ್ನಗಳನ್ನು ತೆಗೆತೆಗೆದು ವರುಣ ಕೊಟ್ಟಿದ್ದಾನೆ ಎಂದಿಟ್ಟುಕೊಳ್ಳಬೇಕು. ಲಕ್ಷ್ಮೀನಾರಾಯಣರ ವಿವಾಹವೆಂದರೆ

ಸಾತ್ವಿಕ ವರ್ಗಕ್ಕೆಲ್ಲ ದೊಡ್ಡ ಹಬ್ಬ. ಎಲ್ಲರಿಗೂ ಅಭೀಷ್ಟಲಾಭ. ಸ್ಕಂದಪುರಾಣ ಅದನ್ನೂ ಹೇಳುತ್ತಿದೆ—

ಅನರ್ಘ್ಯಾಣಿ ಚ ವಸ್ತ್ರಾಣಿ ರತ್ನಭೂಷಾಃ ಪರಿಚ್ಛದಾನ್ ।
ದೇವಾದಿಭ್ಯೋ ದದೌ ಪ್ರೀತ್ಯಾ ಸರ್ವೇಭ್ಯೋಽಪಿ ಪೃಥಕ್ ಪೃಥಕ್ ॥

ಈ ಲಕ್ಷ್ಮೀಶೋಭನ ಪದದಿಂದ ಸಕಲ ಸಾತ್ವಿಕರಿಗೂ ಸಕಲಾಭೀಷ್ಟಸಿದ್ಧಿ ಎಂದು ಇದರಿಂದ ಸೂಚಿತವಾಗುತ್ತಿದೆ.

— ೧೦೬ —

**ಉನ್ನಂತ ನವರತ್ನ ಮಯವಾದ ಅರಮನೆಯ**
**ಚೆನ್ನೇ ಮಗಳಿಂದ ವಿರಚಿಸಿ ।**
**ತನ್ನ ಅಳಿಯಗೆ ಸ್ಥಿರವ ಮಾಡಿಕೊಟ್ಟ**
**ಇನ್ನೊಂದು ಕಡೆಯಡಿ ಇಡದಂತೆ ॥**

ಸಮುದ್ರರಾಜ ಉನ್ನತವಾದ ನವರತ್ನಖಚಿತವಾದ ಅರಮನೆಯನ್ನು ವಾಸ್ತುಶಿಲ್ಪಶಾಸ್ತ್ರೋಕ್ತವಾದ ಉತ್ತಮ ನಿಯಮಗಳಿಗನುಸಾರವಾಗಿ ಕಟ್ಟಿಸಿ ತನ್ನ ಅಳಿಯನಾದ ನಾರಾಯಣನಿಗೆ ಆತ ತನ್ನ ಮಗಳೊಡನೆ ವಾಸಮಾಡಲು ಇನ್ನೊಂದು ಕಡೆ ಹೋಗದಂತೆ ಆ ಅರಮನೆಯನ್ನು ಸ್ಥಿರವಾಗಿ ಮಾಡಿಕೊಟ್ಟ

ಸಮುದ್ರರಾಜ ಭಾಗ್ಯಶಾಲಿ. ಭಾಗ್ಯದೇವತೆಯಾದ ಮಹಾಲಕ್ಷ್ಮಿಯನ್ನು ಮಗಳಾಗಿ ಪಡೆದು ಪರದೇವತೆಯಾದ ನಾರಾಯಣನಿಗೆ ದಾನ ಮಾಡಿದ್ದಾನೆ ಅವನನ್ನು ಮನೆಯಳಿಯನನ್ನಾಗಿ ಮಾಡಿಕೊಂಡಿದ್ದಾನೆ ಎಲ್ಲ ಮದುವೆಗಳಲ್ಲಿ ಮಗಳನ್ನು ಅಳಿಯನ ಮನೆಗೆ ಕಳುಹಿಸಬೇಕಾಗುತ್ತದೆ. ಈತ ಅಳಿಯನನ್ನೇ ತನ್ನಲ್ಲಿರಿಸಿಕೊಳ್ಳುತ್ತಾನೆ.

ಮಗಳನ್ನು ಕಳಿಸಿ ಕೊಡುವಾಗಿನ ದುಃಖ ಅವರ್ಣನೀಯ. ಭಾರವಾದ ಹೃದಯದಿಂದ ಮಗಳನ್ನು ತಂದೆತಾಯಿಗಳು ಬೀಳ್ಕೊಡುತ್ತಾರೆ ಮಗಳೂ ಅಳುತ್ತ ಕಣ್ಣೊರೆಸಿಕೊಳ್ಳುತ್ತ ತಂದೆತಾಯ್ಗಳನ್ನು ನೋಡುತ್ತ ಹೆಜ್ಜೆ ಎತ್ತಿ ಮುಂದಿಡಲಾಗದೆ ನಿಂತಿರುತ್ತಾಳೆ. ತಂದೆತಾಯಿಗಳು ಅವಳ ತಲೆ ನೇವರಿಸಿ 'ಕೊಂಡವರ ಮನೆಯ ಬೆಳಗು ಹೋಗಮ್ಮ ಕೊಟ್ಟವರ ಕುಲಕೆ ಕೀರ್ತಿ ತಾರಮ್ಮ' ಎಂದು ಹರಸುತ್ತಾರೆ. ಸೀತೆಯನ್ನು ಜನಕರಾಜ ಹಾಗೇ ಹರಸಿ ಕಳಿಸಿದ್ದಾನೆ. ಕೃಷ್ಣ ಸುಭದ್ರೆಯನ್ನು ಅರ್ಜುನನ ರಥಕ್ಕೆ ಹಾಗೇ ಕಳಿಸಿದ್ದಾನೆ. ಪದ್ಮಾವತಿಯನ್ನು ಶ್ರೀನಿವಾಸನ ಮನೆಗೆ ಕಳಿಸಿಕೊಡುವಾಗ ಆಕಾಶರಾಜನೂ ಹಾಗೇ ಮಾಡಿದ್ದಾನೆ, ಅತ್ತಿದ್ದಾನೆ. ಅವನು

ಅಳುವುದನ್ನು ಕಂಡು ಶ್ರೀನಿವಾಸ ತಾನೂ ಅತ್ತನಂತೆ. ಸುಭದ್ರಾಪರಿಣಯ ಪ್ರಸಂಗ ಆತನಿಗೆ ನೆನಪಾಯಿತಂತೆ –

ರುದಂತಂ ನೃಪತಿಂ ದೃಷ್ಟ್ವಾ ಶ್ರೀನಿವಾಸಃ ಸತಾಂ ಗತಿಃ ।
ಸ್ವಯಂ ರುರೋದ ಗೋವಿಂದೋ ಭಗಿನೀಂ ಪಾರ್ಥವಲ್ಲಭಾಂ ।
ಸ್ಮೃತ್ವಾ ಶ್ರೀ ದೇವಕೀಪುತ್ರ ಸ್ತದದ್ಭುತಮಿವಾಭವತ್ ॥

ಎಂದು ಭವಿಷ್ಯೋತ್ತರದಲ್ಲಿ ಹೇಳಿದೆ. ಆದರೆ ವರುಣ ತನ್ನ ಅರಮನೆಯ ಬಳಿಯಲ್ಲಿಯೇ ಶ್ವೇತದ್ವೀಪದಲ್ಲಿ ಉನ್ನತವಾದ ನವರತ್ನಖಚಿತವಾದ ಒಂದು ಅರಮನೆಯನ್ನು ವಾಸ್ತುಶಿಲ್ಪನಿಯಮಾನುಸಾರವಾಗಿಯೇ ಕಟ್ಟಿಸಿ ಅದರ ಒಡೆತನವನ್ನು ಸ್ಥಿರವಾಗಿ ತನ್ನಳಿಯನಿಗೆ ಕೊಟ್ಟ. ಮಗಳೂ ಅಳಿಯನೂ ತನ್ನನ್ನಗಲಿ ಬೇರೆಕಡೆ ವಾಸಕ್ಕಾಗಿ ಹೋಗದಂತೆ ಮಾಡಿದ ನೂರಾರು ದಾಸದಾಸಿಯರು ಸಾವಿರಾರು ಆನೆ ಕುದುರೆ ಗೋವುಗಳು ನೂರಾರು ಖಂಡಿ ಧಾನ್ಯಗಳನ್ನು ಆಕಾಶರಾಜ ಶ್ರೀನಿವಾಸನಿಗೆ ಬಳುವಳಿಯಾಗಿತ್ತನಂತೆ. ಸಮುದ್ರರಾಜ ಅದಕ್ಕಿಂತಲೂ ಹೆಚ್ಚಿನ ಬಳುವಳಿ ಕೊಟ್ಟು ಸುಸಜ್ಜಿತವಾದ ಭವ್ಯವಾದ ಉನ್ನತವಾದ ಅರಮನೆಯನ್ನೇ ಕಟ್ಟಿಸಿಕೊಟ್ಟ.

ಉನ್ನತವಾದ ಅರಮನೆಯೆಂದರೆ ಉಪಚಾರಕ್ಕೆ ಹೇಳಿದ ಮಾತಲ್ಲ ಭೂಲೋಕದಲ್ಲಿದ್ದೂ ಸ್ವರ್ಗವನ್ನು ಮುಟ್ಟುವಷ್ಟು ಎತ್ತರವಾದ ಅರಮನೆ ಅದು ಐವತ್ತು ಲಕ್ಷಯೋಜನದೆತ್ತರಕ್ಕೆ ಸ್ವರ್ಗವಿದೆ ಕ್ಷೀರಸಮುದ್ರವೂ ಶ್ವೇತದ್ವೀಪದ ಪ್ರದೇಶದಲ್ಲಿ ಹೆಪ್ಪುಗಟ್ಟಿದ್ದು ಐವತ್ತು ಲಕ್ಷಯೋಜನದೆತ್ತರಕ್ಕೆ ದೊಡ್ಡ ಪರ್ವತವಾಗಿ ನಿಂತಿದೆ. ಅದರ ತುದಿಯಲ್ಲಿ ಹರಿಯ ಅರಮನೆ

ಶ್ವೇತದ್ವೀಪದ ಅರಮನೆಯಲ್ಲಿ ಶ್ರೀಭೂದುರ್ಗಾ ಭಾಗಗಳೆಂದು ಮೂರು ಭಾಗಗಳಿವೆ. ಶ್ರೀಭಾಗ ಮುಕ್ತಸ್ಥಾನ. ಸಾಕ್ಷಾತ್ ಲಕ್ಷ್ಮೀ ಸ್ವರೂಪ ಅದಕ್ಕೆ ಉತ್ಪತ್ತಿಲಯಗಳಿಲ್ಲ, ಅದನ್ನು ಬಿಟ್ಟು ಭೂ ಭಾಗ ದುರ್ಗಾಭಾಗಗಳನ್ನು ಸಮುದ್ರರಾಜ ಕಟ್ಟಿಸಿಕೊಟ್ಟನೆಂದು ಗ್ರಹಿಸಬೇಕು.

ಅಥವಾ ವಿಶ್ವಕರ್ಮನ ಶಿಲ್ಪದಲ್ಲಿ ಪ್ರಾಕೃತವಾದ ಭೂಭಾಗ ದುರ್ಗಾಭಾಗಗಳು ನಿರ್ಮಾಣಗೊಂಡಂತೆ ಚಿನ್ಮಯವಾದ ಶ್ರೀಭಾಗವೂ ವ್ಯಕ್ತವಾಯಿತೆಂದಿಟ್ಟು–ಕೊಳ್ಳಬಹುದು. ಬ್ರಹ್ಮಾಂಡ ಸೃಷ್ಟಿಯಾದೊಡನೆ ಈ ಭಾಗವು ವ್ಯಕ್ತವಾಗುತ್ತದೆ ಆದರೂ ತಿರುಗಿ ಅಚಿಂತ್ಯಶಕ್ತಿಯಿಂದ ಹರಿ ಅದನ್ನು ವ್ಯಕ್ತಗೊಳಿಸುತ್ತಾನೆ ಕಂಸವಧೆಗಾಗಿ ಕೃಷ್ಣ ಮಧುರೆಗೆ ಹೋದಾಗ ಅಲ್ಲಿ ಅವನಿಗೆ ಕ್ಷೌರಿಕನು ಕೇಶವೇಷ ಮಾಡಿದನಂತೆ ಆಗ ಅವನ ಕತ್ತರಿಗೆ ತತ್ಕಾಲದಲ್ಲಿ ಸೃಷ್ಟವಾದ ಪ್ರಾಕೃತ ಕೂದಲು

ತುಂಡಾಗಿ ಕೆಳಗೆ ಬಿದ್ದು ಚಿನ್ಮಯವಾದ ಕೂದಲು ಮಾತ್ರ ಸುಂದರವೇಷದಲ್ಲಿ ಅಭಿವ್ಯಕ್ತವಾಯಿತು. ಹಾಗೇ ಇದು. ಶ್ರೀ ಹರಿ ಚಿನ್ಮಯವಾದ ಸಾಕ್ಷಾತ್ ಲಕ್ಷ್ಮೀಸ್ವರೂಪವಾದ ಈ ಅರಮನೆಯನ್ನು ಬಿಟ್ಟು ಇನ್ನೊಂದೆಡೆ ಹೋಗುವುದಿಲ್ಲ.

ಇಲ್ಲಿ ಒಂದು ಪ್ರಶ್ನೆ – 'ಮದ್ಭಕ್ತಾ ಯತ್ರ ಗಾಯಂತಿ ತತ್ರ ತಿಷ್ಠಾಮಿ ನಾರದ' ಎಂಬಂತೆ ಭಕ್ತರು ಕರೆದಲ್ಲಿಗೆ ಹೋಗಿ ವಾಸಮಾಡುತ್ತಾನೆ ಶ್ರೀಹರಿ. ಭಕ್ತರಿದ್ದಲ್ಲಿ ತಾನಿದ್ದೇನೆ ವೈಕುಂಠಾದಿಗಳಲ್ಲಿ ಇಲ್ಲ ಎನ್ನುತ್ತಾನೆ. ಅಂಥ ಹರಿ ಶ್ವೇತದ್ವೀಪದಿಂದ ಇನ್ನೊಂದೆಡೆ ಅಡಿಯಿಡುವುದಿಲ್ಲವೆನ್ನುವುದು ಹೇಗೆ ?

ಮಾಯಾಮೀ ಪರಮಾನಂದಂ ತ್ಯಕ್ತ್ವಾ ವೈಕುಂಠಮುತ್ತಮಂ ।
ಸ್ವಾಮಿ ಪುಷ್ಕರಿಣೀ ತೀರೇ ರಮಯಾ ಸಹ ಮೋದತೇ ॥

ಎಂಬಂತೆ ಭಗವಂತ ವೈಕುಂಠ ಬಿಟ್ಟು ಬಂದ. ಶ್ವೇತದ್ವೀಪವನ್ನು ಬಿಡಲಾರ ಎನ್ನುವಲ್ಲಿ ಭರವಸೆ ಏನು ? ಭಕ್ತರಿದ್ದಲ್ಲಿ ಭಗವಂತ ಎನ್ನುವುದನ್ನು ಒತ್ತಿ ಹೇಳಲು ವೈಕುಂಠದಲ್ಲಿಲ್ಲ ಎಂಬ ಮಾತೆಂದೂ ಸ್ವಾಮಿಪುಷ್ಕರಿಣೀ ತೀರದಲ್ಲಿ ಶ್ರೀನಿವಾಸ ಸದಾ ಇದ್ದಾನೆ ಎನ್ನುವುದನ್ನು ಒತ್ತಿ ಹೇಳಲು ವೈಕುಂಠವನ್ನು ಬಿಟ್ಟೇ ಬಂದಿದ್ದಾನೆ ಎಂಬ ಮಾತೆಂದೂ ಸಮಾಧಾನ ಹೇಳುವುದಾದರೆ 'ಇನ್ನೊಂದು ಕಡೆ ಅಡಿಯಿಡದಂತೆ' ಎಂದರೂ ಶ್ವೇತದ್ವೀಪದಲ್ಲಿ ಸದಾ ಇರುತ್ತಾನೆ ಎಂದು ಒತ್ತಿ ಹೇಳುವ ಅಭಿಪ್ರಾಯವೆ ಏಕೆ ಗ್ರಹಿಸಬಾರದು ?

ಇದಕ್ಕೆ ಸಮಾಧಾನ – ಹಾಗೇ ಗ್ರಹಿಸಬಹುದು ಶ್ವೇತದ್ವೀಪದ ಅರಮನೆಯ ಭವ್ಯತೆಯನ್ನು ಪ್ರಶಂಸಿಸಲು ಆಡಿದ ಮಾತು ಇದು. ಅಥವಾ ಹರಿ ಇನ್ನೊಂದೆಡೆ ಅಡಿ ಇಡುವುದೇ ಇಲ್ಲ. ಇದು ಪ್ರಶಂಸೆಯ ಮಾತಲ್ಲ ವಾಸ್ತವ ಸಂಗತಿ. ಭಕ್ತರು ಕರೆದಲ್ಲಿಗೆ ಹರಿ ಹೋದರೂ ಅಲ್ಲಿಗೆ ಶ್ವೇತದ್ವೀಪದ ಚಿನ್ಮಯವಾದ ಶ್ರೀ ಭಾಗ ಮೊದಲೇ ಹೋಗಿರುತ್ತದೆ. ನಾವು ನಿತ್ಯ ದೇವರ ಪೂಜೆಯಲ್ಲಿ ಪೀಠದ ಮೇಲೆ ಚಿನ್ಮಯವಾದ ಶ್ವೇತದ್ವೀಪದ ಅರಮನೆಯನ್ನು ಚಿಂತಿಸಿ ನಮಿಸಿಯೇ ಆ ಅರಮನೆಯ ದಿವ್ಯರತ್ನ ಮಂಟಪದಲ್ಲಿ ಹರಿಯನ್ನರ್ಚಿಸುತ್ತೇವೆ.

ಅಂತೂ ಶ್ರೀ ಭಾಗವಾಗಲಿ, ಭೂ ದುರ್ಗಾ ಭಾಗವಾಗಲಿ ನವವಧು ಸಹಿತವಾಗಿ ಹೊಸ ಮನೆಯನ್ನು ಪ್ರವೇಶಿಸಿ ಗೃಹಪ್ರವೇಶ ಹೋಮ ಮಾಡಿ ಹರಿ ಅಲ್ಲಿ ವಾಸ ಮಾಡಿದ. ಇಲ್ಲಿಗೆ ವಿವಾಹದ ಎಲ್ಲ ಅಂಗಗಳೂ ಪೂರ್ಣವಾದಂತಾಯಿತು.

ಅರಮನೆಯನ್ನು ವರುಣ ಚೆನ್ನೇಮುಗಳಿಂದ ವಿರಚಿಸಿದ್ದಾನೆ ಎಂದಿದೆ 'ಚೆನ್ನೇಮ' ಎಂಬುದರ ಅರ್ಥ ಚೆನ್ನಾದ ನೇಮ ಒಳ್ಳೆಯ ನಿಯಮ ಎಂದಿರಬಹುದು. ವಾಸ್ತುಶಿಲ್ಪಶಾಸ್ತ್ರಗಳಲ್ಲಿ ನಗರ ಸೌಧಾದಿ ನಿರ್ಮಾಣಗಳಿಗೆ ಯೋಗ್ಯವಾದ ದೇಶಕಾಲಾದಿಗಳನ್ನು ಮನೆಯ ಮುಖ್ಯದ್ವಾರ, ಒಳಗಿನ ಕೋಣೆಗಳು ಬಾವಿ ಮುಂತಾದವುಗಳಿಗೆ ಯೋಗ್ಯ ಪ್ರದೇಶ, ದಿಕ್ಕು ಮುಂತಾದುವುಗಳನ್ನು, ಉದ್ದ ಅಗಲ ಎತ್ತರ ಆಕೃತಿ ಮುಂತಾದುವುಗಳನ್ನು ವರ್ಣಿಸಲಾಗಿದೆ. ಉದಾ: ಅರಮನೆ ಶತ್ರುಗಳಿಗೆ ಅಭೇದ್ಯವಾದ ದುರ್ಗಪ್ರದೇಶದಲ್ಲಿ ಉನ್ನತಸ್ಥಳದಲ್ಲಿರಬೇಕೆಂದಿದೆ. ಶಿವ ಕೈಲಾಸ ಪರ್ವತದ ಮೇಲೆ ಹರಿ ಸಾಗರದ ನಡುವೆ ಅರಮನೆ ಕಟ್ಟಿಸಿಕೊಳ್ಳಲು ಇದೇ ಕಾರಣವೆಂದೂ ಹೇಳಿದೆ. ಉದ್ಯಾನ ಆಸ್ಥಾನ ಮಂಡಪ ಸಿಂಹಾಸನ ಆಯುಧಾಗಾರ ಅಶ್ವಶಾಲೆ ಗಜಶಾಲೆ ಮುಂತಾದುವನ್ನು ಆಯಾ ದಿಕ್ಕಿನಲ್ಲೇ ಕಟ್ಟಬೇಕೆಂದೂ ನಿಯಮವಿದೆ. ಇಂಥ ಶಾಸ್ತ್ರೋಕ್ತ ನಿಯಮಗಳೇ 'ಚೆನ್ನೇಮ'ಗಳು

ಅಥವಾ 'ಚೆನ್ನೆ ಮಗಳು' ಎಂದೂ ಬಿಡಿಸಬಹುದು. 'ಚೆನ್ನೇ' ಎಂದು ದೀರ್ಘವಲ್ಲ. ಹಾಡಿನಲ್ಲಿ ಬರುವ ಧ್ಮಾತ್ರ. 'ಚೆನ್ನೇ' ಸುಂದರಿಯಾದ ಮಗಳು ಮಹಾಲಕ್ಷ್ಮಿ ಅವಳಿಂದ ಅರಮನೆ ಕಟ್ಟಿಸಿದ ವರುಣ. ಹಿಂದೆ ಹೇಳಿದ್ದಂತೆ ಚಿನ್ಮಯವಾದ ಲಕ್ಷ್ಮ್ಯಾತ್ಮಕವಾದ ಶ್ರೀಭಾಗವನ್ನು ಮಗಳಾದ ಲಕ್ಷ್ಮಿಯೇ ಕಟ್ಟಿಕೊಟ್ಟಳು. ಅಂದರೆ ಇನ್ನೊಂದು ರೂಪದಿಂದ ತಾನೆ ಅರಮನೆಯಾಗಿ ನಿಂತಳು.

ಈ ಶ್ವೇತದ್ವೀಪದ ಅರಮನೆ ವಾಸ್ತುಶಿಲ್ಪನಿಯಮದಂತೆ ಅಭೇದ್ಯ, ದುರ್ಗಮ ಅಧ್ಯಾತ್ಮರಾಮಾಯಣ ಪ್ರಕಾರ ರಾವಣನೊಮ್ಮೆ ಶ್ವೇತದ್ವೀಪಕ್ಕೂ ದಾಳಿ ಮಾಡಲು ಹೊರಟ. ಆದರೆ ಅವನ ಪುಷ್ಪಕವಿಮಾನ ಅಲ್ಲಿಯ ಪ್ರಖರವಾದ ಪ್ರಕಾಶವನ್ನು ಇದಿರಿಸಲಾರದೆ ಹೊರಭಾಗದಲ್ಲೇ ನಿಂತುಬಿಟ್ಟಿತು. ರಾವಣ ಇಳಿದು ಕಾಲ್ನಡಿಗೆಯಿಂದ ನಗರವನ್ನು ಪ್ರದೇಶಿಸಿದ. ಯಾರೋ ಒಬ್ಬಳು ಸ್ತ್ರೀ ರಾವಣನನ್ನು ಕಂಡು 'ಯಾರು ನೀನು ? ನಮ್ಮ ನಗರವನ್ನು ಹೇಗೆ ಪ್ರವೇಶಿಸಿದೆ ?' ಎಂದು ಗದರಿ ಕೈಹಿಡಿದು ನಿಲ್ಲಿಸಿದಳು. ರಾವಣ ಎಷ್ಟು ಪ್ರಯತ್ನಿಸಿದರೂ ಅವಳ ಕೈಹಿಡಿತವನ್ನು ಬಿಡಿಸಿಕೊಳ್ಳಲಾಗಲಿಲ್ಲ. ಕೈಲಾಸವನ್ನೇ ಎತ್ತಿದ್ದ ಅವನ ಬಾಹುಬಲ ಇಲ್ಲಿ ಮಾತ್ರ ವ್ಯರ್ಥವೇ ಆಯಿತು. ಒಬ್ಬಳು ಸ್ತ್ರೀಗೆ ಇಷ್ಟು ಶಕ್ತಿ ಎಂದರೆ ಉಳಿದವರ ಬಗ್ಗೆ ಏನು ಹೇಳಬೇಕು ಎಂದು ಭೀತನಾಗಿ ರಾವಣ ಅಲ್ಲಿಂದಲೆ ಹಿಂತಿರುಗಿದನಂತೆ. ಆದ್ದರಿಂದ ರಾವಣಾದಿ ಶತ್ರುಗಳಿಗೂ ಅಗಮ್ಯವಾದ ಅರಮನೆಯಲ್ಲಿ ಸ್ಥಿರವಾಗಿ ಮಗಳು ಅಳಿಯ ವಾಸಮಾಡುವಂತೆ ವರುಣ ಏರ್ಪಾಡು ಮಾಡಿದ್ದ.

**ಹಯವದನ ತನ್ನ ಪ್ರಿಯಳಾದ ಲಕ್ಷುಮಿಗೆ**
**ಜಯವಿತ್ತ ಕ್ಷೀರಾಂಬುಧಿಯಲ್ಲಿ ।**
**ಜಯವಿತ್ತ ಕ್ಷೀರಾಂಬುಧಿಯಲ್ಲಿ ಶ್ರೀಕೃಷ್ಣ**
**ದಯದಿ ನಮ್ಮೆಲ್ಲರ ಸಲಹಲಿ ॥**

ಹಯವದನ ಮೂರ್ತಿಯಾದ ಶ್ರೀಕೃಷ್ಣ ತನ್ನ ಪ್ರಿಯಳಾದ ಲಕ್ಷ್ಮಿಗೆ ಕ್ಷೀರಾಂಬುಧಿಯಲ್ಲಿ ಜಯವಿತ್ತ. ಅವನು ನಮ್ಮೆಲ್ಲರನ್ನೂ ಸಲಹಲಿ.

ಶ್ರೀವಾದಿರಾಜರ ಎಲ್ಲ ಕೃತಿಗಳಿಗೂ ಅಂಕಿತ 'ಹಯವದನ'

ಹಯಗ್ರೀವ ಹಯಗ್ರೀವ ಹಯಗ್ರೀವೇತಿಯೋ ವದೇತ್ ।
ತಸ್ಯ ನಿಃಸರತೇ ವಾಣೀ ಜಹ್ನುಕನ್ಯಾಪ್ರವಾಹವತ್ ॥

ಹಯಗ್ರೀವ ಹಯಗ್ರೀವ ಹಯಗ್ರೀವ ಎಂದು ಜಪಿಸುವವನಿಗೆ ಮಾತು ಗಂಗಾಪ್ರವಾಹದಂತೆ ಹರಿಯುತ್ತದೆ. ಶಬ್ದ ದಾರಿದ್ರ್ಯವಿಲ್ಲ. ಆಡಿದುದೇ ಕಾವ್ಯವಾಗುತ್ತದೆ. ಇದಕ್ಕೆ ವಾದಿರಾಜರೆ ಸಾಕ್ಷಿ. ಹಯಗ್ರೀವ ಭಕ್ತರಿಗೆ ಶಬ್ದ ಸಂಪತ್ತೇ ಕರಗತವಾಗುತ್ತದೆ. ಹಯಗ್ರೀವನಿಗೆ ಮಾತೆಂದರೇ ಉಸಿರಾಟದಷ್ಟು ಸಹಜವಾಗಿರುವುದರಿಂದ ಇದೇನೂ ಅಸಂಭಾವಿತವಲ್ಲ. ಅವನ ಉಸಿರಾಟದಿಂದಲೆ ವೇದಾದಿ ಶಾಸ್ತ್ರಗಳ ಧ್ವನಿ ಹೊರಡುತ್ತದೆ ಎಂದು ಬೃಹದಾರಣ್ಯಕೋಪನಿಷತ್ತು ಹೇಳುತ್ತದೆ–

ಅಸ್ಯ ಮಹತೋ ಭೂತಸ್ಯ ನಿಶ್ವಸಿತ ಮೇತದ್
ಯದ್ ಋಗ್ವೇದೋ ಯಜುರ್ವೇದಃ ಸಾಮವೇದಃ..... ॥

ಭಾಗವತವೂ ಹಾಗೇ ಹೇಳುತ್ತದೆ–

ವಾಚೋ ಬಭೂವುರುಶತೀಃ ಶ್ವಸತೋಽಸ್ಯ ನಸ್ತಃ ॥

ತಂತ್ರಸಾರ ಸಂಗ್ರಹವೂ ಹಾಗೇ ಹೇಳುತ್ತದೆ–

ಹಯಗ್ರೀವಾದಿಮಾ ವಿದ್ಯಾಃ ಶ್ವಸಿತತ್ವೇನ ನಿಃಸೃತಾಃ ।

ಹರಿ ಮೂಗಿನಿಂದ ವಿದ್ಯೋಪದೇಶ ಮಾಡುವುದು ಆಚ್ಚರಿಯೇನಲ್ಲ. ಏಕೆಂದರೆ ಅವನ ಪ್ರತಿಯೊಂದು ಇಂದ್ರಿಯವೂ ಅವಯವವೂ ಅವನ ಇತರ ಎಲ್ಲ

ಇಂದ್ರಿಯಗಳ ಅವಯವಗಳ ಕಾರ್ಯವನ್ನೂ ಅಷ್ಟೇ ಸಮರ್ಥವಾಗಿ ಮಾಡಬಲ್ಲವು.

ಹಯಗ್ರೀವರೂಪ ಜ್ಞಾನಕಾರ್ಯಕ್ಕಾಗಿ ಅವತರಿಸಿದ್ದರೂ ವೇದವ್ಯಾಸ ಕಪಿಲ ದತ್ತಾದಿಗಳಂತೆ ಕೇವಲ ಜ್ಞಾನ ಕಾರ್ಯಮಾಡದೆ ಬಲಕಾರ್ಯವನ್ನೂ ಮಾಡಿದೆ. ಜ್ಞಾನಕಾರ್ಯಕ್ಕೆ ಅಡಚಣೆ ತರುವ ಮಧುಕೈಟಭಾದಿಗಳನ್ನು ಕೊಂದಿದೆ. ಆದ್ದರಿಂದ ವಾದಿರಾಜರು ಹಯಗ್ರೀವನನ್ನು ಹೀಗೆ ಕೊಂಡಾಡಿದ್ದಾರೆ–

ಕುದುರೆ ಬಂದಿದೆ ವಾದಿರಾಜಗೆ
ಮುದದಿ ಜ್ಞಾನ ಬಕುತಿ ಕೊಡುವ
ಕುದುರೆ ಬಂದಿದೆ ಚೆಲುವ ಕುದುರೆ ಬಂದಿದೆ ।
ಹಿಂಗಾಲಿಂ ರಕ್ಕಸರ ಒದೆವ ಕುದುರೆ.... ॥

ಕುದುರೆಯನ್ನು ಸಂಸ್ಕೃತದಲ್ಲಿ ಹಯ ವಾಜಿ ಅರ್ವ ಅಶ್ವ ಎಂದೆಲ್ಲ ಕರೆದಿದ್ದಾರೆ. ಅದನ್ನು ಹೇಗೆ ಕರೆದರೂ ವೇಗವಾಗಿ ಓಡುವ ಪ್ರಾಣಿ ಎಂದೇ ಅರ್ಥ ಸಿಗುತ್ತದೆ. ಹಯ ಗತೌ ಧಾತುವಿನಿಂದ 'ಹಯ' ವಜ ಗತೌ ಧಾತುವಿನಿಂದ 'ವಾಜಿ' ಋ ಗತೌ ಧಾತುವಿನಿಂದ 'ಅರ್ವ' ಅಶೂ ವ್ಯಾಪ್ತೌ ಧಾತುವಿನಿಂದ 'ಅಶ್ವ' ವೇಗಾರ್ಥಕ ತುರಶಬ್ದದೊಡನೆ ಸೇರಿದ ಗಮ್ ಗತೌ ಧಾತುವಿನಿಂದ 'ತುರಗ', 'ತುರಂಗ', 'ತುರಂಗಮ' ಹೀಗೆ ಎಲ್ಲ ಶಬ್ದಗಳೂ 'ಸವಾರನನ್ನು ಹೊತ್ತು ವೇಗವಾಗಿ ಓಡುವುದರಲ್ಲಿ ಕುದುರೆ ಅದ್ವಿತೀಯ' ಎಂದು ಕುದುರೆಯನ್ನು ಹೊಗಳುತ್ತವೆ. ಈ ಶಾರೀರಿಕ ಓಟ ಮಾನಸಿಕ ಓಟಕ್ಕೆ ಸಂಕೇತವಾದಾಗ ಜ್ಞಾನದ ಓಟದಲ್ಲಿ ಅದ್ವಿತೀಯವಾದ ವಾದಿರಾಜರ 'ಚೆಲುವ ಹಯವದನನೆಂಬೋ ಕುದುರೆ'ಯೇ ಹಯ ವಾಜಿ ಎಂದೆಲ್ಲ ಕರೆಸಿಕೊಳ್ಳುತ್ತದೆ. ಆ ಕುದುರೆ ತಾನು ತಿಳಿದು ಪರರಿಗೆ ತಿಳಿಸುತ್ತದೆ.

ಇಲ್ಲಿ ಒಂದು ಪ್ರಶ್ನೆ ಬರಬಹುದು. ಜ್ಞಾನಾರ್ಥಕ ಹಯ ಅಶ್ವ ಮಂತಾದ ಶಬ್ದ ಹರಿಗೆ ಯೋಗ್ಯವಾದರೂ ಜ್ಞಾನವಿಲ್ಲದ ಪ್ರಾಣಿಯಾದ ಕುದುರೆಯಂಥ ಆಕಾರವೇಕೆ ? 'ಕುದುರೆ' ಎಂಬ ಕನ್ನಡ ಶಬ್ದ ಸಂಸ್ಕೃತ ಜನ್ಯವೆಂದಿಟ್ಟುಕೊಂಡರೆ 'ಕುದ್ರಿ' ಅನೃತ ಭಾಷಣೇ ಎಂಬ ಧಾತುವಿನಿಂದಾಗುವ ಆ ಶಬ್ದ ಆ ಪ್ರಾಣಿಗೇನೋ ಅನ್ವಯಿಸಬಹುದು. ಅದು ಮೇಲ್ತುಟಿ ಕೆಳತುಟಿಗಳನ್ನು ವೇಗವಾಗಿ ಕಂಪಿಸುತ್ತ ಸುಳ್ಳು ಹೇಳುವಂತೆ ಕಾಣಿಸಿಕೊಳ್ಳುತ್ತದೆ, ಆದರೆ ಶ್ರೀಹರಿ ಸುಳ್ಳಾಡುವುದಿಲ್ಲ.

'ನ ವಿಷ್ಣೋರ್ವಚನಂ ಕ್ವಾಪಿ ಮೃಷಾ ಭವತಿ'
'ವಿಷ್ಣುವಿನ ಮಾತು ಎಂದೂ ಸುಳ್ಳಾಗುವುದಿಲ್ಲ'

ಆದರೆ ಈ ಪ್ರಶ್ನೆಗೆ ಸಮಾಧಾನ ಸುಲಭ. ಹರಿಗೆ ಮತ್ಸ್ಯ ಕೂರ್ಮಾದಿ ಸಕಲ ಪ್ರಾಣಿಗಳ ಆಕಾರವಿದೆ. ಎಲ್ಲ ಪ್ರಾಣಿಗಳ ಅಂತರ್ಯಾಮಿಯಾದ ಆತ ಎಲ್ಲ ಆಕಾರಗಳಲ್ಲಿ ಸಚ್ಚಿದಾನಂದಮಯ ರೂಪದಿಂದಲೆ ಪ್ರಾಣಿಗಳ ಒಳಗಿರುತ್ತಾನೆ. ಆದರೆ ಆ ಪ್ರಾಣಿಜಾತಿಗೆ ಸಹಜವಾದ ಯಾವ ದೋಷವೂ ಹರಿಗಿಲ್ಲ.

'ಮತ್ಸ್ಯಕ ರೂಪ ಲಯೋದ ವಿಹಾರಿನ್'

ಎಂದು ದ್ವಾದಶ ಸ್ತೋತ್ರದಲ್ಲಿ 'ಕ' ಶಬ್ದದಿಂದ ಈ ಮತ್ಸ್ಯ ಎಲ್ಲ ಮತ್ಸ್ಯದಂತಲ್ಲ, ಆನಂದರೂಪ ಎಂದಿದ್ದಾರೆ ಶ್ರೀ ಮಧ್ವಾಚಾರ್ಯರು.

ಮತ್ಸ್ಯರೂಪ ಪ್ರಳಯ ಸಮುದ್ರದಲ್ಲಿ ಈಜುವುದಕ್ಕಾಗಿ, ಕೂರ್ಮರೂಪ ಭಾರ ಹೊರುವುದಕ್ಕಾಗಿ, ನೃಸಿಂಹರೂಪ ಹಿರಣ್ಯಕಶಿಪುವನ್ನು ಸೀಳುವುದಕ್ಕಾಗಿ, ಹಾಗೇ ಹಯಗ್ರೀವರೂಪ ಹಯಗ್ರೀವಾಸುರನನ್ನು ವಧಿಸುವುದಕ್ಕಾಗಿ. ಹಯಗ್ರೀವಾಕಾರದ ಶತ್ರುವಿನಿಂದಲೆ ನನಗೆ ಮರಣವೆಂದು ಹಯಗ್ರೀವಾಸುರ ಮಹಾಲಕ್ಷ್ಮಿಯಲ್ಲಿ ವರ ಬೇಡಿ ಪಡೆದಿದ್ದನಂತೆ ಈ ಹಯಗ್ರೀವಾಸುರ ಬೇರೆ. ಮತ್ಸ್ಯರೂಪದಿಂದ ಹರಿಯು ಕೊಂದ ಹಯಗ್ರೀವಾಸುರನೆ ಬೇರೆ.

ಶ್ರೀಹರಿ ಹಯಗ್ರೀವರೂಪ ತಳೆದ ರೀತಿ ಮಾತ್ರ ಆವನ ಘನತೆಗೆ ತಕ್ಕುದಲ್ಲ ಎಂದು ದೇವೀ ಭಾಗವತ ಸ್ಕಂದಪುರಾಣ ಮುಂತಾದುವನ್ನು ಕಂಡಾಗ ಅನಿಸಬಹುದು. ಗೆದ್ದಲು ಹುಳು ಬಿಲ್ಲಿನ ಹಗ್ಗವನ್ನು ಕಡಿದಾಗ ಬಿಲ್ಲಿನ ತುದಿ ಹಾರಿ ಹರಿಯ ಶಿರಚ್ಛೇದ ಮಾಡಿತೆಂದೂ ಒಂದು ಕುದುರೆಯ ತಲೆಯನ್ನು ತಂದು ವಿಶ್ವಕರ್ಮ ಸೇರಿಸಿದನೆಂದೂ ಅಲ್ಲಿ ಕತೆ ಇದೆ. ಆದರೆ ಹರಿಯ ಯಾವ ಅವತಾರರೂಪವೂ ಆಯಾ ಅವತಾರಕಾಲದಲ್ಲಿ ಉಂಟಾದುದಲ್ಲ ಗೆದ್ದಲು ಹುಳು ಹುಟ್ಟುವುದಕ್ಕೆ ಮುಂಚೆಯೆ, ಏಕೆ, ಬ್ರಹ್ಮಾಂಡ ಸೃಷ್ಟಿಗೆ ಮೊದಲೇ ಶುದ್ಧ ಸೃಷ್ಟಿಯಲ್ಲಿ ಹರಿ ತನ್ನ ಎಲ್ಲ ಅನಂತರೂಪಗಳನ್ನೂ ಮೂಲ ರೂಪದಿಂದ, ಒಂದು ದೀಪದಿಂದ ಲಕ್ಷದೀಪಗಳನ್ನು ತರುವಂತೆ ವ್ಯಕ್ತ ಮಾಡಿರುತ್ತಾನೆ ಆದ್ದರಿಂದಲೆ,

ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ
ಯೋ ವೈ ವೇದಾಂಶ್ಚ ಪ್ರಹಿಣೋತಿ ತಸ್ಮೈ ॥

ಎಂದು ಶ್ವೇತಾಶ್ವತರೋಪನಿಷತ್ತು ಹೇಳುವಂತೆ ಬ್ರಹ್ಮಾಂಡ ಸೃಷ್ಟಿಗಿಂತ ಮುಂಚೆ ಬೇರೆಲ್ಲ ಜೀವರ ಸೃಷ್ಟಿಗೆ ಮೊದಲು ಬ್ರಹ್ಮನನ್ನು ಹುಟ್ಟಿಸಿ ಹಯಗ್ರೀವ ರೂಪದಿಂದ ಸಕಲ ವೇದಗಳನ್ನೂ ಹರಿ ಉಪದೇಶಿಸಿದನೆಂದು ವಿಷ್ಣುರಹಸ್ಯ ಹೇಳಿದೆ. ಮುಂದೆ ಬ್ರಹ್ಮಾಂಡ ಸೃಷ್ಟಿಯಾದ ಬಳಿಕ ನಾಭಿಕಮಲದಲ್ಲಿ ಇನ್ನೊಮ್ಮೆ ಬ್ರಹ್ಮ ಹುಟ್ಟಿದಾಗ ಮಧುಕೈಟಭರು ವೇದಗಳನ್ನು ಅಪಹರಿಸಿದರೆಂದು ಅವರನ್ನು

ಕೊಲ್ಲಲು ಇನ್ನೊಮ್ಮೆ ಹಯಗ್ರೀವಾವತಾರವಾಗುತ್ತದೆ. ದಿತಿಯ ಮಗನಾಗಿ ಹುಟ್ಟಿ ಲೋಕಕಂಟಕನಾಗಿದ್ದ ಹಯಗ್ರೀವಾಸುರನನ್ನು ಕೊಲ್ಲಲ್ಲು ಮತ್ತೊಮ್ಮೆ ಹಯಗ್ರೀವಾವತಾರ. ಬ್ರಹ್ಮನು ಸತ್ರಯಾಗ ಮಾಡುವಾಗ ಮತ್ತೊಮ್ಮೆ ಅದೇ ಅವತಾರ. ವಾದಿರಾಜರಿಗೊಲಿದು ಬಂದಾಗ ಇನ್ನೊಮ್ಮೆ ಅದೇ ಅವತಾರ. ಹೀಗೆ ಅನೇಕ ಬಾರಿ ಅವತರಿಸಿದ್ದಾನೆ ಹಯಗ್ರೀವ ಮೂರ್ತಿ. ಸೃಷ್ಟಿಯ ಆದಿಯಲ್ಲಿ ವ್ಯಕ್ತವಾದ ರೂಪವೇ ಅನೇಕ ಬಾರಿ ಪ್ರಕಟವಾಗಿದೆ. ಇಲ್ಲಿ ಗೆದ್ದಲು ಹುಳುವಿನ ಕತೆಗೆ ಅವಕಾಶವೆ ಇಲ್ಲ.

ಬ್ರಹ್ಮದೇವರ ಸತ್ರದಲ್ಲಿ ಪ್ರಕಟನಾದ ಹಯಗ್ರೀವನನ್ನು ಛಂದೋಮಯನೆಂದು ಬ್ರಹ್ಮದೇವರೆ ಭಾಗವತದಲ್ಲಿ ವರ್ಣಿಸಿದ್ದಾರೆ. ಎಲ್ಲ ವೇದಗಳಿಗೂ ಆಧಾರ, ಅಂತರ್ಯಾಮಿ, ಪ್ರತಿಪಾದ್ಯ, ಉಪದೇಶಕ ಎಲ್ಲವೂ ಅವನೆ ಎಂದರ್ಥ ಆದ್ದರಿಂದ ಯಜುಃಶಾಖಿಗಳು ಆಪೋಹಿಷ್ಠಾದಿ ಮಂತ್ರಗಳಿಗೆ ಅಂಬರೀಷಾದಿ ಋಷಿಗಳನ್ನೂ ಅಬಾದಿ ದೇವತೆಗಳನ್ನೂ ಹೇಳದಿರುವುದು ರೂಢಿಯಾಗಿದೆ ಯಾಜ್ಞವಲ್ಕ್ಯರಿಗೆ ಶುಕ್ಲಯಜುರ್ವೇದವನ್ನು ಅಶ್ವರೂಪದ ಸೂರ್ಯ ಹೇಳಿದಂತೆ ಭಾಗವತದಲ್ಲಿ ಕಂಡರೂ ವಸ್ತುತಃ ಸೂರ್ಯಾಂತರ್ಗತ ಹಯಗ್ರೀವಮೂರ್ತಿಯೆ ಉಪದೇಶಿಸಿದವ ಹೀಗೆ ಹಯಗ್ರೀವ ಸೂರ್ಯಮಂಡಲದಲ್ಲಿದ್ದರೂ ಚಂದ್ರಮಂಡಲಧಲ್ಲಿ ಚಂದ್ರನಂತೆ ಶುಭ್ರವರ್ಣದಲ್ಲಿರುವ ಅವನನ್ನೆ ಆರಾಧಿಸಬೇಕು. ಆಗ ಬೇಗ ಒಲಿಯುತ್ತಾನೆ ಶ್ರೀಮಧ್ವಾಚಾರ್ಯರು ಹಯಗ್ರೀವಮಂತ್ರಧ್ಯಾನವನ್ನು,

ವಂದೇ ತುರಂಗವದನಂ ಶಶಿಬಿಂಬಸಂಸ್ಥಂ ಚಂದ್ರಾವದಾತಂ ।

ಎಂದು ಮುಂತಾಗಿ ತಂತ್ರಸಾರ ಸಂಗ್ರಹದಲ್ಲಿ ಹೇಳಿದ್ದಾರೆ.

ಸಾಕ್ಷಾತ್ ಸ ಯಜ್ಞಪುರುಷ ಸ್ತಪನೀಯವರ್ಣ: ।

ಎಂದು ಭಾಗವತದಲ್ಲಿ ಬ್ರಹ್ಮದೇವರು ವರ್ಣಿಸುವಂತೆ ಬಂಗಾರದ ಬಣ್ಣದ ಹಯಗ್ರೀವ ಮೂರ್ತಿಯೂ ಇದ್ದಾನೆ.

ಹರಿನ್ಮಣಿ ಮಣಿದ್ಯುತೀ ಹರ ವಿತಾಯಮಾನಸ್ತುತೀ
ವರಾಹ ತುರಗಾನನೌ ವನಜಲೋಚನೌ ನೌಮ್ಯಹಂ ॥

ಎಂದು ವಾದಿರಾಜರು ವರ್ಣಿಸುವಂತೆ ನೀಲವರ್ಣದ ಹಯಗ್ರೀವ ಮೂರ್ತಿಯೂ ಇದ್ದಾನೆ. ಎಲ್ಲ ವರ್ಣಗಳೂ ಇರುವುದರಿಂದ ವಿರೋಧವಿಲ್ಲ.

ಚಂದ್ರಮಂಡಲದಲ್ಲಿ ಹಯವದನ ನಾಲ್ಕು ಕೈಗಳಲ್ಲಿ ಶಂಖ ಅಕ್ಷಮಾಲೆ ಪುಸ್ತಕ ಜ್ಞಾನಮುದ್ರೆಗಳನ್ನು ಹಿಡಿದು ವೀರಾಸನದಲ್ಲಿ ಕುಳಿತಿದ್ದಾನೆ. ಈ ಭಂಗಿಯ ಸಾಂಕೇತಿಕ ಮಹತ್ವವನ್ನು ವಾದಿರಾಜರು ರುಕ್ಮಿಣೀಶವಿಜಯದಲ್ಲಿ ಹೀಗೆ ಬಣ್ಣಿಸಿದ್ದಾರೆ–

ಸಚ್ಛಾಸ್ತ್ರೋದಿತ ವರ್ತ್ಮನಾ ಪದಮಿದಂ ಧ್ಯಾಯನ್ ಮದಂಕಾಂಕಿತೋ
ಮನ್ಮಂತ್ರಂ ಜಪ ಶಾಸ್ತ್ರಸಂಪದಮಧೋ ದಾಸ್ಯಾಮಿ ಭಾಗ್ಯೈಃ ಸಹ ।
ತತ್ತತ್ತ್ವಾನ್ಯಪಿ ಬೋಧಯಾಮಿ ತದನು ಪ್ರಾಪ್ಯೋ ಮದಂಘ್ರಿ ರ್ಭವೇದ್
ಇತ್ಯಾಘೋಷಯತೀವ ಯಃ ಕರಚಯೈಸ್ತಂ ವಾಜಿವಕ್ತ್ರಂ ಭಜೇ ॥

ಎಡತೊಡೆಯ ಮೇಲೆ ಬಲಗಾಲಿಟ್ಟು ಕುಳಿತಿರುವುದರಿಂದ ಪುಸ್ತಕ ಹಿಡಿದ ಕೆಳಗಿನ ಎಡಗೈಯ ಕಿರುಬೆರಳು ಕೆಳಗೆ ಬಾಗಿ ಬಲಪಾದವನ್ನು ತೋರಿಸುತ್ತಿದೆ. ಸಚ್ಛಾಸ್ತ್ರಗಳಲ್ಲಿ ಹೇಳಿದಂತೆ ಈ ನನ್ನ ಪಾದವನ್ನು ಧ್ಯಾನಿಸು ಎನ್ನುತ್ತಿದೆ. ಶಂಖವನ್ನು ಹಿಡಿದಿರುವ ಮೇಲಿನ ಬಲಗೈ ಶಂಖಚಕ್ರಾದಿ ಮುದ್ರೆ ಧರಿಸಲು ಆದೇಶಿಸುತ್ತಿದೆ. ಅಕ್ಷಮಾಲೆ ಹಿಡಿದ ಮೇಲಿನ ಎಡಗೈ ಪ್ರಣವ ಹಯಗ್ರೀವಾದಿ ಮಂತ್ರಗಳನ್ನು ಜಪಿಸು ಎನ್ನುತ್ತಿದೆ. ಹೀಗೆ ಮಾಡಿದಾಗ ನಿನಗೆ ಶಾಸ್ತ್ರಸಂಪತ್ತನ್ನು ನೀಡುವೆನೆಂದು ಪುಸ್ತಕಯುಕ್ತವಾದ ಹಸ್ತ ಹೇಳುತ್ತದೆ ಜೊತೆಗೆ ನಿನ್ನ ದೇಹಧಾರಣೆಗೂ ಶಿಷ್ಯ ಸಂರಕ್ಷಣೆಗೂ ಬೇಕಾಗುವಷ್ಟು ಧನಧಾನ್ಯಾದಿ ಭಾಗ್ಯವನ್ನು ನಾನು ಕೊಡುವೆನೆನ್ನುತ್ತಿದೆ ಭಾಗ್ಯ ಸೂಚಕ ಶಂಖಯುಕ್ತ ಹಸ್ತ. ಆಗಲೆ ಶಾಸ್ತ್ರತತ್ವಗಳನ್ನು ನಿನಗೆ ಬೋಧಿಸುವೆನೆನ್ನುತ್ತದೆ ಜ್ಞಾನಮುದ್ರೆ ಧರಿಸಿದ ಕೆಳ ಬಲಗೈ. ಬಳಿಕ ವೈಕುಂಠಾದಿಗಳಲ್ಲಿ ನನ್ನ ಪಾದದ ಬಳಿ ನಿನಗೆ ಸ್ಥಾನ ಕೊಡುವೆನೆನ್ನುತ್ತದೆ ಪುಸ್ತಕ ಹಿಡಿದ ಕೈಯ ಕಿರುಬೆರಳು.

ಹಯಗ್ರೀವನಿಗೆ ಹಯಗ್ರೀವ ಭಕ್ಷ್ಯ ಕ್ಷೀರ ಲಡ್ಡಿಗೆಗಳು ಪ್ರಿಯ. ಅವುಗಳನ್ನು ಸ್ವೀಕರಿಸಿ ಭಕ್ತರಿಗೆ ಇನ್ನೊಂದು ರೂಪದಿಂದ ಅವನ್ನೆ ಕೊಡುತ್ತಾನೆ. ಭಕ್ತಿಯ ಕಡಲೆಗೆ ಜ್ಞಾನವೈರಾಗ್ಯಗಳ ಬೆಲ್ಲ ಸೇರಿಸಿಕೊಡುತ್ತಾನೆ. ಮೋಕ್ಷಾನಂದಕ್ಕೆ ಸದೃಶವಾದ ಸುಖದ ಕ್ಷೀರವನ್ನೂ ಧ್ಯಾನರೂಪದ ಲಡ್ಡಿಗೆಗಳನ್ನೂ ಕೊಡುತ್ತಾನೆ ಎಂದು ವಾದಿರಾಜರು ಬಣ್ಣಿಸಿದ್ದಾರೆ–

ಬಕುತಿ ಕಡಲೆ, ಜ್ಞಾನವೈರಾಗ್ಯ ಬೆಲ್ಲದ,
ಮುಕುತಿಯಾನಂದ ಸುಖದ ಕ್ಷೀರ, ಲಡ್ಡಿಗೆ
ಯುಕುತಿಧ್ಯಾನ ಕೊಟ್ಟು ನೀನು...... ॥

ವೇದಮಾತೆಯೆನಿಸಿದ ಗಾಯತ್ರಿಯಲ್ಲಿ ಸ್ತ್ರೀರೂಪಿ ಹಯಗ್ರೀವನಿದ್ದಾನೆ. ಅವನೆದೆಯಲ್ಲಿ– ಅವನು ಸ್ತ್ರೀರೂಪಿ ಇರಲಿ ಪುರುಷ ರೂಪನಿರಲಿ– ಶ್ರೀವತ್ಸವಿದೆ. ಲಕ್ಷ್ಮೀ ಸಮೇತನಾಗಿರುತ್ತಾನೆ ಅವನ ಮೈಯನ್ನು ಒಂದಂಗುಲವೂ ಬಿಡದೆ ಲಕ್ಷ್ಮಿ ಆಲಿಂಗಿಸಿಕೊಂಡಿರುತ್ತಾಳೆ ಇದು ಮಧುಕೈಟಭ ವೃತ್ತಾಂತದಲ್ಲಿ ಸ್ಪಷ್ಟವಿದೆ. ಆ ಅಸುರರು ವೇದಗಳನ್ನು ಕದ್ದಾಗ ಬ್ರಹ್ಮದೇವರ ಪ್ರಾರ್ಥನೆಯಂತೆ ಆ ವೇದಗಳನ್ನು ತಂದಿತ್ತು ಯೋಗನಿದ್ರೆಯಲ್ಲಿ ಮಲಗಿದ ಹಯಗ್ರೀವ. ಅಸುರರು ವೇದಗಳನ್ನು ಒಯ್ದುವರು ಯಾರೆಂದು ಹುಡುಕುತ್ತ ಬಂದು ಬ್ರಹ್ಮನನ್ನು ನುಂಗಲು ಬಂದರು. ಬ್ರಹ್ಮ ದೇವಿಯನ್ನು ಸ್ತುತಿಸುತ್ತಾನೆ, ದೇವನನ್ನು ಎಬ್ಬಿಸೆಂದು ಬೇಡುತ್ತಾನೆ. ಆಗ ದೇವಿ ಹರಿಯ ಕಣ್ಣು ಬಾಯಿ ಮೂಗು ತೋಳು ಎದೆ ಮುಂತಾದ ಅವಯುವಗಳಿಂದ ದೂರ ಸರಿದು ನಿಂತಳು. ಹರಿಯನ್ನು ತನ್ನಾಲಿಂಗನದಿಂದ ಮುಕ್ತನನ್ನಾಗಿ ಮಾಡಿದಳು–

ನೇತ್ರಾಸ್ಯ ನಾಸಿಕಾ ಬಾಹು ಹೃದಯೇಭ್ಯಸ್ತಥೋರಸಃ ।
ನಿರ್ಗಮ್ಯ ದರ್ಶನೇ ತಸ್ಥೌ ಬ್ರಹ್ಮಣೋಽವ್ಯಕ್ತ ಜನ್ಮನಃ ॥

ಬಳಿಕ ಹರಿ ಎದ್ದು ದಾನವರೊಡನೆ ಯುದ್ಧಮಾಡಿ ವಧಿಸಿದನೆಂದು ಮಾರ್ಕಂಡೇಯ ಪುರಾಣದಲ್ಲಿದೆ.

ಇಂಥ ಹಯವದನನೆ ಪ್ರಿಯಳಾದ ಲಕ್ಷ್ಮಿಗೆ ಜಯವಿತ್ತವ ಹಾಗೇ,

'ಊರ್ಜಿತಾ ಸಾ ಶ್ರೀರ್ಯತ್ಕಟಾಕ್ಷಬಲವತ್ಯಜಿತಂ ನಮಾಮಿ'

ಎಂದು ಶ್ರೀಮಧ್ವಾಚಾರ್ಯರು ಸ್ತೋತ್ರ ಮಾಡಿದ್ದಾರೆ. ಒಂದು ಕಟಾಕ್ಷ ಮಾತ್ರದಿಂದಲೆ ಸಮಸ್ತ ವಿಶ್ವಕ್ಕೆ ಸೃಷ್ಟಿಸ್ಥಿತಿ ಸಂಹಾರಾದಿ ಸಕಲ ಕಾರ್ಯ ಮಾಡಿ ಬ್ರಹ್ಮರುದ್ರಾದಿ ಸಕಲ ಪುರುಷರಿಗಿಂತ ಹೆಚ್ಚು ಶಕ್ತಿಯ ಸ್ತ್ರೀ ಎನಿಸಿದ್ದಾಳೆ ಮಹಾಲಕ್ಷ್ಮಿ ಈ ಮಹಿಮೆ ಅವಳಿಗೆ ದೊರೆತುದು ಅಜಿತನಾಮಕ ಹರಿಯ ಕಟಾಕ್ಷದಿಂದ.

ಇಲ್ಲಿ 'ಅಜಿತ' ನಾಮದಿಂದ ಒಂದು ಅಂಶ ಸೂಚಿತವಾಗುತ್ತಿದೆ. ಸಕಲ ಲೋಕಕ್ಕೂ ತಾಯಾಗಿ ಅಧಿಷ್ಠಾತ್ರಿಯಾಗಿ ಜಯಶಾಲಿನಿಯಾಗಿ ಮೆರೆಯುತ್ತಿದ್ದ ದೇವಿ ದೂರ್ವಾಸ ಶಾಪಕ್ಕೆ ಮರ್ಯಾದೆ ನೀಡಿ ಸ್ವಲ್ಪಕಾಲ ಪರಾಜಿತಳಾದಂತೆ ಲೋಕದಿಂದ ಮರೆಯಾದಳು. ಅವಳನ್ನು ಸಮುದ್ರ ಮಥನದಿಂದ ಆವಿರ್ಭಾವಗೊಳಿಸಿ ತಿರುಗಿ ಜಯನೀಡಿದವನೂ ಅಜಿತನೆ. ಈ ಅಭಿಪ್ರಾಯದಿಂದ ವಾದಿರಾಜರು 'ಹಯವದನ ತನ್ನ ಪ್ರಿಯಳಾದ ಲಕ್ಷ್ಮಿಗೆ ಜಯವಿತ್ತ' ಎಂದಿದ್ದಾರೆ.

ಹರಿಯ ರೂಪಗಳಲ್ಲಿ ಭೇದವಿಲ್ಲ. ಲಕ್ಷ್ಮಿಯನ್ನು ಆವಿರ್ಭಾವಗೊಳಿಸಿದ ಅಜಿತನೂ ಅವಳ ಕೈಯಿಂದ ಸ್ವಯಂವರ ಮಾಲಿಕೆಯನ್ನು ಹಾಕಿಸಿಕೊಂಡ

ತ್ರಿವಿಕ್ರಮರಾಯನೂ ಮದುವೆಯಾಗಿ ಎದೆಯಲ್ಲಿರಿಸಿಕೊಡು ಜಯವಿತ್ತ ಹಯವದನನೂ ಒಬ್ಬನೆ. ಆದ್ದರಿಂದಲೆ ಸ್ವಯಂವರ ಮಾಲಿಕೆಯನ್ನು ಹಾಕಿಸಿಕೊಂಡವನೂ ಹಯವದನಮೂರ್ತಿಯೆ ಎಂದು ವಾದಿರಾಜರು ಬಣ್ಣಿಸಿದ್ದಾರೆ–

ಗರುವಿ ಮಹಲಕ್ಷ್ಮಿ ತನ್ನ ವರನೆಂದು ಒಲಿದು ಬರುವ
ಉರದಿ ಶ್ರೀವತ್ಸ ಕೌಸ್ತುಭ ಧರಿಸಿ ತಾಂ ಮೆರೆಯುವಂಥ
ಕುದುರೆ ಬಂದಿದೆ ಚೆಲುವ ಕುದುರೆ ಬಂದಿದೆ ॥

ಹಯವದನ ಕ್ಷೀರಾಂಬುಧಿಯಲ್ಲಿ ಲಕ್ಷ್ಮಿಗೆ ಜಯವಿತ್ತ ಬಗೆಯನ್ನು 'ಪ್ರಿಯಳಾದ ಲಕ್ಷ್ಮಿಗೆ' ಎಂಬಲ್ಲಿ ಸೂಚಿಸಲಾಗಿದೆ–

ತಸ್ಯಾಃ ಶ್ರಿಯಸ್ತ್ರಿಜಗತೋ ಜನಕೋ ಜನನ್ಯಾ
ವಕ್ಷೋ ನಿವಾಸಮಕರೋತ್ ಪರಮಂ ವಿಭೂತೇಃ ॥

ಎಂದು ಭಾಗವತ ಹೇಳುವಂತೆ ದೇವಿಯನ್ನು ಹರಿ ಎದೆಯಲ್ಲಿರಿಸಿ ಕೊಂಡ.

ಸ್ವರಮಣನೆನಿಪ ರಮಣನುರದೊಳು ನೀನು
ಅರಮನೆಯ ಮಾಡಿ ಭಾಪುರೇ ಮೆರೆವೆ ಮುದದಿ ॥

ಸ್ವರಮಣನಾದರೂ ಹರಿ ರಮೆಯನ್ನು ತನ್ನೆದೆಯಲ್ಲಿರಿಸಿಕೊಂಡು ಅಲ್ಲಿಯೆ ಅವಳಿಗೆ ಅರಮನೆ ಮಾಡಿಕೊಟ್ಟನೆಂದರೆ ಅದೆಷ್ಟು ಪ್ರೀತಿ ಇರಬಹುದು ? ಇದೇ ಜಯ.

– ೧೦೮ –

**ಈ ಪದನ ಮಾಡಿದ ವಾದಿರಾಜೇಂದ್ರ ಮುನಿಗೆ**
**ಶ್ರೀಪತಿಯಾದ ಹಯವದನ ।**
**ತಾಪವ ಕಳೆದು ತನ್ನ ಶ್ರೀ ಚರಣಸ–**
**ಮೀಪದಲ್ಲಿಟ್ಟು ಸಲಹಲಿ ॥**

ಈ ಲಕ್ಷ್ಮೀಶೋಭನ ಪದವನ್ನು ರಚಿಸಿದ ಶ್ರೀವಾದಿರಾಜೇಂದ್ರಮುನಿಗೆ ಶ್ರೀಪತಿಯಾದ ಹಯವದನ ತಾಪವನ್ನು ಕಳೆದು ತನ್ನ ಶ್ರೀಚರಣದ ಸಮಿಪದಲ್ಲಿರಿಸಿ ಸಲಹಲಿ.

ಕವಿ ತನ್ನ ಕೃತಿಗೆ ಯೋಗ್ಯವಾದ ಫಲವನ್ನು ತನಗೆ ನೀಡಲೆಂದು ಮೊದಲಿಗೆ ಬೇಡುತ್ತಿದ್ದಾರೆ. ವಾದಿರಾಜರಿಗೆ ಹಯವದನನೊಲಿದು ಪ್ರತ್ಯಕ್ಷನಾಗಿ ಅವರ ಬೆನ್ನ

ಹಿಂದೆಯೆ ಸಂಚರಿಸುತ್ತ ಅವರ ತಾಪತ್ರಯವನ್ನೆಲ್ಲ ಕಳೆದು ತನ್ನ ಶ್ರೀ ಚರಣ ಸಮೀಪದಲ್ಲಿಯೆ ಇರಿಸಿಕೊಂಡಿದ್ದಾನೆ. ಸಲಹುತ್ತಲೆ ಇದ್ದಾನೆ. ಹಾಗೇ ಮುಂದೆಯೂ ಸಲಹಲಿ ಎಂದು ಪ್ರಾರ್ಥನೆ.

ಸಜ್ಜನರೆಲ್ಲರ ತಾಪತ್ರಯವನ್ನೂ ತನ್ನ ತಾಪತ್ರಯವೆಂದೇ ಭಾವಿಸಿ ಹರಿ ಅವರ ತಾಪತ್ರಯ ಕಳೆಯಲಿ, ಅವರಿಗೆ ತನ್ನ ಶ್ರೀಚರಣ ಸಾನ್ನಿಧ್ಯ ನೀಡಲಿ ಎಂದು ಪ್ರಾರ್ಥನೆ ಮಾಡುವರೆಂದೂ ಇಟ್ಟುಕೊಳ್ಳಬಹುದು.

ತಾಪ ಕಳೆಯುವುದೆಂದರೆ ಸಕಲ ಸಾಂಸಾರಿಕ ತಾಪ ಕಳೆಯುವುದು, ಮೋಕ್ಷ ನೀಡುವುದೆಂದೂ ಅಭಿಪ್ರಾಯವಿದೆ. ಏಕೆಂದರೆ 'ಶ್ರೀಚರಣ ಸಮೀಪ'ವೆಂದರೆ ಮೋಕ್ಷವೆ– 'ಭೇಜೇ ಖಗೇಂದ್ರಧ್ವಜಪಾದಮೂಲಂ'

'ಪರೀಕ್ಷಿದ್ರಾಜನು ಗರುಡಧ್ವಜನ ಪಾದಮೂಲವನ್ನು ಅಂದರೆ ಮೋಕ್ಷವನ್ನು ಹೊಂದಿದನೆಂ'ದು ಭಾಗವತ ಹೇಳುತ್ತಿದೆ.

ಪಾದಮೂಲವೆಂದರೆ ಪಾದಸಮೀಪ. ಹೀಗಾಗಿ 'ಪಾದಮೂಲ' 'ಶ್ರೀಚರಣ ಸಮೀಪ'ಗಳು ಒಂದೇ. ಪಾದಮೂಲವೆಂದರೆ ವೈಕುಂಠ ಮಹರಾದಿಗಳೆಂದು ವ್ಯಾಖ್ಯಾನಕಾರರು ಹೇಳಿದ್ದಾರೆ. ಇದರಿಂದ ಸಾರೂಪ್ಯ ಸಾಮೀಪ್ಯ ಸಾಲೋಕ್ಯ ಎಂಬ ಮೂರು ಬಗೆಯ ಮೋಕ್ಷಗಳನ್ನೂ ಹೇಳಿದಂತಾಯಿತು.

ಎಲ್ಲ ಜ್ಞಾನಿಗಳೂ ಪ್ರಕೃತಿಬಂಧದಿಂದ ಮುಕ್ತರಾಗಿ,

'ಪರಮಂ ಸಾಮ್ಯಮುಪೈತಿ ।'

ಎಂದು ಕಠೋಪನಿಷತ್ತು ಹೇಳುವಂತೆ,

'ಇದಂ ಜ್ಞಾನಮುಪಾಶ್ರಿತ್ಯ ಮಮ ಸಾಧರ್ಮ್ಯಮಾಗತಾಃ ।'

ಎಂದು ಭಗವದ್ಗೀತೆ ಹೇಳುವಂತೆ,

ಸರ್ವೇ ಚತುರ್ಬಾಹವ ಉನ್ಮಿಷನ್ಮಣಿಪ್ರವೇಕನಿಷ್ಕಾಭರಣಾಃ ಸುವರ್ಚಸಃ ।

ಎಂದು ಭಾಗವತ ಹೇಳುವಂತೆ ಸಚ್ಚಿದಾನಂದ ಸ್ವರೂಪದಿಂದಲೂ ಚತುರ್ಭುಜ ಶಂಖಚಕ್ರಾದಿ ಆಕೃತಿ ವೇಷ ಭೂಷಣಗಳಿಂದಲೂ ಹರಿಗೆ ಸರೂಪರೆನಿಸುತ್ತಾರೆ.

ಈ ಸಾರೂಪ್ಯ ಎಲ್ಲ ಮುಕ್ತರಿಗೂ ಸಮಾನ. ಕೆಲವರು ಸಾಮೀಪ್ಯಾದಿಗಳನ್ನೂ ಹೊಂದುತ್ತಾರೆ. ಆದ್ದರಿಂದ ಅವರ ಮುಕ್ತಿ ಸಾಮೀಪ್ಯಾದಿ ಶಬ್ದಗಳಿಂದ ವ್ಯವಹರಿಸಲ್ಪಡುತ್ತದೆ. ಸಾಮೀಪ್ಯಾದಿಗಳಿಲ್ಲದೆ ಕೇವಲ ಸಾರೂಪ್ಯವಿರುವ

ಮುಕ್ತರನ್ನು ಸಾರೂಪ್ಯ ಮುಕ್ತರೆಂದು ವ್ಯವಹರಿಸಲಾಗಿದೆ. ಆದ್ದರಿಂದ ಮಹರಾದಿ ಲೋಕಗಳಲ್ಲಿರುವ 'ಸಾರೂಪ್ಯಮುಕ್ತರು ಶ್ರೀಚರಣ ಸಮೀಪದಲ್ಲಿದ್ದಂತಾಯಿತು. ವೈಕುಂಠಾದಿ ಧಾಮತ್ರಯದಲ್ಲೇ ಇರುವವರು ಸಾಲೋಕ್ಯಮುಕ್ತರು. ಇವರೂ 'ಶ್ರೀಚರಣ ಸಮೀಪ'ದಲ್ಲೆ ಇದ್ದಾರೆ. ಧಾಮತ್ರಯದ ಹೊರವಲಯದ ಕ್ಷೀರಸಾಗರ ಘನೋದಕ ಸಾಂತಾನಿಕ ಲೋಕಗಳಲ್ಲಿರುವವರು ಸಾಮೀಪ್ಯಮುಕ್ತರು. ಅವರು ಮಹರಾದಿಗಳಲ್ಲಿಲ್ಲ. ವಿಷ್ಣುಲೋಕದಲ್ಲೂ ಇಲ್ಲ ಅದರ ಸಮೀಪವಿದ್ದಾರೆ. 'ವೈಕುಂಠ ಮಹರಾದಿ' ಎಂಬಲ್ಲಿ 'ಆದಿ'ಪದದಿಂದ ಕ್ಷೀರಸಾಗರಾದಿಗಳೂ ವಿವಕ್ಷಿತ

ತತ್ವಾಭಿಮಾನಿಗಳಿಗೆ ಸಾಯುಜ್ಯಮುಕ್ತಿ. ಅಂದರೆ, ಅವರು ಭಗವಂತನ ಯಾವ ಅಂಗಗಳಿಂದ ಹುಟ್ಟಿರುವರೋ ಆ ಅಂಗಗಳಲ್ಲಿಯೆ ಇದ್ದು ಅಲ್ಲಿಯೆ ಮುಕ್ತಿ ಹೊಂದುತ್ತಾರೆ. ಆದ್ದರಿಂದ 'ಶ್ರೀಚರಣ' ಎಂಬಲ್ಲಿ ಚರಣ ಶಬ್ದದಿಂದ ಉಪಲಕ್ಷಣವಾಗಿ ಚಕ್ಷುರಾದಿ ಅಂಗಗಳನ್ನೂ ಇಟ್ಟುಕೊಂಡರೆ ಅಂಗಸಾಯುಜ್ಯ ಮೋಕ್ಷವನ್ನೂ ಹೇಳಿದಂತಾಯಿತು.

ಜಿತಂತೇ ಸ್ತೋತ್ರದಲ್ಲಿ ಬ್ರಹ್ಮದೇವರು,

ತ್ವತ್ಪಾದಪಂಕಜಂ ಪ್ರಾಪ್ಯಂ ನಾನ್ಯತ್ ತ್ವತ್ಕರುಣಾಂ ವಿನಾ....... ।
ತ್ವತ್ಪಾದ ಪಂಕಜಸ್ಯಾಧೋ ಜೀವಿತಂ ಮಮ ದೀಯತಾಂ....... ।
ತ್ವತ್ಪಾದ ಮೂಲಂ ಶರಣಂ ... ।

ಎಂದೆಲ್ಲ ಹೇಳುವಾಗ ಪಾದಶಬ್ದ ಸ್ವರೂಪ ವಾಚಕವೆಂದೇ ಇಟ್ಟುಕೊಳ್ಳಬೇಕಾಗುತ್ತದೆ. ಇಲ್ಲದಿದ್ದರೆ ಬ್ರಹ್ಮದೇವರಿಗೆ ಸರ್ವಾಂಗ ಸಾಯುಜ್ಯವೆನ್ನುವುದು ಕೂಡಲಾರದು. ಅದೇ ರೀತಿ ಪ್ರಕೃತದಲ್ಲಿ 'ಶ್ರೀಚರಣ'ವೆಂದರೂ ಭಗವಂತನ ಪೂರ್ಣಶರೀರವಿಟ್ಟುಕೊಳ್ಳಬೇಕು.–

ಉತ್ತಮಾನಾಂ ತು ಪಾದೇನ ಸರ್ವಂ ರೂಪಂ ತು ಭಣ್ಯತೇ ।

ಹೀಗೆ 'ಚರಣ' ಶಬ್ದದಿಂದಲೆ ಅಂಗ ಸಾಯುಜ್ಯ ಸರ್ವಾಂಗ ಸಾಯುಜ್ಯಗಳೆರಡೂ ಸಿಗುತ್ತವೆ.

ಅಂಗ ಸಾಯುಜ್ಯವೆಂದರೆ ಅಂಗದಲ್ಲೆ ಇರಬೇಕು, ಅಂಗಸಮೀಪದಲ್ಲಿ ಅಲ್ಲ ಎನ್ನಕೂಡದು. ಅಂಗದಲ್ಲೆ ಇರುವುದೆಂದರೆ ಅಂಗದ ಅತ್ಯಂತ ಸಾಮೀಪ್ಯವೆ ತಾನೆ? ಆದ್ದರಿಂದ ನಾಲ್ಕೂ ಬಗೆಯ ಮೋಕ್ಷ ಲಕ್ಷ್ಮೀಶೋಭನ ಪದದ ಫಲವೆಂದಂತಾಯಿತು.

'ಶ್ರೀಚರಣ ಸಮೀಪದಲ್ಲಿಟ್ಟು ಸಲಹಲಿ' ಎಂಬ ಈ ಪ್ರಾರ್ಥನೆಯನ್ನು ವಾದಿರಾಜರು ತಮ್ಮ ಒಂದು ಸ್ವಾಪ್ನ ಪದ್ಯದಲ್ಲಿಯೂ ಹೀಗೆ ಮಾಡಿದ್ದುಂಟು–

ಸುದರ್ಶನ ಪದಾಂಭೋಜ ಸಮೀಪಸ್ಥೋऽಹಮನ್ವಹಂ

ಗೃಹೀತಮಸ್ತಕಸ್ತು ಸ್ಯಾಂ ಭಯಭಂಜನಪಾಣಿನಾ

'ಸುದರ್ಶನ ನಾಮಕನಾದ ಹರಿಯ ಪಾದಕಮಲಸಮೀಪದಲ್ಲಿ ನಾನು ಸದಾ ಇರಬೇಕು. ನನ್ನ ಶಿರಸ್ಸಿನಲ್ಲಿ ಅವನು ತನ್ನ ಅಭಯ ಹಸ್ತವಿಡಬೇಕು'.

ವಾದಿರಾಜರಿಗೆ ಹಯವದನ ಹೀಗೆ ತನ್ನ ಶ್ರೀಚರಣ ಸಮೀಪದಲ್ಲಿ [illegible] ಸಲಹುತ್ತಲೆ ಇದ್ದಾನೆ ಎನ್ನುವುದಕ್ಕೆ ಆ ಶ್ರೀಪತಿ ಹಯವದನನಾಗಿ ಪ್ರತ್ಯಕ್ಷನಾದುದೇ ಸಾಕ್ಷಿ. ಆತ ಚೆಲುವ ಕುದುರೆಯಾಗಿ ಕುಣಿದುಕೊಂಡೇ ಬಂದ. 'ಆವಕಡೆಯಿಂದ ಬಂದೆ ವಾಜಿ ವದನನೆ!' ಎಂದು ಅಚ್ಚರಿ ರಾಜರಿಗೆ. ನೇವರಿಸಿ ಮೈಯ ತಡವಿ ನೇಹದಿಂದ ಮಡ್ಡಿ ಮುದ್ದೆ ಕ್ಷೀರಲಡ್ಡಿಗೆ ತಿನಿಸಿದರು. ತುತ್ತುಮಾಡಿ ನೀಡಿದರು. ಆತ ಎಲ್ಲವನ್ನೂ ಮೆದ್ದ, ಮೆಚ್ಚಿದ. ಧನ್ಯರು ರಾಜರು! ಹೀಗೆ ಶ್ರೀಪತಿಯಾದ, ಹಯವದನ!

ಆ ಹಯವದನನೂ ಶ್ರೀಪತಿಯಾದ. ಶ್ರೀದೇವಿ ವರಿಸಿದ ಪತಿಯಾಗಿ ಕಾವ್ಯ ನಾಯಕನಾಗಿ ಲಕ್ಷ್ಮೀಶೋಭನ ಪದವನ್ನು ಸ್ವಪ್ನದಲ್ಲಿ ರಾಜರಿಂದ ಹಾಡಿಸಿಕೊಂಡ.

ಲಕ್ಷ್ಮಿಗೆ ಎದೆಯಲ್ಲಿ ಆಶ್ರಯನೀಡಿ ಅವಳನ್ನು ಶ್ರೀದೇವಿಯನ್ನಾಗಿಸಿ ಶ್ರೀಪತಿಯಾದ. ಎದೆಯಲ್ಲಿ ಕುಳಿತ ಆ ಶ್ರೀದೇವಿಯೆ ಇನ್ನೊಂದು ರೂಪದಿಂದ ಚರಣಸೇವೆ ಮಾಡುತ್ತ ಚರಣವನ್ನು ಶ್ರೀಚರಣವನ್ನಾಗಿಸಿದ್ದಾಳೆ. ಆ ಶ್ರೀಚರಣದ ಬಳಿ ತಾನಿದ್ದು ಸೇವೆ ಮಾಡುವ ಹಂಬಲ ರಾಜರಿಗೆ. ಅವರಿಗಿನ್ನೇನೂ ಬೇಡ.

— ೧೧೯ —

**ಇಂತು ಸ್ವಪ್ನದಲ್ಲಿ ಕೊಂಡಾಡಿಸಿಕೊಂಡ ಲಕ್ಷ್ಮೀ**
**ಕಾಂತನ ಕಂದನೆನಿಸಿದ ।**
**ಸಂತರ ಮೆಚ್ಚಿನ ವಾದಿರಾಜೇಂದ್ರ ಮುನಿ**
**ಪಂಥದಿ ಪೇಳಿದ ಪದವಿದು ॥**

ಹೀಗೆ ವಾದಿರಾಜರಿಂದ ಸ್ವಪ್ನದಲ್ಲಿ ಕೊಂಡಾಡಿಸಿಕೊಂಡವನು ಲಕ್ಷ್ಮೀಕಾಂತ. ಅವನ ಕಂದನೆನಿಸಿದ ಸಂತರ ಮೆಚ್ಚಿನ ವಾದಿರಾಜೇಂದ್ರ ಮುನಿ ಪಂಥದಲ್ಲಿ ಹೇಳಿದ ಪದ ಇದು.

ಹಿಂದಿನ ನುಡಿಯಲ್ಲಿ ವಾದಿರಾಜರು ತನ್ನ ಕೃತಿಗೆ ಯೋಗ್ಯವಾದ ಫಲವನ್ನು ತನಗೆ ಬೇಡಿದ್ದಾರೆ. ಈಗ ಈ ಕೃತಿ ಸ್ವಾಪ್ನಪದ ಎಂದು ಮುಂತಾಗಿ ಹೊಗಳಿ ಮಹಾಫಲಕ್ಕೆ ಅದು ಅರ್ಹ ಎನ್ನುತ್ತಿದ್ದಾರೆ.

ವಾದಿರಾಜರು ಅನೇಕ ಕಡೆ ಹರಿಯನ್ನು ಸ್ವಪ್ನದಲ್ಲಿ ಕೊಂಡಾಡಿದುದುಂಟು.

ಉದಾ. ಯುಕ್ತಿಮಲ್ಲಿಕೆಯ ಮೊದಲ ಪದ್ಯದ ನಾಲ್ಕನೇ ಚರಣ–

ತಸ್ಮೈ ಕಸ್ಮೈಚಿದಸ್ಮನ್ಮನಸಿ ಧೃತಕಥಾವಿಸ್ಮೃತೌ ಸ್ಮಾರಕಾಯ ।

ಇದನ್ನು ಸ್ವಾಪ್ನವಾಕ್ಯವೆಂದು ಟೀಕಾಕಾರರಾದ ಶ್ರೀ ಸುರೋತ್ತಮತೀರ್ಥರು ಹೇಳಿದ್ದಾರೆ. ತೀರ್ಥಪ್ರಬಂಧದಲ್ಲಿಯೂ ಒಂದು ಪದ್ಯ–

ರೂಪ್ಯಾತ್ಮಕಾಮರಪುರಃಸರ ಸನ್ನಿರೂಪ್ಯ
ರೂಪ್ಯಾತ್ಮಕಂ ಚ ಭವತಃ ಕೃಪಯಾಗತಸ್ಯ ।
ರೂಪ್ಯಾತ್ಮಕಾಲಯಕೃತಾಲಯ ಯತ್ ತ್ವಮೇವ
ರೂಪ್ಯಾತ್ಮನೋ ಗತಿರಿಹಾಪಿ ತದೀಶ ಪಾಹಿ ॥

ಇದನ್ನು ಸ್ವಾಪ್ನಪದ್ಯ ಎಂದು ವ್ಯಾಖ್ಯಾನಕಾರರಾದ ನಾರಾಯಣಾಚಾರ್ಯರು ಹೇಳಿದ್ದಾರೆ. ಹಿಂದೆ ಹೇಳಿದ ಒಂದು ಮುಕ್ತಕ ಶ್ಲೋಕ–

ಸುದರ್ಶನ ಪದಾಂಭೋಜ ಸಮೀಪಸ್ಥೋಽಹಮನ್ವಹಂ ।
ಗೃಹೀತ ಮಸ್ತಕಸ್ತು ಸ್ಯಾಂ ಭಯಭಂಜನ ಪಾಣಿನಾ ॥

ಇದು ಸ್ವಾಪ್ನಪದ್ಯ ಎಂದು ಪ್ರಸಿದ್ಧ.

ನೆನೆವೆ ನಾರಾಯಣನ ಪಾದವ ನೆನೆವೆ ನಾರಾಯಣಿಯ ಚರಣವ ।

ಇತ್ಯಾದಿಯಾದ ಕನ್ನಡ ಕೃತಿಯೊಂದು 'ಸ್ವಪ್ನಪದ'ವೆಂದೇ ಪ್ರಸಿದ್ಧವಾಗಿದೆ. ಹೀಗೆ ವಾದಿರಾಜರು ಕನಸಿನಲ್ಲೂ ಕಾವ್ಯ ದ್ರಷ್ಟಾರರಾದ ಕವಿಕುಲತಿಲಕರು. ಈ ಲಕ್ಷ್ಮೀ ಶೋಭನಪದವೂ ಒಂದು ಅದ್ಭುತವಾದ ಸ್ವಪ್ನಪದ. ವಾದಿರಾಜರ ಬೇರೆ ಸ್ವಾಪ್ನಪದ್ಯಗಳನ್ನು ಟೀಕಾಕಾರರ ಮಾತಿನಿಂದಲೋ ಕೇವಲ ಐತಿಹ್ಯದಿಂದಲೋ ಗುರುತಿಸಬೇಕಾಗುತ್ತದೆ. ಲಕ್ಷ್ಮೀಶೋಭನಪದವನ್ನು ಮಾತ್ರ ಸ್ವತಃ ರಾಜರೆ ಸ್ವಪ್ನಪದವೆಂದು ಹೇಳಿದ್ದಾರೆ.

ಇಲ್ಲಿ ಒಂದು ಆಕ್ಷೇಪ ಬರಬಹುದು– 'ಇಂತು ಸ್ವಪ್ನದಲ್ಲಿ ಕೊಂಡಾಡಿಸಿಕೊಂಡ' ಎಂಬಲ್ಲಿ 'ಇಂತು' ಶಬ್ದವನ್ನು 'ಪಂಥದಿ ಪೇಳಿದ ಪದವಿದು' ಎಂಬಲ್ಲಿಗೆ ಅನ್ವಯಿಸಿದರೆ ಲಕ್ಷ್ಮೀಶೋಭನಪದ ಸ್ವಾಪ್ನಕೃತಿ ಎಂದಾಗುವುದಿಲ್ಲ. 'ಸ್ವಪ್ನಪದ'ವೆಂದೆ ಪ್ರಸಿದ್ಧವಾದ ಕನ್ನಡ ಪದದಿಂದ ಸ್ವಪ್ನದಲ್ಲಿ ಕೊಂಡಾಡಿಸಿಕೊಂಡವ ಲಕ್ಷ್ಮೀಕಾಂತನೆಂದಾಗುವುದು. 'ಇಂತು ಸ್ವಪ್ನದಲ್ಲಿ ಕೊಂಡಾಡಿಸಿಕೊಂಡ' ಎಂದು ನೇರ ಅನ್ವಯ ಸಂದಿಗ್ಧ. ಲಕ್ಷ್ಮೀ ಶೋಭನಪದ ಸ್ವಾಪ್ನಕೃತಿಯೆಂದು ಪ್ರಸಿದ್ಧಿ ಇರುತ್ತಿದ್ದರೆ

ಹಾಗೆ ಅನ್ವಯ ಮಾಡಬಹುದಾಗಿತ್ತು. ಆದರೆ ಸರ್ಪಕಚ್ಚಿ ಸತ್ತ ಮದುಮಗನನ್ನು ಬದುಕಿಸಲು ರಚಿಸಿದ ಕೃತಿಯೆಂದೇ ಪ್ರಸಿದ್ಧಿ. ಆದ್ದರಿಂದ ಸ್ವಪ್ನಕೃತಿಯೆನ್ನಲು ಆಧಾರ ಸಾಲದು.

ಇದಕ್ಕೆ ಸಮಾಧಾನ– ಸ್ವಪ್ನಪದವೆಂದು ಪ್ರಸಿದ್ಧವಾದ ಕನ್ನಡಕೃತಿಯಲ್ಲಿ ವಾದಿರಾಜರಿಂದ ಹರಿ ತನ್ನನ್ನು ಕೊಂಡಾಡಿಸಿಕೊಳ್ಳಲಿಲ್ಲ. ತನ್ನನ್ನು ತಾನೆ ಕೊಂಡಾಡಿದ್ದಾನೆ. ಅದನ್ನು ವಾದಿರಾಜರಿಗೆ ಉಪದೇಶಿಸಿದ್ದಾನೆ. ಅದನ್ನು ಸ್ವಪ್ನದಲ್ಲಿಯೆ ಕೇಳಿ ಸಂಗ್ರಹಿಸಿ ಲೋಕಕ್ಕೆ ಕೊಟ್ಟಿದ್ದಾರೆ, ವಾದಿರಾಜರು. ಅವರೇ ಹೇಳುತ್ತಾರೆ–

'ಶ್ರೀ ಹಯವದನ ಸ್ವಪ್ನದೊಳೆನಗೆ ಪೇಳಿದ ಪದವ ಲೋಕದ
ಜನರಿಗಿದ ಸಂಗ್ರಹವ ಮಾಡುವೆನವನ ಕೃಪೆಯಿಂದ ।'
'ವಾದಿರಾಜಗೆ ದೇವ ಕಲಿಸಿದ ಮಾಧವನ ಗುಣಮಾಲೆ'
'ಇಂತು ಸ್ವಪ್ನಾವಸ್ಥೆಯಲಿ ಮಾಕಾಂತ......
ವಾದಿರಾಜಗೆ ನಿಂತು ಪೇಳಿದ ಪದ ।'

ಆದ್ದರಿಂದ 'ಸ್ವಪ್ನಪದ' ಸ್ವಪ್ನದಲ್ಲಿ ಕೇಳಿದ ಪದ ಲಕ್ಷ್ಮೀ ಶೋಭನ ಪದ ಸ್ವಪ್ನದಲ್ಲಿ ಕಂಡುಹೋದ ಹರಿಯನ್ನು ಕೊಂಡಾಡಿದ ಪದ. ಹರಿ ರಾಜರಿಂದ ಕೊಂಡಾಡಿಸಿಕೊಂಡ ಪದ. ಮೊದಲೇ ಸ್ವಪ್ನದಲ್ಲಿ ಸಸ ಕಂಡಿದ್ದರು. ಮದುಮಗನನ್ನು ಬದುಕಿಸಲೆಂದು ಅದನ್ನೇ ಹಾಡಿದರು. ಮದುಮಗ ಬದುಕಿ ಬಂದುದರಿಂದ ಲಕ್ಷ್ಮೀ ಶೋಭನ ಪದ ಪ್ರಸಿದ್ಧವಾಯಿತು.

ಹೀಗೂ ಕೆಲವರು ಸಂದೇಹ ಪಡುತ್ತಾರೆ– 'ಹಯವದನ ತನ್ನ ಪ್ರಿಯಳಾದ ಲಕ್ಷುಮಿಗೆ ಜಯವಿತ್ತ ಕ್ಷೀರಾಂಬುಧಿಯಲ್ಲಿ' ಎಂಬಲ್ಲಿ ವಾದಿರಾಜರ 'ಹಯವದನ' ಅಂಕಿತವಿದ್ದು 'ಶ್ರೀಕೃಷ್ಣದಯದಿ ನಮ್ಮೆಲ್ಲರ ಸಲಹಲಿ' ಎಂದು ಕೃತಿ ಮುಕ್ತಾಯಗೊಂಡಿದೆ. ಮುಂದಿನ ಐದು ಪದ್ಯಗಳಲ್ಲಿ ಕೃತಿಕಾರನ ಹೆಸರು ಕೃತಿಯನ್ನು ಕೇಳಿದರೆ ಫಲ ಮೊದಲಾದ ವಿವರಗಳಿವೆ. 'ವಾದಿರಾಜಮುನಿಗೆ' 'ಸಂತರ ಮೆಚ್ಚಿನ ವಾದಿರಾಜೇಂದ್ರಮುನಿ' 'ಶ್ರೀಯರಸ ಹಯವದನ ಪ್ರಿಯ ವಾದಿರಾಜರಾಯ' ಇತ್ಯಾದಿ ಮಾತುಗಳು 'ಶ್ರೀಪತಿಯಾದ ಹಯವದನ ತಾಪವ ಕಳೆದು ತನ್ನ ಶ್ರೀಚರಣಸಮೀಪದಲ್ಲಿಟ್ಟು ಸಲಹಲಿ' ಎನ್ನುವ ಹಾರೈಕೆ ಇವುಗಳನ್ನು ಗಮನಿಸಿದಾಗ ಅವು ಶ್ರೀಪಾದರಾಜರ ಮಧ್ವನಾಮಕ್ಕೆ ಜಗನ್ನಾಥದಾಸರು ಫಲಸ್ತುತಿ ಬರೆದಿರುವಂತೆ ಜಗನ್ನಾಥದಾಸರ ಹರಿಕಥಾಮೃತಸಾರಕ್ಕೆ ಶ್ರೀದ ವಿಟ್ಠಲರ ಫಲಸ್ತುತಿ ಇರುವಂತೆ ಈ ಕೃತಿಗೆ ಬೇರೆ ಯಾರೋ ಬರೆದಿರುವ ಫಲಸ್ತುತಿಯೆನಿಸುತ್ತದೆ'.

ಈ ಸಂದೇಹ ನಿರಾಧಾರ. ಬೇರೆ ಯಾರೋ ಫಲಸ್ತುತಿ ಬರೆದಿದ್ದರೆ ಅವರು ತಮ್ಮ ಅಂಕಿತ ಸೇರಿಸುತ್ತಿದ್ದರು. ಜಗನ್ನಾಥದಾಸರೂ ಶ್ರೀದದಾಸರೂ ಹಾಗೇ ಮಾಡಿದ್ದಾರೆ. ಬೇರೆ ಯಾರೋ ಬರೆದಿದ್ದರೂ ಸಂಪ್ರದಾಯದಲ್ಲಿ ಬಂದಿರುವುದರಿಂದ ಬಿಡುವುದು ಉಚಿತವಲ್ಲ.

ವಸ್ತುತಃ ವಾದಿರಾಜರ ಕೃತಿಗಳನ್ನು ಅವಲೋಕಿಸಿದರೆ ಅವರು ತಮ್ಮ ಕೃತಿಗೆ ತಾವೇ ಫಲಸ್ತುತಿ ಹೇಳುವುದು ಸಾಮಾನ್ಯವಾಗಿ ಕಂಡುಬರುತ್ತದೆ. ಉದಾ: ರುಕ್ಮಿಣೀಶವಿಜಯದಲ್ಲಿ ಪ್ರತಿಸರ್ಗದ ಕೊನೆಯಲ್ಲೂ 'ಈ ಕೃತಿ ವಾದಿರಾಜ ರಚಿತ. ಅದ್ಭುತ ರೋಮಾಂಚಕರ, ಶ್ರವಣ ಮಾತ್ರದಿಂದ ಪಾಪಹರ' ಎಂದು ಮುಂತಾಗಿ ಹೇಳಿದ್ದಾರೆ. ಸಮಗ್ರ ಕೃತಿಯ ಕೊನೆಯಲ್ಲಿ 'ಹಯಗ್ರೀವನ ದಯೆಯಿಂದ ಅವನ ದಾಸನಾದ ವಾದಿರಾಜಯತಿ ರಚಿಸಿದ ಕಾವ್ಯವಿದು' ಎಂದು ಅಂಕಿತವನ್ನೂ 'ವಾದಿರಾಜ' ಎಂದು ತನ್ನ ಹೆಸರನ್ನೂ ಉಲ್ಲೇಖಿಸಿ ಶ್ರೀಹರಿಯ ಅನುಗ್ರಹವನ್ನೂ ಜ್ಞಾನ ಭಕ್ತಿರೂಪಫಲವನ್ನೂ ಬೇಡಿದ್ದಾರೆ. ತಮ್ಮ ಎಲ್ಲ ಸ್ತೋತ್ರಕಾವ್ಯಗಳಲ್ಲಿಯೂ ಹೀಗೇ ಮಾಡಿದ್ದಾರೆ. ಆದ್ದರಿಂದ ಅಂಕಿತ ಬಂದೊಡನೆ ಕೃತಿ ಸಮಾಪ್ತಿ ಎಂಬ ನಿಯಮವೇನಿಲ್ಲ. ವೇದ ಉಪನಿಷತ್ತು ಪುರಾಣ ಭಾರತಾದಿಗಳಲ್ಲೆಲ್ಲ ಫಲಸ್ತುತಿ ಹೇಳುವುದು ಸಂಪ್ರದಾಯ. ಅದನ್ನೆ ವಾದಿರಾಜರು ಅನುಸರಿಸಿದ್ದಾರೆನ್ನಲು ಅಡ್ಡಿಯಿಲ್ಲ.

ಹೀಗೆ ಕನಸ್ಸಿನಲ್ಲೂ ಪ್ರೌಢವಾದ ಶಾಸ್ತ್ರಕಾವ್ಯಗಳನ್ನು ಕಂಡುಕೊಳ್ಳಬಲ್ಲ ಋಷಿಗಳು ವಾದಿರಾಜರು. ಅವರ ಮಾತಿನಲ್ಲಿ ಎಲ್ಲೂ ಅಶಾಸ್ತ್ರೀಯ ಅಂಶಗಳು ಸೇರಿಕೊಳ್ಳುವುದು ಅಸಂಭವ. ಅವರೆಂದೂ ಶಾಸ್ತ್ರಮಾರ್ಗ ತಪ್ಪುವವರಲ್ಲ. ಪಂಥದಿ ಅಂದರೆ ಸರಿಯಾದ ಮಾರ್ಗದಲ್ಲಿ ನಡೆಯುವವರು. ಹಾಗೆ ನಡೆಸೆಂದೇ ಹಯವದನನಲ್ಲಿ ಬೇಡುವವರು–

ಶ್ರಯೇ ಹಯಮುಖಂ ಶ್ರಾವ್ಯ ಕಾವ್ಯಮಾರ್ಗ ಸಮಾಪ್ತಯೇ ।

ಎಂದು ರುಕ್ಮಿಣೀಶ ವಿಜಯದಲ್ಲಿ ಹಾಗೇ ಬೇಡುತ್ತಾರೆ ಲಕ್ಷ್ಮೀಸೌಂದರ್ಯವರ್ಣನೆಯಲ್ಲಿ ಸ್ವಭಾವೋಕ್ತ್ಯಾದ್ಯಲಂಕಾರಗಳು, ಹಸೆಗೆ ಕರೆವಾಗ ಹಾಸ್ಯರಸ, ವಿವಾಹ ಹೋಮ ನಾಗಬಲಿ ಪ್ರಸಂಗಗಳಲ್ಲಿ ಶೃಂಗಾರರಸ, ನಾರಾಯಣೀ ರೂಪವರ್ಣನೆಯಲ್ಲಿ ಶೃಂಗಾರ ಅದ್ಭುತ–ಹೀಗೆ ರಸ ಅಲಂಕಾರಗಳನ್ನು ಹಿತಮಿತವಾಗಿ ತುಂಬಿಕೊಂಡು ಸರಳ ಸುಂದರ ಪದಬಂಧದಲ್ಲಿ ಹೊರಹೊಮ್ಮಿದ ಈ ಕಾವ್ಯ ಕಾವ್ಯಶಾಸ್ತ್ರಮಾರ್ಗಕ್ಕೆ ಅನುಗುಣವಾಗಿದೆ. ಹರಿಯ ನಿರ್ದೋಷ ಗುಣಪೂರ್ಣತ್ವವನ್ನು ಯುಕ್ತಿಗಳಿಂದ ಸಾಧಿಸುವಾಗ, ಹಸೆಗೆ ಕರೆವ ಹಾಡಿನಲ್ಲಿ ದೇವಾದಿಗಳ ಉಪಾಸನಾಕ್ರಮವನ್ನು ಹೇಳುವಾಗ, 'ಶ್ರೀಚರಣ ಸಮೀಪ'ವೆಂದು

ಮೋಕ್ಷದ ಬಗ್ಗೆ ಹೇಳುವಾಗ, ಏಕೆ, ಆದಿಯಿಂದ ಅಂತ್ಯದವರೆಗೂ ವೇದಾಂತಶಾಸ್ತ್ರ ಮಾರ್ಗವನ್ನು ತಪ್ಪದೆ ಅನುಸರಿಸುವ ಕಾವ್ಯ ಇದು. 'ಆದ್ದರಿಂದ ಪಂಥದಿ ಪೇಳಿದ ಪದವಿದು' ಎಂದಿದ್ದಾರೆ.

ಅಥವಾ 'ಪಂಥದಿ' ಸ್ಪರ್ಧೆಯಲ್ಲಿ ಹೇಳಿದ ಪದ ಇದು. ಮದುವೆಯಲ್ಲಿ ಸ್ತ್ರೀಯರು ಹಾಡುವ ಶೋಬಾನೆ ಹಾಡು ಬೇರೆ ಕವಿಗಳ ಲೇಖನಿಯಲ್ಲಿ ತೀರ ಲೌಕಿಕವಾದ ಕಾವ್ಯವಾಗುತ್ತಿತ್ತು. ವಾದಿರಾಜರಲ್ಲಿ ಅದು ಅಲೌಕಿಕ ದಿವ್ಯ ಕಾವ್ಯವಾಗಿದೆ. ಮಂತ್ರತುಲ್ಯವಾಗಿದೆ. ಅವರೇ ರುಕ್ಮಿಣೀಶ ವಿಜಯದ ಬಗ್ಗೆ

ರೋಮ್ಣಾಂ ಹರ್ಷಣ ಕಾರಿಣಿ ಶ್ರವಣತಃ ಪಾಪೌಘವಿಧ್ವಂಸಿನಿ
ಪ್ರೇಮ್ಣಾ ಚಿಂತಯತಾಂ ವಿಚಿತ್ರ ವಿಮಲ ಶ್ಲಾಘ್ಯಾರ್ಥ ಸಂದಾಯಿನಿ ।

ಎಂದು ಹೇಳುವಂತೆ ರೋಮಾಂಚಕರ, ಶ್ರವಣ ಮಾತ್ರದಿಂದ ಪಾಪಹರ, ಮನನ ಮಾಡಿದಷ್ಟೂ ಹೊಸ ಹೊಸ ಸುಂದರ ಭಾವಗಳಲ್ಲಿ ತೆರೆದುಕೊಳ್ಳುವ ಕಾವ್ಯವಾಗಿದೆ.

ಹೀಗೆ ಪಂಥದಿ ಕಾವ್ಯರಚನೆ ಮಾಡುವುದು ಸಂತರ ಪಂಥ.

'ವಿಷ್ಣೋಃ ಸರ್ವೋತ್ತಮತ್ವಂ ಚ ಸರ್ವದಾ ಪ್ರತಿಪಾದಯ'

ಎಂದು ಜಗತ್ತಿಗೇ ಆದಿ ಸಂತರಾದ ಶ್ರೀಮಧ್ವಾಚಾರ್ಯರು ಆದೇಶಿಸಿದ್ದಾರೆ. ಸರ್ವದಾ ಅಂದರೆ ಕಾವ್ಯರಚನೆಯ ಕಾಲದಲ್ಲಿಯೂ ವಿಷ್ಣುಸರ್ವೋತ್ತಮತ್ವವನ್ನೇ ಪ್ರತಿಪಾದಿಸುವುದು ಅವರು ಉಪದೇಶಿಸಿದ ಮಾರ್ಗ ಅದರಲ್ಲೆ ನಡೆಯುತ್ತ ವಾದಿರಾಜರು ಸಂತರ ಮೆಚ್ಚಿಗೆಗೆ ಪಾತ್ರರಾಗಿದ್ದಾರೆ. ಲಕ್ಷ್ಮೀಕಾಂತನ ಕಂದನೆಂದು ಮನ್ನಿಸಲ್ಪಟ್ಟಿದ್ದಾರೆ.

— ೧೧೦ —

**ಶ್ರೀಯರಸ ಹಯವದನ ಪ್ರಿಯ ವಾದಿರಾಜ**
**ರಾಯ ರಚಿಸಿದ ಪದವಿದು ।**
**ಆಯುಷ್ಯ ಭವಿಷ್ಯ ದಿನದಿನಕೆ ಹೆಚ್ಚುವುದು ನಿ—**
**ರಾಯಾಸದಿಂದ ಸುಖಿಪರು ॥**

ಶ್ರೀದೇವಿಯ ಅರಸನಾದ ಹಯವದನನಿಗೆ ಪ್ರಿಯರಾದ ವಾದಿರಾಜ ಗುರುರಾಯರು ರಚಿಸಿದ ಪದವಿದು. ಆದ್ದರಿಂದ ಅದು ಶ್ರೀಯರಸ ಹಯವದನನಿಗೆ ಪ್ರಿಯ. ಅದನ್ನು ಕೇಳುವ ಹೇಳುವ ಎಲ್ಲರಿಗೂ ಆಯುಷ್ಯ ಮತ್ತು ಒಳ್ಳೆಯ ಭವಿಷ್ಯ ದಿನದಿನಕ್ಕೆ ಹೆಚ್ಚುವುದು. ನಿರಾಯಾಸದಿಂದ ಸುಖಿಸುವಂತಾಗುವುದು.

ಹಿಂದೆ ವಾದಿರಾಜರು ತಮಗೆ ಫಲಾಶಂಸನ ಮಾಡಿದ್ದರು. ಈಗ ಅಧ್ಯೇತೃಗಳಿಗೆ ಫಲವನ್ನು ಹೇಳುತ್ತಿದ್ದಾರೆ.

ವಾದಿರಾಜರು ಹಯವದನನಿಗೆ ಪ್ರಿಯರಾದ್ದರಿಂದ ಅವರ ಈ ಕೃತಿ ಯಥಾಸ್ಥಿತವಾದ ಭಗವನ್ಮಹಿಮೆಗಳನ್ನೆ ಕೊಂಡಾಡುತ್ತದೆ. ಅತಿಶಯೋಕ್ತಿ ಇಲ್ಲ. ಏಕೆಂದರೆ ಹಯವದನನ ಪ್ರಿಯರು ಹಯವದನನಲ್ಲಿ ಇಲ್ಲದ ಗುಣಗಳನ್ನು ಆರೋಪಿಸಿ ಹೊಗಳುವುದಿಲ್ಲ. ಅನ್ಯಥೋಪಾಸನೆ ಮಾಡುವುದಿಲ್ಲ. ಅನ್ಯಥೋಪಾಸಕರು ಹಯವದನನಿಗೆ ಪ್ರಿಯರೆನಿಸುವುದಿಲ್ಲ. ಶ್ರುತಿಗೀತೆ ಹೇಳಿದೆ–

ನ ಚ ರಮಂತ್ಯಹೋ ಅಸದುಪಾಸನಯಾಽತ್ಮಹನಃ

ಈಶಾವಾಸ್ಯೋಪನಿಷತ್ತೂ ಹೇಳಿದೆ–

ಅಸುರ್ಯಾ ನಾಮ ತೇ ಲೋಕಾ ಅಂಧೇನ ತಮಸಾವೃತಾಃ ।
ತಾಂಸ್ತೇ ಪ್ರೇತ್ಯಾಭಿಗಚ್ಛಂತಿ ಯೇ ಕೇ ಚಾತ್ಮಹನೋ ಜನಾಃ ॥

ಎರಡಕ್ಕೂ ಒಂದೇ ಭಾವ. 'ಇಲ್ಲದ ಗುಣವನ್ನಾರೋಪಿಸಿ ಉಪಾಸನ ಮಾಡುವವರು ದುಃಖಮಯವಾದ ಲೋಕ ಪಡೆಯುತ್ತಾರೆ' ಸಂಕರ್ಷಣ ಸೂತ್ರವೂ ಹೀಗೆ ಹೇಳುತ್ತದೆ–

ಅಚೇತನಾಸತ್ಯಾಯೋಗ್ಯಾನ್ಯನುಪಾಸ್ಯಾನಿ ಅಫಲತ್ವವಿಪರ್ಯಯಾಭ್ಯಾಂ ॥

'ಅಚೇತನವನ್ನೂ ಅಸತ್ಯವನ್ನೂ ಅಯೋಗ್ಯವನ್ನೂ ಉಪಾಸನೆ ಮಾಡಕೂಡದು. ಮಾಡಿದರೆ ಫಲವಿಲ್ಲ, ಅನಿಷ್ಟವೂ ಇದೆ.' ಆದ್ದರಿಂದ ವಾದಿರಾಜರ ಮಾತಿನಲ್ಲಿ ಅವಾಸ್ತವ ಅಂಶವಿರಲಾರದೆಂದು ನಾವು ದೃಢವಾಗಿ ನಂಬಬಹುದು.

'ವಾದಿರಾಜರಾಯ' ಎಂಬುದೂ ಅರ್ಥಗರ್ಭಿತ. 'ಯುಕುತಿ ಕೋವಿದರನು ಕುಣಿಸು'ವ ಖ್ಯಾತಿಯ ವಾದಿರಾಜರು ವಾಸ್ತವ ಪ್ರಮೇಯವನ್ನು ಯುಕ್ತಿ ಯುಕ್ತವಾಗಿ ಸಮರ್ಥಿಸಿ ನಿಃಸಂದಿಗ್ಧವಾಗಿ ವರ್ಣಿಸುವುದರಿಂದ ಈ ಕಾವ್ಯ ಬ್ರಹ್ಮಸೂತ್ರದಂತೆ ಮನನ ಶಾಸ್ತ್ರವೂ ಆಗಬಲ್ಲದು. ವಾದದ ಶೈಲಿಯಲ್ಲಿ ಬರೆದಿದ್ದಾರೆ ವಾದಿರಾಜರು ಅಧ್ಯೇತೃಗಳಿಗೆ ಇದರಿಂದ ಆಯುಷ್ಯವೂ, ಒಳ್ಳೆಯ ಭವಿಷ್ಯವೂ ಲಭ್ಯವಾಗುವುದು.

ಆಯುಷ್ಯವಿಲ್ಲದ ಭವಿಷ್ಯ ವ್ಯರ್ಥ. ಭವಿಷ್ಯವಿಲ್ಲದ ಆಯುಷ್ಯ ಶಾಪವಾದೀತು. ಎರಡೂ ಬೇಕು. ಎರಡನ್ನೂ ನೀಡಬಲ್ಲುದು ಈ ಪದ. ಏಕೆಂದರೆ ಶ್ರೀದೇವಿಯರಸನಿಗೆ ಪ್ರಿಯ ಈ ಪದ. ಪ್ರಿಯ ಏಕೆಂದರೆ ಪ್ರಿಯರಾದ

ವಾದಿರಾಜರಾಯ ರಚಿಸಿದ ಪದವಿದು. ಹೀಗೆ 'ಪ್ರಿಯ' ಶಬ್ದ 'ಪ್ರಿಯ ವಾದಿರಾಜರಾಯ' 'ಪ್ರಿಯ ಪದವಿದು' ಎಂದು ಎರಡು ಕಡೆಗೂ ಅನ್ವಯಿಸುತ್ತದೆ.

ನಿರಾಯಾಸದಿಂದ ಸುಖಿಸುವುದು ಮೋಕ್ಷದಲ್ಲಿಯೆ. ಸಂಸಾರದಲ್ಲಿ 'ಕಷ್ಟಪಡದೆ ಇಷ್ಟ ಸಿಗದು'. 'ಸುಖಸ್ಯಾನಂತರಂ ದುಃಖಂ ದುಃಖಸ್ಯಾನಂತರಂ ಸುಖಂ' ಆದ್ದರಿಂದ ಮೋಕ್ಷಫಲವನ್ನೆ ಹೇಳಿದಂತಾಯಿತು.

ಅಥವಾ ನಿರಾಯಾಸವೆಂದರೆ ಅಲ್ಪಾಯಾಸ. ಸಂಸಾರದಲ್ಲಿಯೂ ಅಲ್ಪಾಯಾಸದಿಂದ ಸುಖಲಾಭ ಈ ಹಾಡಿನ ಫಲ.

ಆಯುಷ್ಯ ಭವಿಷ್ಯಗಳೂ ಮೋಕ್ಷದಲ್ಲಿಯೆ ಪೂರ್ಣಪ್ರಮಾಣದಲ್ಲಿ ದೊರಕುತ್ತವೆ. ಅನಂತ ಆಯುಷ್ಯ, ಸ್ವಯೋಗ್ಯತಾನುಗುಣ ಪೂರ್ಣಭವಿಷ್ಯಗಳು ಈ ಹಾಡಿನ ಫಲ.

'ಬ್ರಹ್ಮಪ್ರಳಯದಲ್ಲಿ ಹರಿಯೊಬ್ಬನೆ ಇದ್ದ. ಬ್ರಹ್ಮಾದಿಗಳಾರೂ ಇರಲಿಲ್ಲ.' ಎಂಬ ಪ್ರಮೇಯವನ್ನಾಧರಿಸಿ 'ಹರಿಗೆ ಜನನ ಮರಣ ರೋಗರುಜಿನ ಹಸಿವು ತೃಷೆ ದುಷ್ಕರ್ಮ ದುಃಖಗಳಾವುವೂ ಇಲ್ಲ'ವೆಂದು ಯುಕ್ತಿಯುಕ್ತವಾಗಿ ಸಾಧಿಸಿರುವುದರಿಂದ ಈ ಪದವನ್ನು ಓದುವವರಿಗೆ ಸಂಸಾರದಲ್ಲಿ ರೋಗಾದ್ಯುಪದ್ರವ ರಹಿತ ದೀರ್ಘಾಯುಷ್ಯವೂ ಮೋಕ್ಷದಲ್ಲಿ ಜನನ ಮರಣಾದಿರಹಿತ ಅನಂತ ಆಯುಷ್ಯವೂ ದೊರಕುತ್ತದೆ.

ತಂ ಯಥಾ ಯಥೋಪಾಸತೇ ತದೇವ ಭವತಿ !

'ಎಲ್ಲರಾಯುಷ್ಯವ ಶಿಂಶುಮಾರದೇವ ಸಲ್ಲೀಲೆಯಿಂದ ತೊಲಗಿಸುವ' ಎಂದಿರುವುದರಿಂದಲೂ ಆಯುರ್ನಿಯಾಮಕನಾದ ಶಿಂಶುಮಾರನ ಅನುಗ್ರಹದಿಂದ ಸಂಸಾರದಲ್ಲಿ ದೀರ್ಘಾಯುಷ್ಯ, ಮೋಕ್ಷದಲ್ಲಿ ಅನಂತ ಆಯುಷ್ಯ ಲಭಿಸುತ್ತದೆ.

ಸರ್ಪದಂಶನದಿಂದ ಮರಣ ಬಂದಾಗ ಪುನಃ ಬದುಕಿಸಿದ ಪದವಾದ್ದರಿಂದಲೂ ದೀರ್ಘಾಯುಷ್ಯಪ್ರದ ಲಕ್ಷ್ಮೀಶೋಭನ ಪದ.

ಭವಿಷ್ಯವೆಂದರೆ ಸಕಲ ಭೋಗಭಾಗ್ಯಸಮೃದ್ಧಿ. ಇಂದ್ರನಿಗೆ ದೂರ್ವಾಸರಿತ್ತ ಶಾಪದಿಂದ ಮೂರುಲೋಕಕ್ಕೂ ಭವಿಷ್ಯ ಶೂನ್ಯವಾದಾಗ ಹರಿ ದೇವಿಗೆ ಜಯವಿತ್ತು ಲೋಕಕ್ಕೆ ಉತ್ತಮ ಭವಿಷ್ಯ ನೀಡಿದ ಕಥೆಯಾದ್ದರಿಂದ ಓದುವವರಿಗೆ ಭವಿಷ್ಯ ಲಾಭ.

ದೇವತೆಗಳಿಗೆ ಅಮೃತ ಉಣಿಸಿದ ಮೋಹಿನೀರೂಪದ ವರ್ಣನೆ ಇರುವುದರಿಂದಲೂ ಭೋಗ ಭಾಗ್ಯಲಾಭ.

ಶ್ರೀದೇವಿಯರಸನ ಪ್ರಿಯವಾದ ಪದವೆಂದ ಮೇಲೆ ಶ್ರೀನಿವಾಸನ ಅನುಗ್ರಹದಿಂದ ಶ್ರೀಕರವೆನಿಸುವುದರಲ್ಲಿ ಸಂಶಯವಿಲ್ಲ. ಕಿಮಲಭ್ಯಂ ಭಗವತಿ ಪ್ರಸನ್ನೇ ಶ್ರೀನಿಕೇತನೇ ?

ಹರಿ ಪಾಲಸಾಗರವನ್ನು ಲೀಲೆಯಲಿ ಕಡೆದ ಕತೆ ಇರುವುದರಿಂದ ನಿರಾಯಾಸ ಸುಖಲಾಭ. ಹರಿಯ ನಿರ್ದೋಷ ಗುಣಪೂರ್ಣತ್ವ ಸಮರ್ಥನೆಯಿಂದಲೂ ನಿರ್ದುಃಖ ಸುಖಲಾಭ. ಹರಿ ಮೋಹಿನೀರೂಪದ ಕಡೆಗಣ್ಣ ನೋಟದಿಂದಲೆ ನಿರಾಯಾಸವಾಗಿ ದೈತ್ಯರನ್ನು ವಂಚಿಸಿ ದೇವತೆಗಳಿಗೆ ಅಮೃತ ಉಣಿಸಿದ ಕತೆಯಾದ್ದರಿಂದಲೂ ನಿರಾಯಾಸದಿಂದ ಸುಖಪ್ರಾಪ್ತಿ.

'ದಿನೇ ದಿನೇ ತಸ್ಯ ಭವೇದಾಯುಃ ಶ್ರೇಯಶ್ಚ ಮಂಗಲಂ'

ಎಂದು ವಾದಿರಾಜರು ತಮ್ಮ ಒಂದು ಸ್ತೋತ್ರಕ್ಕೆ ಫಲ ಹೇಳಿದ್ದುಂಟು. ಪ್ರಕೃತದಲ್ಲಿಯೂ ಹಾಗೆ ಹೇಳಿದ್ದಾರೆ. ಭಾಷೆ ಬೇರೆ, ಭಾವ ಒಂದೇ.

– ೧೧೧ –

**ಬೊಮ್ಮನ ದಿನದಲ್ಲಿ ಒಮ್ಮೊಮ್ಮೆ ಈ ಮದುವೆ**
**ಕ್ರಮ್ಮದಿ ಮಾಡಿ ವಿನೋದಿಸುವ ।**
**ನಮ್ಮ ನಾರಾಯಣಗೂ ಈ ರಮ್ಮೆಗಡಿಗಡಿಗೂ ಅಸು–**
**ರಮ್ಮೋಹನವೆ ನರನಟನೆ ॥**

ಬ್ರಹ್ಮನ ಒಂದು ಹಗಲಿನಲ್ಲಿ ಒಮ್ಮೊಮ್ಮೆ ಈ ಮದುವೆಯನ್ನು ಕ್ರಮದಿಂದ ಮಾಡಿ ವಿನೋದಿಸುವ ನಮ್ಮ ನಾರಾಯಣನಿಗೂ ಈ ರಮೆಗೂ ಅಡಿಗಡಿಗೆ ಅಸುರರನ್ನು ವಂಚಿಸುವುದಕ್ಕಾಗಿಯೆ ಈ ನರನಟನೆ.

ಈ ಪ್ರಮೇಯವನ್ನು ತಿಳಿಯದೆ ಇದ್ದರೆ ಹಿಂದೆ ಹೇಳಿದ ಮುಂದೆ ಹೇಳುವ ಫಲವೇನೂ ಹಾಡಿನಿಂದ ಸಿಗಲಾರದು.

ಬ್ರಹ್ಮನ ಒಂದು ಹಗಲೆಂದರೆ ಒಂದು ಸಾವಿರ ಚತುರ್ಯುಗಗಳು. ಒಂದು ಚತುರ್ಯುಗ ದೇವಮಾನದ ಹನ್ನೆರಡು ಸಾವಿರ ವರ್ಷಗಳು. ಮನುಷ್ಯಮಾನದ ಒಂದು ವರ್ಷ ದೇವಮಾನದಂತೆ ಒಂದು ದಿನ ಮಾತ್ರ. ಹೀಗೆ ಬ್ರಹ್ಮನ ಒಂದು ಹಗಲಿನಲ್ಲಿ ಒಮ್ಮೊಮ್ಮೆ ಅಂದರೆ ಎರಡು ಬಾರಿ, ರೈವತ ಮನ್ವಂತರದಲ್ಲಿ ಒಮ್ಮೆ ವೈವಸ್ವತ ಮನ್ವಂತರದಲ್ಲಿ ಇನ್ನೊಮ್ಮೆ ಈ ಮದುವೆ ನಡೆಯುತ್ತದೆ.

ಮದುವೆ ಕ್ರಮದಿಂದ ನಡೆಯುತ್ತದೆ ಕ್ಷತ್ರಿಯರ ಸ್ವಯಂವರ ಪದ್ಧತಿಯಂತೆ ಕನ್ಯೆ ವರನನ್ನು ಆರಿಸಿಕೊಳ್ಳುತ್ತಾಳೆ. ಬಳಿಕ ಕನ್ಯಾದಾನ, ಅಗ್ನಿಸಾಕ್ಷಿಯಾಗಿ ವಿವಾಹ. ಮಹಾಲಕ್ಷ್ಮಿ ವರನನ್ನು ಆರಿಸಿಕೊಳ್ಳುವ ಅಂಶ ಭಾಗವತದಲ್ಲಿದೆ. ಕನ್ಯಾದಾನ ವಿವಾಹಗಳ ಅಂಶ ಸ್ಕಂದ ಪುರಾಣದಲ್ಲಿದೆ. ಎರಡನ್ನೂ ಸೇರಿಸಿಕೊಳ್ಳಬೇಕು. ಎರಡು ಪುರಾಣವೂ ಗ್ರಾಹ್ಯ. ಭಾಗವತ ಸಾತ್ವಿಕಪುರಾಣ. ಸ್ಕಾಂದ ತಾಮಸವಾದರೂ ಪ್ರಕೃತ ಬೇಕಾದ ಅಂಶ ಭಾಗವತಕ್ಕೆ ವಿರುದ್ಧವಲ್ಲ. ಪೂರಕವೆ ಆಗಿದೆ. ಆದ್ದರಿಂದ ಎರಡನ್ನೂ ಸೇರಿಸಿದಾಗ ಕ್ರಮದಿಂದ ಮದುವೆಯಾಗುತ್ತದೆ

ನಮ್ಮ ನಾರಾಯಣನಿಗೂ ಈ ರಮೆಗೂ ಇದೊಂದು ವಿನೋದ. 'ನಾರಾಯಣ' ಎಂದರೆ ದುಃಖರಹಿತ ವಿನೋದದಿಂದ ರಮಿಸುವವನೆಂದರ್ಥ– 'ನ ಅರ' ರ ಎಂದರೆ ಸುಖ. ಅರ ದುಃಖ. 'ನ ಅರ' ದುಃಖರಹಿತವಾದ ಸುಖ. ಅದಕ್ಕೆ ಅಯನ ಆಶ್ರಯ. ರಮಾ ಎಂದರೂ ವಿನೋದದಿಂದ ರಮಿಸುವವಳು. ವಿನೋದಕ್ಕಾಗಿ ಇಬ್ಬರೂ ಮದುವೆಯಾಟ ಆಡುತ್ತಾರೆ. ತಮ್ಮ ವಿನೋದಕ್ಕಾಗಿ ಅಲ್ಲ. ಪೂರ್ಣಾನಂದ ಸ್ವರೂಪರು ಅವರು. ಸುರರ ವಿನೋದಕ್ಕಾಗಿ ಆಟ ಆಡುತ್ತಾರೆ. ಸುರರಿಗೆ ಆನಂದವಾಗುವುದನ್ನು ಕಂಡು ಇವರಿಗೆ ಆನಂದ. ಅದೂ ಅಚಿಂತ್ಯ ಶಕ್ತಿಯಿಂದ.

ಇಬ್ಬರೂ ನರ ನಟನೆ ಮಾಡುತ್ತಾರೆ. ನಾರ ಎಂದರೆ ನರನಟನೆ. ನಾರಾಯಣ ಎಂದರೆ ನರನಟನೆ ಉಳ್ಳವ. ರಮಾ ಎಂದರೂ 'ರಮು ಕ್ರೀಡಾಯಾಂ' ನರನಟನೆಯು ಕ್ರೀಡೆ ಮಾಡುವವಳು. ಏಕೆ ಈ ನರನಟನೆ? ಅಸುರರಿಗೆ ಇವರಿಬ್ಬರೂ ನರರೆಂದು ತಪ್ಪುಕಲ್ಪನೆ ಬರಬೇಕು. ಹೀಗೆ ವಂಚಿಸಲು ನರರಂತೆ ನಟಿಸುತ್ತಾರೆ. ಇಲ್ಲದಿದ್ದರೆ ಅನಾದಿ ನಿತ್ಯಳಾದ ರಮೆ ಸಮುದ್ರದಲ್ಲಿ ಹುಟ್ಟುವುದೆಂದರೇನು? ನಿತ್ಯ ಮುತ್ತೈದೆಯಾದ ದೇವಿ ಹರಿಯನ್ನು ಮದುವೆಯಾಗುವುದೆಂದರೇನು? ರಮಾ ನಾರಾಯಣರಿಗೂ ಹುಟ್ಟು ಸಾವುಗಳಿವೆ ಪರಸ್ಪರ ವಿಯೋಗ ಸಂಯೋಗಗಳು ಇವೆ ಎಂದು ಅಸುರರು ತಿಳಿಯಲೆಂದು ಈ ನಟನೆ.

ಈ ನಟನೆಯಿಂದ ದೇವತೆಗಳಾರೂ ಮೋಸಹೋಗುವುದಿಲ್ಲ. ಹರಿಯೊಬ್ಬನೇ ನಿರ್ದೋಷ ಗುಣಪೂರ್ಣ ಹೊರತು ಇನ್ನಾರೂ ಅಲ್ಲ ಎಂದು ಈ ಮದುವೆಯಾಟದಿಂದ ಪಾಠ ಕಲಿಯುತ್ತಾರೆ. ಆನಂದಪಡುತ್ತಾರೆ. ಈ ವ್ಯತ್ಯಾಸ ಸುರ ಅಸುರರಲ್ಲಿರುವ ಅನಾದಿಯಾದ ಸ್ವಭಾವವ್ಯತ್ಯಾಸದಿಂದಾದುದು. ಈ ಸ್ವಭಾವ ವ್ಯತ್ಯಾಸವನ್ನು ವಾದಿರಾಜರು ವೈಕುಂಠವರ್ಣನೆಯಲ್ಲಿ ಹೀಗೆ ಹೇಳಿದ್ದಾರೆ–

ಮೊಲೆಯನೂಡಲು ಶಿಶು ಪಾಲ ಕೊಂಬಂತೆ ಸತ್–
ಕುಲಕೆ ಸಮ್ಯಗ್ ಜ್ಞಾನ ಬಂತು ।
ಜಲದೊಳಗೆ ಮೊಲೆಯು ಪಿಡಿದ ಜಿಗಳೆಗಳಂತೆ
ಖಳರು ಕುತ್ಸಿತಕೆರಗಿದರು ॥

'ತಾಯಿ ಮಗುವಿಗೆ ಎದೆಹಾಲು ಕೊಟ್ಟರೆ ಮಗು ಅಮೃತದಂಥ ಆ ಹಾಲನ್ನೆ ಹೀರುತ್ತದೆ. ಅವಳು ಸ್ನಾನಕ್ಕಾಗಿ ನೀರಿಗಿಳಿದಾಗ ಜಿಗಣೆಗಳು ಅದೇ ಸ್ತನವನ್ನು ಹಿಡಿದರೆ ರಕ್ತ ಹೀರುತ್ತವೆ. ಹಾಗೇ ರಮಾ ನಾರಾಯಣರ ಲೀಲೆ ಕಂಡು ಸಜ್ಜನರು ಉತ್ತಮ ಜ್ಞಾನವಂತರಾಗುತ್ತಾರೆ. ದುರ್ಜನರು ತಪ್ಪುತಿಳಿಯುತ್ತಾರೆ'

– ೧೧೨ –

**ಮದುವೆಯ ಮನೆಯಲ್ಲಿ ಈ ಪದನ ಪಾಡಿದರೆ**
**ಮದುಮಕ್ಕಳಿಗೆ ಮುದವಹುದು ।**
**ವಧುಗಳಿಗೆ ವಾಲೆ ಭಾಗ್ಯ ದಿನದಿನಕೆ ಹೆಚ್ಚುವುದು**
**ಮದನನಯ್ಯನ ಕೃಪೆಯಿಂದ ॥**

ಮದುವೆ ಮನೆಯಲ್ಲಿ ಈ ಪದವನ್ನು ಹಾಡಿದರೆ ಮದುಮಕ್ಕಳಿಗೆ ಸುಖಲಾಭವಾಗುವುದು. ವಧುಗಳಿಗೂ ಓಲೆ ಭಾಗ್ಯ ಮದನಜನಕನಾದ ಹರಿಯ ದಯೆಯಿಂದ ದಿನದಿನಕ್ಕೆ ವೃದ್ಧಿಯಾಗುವುದು.

ಲಕ್ಷ್ಮೀ ಶೋಭನಪದ ಹಿಂದೆ ಹೇಳಿದಂತೆ ಒಂದು ಉತ್ತಮವಾದ ಮನನ ಶಾಸ್ತ್ರರೂಪವಾದ ಕಾವ್ಯ ಅದನ್ನು ಪ್ರತಿನಿತ್ಯ ಪಠಿಸಬೇಕು. ಅದರಿಂದ ಸಿಗುವ ಫಲವನ್ನು ಹಿಂದೆ ಹೇಳಿದೆ. ಮದುವೆ ಮನೆಯಲ್ಲಿ ಹಾಡಿದರೆ ವಿಶೇಷ ಫಲವೂ ಇದೆ.

ಸಾಮೂಹಿಕವಾಗಿ ವೃಂದಗಾನರೂಪದಿಂದ ರಾಗ ತಾಳ ಲಯ ಬದ್ಧವಾಗಿ ಭಾವಪೂರ್ಣವಾಗಿ ಮದುವೆ ಮನೆಯಲ್ಲಿ ಹಾಡಿದರೆ ಕೇಳಿದಾಗಲೆ ಮುದವಾಗುವುದು. ಆನಂದದಿಂದ ಮೈನವಿರೇಳುವುದು.

ಸಹೃದಯರಿಗೆ ತನ್ಮಯತೆ ಉಂಟಾಗುವುದರಿಂದ ಅವರ ಹೃದಯ ರಸಭಾವಗಳ ಪ್ರಪಂಚದಲ್ಲಿ ಲೀನವಾಗಿ ಧ್ಯಾನ ಮಗ್ನವಾಗುತ್ತದೆ. ಸುಂದರ ನಿರ್ಮಲ ಪ್ರಮೇಯಗಳು ಹೊಳೆಯುತ್ತವೆ. ಯುಕ್ತಿವಿಮರ್ಶಪೂರ್ವಕವಾದ ದೃಢವಾದ ಜ್ಞಾನವೂ ಉಂಟಾಗುತ್ತದೆ. ಅದರಿಂದ ರಮಾನಾರಾಯಣರು

ಪ್ರಸನ್ನರಾಗುತ್ತಾರೆ. ಶ್ರೀನಿವಾಸನೊಲಿದರೆ ಏನು ತಾನೆ ಲಭ್ಯವಾಗದು? ಮದುಮಕ್ಕಳಿಗೆ ದಾಂಪತ್ಯ ಜೀವನದಲ್ಲಿ ಮುದವಾಗುವುದು.

ಮದುವೆ ಕೇವಲ ಒಂದು ಸಾಮಾಜಿಕ ಕಟ್ಟುಪಾಡೆಂದು ತಿಳಿಯಬಾರದು. ಅದೊಂದು ಮಂಗಳಕರವಾದ ಯಜ್ಞ. ಯಜ್ಞಗಳಲ್ಲಿ ಸಾಮಗಾನವಿರುವಂತೆ ವಿವಾಹಯಜ್ಞದಲ್ಲಿ ಮಂತ್ರತುಲ್ಯವಾದ ಈ ಶೋಭಾನೆ ಹಾಡು. ಹಿಂದೆ ಋಷಿಮುನಿಗಳು ಸಾಮಗಾನ ಪೂರ್ವಕವಾಗೇ ವಿವಾಹಯಜ್ಞ ನಡೆಸುತ್ತಿದ್ದರು. ಆ ಹಾಡಿಗೊಲಿದಾಗಲೆ ರಮಾನಾರಾಯಣರು ವಿವಾಹ ಹೋಮದಾಹುತಿಗಳನ್ನು ಸ್ವೀಕರಿಸುವವರು. ಇಲ್ಲದಿದ್ದರೆ ಪೂರ್ಣಾನಂದರಾದ ಅವರಿಗೆ ಈ ಆಹುತಿಗಳೇಕೆ? ಆದ್ದರಿಂದ ಹಾಡು ಲಕ್ಷ್ಮೀನಾರಾಯಣರಿಗೆ ಮುದ ನೀಡುವುದು. ಆದರಿಂದ ವಿವಾಹ ಸಫಲವಾಗುವುದು. ಮದುಮಕ್ಕಳಿಗೆ ಮುದವಾಗುವುದು.

ತತ್ವವಿಚಾರದೊಂದಿಗೆ ವಿವಾಹ ಸಂಭ್ರಮ ಸಡಗರದ ವರ್ಣನೆಯೂ ಇರುವುದರಿಂದ ಕೇಳುವಾಗಲೆ ಮುದವಾಗುತ್ತದೆ

ರಮಾನಾರಾಯಣರ ವಿವಾಹ ವರ್ಣನೆಯಾದುದರಿಂದ ಮದುಮಕ್ಕಳ ಮದುವೆ ವಾಸ್ತವದಲ್ಲಿ ಅವರೊಳಗೆ ನೆಲೆಸಿರುವ ರಮಾನಾರಾಯಣರ ಮದುವೆಯೆ ಆಗಿದೆ ಎಂಬ ಪ್ರಜ್ಞೆ ಮೂಡುತ್ತದೆ ಆಗ ರಮಾನಾರಾಯಣರಿಗೂ ಮುದ, ನಮ್ಮ ಮದುಮಕ್ಕಳಿಗೂ ಮುದ ದಕ್ಷಯಜ್ಞಪ್ರಸಂಗವಲ್ಲಿ ಕುಪಿತನಾದ ಶಿವನನ್ನೊಲಿಸಲು ಬ್ರಹ್ಮದೇವರು ಶಿವನೊಳಗಿನ ಹರಿಯನ್ನೇ ಸ್ತುತಿಸಿದರಂತೆ.ಆಗ ಹರಿ ಸಂತುಷ್ಟನಾದ ಶಿವನೂ ಸಂತುಷ್ಟನಾದ. ಹಾಗೇ ಇದು.

ಇದು ಹಯವದನ ಲಕ್ಷ್ಮಿಗೆ ಜಯವಿತ್ತ ಕಥೆಯಾದ್ದರಿಂದ ವಧುಗಳಿಗೆ ವಿಶೇಷವಾಗಿ ಓಲೆ ಭಾಗ್ಯಲಾಭ. ವಧುಗಳಿಗೆ ಅದೇ 'ಜಯ' ತಾನೆ?

ಪತಿ ಜೀವಂತನಿದ್ದರೆ ಸತಿಗೆ ಓಲೆ ಮಾಂಗಲ್ಯ ಬಳೆ ಅರಿಸಿನ ಕುಂಕುಮ ಎಲ್ಲ ಇರುತ್ತವೆ. ಆದರೆ ಅಷ್ಟುಮಾತ್ರಕ್ಕೆ ಅವೂ ಭಾಗ್ಯವೆನಿಸಲಾರವು. ಪತಿಪ್ರೀತಿ ಬೇಕು. ಅದಿಲ್ಲದ ಓಲೆ ಭಾರ, ಮಾಂಗಲ್ಯ ಉರುಳು. ಆದ್ದರಿಂದ 'ಓಲೆ ಭಾಗ್ಯ' ಸಿಗಲು ಮದನನಯ್ಯನ ಕೃಪೆ ಬೇಕು. ಮುನಿದು ಬೇರೆ ಬೇರೆಯಾಗಿ ಅಗಲಿದ ಎರಡು ಹೃದಯಗಳನ್ನು ಬೆಸೆದು ಒಂದು ಮಾಡುವ ಮಂಗಲಕರಶಕ್ತಿ ಮದನ. ಅವನ ಅಯ್ಯನ ಅನುಗ್ರಹದಿಂದ ಅವನ ಅನುಗ್ರಹ ಲಾಭ. ಆದರಿಂದಲೆ

ವಧೂವರರೊಳಗೆ ಪರಸ್ಪರ ಆಕರ್ಷಣೆ. ಸೌಂದರ್ಯ ಲಾವಣ್ಯ ವ್ಯಕ್ತಿಗಿಂತ ವ್ಯಕ್ತಿಯನ್ನು ನೋಡುವ ಕಣ್ಣಿನಲ್ಲೆ ಹೆಚ್ಚು.

ಅರಸಪ್ಪನಾಯಕನ ಮನೆಯ ಮದುವೆಯಲ್ಲಿ ವಧುವಿಗೆ ಓಲೆ ಭಾಗ್ಯ ಕೊಡಿಸಿದ ಪದವಾದ್ದರಿಂದ ಇದು ಕೇವಲ 'ಫಲಸ್ತುತಿ' ಅಲ್ಲ. ಯಥಾಸ್ಥಿತಿ.

ಲಕ್ಷ್ಮೀ ಶೋಭನಪದದ ಮೊದಲನೆ ನುಡಿ 'ಲಕ್ಷ್ಮೀನಾರಾಯಣರ ಚರಣಕ್ಕೆ ಶರಣೆಂಬೆ' ಎಂದು ಪ್ರಾರಂಭವಾಗುತ್ತದೆ. ಅಲ್ಲಿ ಮೊದಲಿನ ಶಬ್ದ 'ಲಕ್ಷ್ಮೀ' ಈಗ ಕೊನೆಯ ನುಡಿ 'ಕೃಪೆಯಿಂದ' ಎಂದು ಕೊನೆಯಾಗುತ್ತದೆ. ಇಲ್ಲಿ ಕೊನೆಯ ಅಕ್ಷರ 'ದ' ಒಟ್ಟಿಗೆ 'ಲಕ್ಷ್ಮೀದ' ಲಕ್ಷ್ಮೀಪ್ರದ ಮದದನನಯ್ಯನ ಕೃಪೆಯಿಂದ, ಲಕ್ಷ್ಮೀ ಕೃಪೆಯಿಂದ ಸಂಪತ್ತನ್ನು ಕೊಡುವಂಥಹುದು, ಓಲೆ ಭಾಗ್ಯವನ್ನೂ ಕೊಡುವಂಥಹುದು ಈ ಲಕ್ಷ್ಮೀ ಶೋಭನಪದ.

---